# ಒಂದನೆಯ ಸಂಧಿ

ಸೂಚನೆ :

•ಆದಿಯವಿರಳ ಪರಬ್ರಹ್ಮ ಪರಶಿವ ತಾನೆ
ಭೇದವಿಲ್ಲದೆ ರೇಣುಕಾದಿ ಗುರುವರರೆನಿಸಿ
ಮಾದೇವನಾಜ್ಞೆಯಿಂ ಧರೆಗೆಯ್ದಿ ದೀಕ್ಷೆಯಂ ಮಾಳ್ಪ ಪರಿ[1]ಯಾವುದೆನಲು[1]

ಶ್ರೀಗುರುವೆ ಭಕ್ತಹೃತ್ಸರಸಿ[2]ಜಾಮಲ[2]ಭೃಂಗ
ಯೋಗ ನಿಗಮಾದಿ ಪರಶ್ರುತಿತತಿಶಿರೋತ್ತಂಸ
ಭೋಗ ಮೋಕ್ಷಾದಿದಾಯಕ ಚರಾಚರಜೀವ ಸರ್ವಾಂತರಾತ್ಮಲಿಂಗ
ರಾಗಾದಿ ದೋಷ ದುರ್ಗುಣದೂರ ಯತಿತುಂಗ
ನಾಗಾ[3]ಮ[3]ರಾಸುರ ಪ್ರಮುಖ ರಕ್ಷಾಪಾಂಗ
ಸಾಗರಚಿದಾಸಾರ ಪರಮಾಮೃ[4]ತದ[4] ಪೂರ ಶರಣು ಗುರುಬಸವಲಿಂಗ ೧

[5]ವಿಷ್ಣು[5]ನತ [6]ವಿಷ್ಣು[6]ತತಿನಾಥ ಭೂಷಣ ವಿಷ್ಣು
ವಿಷ್ಣು ಗೋ[7]ಪುಷ್ಪ ಪದವಿಷ್ಣು ಶರವಿಷ್ಣು[7]ಗಳ
ವಿಷ್ಣು [8]ನಗಕುಲಿಶ ಕೃತವಿಷ್ಣು ಭುಜಗಾದ್ಯಕ್ಷಹಿಷ್ಣು ಹೇರಂಬತಾತ[8]
ವಿಷ್ಣು ಸಚರಾಚರಾಧಾರ ಬ್ರಹ್ಮಾಂಡ ಬಹು
ವಿಷ್ಣು ಕುಂತಳ ಮಹಾವಿಷ್ಣುಧರ ವೃಷರೂಢ
ವಿಷ್ಣು ಮುನಿಮುಖ್ಯ ಪೂಜಿತಪಾದ ವಿಷ್ಣು ವರವಿಷ್ಣು ಮಹಲಿಂಗ ಜಯತು ೨

ಶ್ರೀವಿಮಲ ಕಾಂತಿಯುತ ಕಮನೀಯ ಬಿಂಬಧರ
ಭೂವಿನುತ ಸಕಲ ಶ್ರುತಿ ಪೌರಾಣ ಕಾವ್ಯಾದಿ
ಸೇವಿತ ಬುಧಸ್ತೋಮ ಮೋಕ್ಷ[9]ವೆಂಬ[9]ಮೃತದಾಯಕ ನಿಖಿಳಸುರರಾಜಿತ
ಭಾವ[10]ಜಾಹಿತನೇತ್ರ[10] ಬಹುಕಳಾನಿಧಿರೂಪ
ಪಾವನ ಮೃಗಾಂಕ ವಿಷಧರ[11]ಧರ[11] ಮಹಾದೇವ
ಮಾವರಾದ್ಯಗ್ರಜ ದ್ವಿಜರಾಜ ಶಾಂತಮತಿ ಸೋಮನೇ ಪಾಲಿಸಯ್ಯ ೩

---

1 ಯೆಂತೆಂದೊಡೆ (ಚ) 2 ಜಾಂಬುಜ (ಚ) 3 ಸು (ಚ) 4 ತಾ (ಚ) 5 ಧಿಷ್ಣ (ಚ) 6 ಧಿಷ್ಣ (ಚ) 7 ವಿಷ್ಣು ಕರವಿಷ್ಣು ಶರವಿಷ್ಣು (ಚ) 8 ಭೂಧರಕುಲಶಾಂಕರಿಷ್ಣು ಭುಜಗಸಹಿಷ್ಣು ಶರಣ ಪರಾಧಮಂ (ಚ) 9 ಕರಮ (ಚ) 10 ಜಹಿತ ತಾಪ (ಚ) 11 ಹ (ಚ)

•ರಾಗ : ಮಧುಮಾಧವಿ (ಚ)

ಸಾರಂಗ ಕೃತ್ತಿಧರ ಸಾಮಗಾನಾನಂದ
ನೀರೇಜನಯನಾಂಕಚರಣ ನಗಜಾ[1]ವರ[1]ಣ
ಸಾರತರಶರಣ ಸರಸಿರುಹ ಮಧುಕರ [2]ಬಾಲ[2]ತಾರೇಶಜೂಟ ವರದ
[3]ಸಾರಮುಕ್ತಾಕಾರ[3] ಸಕಲಗುಣ ಗಾಂಭೀರ್ಯ
ನಾರಾಯಣೀಸಹಚ[4]ರಾಮರಾಚಲ[4]ಧೈರ್ಯ
ವೀರಶೈವಾಚಾರ್ಯರಮಳಕೃತಿಗೀ[5]ಗ ಕೊಡು[5] ಪರಮ ಮಂಗಳಶೌರ್ಯಮಂ ೪

ಪನ್ನಗ[6]ವರಾ[6]ಮಿಳಿತ ಪಾದ[7]ಚಾರಣ ಕಲಾ
ಭಿ[7]ನ್ನ ಜಲಧರ[8]ಗರ್ಭ[8] ಜಲಚಕ್ರವಿಕ್ಷೇಪ
[9]ಖಿ[9]ನ್ನಮಾನಸ ಸುರಾಸುರರಕ್ಷ ಗಿಳಿತ[10]ವಿಷಕಂಠನಾಲೋಜ್ವಲಾಂಗ[10]
ಛಿನ್ನಮಾಯಾ ಘೋರಸಂಸಾರ ಕ್ಷೀರ[11]ರು[11]ಚಿ
ವಹ್ನಿರೇತಸ್ಖ[12]ಲನಜಾತ ಶರವಣಜನ್ಮ[12]
ಮನ್ಮಾಥ ಮಾಂ ಪಾಹಿ ಜಯಜಯ ಮಹಾದೇವ ಕೊಡು [13]ನಮಗೆ[13] ನಿರ್ವಿಘ್ನಮಂ ೫

ಗರಳಗಳ [14]ದುರುಳಖಳ[14] ಪುರಹರಣ ವರಕರಣ
ಗುರುರೂಪ [15]ಹರ[15]ದೀಪ ಹರ್ಯಕ್ಷ [16]ಹತಿದಕ್ಷ[16]
ಸ್ಮರನಾಶ ಹರಿ[17]ಕೇಶ ವಹ್ನಿಮುಖ ವಿನುತಸುಖ[17] ನೀರೇಜ ವರತೇಜನೆ
[18]ಶ[18]ರಣಮಯ ಕರಣಜಯ ದುರಿತಾರಿ [19]ಮಖಹಾರಿ[19]
ಶರಣಾಂಗ ಭವಭಂಗ [20]ಭ[20]ರ್ಮಾತ್ಮ ಧರ್ಮಾತ್ಮ
ಸುರಗೇಹ [21]ತಪದೇಹ[21] ಶಶಿಜೂಟ ವಸುಕೂಟ ವಿಷಮಾಕ್ಷ ಶರಣು ಶರಣು ೬

ಬಗ್ಗಯೆಂಟೊಡಲ ಸಬ್ಬಾಣಿಯಾಣ್ಮನೆ ನೋಡೆ
ಸಗ್ಗಗರವೊಡೆಯಂ[22]ನ್ನೈಮೊ[22]ಗ ಪೊರ್ಕುಳಲರೆರೆಯ
[23]ಹ[23]ಗ್ಗಯಿಂಗೆಡಲ ಮಗ [24]ನೇಸರೊಳ್ಗಣ್ಣ[24] ಚಂದಿರದಲೆಯ ಮಿಗಗೆಯ್ಯನೆ
ಸಗ್ಗಗರವ[25]ಟ್ಟೆನವಿರನೆ ನವಿಲ್ದೇರಯ್ಯ[25]
ನಗ್ಗಳದ [26]ಮುಪ್ಪೊ[26]ಳಲ ಚುಚ್ಚಿದುರಿಗಣ್ಮೊದಲ
ಸಗ್ಗಗರ ಕನಸಿಲ್ಲದವರ ತಲೆಯಂದಳೆದ [27]ನೀನಿರೆನ್ನೆರ್ದೆವನೆ[27]ಯೊಳು ೭

---

1 ರವಾ (ಚ) 2 ಮತ್ತ (ಚ) 3 ಪಾರಾವರಾಕಾರ (ಚ) 4 ರ್ಯನಗಗುಣ (ಚ) 5 ಗೆ ಮುದ (ಚ) 6 ಮೃಗಾ (ಚ) 7 ಧಾರಣನಟನಾಗ(ಚ) 8 ಮೂರ್ಧ್ನ (ಚ) 9 ಭಿ (ಕ) 10 ಮಹಾವಿಷಕಂಠನಾಳಕಲಿತಂ (ಚ) 11 ಖು (ಚ) 12 ಲಿತಜಾತ ಶಾಸ್ತ್ರವಖ್ಯಾತ (ಚ) 13 ವಮಳ (ಚ) 14 ನಳಿತಖಿಳ (ಕಗ) 15 ಗುಣ (ಕಗ) 16 ಕ್ಷತಿದಕ್ಷ (ಕಚ) ಪದಲಕ್ಷ (ಜ) 17 ಪೋಶ ಬರ್ಹಿಮುಖಭರಿತಮುಖ (ಚ) 18 ಹ (ಚ) 19 ಯಘದೂರಿ (ಚ) 20 ಕ(ರಗ) 21 ಶರಗೇಹ (ಕಗ) 22 ನಾಲ್ಮೊ(ಚ) 23 ಅ (ಚ) 24 ಸಾಸಿರಗಯ್ಕಕಣ್ಣ (ಚ) 25 ಟ್ಟನರಂ ನವಿಲ್ದೇರ ಯ್ಯ (ಚ) 26 ಮೂರ್ಪೊ (ಚ) 27 ನಡಿಗಳಿರ್ಕೆನ್ನೆರ್ದೆ (ಚ)

ಶ್ರೀನಗೇಂದ್ರಾತ್ಮಸುತೆ ನಿಖಿಳಜನವಿಖ್ಯಾತೆ
ಮಾನಿತ ಚಿ[1]ದಂ[1]ಬುನಿಧಿ ಕುಮುದಬಾಂಧವ[2]ಜೂಟೆ[2]
[3]ದೀ[3]ನಕಾರುಣ್ಯವನಚೈತ್ರೆ ನಿಜಭಕ್ತೌಘ ಭವಪಾಶ ದುರಿತದೂರೆ
ಕಾ[4]ನಕನಗ[4]ಸ್ಥಾನೆ ಸಕಲಸುರಸಂಸೇವ್ಯೆ
ಭೂನುತ ಸದಾಶಿವಾಕಾರೆ ಪರಮತ[5]ಹಾ[5]ರೆ
ನಾನಾವಿಚಿತ್ರತರ ವಿಶ್ವ[6]ಗುಣ[6] ನಿಜಜನನಿ ಕೊಡು [7]ವಿಮಲ[7]ವಾಕ್ಸಿದ್ಧಿಯಂ* ೮

ಪರಶಿವನ ನಿಜಚಿಹ್ನ[8]ವೇ[8] ಮೂರ್ತಿಯಾದಂತೆ
ಕರಿಶಿರ[9]ದ[9] ರಕ್ಕಸರ ಹರಿಪಲಾಂಛನಭಾವ
[10]ದಿರವಿನಿಂ[10] ಧವಳಾಂಗದ [11]ಚತುರ್ದಶಾದಿ[11] ವಿದ್ಯಾಧೀಶವಹ [12]ವಕ್ತ್ರದ[12]
ನರಸುರೋರಗರವಿದ್ಯಾಪಾಶ[13]ಮಂ ಪರಿವ
ವ[13]ರಪಾಶ[14]ಹಸ್ತದ ಮಹಾಪರಶು ಬೃಹದುದರ
ದುರಗಪಾದದ ಸೊಬಗಿನಿಂ ತೋರ್ಪ ದೇವ[14] ಪೊರೆ ವಿಘ್ನರಾಜನೆ ಸಂತತಂ ೯

ಶೈಶವ[15]ದೆ[15] ಪಾರಾಶರಾತ್ಮಭವರಂ ಪೊರೆದು
ಭಾಸುರದ ಪದ್ಮಭವ ಪದ್ಮಸದ್ಮಾಧೀಶ
ವಾಸವಾದ್ಯಮರರಂ ಭಂಜಿಸುತೆ ಯ[16]ಜ್ಞಪಶುವೇರಿ[16] ಜಗದೊಳ್ ನಟಿಸುತೆ
[17]ವಾಸವಾದ್ಯಮರ[17] ಸೇನಾಪತ್ಯ[18]ಮಂ ಧರಿಸಿ[18]
ಸಾಶ[19]ವೈದಿಸುತಾಸಹಾಯದಿಂದಸು[19]ರರಂ
[20]ಶೇಷಾದಿಗಳ[20] ಸಲಹಿ ಮೆರೆವ ಷಡ್ವದನ ಮದ್ವದನ ಸರಸಿಜಭೃಂಗನೆ ೧೦

ಕುಟಿಲ ದಕ್ಷೋತ್ಕಟ ಸುಯಾಗ [21]ವಿಲಯಾ[21]ರಂಭ
[22]ಚಟುಲ ನಾನಾದೇವಗಣ ಹೃದಯ[22] ಗರ್ವ ಸಂ
ಘಟಿತ ಕೋಪಾಟೋಪ[23]ಮಾತ್ರ ವಿಸ್ಫುರಿತ ಫಾಲಾಕ್ಷಿ ಘನ[23]ವೀತಿಹೋತ್ರ
ಛಟಛಟಧ್ವಾನಸ[24]ಹಿತ ಸ್ಫು[24]ಲಿಂಗೋತ್ಕೀರ್ಣ
[25]ಪಟಲವಿತ್ರಾಸಿತ ಸುರಾಸುರೋರಗ ಕಾಂತಿ
ಚಟುಲ[25]ಸಂಹರಣರವಯುತ ವೀರಭದ್ರ ಜಯಜಯ ಪಾಹಿ ಭಕ್ತಜನರಂ ೧೧

---

1 ದಾಂ (ಚ) 2 ರೂಪೆ (ಚ) 3 ನ್ಯೂ (ಚ) 4 ನನಗಾ (ಚ) 5 ದೂ (ಚ) 6 ಮಯ (ಚ) 7 ವಮಳ (ಚ) 8 ಗಳಿ (ಚ) 9 ವೆ (ಚ) 10 ನಿರದೇಕದೇವ (ಚ) 11 ಶನಸಮ (ಚ) 12 ಕ್ತ್ರಚಿಹ್ನಂ (ಚ) 13 ಬದ್ಧಯುತ।ಹ (ಚ) 14 ಮುಕ್ತಮಧುಪಾಶ ಪರಶುಂಬೃಹದು। ಧರವೆ ಬ್ರಹ್ಮಾಂಡ ಭುಜಗ ಸರ್ವಾಭರಣ (ಚ) 15 ವೆ (ಗ) 16 ಜಪಶುವನಡರ್ದು (ಚ) 17 ಶೇಷಗೀರ್ವಾಣ (ಚ) 18 ಧರಿಸುತ್ತ (ಚ) 19 ವನ್ನೆದಿಸುತಸಾಹಾಯದೆಯಸು (ಚ) 20 ವಾಸವಾದ್ಯರ (ಚ) 21 ನಟನಾ (ಚ) 22 ಜಟಿಲ ಧಾರಣ ಭಾಗಮಾದೇಯ (ಚ) 23 ವಿಳಿತ ಶಿವಸ್ಮರಣ ಮಾತ್ರಾನು ಭೂ (ಚ) 24 ಹವಿಸ್ಫು (ಚ) 25 ನಿಟಿಲಲೋಚನ ಮಧ್ಯಯುದ್ಭ್ರಮಿತ ಬ್ರಹ್ಮಾಂಡ ಪಟಲ (ಚ)

*ಚ ಪ್ರತಿಯಲ್ಲಿ ೮ನೆಯ ಪದ್ಯವಾದ ಮೇಲೆ ಬಂದಿರುವ ಹೆಚ್ಚಿನ ಪದ್ಯವನ್ನು ಅನುಬಂಧದಲ್ಲಿ ಕೊಟ್ಟಿದೆ

ಶ್ರೀನಂದಿ ಶಿವಕರ ಮಹಾ[1]ಭೃಂ[1]ಗಿ ಧೂಮಾಕ್ಷ
ಶ್ರೀನಂದಿಕೇಶ್ವರ ವಿರೂಪಾಕ್ಷ ಚಂಡೇಶ
ಸಾನಂದ ಸರ್ವಬ್ರಹ್ಮಾಂಡಪೇಷಣ ವಡಬತಿಲಕ ವಡಬಾಗ್ನಿನಯನ
ಸಾನಂದನಂದಿತ ಸುಗಗನೇಶ ಸಹನೇಶ
ಭಾನುಕಂಪನ ಸೋಮಕಂಪ[2]ನ ಸುವಿ[2]ಜಯಾಕ್ಷ
ಮಾನ ಭುವನೇಶ್ವರ ವಿಭೂತಿದಮನ ಸುವೇದಶಿಖಿ ಮಹಾಂತರ್ಗೆರಗು[3]ವೆಂ[3] ೧೨

ಚಂದದ ಶಿಲಾದಮುನಿ ನಂದಿಮಂಡಲದಲ್ಲಿ
ಕಂದರಿಲ್ಲೆಂದು ತಪ[4]ಮಂ ಮಾಡಲಾಗ[4] ವೃಷ
ಭೇಂದ್ರನಂದದಿ ಸ್ವರ್ಣಲಾಂ[5]ಗೂಲ[5]ಪದ್ಧತಿಯ ನಂದೀಶ ತೋರಿ ಮೆರೆದಂ
ಕುಂದುತಾ ಮಾದರಸ ಮಾದಲಾಂಬೆಯರಿರ್ವ
ರಂದು ನಂದಿಯ ಪೂಜೆಯಂ ನೆಗಳ್ದೊಡವರಿಗೊಲಿ
ದಿಂದುಧರ ಮಹಿಮಾಂಬುನಿಧಿಚಂದ್ರ ವೃಷಭೇಂದ್ರ [6]ಸಾರ[6]ಮತಿಯಂ ಪಾಲಿಸು ೧೩

*ಶ್ರೀಬಸವಪಾದ [7]ಮಚ್ಚಿತ್ತ ಮಧುಮಧುಕರ[7]
ಶ್ರೀಬಸವ **ಪಾದ ಹೃತ್ಕಂಜದಿನಕರಕರಂ
ಶ್ರೀಬಸವಪಾದ ಮದ್ವದನಕಾಸಾರ ವೀಹಾರ ಹಂಸಾಕಾರವುಂ
ಶ್ರೀಬಸವಪಾದ ಮದ್ಭವತಿಮಿರ ಸೂರ ಹರ
ಶ್ರೀಬಸವಪಾದ ಮತ್ಪಾಪತಾಪಪಟೀರ
ಶ್ರೀಬಸವಪಾದ ಪರಮೇಶ ಪರತರಬ್ರಹ್ಮ ಶ್ರೀ**ಬಸವ ಶರಣು ಶರಣು ೧೪

ನನ್ನಿಯೆನೆ ಪೇಳ್ವೆನವಿರಳ ಪರಬ್ರಹ್ಮದೊಳ್
ಭಿನ್ನವಿಲ್ಲದೆ ಬಸವದಂಡೇಶ ಮಡಿವಾಳ
ಕಿನ್ನರಯ್ಯಂ ಹಡಪದಪ್ಪಣ್ಣ ಸೊಡ್ಡಳಂ ಪಡಿಹಾರಿಮೋಳಿಗೆಯ್ಯಂ
ಮುನ್ನಿನನುಭವಮಿಲ್ಲದಿರೆ ಸರ್ವ[8]ಮಿಲ್ಲ[8]ಮೆಂ
ದುನ್ನತಧ್ಯಾನದಿಂದಿರೆ ಪರಂಜ್ಯೋತಿ ತಾಂ
ಚೆನ್ನಬಸವೇಶಾಭಿಧಾನದಿಂ ಷಟ್ಸ್ಥಲಬ್ರಹ್ಮಿ ಗಣಸಹಿತ ಬಂದಂ ೧೫

---

1 ಶೃಂ (ಕ) 2 ನಂ ವಿ (ಚ) 3 ವೆ (ಕಗ) 4 ವಾನೊಡರ್ಚಲಾ (ಚ) 5 ಗುಲದ (ಚ) 6 ಸಾಂದ್ರ (ಚ) 7 ಮಚ್ಚಿತ್ತ ಮಧುಕರವರಂ (ಚ) 8 ವ್ಯರ್ಥ (ಚ)

* ೧೪ ನೆಯ ಪದ್ಯ ಗ ಪ್ರತಿಯಲ್ಲಿಲ್ಲ

**ಕ ಪ್ರತಿಯಲ್ಲಿ ಈ ಭಾಗ ಲುಪ್ತವಾಗಿದೆ

ಭಿನ್ನ ಮಾಯೊಪಾಶ ಸಂಸಾರ ಸಾಗರನ
ಭಿನ್ನ ಮಾನಸ[1]ಸಾ[1]ರವಮಲ ಕರ್ಮವಿಚ್ಛೇದ
ನನ್ನಿಯಿಂ ಶರಣಜನಕಿರದೆ ಷಟ್ಸ್ಥಲಬ್ರಹ್ಮಮುಖ್ಯ ಸರ್ವಾಚಾರಮಂ
ಭಿನ್ನವಿಲ್ಲದೆ ಬೋಧಿಸುತ ಜ್ಞಾನಾಮೃತದ
ಚಿನ್ನಿಧಿಯೊಳಾಳುತೇಳು[2]ತ್ತಿ[2]ರ್ಪ ಗುರುವರನ
ಸನ್ಮಾತ್ರಬ್ರಹ್ಮ[3]ನ[3]ಹ ಚೆನ್ನಬಸವೇಶ್ವರನ ಪನ್ನಳಿನಕಭಿವಂದಿಪೆಂ ೧೬

ನಿತ್ಯನಿ[4]ರುಪಮ[4] ನಿರಂಜನ[5]ನಂ[5] ನಿರ್ವಾಯನೆಂ
ಬುತ್ತಮೋತ್ತಮ ನಾಮಕೀರ್ತನಂಗೇಳಿ ಶಿವೆ
ಕುತ್ತುಗೊಂಡೆಲೆಯೆಭವ [6]ಯಾ[6]ತಕೀ ನಾಮಮೆನಲಾತ ನಿರ್ವಾಯ[7]ನನ[7]ಘಂ
ಸತ್ಯವೆಂನೆ ಮತ್ತವಿದ್ಯೆಯ ಕಳಂಹಿ ಕಾಮದು
ನ್ಮತ್ತ[8]ತೆಯಿನೀ[8]ತನಂ ಜಯಿಪೆನೆನೆ ಶಿವ ನಗು
ತ್ತಿತ್ತ ಕಳುಹಲ್ಬಂದವಿದ್ಯೆಯಂ ಜೈಸ ಬೋಧಿಸಿದ ಪ್ರಭು ಸಲಹು ಸತತಂ ೧೭

[9]ಲಿಂಗವೆನಿಪ[9]ಮಲತೋಂಟಕ್ಕೆಯಾಚಾರಮೆಂ
ಬಿಂಗಿತದ ಬೇಲಿಯಂ ತೆತ್ತು ಸ್ಥಾವರ ಜಂಗ
ಮಂಗಳೆನಿಸುವ ವನಕೆ ಏ[10]ಕಂ ಪರಬ್ರಹ್ಮಮೆಂಬ[10] ಬೀಜವನೆ ಬಿತ್ತಿ
ಕಂಗೊಳಿಪ ಮೂರಾರು ಮೂವತ್ತು[11]ಮೂ[11]ರು ತೆರ
ತುಂಗಯಿನ್ನೂರಹದಿನಾರು ಮೊದಲಹ ಪೂ[12]ರ್ಣ[12]
ಲಿಂಗಫಲದಮೃತಮಂ ಸವಿದು ಶರಣರ್ಗಿತ್ತ ಸಿದ್ಧಲಿಂಗನೆ ಜಯ ಜಯ ೧೮

ನಿರವಧಿಕ ನಿತ್ಯ ತೋಂಟದ ಸಿದ್ಧಲಿಂಗಪ್ರಭು
ಗುರುವಿನನುಪಮ ವೀಟಿಕಾಪ್ರ[13]ಸಾದದ[13] ಮಹಿಮ
ಸರಸಾನುಭವ ಬೋಳಬಸವೇಶ .ಜಹೃದಯ ಜಾಲಿಕಾ[14]ಕಂಥೆ[14]ದೇವಂ
ಚಿರಚಿದನುಭವಸಾರಮೂರ್ತಿ ಚ[15]ನ್ನಾಚಾ[15]ರ್ಯ
ರರಿವಿನ ರಸಾಮೃತವ ಸ್ವಾದಿಸಿದ [16]ಎಳ[16]ಮಲೆಯ
ಗುರುಶಾಂತರನುಭವಾಂಬುಧಿ ಷಟ್ಸ್ಥಲಬ್ರಹ್ಮ ಸಂಪಾದನಾದೇಶಿಕಂ ೧೯

---

1 ದೂ (ಚ) 2 ತಮಿ (ಚ) 3 ವ (ಗ) 4 ರವಯ (ಚ) 5 ವೆ (ಚ) 6 ವೇ (ಚ) 7 ನಿರ (ಚ)
8 ದಿಂದಿ (ಚ) 9 ಅಂಗಮೆನಿಪ (ಗ) ಲಿಂಗವೆಂಬ (ಚ) 10 ಕಮೇಪಾ ಪರಬ್ರಹ್ಮ (ಚ) 11 ವಾ(ಚ)
12 ವರ್ಣ (ಗ) 13 ಸ್ವಾವದ (ಗ) 14 ಕಾಂತ (ಕ) ಕಂಥ (ಚ) 15ನ್ನಂಜಾ (ಚ) 16 ಮಲ (ಚ)

ವರವೇದ ವೇದಾಂತ[1]ತ[1]ತಿ ಪುರಾಣಾಗ[2]ಮ ಸು[2]
ಸರಸ ನಾಟಕ ಕಾವ್ಯಮಿಾಮಾಂಸ ತರ್ಕ ವ್ಯಾ
ಕರಣ ಗೀರ್ವಾಣ [3]ಶಾಸ್ತ್ರವನೋದುತಾ[3]ನಾದಿವೀರಶೈವಾಚಾರದ
ನಿ[4]ರುತ ಸಿದ್ಧಾಂತ[4]ವಹ ಸಂಗ್ರಹ[5]ವ ರಚಿಸುತ್ತ[5]
ಜರೆದು ಶೈವವ ವೀರಶೈವವಮಂ ಸ್ಥಾಪಿಸಿದ
ಗುರುವ[6]ರನ[6] ಸಂಪಾದನಾಸಿದ್ಧವೀರೇಶನವಂಲಪಾದುಕೆಯಪ್ಪೆನು ೨೦

ಜಸವೆತ್ತ ಸಂ[7]ಯೆನಲ್ ಸಂಜೀವ ಪಾಯೆನ
ಲ್ಕ[7]ಸಮು ಪಾವನಬ್ರಹ್ಮ [8]ದಾ[8]ಯೆನೆ ಮಹಾಶರಣ
ವಿಸರಕ್ಕಿ ಲಿಂಗಾಂಗದೈ[9]ಕ್ಯಮಂ[9]ಬೋಧಿ[10]ಸುವಣಮೆ ಶಬ್ದವೆನಿಪ[10] ಧಾತು
ಹಸನಾದ [11]ಭವವ ನಷ್ಟವನೆಯ್ದಿಸುವು[11]ದಲಾ
ಕುಶಲದಕ್ಷರ ನಾಲ್ಕುಶ್ರುತಿಶಾಸ್ತ್ರ ಸಿದ್ಧಾಂತ
ಶಶಿಕ[12]ಲೋತ್ತಂ[12]ಸ ಶ್ರೀಸಂಪಾದನಾ ಸಿದ್ಧವೀರ [13]ಮಾ[13]ವಿರತ ಶರಣು ೨೧

ಧರೆಯೊಳಗೆ ಪರಮಗುರು ವಿರತಿಯೇ ವಿರತರ್ಗೆ
ನಿರತವಾ ವಿರ[14]ತಿಯೇ[14]ಕ್ಷಮೆ ಸಕಲ ಯಮಿಗ[15]ಳ್ಗೆ[15]
ಯುರುತರ[16]ದ ಘನವಿರತಿ[16] ಶಾಂತಿಯೇ ಕೈರವಾಪ್ತನ ಶಾಂತಿ ವಿಶ್ವಜಗಕೆ
ಅರಿದು ವಿರತಿಯು ಪೇಳೆ,ಸುರರ [17]ಯಜ್ಞ[17]ದ ಫಲಂ
ಚರಿತ ವಿರತಿಯ ಸಾರ ಚಾರುಶ್ರುತಿತತಿಪೂರ
ಭರಿತ ವಿರತಿಯ ತೇಜ ನರಸುರೋರಗ ಪೂ[18]ಜ್ಯ[18] ಬಣ್ಣಿಸುವ ಬುಧನಾವನಂ ೨೨

ಆರಬಲೆ ಸಂಪಾದನಾ ಚರಣಕೀರ್ತಿವಧು
ಭೂರಿ [19]ಸುರ ನರ[19] ನಾಗಲೋಕವೆಲ್ಲವ ಚರಿಸಿ
ಸಾರಿನೋಡಲು ಪಾಪ[20]ವಿಷದಗ್ಧವದ ನರನು ನಾನೊಲ್ಲೆನೆಂದು ಬಂದು[20]
ಮಿಾರಿಪ್ಪ ಶಾಂಭವಸ್ಥಾನ ಗಣವಹ ಸತ್ಯ
ಸಾ[21]ರಜಲ[21] ಶಾಂತಿಕರ ಬಿಂಬಾಸ್ಯರಂತಲ್ಲ
ದಾರರಿಯದಿಹ ಮುಕ್ತಿಕಾಂತರೆನುತಂ ಬಂದೆ ಶಾಂಭವಗಣಾ[22]ನೀಕವೆ[22] ೨೩

---

1 ಶ್ರು (ಚ) 2 ಮಂ (ಚ) 3 ಬಹುಶಾಸ್ತ್ರಗಳನೋದುತ್ತ (ಚ) 4 ರತಸಿದ್ಧಾತೀತ (ಕಗ) 5 ವನೆ ರಚಿಸಿ (ಚ) 6 ರಂ (ಗ) ರನು (ಚ) 7 ವೆನಲ್ ಸಜ್ಜೀವಪಾಯೆಂ।ದ (ಚ) 8 ದುದ (ಕಗ) 9 ಕ್ಯ (ಚ) 10 ಸುವರೊಯ್‌ಶಬ್ದವೆನಿಪ (ಗ)ಸಿಕೊಡುವುದಾದಾನೆಯೆನಿಪ (ಚ) 11 ನಾಭವವನಷ್ಟವೆಯ್ದಿಪು (ಚ) 12 ಲಾತಂ (ಚ) 13 ಮಹ (ಚ) 14 ತಿ (ಚ) 15 ಳ್ಗೆ ಕ್ಷಮೆ (ಚ) 16 ದ ಘನವೀರ್ಯ (ಗ) ದಿಶಯ ವಿರತಿ (ಚ) 17 ಯಾಗ (ಚ) 18 ಜ (ಕ) 19 ನರಸುರ (ಚ) 20 ಕ್ಷ್ವೇಡ ವಿಷದಮೃತದ ವದನಾಪಸರಿಯರೆಂದು (ಚ) 21 ರಮೃತ(ಜ) 22 ನಿಕರವೆ (ಚ)

ಆ ಮಹಾಸಂಪಾದನಾ ಸಿದ್ಧವೀರೇಶ
ನಾವೋದ[1]ದ[1]ನುಭವಾಂಬುಧಿಚಂದ್ರನೆನಿಪ ಮ
ತ್ಸ್ವಾಮಿ ಗುರುವರ ಚೆನ್ನಮಲ್ಲಿಕಾರ್ಜುನದೇವನಮಲ ಚಿಜ್ಜ್ಯೋತಿಪುಂಜಂ
ರಾಮಣೀಯಕ ನೈಜ ವಿರತಿ ಶಮೆ ದಮೆ ಶಾಂತಿ
ಧಾಮ ಚಾತುರ್ದ[2]ಶ್ಯ[2]ನಿಧಿ ಮಹಿಮಂ ಸದ್ಗುಣ
ಸ್ತೋಮ ಷಡ್ಗುಣಭರಿತ ಸಂಪಾದನಾ ದೇಶಿಕೇಂದ್ರ[3]ಹೃತ್ಕಮಲಭೃಂಗಂ[3] ೨೪

[4]ಭಾಳಾ[4]ಕ್ಷನಪರಾವತಾರ ಮಹಿಮಾಂಬುನಿಧಿ
ಬೋಳಬಸವೇಶ್ವರಂ ಸಿದ್ಧಪುರದೊಳಗಿರ್ಪ
ವೇಳೆಯೊಳ್ ಶ್ರೀಚೆನ್ನಮಲ್ಲಿಕಾರ್ಜುನದೇವರ [5]ವರ ದರ್ಶನಕೆ[5] ಪೋಗೆ
ಆಲೋಕಿಸು[6]ತ ತಾವು[6] ಪೊದ್ದಿರ್ದ ಕಂಬಳಿಯ
ಮೇಳದಿಂ ಗದ್ದುಗೆಯ ಮಾಡಿ ಮೂರ್ತಂಗೊಳಿಸಿ
ಸ್ಥೂಲಸಂಪಾದನೆಯ ಸ್ವಾಮಿಗಳ್ ನೀವೆನಲ್ ಮೆರೆದ ಗುರುರಾಯ ಶರಣು ೨೫

ನಿರ್ಗತೇಂದ್ರಿಯ[7]ದೋಷ[7] ನಿಖಿಲಭಕ್ತಾಧಾರ
[8]ದುರ್ಗತಿ ಭ್ರಮಹರಣ ಪೌಜತಾಂತಃ[8]ಕರಣ
ಸರ್ಗ [9]ಭವ[9]ಲಯನಾಶ ಶಮಿತ ಮಾಯಾಪಾಶ ಭವವಿಪಿನ ಕೃಷ್ಣವರ್ತ್ಮ
ಭರ್ಗ[10]ಮವನ[10]ಧ್ವಾಂತಭಾಸ್ಕರ ಭರಾಟ್ತೇಜ
ಸ್ವರ್ಗೇಶ ಮುಖ್ಯನತ[11]ವ[11]ರ್ಗ ರಕ್ಷಕತಾತ
ದುರ್ಗಾಪ್ರವರರೂಪ ಧೂರ್ಜಟಿ ಶಿವಾನಂದ ಪಾಹಿ ಗುರುಚೆನ್ನಮಲ್ಲ ೨೬

ವಿಮಲ ಸಂಪಾದನೆಯ ಚೆನ್ನಮಲ್ಲೇಶ್ವರನ
ಸುಮ[12]ಹ[12]ದನುಭವ ಸುಧೆಯೆ ಮೂರ್ತಿಯಾದಂದದಿಂ
ಕಮನೀಯಕೀರ್ತಿರೂಪನು ಭವಾನಂದ ಸಹ ಜ[13]ನಿಸಿ[13] ಭೂಭಾಗದಲ್ಲಿ
ಸುಮನಸ ಮಹಾಶರಣಜನಕೆ ಜ್ಞಾನಾಮೃತವ
ಮಮತೆಯಿಂ ತೃಪ್ತಿಬಡಿಸಂತ್ತ ರಾಜಿಸುತಿರ್ಪ
ರಮಣೀಯ ರಾಜಧರನಾದ ಸಂಪಾದನಾಪರ್ವತೇಶಂ ಸಲಹುಗೆ ೨೭

---

1 ವ (ಕಗ) 2 ಶವಿದ್ಯ (ಚ) 3 ಹೃತ್ಸರಸಿಜೇಂದ್ರಂ (ಚ) 4 ಫಾಲಾ(ಗ) 5 ದರ್ಶನಕ್ಕೆ(ಕಗ) ೬ ತ್ತಮಳ(ಚ) 7 ದೂರ (ಚ) 8 ವರ್ಗತಸ್ಕರಣ ಹರಣ ವರ್ಜತಾಂ (ಚ) 9 ಸ್ಥಿತಿ (ಚ) 10 ಭಾವಜ (ಚ) 11 ಸ್ವ (ಚ) 12ನ (ಚ) 13 ಶಶಿ (ಕಗ)

ನಿಮ್ಮನುಭವದ ಕಾಂತಿ ಲೋಕವಿಶ್ರುತ ಶಾಂತಿ
ನಿಮ್ಮನುಭವದ ನೈಜ ಭಕ್ತಜನಸುರಭೂಜ
ನಿಮ್ಮನುಭವದ ದೀಧಿ[1]ತಿಯೆ ಶರಣಹೃಜ್ಜ್ಯೋ[1]ತಿ ಪರಮಕೈವಲ್ಯವಿಧೃತಿ
ನಿಮ್ಮನುಭವಜ್ಞಾನರುಚಿ ಮಾಯಪಾಶಶುಚಿ
ನಿಮ್ಮನುಭವಾಲಾಪ ಭಾವಜಾಂತಕಲಾಪ
ನಿಮ್ಮಯ ಮಹಾನುಭವ ಶ್ರುತಿಗಗೋಚರ ದೇವ ಭವವನಧಿ ಭೈತ್ರದೇವ ೨೮

ಭೂಮಿಯೊ[2]ಳಗೆ[2]ರಗದಿಹ ಪರಸಮಯವೊಂದಿಲ್ಲ
ನಾಮಮಾತ್ರವ ಕೇಳಿ ಪೊಗಳದಿಹ ಬುಧರಿಲ್ಲ
ಪ್ರೇಮದಿಂ ಕಂಡು ಬದ್ಧಾಂಜಲಿಗಳಿಂ ನಿಂದು ಭಜಿಸದಿಹ ಭೂಪರಿಲ್ಲ
ಸ್ವಾಮಿ ಶ್ರೀಚರಣಮಂ ಧ್ಯಾನಿಸುವನೇ ಧನ್ಯ
ನಾ ಮಹಾತ್ಮನೆ ಸಚ್ಚಿದಾನಂದವಿಗ್ರಹಂ
ಶ್ರೀಮಹಾಸಂಪಾದನಾ ಪರ್ವತಾರ್ಯಪದ[3]ವಂ ಭಜಿಪೆ ಭಕ್ತಿಯಿಂದ[3] ೨೯

ಕರುಣಾಂಬುನಿಧಿ ಚನ್ನಮಲ್ಲಿಕಾರ್ಜುನದೇವ
[4]ರೊರೆದ ಆ[4]ಚರಣಕ್ಕೆ ಪರ್ವತೇಶಂ ನಮಿಸಿ
ತರುಣಾರ್ಕಕೋಟಿಪ್ರಕಾಶ ಕಲ್ಯಾಣಾದ್ರಿವಾಸ ಸರ್ವೇಶ ಗುರುವೆ
ಧರಣಿಯೊಳ್ ಮೆರೆವ ಚತು[5]ರಾಚಾರ್ಯರ[5]ನ್ವಯವ
ಕರುಣದಿಂದೊರೆದು ಕೃತಕೃತ್ಯನಂ ಮಾಳ್ಪುದೆನೆ
ಹರುಷದಿಂ ಪೇಳ್ದರಾ ವಾಕ್ಯಾಮೃತವ ಪದವ ಮಾಳ್ಪುದೆನೆ ಪೇಳ್ವೆನೊಲವಿಂ ೩೦

ಲಾಲಿಸುವುದಯ್ಯ ಸಂಪಾದನೆಯ ಗುರುಪಾದ
[6]ಲೋ[6]ಲಯತಿ ನೀವು ಪೇಳುವ ವಚನ ಪದಬಂಧ
ಲಾಲಿತ್ಯ ಶಬ್ದಾರ್ಥ ಸ್ವಸ್ವರೂಪಗಳಿಂದಲತಿರಮ್ಯಮಾಗಿ ತೋರ್ಕುಂ
ಮೂಲ ಚತುರ್ವಿಧಗುರುಗಳುಪದೇಶವಿಧಿಯ ನೀಂ
ಪಾಲಿಸುವುದೆಂದು ರೇವಣಸಿದ್ಧರನ್ವಯದ
ಬಾಲನಹ ಪೌರಾ[7]ಣಿಕಂ ಬಸವಶ[7]ರಣಜನ ಬಿನ್ನವಿಸ[8]ಲಾನುಸುರಿದೆಂ[8] ೩೧

---

1 ತಿ ಶರಣಜನ ಹೃತ್ಸದ (ಚ) 2 ಳು ಎ (ಚ) 3 ಭಜಿಸುವೆಂ ಭಕ್ತಿಯಿಂದಂ (ಚ)
4 ರಮಳ ಶ್ರೀ (ಕಗ) 5 ರ್ವಿಧಗುರುಗಳ (ಚ) 6 ಲಾ (ಗ) 7 ಣಿ ಬಸವ ಪಂಜರ (ಚ)
8 ಉಪಕ್ರಮಿಸಿದೆಂ (ಚ)

ಕ್ಷೀರದೊಳ್ ಘೃ[1]ತವು ಚಂದ್ರನ ಕಾಂತದೊಳ್ ಜಲವು[1]
ಸೇರಿ [2]ಚಿಪ್ಪನು ನೀರು ಮುತ್ತಾಗಿ[2] ತೋರುವಂ
ತಾ ರಮ್ಯ ಪರಮೇಶಚತುರ್ವಿ[3]ಧದ[3] ಗುರುರೂಪಧರಿಸಿ ಶಾಂಬವ ಮರ್ತ್ಯ[4]ದೊಳ್[4]
ತೋರು[5]ತ್ತ[5] ಸಕಲ ನಿಷ್ಕಳರೆನಿಸಿ ಭುವಿಯಲ್ಲಿ
ಭೂರಿಮಹಿಮೆಯ ಮೆರೆದ ಬಹುಮಹಾತ್ಮರ ಘನವ
ನೀರೇಜಭವ ದಶ[6]ಸಹಸ್ರ[6]ವದನರ್ಗರಿದು ಪೇಳ್ವಡಾನೆಂತು [7]ನುತಿಪೆಂ[7] ೩೨

ಎಂದು ಚಿಂತಿಸಿ ಗುರುಪದಾಂಬುಜಧ್ಯಾನದೊ
[8][ಳಿಂ][8]ದಿ ಕೀಟವು ಭ್ರಮರದಂತಿರಲ್ ಮುದದಿಂದ
ಕಂದ ಚಿಂತಿಸಬೇಡವೆಂದು ತಲೆದಡಹಿ ಹೃತ್ಕಂಜದೊಳ್ ನಿಂದು [9]ತಾನೆ[9]
ಸಂದಾಗಮಾಮ್ನಾಯ ಬಸವಾದಿಗಣರುಸು
[10]ರ್ದಂದ[10]ವಚನದ ಸಾರ ಬಹುಶಾಸ್ತ್ರದರ್ಥಗಳ
ಛಂದ[11]ವ್ಯಾಕರಣ[11] ಮುಂತಾದ ಲಕ್ಷಣಗಳಂ ಪೇ[12]ಳಿನೆ ಮಹಾಪ್ರಸಾದಂ[12] ೩೩

ಎಲೆ ದೇವ ಯತಿಲಲಾಮನೆ ಲೇಸುಲೇಸಯ್ಯ
ನೆಲೆಯಾಗಿ ನೀಂ ಪೇಳೆ ಬರೆದುಕೊಳಲಾಂ ಯೋಗ್ಯ
ಸುಲಭನೇ ಸತ್ಯ ಸತ್ಯಂ ನೀನೆ ಕೃತಿಕರ್ತೃವಾಂ ಭೃತ್ಯ [13]ಭೃತ್ಯ[13]ಸತತಂ
ಸಲೆ ಕೃತಿಯ ನಾಮ ಚತುರಾಚಾರ್ಯಚಾರಿತ್ರ
ಒಲವಿನಿಂ ಪೇಳ್ದವರೆ ಲಿಂಗಾಂಗಸಂಯೋಗ
ಲಲಿತ ಷಟ್ಸ್ಥಲಜ್ಞಾನ ಸಂಪಾದನಾ ಚನ್ನಮಲ್ಲಿಕಾರ್ಜು[14]ನ ಗುರುವರರ್[14] ೩೪

ಇದು ಕಣಾ ಪರಶಿವನ ಬೀಡು ಮುಕ್ತಿಯ ನಾಡು
ಇದು ಕಣಾ ಲಿಂಗಾಂಗಸದನ ಭಕ್ತಿಯ ವದನ
ಇದು ಕಣಾ ಗುರುಶಿಷ್ಯರಮಳಮುಕುರಂ ಸುಕರನಿಕರಕರದಾಮಳಕವು
ಇದು ಕಣಾ ಶರಣಜನದಾನಂದಸಂಧಾನ
ಇದು ಕಣಾ ನವರಸದ ಹಕ್ಕೆ ಭಾವದ ತೆಕ್ಕೆ
ಇದು ಕಣಾ ಸತ್ಕವಿಯ ಮಚ್ಚು ಕುಕವಿಗೆ ಕಿಚ್ಚು ಮಚ್ಚು ಬುಧಜನದ ಪೆರ್ಚು ೩೫

---

1 ತ ಚಂದ್ರಾಸ್ಯದೊಳ್ ಜಲವನಲ (ಚ) 2 ಶಿಲೆಯೊಳ್ ನಿರುತ ಮೌಕ್ತಿಕದಿ (ಚ) 3 ಧ (ಗ)
4 ದೆ (ಗಚ) 5 ತ್ತೆ (ಗ) 6 ಶತ(ಕಗ) 7 ಸಮರ್ಥನೆ (ಕಗ) 8 ಳಿಂ (ಕಗಚ) 9 ನಾವೆ (ಚ)
10 ರ್ದಿಂದು (ಕಗ) 11 ದಿಂ ಶಬ್ದ (ಕಗ) 12 ಳ್ವೆನೆ ಮಹಾಪ್ರಸಾದಮಂ (ಚ) 13 ಸತ್ಯ (ಚ
14 ನಾರ್ಯರು (ಗ) ನಗುರುವರಾ (ಚ)

ಲಲಿತಾವನೀಕೊಳದೊಳ[1]ಮಳ ಶೀಲಾ[ನ್ವಿತಂ]
ಗಳಾದ[1] ವಿಕಾಸಸೋಮಂ ಸೋಮನಂತಲ್ಲ
ದೊಲವಿನಿಂ ಬಸವ ನುತಿಸುತೆ ವೀರಶೈವಮತಜೊನ್ನವಕ್ಕಿ[2]ಯ[2] ತಣಿಸುತೆ
ಬಲ[3]ವಹ[3] ಶಿವಪ್ರಬಂಧಗಳೆಂಬ ತಾರೆಗ[4]ಳ
ನಲರಿಸುತ[4] ಶಿವ ಕಲಾನಿಧಿ[5]ಯಾದ[5] ಪರಸಮಯ
ಜಲಜಾರಿ ಶಿವಸಮಯ ಶರಧಿಸಖ ಸೋಮೇಶ ನೆಲಸು ಹೃತ್ಕುಮುದದೊಳಗೆ ೩೬

ಪರಸಮಯಸೈನ್ಯಸಂಹರ ಬಾಣ ಬಾಣನಂ
ನಿರವಧಿಕಕವಿ ಕಾಳಿದಾಸ [6]ಸುಂದರ[6]ದಾಸ
ಹರಚರಣ[7]ನುತಿಭಾಸ್ಕರಂ ನಿರಾಕೃತದುಷ್ಟಕವಿತಿಮಿರಗಣಮಯೂರ[7]
ಸರಸದೊಳಲಂಕಾರ ಸರ್ವಲಕ್ಷಣಯುಕ್ತ
ವರಕಲಾನ್ವಿತ [8]ಹರೀಶ್ವರದೇವ ಶಿವಮಂತ್ರ,
ಪರ[8]ಭಸ್ಮಕೃತ ತಟಾಕಂ ಪದ್ಮರಾಜ ಶಿವಕವಿಗಳಂ ಬಲಗೊಂಬೆನು ೩೭

ಮಲುಹಣ ಮಹಾಕೇಶಿರಾಜ ರಾಘವ ಭೀಮ
ಮಲಯರಾಜೇಂದ್ರ ಗುರ್ಜರ ಹಲಾಯುಧ ದೇವ
ಚಲದಂಕ ಮಾಯಿದೇವಾಚಾರ್ಯ ಚಾಮರಸ ಜಕ್ಕಣ್ಣ ನಿಜಗುಣೇಶಂ
ಸಲೆ ಪೂರ್ವಶಿವಕವಿಗಳುತ್ತಮಕವೀಶ್ವರರ
ಬಲವಂದು ನೂತನಕವೀಶ್ವರರು ಮೊದಲಾಗಿ
ಯೊಲವಿನಿಂ ಬಿಡದೆನ್ನ ಕೃತಿಯ ನಡೆ[9]ಸುವರೆಂ[9]ದು ಪೊಡಮಡುವೆನಡಿ[10]ಗವರ್ಗಳ[10] ೩೮

ಮಧುಸಮಯದೊಳಗೆ ಮಾಮರ ಚಿಗು[11]ರಲೆ[11]ಳೆದಳಿರ
ಕದುರ್ಂಕಿ ಪೊ[12]ರ್ಕು[12]ಳಪಕ್ಕಿ ಕೊರ[13]ಳಿನಿಂ[13]ಚರಮುದಿಸೆ
ಮುದದಿಂದ ಕೊಂಡಾಡುವಂತೆನ್ನ ಕಾವ್ಯ ಸತ್ಕವಿಸೇವ್ಯ ಜನಭವ್ಯವು
ಪದಂಳದಿಂ ವಿಷಫಲವನುದರಪೂರಿತ[14]ವಾಗೆ[14]
ವೊದಗಿ ಕಾಕಂ ಬಂದು ಕರ್ರಕರ್ರನೆ ಕೇಳ್ದು
ಗದರಿ[15]ಛೇ[15] ಎಂಬಂತೆ ಕುಕವಿ[16]ಯಾದವನ[16] ಕೃತಿಯದರಂತೆ [17]ನಿಂದ್ಯವಹುದು[17] ೩೯

---

1 ಮಾಳಶೀಲಾ ಗಳಾದ (ಕಗ) ಮಳಶೀಲಗಳೆಂಬ ಕುವಲಯ (ಚ) 2 ಗೆ (ಚ) 3 ವಂತ (ಚ) 4 ಳಿ ಗಲಘು ಕರ್ತೃನಂ (ಚ) 5 ಯು (ಚ) 6 ಸೌಂದರಿ (ಚ) 7 ಸ್ಮೃತ್ಯಭಾಸ್ಕರ ನಿರಾಕರಣಾನ ಕವಿಧ್ವಾಂತರಿಪು ಮಯೂರಂ (ಚ) 8 ಕಾವ್ಯ ಹರಿಕಾಮಿನಿ ಈಶಚಿರ (ಚ) 9 ಸಿರಿಯೆಂ (ಚ) 10 ಗೇಗಳುಂ (ಚ) 11 ರ್ದೆ (ಚ) 12 ಕ್ಕು (ಕಗ) 13 ಲಿಂ (ಕಗ) 14 ಕೊಂಡು (ಚ) 15 ಬೇ (ಕಗ) 16 ನಿಂದ್ಯವನ (ಚ) 17 ಭಾವಿಸುವುದು (ಚ)

ವಿಮಳಕವಿತಾವನಿತೆಯೊಲವಿಲ್ಲದೇ ಮೂಢ
ನಿಮಗೆ ಕವಿತೆಯದೇನು ಚೋದ್ಯವೇಂ ಪುಸಿಯೆನುತ
ಕುಮು[1]ತ[1]ಕ್ಲೀಬಂ ಪಳಿಯೆ ಸತ್ಯವಹುದೇ ನೋಡೆಯವನ ದುರ್ಲಪಿತ ವ್ಯರ್ಥ
ಸುಮ[2]ನ ನವರಸ[2] ಕಾವ್ಯದೊಳಗೆ [3]ಗಾಂಭೀರ್ಯ[3]ಭಾ
ವ[4]ಮಿರಲ್[4] ವಿಚಾರಿಸದೆಯವಿಚಾ[5]ರಿ[5]ಖಳ ಧೂರ್ತ
ದಮಿತ ಸಂತೋಷ ಮನುಜ[6]ನೆ ತಪ್ಪೆಣಿಪ ಮಕ್ಷುಕಂ[6] ವ್ರಣವನರಸುವಂತೆ ೪೦

ಆರಾಧ್ಯರಮಳಚಾರಿತ್ರ ದೇಶಿಕಕೃತಂ
ಸಾರತರಕಾವ್ಯ [7]ನಿ[7]ರ್ದೋಷಯುತ ಚಾರುಮುದ
ಧಾರೆಯಿಂ ಕೂಡಿ ಬರುತಿರೆ ಕುಕವಿ[8]ಯೆಂತೆಂಬ ಶುನಕನೊಂ[8]ದೆಡೆಯೊಳಿರ್ದು
ಹಾರಿಯೂಳಿದೊಡೆ ಮದವಾರಣಕೆ ಕೊರತೆಯೇ
ಕ್ರೂರಕುತ್ಸಿತ [9]ವೈರಿ[9]ನಿಂದೆಯದರಂತಹುದು
ಭೂರಿ ಶಿವಭಕ್ತಮಾಹೇಶ್ವರ ಮಹಾಕವಿಗಳಮಳಹೃತ್ಕರ್ಣಾಮೃತಂ ೪೧

ರಾಕೇಂದು ಬರೆ ಜೊನ್ನವಕ್ಕಿಯಮರ್ದುಂಡು ತಾ
ನೇಕವಿಧದಿಂದ ಪರಿಣಮಿಸುವುದು ಕುಮು[10]ದಿನಿಯಂ[10]
ಬೇಕಾದ ಸಖಿ ಬಂದನೆಂ[11]ದೊಲಿವ[11]ವೊಲ್ ಸುಧಾರಸಮಯದ ಕೃತಿಯನಿಂದು
ರೇಖಾವತಂಸನ ಮಹಾಭಕ್ತರಾತ್ಮ ಚಿ
ಚ್ಚಾಕೋರ ವಿಕ[12]ಸಿತಾ[12]ನಂದವಪ್ಪವು [13]ನೋಡೆ[13]
ಕಾಕ[14]ಲೋಕಕೆ ತಲೆಯ ನೋವಾದರಾಗವೇ ನಿ[14]ಂದೆಯೋ ಚಂದ್ರಮನಿಗೆ ೪೨

ಅಸಮಪೂರ್ವದ ಮಹಾಕವಿವಿಸರ ನಿರವಿಸಿದ
ಮಸುಳಿಸದ ಪೌರಾಣ ಕಾವ್ಯ ಚಾರಿತ್ರ ನವ
ಸರ ಬಂಧ ವಸ್ತುಕಂ ವರ್ಣಕಂಗಳು ಪೂರ್ಣವಾಗಿರಲ್ ಬೇರೆ ಶಾ[15]ಸ್ತ್ರಂ[15]
ಒಸೆದು ಮಾಡುವುದೇನುಯೆ[16]ನ್ನದಿರಿ[16] ಬೇರೊರ್ವ
ರಸರಸಾಯನವಮೃತವುಣ್ಣ[17]ಲಾತಗೆ[17] ತೃಪ್ತಿ
ಸಸಿನೆ ತಾಂ ನಿರ್ವಿಸದೆ ಸಪ್ತಸಂತಾನಗಳ್ ತನಗೆ ಪ್ರಿ[18]ಯವ್ವೈ[18] ಜಗದೊಳು ೪೩

---

1 ತಿ (ಚ) 2 ದಸರವರ (ಕಗ) 3 ಗಂಭೀರ (ಚ) 4 ಮರ್ದುದ (ಚ) 5 ರ (ಕಗ) 6 ನೇಂ ತಪ್ಪನರಸುವಂ ಮಕ್ಷುಕ (ಚ) 7 ಮತ್ತೇಭನಿ (ಚ) 8 ಶುನಕಿಯೊಂ (ಚ) 9 ದ್ವೇಷಿ (ಚ) 10 ದನಿಜ (ಚ) 11 ದರಳ್ವ (ಚ) 12 ಸನಾ (ಚ) 13 ನಾ (ಚ) 14 ಕಂಟಕ ಕಿಂಶುಕಾನಂದ ವರಳದಿಕೆ ನಿಂ (ಚ) 15 ಸ್ತ್ರ (ಕಗ) 16 ನ್ನಿದಿರೆ (ಕ) 17 ಲವರ್ಗೆ (ಚ) 18 ಯಂ (ಚ)

ಸ್ವರ ಸಂಧಿ ಯೋಗವಹ ಅಚ್ಚಗನ್ನಡ ದೇಶಿ
ವರ ಸಂಧಿ ತದ್ಧಿತ[1]ವಂ[1]ಪಭ್ರಂಶ[2]ಯಾ[2]ಖ್ಯಾತ
ನಿರತಾವ್ಯಯಂ ಸಮಾಸ ಪ್ರಾಸು ಛಂದ ಸಂಸ್ಕೃತ ಧಾತು ಕಾರಕ ಕ್ರಿಯೆ
ಸರಸ[3]ತೆಯಲಂಕಾರಯು[3]ತ್ಪ್ರೇಕ್ಷೆ ಉಪಮೆ ನಿಜ
ಭರಿತ ಶಿವಕವಿಗಳಂತ್ತಮ ಬುಧರ್ ವ್ಯತ್ಯಾಸ
ವರಿದು ತಿದ್ದುವುದು ಪುನರುಕ್ತ್ಯರ್ಥಶೂನ್ಯ ದೋಷಗಳುಳ್ಳೊಡತಿಮುದದೊಳು ೪೪

ಅನ್ಯರಿಂ ಕೃತಿ[4]ಯು ಪೇಳಿಸಿ ತನ್ನ ಪೆಸರಿಡುವ
ಉ[4]ನ್ಮತ್ತನಂತಿರಲಿ ಪೂರ್ವದೊಳ್ ಮಾಡಿರ್ದ
ಸನ್ಮುತದ ಕಾವ್ಯ ಪದಗಳ ಕದ್ದು ಕೊರಳ್ಮುರಿದು ಪದಬಂಧಗಳ ರಚಿ[5]ಸುತ[5]
ಬಿನ್ನಣದ ಕವಿಯೆಂದು ಪೇಳ್ವ ವಂನುಜಾಧ[6]ಮನ[6]
ನನ್ನಿಯಿಂ ಪದಮುದ್ರೆಗಳ ತೆಗೆದು ಬೇರಿಟ್ಟು
ಅನ್ಯದೇಶದಿ ತೋರಿ ಮೆರೆ[7]ವು[7]ದರಪೋಷಕ[8]ನ[8] ಛೀಯೆನ್ನನೇ ದೇಶಿಕಂ ೪೫

ಆ ಮಹಾಪಾಲ್ಕುರಿಕೆ ಸೋಮೇಶ ಮುಖ್ಯ ಬುಧ
ಸ್ತೋಮ ನಿರ್ಮಿತವಾದ ಅತಿಶಯದ ಶಾಸ್ತ್ರತತಿ
[9]ಕಾ[9]ಮ್ಯಮೆನೆ ಸಲ್ಲ[10]ದಿದು ದಿವದಿ[10] ಚಂದ್ರಮನ ಕಳೆಯೆಂತಂತೆ ಮತ್ತೆ ಕೇಳು
ಕಾಮಧೇನುವಿನಮೃತ ಸಂತಾನಫಲಯೋಗ್ಯ
ಭೂಮಿಯೊಳಗಿರ್ಪ ಫಲ ಗೋಕ್ಷೀರ ಸಲ್ಲದೇ
ಸೋಮಶೇಖರಭಕ್ತಶರಣಜನ ಬಿಡದೆಯವಧರಿಸುವುದು ಕರುಣದಿಂದೆ ೪೬

ಶ್ರುತಿತತಿ ಶಿರೋಮಧ್ಯಗತ ಷಟ್ಸ್ಥಲಬ್ರಹ್ಮ
ಪ್ರಥಿತ ಜಂಗಮಮಂಡನಂ ಗಡಾ ಶೃಂಗಾರ
ಯುತಕೃತಿಯ ನೆಗಳ್ವುದು ಮುಕ್ತಿಸಾಧನವೆ ಶಿವಜ್ಞಾನವೆಂೞಯೆಂದೊಡದಕೆ
ವಿತತಪಿಂಡಾಂಡಗಳ ನಿರ್ದೇಶಮಂ ಬಿಡದೆ
ಶ್ರುತಿ ಸಿದ್ಧಮಾಗಿ ಪೇಳ್ವಲ್ಲಿ ಬಾಹ್ಯಮೆಯಲ್ಲ
ಅತಿಶಯ ಮರಾಳ ನೀರ ಕ್ಷೀರ[11]ಮಂ ಹಿಂಗಡಿಸದೆ[11] ಭಕ್ತರ್ ಲಾಲಿಸಿ ೪೭

---

1 ಅ (ಕಗ) 2 ಆ (ಕಗ) 3 ನವಲಂಕಾರೋ (ಚ) 4 ರಚಿಸಿ ತನ್ನ ಪೆಸರಂ ಪೇಳ್ವ (ಚ) 5 ಸಿ (ಗ) 6 ಮಂ (ಚ) 7 ದು (ಕಗ) 8 ರ (ಚ) 9 ಸಾ (ಚ) 10 ದಿವದಲ್ಲಿ (ಚ) 11 ವಿವೃತವಂತ ಸಮ (ಚ)

ಪರಿಪರಿಯ ಸೌರಭಂಗಳ ಕೂಡಿ ಕಾದಂಬ
ಪರಿಮಳದ ಮುದ್ದೆಯಂ [1]ಕೂ[1]ಡಿ ವಾಸಿಸಿ ಸರ್ವ
ರಿರದೆ ಕೊಂಡಾಡುವಂತೀ ಕಾವ್ಯ ವೇದ ಪೌರಾಣಾಗ[2]ಮಾದಿ[2]ಶಾಸ್ತ್ರ
ದಿರವಿನೊಳಗುಳ್ಳ ಶಿವಜ್ಞಾನರಸಗಂಧ[3]ದಿಂ[3]
ನೆರೆಯೆ ಕೃತಿಯಂ ರಚಿಸಿ ಶರಣರುಂ ವಾಚಿಸು
ತ್ತರರೆಯತಿಶಯಮೆಂಬರಲ್ಲದಾಚಾರನಾ[4]ಸ್ತಿ[4]ಕಹೀನರಿದನರಿವರೆ ೩೮

ಹರ ಮುನಿಯೆ ಗುರು ಕಾಯ್ವ ಗುರು ಮುನಿಯಲಾ ಹರಂ
ನಿರುತದಿಂ ಕಾ[5]ಯೆ[5] ಬಲುಹಿಲ್ಲೆಂಬ ಗುರುವಚನ
ವರಿದು ನ ಗುರೋರಧಿಕಮೆಂದೆಂಬ ಶ್ರುತ್ಯರ್ಥ ಡಂಗುರಂ ಸಾರುತಿರಲು
ಭರದಿಂದ ನಾಸ್ತಿತತ್ವಂ ಗುರೋಃ ಪರಮೆಂದು
ಪೊರೆವುದು ಮಹಿಮ್ನವದರಿಂದ ಗುರುವಾಕ್ಯಮಂ
ಹರುಷದಿಂ ಪೇಳೆ ದ್ಯಾವಾ ಪೃಥುವಿಯಹ ಮಹತ್ತಿನ ಪದವ ಶಿರದೊಳಾಂತು ೩೯

ಕಮಲಧರನೊಳ್ ಪುಟ್ಟಿ ಕಲಶಜಂಗರುಹಿ ಹರಿ
ಯಮಲ ನಿಜವೀರ್ಯದಿಂ ನಿಲಿಸಿ ತೆಲ್ಲಿ[6]ಗ[6] ಮಾಯೆ
ಮಮತೆಯಿಂ ಸಲಹಿ ಲಂಕೆಯೊಳು ಲಿಂಗವ ನಿಲಿಸಿ ಯಕ್ಷರಂ ಸುಟ್ಟುರುಪುತೆ
ಅಮಮ ಸ್ಪರ್ಶನದಿಂದಲರುಹಿ ರಾಜಗೆ ಮಹಿಮೆ
ಯಮದರ್ಗಂಡು ಗೋರಕ್ಷಗಸುವಿತ್ತನಂತಪಶು
ರಮಣಿಯರ ಪೊರೆದಷ್ಟಮೂರ್ತಿ ಭರ್ಗನೊಳೈಕ್ಯವಾದ ರೇಣುಕ ಜಯಜಯ ೪೦

ದುರುಳ[7]ರಹ ಗಂಧರ್ವ ಯಕ್ಷಮುಖ ಸುರನಾಗ
ನರರ[7]ಲೋಕಾಲೋಕ [8]ಸಚ[8]ರಾಚರಂಗ[9]ಳಂ[9]
[10]ಇರದಗ್ನಿ[10]ನೇತ್ರದು[11]ರುಳಿಗಳಿಂದ[11] ದ್ರುಹಿಣಾಂಡ[12]ಮಂ[12] ಭಸ್ಮಮಂ ಮಾಡುತ
ಗರಳಗಳ ಚಿ[13]ತಭಸ್ಮ ಲೇಪನಾ[13]ಸ್ಥಿಯ ಮಾಲೆ
ಕೊರಳೊಳಂಕಿಸಿ ಮರುಳುತಂಡ ಸಹ[14]ಬಿನದಿಸುವ[14]
ಮರುಳಸಿದ್ಧೇಶ್ವರನೆ ನವಕೋಟಿಸಿದ್ಧ ಪ್ರಸಿದ್ಧ ಹೃತ್ಸಿದ್ಧಗುರುವೆ ೪೧

---

1 ಮಾ (ಚ) 2 ಮಖಿಳ (ಚ) 3 ಮಂ (ಚ) 4 ಸಿ (ಚ) 5 ಯ (ಗ) 6 ಗೆ (ಕ) 7 ಬ್ರಹ್ಮೇಂದ್ರೋಪೇಂದ್ರಾದ್ಯಮರನರನಾಗಖಳರ (ಚ) 8 ಸತ್ಕಚ(ಗ) 9 ಳ (ಗ) 10 ನಿರದಗ್ನಿ (ಗ) ಸರಳಾಗ್ನಿ (ಚ)11 ರಿಗಿಡಿಗಳಿತ (ಕಗ) 12 ತತಿ (ಚ) 13 ತಾಭಸ್ಮಲೇಪನ(ಚ) 14 ಬಿರುದೆಸೆವ (ಕಗ)

ಆಕಾಶ[1]ಕೇಶ ನಾಕೇಶವಂ[1]ದಿತಪಾದ
ಲೋಕೇಶ ಪಂಚಮಶಿರಚ್ಛೇದ ಮಹಕಾಳ
ಲೋಕೇಶಕಾದ್ರವೇಯ ಮಹಾವಿಭೂಷ ಭೂಗಗನಸಂಭರಿತ[2]ಭಾ[2]ಷ
[3]ಪಾ[3]ಕಾರಿಯನುಜೇಷ್ಟ ಸಾಕಾರರೂಪೇಷ್ಟ
ಏಕಏವೋ ರುದ್ರನೆನಿಪ ಶ್ರುತಿಸಿದ್ಧನಹ
ಏಕರಾಮಾರಾಧ್ಯ ಲೋಕವಿಶ್ರುತ[4]ಪಾ[4]ದ್ಯ ಸಾಕು ಮೂಲೋಕದೊಡೆಯ ೫೨

ಪುಂಡರೀಕಾ[5]ಕ್ಷಾದಿ ದೇವಪ[5] ಮೃಕಂಡು ಮಹ
ದಂಡಿ ಶಾಂಡಿಲ್ಯ ಕೌಂ[6]ಡಿನ್ಯ[6]ಪೂಜಿತಪಾದ
ಪುಂಡರೀಕೇಕ್ಷುಕೋದಂಡಖಂ[7]ಡನ[7] ದಂಡಧರ ಕಮಲವೇ[8]ತಂ[8]ಡನೆ
[9]ಲಂ[9]ಡಿ ಬೌದ್ಧಾದಿ ಮತಧ್ವಾಂತ ಮಾರ್ತಾಂಡ ಪ್ರ
ಪಂಂಡ[10]ನ[10] ಶಿವೈಕ್ಯಮತ ಕುಂಡಲಿಯ ವಿದ್ಯಾಘ
ದಂಡ[11]ನನೆ[11] ಶಿವಪಂಡಿತಾರಾಧ್ಯ ಕೊಡು [12]ಚಾರುಬುದ್ಧಿಯಂ ನಿನ್ನ[12] ಕೃತಿಗೆ ೫೩

ಗುರು ಚತುರ್ವಿಧಮಧ್ಯದೊಳ್ ನಿಂದ ವರಗುರುವೆ
[13]ಪರಮೇಶ್ವರನೆ[13] ಗುಣಾತೀತ[14]ನೇ ನಿರುಪಮನೆ[14]
ಗುರುವೆಯಾನತಕಲ್ಪತರುವೆ ಜ್ಞಾನಾಮೃತ[15]ಗಳಿ[15]ರವೆಯಮರರ ಧೇನುವೆ
ಗುರುವೆ ಮುಕ್ತಿಯ ಮಣಿಯ ಕೊಡುವ ಚಿಂತಾಮಣಿಯೆ
ಗುರುವೆ [16]ಯು[16]ಕ್ತಿಯ ಸಾಣೆ[17]ವಿಡಿದ[17] ಪರುಷದ ಕಣಿಯೆ
ಗುರುವೆ ವಿಶ್ವಾರಾಧ್ಯ [18]ವಿಶ್ವ[18]ತಾನಂದ[19]ವಿತ್ತ[19]ನವರತ ಪೊರೆವುದೆ[20]ನ್ನಂ[20] ೫೪

ಆಚಾರ್ಯ ರೇವಣಾಸಿದ್ಧೇಶ ಮರುಳಸಿ
ದ್ಧಾಚಾರ್ಯ ಪಂಡಿತಾರಾಧ್ಯ ಏಕೋರಾಮ
ಆಚಾರ್ಯ ವಿಶ್ವೇಶ್ವರಾಚಾರ್ಯರೆನಿಪ ಪಂಚಕಕಲಶದಾಚಾರ್ಯರ
ಸ್ವಾಚಾರ್ಯಚಾರಿತ್ರ ಸಕಲ ಶಿವಶರಣರ್ಗೆ
ಗೋಚರಿಸುವಂದದಿಂ ರಚಿಸುವೆಂ ಕೃತಿಯನ
ತ್ಯಾಶ್ಚರ್ಯವಪ್ಪುದಿದು ಗುರುಚರಣಕಂಜವಿಕಸನವಾಗೆ ಹೃದಯದಲ್ಲಿ ೫೫

---

1 ನಾಕೇಶ ಮುಖ್ಯವಂ (ಕಗ) 2 ಶೇ (ಕ) 3 ಸಾ (ಕ) 4 ಭೇ (ಚ) 5 ಕ್ಷಜ ಖಂಡಲ (ಚ) 6 ಡಲ್ಯ (ಚ) 7 ಡಿತ (ಚ) 8 ದಂ (ಗಚ) 9 ಅಂ (ಕ) 10 ಲ (ಗ) 11 ವೈನತೇಯ (ಗ) ಶಾನಿಮ್ಮ (ಚ) 12 ಗಾಂಡತೆಯಃ 13 ಗುರುವೆ ಪರಮೇಶ್ವರ (ಚ) 14 ನಿರವಯವೆ (ಚ) 15 ದಿ (ಚ) 16 ಮು (ಚ) 17 ಭಕ್ತಿ (ಚ) 18 ಶಾಶ್ವ (ಚ) 19 ಎಂದ (ಕ) 20 ಮ್ಮಂ (ಚ)

ಮಂಗಳಾತ್ಮಕಗುರುಗಳಮಳಚಾರಿತ್ರ ಮು
ಕ್ತ್ಯಂಗನಾ ಪ್ರಾಣಪಂಚಕವೆ ಪಂಚಾಚಾರ್ಯ
ರಿಂಗಿತದ ಲಿಂಗಾಂಗಸಂಗ ಸಮರಸಸುಧಾರಸವೆ ಚೈತನ್ಯವಾಗೆ
ಪಿಂಗದ ಶಿವಜ್ಞಾನ ಸಕಲಭೂಷಣಗಳಿಂ
ತುಂಗನವಭಕ್ತಿ ನವರಸದಲಂಕಾರದಿಂ
ಕಂಗೊಳಿಪ ಪೊಸವೆಣ್ಣ ಭಕ್ತಿಯಿಂದೊಲಿಸುವನೆ ಶರಣಾಗ್ರಗಣ್ಯಪು[1]ಣ್ಯಂ[1] ೫೭

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತಯೋ[2]ಕ[2]ರಾಮಾದ್ಯರ
ಸದಮಲ ಸಚ್ಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರ್ಗಿಷ್ಟಾರ್ಥವಹುದು ಸತ್ಯಂ ೫೭

*ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದ ಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರ ಮಂಜುಳ ಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗ ಪದಪದ್ಮಷಟ್ಪದೋ
ದಿತ ರೂಪರಹ ಚತುರ್ಗುರುಚರಿತದೊಳ್ ಪ್ರಥಮ
ದತಿ ನೂತ್ನವಹ ಕಾಂಡದೊಳ್ ನೋಡಲೊಂದನೆಯ ಸಂಧಿ ಸಂಪೂರ್ಣವಾಯ್ತು ೫೮

---

1 ಣ್ಯ (ಕಗ) 2 ಕೊ (ಚ)

*ಚ ಪ್ರತಿಯಲ್ಲಿ ೫೮ ನೆಯ ಪದ್ಯವಿಲ್ಲ

# ಎರಡನೆಯ ಸಂಧಿ

ಸೂಚನೆ :

*[1]ಮುಂದೆ ಕಾ[1]ರಣಮಹಾಕೈಲಾಸವರ್ಣನೆಯ
[2]ಸೌಂದರದ[2] ಮಂಟ[3]ಪದ[3] ಸಿಂಹಪೀಠದ ರಚನೆ
ಸಂದ [4]ಗಣ[4]ದೊಲವ ಚತುರಾಚಾರ್ಯರಂ ಕಳುಹುವಂದಮಂ ಪೇಳ್ವೆ [5]ಮುದದಿಂ[5]

[6]ಅಂಬಾ[6]ಮುಖೇಂದುರುಚಿ ಲೀಲಾಚಕೋರತಾ
ದ್ಬಿಂಬಾಧರಾ ಮಧುರ ಸಹಕಾರಫಲ ಕೀರ
ಕಂಬುಕಂಠೀಕೇಶ ಕಬ[7]ರೀಸು[7]ಮೌಘಲಂಪಟ ಮತ್ತಭೃಂಗರಾಜ
ಅಂ[8]ಬಾ[8] ಮಹಾನೀಲಕೈರವ ಹಿಮಾಂಶುಧರ
ಕುಂಭಸ್ತನೀ ಪಾರ್ವತೀ ಕುಚಾಲಿಪ್ತ ಕೌ
ಸುಂಭ ಪಂಕಾಂಕಿತ ಮಹೋರಃಕವಾಟ ಜಯ ಜಯ [9]ಪಾಹಿ[9] ಗೌರೀಧವ ೧

ನೊಸಲ ಕ[10]ಣ್ಣಿಂ ಮಕುಟದಿಂ ಖಗತಿ ಪಾದುಕೆಯಿ
ನೆಸವ[10] ಸಿದ್ಧೇಂದ್ರಯತಿ ಕೈಲಾಸಕನವರತ
ಒಸೆದು ಪೋಪಿರಿಯಲ್ಲಿ ಬಸವಣ್ಣನಿರ್ದಪನೆಯೆಂದು ಭಕ್ತಾಳಿ ಕೇಳೆ
ಶಶಿಧ[11]ರಗೆ ಮಂ[11]ದಿಸುತ್ತೀ ವಾರ್ತೆಯಂ ಪೇಳ
ಲಸಮು ತನ್ನಂತರಾಸ್ಥಾನದೊಳ್ ರಾಜಿಸುವ
ಬಸವನಂ ತೋರೆ ತಾನಿತ್ತ ತೋರಿಸಿ ಮೆರೆದ ಶಿವಸಿದ್ಧರಾಮಂ ಸಲಹಂ ೨

ವರ ಪರ್ವತಾರ್ಯಂಗೆ ಶಿವಲೋಕ ವರ್ಣನೆಯ
ನಿರವಿಸುತ್ತಿರ್ದನಾಚಾರ್ಯ ಚಕ್ರೇಶ್ವರಂ
ನಿರುತ ಶ್ರೀಮನ್ಮಹಾಕೈಲಾಸ ಶಿವೆಯ ವಲ್ಲಭನ ಸುವಿಲಾಸವಾಸ
ಹರಿಸುರಜ್ಯೇಷ್ಠ ಸಂಕ್ರಂದನಾದ್ಯಮರರ್ಗೆ
ಪೊರೆಯಲ್ಕಗೋಚರ[12]ಮಭೇದ್ಯಮಂ[12]ಗಣಿತತರ್ಕ್ಯ
ಮರಿದು ಪೇಳ್ವೊಡೆ ಚಿನ್ಮಯ ಪ್ರಮಥಶೈ[13]ಲೇ[13]ಯ ಮುಖ್ಯ ಶರಣರ್ ಬಲ್ಲರು ೩

---

1 ಕಾ (ಗ) 2 ಸುವಿಸ್ತಾರ (ಗ) 3 ಪ (ಗ) 4 ವೀರಗಣ (ಗ) 5 ನೊಲವಿಂ (ಚ) 6 ಅಂಬಿಕ(ಚ)
7 ರಿಕುಸು (ಚ) 8 ಬಕ (ಚ) 9 ದೇವ(ಗ) 10 ಣ್ಣಸಮ ಮುಕುಟಂಗಮನವಾವುಗೆಯುಳ್ಳ ಸಮ(ಚ)
11 ರಂಗೊಂ (ಚ) 12 ರಾಭೇದ್ಯವ (ಚ) 13 ತ್ರೀ (ಕಗ)
*ಕೈಲಾಸವರ್ಣನೆ (ಚ)

ಆ ಮಹಾಕೈಲಾಸದ್ರುಹಿಣಾಂಡ [1]ಬಾಹ್ಯವಹ[1]
ಸೀಮೆಯೊಳಗೂರ್ಧ್ವಪ್ರದೇಶದೊಳ್ ನೆಲೆಗೊಂಡು
ರಾಮಣೀಯಕಮೆನಿಸಿ ಪದಿನಾಲ್ಕುಭುವನ[2]ಮೆಂತೆಂಬ ಸುಮ[2]ಕುಟ್ಮಲಕ್ಕೆ
ಹೇಮದ ಲತೆಯೊಲಿರ್ಪವಕೆ ಧಾತುಮೂಲವದು
ತಾಮರಸಕಂದದಂತಿರ್ಪ ಶಾಂಭವಲೋಕ
ನಾಮಮಾತ್ರವ ಕೇಳಿ ಸ್ಮರಿಸೆ ಪಾಪಕ್ಷಯ[3]ವ ಮಾಳ್ಪುದಿದು[3] ಸತ್ಯ ಸತ್ಯಂ ೪

ವೇದಕ್ಕ[4]ವೇ[4]ದ್ಯವಹ ಕಾರಣ ಸುಕೈಲಾಸ
ನಾದ ಬಿಂದು ಕಳಾನಿಯುಕ್ತ ಜ್ಯೋತಿಪ್ರಣವ
ಸಾದರ[5]ವದೀ[5]ದು ಭಾಸ್ಕರ ದ[6]ಮು[6]ನ ಕೋಟಿ ಕೋಟಿ ಪ್ರಭೆಗಳಂ ಪಳಿವುತ
ಮೋದದಿಂದೋಂಕಾರಮೇ ಮಹಾರೂಪದಳೆ
ದಾ[7]ದುದೋ ಎಂದೆನಲ್ಕತಿ[7]ರಮ್ಯವತಿಚೋದ್ಯ
ಮಾದ ಮಂಗಳನಿಳಯ ಮುಕ್ತ್ಯಂಗನೆಯ ಸೆಜ್ಜೆವನೆಯಂತೆ ರಂಜಿಸಿ[8]ದು[8]ದು ೫

ಎಸೆವ ಚಿಂತಾರತ್ನಮಯ ಮಹಾಶೃಂಗ[9]ದಿಂ
ಲಸಿತ ವೈಡೂರ್ಯಮಯವಾಗಿರುವ[9] ಗಿರಿಗಳಿಂ
ಮಿಸುಪ [10]ನೀಲಗಳಾದ[10] ಗುಡಶೈಲಗಳ [11]ಮರಕತವಾದ[11] ಮೊರಡಿಯಿಂದ
ಹಸನಾದ ಬಜ್ಜರದ ಕಂದರದಿ ಥಳಿಸುವ
ಸಸಿಗಲ್ಗಳಿಂ[12]ಗೈದ[12] ಗುಹೆ ಮಾಡ ಬೀಡುಗಳ
ರಸಮಯದುಪತ್ಯಕಾ ಪುಷ್ಯರಾಗಾದಿತ್ಯ[13]ಕಾಚ[13]ಕೈಲಾಸಮೆಸೆಗುಂ ೬

ಪ್ರಣವಮಯ ಬೋಧಾಮೃತಮೆಯೊಸರ್ದು ಪರಿವಂತೆ
ಪ್ರಣಯಿಸಲ್ಕೆಲ್ಲಿಲ್ಲಿ ಸ್ರೋತಸ್ವಿನೀನಿಕರ
ತ್ರಿಣಯನ ಧ್ಯಾನಾಮೃ[14]ತವೆ ಪರಿದು ನಿಮ್ನಭಾಗದಿ[14] ನಿಂದ ಮಾಳ್ಕೆಯಿಂದ
[15]ಅ[15]ಣಿಯರದೆ ಚಂದ್ರಕಾಂತದ ಡೊಣೆಗಳಲ್ಲಿ ತ
ಣ್ಣನೆ ತೀವಿ ಜಲಮಮೃತಕಾಸಾರಗಳ ತುಂಬಿ
[16]ಗಣನೆಯೆಂ ಮೀರಲ್ಕಗಣಿತ ವಾಪಿ[16]ಗಳಿಂದ ರಾಜಿಪುದು ಕೈಲಾಸವು ೭

---

1 ಪೊರವಳಯ (ಚ) 2 ಬ್ರಹ್ಮಾಂಡ ತಿ (ಚ) 3 ಮಹಾಮುಕ್ತಿ (ಚ) 4 ಭೇ (ಚ) 5 ದೊಳಿಂ(ಚ) 6 ಹ (ಕಗ) 7 ದರದಿ ನಿಂದುದೋವತಿ (ಚ) 8 ಹು (ಚ) 9 ಗಳ್ ವಿಸರ ಬಜ್ಜರ ಪಿರಿಯ ಅರೆಗಳಿಂ (ಚ) 10 ರನ್ನದ ಸ್ಥೂಲ (ಚ) 11ವೈಡೂರ್ಯಗಳ (ಚ) 12 ಸವೆದ(ಚ) 13 ಕ್ಯಕ್ಕದೆ (ಚ) 14 ತಂ ನಿರ್ಮಲಾಂತರಂಗದೆ (ಚ) 15 ಲ (ಚ) 16 ಗಣಿದಿಸಲ್ಕಗಣಿತ ಸರೋವರ (ಚ)

ಕನಕ ಪಂಕಜ ಸರಸ ಸಂಕು[1]ಲಾಳಿಗಳಿಂದ[1]
ವಿನುತ ಕಲ್ಹಾರವಿಂಹ ಕೊಳಗಳಿಂ ಗಿಳಿಗಳಿಂ
ದನುಪಮದ ಕನ್ನೈದಿಲಿರ್ಪ ಹ್ರಾದಿನೀಹ್ರದಗಳವಂಳ ಕಲ್ಲೋಲದಿಂದ
ಘನತರ ವಿಲಾಸ ಹಂಸಾವಳಿಯ ಪೊಳೆಗಳಿಂ
ದನವರತಮೆಲ್ಲೆಲ್ಲಿ ಮರುಜವಣೆ [2]ಪುಲ್ಗಳಿಂ[2]
ಮಿನುಗುವತಿ ಶ್ರೀಮಹಾಕೈಲಾಸ ಶಿವಗಣಂ ಕಣ್ಗೆ ರಂಜಿಸಿ ತೋರ್ಪುದು ೮

ಎಲ್ಲೆಲ್ಲಿಯುಂ ನೋಡೆ ಪರುಷಮಯ ಕಣೆಗಳಿಂ
ದೆಲ್ಲೆಲ್ಲಿಯುಂ ನೋಡೆ ಸಿದ್ಧರಸ ಡೊಣೆಗಳಿಂ
ದೆಲ್ಲೆಲ್ಲಿಯುಂ ನೋಡೆ ಪರಮಾಮೃತಂ ತುಂಬಿ ಚರಿಪ ಕೆರೆ ಕಾಲುವೆಗಳಿಂ
ಎಲ್ಲೆಲ್ಲಿಯುಂ ನೋಡೆ ನಂದ್ಯಾದಿ ಧೇನು[3]ವಿಂ
ದೆ[3]ಲ್ಲೆಲ್ಲಿಯುಂ ನೋಡೆ ರಾಜಹಂಸಾಳಿ[4]ಯಿಂ
ದೆ[4]ಲ್ಲೆಲ್ಲಿ[5]ಯುಂ[5] ಮಂಗಳಂ ಮನೋಹರಮಾಗಿ ರಾಜಿಪುದು ಮುಕ್ತಿವಾಸ ೯

ಅತಿವಿಚಿತ್ರ[6]ಕ[6]ಮಾದ ಶ್ರೀಮಹಾ ಶಿವಲೋಕ
ವತಿಪ್ರಮಾ[7]ಣಂ ಉ[7]ಪನಿಷತ್ತುಗಳ ಮೂರ್ತಿಯದು
ಸತತ ಮೂವತ್ತೆರಳ್ಕೋಟಿಯೋಜನದುದ್ದಮದರಗಲವೆಂದರಿವುದು
ನುತಿವೆತ್ತನಂತಜ್ಯೋತಿರ್ಮಯದ ಶಾ[8]ಲೆಯಿಂ[8]
ದತಿರಮ್ಯ[9]ಮಾಗೊಪ್ಪುವಷ್ಟ[9]ದ್ವಾರಗಳಲ್ಲಿ
ಮಂತಿವಂತ ಜಯಶೀಲರಷ್ಟಭೈರವರಿರ್ಪರವರ ಲಕ್ಷಣಮೆಂತೆನೆ ೧೦

ರಕ್ತವರ್ಣದ ದೀರ್ಘದೇಹದಂಬಕತ್ರಯ[10]ದ
ವ್ಯ[10]ಕ್ತ ದಂ[11]ಡ[11] ಕಮಂಡ[12]ಲವು[12] ಪಾಶ ಜಪಮಾಲೆ
[13]ಮತ್ತೆ ಪಾಣಿಚತುಷ್ಟಯದಿ ಮೆರೆಯೆ[13] ಹಂಸವಾಹನ ತ್ರಿಪುಂಡ್ರ[14]ದ ಸುಮಕುಟದ[14]
ಶಕ್ತಿ [15]ಬ್ರಾಹ್ಮಿಯು ಸಹಿತ[15] ಸಕಲಸಂಪದ[16]ದಿಂದ[16]
ಬಿತ್ತರದ ತನಗೆ ಸರಿಯೊದ ಭಟರೇಳ್ಕೋಟಿ
ರಕ್ತಿಯಿಂ ಕೂ[17]ಡಿರೆ[17] ಮಹಾಭೈರವಂ ಪೂರ್ವದ್ವಾರದೊಳ್ ರಾಜಿಸಂತಿಹಂ ೧೧

---

1 ಲದಿಮಳಿಕುಳಂ (ಚ) 2 ತೃಣದಿಂದ (ಚ) 3 ಗಳು।ಮೆ (ಚ) 4 ಲತೆ।ಯೆ (ಚ) 5 ಯುತಿ (ಕ) 6 ಮು (ಚ) 7 ಣಮು (ಗಚ) 8 ಲದಿಂ (ಚ) 9 ದೊಳಷ್ಟಕಾಷ್ಟ (ಚ) 10 ದೊ।ಳು (ಚ) 11 ಡಂ (ಚ) 12 ಲು (ಚ) 13 ವ್ಯಕ್ತದಿಂ ಕರಚತುಷ್ಟಯ ಚತುರ್ಭುಜ (ಚ) 14 ಮಕುಟಂ (ಚ) 15 ನಿಜ ಬ್ರಾಹ್ಮಿ ಸಹಿತಂ (ಚ) 16 ದೆ (ಚ) 17 ಡುತ (ಚ)

ಹೇಮಾಂಗ ನೇತ್ರತ್ರಯಂಗಳಿಂ [1]ನಾಲ್ಗೈಯ್ಯೊ[1]
ಳಾ ಮಹಾಶೂಲಾಯುಧವು ಖಡ್ಗ ಖಟ್ವಾಂಗ
[2]ಡಾಮರುಗದಿಂದೆ ರಾಜಿಸುತ ಮಾಹೇಶ್ವರೀಶಕ್ತಿಯ[2] ಸಮೇತನಾಗಿ
ನೇಮದಿ ಜಟಾಭಸ್ಮದಿಂ ಛಾಗವಾಹನದಿ
ಧೀಮಂತ[3]ರಾದ ನಿಜಸಾಮ್ಯ[3] ಭುಜಬಲಯುತರ್
ಭೀಮ[4]ರಹ ಪದಿನೆಂಟುಕೋಟಿಯಿಂ ವಹ್ನಿ[4]ದ್ವಾರದೊಳು ರುರುಭೈರವನಿಹಂ ೧೨

ದಕ್ಷಿಣದ್ವಾರದೊಳ್ [5]ವೈಡೂರ್ಯ[5]ವರ್ಣಾಂಗ
ನಕ್ಷತ್ರಯಂ ಚತುರ್ಭುಜಶೂಲ ಶುಕವಜ್ರ
ಲಕ್ಷಿ[6]ತ ಸುಶಕ್ತಿಯಿಂ ರಾಜಿಸುತ ಕೌಮಾರಿಶಕ್ತಿಯಿಂದಲ್ಲಿ ಮೆರೆದು[6]
ಈಕ್ಷಿಸಲ್ ಕೇಕಿವಾಹನದಿಂದ [7]ಸ್ವಸಮಾನ
ಪಕ್ಷರಾಗೆಸೆವ ದಶಕೋಟಿಗಣದಿಂದ ರು
ದ್ರಾಕ್ಷಕೋಟೀರ ಕಂಕಣಹಾರನಾಗಿರುವ[7] ಚಂಡಭೈರವ ಶೋಭಿಪಂ ೧೩

ಕ್ರೋಡಭೈರವನು [8]ಕೋ[8]ಣಪದ್ವಾರದೊಳ್ ತಾನು
ನೋಡಲಾ ಕನಕಮಯ ದೇಹದಿಂ ದ[9]ಶದಿಕ್ಕಿ
ಗಾ[9]ಡಂಬರದ ಗದಾ ಶಾರ್ಙ್ಗ[10]ಚ ಶಂಖ[10] ಚಕ್ರಗಳಾಂತ ಕರ [11]ನಾಲ್ಕರಿಂ[11]
ಕೂಡೆ ನಯನತ್ರಯನು ನಾರಾಯಣೀ[12]ಯುತಂ[12]
ರೂಢಿಯಹ ಗರುಡವಾಹನ ಭಸ್ಮಮಕುಟ[13]ದಿಂ[13]
ಗಾಢ ಭಟ ಪಂಚಕೋಟಿ ಯೋಗಿಣಿಯರ್ಗಳೋಲೈಸಲನವರತ ಕಾಯ್ವಂ ೧೪

ನೀಲ[14]ದೇಹಂ ತ್ರಿಣೇತ್ರಂ[14] ಚತುರ್ಭುಜ ಶಂಖ
ಸ್ಥೂಲ ಮುಸ[15]ಲಾವೋಘ ಫ[15]ಲಕ ಖೇಟಕ[16]ಯುತಂ
ಕಾಲದಂಡಂ[16] ಮಹಿಷವಾಹನಂ ವಾರಾಹಿಶಕ್ತಿ ನಿಜರೂಪರಾದ
ಮೂಲಭಟರಾರ್ಕೋಟಿ ಪಶ್ಚಿಮದ್ವಾರದೊಳ್
ವೋಲೈಸಲುನ್ಮತ್ತಭೈರವಂ ವೀರರಸ
ಲೋಲನಾಗುತ್ತ ಸಿತಗಳ ಭಸಿತರುದ್ರಾಕ್ಷಧಾರಣ ಜಟಾಮಕುಟದಿಂ ೧೫

---

1 ಚತುರ್ಭುಜದೊ (ಚ) 2 ಪ್ರೇಮದಿಂ ಧ್ವಾಂತಮಳ ಕರ ಚತುರ್ವಿಧದೆ ಮಾಹೇಶ್ವರೀ (ಚ) 3 ತನಗೆ ಸರಿಯಾದ (ಚ) 4 ಮಟವಿಪ್ಪನೆಣ್ಕೋಟಿ ಸಹಿತಗ್ನಿ (ಚ) 5 ಲೋಲಾಕ್ಷಿ (ಚ) 6 ತಂ ಶಕ್ತಿಧರಕರ ನಾಲ್ಕರಿಂದ ಕಾಮಾರಿ ಮಹಾಧೈರ್ಯದಿಂ (ಚ) 7 ಮೆರವುತ ದ್ಯಕ್ಷತ್ವತನಗೆ ಸರಿಯಹ ಭದ್ರುಶ ಕೋಟಿ ಯಕ್ಷಮಣಿಭಸಿತ ಕೋಟೀರ ಭುಜಬಲದಿಂದ (ಚ) 8 ಕೌ (ಚ) 9 ಭುಜನಾ।ಲ್ಕಾ (ಚ) 10 ಶಂ (ಚ) 11 ಚತುಷ್ಟಯದಿಂದಲು (ಚ) 12 ಸಹಂ (ಚ) 13 ಧರ (ಚ) 14 ಮಯದೇಹ ತ್ರೈನೇತ್ರ (ಚ) 15 ಲಂ ಫ (ಚ) 16 ವಿಡಿದಿಹ ನಾಲ್ಕು।ನೀಳಕೈಗಳ್ (ಚ)

ಗಂಧ[1]ವಹ ವಿವರದಿ ಕಪಾಲ ಭೈರವನಿರ್ಪ[1]
ನಿಂದವನ ದೇಹರುಚಿ ಮಾಣಿಕ್ಯವರ್ಣಮಯ
ಸಿಂ[2]ಧುರವ[2] ವಾಹನ ಮಹೇಂದ್ರಿಯೇ ಶಕ್ತಿ [3]ಕರದಲಿ[3] ವಜ್ರಕೋದಂಡಮಂ
ಸಂದ ಶರಶಕ್ತಿಗಳ [4]ಧರಿಸಿ ನೇತ್ರತ್ರಯದೊ[4]
ಳೊಂದಿ [5]ತನ್ನಂ ಪೋಲ್ಕೆಯತಿ[5]ಭಟರ್ ಮೂರ್ಕೋಟಿ
ಸಂದಣಿಸಿ [6]ರೌದ್ರ[6]ರಸ ಮಕುಟ ತ್ರಿಪುಂಡ್ರಧರನಾಗಿ ಓಲಗಗೊಟ್ಟಿಹಂ ೧೬

ಅಂಬಕತ್ರಯ[7]ಯುತಂ ಧೂಮವರ್ಣಂ ಚಾರು [7]
ಬಿಂಬ ಘಂಟಾಶೂಲ ಡಮರು ಕಾಪಾಲ[8]ಗಣ[8]
ಲಂ[9]ಬ[9]ಕರ [10]ಸುಚತುರ್ವಿಧಂ ತನ್ನ[10] ಪನ್ನೆರಡು ಕೋಟಿ ಭಟರೊಗ್ಗಿ[11]ನಿಂದ[11]
ಇಂಬಾ[12]ಗಿ ಕಾಯುತಿರೆ ಕಾಕವಾಹನನಾಗಿ[12]
ತ್ರ್ಯಂಬಕಾಪ್ತನ ದೆಸೆಯ ದ್ವಾರದಿ ಜಟಾಮಕುಟ
[13]ದಿಂ ಬಲದ ಚಾಮುಂಡಿ ಶಕ್ತಿಯಿಂದಲ್ಲಿ[13] ಭೀಷಣಭೈರವಂ ಕಾಯ್ವನು ೧೭

ಉಂದು[14]ರಂವೆ ತೇರು ಹೇಮಾಂಗ ಭೀಷಣದಿನತಿ
ಬಂಧುರಾಕ್ಷಿತ್ರಯ ಚತುರ್ಭುಜ[14] ಫಲಕ ಖೇಟ
ನಂದ[15]ಕ ಸು[15]ಕೌಮೋದಕೀ ಕ[16]ರವಿರಾಜಿತಂ ಮಾಕಾಳಿಯೊಡನೆ ಕೂಡಿ[16]
ಮಂದ[17]ಹಾಸದಿ[17] ತನಗೆ ಸರಿ[18]ಯಾದ ಭಟವರ್ಗ[18]
ಕುಂದದೇಳ್ಕೋಟಿಯಿಂ ಸಂಹಾರಭೈರವಂ
ನಿಂದು ಈಶಾ[19]ನ ದೇಶದ್ವಾರದೊಳಗೆ[19] ಓಲೈಸುವಂ [20]ರತ್ನಮಕುಟಂ[20] ೧೮

ಶ್ರೀಮಹಾ ಸಾಂಬಶಿವನಾಣತಿಯೊಳೆಣ್ದೆಸೆಯ
ಸೀಮೆಯೊಳಗತಿರಮ್ಯಮಾದಷ್ಟದ್ವಾರದೊಳ್
ಪ್ರೇಮದಿಂ ಕಾಯ್ದಿರ್ಪರಷ್ಟವಿಧಭೈರವರು ತಮ್ಮ ನಾಮಸ್ಮರಣ[21]ರಂ[21]
[22]ಭೀಮ ವಿಘ್ನಂಗಳ ನಿವಾರಿಸುತ್ತಂ ಶುಭ[22]
ಶ್ರೀಮಹಾಸಂಪದವನಿತ್ತು ಪೊರೆವರ್ ಬಿಡದೆ
ಕಾಮಹರನವತಾರರಾದ ಭೈರವರಿರವ ನಿರವಿಸಿದ ಗುರುನಾಥನು ೧೯

---

1 ವಾಹನ ದೆಸೆಯ ದ್ವಾರದೊಳ್ ಕಾಪಾಲಿ (ಚ) 2 ಧೂರ (ಚ) 3 ಚತುರ್ಭುಜ (ಚ) 4 ಧರಕರ ಚತುರ್ಯುಗದೊ (ಚ) 5 ದೃಕ್‌ತ್ರಯ ಪೊಳೆಯಲಸಮ(ಚ) 6 ಕ್ರೋಧ (ಕ) 7 ಧೂಮವರ್ಣಾಂಗ ಭುಜನಾಲ್ಕು (ಚ) 8 ಯುತ (ಚ) 9 ಬಿ (ಕಗ) 10 ಚತುರ್ವಿಧ ಚಾಮುಂಡಿ ಸಹಿತ (ಚ) 11 ನಿಂ (ಚ) 12 ದ ಧ್ವಾಂಕ್ಷವಾಹನ ಭಯಂಕರ ರಸದೆ (ಚ) 13 ಲಂಬಿತಾಕ್ಷಮಾಲೆ ಭಸ್ಮ ಧಾರಣದೆ (ಚ) 14 ರಾಸನ ಹಿರಣ್ಯಾಂಗ ಪ್ರಚಂಡನಹ। ಬಂಧುರಕ್ಷಯ ಚತುರ್ಭುಜಂ (ಚ) 15 ಕಂ (ಚ) 16 ರಾನ್ವಿತ ಮಹಾಕಾಳಿ ಸಹ ಸಂಪದದೊಳು (ಚ) 17 ಹಸನದೆ (ಚ) 18 ಸಹ ಭಟರ್ ನಾಡೆ (ಚ) 19 ನ್ಯದ್ವಾರದೊಳು(ಚ) 20 ಮಕುಟ ತ್ರಿಪುಂಡ್ರದಿಂದ (ಚ) 21 ದಿಂ (ಚ) 22 ಸ್ತೋಮಾಘವಿಘ್ನಂಗಳಂ ನಿವಾರಿಸುತಖಿಳ (ಚ)

ಇಂತೊಪ್ಪುವಷ್ಟದ್ವಾರಗಳ ದಾಂಟುತ ಮುಂದೆ
ಸಂತಸದೆ ವೊಳಪೊಗಲ್ ಕಣ್ಗೆ ಮಂಗಳವಾಗೆ
ಮುಂತೆ ಮನಸಿಗೆ ಮನೋಹರಮೆನಿಸಿ ವಚನರಚನೆಗೆ ನವೀನಮುಮೆನಿಸುತ
ಸಂತತಂ ಯುಕ್ತಿಗಗಣಿತ ಮತಿಗಗೋಚರಂ
ಕಂತುಮರ್ದನನ ಶ್ರೀಕೈಲಾಸವರ್ಣನ ಸ
ಮಂತು ಮಯ ಮಾಂಡವ್ಯ ವಿಶ್ವಕರ್ಮಾದಿ ಶಿಲ್ಪಿಗಳ [1]ಮಾಳ್ಕೆಯಂ[1] ಪಳಿವುತ ೨೦

ನಾಲ್ಮೊಗಂಗಳವಲ್ಲ ವಚಿಸುವಡೆ ಸದ್ಮಗಳ
ಸಾಲ್ಗೊಂಡು ಸೋಮಸೂರ್ಯರ ವೀಥಿ ಸಾಹಸ್ರ
[2]ದೊಳ್ಮೆಯಿಂದವರ[2] ಮಧ್ಯದೊಳಪರಿಮಿತ [3]ವೀಥಿ ವೀಥಿಗಳ ರಚನೆಯಿಂದ[3]
[4]ಚೆಲ್ವಾದ[4] ಕಸ್ತುರಿಯ ಸಾರಣೆಗಳಿಂದೆಸೆವ
[5]ನಲ್ಮೆಯಿಂ[5] ಕುಂಕುಮದ ಕಾರಣೆಯ ಸೊಬಗುಗಳ
ಸೋಲ್ವೆಣ್ಣ ಸಿರಿ ಶಚಿಯರಿಡುವ ಮುತ್ತಿನ ರಂಗದಲ್ಲಿಯಿಂ ಕಂಗೊಳಿಪುದು ೨೧

ಕನಕತೋರಣ ರತ್ನತೋರಣಂಗಳ್ ಸಾರ
ಘನತರ ಮುಕುರತೋರಣಂ ಮಕರತೋರಣಂ
ವಿನುತ ಗುಡಿತೋರಣಂಗಳ ರತ್ನಮೌಕ್ತಿಕದ [6]ಕಂತುಕದ ಗುಚ್ಛದಿಂದ[6]
ತನಿಗಂಪನೀವ[7]ಖಿ[7]ಳ ಕುಸುಮವೃಷ್ಟಿಗಳಿಂದ
ಲನುಪಮದ ಧೂಪ ಧೂಮಗಳಿಂದ ಮಘಮಘಿಸು
ತನವರತ ವೀಥಿ ವೀಥಿಗಳಲ್ಲಿ ಗಗನದೊಳ್ ಮೆರೆವ ನಂದೀಧ್ವಜಗಳಿಂ ೨೨

ಹರಹರ ಮಹಾಲಿಂಗ ಪ್ರಾಣಿಗಳ ಗೃಹಗಳಿಂ
[8]ದರರ[8] ಲಿಂಗಪ್ರಾಣ ಪ್ರಾಣಲಿಂಗಂಗಳಿಂ
ಬೆರಡಳಿದು ಪುಷ್ಪಗಂಧದ ಮಾಳ್ಕೆಯಿಂದಿರುವ [9]ನೀತಲಿಂಗಗಳಿಂದವು[9]
ಸುರುಚಿರಾಮಳ ಸದಾನಂದ ಪ್ರಸಾದದೊಳ್
ಬೆರೆ[10]ದು ಪ್ರಸಾದ ಮುಕ್ತರುಗಳೆ[10]ನಿಸುವ ತ್ರಿವಿಧ
ನಿರವಧಿಕ ಮುಕ್ತಿಸಂಪನ್ನ[11]ರಿಂ[11] ಕೈಲಾಸ[12]ಮೊಪ್ಪಿಹುದು ಸದ್ವಿ[12]ಳಾಸಂ ೨೩

———

1 ಕಲ್ಪನೆ (ಚ) 2 ಮೇಲ್ಪದರ (ಚ) 3 ದುಪವೀಥಿ ನಿಕರ ರಚನೆಗಳಿಂದಲು (ಚ) 4 ಪೋಲ್ಪ ಮಳ (ಚ) 5 ಚೆಲ್ವಾದ (ಚ) 6 ಗುಚ್ಛ ಕಂತುಗಳಿಂದ (ಚ) 7 ಮ (ಚ) 8 ದಿರದೆ (ಚ) 9 ಪ್ರಾಣಲಿಂಗಿಗಳಿಂದಲು (ಚ) 10 ದಿರ್ಪ ಪ್ರಸಾದ ಮುಕ್ತರೆ (ಚ) 11 ರೀ (ಕಗ) 12 ಮುಕ್ತಿಕಾಂತಾವಿ (ಚ)

ಅಚ್ಚಪ್ರಸಾದಿಗಳಭೇದ್ಯಬಜ್ಜರ [1]ಮಠದಿ
ನಿ[1]ಚ್ಚ ಪ್ರಸಾದಿಗಳ ಮುಕ್ತಿ ಮೌಕ್ತಿಕಗೃಹದಿ
ಬೆಚ್ಚಭರಿತಾರ್ಪಣರ ನಿರ್ಮಳ ಸ್ಫಟಿಕಮಂದಿರಗಳಿಹ ಕೇರಿಯಿಂದ
ಮೆಚ್ಚಿಪ್ಪ ಚೌಷಷ್ಟಿಶೀಲರಿಪ [2]ಮನೆಗಳಿಂ[2]
ಪಚ್ಚೆರನ್ನದ ಮನೆಗಳಗಣಿತಂ [3]ಗಣಿಸಲ್ಕೆ[3]
ಸ್ವಚ್ಛವಹ ಸಾಹಸ್ರವೀಧಿಗಳಿಗೊಳರ್ಪ ಗಣನಾಥರಿಂ ರಂಜಿಕುಂ ೨೪

ಇಂತಖಿಳ ಸುಖಭೋಗ ಪರಿಕರಗಳಿಂ ಬ[4]ಹ[4]ಳ
ಸಂತಸದಿ ತೋರ್ಪ ಧವಳಾರ ಗೋಪುರಗಳಿಂ
ಶಿಂತಿನಿಸಿ ಚೆಲ್ವಾಂತ ಕೈಲಾಸಪುರ[5]ವರದ[5] ಕರ್ಣಿಕಾಮಧ್ಯದಲ್ಲಿ
ಕಂತುಹರ ಶ್ರೀರಾಜಮಂದಿರಂ ಚತುರಸ್ರ
[6]ದಂತಃವಿಪ್ಪತ್ತೈದ[6]ಕೋಟಿ ಯೋಜನವಾಗ
ಲಂತದಕೆ ಚಿತ್ರಜ್ಯೋತಿರ್ಮಯದ [7]ಕೋ[7]ಟೆ ಪೀಯೂಷದಗಳತಿ ಘಾತದಿಂ ೨೫

ಎಸೆವ [8]ವಲಯಾ[8]ಕೃತಿಯ ಕೆಂಬರಲ ತೆನೆಗಳಿಂ
ಪೊಸತಾದ ತಾರಕಾಕೃತಿಯ ಚಿನ್ನದಿ ಮಾಡಿ
ಪಸಮುಬಲದಾಳ್ವೇರಿಯಿಂದ ದಂಡಾಕೃತಿಯ ಇಂದ್ರನೀಲದ ರತ್ನದ
ದೆಸೆದೆಸೆಯ ಕೊತ್ತಳಗಳಿಂದರ್ಧಚಂದ್ರಮಯ
ಮಿಸುಪ ವೈಡೂರ್ಯ[9]ವ[9]ಹ ಮುಗಿಲಟ್ಟಣೆಗಳಿಂದ
ಲೆಸೆದತ್ತು ವೇದ ಪೌರಾಣಾಗಮಗಳ ಶರರಂಧ್ರದಿಂ ಮುಕ್ತಿವಾಸಂ ೨೬

ಆ ಪುರದ ನಾಲ್ದೆಸೆಯ ನಾಲ್ವಂಕದೊಳಗಮಳ
ಶ್ರೀಪರಂಜ್ಯೋತಿಸ್ವರೂಪ ಸಾಕ್ಷಿ[10]ಕನಾದ[10]
ದೀಪಿತನುಮಾಸ್ಕಂದವಿಗ್ರಹನನನುಪಮನನಜಹರಿ ಸುರೇಂದ್ರನತನಂ
ಏಪೊಳ್ತು ನಿಂದು ಕೀರ್ತಿಪ ಪಳಿಯುವಾತುಗರ
ಲೋಪಮಿಲ್ಲದೆ ಚತುರ್ದ್ವಾರದೊಳಗಿಹ ಗಣರ್
ಏಪರಿಯೆನಲ್ ಪೇಳ್ವೆ ಶರಣಜನರಾನಂದಶರನಿಧಿಯೊಳಾಳುವಂತೆ ೨೭

---

1 ದಮರ|ದಿ (ಗ) 2 ಮಹಾಜ್ಞಾನ (ಚ) 3 ಗಣಿದಿಸಲ್ (ಚ) 4 ಹು (ಚ) 5 ವದರ (ಚ)
6 ದಿಂದಂತು ವಿಂಶತಿ (ಚ) 7 ಕೋಂ (ಚ) 8 ಕುಂಡಲಾ (ಚ) 9 ಮ (ಚ) 10 ಜ್ಯೋತಿ (ಚ)

ಎಸೆವ ಪೂರ್ವದ ದೆಸೆಯ ದ್ವಾರ ಗೋಪುರಮಯಂ
ಪಸನಾದ ಋಗ್ವೇದವದು ಲಕ್ಷಯೋಜ[1]ನದ
ಶಶಿಕಾಂತಮಯವಾದ ನೆಲೆ ನೆಲೆಯೊಳೊಪ್ಪುತಿಹ[1] ಬಾಗಿಲೊಳ್ ನಂದೀಶ್ವರಂ
ಮಿಂಸುನಿವಣ್ಣದ ಕೋಲನಾಂತು ನಾಲ್ಕರ್ಬುದಂ
ಒಸೆದು ಕೂಷ್ಮಾಂಡಗಣ ನಿಂದು ಕಾಯುತ್ತಿರಲ್
ಸಸಿನೆ ಬ್ರಹ್ಮೇಂದ್ರ ನಾರಾಯಣರ್ ಬಂದು ಸಮಯವ ಪಾರ್ವರಲ್ಲಿ ಬಿಡದೆ ೨೮

ದಕ್ಷಿಣಾಶಾ[2]ದ್ವಾರ ಗೋಪುರಮು ನೋಡೆ ತಾ[2]
ಲಕ್ಷಯೋಜನ ದೀರ್ಘ ವಿಸ್ತಾರಮಾಯತಂ
ಈಕ್ಷಿ[3]ಸೆ ಯಜು[3]ರ್ವೇದ ಮೇಚಕಾಕಾರದಿಂದಿರ್ಪುದಾ ಬಾಗಿಲಲ್ಲಿ
ದಕ್ಷಾಧ್ವರಾಂತಕಾಸಂಖ್ಯಾತ ರೋಮಜಾ
ಧ್ಯಕ್ಷರೊಡಗೂಡಿ ಓಲೈಸುತಿರೆ ನೆರೆ ಪೂರ್ವ
ಪಕ್ಷರಹ ಶುಕ್ರಶಿಷ್ಯರು ಬಂದು ಸಮಯವೇನೆಂದು ಭಯದಿಂಪಲಿಹರು ೨೯

ಪಶ್ಚಿಮದ ದಿಗ್ದ್ವಾರ ಗೋಪುರಮಯಂ ಭುವನ
ಕೆಚ್ಚರಿಯ ಸಾಮವೇದವದು ಧವಳಾಕಾರ
ಪೊಚ್ಚಪೊಸ [4]ಪುಂಡರೀಕದೊಲು[4] ಶತಸಾಹಸ್ರ ಯೋಜನೋನ್ನತ ಬಾಗಿ[5]ಲಿಂ[5]
ಸಚ್ಚಿನ್ಮಯಾಕಾರ ನೀಲಲೋಹಿತನು ತಾಂ
ನಿಶ್ಚಲಗಣಿತರುದ್ರಗಣಸಹಿತ ಕಾಯ್ದಿರಲ್
ಮೆಚ್ಚಿ ಪಾತಾಳಾದಿ ಭುವನಪತಿಗಳು ಕಾಲವಂ ಕಾಯ್ವರಲ್ಲಿ ಬಿಡದೆ ೩೦

ಕಿನ್ನರೇಶನ ದೆಸೆಯ ಬಾಗಿ[6]ಲಾ[6] ಗೋಪುರಂ
ಸನ್ನುತಾಥರ್ವಣಮಯಂ ಕುಂಕುಮಾಭದಿಂ
ದುನ್ನತ ವಿಶಾಲ[7]ಮ[7] ಲಕ್ಷಯೋಜನ[8]ಮದರ ಕಾಯ್ವಂ ಮಹಾಕಾಳನು[8]
ನನ್ನಿಯಿಂದಪರಿಮಿತ ಪ್ರಮಥಗಣರೊಡಗೂಡಿ
ಬಿನ್ನಣದಿ ಓಲೈಸುತಿರೆ ವಶಿಷ್ಠಾ[9]ದಿಗಳ್[9]
ಮನ್ನಣೆಯ ದೇವಲ ದಧೀಚಿ ಮುನಿಗಳ್ ಬಂದು ಸಮಯಮಂ ಕಾಯ್ವರಲ್ಲಿ ೩೧

---

1 ನೋನ್ನತ ವಿಶಾಲದಿನೊಪ್ಪಿ ಶಶಿಕಾಂತವರ್ಣವಹ (ಚ) 2 ಮಹಾದ್ವಾರ ಗೋಪುರಮೆ ತಾಂ (ಚ)
3 ಸಲ್ಕೆಜು (ಚ) 4 ಪೌಂಡ್ರಿಕದಂತೆ (ಚ) 5 ಲಂ (ಚ) 6 ಲದ (ಚ) 7 ದಿಂ (ಚ)
8 ದುದ್ದವಲ್ಲಿ ಮಹಾಕಾಳರುದ್ರಂ (ಚ) 9 ಗಸ್ತ್ಯ (ಚ)

ನೆ[1]ಲವಾಸಿಗೆಯೆ[1] ಪಚ್ಚೆ ಚಂದ್ರಕಾಂತದ ಗೋಡೆ
ಚಲುವ ಬಜ್ಜರಕಂಬ ನೀಲಕಂಕಣಗೆಲಸ
ಪೊಳೆವ ವೈಡೂರ್ಯಬೋದಿಗೆ [2]ರತ್ನಲೋವೆ[2] ಮಿಸುನಿಯ ಮುಚ್ಚಳದ ವಲಗೆಯಿಂ
ಸಲೆ ಪುಷ್ಯರಾಗಮಯ ಚೀರಬಂದಡ್ಡೆಗಳ
ನೆಲೆಯಾದ [3]ಸೊಂಪು[3] ಗೋಮೇಧಿಕದ ಮೌಕ್ತಿಕದ
ಬಲೆ ಸರ್ವತೋಭದ್ರ ಪವಳಸಿಂಗಗಳಿಂದ ಭದ್ರಮಂಟಪಮೆಸೆದುದು ೩೨

ಮಿಸುನಿಯೊಳ್ ನವರತ್ನ ಬೆಸೆದ ಗೋಪುರವದಕೆ
ಪೊಸತಾದ ಮಂದಾರಮಾಲೆಯೆಳವಟ್ಟಿಹುದು
ಹಸನಾಗಿಯದರೊಳತಿ ಕುಂಕುಮ ಜವಾದಿ ಕತ್ತುರಿಯ ಲೇಪನದಿಂದಲು
ಮಿಸುಪ ಮಾಲತಿ ಜಾತಿಪುನ್ನಾಗ ದಂಡೆಗಳ
[4]ವಿಸರದಿಂದಾಲವಟ್ಟಿಗೆ ಚೌರಿಗಳ ರಚಿಸಿ
ಬೆಸಗೈದು[4] ಪುಷ್ಪದತ್ತರ್ ಮಾಳ್ಪ ಪರಿಪರಿಯ ಸಿಂಗರದ ರಯ್ಯ ತೋರ್ಕುಂ ೩೩

ಆ ದಿವ್ಯಸಿಂಹಾಸನದ ಚಿನ್ಮ[5]ಯದ[5] ಕಾಂತಿ
ಶ್ರೀಧರೆಯ ತಾಳ್ದಹಿಯ ದಶಶತಫಣಾಮಣಿಯ
ಭೇದಕಾಂತಿಗಳು ದಿನಪನ ಮುಂದೆ ಖದ್ಯೋತವೆಂತಂತೆ ತೋರ್ಪವಮಮ
ನಾದಮೂರ್ತಿಯ ಸಭಾವಿಸ್ತಾರ ತೇಜ[6]ಕನ
ಕೋದರಾಂ[6]ಡಂಗಳವು ದರ್ಪಣ ಗಜಾಕೃತಿಯೊ
ಳಾದ ಶೋಭೆಯನೀಕ್ಷಿಸಲ್ಕೆ ಸಾಹಸ್ರ ದ್ವಿಸಹಸ್ರ ನೇತ್ರರ್ಗಸಾಧ್ಯಂ ೩೪

ಆ ಸಿಂಹಪೀಠದೆಣ್ದೆಸೆಯ ಪಾದಗಳೆ ತಾ
ನೀಶಾನದೆಸೆಯೊಳೈಶ್ವರ್ಯ ಸಿಂಹಾಕಾರ
ಭಾಸುರಾಗ್ನಿಯ ದಿಕ್ಕಿನಲ್ಲಿ ಸದ್ಧರ್ಮ ವೃಷರೂಪದಿಂ ಪೊತ್ತಿರ್ಪುದು
ಶಾಶ್ವತಜ್ಞಾನ ಶರಭಾಕಾರದಿಂದಲಾ
ಮೋಸವಿಲ್ಲದೆ ನಿರುತಿದೆಸೆಯ ತಾಳ್ದಿರ್ಕನಿಲ
ನಾಸೆಯೊಳ್ ವೈರಾಗ್ಯ ಕುಂಭಿಯಾಕಾರದಿಂ ಪೊತ್ತು ಸಂಭ್ರಮಮೆಸೆವುದು ೩೫

———

1 ಲೆರಾಸಿಗೆಯೆ (ಕಗ) 2 ರತ್ನದ ತೊಲೆ (ಚ) 3 ಲೋವೆ (ಚ) 4 ಎಸೆವ ಪುಷ್ಪಾಪಚಯವಾಲ ಲಾವ ಚ ಚಮರಿ।ವಿಸರದಿಂ (ಚ) 5 ಯಾ (ಚ) 6 ನಳಿ।ನೋದರಾಂ (ಚ)

ಉತ್ತರಂ ದಕ್ಷಿಣಂ ಪೂರ್ವ ಪಶ್ಚಿಮ ಭಾಗ
ಬಿತ್ತರದ[1]ಲೈ[1]ಶ್ವರ್ಯ ವಿಕೃ[2]ತಿ ರೂಪಂ ತಾ[2]ಳಿ
ಪೊತ್ತಿರ್ಕು ವೈರಾಗ್ಯ ಘೋರರೂಪಂ ಧರಿಸಿ ತಾಳ್ದು ರಾಜಿಸುತಿರ್ಪುದು
ಮತ್ತಮಜ್ಞಾನ ವಿಕಟಾಂಗರೂಪವನಾಂತು
ತತ್ತನುವಿನೊಳ್ ತಳೆದುಂದಧಮ ಭೂತಾಕಾರ
ವೆತ್ತು ವಹಿಸಿರ್ಕು ಕ್ರಮದಿಂದಷ್ಟಪಾದದಿಂದೊಪ್ಪಿತ್ತು ಸಿಂಹಾಸನಂ ೩೭

ಎಸೆವ ವಿಷ್ಟರದಂತರಾಳದೊಳ್ ಶೇಷನಾ
ಳಸಮಮಂಗಳ ಕಮಳದಷ್ಟದಳ[3]ದೇಶದಲಿ[3]
ಹಸನಾಗಿಯಣಿಮಾದಿ ಸಿದ್ಧಿಗಳೆ ರಾಜಿಪವು ಕಿಂಜಲ್ಕ ದೇಶವಲ್ಲಿ
ಮಿಸುಪ ಶ್ರೀರುದ್ರೇಶ್ವರರ್ ವಾಮ [4]ಮೊದಲಾದ[4]
ಸಸಿನೆ ಶಕ್ತಿಯರು ಕರ್ಣಿಕೆ[5]ಯಲ್ಲಿ[5] ರವಿಯಗ್ನಿ
ಶಶಿಮಂಡಲವು ಮೋಕ್ಷದೋಂಕಾರ ಸಿಂಹಪೀಠಾಗ್ರದೊಳ[6]ಗೊಪ್ಪುತಿಹುದು[6] ೩೭

ಅಕಳಂಕನಪ್ರತರ್ಕ್ಯನು ಸಕಳ ದೇವತಾ
ನಿ[7]ಕರ[7] ತುಂತುರುಗಳ್ಗೆ ನೀರಾ[8]ಕರಂ ನಿತ್ಯ[8]
ಮುಕುತಿವಲ್ಲಭಜ್ಞಾನ ಸತ್ಯಸಂಕಲ್ಪಾದಿ ಗುಣಮಣಿ ಸಮುದ್ರನಾದ
ಸುಕರವಹ ಸ್ಮರಣಮಾತ್ರದೊಳಖಿಳಪಾಪನಾ
ಶಕನಾದ ಸರ್ವಕಾರಣನು ಸರ್ವಾಂತೆ[9]ರಾ
ಳಿ[9]ಕನಾದ ಶಂಕ[10]ರಂ ಚಂದ್ರಾರ್ಧಮಂ[10]ಡಿತ ಮಹಾತಾಂಡವಾಡಂಬರಂ ೩೮

ಒಪ್ಪಿದಂ ಭಕ್ತಜನರಘತಿಮಿರಭಾಸ್ಕರಂ
ಒಪ್ಪಿದಂ ಶರಣಸಂತಾನ ಸುರಮಂದಾರ
ನೊಪ್ಪಿದಂ ಸಕಲ ದ್ರುಹಿಣಾಂಡ ವರ ಪಕ್ಷನಿಕ್ಷಿಪ್ತಕುಕ್ಷ್ಯಾ ಕ್ಷೇತ್ರಯಂ
ಒಪ್ಪಿದಂ ಸುಮನ[11]ಸ್ತ[11]ರಂಗಿಣಿ ಜಟಾಪಟಲ
ನೊಪ್ಪಿದನುಮಾಸ್ಕಂದ ವಿಗ್ರ[12]ಹಂ ದೇವ[12] ತಾ
ನೊಪ್ಪಿದಂ ಕಂದರ್ಪಕೋಟಿಲಾವಣ್ಯದಿಂ ಮಲ್ಲಿಕಾರ್ಜುನಲಿಂಗನು ೩೯

---

1 ನೈ (ಚ) 2 ತರೂಪಂದಾ (ಚ) 3 ಗಳೆಮಹಾ (ಚ) 4 ರೌದ್ರಾದಿ (ಚ) 5 ಯಂದ (ಚ) 6 ಳಾವಾಗಳುಂ (ಚ) 7 ಖಿಳ (ಚ) 8 ಕರಾನಂದ (ಚ) 9 ರ್ಯಾ।ಮಿ (ಚ) 10 ರ ಶಶಾಂಕಾರ್ಧ (ಚ) 11 ಸತ (ಚ) 12 ಹ ಸುರಗ್ರ (ಚ)

ಶಶಿ[1]ಖಂಡ[1]ಸಂಕಾಶತನುಕಾಂತಿ ಥಳಥಳಿಸೆ
ನಿಶಿತ ಶೂಲಂ ಪರಶು ಖಡ್ಗ ವಜ್ರಾಭಯದೊ
ಳಸವು ದಕ್ಷಿಣ ಪಂಚಕರ ನಾಗಪಾಶಾಂಕುಶಂ ಘಂಟೆ ವಹ್ನಿ ಪಂಚೆ
ಹಸನಾದ ತೋಳ್ಗಳೀರೈದು ಮೊಗವೈದರಿಂ
ದಶಪಂಚನೇತ್ರಕೋಟೀರ [2]ಭುಜಕೀರ್ತಿ ಘನ[2]
ವಿಷ ದಿವ್ಯವಸನ [3]ಪಯೆ[3] ಸರ್ಪಭೂಷಣದಿಂದಲೊಪ್ಪಿದನುಮಾರವಣನು ೪೦

[4]ಸಾ[4]ರ ಮಂದಾರ [5]ಮಲ್ಲೀಗಂಧಸಾರ ಶುಭ[5]
ಹೀರಾಭದೀಶಾನಮುಖದಗ್ರದೊಳ್ [6]ನೋಡ
ಲಾರಯ್ಯ[6] ಮೊಗ ನಾಲ್ಕು ಪನ್ನೆರಳ್ಕಣ್ಣು ಚತುರ್ಭುಜ ಜಟಾಮಕುಟದಿಂದ
[7]ಧೀರ ಜನನುತವಾದ ಶುಕ್ಲಂ ಶಿರವ ಧರಿಸಿ[7]
ಚಾರುಟಂ[8]ಕಾಭಯ ವರಾಗ್ರಶೂಲ ಕರದಿಂ[8]
ಭೂರಿ ದಿವ್ಯಾಭರಣ ಗಂಧ ಪುಷ್ಪಾ[9]ದಿಯಿಂದೀಶಾನನಲ್ಲಿ[9] ತೋರ್ಕುಂ ೪೧

ಕಾಂಚನ ಸುಕಾಶ್ಮೀರ ಕರ್ಣಿಕಾ[10]ರಪ್ರಭೆಯ[10]
[11]ನಾಣ್ಚಿ[11]ಸುವ ತತ್ಪುರುಷಮುಖದೊತ್ತಿನೊಳ್ [12]ಧೀರ[12]
ಕಾಂಚನಾದ್ರಿಯ ಪೋಲ್ವ ತನುಕಾಂತಿ ಮೊಗ ನಾಲ್ಕು ಭುಜ ಚತುರ್ವಿಧ ಕರಗಳಿಂ
ಲಾಂಛಿತಂ ಪೀತಾಂ[13]ಬರೋತ್ತರೀಯಕನು[13] ದಿ
ವ್ಯಾಂಚಿತಾಭರಣ ಗಂಧಾಕ್ಷತಂ ಪುಷ್ಪಮಾ
ಲಾಂ[14]ಚಲ[14]ಜಟಾಮಕುಟಮಂತ್ರಮಾಲಾ[15]ಕಲಿತ[15] ಪ್ರಾಗ್ಭಾಗದೊಳ್ ರಾಜಿ[14]ಪಂ[14] ೪೨

ಜಂಬುಫಲ ಕಾಲಮೇಘಾಂಜನಾಕಾರವಹ
ಬಿಂಬ ಘೋರಾಸ್ಯದೊತ್ತಿನೊ[17]ಳಂಜನಾದ್ರಿಯೆಂ
ತೆಂಬವೊಲ್ ತೋರ್ಪ[17] ಭೀಕರ ಚತುರ್ವದನ ಭುಜಕರ ಚತುಷ್ಟಯಗಳಿಂದ
ಇಂಬಾದ ಪನ್ನೆರಳ್ಕಣ್ಣು ಕೋಟೀರ ಜಟೆ
ದಂಭೋಳಿ[18]ಯೆಂತೆ ನುತ[18] ವ್ಯಾಘ್ರಚರ್ಮಾಂಬರಂ
ಶಂಭುಶಂಕರ ಭಕ್ತಜನಕುಟುಂಬನು [19]ವರುಣಭಾಗದೊಳ್ ರಾಜಿಸುತಿಹಂ[19] ೪೩

---

1 ಸ್ಫಟಿಕ (ಚ) 2 ಪದಪದ್ಮಗಳ (ಚ) 3 ಧರ (ಚ) 4 ಹಾ (ಚ) 5 ಮಾಲತೀ ಪಟೀರಂ) ತಾರ (ಚ) 6 ಮೂರ್ತಿ।ಯಾರಮ್ಮ (ಚ) 7 ಸಾರ ಮಂತ್ರೀಶಾನ ಶುಕ್ಲಾಂಬರಧರಂ (ಚ) 8 ಕಂ ಶೂಲವರದಾಭಯಕರಯುತಂ (ಚ) 9 ದ್ಯಲಂಕೃತದೊಳೀಶಾನ (ಚ) 10 ರಾಭಮಂ (ಚ) 11 ನಾಂಚಿ (ಚ) 12 ಮೂರ್ತಿ (ಚ) 13 ಶಿರೋತ್ತರೀಯನು (ಕಗ)14 ಚಿತಂ (ಚ)15 ಯುತಂ(ಚ) 16 ಪ (ಕಗ) 17 ಳಘೋರ ಸುಮೂರ್ತಿಯೆಂಬಂಜನಾದ್ರಿ ಯೊಲ್ (ಚ) 18 ಧ್ವನಿ ದೌಷ್ಟ್ರ (ಚ
19 ಕುಂಭಿಮದವಿದಳ ಕಂಠೀರವಂ (ಚ)

ಪಂಚನಖಚರ್ಮೋತ್ತರೀಯನು ಕರಾಳಾಸ್ಯ
ಮಿಂಚುವತಿ ನೂಪುರಪದಂಗ[1]ಳಿಂ ಕಡುಚೆಲ್ವ
ನಂ[1]ಚಿತಾಭಯವರದ ಟಂಕ ತ್ರಿಶೂಲಯುತ ಸರ್ವಲಕ್ಷಣಶೋಭಿತಂ
ಪಂಚಜನ ಶಮನಾಂತಕನು ಸರ್ಪಭೂಷಣ ಸ
ಮಂಚಿತನು ದಿವ್ಯಗಂಧಾನು[2]ಲೇಪನು[2] ಕುಸುಮ
ಸಂಛನ್ನ ದಿವ್ಯದೇಹನು ದಕ್ಷಿಣದದೆಸೆಯೊಳಿಂತು ರಾಜಿಸುತಿರ್ಪನು ೪೪

ಕೆಂಗದಿರ ರನ್ನ[3]ಗಳ ದಾಡಿಮಗಳಾದಿತ್ಯ[3]
ನಂಗಕಾಂತಿಯ ಪೋಲ್ವ ವಾಮದೇವಾಸ್ಯದಿಂ
ಮುಂಗಡೆಯೊಳಿರ್ಪ ವರವಾಮ ವಸುಮೂರ್ತಿಮಂಡಿತ ಜಟಾಮಕುಟದಿಂದ
ಮಂಗಳಚತುರ್ಲಪನದೋಚ್ಚ ತುಃಕರ[4]ನ[4]ಭಯ
[5]ಮಂಗಳಿಕ[5] ಟಂಕ ದಕ್ಷಿಣಶೂಲವರ[6]ದಾಂಕ
ನಂಗ[6]ದ್ವಾದಶನೇತ್ರ ರೋಹಣಾದ್ರಿಯ ನಿಂದಿಪಂಗದ ಮಹಾಕಾಂತಿಯ ೪೫

ರಕ್ತವಸ[7]ನವ ಪೊದ್ದು[7] ರಕ್ತಾಂಬ[8]ರವನುಟ್ಟು[8]
ರಕ್ತಚಂದನ ದಿವ್ಯಗಂಧಲೇಪನದಿಂದ
ರಕ್ತಸುಮ ಮಾ[9]ಲ್ಯಾದ್ಯ[9]ಲಂಕೃತಂ ಸರ್ವಲಕ್ಷ[10]ಣ ಶೋಭಿತಾ[10]ಭರಣದಿಂ
ಯು[11]ಕ್ತಂ ಸುಮಂತ್ರ[11]ಮಾಲಾಕಲಿತ ಯಕ್ಷ[12]ಪ್ರ
ಸ[12]ಕ್ತನ ಮಹಾಭಾಗದೊಳ್ ತೋರ್ಪನೀಶ್ವರನು
ವ್ಯಕ್ತದಿಂ ಧಾತೃಗಳಿಗಿಷ್ಟವಸ್ತುವ ಕೊಡುವ ಸುರರ ಚಿಂತಾರತ್ನ[13]ದಿಂ[13] ೪೬

ಕ್ಷೀರ ಶಂ[14]ಖ ಪಟೀರ ಹಿಮಂ ವಿಚಕಿಲಗಳ ಘನ
ಸಾರ[14]ಕಾಂತಿ[15]ಯಲಿ[15] ಸದ್ಯೋಜಾ[16]ತವದನಮಂ
ಸೇರಿ ತೋರಿಸುವ[16] ಸದ್ಯೋಜಾತಮೂರ್ತಿಯುಂ ಜಟಾಮಕುಟ ಮೊಗನಾಲ್ಕ[17]ರಿಂ[17]
ಸಾರ ಧವಳಾಂಗ[18]ಲಂ[18]ಬಿತ ಚತುರ್ಭುಜಕರಂ
ಭೂರಿ ತ್ರಿಣೇತ್ರ ಧವಳೋತ್ತರೀ[19]ಯಂ[19] ಚಾರು
[20]ಕಾರುಣ್ಯನಾ[20]ರಮ್ಯ ಪರ್ವತಾಕಾರ [21]ನಿರ್ಭಯ ವರ[21]ತ್ರಿಶೂ[22]ಲ ಟಂಕಂ[22] ೪೭

---

1 ಳಮಹಾಚೆ।ಲ್ವಾಂ (ಚ) 2 ಲಿಪ್ತನು (ಚ) 3 ಜಪ ಸುಪದ್ಮಿನೀ ರಮಣ (ಚ) 4 ಮ (ಚ)
5 ಕಂಗೊಳಿಪ (ಚ) 6 ದೆಡದ।ತುಂಗ (ಚ) 7 ನಂದರಂ (ಚ) 8 ರೋತ್ತರೀಯಂ (ಚ) 9 ಲ್ಯ (ಚ)
10 ಣಂ ರತ್ನ ಸರ್ವಾ (ಚ) 11 ಕ್ತ ತನ್ಮಂತ್ರ(ಚ) 12 ರಾ।ದ್ಯ(ಚ) 13 ದೊಳ್ (ಕ) ವು (ಚ)
14 ಖಂ ಹಿಮ ಸುಪೌಂಡ್ರಿಕ ವಿಚಕಿಲಂ।ನೀರ (ಚ) 15 ಯೊಳಿರ್ಪ (ಚ) 16 ತಾಸ್ಯಮಂ।ಸೇರಿ
ತೋರುವ (ಚ) 17 ರಿಂದ (ಚ) 18 ಬಿಂ (ಚ) 19 ಯನು (ಚ) 20 ಶ್ವೇತನಾ (ಚ)
21 ಭಯವರದ (ಚ) 22 ಲ ಟಂಕಾನ್ವಿತ ಶಿವಂ (ಚ)

ಎಸೆವಂಗ[1]ದಿಂ ಶ್ಯಾಮವರ್ಣದಿಂ ಶ್ರುತ್ಯರಂ
ತೆಸೆವ ತಾಮಸ ರಾಜಸ ವರ ಸಾತ್ವಿಕ[1]ಗುಣ
[2]ಪ್ರಸರ ಹಿತ[2] ರುದ್ರಾತ್ಮ ಭೂಪದ್ಮನಾಭರಿಂ ಸೃಷ್ಟಿ ಸ್ಥಿತಿ ಸಂಹರಗಳಂ
ಪಸರಿಸುವ ಸರ್ವಲೋಕದ ಮಾತೆ ಸ್ಥಾಣುವಿನ
ಸಸಿನೆ ವಾಮಾಂಗದೊಳ್ ಕಲ್ಪಲತೆಯೊಲಮರ್ದು
ಪಸಿಯ ಮೋಹದಿ ವಿಶಾಖನನೊಪ್ಪುತಿಭಮುಖನ ನಿಟ್ಟಿಸುವ[3]ಳತಿಮುದದೊಳ್[3] ೪೮

ಅರರೆ ಗಿರಿಜಾತೆ ಧರಿಸಿದ [4]ತೊಡಿಗೆಗಳ[4] ಕಿರಣ
ಮೆರೆವಂಗ ಶೃಂಗಾರ ದೆಸೆದೆಸೆಗೆ ಪಸರಿಸಲು
ಭರದೊಳಾಸ್ಥಾನ ಲಾವಣ್ಯರಸ ತೀವಿ ಸಿಂಗರದ ಕಡಲಂತೆಸೆದುದು
ಕರಕಮಲ[5]ದು[5]ಭಯ ದೃಕ್ಕಿರಣದಿಂ [6]ಮಚ್ಚಿಸು
ತ್ತ[6]ರಳಿಸುತೆ ಮಂತ್ರಾಧಿದೇವತೆಯರಿಕ್ಕೆಲದೊ
ಳಿರದೆ ಸೇವಿಸೆ ಮೆರೆವುತಿರ್ದಳಭವನ ರಾಣಿ ಹರಿ[7]ನ್ಮ[7]ಣಿಯ ಪುತ್ಥಳಿಯೊಲು ೪೯

ಸೂಳರಿದುಯಿಕ್ಕೆಲದೊಳಿಕ್ಕ[8]ತಿಹ ಬಿಳಿಯ ಚ[8]ಮ
ರಾಳಿಯಂ ಪಿಡಿದಿರ್ಪ ವೇದ[9]ಮಾತೆಯರಿಂದ
ಪಾ[9]ಳಿಯಿಂ ರನ್ನಗನ್ನಡಿ[10]ಯ ಶೃಂಗಾರಪಾವುಗೆವಿಡಿದ ನದಿಗಳಿಂದ[10]
ಮೇಳದಿಂ ಭದ್ರಪೀಠವ ಕಾಯ್ದಲಂಕರಿಪ
ಬಾಳಯೋಗಿಣಿಯರಿಂ ಹಡಪ ಸಂಬಳಿ[11]ಗೆ ಮೆರೆ
ಯೊ[11]ಳಿಗದ ಮಾತೃಕೆಯರಿಂದೆಸೆದಳಖಿಳಜಗದರಸಿ ಸುಜ್ಞಾನಸರಸಿ ೫೦

ಪೊಸಜವ್ವನದ ಪಚ್ಚಪಸಿಯ ಮೋಹದ ಚಲ್ವ
ಸಸಿಮೊಗದ ರುದ್ರಕನ್ಯಾಕೋಟಿ[12]ರತ್ನದಿಂ[12]
ಹಸನಾದ [13]ಕೇಕಿ ಪಿಂಛವ್ಯಜನ ಕನಕಕುಂಚಂಗಳಂ ದಂಡಂಗಳಂ[13]
ಪೊಸತಾದ ಕಾಳಾಂಜಿ ಮುಂತಾದ ವಿನಿಯೋಗ
ವಿಸರಗಳ ಪಿಡಿದು ಪರಿಪರಿಯೊಳುಪಚರಿಸುತಿರೆ
ಯಸಮಾಕ್ಷನಪ್ರಮೇಯಂ ವಿರಾಜಿಸಿದ ಶ್ರೀಚನ್ನಮಲ್ಲೇಶಲಿಂಗಂ ೫೧

---

1 ವದರ ಲೋಚನ ಶಾಮರಾಗ ಶುಚಿ । ಒಸೆದು ತಾಮಸ ರಾಜಸಂ ಸಾತ್ವಿಕಂ ತ್ರಿ (ಚ) 2 ಹಸನಾದ (ಚ) 3 ಳಿದು ವಿಚಿತ್ರಂ (ಚ) 4 ಭರಣಗಳ (ಚ) 5 ಮು (ಚ) 6 ಸಂಕೋಚ।ವ (ಚ) 7 ಮ (ಕಗ) 8 ತತಿ ಸೀಗುರಿ ಚಾ (ಚ) 9 ಮನುಮಾತೆಯರ್। ಓ (ಚ) 10 ಯುಭೃಂಗಾರಪಾವುಗೆವಿಡಿದ ತೀರ್ಥದೇವತೆಯರಿಂದ (ಚ) 11 ಗೆಲಸ।ದೂ (ಚ) 12 ನವರತ್ನಮಯ (ಚ) 13 ಪಿಂಜಾತ ವ್ಯಜನ ಕಾನಕ ಕುಂಚ ಕುಸುರಿಯೊಳ್ ಬೆಸೆದ ರನ್ನ (ಚ)

ವಿನತೆ ಸಿಂಹಿಕೆ ಕದ್ರುಕಾಳಿಕೆ ಪುಲೋಮೆ ಕುಹು
ಯನುಮತಿ [1]ಸ[1]ರಮೆಂ ಸಿದ್ಧಿಕ್ರಿಯೆ ಯದಿತಿ ದಿತಿ ವಿಶ್ವೆ
ದನುಗುಣಾನ್ವಿತೆ ಮಾಯೆ [2]ರಾಕೆ[2] ಸಾವಿತ್ರಿ ಸ್ವಧೆ ದುರ್ಗೆ ಮತಿ ತುಷ್ಟಿ ಪುಷ್ಟಿ
ಸಿನಿವಾಲಿ ದ್ಯುತಿ ಬುದ್ಧಿ ಧರಣಿ ಧಾರಣಿ ರತಿರ
ಜನಿ ಸ್ವಾಹೆ ವಾಣಿ ದಕ್ಷಿಣೆ ಮೇದೆ[3]ಹಿತೆ ನ[3]ರಾ
ಯಣಿ [4]ವೇಳೆ[4]ಮುಖ್ಯ ಸುರಮಾತೆ ಸತಿಯರ್ ಬಂದರೀಶನೋಲೈಸಲೆಂದು ೩೨

ಜಗದೊಳತಿಪ್ರಖ್ಯಾತಿವೆತ್ತರುಂಧತಿ ಖ್ಯಾತಿ
ಸೊಗಸುವನಸೂಯೆ ಧೃತಿಸಂಭೂತಿ ಪ್ರೀತಿ ಕ್ಷಮೆ
ಮಿಗೆ ಪ್ರಸೂತಿಯು ಭೂತಿಸನ್ನತಿಯುಂ [5]ಸುರಹೂತಿ[5] ದೇವಮಾತೆಯುಂ ದ್ವಾದಶ
ಅಗಣಿತ ಮಹಾಪತಿವ್ರತೆಯರುಗಳೈತಂದು
ನಿಗಮ ದುರ್ಲಭ ನಿತ್ಯನೀಲಗಳನುಮೆಯಾಣ್ಮ
ಜಗದೇಕವಲ್ಲಭನೆ ಜಯ ಜಯ ವಿರೂಪಾಕ್ಷನೆಂದು ಪರಸಿದರಭವನಂ ೩೩

ಜಾತವೇದನ ವರ್ಣ ತನುಕಾಂತಿ ಥಳಥಳಿಸೆ
ನೂತನಾಂಗನೆಯರಹ ಬ್ರಾಹ್ಮಿ ಮಾಹೇಶ್ವರಿಯು
ಪೂತೆ ಕಾಮಾರಿ ವೈಷ್ಣವಿಯು ವಾರಾಹಿ ಮಾಹೇಂದ್ರಿ ಚಾಮುಂಡಿಯೆಂಬ
ದೂತೆಯರು ಶಿವೆಯ[6]ನೋಲೈಸುತ್ತ ಮತ್ತಮಾ[6]
ಸಾತಿಶಯ[7]ದಿಂ ಯೋಗಿಣಿಯರಲ್ಲಿ[7] ಧೂರ್ಜಟಿ
ಪ್ರೇತಾಸನಿ ಪ್ರಸಾದಿನಿ ಪ್ರೇತಭೂಷಣಿಯು ಪಾರಮೇಶ್ವರಿ ಕ್ರೋಧಿನಿ ೩೪

ಧೂಮ್ರಾಕ್ಷಿ ಧ್ವಂಸಿನಿಯು ದಂಡಧಾರಿಣಿ ಮಾರಿ
ಕಾಮರೂಪಿಣಿ ಕಾಳಿಮಾಯೋಗಿ ಮೇದಿನಿಯು
ಕೌಮಾರಿಮಾಲಿಕೆ ಕಪಾಲಿ ಶಾಂಕರಿ ಸಿದ್ಧಯೋಗಿ ಸೂಕ್ಷ್ಮಾಂಗಿ ರೌದ್ರಿ
ಭೀಮಕಂಕಾಳಿ ಸೌಂದರಿ ಶರ್ವೆ ಶ್ರೀಲಕ್ಷ್ಮಿ
ಯಾಮಿನೀಚರೆ ಕಾಳರಾತ್ರೆ ಕಲಹಪ್ರಿಯೆ
ಪ್ರೇಮದ ವಿಶಾಲಾಕ್ಷಿ ಕಾಕಾಕ್ಷಿ ವಿರುಪಾಕ್ಷಿ ಕಿಂಕಿಣಿ ಸು[8]ಲಂ[8]ಬೋಷ್ಠಿಯು ೩೫

---

1 ಪ (ಗ) 2 ಕಾರೆ (ಚ) 3 ಬಾಲೆ ನಾ (ಚ) 4 ವೆಲ್ಲೆ (ಚ) 5 ಅನಲಾಯಿ (ಚ) 6 ಶರ್ವಾಣಿಯು ಭವಾನಿಯು (ಚ) 7 ದೆ ವಿದಿವ್ಯಸುಯೋಗಿ (ಚ) 8 ಬಿಂ (ಗ)

ವಾರಾಹಿ ವ್ಯಾಘ್ರಿ ವಿಶಲಂಘಿನಿಯಧೋಮುಖಿಯು
ಭೈರವಿ ಭಯಂಕರಿ ಗಣೇಶಿ ವಿಶ್ವಸುರೂಪಿ
ಘೋರೆ ತಾಟಕಿ ತು[1]ಷ್ಟಿಯುಗ್ರೆ[1] ತ್ರಿಪುರಾಂತಕಿ ತ್ರಿಪುಂಡ್ರಧಾರಿಣಿ ರಾಕ್ಷಸಿ
ವೀರಭದ್ರೆಯು ರೌದ್ರೆ ವೇತಾಳಿ ರಕ್ತಾಕ್ಷಿ
ಸಾರಕೇಸರಿ ಭೂತಸಂಘೆ ಯಕ್ಷಿಣಿ ಚಂಡಿ
ಕ್ರೂರಭೀಷಣಿ ಡಾಕಿನೀಶೆ ನರಭೋಜಿನಿಯುಯುಗ್ರ[2]ಶಿವೆ ಧನುಧಾರಿಣಿ[2] ೫೬

ಹುಂಕಾರಿಯೂರ್ಧ್ವಕೇಶಿಯರೆಂಬ ಚೌಷಷ್ಟಿ
ಬಿಂಕದ ಮಹಾಯೋಗಿಣಿಯರಿವರು ಬಂದು ನಿಜ
ಶಂಕರನ ಶರ್ವಾಣಿಧವನುಮೆಯನೋಲೈಸಿ ಬಿಡದೆ ಕಾಯ್ದಿರ್ಪರನಿಶಂ
ಮುಂಕೊಂಡು ಪೂರ್ಣೋದರಿಯು ವಿರಜೆ ಶಾಲ್ಮಲಿ[3]ಯು
ನಂಕಗೌರಿಯು ನಿರ್ಮಲಾಕ್ಷಿ ಲೋಲಾಕ್ಷಿ ನಿರ
ಹಂಕಾರೆ[3] ದೀರ್ಘನಾಸಿಕೆ ದೀರ್ಘಮುಖಿ ದೀರ್ಘಜಿಹ್ವೆ ಗೋಮುಖಿ ಘರ್ಜಿನಿ ೫೭

ಜ್ವಾಲಾಮುಖಿಯು ವಿಕೃತಮುಖಿಯುಲ್ಕಮುಖಿ ಮಹಾ
ಕಾಳಿ ಕುಂಡೋದರಿ ಶ್ರೀಮುಖಿಯು ವಿಶ್ವಿಮುಖಿ
ತ್ರೈಲೋಕ್ಯವಿ[4]ದೆ[4] ಸರಸ್ವತಿ ಸರ್ವಸಿದ್ಧ್ಯೂರ್ಧ್ವಕೇಶಿ ದ್ರಾವಿಣಿ ಖೇಚರಿ
ಕಾಲೋದರಿಯು ಮಂತ್ರಶಕ್ತಿ [5]ಸಮನ್ವಿತ ಭದ್ರ
ಕಾಳಾತ್ಮಶಕ್ತಿಮಂಜರಿ ನಗರಿ ರೂಪಿಣಿಯು
ಕಾಳರಾತ್ರಿಯು ಭೂತಮಾತೆ ಲಂಬೋದರಿ[6]ಯು ಕುಧ್ಮಾಣಿ ಶಿವಾತ್ಮಕಿ[6] ಜಯೆ ೫೮

ವಿರಜೆ ಪೂತನಿ ಯೋಗಿನಿಯು ಶಂಖಿನಿಯು ಮತ್ತೆ
ವಿರತಿ ಸುಮುಖೈಶ್ವರ್ಯೆ ಘನರೇವತಿಯು ನೋಡೆ
ಸರಸೆ ಮಾಧವಿ ಸಹಜೆ ಲಕ್ಷ್ಮಿ [7]ರಾವಣಿಯು[7] ರಕ್ಷೋವಧಾರಿಣಿ ವ್ಯಾಪಿನಿ
ಭರಿತ ಮಾಯಾನ್ವಿತೆಯರೆನಿಪರ್ಬ್ಬರೆವತ್ತೊಂದು
ಚಿರಮಂತ್ರಶಕ್ತಿಯರ್ ಕರಕರದು ಸಮ್ಮುಖವ
ನಿರವರಿದು ಮಾಳ್ಪರೀಶನ [8]ವೋಲಗದೊಳು ಭಕ್ತಾವಳಿಗೆ ರಕ್ತಿಯಿಂದ[8] ೫೯

---

1 ವ್ಯಾಘ್ರಿ (ಚ) 2 ಮಹಾಧನುಧಾರಿಯು (ಚ) 3 ಗೌರಿ ಶಂಕೆಯಿಲ್ಲದ ವರ್ತುಳಾಕ್ಷಿ ಲೋಲಾಕ್ಷಿ ಭ। ಯಂಕಿತದ (ಚ) 4 ದ್ಯೆ (ಕಚ) 5 ಘನಭೂಷಿತೆಯು ಭದ್ರ।ಕಾಳ್ಯಾ (ಕಗ) 6 ಕುರ್ದನ್ಯೆ ವಾಜ್ಮಯೆ (ಚ) 7 ವಾರುಣಿಯು (ಚ) 8 ಬಾಲರವಿಕೋಟಿಸಂಕಾಶನೋಲಗದೊಳು (ಚ)

ಎಳೆಯ ಸೂರ್ಯನ ಪೊಳೆವ ಪೊಂಬಿಸಿಲ ಸಿತಕಾಂತಿ
ಥಳಥಳಿಸೆ ನಳಿನಸಖ[1]ಕಳಿಧರನಲಗಳೆಂಬ[1]
ಪೊಳೆವ ಕಣ್ಗಳ ಮೂರರಿಂದೆ ಪಾಶಾಂಕುಶ ಧನುರ್ಬಾಣ ಕರ ನಾಲ್ಕರಿಂ
ತೊಳಗುವ ವಿಶಾಲಾಕ್ಷಿ ಕಾಮಾಕ್ಷಿ ಮಾಲಕುಮಿ
ಕಳೆಯುಳ್ಳ ಮಾದೇವಿ ಮಾಣಿಕೇಶ್ವರಿಯಾದಿ
ಇಳೆಯೊಳಿಹ ಪದಿನೆಂಟುಯೋಗಪೀಠದ ಶಕ್ತಿಕುಳ[2]ಮಲ್ಲಿ ಕಾಯ್ದಿರ್ಪುದು[2] ೬೦

ಎಡಬಲದೊಳೆಡೆವಿಡದೆ ಬಂಗಾರ ದಡಿಗಳಂ
ಸಡಗರದಿ ಪಿಡಿದಿರುವ ವೇತ್ರಧಾರರನೇಕ
ರೊಡಗೂಡಿ ನಂದಿ ಮಾಕಾಳ ಗಣವರರು ಮುಂಗಡೆಯೊಳಿರ್ದತಿ ಮುದದೊಳು
ಮೃಡ ಪರಾಕಜಹರಿಗಳರಸ ಸಾಸಿರದಲೆಯ
ಪೊಡವಿಯಿರಾರೇಳರಾಣ್ಮರ ಕರ್ತ ಕಿಡಿಗಣ್ಣ
ಜಡಜಾರಿತನಯಸಖವೈರ ಶಿವಶಿವ ಸಕಲಮಾಂಗಲ್ಯಕರ ಪರಾಕು ೬೧

ಈತನಣುವಿಂಗಣು ಮಹತ್ತಿಗೆ ಮಹಂತನಹ
ನೀತನೇ ತತ್ತ್ವಮಸಿ ವಾಕ್ಯದರ್ಥಂ ನೋಡ
ಲೀತನೇ ಪ್ರಣವಾತ್ಮಕಂ ಪರಾಶಕ್ತಿಯುತ ಲಿಂಗ ಚಿಲ್ಲಿಂಗ ಲಿಂಗಂ
ಈತ ನಿಗಮಂಗಳ್ಗೆ ನಿಲುಕದ ನಿರರ್ಗಳಂ
ಈತನಜಹರಿಗಳ್ಗಸಾಧ್ಯನನಲಸ್ತಂಭ
ನೀತನೆ ಹಿರಣ್ಯವರ್ಣಂ ಹಿರಣ್ಯಾಧಿಪನುಯೆಂದರಗಜಾರಮಣನ ೬೨

ಇದು ಕಣಾ ಅತ್ಯತ್ತಿಷ್ಠದ್ದಶಾಂಗುಲ[3]ಮೆಂಬು
ದಿದೆ ಕಣಾ ಚಕಿತಮಭಿದತ್ತೆಯೆನಿಸುವ ಲಿಂಗ
ಮಿದೆ ಕಣಾ ಶ್ರುತಿತತಿಶಿರೋಮಧ್ಯಗತ ಪರಬ್ರಹ್ಮ ಪರಪ್ರಕೃತಿನಾಥಂ
ಇದೆ ಸಕಲಮುನಿ ಹೃದಯಧ್ಯಾನ ಜ್ಯೋತಿರ್ಮ[4]ಯಂ[4]
ಇದೆ ಸಕಲ ಶರಣಜನಪೂಜಿತ ಪರಾತ್ಪರಂ
ಇದ ನೋಡಿ ಇದ ಪಾಡಿ ಇದ ಬೇಡಿಯೆಂದು ಕೈಯೆತ್ತಿ ಪೊಗಳುತ್ತಿರ್ದರಂ ೬೩

---

1 ನಳಿನಾರ್ಯನಲಗಳಿಂ (ಕಗ) 2 ಇದೆ ಮಹಾಬ್ರಹ್ಮವೆ (ಚ) 3 ವಸ್ತು।ವಿ (ಚ) 4 ಯ (ಗ)

ಪಾರಾಶ[1]ರ[1] ವ್ಯಾಸ ವಾಲ್ಮೀಕಿ ಭರದ್ವಾಜ
ಸಾರಕಲಶಜ ಭೃಗು ವಶಿಷ್ಠ ಜೈಮಿನಿಯತ್ರಿ
ದೂರ್ವಾಸ[2]ನು ಮೃಕಂಡುಸುತ ವಿಭಾಂಡಕ[2] ಕಶ್ಯಪನು ಕಣ್ವ ಪೌಲಸ್ತ್ಯ[3]ನು[3]
[4]ಚೀ[4]ರಕೌಶಿಕ ಕಪಿಲನುಪಮನ್ಯು ಶಾಂಡಿಲ್ಯ
ನಾರದ [5]ಕಣಾದ ಘನ[5]ವಾಮದೇವ ಪವಿತ್ರ
[6]ಭಾ[6]ರ್ಗವ [7]ಸುಮಂತ ಪುಲಹ ಸುಮಿತ್ರ[7] ಪರ್ಣಾದ ರೈಭ್ಯಕ ಶಿಲಾ[8]ದ[8] ಸನಕ[9]ಂ[9] ೬೪

ಚರಣಲೋಚನ ಸೂತ ಶಲ್ಯ ಬ್ರಾಹ್ಮಣ ಶಕ್ತಿ
ವರಸನಾತನ ಶ್ವೇತ[10]ಕೇತು ಗಾರ್ಗ್ಯಾಯಣನು[10]
ಪರಿಭಕ್ಷ ವತ್ಸ ಕುತ್ಸ[11]ನ ವಸನನು ದಧೀಚಿ ದೇವಲಕನುಂ ಮುಸಲನು
ಭರತ ಶುಕ[11] ಮೌದ್ಗಲ್ಯ ಜಮದಗ್ನಿ ವ್ಯಾಘ್ರಪದ
ಚಿರಮತಂಗಂ ಜಹ್ನುಮುಖ್ಯಮುನಿಗಳ್ ನಿಂದಂ
ಭರದಿ ಕೈವಾರಿಸುತ್ತಿರಲೊಪ್ಪಿದಂ ಸರ್ವರೆರೆಯ ಶೀತಾಂಶುಧರನು ೬೫

ಋಗ್ಯಜುಸ್ಸಾ[12]ಮರೂಪ ತ್ರಿವೇದದ ದೇವ[12]
ರೊಗ್ಗಿನಿಂದ[13]ಲನಂತ ರೂಪಕಾಃ ಶ್ರುತಯುಯೆಂ
ದ[16]ಗ್ಗಳದ ಪುರಂಷ[14]ರೂಪ[14]ಗಳಾಂತು ಸಾಲ್ಗೊಂಡು ನಿಂದೂರ್ಧ್ವಬಾಹಂ[15]ವಾಗಿ[15]
ಭರ್ಗನೇಕೋದೇವನಲ್ಲ[16]ದಿಲ್ಲೆನ್ನುತ್ತ[16]
ಹಿಗ್ಗಿ ಪೊಗಳಲ್ಕವರ ಬೆನ್ನೊಳ್ ಪುರಾಣಸ್ಮೃತಿ
ಸಗ್ಗಿಗರೆ ಸೇವಕರೆನುತ್ತ ಕೊಂಡಾಡಿದವಖಂಡ ಚಿನ್ಮಯ ಶಂಭುವಂ ೬೬

ಪಾಟಕೇಶ್ವರ ರುದ್ರನಾತ್ಮ ಸಮಗಣರುಗಳ
ವಿಾಟನಿಂದರ್ಬುದಾಯತ ಕೋಟಿಯಿಂ ಕೋಟಿ
ಕೋಟಿ ಕೂಷ್ಮಾಂಡ ಗ[17]ಣ ರತ್ನವರ್ಣದ[17] ದೇಹ ದಶಕೋಟಿಯಬುರ್ದ ಮಹಾ
ದಾಟಿಯಿಂ ಬಂದನಿದೆ ಕೇ[18]ಶಿರಾಕ್ಷಸನು[18] ಶಶಿ
ಜೂಟನೋಲಗಕೆ ಪತ್ತರ್ಬುದ ಸಹಸ್ರ ಭಟ
ಕೂಟದಿಂ ಬಂದರು ಪರಾಕೆನುತ ಪೇಳಿದರು ನಂಬಿ ಮಾಕಾಳಗಣರು ೬೭

---

1 ರಂ (ಚ) 2 ಮಾರ್ಕಂಡೇಯವಿಭಾಂಡು (ಚ) 3 ಶುಕದಧೀಚಿ (ಚ) 4 ವೀ (ಕಗ) 5 ಫಲಾದ ಕಣಾ (ಚ) 6 ಚಾರುಭಾ (ಚ) 7 ಪುಲಹ ಸುಮಿತ್ರ (ಚ) 8 ದಂ (ಚ) 9 ಕನು (ಚ) 10 ಶೌನಕ ಸನಕ ಗಾರ್ಗ್ಯ (ಚ) 11 ವಸನದಪತ್ಯ ಸುಪತ್ಯ ದೇವಲ ಮೃಕಂಡು।ರುರುಶನಕ (ಚ) 12 ಮಥರ್ವಣ ವೇದಗಳ್ ಮುಖ್ಯ (ಚ) 13 ನಂತವ್ಯೆ ವೇದಸ್ಮೃತಿಗಳ್ ನಾಡೆ।ಯ(ಚ) 14ರು (ಚ) 15 ಬಲದಿಂ (ಚ) 16 ದನ್ಯಥವಿಲ್ಲೆನುತ (ಚ) 17 ಣಂ ರನ್ನಗೆಂಪಿನ (ಚ) 18 ಶರಾಮಂ (ಚ)

ಪಾಶವಕ್ತ್ರಂ ಶತಾರ್ಬುದಗಣಂಬೆರಸು [1]ತಾಂ[1]
ಶಾಶ್ವತಂ ವೈದ್ಯುತನುಮಷ್ಟಸಾಗರ ಮುಖ್ಯ
ಭಾಸ್ವರದ ಶರಣಾಳಿಯಿಂ ಕೋಟಿಕೋಟಿ ಬಹುಪದ್ಮಗಣದಿಂ ವಿಶಾಖಂ
ನಾಶಮಿಲ್ಲದೆ ಕೋಟಿ ಶ[2]ತ[2]ಸಾಗರದೆ ಸ[3]ಸ[3]
ರ್ಪಾಸ್ಯ ಪ್ರಮಥೇಶನೈದಿದನು [4]ಕೋಟಿಗಣ ವಿಕೃ
ತಾಸ್ಯದಿಂ[4] ಜ್ವಾಲಕಚ ಸ್ಥೂಲಭುಜರಾದನಂತಗಣಪರ್ಯರ ಸಂಘದಿಂ ೧೮

ಇದೆ ಕೋಟಿಪದ್ಮದೊಳಖಂಡಕ ಸುಸಂಪಾದ
ಇದೆ ಬಂದರಭವ ಶತಕೋಟಿಯಿಂ ಕುಂಭಕಂ
ಪೊದವಿಬಂದಂ ಜಂಭವೈರಿ ನುತಗಣಕೋಟಿಯಿಂ ಕಪಾಲೀಶ ರಂದ್ರಂ
ಪದುಳದಿ ಪರಾರ್ಧದಿಂ ಬಂದ ದುಂದುಭಿ ಪ್ರಮಥ
ನೆಧಿಕ[5]ಗಣ[5] ಬಲದಿಂದ ಸಮದಂಶ ಸುಮದ ಬಲ
ದೊದವಿನಿಂದೀರೇಳು ಜಗದರಸ ಬಿನ್ನಪ ಕರಂ ಪರಾಕೆಲೆ ದೇವನೆ ೧೯

ಮಧುಕ ಪ್ರಮಥೇ[6]ಶ[6]ರಂ ಶತಕೋಟಿ[7]ಯಿಂದ್ರ[7] ಬಂ
ದಧಿಕ ಸಂಪಾದ ಗಣ ಬಂದಂ ಪರಾರ್ಧ ಕೋ
ಟ್ಯುದಿತ [8]ಸಂಹಿತ[8] ಗಣಸಹಿತಲಾ ವ್ಯಶ[9]ನೀಕಂ[9] ಬಂದನಯುತ ಸುಕೋಟಿಯಿಂ
ಪದವರ್ತನಂ ಮಹಾಕೇಶ ಪರ್ವತವೀರ
ಸದಮಳದ ಗಣಕೋಟಿ ಸಾಸಿರದೊಳೈದಿದರ್
ಮದನಹರನೋಲಗಕೆ ಪಿ[10]ಪ್ಪ[10]ಲಂ ಕಾಕಪದ ಸಂತಾನಕರ್ ಮುದದೊಳು ೨೦

ಗಣಜ[11]ಯರ್[11] ಬಳಸಿ ಬಂದರ್ ಮಹಾಬಲ ನೀಲ
ಗಣ ಪೂರ್ಣಚಂದ್ರ ಮಧುಪಿಂಗಳಂ ಚತುರಾಸ್ಯ
ಗಣರಮಿತ ಸೇನೆಯೊಡನೈದಿದರ್ ಭೂತೇಶ ಪ್ರಮಥೇಶ ಕರಣಬಾಹು
ಗಣಹ[12]ಸ್ತ ದಿವ್ಯ[12]ಪ್ರಮಥಾಳಿಯಿಂ ಬಳಸಿಬರೆ
ಗಣಪಂಚವದನನೈವತ್ತೈದು ಅರ್ಬುದದ
ಗಣನೆಯಿಂ ಬಂದ ಶತಮನ್ಯು ಗಣಶತಕೋಟಿಯಿಂ ಬಂದ ಪ್ರಮಥ ವಿಭುವೆ ೨೧

---

1 ತಂ (ಗ) 2 ವ (ಕಗ) 3 ಹಸ (ಚ) 4 ವಿಕೃತಾಸ್ಯ ಕೋಟಿಗಳನೇಕದೆ (ಚ) 5 ಮಿತ (ಚ)
6 ಶ್ವ (ಕ) 7 ಯಿಂದ (ಕ) ಯಿಂ (ಚ) 8 ಸಂಖ್ಯಾತ (ಚ) 9 ನೀಕ (ಕ) ನಿಯು (ಚ)
10 ಪ್ಪ (ಕಗ) 11 ಯಂ (ಚ) 12 ಸ್ತನೇಕ (ಚ)

[1]ವೇ[1]ಗದಿಂ ಕಾಷ್ಠಕೂಟ ಸುಕೇಶ ವೃಷಭ ಬಲಿ
ಮೇಘ ಭೃದ್ಗಣವರರು ಕೋಟಿಕೋಟಿ[2]ಕಗಳಿಂ[2]
ದೀಗ ಬಂದರು ದೇವ ಶತಮುಖ ವಿರೂಪ ಲೋಕಾಂತಕ ಸು[3]ಪುತ್ರ ಚಿತ್ರಂ[3]
ರಾಗದಿಂ ಕಾಳಕೇತುಗಳೀಶದೀಪಿತರ್
ಸಾಗಿ ಬಂದರನೇಕ ಪ್ರಮಥಪುಂಗವರಿಂದ
ನಾಗಕಂಕಣ ಭೋಗಿತಲ್ಪಪೂಜಿತ ವಿಮಲಪಾದಪಂಕಜ ಲಾಲಿಸು ೭೨

ಎಸೆವಾಂತಕಾಂತಕಂ ದೈತ್ಯಜಿತ್ತೆನಿಸುವಂ
ಕುಶಜಲೋಚನ ಘಸ್ಮರಂ ಸುರಾವಸ್ಯನುಂ
ಹಸನಾದ ದಂಶನಿಷ್ಠಾವಿಷಾದಂ ಲೋಕಪಾಲಕ[4]ಗಣ[4]ಪ್ರಮಥರು
ಬಸವಳಿದು ವುಬ್ಬಸಂಗೊಳೆ ಫಣೆಗಳರಸ ತಾಂ
ಸಸಿನೆ ಸಾಸಿರಪರಾರ್ಧದ ಸಂಖ್ಯೆಯಿಂ ಬರ
ಲ್ಕಸಮಾಕ್ಷ[5]ರಾ[5]ದ ಶರಣರ ಗಣನೆ ವೇದಶಾಸ್ತ್ರಕ್ಕತೀ[6]ತಂ ಭಾವಿಸೆ[6] ೭೩

ದೀಪಿಸುವ ಸಾಹಸ್ರಯೋಜನೋನ್ನತಿ ಮಿತಂ
ವ್ಯಾಪಿಸುತ ಲಕ್ಷ್ಯಮಂ ಭೇದಿಪ ಭಯಂಕರದ
ಚಾಪಶರನಿಪುಣರು ನಿಲಿಂಪಶ್ರೇಷ್ಠರುಮಪ್ಪವನಿಯಲ್ಲಿ[7]ರುವ ರುದ್ರರು[7]
ಆ ಪಯೋನಿಧಿಗಳಲ್ಲಿಹರಂತರಿಕ್ಷದೊಳ್
ಲೋಪಮಿಲ್ಲದೆ ದಿವಿಯೊಳಿರುವ ಪ್ರಮಥರನೇಕ
ರೂಪರಹ ಶರಣರೈದಿದರು [8]ವಿಶ್ವೋದಾರ[8] ವಿಶ್ವತೋಮುಖನೇತ್ರನೆ ೭೪

ಬಾಲೇಂದುಧರಮೌಳಿರುದ್ರರಖಿಳರ್ಗೂಡಿ
ಶೂಲ ಡಮರುಗಹಸ್ತಯುತ ರುದ್ರರಗಣಿ[9]ತಂ[9]
ವ್ಯಾಳಭೂಷಣ ವ್ಯಾಘ್ರಚರ್ಮೋತ್ತರೀಯ [10]ರುದ್ರರೇರುವೆಯು[10]ಸಂಖ್ಯಾತರು
ಜ್ವಾಲನೇತ್ರರನೇಕ ಶ್ರೀನೀಲಕಂಠರುಂ
ಕಾಲಸಂಹನನ ಲೋಹಿತಕೇಶ[11]ಬಂಧ[11]ರುಂ
ಮೂಲಾಸುರಾಸುರ [12]ಶಿರೋಮಾಲರಹ ಚಾರು[12]ರುದ್ರರುಗಳೈತಂದರು ೭೫

---

1 ಬೇ (ಚ) 2 ಗಳಿಂವ (ಗ) ಗಳಿಂ (ಚ) 3 ಚಿತ್ರನೇತ್ರಂ (ಚ) 4 ಮಹಾ (ಚ) 5 ನವ ತಾರರಾ (ಚ) 6 ತಂ (ಚ) 7 ಹರುದ್ರರುಂ (ಚ) 8 ವಿಶ್ವತೋಪಾದ (ಚ) 9 ತ (ಗ) 10 ರಹ ರುದ್ರರೇರುವೆಯು (ಕ) ರಹರುದ್ರಗಣ (ಚ) 11 ಬದ್ಧ (ಚ) 12 ಶಿರಮಾಲಾಕಲಿತರಹ (ಚ)

ರಸಜ ಶ್ರೇಣಿಯೊಳ್[1]ಹ[1] ನವೀನವಹ ಬಾಲತೃಣ
ದಸಮುವರ್ಣ[2]ರು[2] ವಿಷಗ್ರೀವ[3]ಕಾಳಿಮು[3]ರಾದ
ಪಸರಿಸಿದ ಭೂತಚಯದಧಿಪತಿಗಳಹ ವಿಕೇಶರಹ [4]ಜಡೆಗಳ ಧರಿಸಿದ[4]
ಭಸಿತಕಾಯದ ರುದ್ರರುಗಳನಂತೈದಿದರ್
ಹಸಗೆಟ್ಟ ಭಕ್ಷಣವಪೇಯ[5]ಮಾವುದು ನೋಡಿ[5]
ರಸೆಯಲ್ಲಿ ಮಾಳ್ಪ ನರರುಗಳ [6]ಶಿ[6]ಕ್ಷಿಪ ಮಹಾರುದ್ರರಿದೆ ಬಂದರಭವ ೭೬

ನೆನಹುಮಾತ್ರದೊಳಖಿಳ ಪಾಪರಾಶಿಗಳ ತಾ
ನನುವಿನಿಂ ತೂಲಾಗ್ನಿಯಂತೆ ಮಾಡುವ ಗಂಗೆ
ಘನ[7]ತ್ಕ[7]ಪ್ರಯಾಗಸರ ಯಮುನೆ ಮುಂತಾದ ತೀರ್ಥಂಗಳೊಳ್ ಸಂಚರಿಸುವ
ಚಿನುಮಯ ಪ್ರಮಥರುಂ ಸಕಲಕ್ಷೇತ್ರಗಳಲ್ಲಿ
ಮನಸಿಜಾಂತಕ ಮಹಾಕೃತಿದಳೆದ ರುದ್ರರುಗ
ಳನವರತ ದಶದಿಶೆಯೊಳಿರ್ಪ ರುದ್ರರ್ ಬಂದರಗಜಾಮನೋವಲ್ಲಭ ೭೭

ಅಂಡಗಳ [8]ಪೊನ್ನ[8]ಚೆಂಡಿನ ಪರಿಯೊಳಾಡುತಖಿ
ಳಾಂಡ ಪೋಷಣಗೊಂಬರಂಡತತಿ ಧರಿಸಿರ್ಪ
ರಂಡಗಳ ತಲೆಕೆಳ್[9]ಗು[9] ಮಾಳ್ಪರನಿಶಂ ಸೂರ್ಯರಂ ಮಿಂಚುಬುಳುಗಳಂತೆ
ಮುಂಡೆಯೊಳ್ ಧರಿಸಿಹರ್ ಪುಂಡರೀಕಾದಿ ಗಜ
ತಂಡಗಳ [10]ಪಿಡಿದು ಮ[10]ಡಬನ ತಿಲಕವಿಡುತಜರ
ಚಂಡಿಕೆಯ ಗಂಟಿಕ್ಕಿ ಬಿನದಿಪ ಮಹಾಮಹಿಮರಿರ್ದರಭವನ ಸಭೆಯೊಳು ೭೮

ನಂದೀಶ್ವರಂ ಭೃಂಗಿರಿಟಿ ಮಹಾಕಾಳಗಣ
ಬಂಧುರದ ಪ್ರಮಥಗಣರೊರ್ವರೊರ್ವರ ಬಳಸಿ
ಸಂದ ಗಣರೆಂಟೆಂ[11]ಟುಯುಬ್ಬರ್ದಂ ಗೂ[11]ಡಿ ನಿಂದಿ[12]ರುವರಾ[12] ಪಿಂದೆಸೆಯೊಳು
ಬಂದು ಘಂಟಾಕರ್ಣ ವಿಶ್ವಸುಕಿರೀಟಿಯೆನಿ
ಪಂದದ ಗಣೇಶ್ವರರ ಕೂಡಲೇಳೇಳು ಪ
ದ್ಮಂ[13]ದೊರೆಯುತಿ[13]ರೆ ಪರಾಕೆನೆ ನೋಡಿ ಮೆರೆದನಾ ಸುರತರಂಗಿಣಿಶೇಖರಂ ೭೯

---

1 ಪ್ಪ (ಚ) 2 ದ (ಚ) 3 ಲೋಹಿತ (ಚ) 4 ಜಟಾಧರರಾಗಿಹ (ಚ) 5 ಮಂ ಕುಡಿದನಾಚಾರ(ಚ) 6 ನೀ (ಚ) 7 ತರ (ಚ) 8 ಕನಕ (ಚ) 9 ಕು (ಕಚ) 10 ನಿಡಂತರೊ (ಚ) 11 ಟಬ್ಬರ್ದಂ ಕೂ (ಚ) 12 ರಲವರ (ಚ) 13 ದವೆತ್ತಿ (ಚ)

ಸರಸದಿಂ ಪಿಂದೆ ಘಂಟಾಕಾಲಗಣವರಂ
ಭರದಿ ಸಾಸಿರಸಂಖ್ಯೆಗಣವರರ ಕೂಡಿ ತಾ
ನಿರುತಿರಲ್ಕವರ ಪಿಂದೆಸೆಯೊಳೊಪ್ಪುವರು ಘಂಟಾಕರ್ಣ ಸುರಘೋಷರುಂ
ಚಿರ ಪ್ರಮಥಗಣ [1]ಮೂವತ್ತುಪದ್ಮವಿರಲಂ
ತು ರುಚಿರೈಕಾದಶಂ ಮುಖ್ಯಗಣರೋಲೈಸ
ಲಿರದೆ ಪೂರ್ವದ ದೆಸೆಯೊಳೋಲಗಂ ಕಂಗೊಳಿಪುದಿಂಗಡಲ ತೆರೆಯಂದದಿಂ[1] ೮೦

ಶಮನಭಾಗದೊಳಜ ಸುವರ್ಣಕಾಂತಿಯ ದೇಹ
ಪಮರೆ ನಾಲ್ಮೊಗ[2]ವೆಂಟು[2]ಕಂಗಳಿಂದಂ ದಂಡ
ಕ[3]ಮಲಧರ ಮಾಲಾಗುಣಗಳಾಂತು[3] ತೋರುತಿಹ ಕರಚತುಷ್ಟಯದಿಂದಲಂ
ರಮಣೀಯತಿ ವಸ್ತ್ರಭೂಷಣ ಗಂಧಮಾಲ್ಯದಿಂ
ದಮಿತ[4]ಕೋಮಲ[4]ಯಜ್ಞಸೂತ್ರದಿಂ ರುದ್ರಸೂ
ಕ್ತಮ[5]ನಿರದೆ ಜಪಿಸುತ್ತ ಶಾರದಾಯುತ ನಮಸ್ಕಾರಮಂ[5] ಮಾಡಿ ನಿಂದಂ ೮೧

ಆವರ ಬೆನ್ನೊತ್ತಿಲಿ ಮರೀಚ್ಯತ್ರಿಯಂಗಿರಸ
ತಪೆ ಭೃಗು ಪುಲಸ್ತ್ಯ ಪುಲಹಂ ದಕ್ಷಕ್ರತು ವಶಿ
ಷ್ಠ ವರ ಮುನಿ ಮೊದಲಾದ ನವಬ್ರಹ್ಮರುಂ ಹೇಮಂತನುಕಾಂತಿಯಿಂ ಪೊಳೆವುತ
[6]ಆವಿರಳದ[6] ಯಜ್ಞೋಪವೀತ ಜಪಸರವಾಂತು
ಸವಿಶೇಷ ಸೂಕ್ತಗಳುದಾತ್ತಾದಿ ಸ್ವರಕರಣ
ರವಮುಣ್ಮುತಿರೆ ಪಾಡುತಿರ್ದ[7]ರನುಪಮ[7]ಪರಂಜ್ಯೋತಿಯ ಸಭಾಂತರದೊಳು ೮೨

ಕೋಟಿಯೋಜನ ದೀರ್ಘ ರಕ್ತವರ್ಣದ ತನುವಿ
ನಾಟೋಪ[8]ಮುಖ ಚತುರ್ದ್ವಾದಶಾಕ್ಷಂಗಳಿಂ[8]
ಮಿಾಟೆನಿಪ ಖಡ್ಗ ಖಟ್ವಾಂಗ [9]ಪಾ[9]ಶಕ ಬಾಣ ವರದ ಪಂಕಜಕರಗಳಿಂ
ಸಾಟಿಯಿಲ್ಲದೆ [10]ತ್ರಿಶೂಲಾಂಕುಶ ಧನುರ್ದಂಡ[10]
ಕೋಟ್ಯಭಯ ವಾಮಪಂಚ[11]ಕ[11] ಹಸ್ತ ಘನಶ್ಮಶ್ರು
ಕೋಟಿ[12]ಯುತ[12]ರುದ್ರರಿಂ ಕಾಲಾಗ್ನಿರುದ್ರ ಶಶಿಜೂಟನೋಲಗದೊಳಿರ್ದಂ ೮೩

---

1 ನಾಲ್ಕು ನಾಲ್ಕು ಪದ್ಮಂಗಳೊಡವೆರಸಿರಲ್ಕಾಂತವರ ಪಿಂದೆ ಮಹಾದಂಡಿಗಣ ನಿರುತದಿಂ ಪತ್ತುಸಾಸಿರ ಪರಾಕೆನುತ ಪೇಳಿದರು ಗುಣಮಣಿಹಾರಗೆ (ಚ) 2 ಏಳ್ (ಚ) 3 ಮಂಡಲು ಅಕ್ಷಮಾಲೆ ಪಾಶವಾಂತು (ಚ) 4 ಕೃತ (ಚ) 5 ಮ ಜಪಿಸುತ ಸರಸ್ವತಿ ಸಹಿತ ದಂಡಪ್ರಣಮವಂ(ಚ) 6 ತವೆಕನಕ (ಚ) 7 ರವಿರಳ (ಚ) 8 ಮೊಗನಾಲ್ಕು ಪನ್ನೆರಳ್ಕಣ್ಗಳಿಂ (ಚ) 9 ಶಂ ಬಾಸಣ ವರದ ಪಂಚಮ (ಚ) 10 ಶೂಲಾಂಕುಶಂ ದಂಡಧನು (ಚ) 11 ಮ (ಚ) 12 ಸಮ (ಚ)

ಪತ್ತುದಿಕ್ಕಿನೊಳಿರ್ಪ ಶತರುದ್ರರಿವರುಗಳ
ಮೊತ್ತಕಧಿಪತಿ ವೀರಭದ್ರೇಂದ್ರ ನೀಲಮಯ
ಮೆತ್ತ ದೇಹನು ಜಟಾಮಕುಟೈಕ ಮುಖ ತ್ರಿಣೇತ್ರನು ದೀಪ್ತದಂಷ್ಟ್ರಧರನು
[1]ವೃತ್ತಖಡ್ಗಕ[1] ಫಲಕ ಚಾಪಬಾಣಗ[2]ಳಾನು
ವತ್ಯಧಿಕ[2] ಕರಚತುರ್ವಿಧನು ರೋಮಜ [3]ಸದ್ಗು
ಣೋತ್ತಮರ ದೊರೆ[3] ಬಂದ ನೀಲಕಂಠನ ನಿಖಿಳ ಸುರರೆರೆಯನೋಲಗಕ್ಕೆ ೮೪

ಅಂತಪ[4]ನ ಪಿಂದೆಸೆಯೊಳಿಪ ಪಿನಾಕಿ[4]ಸುಕಂಠ
[5]ರುಂ ತತಿಯು ಕೂಡೆ[5] ದಶಪದ್ಮ ದಶಪದ್ಮಗಳ
ಪಿಂತವರ ದೆಸೆಯಲ್ಲಿ ಮುಖಕರಾಳಂ ಕೇಶ[6]ಖರನು[6] ಜಿಹ್ವಾಕರಾಳಂ
ಮುಂತೆ ನೇತ್ರಕರಾಳನಂಘ್ರಿಯ ಕರಾಳಂ ಮ
ಹಂತಕಾಂತಕ ಶ್ರುತಿಕರಾಳ ಪ್ರಮಥರ ಬಳಸಿ
ಕಂತುಹರನಾಜ್ಞೆಯಿಂ ಪನ್ನೆರಳ್ [7]ಪನ್ನೆರಳ್ ಪರ್ವಗಣ ಸಹ ಬಂದರು[7] ೮೫

ಮುಂಡಮಾಲಾಧೀಶನೊಡನೆ ಈರಾರ್ಪದ್ಮ
ರುಂಡಮಾಲಾಧೀಶನೊಡನೆ ದ್ವಾದಶಪದ್ಮ
[8]ಲಂ[8]ಡಾದಿನಾಥನೊಡನರುವತ್ತು[9]ಗಣ ಪದ್ಮ[9]ಕುಲಿಶಪ್ರಮಥರೊಡನೆ
ಚಂಡಗಣ ದಶಸಂಖ್ಯೆ[10]ಯಿಂದ[10] ಓಲೈಸುತಿರೆ
ಮಂಡಿಸಿ [11]ಮ[11]ಯೂರದಿ ಕುಮಾರ ಪತ್ತುರ್ಬಿದದಿ
ಖಂಡಪರಶುವಿನೋಲ[12]ಗದಿ[12] ಯಾಮ್ಯದೆಶೆಯೊಳಗೆ ನಿಂತು ರಾಜಿಸುತಿರ್ಪರು ೮೬

ಪಡುವಣ ಸುದಿಗ್ಭಾಗದೋಲಗಂ ರಂಜಿಪುದು
ಮೃಡನ ಮೋಹದ ಪಾಶುಪತಬಾಣ ಭೀಕರಂ
ಬಡೆದ ತನುಕಾಂತಿ ಮುಖಶ್ಮಶ್ರು[13]ಕಚ[13] ಕೋಟೀರ [14]ಶೋಭೆ ಮಸ್ತಕ[14] ಸೌಂದರಂ
ವಿಡಿದಿರ್ಪ ಕರಚರಣ ವಸ್ತ್ರಭೂಷಣವನಾಂ
ತೊಡನೆ ನಾರಾಯಣ ಬ್ರಹ್ಮಾಸ್ತ್ರ ಮುಖ್ಯತತಿ
ಘುಡುಘುಡಿಸುತಿರ್ದ[15]ರಾ[15] ವಡಬನಂದದಿ ವಿಶ್ವದೊಡೆಯನ ಸಮಕ್ಷದಲ್ಲಿ ೮೭

---

1 ದತ್ತಖಡ್ಗಂ (ಚ) 2 ಳಾಂ । ತಧಿಕ (ಚ) 3 ಪ್ರಮ।ಥೋತ್ತಮರ್ ಸಹ (ಚ) 4 ರ ಪಿಂದಿಹ ಪಿನಾಕಿ ಕಾಲ (ಚ) 5 ಸಂತತವರೊಡನೆ (ಚ) 6 ಕರಾಳ (ಚ) 7 ಪದ್ಮಗಣ ಸಹ ಬಂದರುಮೆಯರಸನೆ (ಚ) 8 ಅಂ (ಚ) 9 ಪದ್ಮಗಣ (ಚ) 10 ಸಹಿತ (ಚ) 11 ತು (ಗ) 12 ಗಂ (ಚ) 13 ಜಡೆ (ಚ) 14 ನೇತ್ರನಾಸಿಕ (ಚ) 15 ವಾ (ಚ)

ದಂಡಧರ ದಂಡಪಾದಂ ದಂಡಬಾಹುಪ್ರ
ಚಂಡ ಚಂಡಾರ್ಚಿತಂ ಘೋರಪ್ರಚಂಡಕರ
ತಂಡ ತಂಡಂ ನೋಡೆ ನವಪದ್ಮ ನವಪದ್ಮ ನವಪದ್ಮದಿಂ ರಾಜಿಕುಂ
ಖಂಡಶಶಿಧರಚರಣ ಪರಬಲ ಪ್ರಮಥಬಲ
ಮಂಡಲನು ಕಲವಿಕರಣಂ ಬಲವಿಕರಣ ಘನ
ದಂಡಧರ ಸರ್ವಭೂತದ ಮನಮನೋನ್ಮನರೆನಿಪ್ಪ ಶರಣರ್ ಪಂದದೊಳು ೮೮

ಬಂದರತಿಶಯದಿಂದ [1]ತಮ್ಮ ತಮ್ಮ ವಿಲಾಸ
ದಿಂದ ಜಲ[1]ಜಾನನದ ಭ್ರಮರಾಳಕದ ಚೆಲ್ವ
ಕುಂದರದನದ ರುದ್ರಕನ್ನೆಯ[2]ರ ಕೂಡೆ[2] ದ್ವಾದಶಪ್ರಮಥಮುಖ್ಯಗಣರು
ಸಂದಗಣ ಲೆಕ್ಕದಿ ಪರಾರ್ಧಕೋಟಿಯ ಕೂಡಿ
ನಿಂದು ಸೇವಿಸೆ ಪಾಶಿ ದೆಶೆ[3]ಯೊಳಗವರು ಭಕ್ತ[3]
ಮಂದಾರ ಹಾರಾಮೃತಾಕಾರ ಹೀರಸನ್ನಿಭ ಹಸನನೊಪ್ಪಿರ್ದನು ೮೯

ಶ್ಯಾಮಲಾಂಗನು ಸುದರ್ಶನ ಪಾಂಚಜನ್ಯ ಬಲ
ಭೀಮನಂದಕ [4]ಗದಾವರ ಕರಚತುಷ್ಟಯಂ[4]
ತಾಮರಸಲೋಚನನು ಶ್ರೀವತ್ಸ ಕೌಸ್ತುಭೋರಸನು [5]ಕನಕಕೌಶೇಯನಂ[5]
ರಾಮಣೀಯಕ ಮಕರಕುಂಡಲನು ವನಮಾಲಿ
ಶ್ರೀಮಂತ ಸಿರಿಯಿನೆಯ ನಾಗಾಂತಕಹಯನು
ಪ್ರೇಮದಿಂ [6]ನವ[6]ಕೋಟಿ ನಾರಾಯಣಗರ್ಡಿಯಂಚ್ಯುತಂ ಬಂದನೀಶ ೯೦

ಬಂದು ವಂದಿಸಿ ನಿಂದು ಕರಕಮಲಗಳನು ಮುಗಿ
ದಿಂದುಧರನೋಲಗದಿ ಶಿವನ ಸಾಸಿರನಾಮ
[7]ವಂದದಿಂ[7] ಜಪಿಸುತಿಹ ಹರಿ ಮಹಾಮಾಯೇಶನವನ ಪಿಂಭಾಗದಲ್ಲಿ
ಬೃಂದಾರಕರ ಪತಿ ಹಿರಣ್ಮಯ ಶರೀರ ಸಾ
ನಂದದ ಮೊಗಂ ನಾಲ್ಕು ಭುಜ ಭಿದುರ ಕರಯುತಂ
ಸಂದ ಸಾಸಿರಗಣ್ಣ ಗಂಧಪುಷ್ಪಾದ್ಯಲಂಕೃತನಾಗಿ ನಡೆತಂದನು ೯೧

---

1 ತಂತಮ್ಮ ನಿಜಪುಳ್ಳಂದದಬು (ಚ) 2 ರು ಸಹಿತ (ಚ) 3 ಯ ಓಲಗಯಭವ (ಚ)
4 ಕೌಮೋದಕಿ ಕರಾನ್ವಿತನು (ಚ) 5 ಪೊಂಬಟ್ಟೆಧರನು (ಚ) 6 ದಶ (ಚ) 7 ದಂದಮಂ (ಚ)

ಸುರರಾದ್ಯ ಸಪ್ತಋಷಿಗಳುಂ ಸಿದ್ಧ ಚಾರಣರು
ವರ ನಿಲಿಂಪರು ವಿ[1]ಶ್ವದೇವ ತುಷಿತಾಭಿದರು[1]
ಭರದಿ ಭಾಸ್ವ[2]ರರ[2]ನಿಲ ಸಾಧ್ಯರ್ ಮಹಾರಾಜಕರು ರುದ್ರರೇಕಾದಶಂ
ಮರಳಿ ಗಂಧರ್ವ ಯಕ್ಷರು ಗುಹ್ಯಕರು ಕಿನ್ನ
ರರು ಕಿಂಪುರುಷರು ವಿದ್ಯಾಧರರ್ ಭೂತಚಯ
ತರತರಂಗೊಂಡಿಂದ್ರನೊಡನೈದಿದರ್ ಶಿವಾಧವನನೋಲೈಸಲೆಂದು ೯೨

ಈರಾರು ಪಗಲೊಡೆಯರಷ್ಟವಸುಗಳು ರಾಸಿ
ಈರಾರು ನಕ್ಷತ್ರ ಸಪ್ತವಿಂಶತಿ ಮುಖ್ಯ
[3]ರೋ[3]ರಾರು ಋಷಿಗಳುಂ ವಾಲಖಿಲ್ಯರ್ಷಷ್ಠಿಸಾಹಸ್ರ ಮನುವರ್ಗವು
ಈರೇಳು ದನುಜರರುವತ್ತಾರುಕೋಟಿ ಮದ
ವಾರಣಗಳಷ್ಟ ಪಂಚಕ ಧೇನು ಗರುಡಕುಲ
ಭೂರಿದೈವತೆ ಸಾರ್ವಭೌಮಾಘ ಹರನ ಶಂಕರನ ಸಭೆಗೈತಂದರು ೯೩

ವಾಸುಕಿ[4]ಯನಂತ ತಕ್ಷಕ ಶಂಖಪಾಲ ವಿಮ
ಲಾಶ್ವತರ ಕಂಬಳಾಂಕಂ ಪಿಂಗಳಂ[4] ನಾಗ
ಭಾಸುರ [5]ಸು[5]ಪದ್ಮ ಕರ್ಕೋಟಕಂ ಕ್ರೋಡಮಾಲಂ [6]ಪ[6]ತ್ರ ಕಾಲಸರ್ಪಂ
ಆಶೀವಿಷಂ ಧನಂಜಯ ಮುಖ್ಯ ವ್ಯಾಳಕುಲ
ರಾಶಿಗೊಡೆಯಂ ನಾಗಕನ್ನೆಯರೊಡನೆ ಶೇಷ
ಶೇಷಾಶಯನ ನಯನ ಕಂಜಚರಣನ ಸಭೆಯೊಳೊಂದೆಸೆಯೊಳಿರ್ದನೊಲವಿಂ ೯೪

ಪಿಂಗಾ[7]ನನಂ[7] ಪಿಂಗಕೇಶಂ ಪಿಶಂ[8]ಗಮುಖ[8]
ಪಿಂಗಳಾಕ್ಷಂ ಜಟಾಪಿಂಗಳ ಮಹಾಗ್ರಾಸ
ತುಂಗ ವಿಕ್ರಮ ನಾರಸಿಂಹಚೇಲನು ಗರುತ್ಮದ್ವಿಪಕ್ಷಚ್ಛೇದನಾ
ನಂಗಮದಕೋಳಾಹಳಂ ಭರ್ಗ ಭದ್ರಮಾ
ತಂಗಹನನಂ [9]ವ್ಯಾಘ್ರಹರ ತ್ರಿಶೂಲಾಯುಧಂ[9]
ಗಂಗಾವತಂಸನ[10]ನಗೇ[10]ಷ್ಟಫಲದಾಯಕನ ಮುಂಗಡೆಯೊಳೊಪ್ಪಿರ್ದರು ೯೫

---

1 ಶ್ವ ದೇವರ್ಕಳುಂ ತುಷಿತಾ (ಚ) 2 ರಾ (ಗ) 3 ಈ (ಚ) 4 ಯು ಶಂಖಪಾಲಾನಂತ ತಕ್ಷಕ ಕಂಬ ಲಾಶ್ವತ್ಥೈರಾವತಂ ಕಂಕವೀರಂ (ಚ) 5 ದ (ಚ) 6 ಪ್ರ (ಗ) 7 ಕ್ಷ (ಚ) 8 ಗಾಂಗ ನುತ (ಚ) 9 ಕಾಲಹನನ ಶೂಲಾಯುಧರ್ (ಚ) 10 ಗಣೇ (ಚ)

ಏಕಾ[1]ಕ್ಷ ದ್ವ್ಯಕ್ಷ ತ್ರಿಯಕ್ಷ ಚತುರಾಕ್ಷ ಪಂ
ಚಾಕ್ಷ್ಯಕ್ಷ ದೃಕ್ ಷಡಕ್ಷೋಗ್ರಾಕ್ಷ[1] ಧೂಮ್ರಾಕ್ಷ
ಭೂಕಾಕ ಪಾದಾಹಿಕಟಕಾಹಿ ಕಟಕ ಪಿಂಗಳ ಮಧುಕ ಮಧುಪಿಂಗಳ
ಲೋಕವಿಜಯಂ ಸದಾಜಾತ ಘರ್ಘರ ಘುಂಡ
ರೀಕ ಸುರಗಿರಿ ಪಾತ ಸೋಮಪಾತನ[2]ವಂ[2]ದಿ
ಶ್ರೀಕಾಯ ಶಂಭುಗೌರೀಶ ಶ್ರೀಕಂಠವಿಷ್ಟಪ ವಿಶಿಷ್ಟರ್ ಸೇವಿಸೆ ೯೬

ಶಿವ ಸದಾಶಿವ ಮಹೇಶ್ವರ ರುದ್ರರೀಶಾನ
ಭವಹರ ಮೃಡರ್ ಮೃತ್ಯುಹರಣ ಮಾಯಾಂತಕಂ
ಸವಿಶೇಷ [3]ದಾರುಕಂ ರೇಣುಕಂ[3] ಗೋಕರ್ಣ ಶಂಕುಕರ್ಣಂ ಕುಂದಕಂ
ಅವಿಕರ್ಣ ಗಜಕರ್ಣ [4]ದೀರ್ಘಘಂಟಾಕರ್ಣ[4]
ತವೆಯಶ್ವಕರ್ಣಶ್ಚಕರ್ಣ ಕೋಲಪಕರ್ಣ
ಅವಿರಳ ಸಹಸ್ರಕರ್ಣಂ ಲಂಬಕರ್ಣ ಲಂಬೋದರರು ಓಲೈಪರು ೯೭

ಲಂಬೋಷ್ಠ ಲಂಬನಾಸಿಕ ಲಂಬಮುಖ ಜಿಹ್ವ
ಲಂಬದಂತಂ ಲಂಬಬಾಹುಕರ ಲಂಬಾಕ್ಷ
ಲಂಬತನು ಸೂರ್ಯಖೇಟಕ ಸೋಮಖೇಟ ಸಾಗರ [5]ಶೋ[5]ಷಣಾಟ್ಟಹಾಸಂ
ಕುಂಭೋದರಂ ಕುಂಭಕರ್ಣ ಕುಂಭಾಂಬಕಂ
[6]ಕುಂಭಕಮುಖಂ ಕುಂಭಕುಕ್ಷಿಮುಖ[6] ಗಣವರರ್
ಶಂಭುಶಂಕರನ ಸುರಗಂಗಾವತಂಸನ ಮಹಾಸಭೆಯೊಳೊಪ್ಪಿರ್ದರು ೯೮

ಹರಿಯಿಂದೆ ಶೃಂಗಾರ ವೀರೇಶನಿಂ ವೀರ
ವರ ವೃಷಭನಿಂ ಕರುಣ ಭೃಂಗಿಯಿಂದಂ ಹಾಸ್ಯ
ಸುರರೆರೆಯನಿಂದ ಭೀಭ[7]ತ್ಸದ್ಭುತಂ ಕುಮಾರಕನಿಂದ[7] ಶಾಂತಿ ಶಶಿಯಿಂ
ಹರ ಪಾಶುಪತದಿಂದ ಭಯ ವಡಬನಯನಾದಿ
ಶರಣರಿಂ ರೌದ್ರ ನವರಸಮಯದಿ ಸಭೆಯೆಸೆಯ
ಲಶರೆ ನೋಡುತ ಹೆಕ್ಕಳಂಗೊಂಡು ಹಿಗ್ಗಿ ಸುಖರಸದೊಳಾಳ್ದ ಭವನಂದು ೯೯

---

1 ಕ್ಷರಂ ದ್ವಿಯಕ್ಷರ ತ್ರಿಯಕ್ಷರ ಪಂಚಕಾಕ್ಷರ ಷಡಕ್ಷರೋಗ್ರಾಕ್ಷ (ಚ) 2 ನಂ (ಚ) 3 ರೇಣುಕಂ ದಾರುಕಂ (ಚ) 4 ಘಂಟಾಕರ್ಣದ್ವಿಕರ್ಣ (ಚ) 5 ಪೋ (ಚ) 6 ಅಂಬಕ ಮುಖಂ ಕುಕ್ಷಿ ಮುಖ್ಯ (ಚ) 7 ತ್ಸೋದ್ಭವಂ ಕುಮಾರಕ ನಿಂದ (ಗ) ತ್ಸಾದ್ಭುತ ಭಗಾದಿತ್ಯ ಪೂಷರಿಂ (ಚ)

ಬಿಡ[1]ರ[1]ದೇತಕೆ ಬರಾಬರಿಯಂ ಇಟ್ಟಣಿಸದಿರಿ
ಎಡೆಯರಿದು ನಿಲ್ಲಿ ಕೆಲಸಾರಿ ಪಿಂದಕ್ಕಡಿಯ
ನಿಡುತಲಲ್ಲಲ್ಲಿ ನಿಂದಿರಿ ಮುಂದ ನೋಡಿ ಮುಗ್ಗದಿರಿ ಪೇಲೊಬ್ಬೊಬ್ಬರು
ಕೆಡೆಯದಿರಿ ಎಡೆಯೊಳತ್ತತ್ತ ಕುಳ್ಳಿರಿ ಬರಿದೆ
ಗಡಬಡಿಸದಿರಿ ಗದರಿಕೊಳ್ಳದಿರಿ ಮೂಲೋಕ
ದೊಡೆಯನ ಸಮಕ್ಷದಲ್ಲೆಂದು ದಡಿಕಾರರುಗಳಡಿಗಡಿಗೆ ಪೇಳುತಿಹರು ೧೦೦

ಕಾಳ ಕಂಕಾಳ ನೀಲಗ್ರೀವನತ್ಯಧಿಕ
ವ್ಯಾಳಾಸುರಾಂತಕಂ ಗರುಡಪಕ್ಷಚ್ಛೇದಿ
[2]ಕಾ[2]ಳಭೈರವ ರುದ್ರರಿರ್ಪರಜ ಹರಿ ಸುರಪ ಪನ್ನಗ ಗರುತ್ಮಂತರು
ಬಾಳವುಲುಹೇಕೆ ತೊಲಗತ್ತಲಿರಿ ದರ್ಪ ಬೇ
ಡಾಲೀಢ ವಿಷಮ ಮತ್ಸರವೇಕೆನುತ ನಂದಿ
ಕಾಳರೋರೋರ್ವರಂ ತೋರಿ ಪೊರೆದರ್ ಶಿವನ ಸಭೆಯಂ ಪೊಡ್ಡೋಲಗದೊಳು ೧೦೧

ಇಂತು ಸಭೆ ರಂಜಿಸಲಸಂತ ವಾದ್ಯಂ ಮೊಳಗೆ
ಮುಂತೆ ತುಂಬುರನಾರದರು ತುಂಬುರಿಯ ವೀಣೆ
ಯಾಂತು ಬಾರಿಸೆ ತಾರ ಗಂಭೀರ ರುದ್ರಸ್ವರದಿಂದ ಗಾಯಕರು ಪಾಡೆ
ಸಂತತ ಮೃದಂಗ ಮೃದುಂತರ [3]ಘಾತಮಂ[3] ನುಡಿಸೆ
ಕಂತುಮರ್ದನ ಭೃಂಗಿ ನವರಸಂ ತುಳುಕಲು ಸ
ಮಂತು ಲಿಂಗಾಂಗನಟನವ ನಟಿಸೆ ತೌರ್ಯತ್ರಿಕದಿ ರಾಜಿಸಿತ್ತೋಲಗಂ ೧೦೨

ಆ ಸಭೆಯ ನಡುವೆ ನಟಿಸುವ ಭೃಂಗಿ ನಟನಮಂ
ಮಾ ಸಹೋದರಖಂಡಮಂಡಿತ ನಗೇಂದ್ರಪತಿ
ವಾಸನುಮೆಯಾಣ್ಮನಾಣತಿಯಿಂದ ನಂದಿ ಪುರೆಯಿಡಲು ಸಮ್ಮುಖದೊಳಿರ್ದ
ಭಾಸುರಗಣಾನೀಕರೊಳಗಗ್ರಗಣ್ಯರಹ
ಲೇಸಾದ ಶ್ರುತಿ ಪುರಾಣಾಗಮ ಪ್ರಶಸ್ತರಹ
ಶಾಶ್ವತಾನಂದೇಷ್ಟಫಲದಾತರಾದ ಚತುರಾಚಾರ್ಯರಂ ನೋಡುತ ೧೦೩

---

1 ರ (ಚ) 2 ಛೀ (ಚ) 3 ಮತಂಗದಿ (ಚ)

ಆದಿವೃಷಭೇಶ್ವರಂ ಬಸವನಾಮವ ಧರಿಸಿ
ಮೇದಿನಿಗೆ ಸಕಲ ಪ್ರಮಥಾಳಿ ಸಹ ಪೋದಪಂ
ಮೋದದಿಂ ನೀವು ಮುನ್ನವೆ ಗಮಿಸಿ ವೀರಶೈವೋಪದೇಶವ ಮಾಡುತ
ಸಾದರದಿ ಧರೆಯು ಪಾವನವ ಮಾಡುವುದೆನ
ಲ್ಕಾ ದೇವ ನಿಮ್ಮ ಪದಮಂ ಗಣಂಗಳನುಳಿದು
[1]ಆ[1] ಧರೆಗೆ ನಾವೆಂತು ಪೋಪ ಪರಿ ದೇವ ದೇವನೆಯೆಂದರತಿಖೇದದಿಂ ೧೦೪

ವನವನುಳಿದಂಬುಜದ ತತಿಯಂತೆ ಚಂದ್ರಿಕೆಯ
ಅನುಭವಾಹ್ಲಾದವಿಲ್ಲದ ಚಕೋರದ ಪರಿಯೊ
ಳನವರತವಗಲದಿಹ ಜಕ್ಕವಕ್ಕಿಯ ತೆರದೊ[2]ಳಿನನ ಕಾಂತಿಯ ಮರ್ತ್ಯದೊಳ್[2]
ಜನಿಸೆಂಬುದ[3]ಲ್ತು ಯೋನಿಯೊಳೆನಲ್ಕವರ್ಗಳ್ಗೆ[3]
ವಿನಯದಿಂ ಪೇಳ್ದನಾನೆಲ್ಲೆಲ್ಲಿಯುಂ ಬಿಡದೆ
ಘನಸ್ನೇಹದಿಂದಿನನ ಕಿರಣ[4]ಗಳ್ ಬಿಡದಂತೆ ನಿಮ್ಮ ರಕ್ಷಿಸುವೆ[4] ಸತತಂ ೧೦೫

ನೋಡಿ ಬರಸೆಳೆದು ತಳ್ಕೈಸಿ ನಾಲ್ವರನು ಮುಂ
ಡಾಡಿ ಮುದ್ದಿಸಿ ಚಿದಾ[5]ಕಾರ[5]ಶರಧಿಯೊಳದ್ದಿ
ಕೂಡೆ ತನ್ನಯ ಕರುಣ ಪರಮಪ್ರಸಾದಮಂ ಮಾಡಿ ಸಂತಸಬಡಿಸುತ
ರೂಢಿಯೊಳು ನಿಮ್ಮ ನಿಮ್ಮ ಸ್ವಯಂಭುಗಳಲ್ಲಿ
ಮೂಡಿಯಲ್ಲಲ್ಲಿ ಮಹಿಮೆಯಂ[6]ನೆಯ್ದೆನುತ[6] ಚಂದ್ರ
ಚೂಡ ನಿರವಿಸೆ ರತ್ನಖಚಿತ ಪುಷ್ಪಕವಡರಿ ಶಿಷ್ಯರೊಡನೈತಂದರು ೧೦೬

ಜಯಜಯತು ಕಂಜಾತಜಾತ[7]ಮಸ್ತಕ[7] ಪಾತ್ರ
ಜಯಜಯತು ಕಂಜಾತನೇತ್ರ ವಂ[8]ದನ[8] ಪಾತ್ರ
ಜಯಜಯತು ಕಂಜಾತಸಖ ಕಂಜರಿಪು ವೀತಿಹೋತ್ರ ತ್ರಿನೇತ್ರಗಾತ್ರ
ಜಯಜಯತು ಕುಂಜರಾಜಿನಚೇಲ ದೃಗ್ನಿಟಿಲ
ಜಯಜಯತು ಮಂಜುಳಾಗಮ ನಿಗಮಸ್ತುತಿಲೋಲ
ಜಯಜಯತು ಜಯತೆಂದು ಚಂಡಕೀರ್ತಿಗಳು ಕೈಯೆತ್ತಿ ಪೊಗಳುತ್ತಿರ್ದರಂ ೧೦೭

---

1 ಶ್ರೀ (ಚ) 2 ಳರ್ಕನಮ್ಮುಮಂ ಮರ್ತ್ಯದಿ (ಚ) 3 ಲ್ತು ನರರಂತೆನಲ್ ಮಹಿಮರ್ಗೆ (ಚ) 4 ದಿ ಪದಪ್ರಿಯೊಲಿರ್ಪೆವಿದುಸತ್ಯ (ಚ) 5 ಮೃತದ (ಚ) 6 ಮೆರೆವುದೆನೆ (ಚ) 7 ಶಿರಕರ (ಚ) 8 ದಿತ (ಚ)

ಈ ಮಹಾಕೈಲಾಸವಿಸ್ತಾರಮಂ ಪರಿಸೆ
ಪ್ರೇಮಂದಿಂದೋದಿ ಪೇಳಿದೊಡೆ ಕೇಳಿದೊಡಖಿಳ
ಕಾಮಲಂಪಟಳ ಮೃತ್ಯು ದಾರಿದ್ರ್ಯ ರೋಗ ದುರ್ಗುಣ ಪಾಪವತಿಪಾತಕ
ಭೀಮಭೂತಪ್ರೇತ[1]ಗಣಮಪಸ್ಮಾರಗಣ
ಮಾ[1] ಬ್ರಹ್ಮ ವೇತಾಳತತಿ ತೊಲಗುವುದು ಭಯದೆ
ಸೋಮಾರ್ಧಶೇಖರಂ ಇಷ್ಟಲಿಂಗೇಶನಭಿಮತಫಲಂಗಳನೀವನು ೧೦೮

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲ ಸುಚಾರಿತ್ರಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ [2]ಕೇಳ್ವ ಶಿವಭಕ್ತಮಾಹೇಶ್ವರರ್ಗಿಷ್ಟಾರ್ಥವಹುದು ಸತ್ಯಂ[2] ೧೦೯

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದ ಪೌರಾಣಿಕಾಗಮಾದ್ಯಖಿಳ ವರ
ಮತ ಶಾಸ್ತ್ರ ಮಂಜುಳ ಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಪ್ರಥಮ
ದತಿ ನೂತ್ನವಹ ಕಾಂಡದೊಳ್ ನೋಡಲೆರಡನೆಯ ಸಂಧಿ ಸಂಪೂರ್ಣವಾಯ್ತು
೧೧೦

---

1 ಪೈಶಾಚಪಸ್ಮರಾಮಹಾ (ಚ) 2 ಕೇಳ್ದರಿಷ್ಟಾರ್ಥಮಪ್ಪುದಂ ದ್ವಿತೀಯ ಸಂಧಿ ಸುಜ್ಞಾನಬಂಧಿ (ಚ)

# ಮೂರನೆಯ ಸಂಧಿ

ಸೂಚನೆ *

ಶ್ರೀ ಸಾಂಬಶಿವ ನಿರೂಪಂದಾಳಿ ಭೂಗೋಳ
ಭಾಸುರದ ಖರ್ಜೂರ ಪರ್ವತಮುಖಾವಂರಾ
ವಾಸ ಘನಲೋಕಂಗಳಂ ನೋಡಂತಲ್ಲಿಂದ ಮೇರುಗಿರಿಯಂ ಸಾರ್ದರು

[1]ತೃ[1]ಷ್ಣಾದಿ ಗುಣದೂರ ಕೃಷ್ಣಕಂಧರಹಾರ
ಉಷ್ಣರೋಚಿಃಕೃಷ್ಣವರ್ತ್ಮ ವಿಧು[2]ನಯನ ಯಮಂ[2]
ಕೃಷ್ಣತನುಮೇಘರಘುಂರಘಾಪವನ ಕೃಷ್ಣತನಯಾದ್ರಿದಂಭೋಳಿರೂಪ
ಜಿಷ್ಣುತನಯಾದಿ ಸುರರ[3]ಕ್ಷಕ[3] ನುಹಾಜನಕ
ವಿಷ್ಣುರಥ ಜ್ಯೇಷ್ಠಸಾರಥಿ [4]ಪೌತ್ರ ವರ[4]ಜ್ಯೇಷ್ಠ
ಕೃಷ್ಣಾ[5]ರಿ ಸುರ[5]ಮದವಿಹಾರ ಜಯಜಯ ಚೆನ್ನಮಲ್ಲಿಕಾರ್ಜುನ ಗುರುವರ ೧

ವರ ಮಹಾಕೈಲಾಸದಿಂ ಬಂದು ಆಂಬೆಯೊಳಂ
ಗುರುರೂಪ ಧರಿಸಿಯತಿಶಯದಿಂದ ಶಿವಲಿಂಗ
ಕಿರದಷ್ಟಷೋಡಶಾರ್ಚನೆಗಳಂ ಮಾಡಿ ಶ್ರೀಗಿರಿಯಿಂದ ತಿರಿಗಿ ಬಳಿಕ
ಚಿರಬೋಧೆಯಂ ಕೇಳಿ ಚಿಕ್ಕಮಾ[6]ದಂಗಸುವ[6]
ಭರದಿಂದಲಿತ್ತು ವಿಧಿಯಂ ತುಳಿದು ವಿಳ್ನೂರು
ವರಂಪ ಧಾರುಣಿಯಲ್ಲಿ ಮೆರೆದ ಸಕಲೇಶನೀ ಕೃತಿಗೆ ಕೊಡು ನಿರ್ವಿಘ್ನಮಂ ೨

ಸಾವಧಾನದಿ ಪರ್ವತೇಶ ಸಾಷ್ಟಾಂಗದಿಂ
ದೋವಿ ವಂದಿಸಿ ಭಕ್ತಿಯಿಂ ಕರಗಳಂ ಮುಗಿದು
ಪಾವನಚರಿತ್ರೇಷ್ಟಫಲಪ್ರದಾಯಕ ಕಲ್ಪತರುವೆ ಶ್ರೀಗುರುವೆ ನಮಗೆ
[7]ಈ[7] ವಿಶ್ವನಾಥನಾಣತಿಯಿಂದ ನವರತ್ನ
ತೀವಿ ತೆತ್ತಿಸಿದ [8]ಪುಷ್ಪಕಮಡದಾರ್ಯರು[8]ಗ
ಳಾವಲ್ಲಿಗೈದಿದರದೆಲ್ಲೆಲ್ಲಿ ಬಂದರರಿವಂದದಿಂ ಪಾಲಿಸುವುದು ೩

---

1 ಕೃ (ಕಗ) 2 ತ್ರಯನಯನ (ಚ) 3 ಕ್ಷಿತ (ಚ) 4 ಪುತ್ರನನು (ಚ) 5 ಸುರಾ (ಚ) 6 ದಣ್ಣಗಸು (ಚ)
7 ಆ (ಚ) 8 ಮಾನಂಗಳಡರಿದ ಗುರು (ಚ)

* ಘನಲೋಕಂಗಳ ನಿರೀಕ್ಷಣ (ಗ)

ಕೇಳಿರೈ ಶರಣಸಂತಾನ ಚತುರಾಚಾರ್ಯ
ರಾಳಿ ಶಾಂಭವಲೋಕದಿಂದ ದ್ರುಹಿಣಾಂಡಾಂತ
ರಾಳದೊಳ್ ನಿಂದವರು ಲೋಕಗಳ ನೋಡುತಾನಂದದಿಂ ಬಪ್ಪ ಪರಿಯಂ
ಪೇಳುವೆಂ ಕೈಲಾಸ ಶಿವಲೋಕ ಪ್ರಮಥಪದ
[1]ಭಾಳ[1]ಲೋಚನ ರುದ್ರಲೋಕ ರಜತಾಚಲಂ
ಸ್ಥೂಲನಾಮುವನಾಂತು ಮುಕ್ತಿಲೋಕಕ್ಕೆ ಸಡಗರದಿಂದ ನಡೆತಂದರು ೪

ಎಳೆಯ ಮುತ್ತಿನ ಮೊಲ್ಲೆ ಮಲ್ಲಿಗೆಯ ಶಶಿಕಳೆಯ
ಥಳಥಳಿಪ ತನು ಜಟಾಮಕುಟ ಬಾಂದೊರೆ ಪೆರೆಯ
ಹೊಳೆವ ಮುಕ್ಕಣ್ಣ ಬಿಸಗೊರಲ ಪುಲಿಸಮ್ಮ ಶಿರಮಾಲೆ[2]ಯ ಚಿತಾಭಸ್ಮದ[2]
ಪಳನಲಿಪ ಗಿರಿಜೆಯೆಡವಂಕದೊ[3][ಳಗೊ][3]ಪ್ಪೆ ಹರಿ
ನಳಿನಸಂಭವ ಮುಖ್ಯರೋಲೈಸೆ ಹಿಮವಂತ
ನಳಿಯಂಗೆ ನಮಿಸಿ ಬೀಳ್ಕೊಂಡು ನಡೆದರ್ ಕಾಮಧೇನುಲೋಕವ ನೋಡುತ ೫

ಅಲ್ಲಿಂದಲುಮೆಯ ಲೋಕವ ಪೊಕ್ಕು ಪೂಜೆಗೊಂ
ಡಲ್ಲಿಂದ ಕೋಟಿಯೋಜನದಿಂದ ಕೆಳಗಣುಮೆ
ವಲ್ಲಭನ [4]ಭು[4]ವನವನು ಸಂಭ್ರಮ[5]ದಿ[5] ನೋಡುತದರಿಂದ ಮುಂ[6]ದಕ್ಕೆ ಕೇಳ[6]
ಮೆಲ್ಲನೆಯ್ತರುತಿರಲ್ ವೈಕುಂಠದಲ್ಲಿರ್ದ
ಪುಲ್ಲನಾಭಂ ತನಗೆ ಸರಿಯಾದ ದಶಕೋಟಿ
ಸಲ್ಲಲಿತ ನೀಲಮೆಯ್ಯವರು ಕೌಸ್ತುಭಧರರು ನವರತ್ನಮಕುಟಯುತರು ೬

[7]ಪರಿಶುದ್ಧ[7] ಶಂಖಚಕ್ರಾನ್ವಿತ ಚತುರ್ಭುಜರು
ವರ ಮಕರಕುಂಡಲರು ಪೀತಾಂಬರಾಂಕಿತರ್
ಸರಸಸಲ್ಲಾಪ ಸರ್ವಾಭರಣ ಗಂಧಪುಷ್ಪಾದ್ಯಲಂಕೃತರಾಗಿಹ
ಗರುಡವಾಹನ[8]ರಾದ[8] ಭಾಗವತರೊಡಗೊಂಡು
ಯರರೆ ಬಹುವಾದ್ಯ ನೃತ್ಯಂಗಳಿಂದಿದಿರ್ಗೊಂಡು
ಪುರಕೊಯ್ದು ಸಿಂಹವಿಷ್ಟರದಲ್ಲಿ ಕುಳ್ಳಿರಿಸಿ ಭಕ್ತಿಯಿಂದುಪಚರಿಸುತ ೭

---

1 ಫಾಲ (ಚ) 2 ಚಿತಾಭಸ್ಮಲೇಪ (ಚ) 3 ಳೊ (ಕಗ) 4 ಭ (ಕ) ಮನಗಭು (ಚ) 5 ದಿಂದ (ಚ)
6 ದೆ (ಚ) 7 ಧರಿಸಿರ್ಪ (ಚ) 8 ರುಸಹ (ಚ)

ಹರಹರ ಮಹಾದೇವ ಎನುತೆರಗಿ ಹರಿ ನಿಂದು
ಕರಗಳಂ ಮುಗಿದು ಸ್ವಾಮಿಗಳ ಬರವೇನೆನಲ್
ನಿರುತ ಭೂಪಾವನಾರ್ಥಂ ಗಮಿಪೆವೆನಲು ರೇಣುಕರೊಡನೆ ವಿಷ್ಣು ಪೇಳ್ದಂ
ಧರೆಯಲ್ಲಿ ಪ್ರಹ್ಲಾದ ಮುಖ್ಯರ್ಗೆ ಮೋಕ್ಷವಂ
ಇರದಿತ್ತನೆಂಬರಜ್ಞಾನ ಜಡದೇಹಿಗಳ್
ಭರದಿಯುದಱಿಂದ ಭಯಕಂಪನಂ ತೋರ್ಪುದದ ಪರಿಹರಿಸಿ ಕಾಯ್ವುದೆಂದಂ ೮

ಎನಲು ನಿನ್ನಯ ಕಂಪನವನು ಭೂಮಿಯೊ[1]ಳಗಾ
ವ[1]ನುನಯಂದಿ ನಿಲಿಸುವೆವೆನುತ್ತ ಕಳುಹಿಸಿಕೊಳು
ತ್ತನಘರಲ್ಲಿಂದ ನಾಲ್ಕೋಟಿ ಯೋಜನದಿಂದ ಕೆಳಗಣಂಬುಜಗರ್ಭನ
ಘನ ಸತ್ಯಲೋಕವಂ ಸಾರೆ ನಾಲ್ಮೊಗ ಬೇಗ
ಮನುಮುನೀಶ್ವರ ವೇದಪುರುಷ ನವಬ್ರಹ್ಮರುಗ
ಳನುವಿನಿಂ ಗಾಯತ್ರಿ ಸಾವಿತ್ರಿ ಸಹಿತ ನಡೆತಂದು ಮಂದಿಸಿದ[2]ನೊ[2]ಲವಿಂ ೯

ನಾನು ಕೃತಕೃತ್ಯನಾದೆನು ದೇವಯೆನುತ ಬಹು
ಮಾನದಿಂ ಕರೆದೊಯ್ದು ಗದ್ದುಗೆಯೊಳಿರಿಸಿಯಂಜ
ನಾನಾ ವಿಧಾನದಿಂದರ್ಚಿಸುತ ಸ್ತೋತ್ರಗಳ ಮಾಡೆಯಲ್ಲಿಂದ ಬ್ರಹ್ಮ
ಸೂನು ಸನಕಾದಿ ಮಾನಸಪುತ್ರರುಂಗಳಿರ್ಪ
ಧ್ಯಾನಯೋಗಸ್ಥಾನ ಮಹತಪೋಲೋಕಮಂ
ಜ್ಞಾನನಿಧಿಗಳ್ ಪೊಕ್ಕು ಪೂಜೆಗೊಳುತಲ್ಲಿಂದ ನಡೆದರಾನಂದದಿಂದ ೧೦

ಆ[3]ಲ್ಲಿಂ[3] ಜನರ್ಲೋಕಕ್ಕೈ[4]ದಿದರ್[4] ಪಿತೃದೇವ
ರೆಲ್ಲ ಸಾಷ್ಟಾಂಗ ದಂಡಪ್ರಣಾಮಂ ಮಾಡಿ
ಸಲ್ಲೀಲೆಯಿಂ ಸ್ತುತಿಸಿ ಸಕಲಕಿಲ್ಬಿಷನಾಶವೆಮಗೆಂದು ಕೊಂಡಾಡಲು
ಚಿಲ್ಲೀಲೆಯಿಂದೆ ಚತುರಾಚಾರ್ಯರುಂ ಮತ್ತೆ
ಮೆಲ್ಲನೆ ಮಹರ್ಲೋಕಕ್ಕೈ[5]ದಲ್ ಮೃಕಂಡುವಿನ[5]
ವಲ್ಲ[6]ಭನಹ ಸುತ್ ಮಾರ್ಕಂಡೇಯ [7]ವರ[7]ಮುನೀಶ್ವರ ಕೇಳುತತಿಹರುಷದಿಂ ೧೧

---

1 ಳ।ಗ (ಕಗ) 2 ರೊ (ಚ) 3 ಲ್ಲಿಂದ (ಚ) 4 ತರಲ್ (ಚ) 5 ದಾತಿರೆ ಮೃಕಂಡು (ಚ) 6 ಭೆಯ್ಯ ಪುತ್ರ (ಚ) 7 ಮಹಾ (ಚ)

ಆ ಸುರಜ್ಯೇಷ್ಠನಾತ್ಮಜ ಮರೀ[1]ಚ್ಯಾದಿಗಳ[1]
ಸಾಸಿರದ [2]ಬೃಂದಮೊ[2]ಡಗೊಂಡು ನಡೆತಂದಾಗ
ಲೇಸಿನಿಂ ಪೊಡಮಡುತ್ತತಿಶಯದ ವಾದ್ಯ ನಾಟ್ಯಗಳಿಂದ ಕರೆದೊಯ್ಯುತ
ಭಾಸುರದ ವಿಷ್ಟರಗಳಲ್ಲಿ [3]ತಾಂ ನೆಲೆ[3]ಗೊಳಿಸಿ
ದೋಷರಹಿತರ ಪಾದಪ್ರಕ್ಷಾಳನಂಗೆಯ್ದು
ಶೇಷಪದಜಲ[4]ವ ಮಂಡೆಯೊಳಿರಿಸಿ ಧನ್ಯ ನಾನೆಂದು ಸ್ತುತಿಸುತ್ತಿರ್ದನು[4] ೧೨

ನಾನು ನಿಮ್ಮಯ ಪಾದದರ್ಶನ ವಿಶೇಷದಿಂ
ಹೀನಜನನಸ್ಥಿತಿ ಮಹಾಪ್ರಳಯಮಂ ಗೆಲ್ದು
ಸಾನುರಾಗದಿ ನಿತ್ಯಪದವ ಪಡೆದನವರತ ಬಾಳ್ವೆನಿದು ಸತ್ಯಸತ್ಯಂ
ಭೂನಿಳಿಂ[5]ಪಾಢ್ಯ ಮಾರ್ಕಂಡೇಯ ನಮಿಸು[5]ತಿರೆ
ಭಾನುಕೋಟಿಪ್ರಕಾಶರ್ ಪರಸುತಲ್ಲಿಂದ
ನಾನಾ ವಿಚಿತ್ರತರ ಭೋಗಕಾಶ್ರಯಮಾದ ಸ್ವರ್ಗಕಭಿಮುಖವಾಗಲು ೧೩

ನಾಗೇಂದ್ರನಾಗಷ್ಟಶೋಭನಗಳಿಂ ಪುರವ
ನೇಕವಿಧದಿಂದಲಂಕರಿಸಿ ಗೀಷ್ಪತಿ ಸಹಿತ
ಬೇಕಾದ ಸಪ್ತಋಷಿಗಳು ನಿರ್ಜರಸ್ತೋಮ ಮೂವತ್ತುಮೂರ್ಕೋಟಿಯಿಂ
ರಾಕೇಂದುಮುಖಿ ರಂಭೆ ಮುಖ್ಯ ನೀರ್ವಣ್ಗಳಿಂ
ಲೋಕಕತಿಶಯಮಾದ ಹಯಗಜಗಳಿಂದೆ ಬಹು
ಜೋಕೆಯಿಂ ಸಿದ್ಧ[6]ವಿದ್ಯಾಧರ ಸುಸಾಧ್ಯರಿಂ[6]ದಿದಿರ್ವಂದು ಸುರರೆರೆಯನು ೧೪

ಬಂದು ಸಂಭ್ರಮದಿ ವಂದಿಸಿ ಕರಗಳಂ ಮುಗಿಯು
ಲಂದು ದುಂದುಭಿ ಭೇರಿ ಪಟಹ ಜರ್ಝರ ಢಕ್ಕೆ
[7]ಯಿಂ[7]ದ ಡಿಂಡಿಮ ಡಮರು ಮಡ್ಡುಮುಖ ಪಂಚವಾದ್ಯಂ ಮೊಳಗೆ ಸಪ್ತಸ್ವರಂ
ಗಂಧರ್ವ ಗಾನ[8]ರಸವೆಸೆಯೆ[8] ವಿದ್ಯಾಧರರ್
ಪೊಂದಿ ಮದ್ದಳೆ ತಾಳಗತಿ ಗಮಕದಿಂ ನುಡಿಸೆ
ಸಂದಣಿಸಿ ಸಾಹಸ್ರದೇವಗಣಿಕೆಯರು ನರ್ತಿಸಲು ಬಿಜಯಂಗೆಯ್ದರು ೧೫

---

1 ಚಿಯುಮುಖ್ಯ (ಚ) 2 ಮುನೀಶರೊ (ಚ) 3 ಮೂರ್ತಂ (ಚ) 4 ಗಳಂ ಮಂಡೆಯೊಳ್ ಧರಿಸಿ ಧನ್ಯನುಮೆಂದು ಸ್ತುತಿಸಿರ್ದಂ (ಚ) 5 ಪಶ್ರೇಷ್ಠ ಮಾರ್ಕಂಡ್ಯ ಸ್ತುತಿಸು (ಚ) 6 ಸಾಧ್ಯರು ವಿದ್ಯಾಧರರಿಂ (ಚ) 7 ಚಂ (ಚ) 8 ರಂಜಿಸಲು (ಚ)

ಅತಿಹರುಷದಿಂದಲಾಚಾರ್ಯರಂ ಕರೆದೊಯ್ದು
ವಿತತಾಗ್ರಸಿಂಹಪೀಠದೊಳು ಮೂರ್ತಗೊಳಿಸಿ
ಯತಿಶಯಂದ ಭಜನೆಗಳನೆಸಗಿ ಸ್ತೋತ್ರವ ಮಾಡಿ ಮುಕುಳಿತಕರಂಗಳಿಂದ
ಸತತ ಕೃಪೆಯಿಂದೆನ್ನ ಪೊರೆವುದೆನಲಿಂದ್ರನು
ನ್ನತ ಕರುಣದಿಂದ ಕಲ್ಮಷನಾಶನಂ ಮಾಡು .
ತತಿವೇಗದಿಂದೆ ನಡೆತಂದರಾಚಾರ್ಯ ಚಕ್ರೇಶ್ವರರ್ [1]ಸಾ[1]ನಂದರು ೧೬

ಸ್ವರ್ಲೋಕಮಂ ನೋಡಿಯಲ್ಲಿಂದ ಕೆಳಗಣ ಭು
ವರ್ಲೋಕದಲ್ಲಿರ್ಪ ಶಿಂಶುಮಾರ[2]ಸ್ಥಲವ[2]
ಚೆ[3]ಲ್ವಾ[3]ಲಿತರ್ ನೋಡಲೆಯ್ದಿದರ್ ಶಿಂಶುಮಾರನ ಲಕ್ಷ್ಮವೆಂತೆಂದಡೆ
ಮೂರ್ಲೋಕಮಂ ಪೊರೆವ ವೃಷಭನೆನಿಸುತ್ತಾ ಮ
ಹರ್ಲೋಕ ಚೇತನೇಶ್ವರನೆಯಾತನ ಶಿರಂ
ಭೂರ್ಲೋ[4]ಕ[4] ಸದ್ಧರ್ಮವೇ ಮೂರ್ಧ್ನಿ ಬ್ರಹ್ಮನೇಯುತ್ತರಾಹನು ಯಜ್ಞವೆ ೧೭

ಅಧರ ವಿಷ್ಣುವೆ ಹೃದಯಸಂವತ್ಸರಂ [5]ಭರ್ಗ[5]
ಪದವೆರಡು ಪೂರ್ವದಶ್ವಿನಿದೇವ [6]ತೋ[6]ಳತ್ರಿ
ಮುದದಿ ಮಧ್ಯಂ ಮಿತ್ರ ವರುಣರೇ[7]ಯಗ್ರಪದ ಪಾದದ್ವಯಂ[7] ಬಾಲದ
ಮೊದಲಗ್ನಿಯಿಂದ್ರ ಮಧ್ಯಂ ಪ್ರಜಾಪತಿ ಬಾಲ
ದದರಗ್ರವೃಭಯು ಬಾಲದ ತುದಿಗಳಾಗಿರ್ಪ
ಸದಮಳದ ಮೊಸಳೆಯಾಕಾರದಿಂ ಶಿಂಶುಮಾರಕನಿಂತು ಶೋಭಿಸುತಿಹಂ ೧೮

ಆತನ ಮಹಾಬಾಲ ಕೊನೆಯಲ್ಲಿ ಸ್ತಂಭಕದಿ
ಖ್ಯಾತವಹ ವಾಯುಸೂತ್ರಗಳ ಪಿಡಿವುತ [8]ತಿರೋ[8]
ಭೂತಂ ನವಗ್ರಹಗಳಂ ನಡಸುತಿರ್ಪ ಶಿವಭಕ್ತಿಯೊಳಗಧಿಕನೆಂದು
ಪೂತಾತ್ಮರಹ ಚತುರ್ವಿಧಗುರುಗಳಾಗ ತಾ
ವಾತನ ಸುಭಕ್ತಿಯಂ [9]ನೋಡಿ ಧ್ರುವಮಂಡಲವ[9]
ನೋತು ನೋಡುತ್ತ ನಡೆದರ್ ಮುಂದೆ ಸಪ್ತಋಷಿಮಂಡಲವ ನೋಳ್ಪ ಭರದಿಂ ೧೯

---

1 ಚಿದಾ (ಚ) 2 ಸುಚಕ್ರ (ಚ) 3 ಲ್ಲಾ (ಕಗ) 4 ಲ (ಜ) 5 ಗರ್ಭ (ಚ) 6 ತೆಗ (ಚ)
7 ಯುಪರ ಪಾದದ್ವಯಂಗಳು (ಚ) 8 ಶಾರೆ (ಚ) 9 ಕೈಕೊಂಡು ಧ್ರುವನಿಳಯ (ಚ)

ಅಲ್ಲಿಹ ಮರೀಚ್ಯತ್ರಿ ಮುಖ್ಯಋಷಿಗಳ್ ಬಂದು
ಸಲ್ಲೀಲೆಯಿಂ ನಮಸ್ಕರಿಸಲವರ್ಗಭಯವಿ
ತ್ತಲ್ಲಿಂದ ಶನಿಮಂಡಲವ ಕುರಿತು ಬರೆ ಮಂದಮಂದಹಸನದೊಳೆಯ್ದುತ
ಉಲ್ಲಾಸದಿಂದ ಪೊಡಮಟ್ಟು ಮಂಡಲಕೊಯ್ದು
ಬಲ್ಲಿದರ್ ಮೂಲೋಕಗುರುಗಳಂ ಭಜಿಸೆಯವ
ರ್ತಲ್ಲಣಿಸಬೇಡವೆಂದಿಷ್ಟಫಲಗಳ ಕೊಡುತ ನಡೆದರಾ ಚತುರರೊಲವಿಂ ೨೦

ಬಳಿಕ ಶನಿಮಂಡಲದೊಳಂಜನದ ಕಾಂತಿಯಿಂ
ಕಳಕಳಿಸುವನಲಧ್ವಜಚ್ಛವಿಯೆನಾಂ[1][ತಿರ್ಪ][1]
ನಳಿನಾರಿಗಳಿಗಾಪ್ತರರಿಗಳೆಯ್ತಂದು ಭಕ್ತಿಯೊಳು ವಂದಿಸಿ ಕರಗಳಂ
ಅಳಿಕದೊಳಗಿಟ್ಟು ಕೃತಕೃತ್ಯರಾದೆವು ಜನ್ಮ
ಫಳಿಲನೇ ಸಾಫಲ್ಯ ನಿಮ್ಮ ದರ್ಶನದೊಳಿಂ
ದಳಿಕಾಕ್ಷನಪರಾವತಾರ ಮೂರ್ತಿಗಳ ಸ್ತುತಿಸುತ್ತಿರಲ್ ನಡೆದರೊಲವಿಂ ೨೧

ಅದರಿಂದೆರಡುಲಕ್ಷಯೋಜನದ ಕೆಳಗೆ ತಾಂ
ವಿದಿತ ಕುಂದಾಭ[2]ನಾ[2] ಬೆಳ್ಳಿಯ ವಿಮಾನದೊಳ್
ಮುದದಿ ಬೆಳಗುವ ಶುಕ್ರಮಂಡಲವ ನೋಳ್ಪ ತವಕದೊಳೆಯ್ದಲವ ಶ್ರದ್ಧೆಯಿಂ
ಒದಗಿ ಬಂದಡ್ಡಬೀಳ್ದನ ಮನ್ನಿಸುತ್ತವರ್
ಯದಿತಿನಂದನರ ಗುರುಮಂಡಲವ ನೋಡುತ್ತ
ಸದಮಳಾಂಗರು ಸಚ್ಚಿದಾನಂದಮೂರ್ತಿಗಳ್ ನಡೆದರಲ್ಲಿಂದ ಮುಂದೆ ೨೨

ಅಂತವರ್ ಬರೆ ಕುಂಕುಮದ ಕಾಂತಿ ತನುರತ್ನ
ತಿಂತಿಣಿಸಿ ತೆತ್ತಿಸಿದ [3]ಪಚ್ಚೆಯೊಳು ಗಾಲಿಗಳ
ಮುಂತೆ[3] ನಾಲ್ಕುಂ ಕದ್ರುವರ್ಣದಶವಾಜಿಯಿಂ ಪರಿವ ಪುಷ್ಪಕದೊಳಿರ್ಪ
ಕಂತುಮಾವನ ಮಗನನಂತಸಂಭ್ರಮದಿಂದ
ಮುಂತಡ್ಡಗೆಡೆಯಲಂತವನ [4]ಪೊರೆಯುತ್ತಲು[4] ಸ
ಮಂತು ಬಿಜಯಂಗೆಯ್ದಿದರ್ ಕುಜನನಿಳಯಂದತ್ತಿಳಿಯಲಾನಂದದಿಂದ ೨೩

---

1 ತಿರುತಿರ್ಪ (ಕಗಚ) 2 ತನು (ಚ) 3 ವಿಮಾನ ಪಚ್ಚೆಯ ಗಾಲಿಂತು (ಚ) 4 ಮಂಡಲವೊಕ್ಕು (ಚ)

ಆರೆರಳ್ಕುದುರೆಗಳ ಕಟ್ಟಿರ್ಪ ಪವಳಿಸುಯ
ತೋರಗಾಲಿಗಳುಳ್ಳ ವಿದ್ರುಮವಿಮಾನದೊಳ್
ಚಾರುತನು ಕಾಂತಿ ವಿಸಟಂಬರಿದು ಪದ್ಮರಾಗದ ರತ್ನದೊಳ್ ಪೊಳೆಯಲು
ಸಾರಶಿವಯೋಗನಿದ್ರಾಮುದ್ರರಹ ಗುರುಗ
ಳಾ ರಮ್ಯಪಾದಪಂಕಜಗಳ್ಗೆ ನಮಿಸಲಂ
ಗಾರಕನ ಮಂಡಲವ ನೋಡುತ್ತ ನಡೆದರಾಚಾರ್ಯಶಿರರ[1]ತ್ನರಂದು[1] ೨೪

ಮಂಗಳನ ಕೆಳಗೆರಡುಲಕ್ಷಯೋಜನದಲ್ಲಿ
ಕಂಗೊಳಿಪ ಕುಂದ ಕುಸುಮದ ಬಿಳ್ಪ ಪಳಿವಮಳ
ತಿಂಗಳಿನ ತಂಪಿನ ವಿಮಾನ[2]ದಿ ಚತುಃಶಿರೋಲೀತಿಸಾಹಸ್ರನಾದ[2]
ತುಂಗಯೋಜನದ ಮಂಡಲ ವಿಶಾಲದ ತೊಳಗು
ವಂಗದರಿವುಗಳ ಮಂಡಳವ ನೋಡುತ್ತಧಿಕ
ಲಿಂಗಾಂಗಸಂಗಸಮರಸ ವೀರಶೈವರಾಚಾರ್ಯರುಗಳೆಯ್ತಂದರು ೨೫

ಬರೆ ಚಂದ್ರನಮೃತಮಾನಗ ಪೂಷೆ ತುಷ್ಟಿ ಪು
ಷ್ಟಿ ರತಿ ಧೃತಿ ಶಶಿ ಚಂದ್ರಿಕಾಕಾಂತಿಯಂ ಬಳಿ
ಕ್ಕುರು ಜ್ಯೋತ್ಸ್ನೆ ಶ್ರೀಯಂಗದೆಯು ಪೂರ್ಣೆಪೂರ್ಣಾಮೃತೆಯು ಕಾಮದಾಯಿನಿ ನಿಜ
ಭರಿತ ಷೋಡಶಕಲೆಗಳಿಂ ದಕ್ಷ ಕ್ರತು ವ[3]ಪು
ಸ್ಸುರರ[3]ಯಾದ್ರ್ರವ [4]ಮುಖ್ಯರಾದ ವಿಶ್ವೇದೇವ
ವರರಿಂದಲಗ್ನಿಷುಪದಾದಿಯಾತ್ರಾದಿ[4] ಪಿತೃದೇವರ್ಕಳಿಂದ ಕೂಡಿ ೨೬

ಧವಳದೇಹಂ ಸಮಸ್ತೌಷಧೀಶಂ ತಮಿ
ನಾವನು ಬೆಳ್ಳಿಯ ತೇರನಿಳಿದು ಬದ್ಧಾಂಜಲಿಯೊ
ಳಖಿ[5]ರ[5]ತಂ ಕೂಡೆ ನಡೆತಂದಡ್ಡಬಿಳ್ದು ಮಂಡಲಕೊಯ್ದು ಭಕ್ತಿಯಿಂದ
ಸವಿನಯದೊಳುಪಚರಿಸಿ ಪಡೆದು ಕರುಣವ ಬಿಡದೆ
ಯವಿರತಂ ಕೃಪೆಯಿಪ್ಪುದೆನಲವನ ಮನ್ನಿಸುತೆ
ಸವಿಶೇಷದಿಂದ ನಡೆತಂದರಲ್ಲಿಂದ[6]ಲಾ ಸವಿತೃ[6]ಮಂಡಲವ ಕುರಿತು ೨೭

---

1 ತ್ನಂಗಳು (ಚ) 2 ವಡರುವ ಶತಶೀತಿ ಪಂಚಶತ ಸಂಖ್ಯೆಯುಳ್ಳ (ಚ) 3 ಸು।ಸ್ಫುರಿತ (ಕಗ)
4 ಸತ್ಯಕಾಮಕಾಲಂಧುನಿ।ಪುರೂರವ ಮುಖ್ಯ ವಿಶ್ವೇದೇವತೆಯರಗ್ನಿಷ್ವತ್ತ (ಚ) 5 ಗ (ಚ) 6 ವರ್ ಸವಿತು (ಚ)

ಭೃಗು ಭರದ್ವಾಜಾಂಗಿರಸ ವಶಿಷ್ಠಾತ್ರಿ ಪುಲ
ಹ ಘನ ಗೌತಮ ಕಶ್ಯಪಂ ಕ್ರತು ಪುಲಸ್ತ್ಯಮುನಿ
ವಿಗೆ [1]ಗಾಧಿಪುತ್ರ[1] ಜಮದಗ್ನಿ ದ್ವಾದಶ ಋಷಿಗಳಿಂ ದ್ವಾದಶಾದಿತ್ಯರುಂ
ಬಗೆಬಗೆಯ ವಾದ್ಯ ಘೋಷಣೆಗಳಿಂದಿದಿ[2]ರುವಂ
ದೊಗುತ[2] ಬಗಸೆಗಳಲ್ಲಿ ಪುಷ್ಪಾಂಜಲಿಯನೆಸಗಿ
ಮೃಗಧರಾಭರಣರಡಿಗಳ್ಗೆ ದಂಡಪ್ರಣಾಮವ ಮಾಡಿಯತಿಶಯದೊಳು ೨೮

ಮಂಡಲಕ್ಕೊಯ್ದವರ್ ಭಯಭಕ್ತಿಯಿಂ ಯಜಿಸಿ
ತಂಡ ತಂಡದಿ ನಿಂದು ಸ್ತೋತ್ರಂಗಳಂ ಮಾಡೆ
[3]ಪೌಂಡರೀಕಾಸ್ತರಣರವರ ಬಳಿಯಿಂ[3] ನಡೆದು ಭುವರ್ಲೋಕವಾಸಿಗಳಪ
ಚಂಡ ಯೇಕಾದಶ ಮಹಾರುದ್ರರುಂ ಬಂದು
ದಿಂಡುಗೆಡೆವೃತ್ತ ಸ್ತುತಿಗ[4]ಳೆಸಗಲವಗ್ಗೆ[4]ದೆ ಹೃ
ತ್ಪುಂಡರೀಕದೊಳಿರ್ಪ ನಿಜಧ್ಯಾನಮಂ ಮರೆಯದಿರಿಯೆಂದೊಡವರು ನಲಿದು ೨೯

ನಡೆತರಲ್ ಮುಂದೆ ದಶಸಾಹಸ್ರಯೋಜನದೊ
ಳಡಿಯಣಂಬುಜಗರ್ಭಸುತ ದಕ್ಷಬ್ರಹ್ಮನಿಹ
ಜಡಧರಾಸ್ಥಾನವನು [5]ಶಿಕ್ಷಿ[5]ಸುತ್ತದರಿಂದ ಮುಂದೆ[6]ಯಾನಂದದಿಂದ[6]
ಮೃಡನ ಮೋಹದ ಗಣೇಶ್ವರರು ಸಹ ರಾಜಿಸುವ
ಬಡಗಿನಭ್ರಸ್ಥಾನ ಪತ್ತನವ ನೋಡುತ್ತ
ನಡೆದರಲ್ಲಿಂ ಕೆಳಗೆ ಪತ್ತುಸಾಸಿರ ಗಾವುದಳತೆಯ ವಿಯದ್ಗಂಗೆಗೆ ೩೦

ದಶಲಕ್ಷಯೋಜನದ ವಿಸ್ತಾರದಿಂದಲತಿ
ಮಿಸುಪ ಸೌವರ್ಣ ಪಂಕಜಪತ್ರ ಕಮಲದಿಂ
ದೆಸೆವ ಕಲ್ಹಾರ ಕುಮುದಾವಳಿಯ ಚಿತ್ರವರ್ಣದ ಕುಸುಮತತಿಗಳಿಂದ
ಪೊಸತಲಂಕಾರದಿ ನಿಳಿಂಪ ಮನು ಮುನಿ ಸಿದ್ಧ
ರಸಿಕ ಗಂಧರ್ವ ವಿದ್ಯಾಧರಾದಿತ್ಯ ಘನ
ತುಷಿತರುಂ ವಿಶ್ವದೇವತೆಗಳ್ಗೆ ಸುರಪ ಮುಖ್ಯರ್ಗೆ ಬಿಡದಾವಾಗಲುಂ ೩೧

---

1 ವಿಶ್ವಮಿತ್ರ (ಚ) 2 ರ್ವಂದು।ಸೊಗಸು (ಚ) 3 ಪುಂಡರೀಕಾಪ್ತರಂ ಸಲಹಿಯಲ್ಲಿಂದ (ಚ)
4 ಳಂ ಎಸಗಲರ್ವಗ್ಗೆ (ಚ) 5 ನೀಕ್ಷಿ (ಚ) 6 ನಂದೀಶ ತಾನುಂ (ಚ)

ತೆನ್ನ ದರ್ಶನಸ್ಪರ್ಶನ ಸ್ನಾನಪಾನಾದಿಯಿಂ
ದುನ್ನತೋನ್ನತ ಪರಮಪಾವನತ್ವವನಿತ್ತು
ಸನ್ಮ[1]ತಂ[1] ಪೊರೆವಮಳ ಸುರತರಂಗಿಣಿಯೊಳೀಶ್ವರ ಪೂಜೆಯಂ ಮಾಡುತ
ಪನ್ನಗಾರಿಯ ಪಾವನಾಧಾರ[2]ಮೋಘಪದ[2]
ಮನ್ನಿರೀಕ್ಷಿಸಿದರು ಸಹಸ್ರಯೋಜನದ ಶತ
ಮನ್ಮ್ಯವಿನ ಗಜಮಿರ್ಪ ಧಾರಾಧರಸ್ಥಾನಮಂ ನೋಡಿ ನಡೆತಂದರು ೩೨

ಬತ್ತೀಸಕ್ಕೈದಾಂತ ಘನದೇವತಾಸ್ಥಾನ
ದತ್ತಮಾತೃಕೆಯರುಂ ಯೋಗಿಣಿಯರಿರೆ ಮೇಘ
ಪತ್ತನಂ ಸ್ಥೂಲಕಾಯದ [3]ಘನಗಳಿಂದ ವಿದ್ಯಾಧರಾದಿಗಳಿಂದಲಃ[3]
ಮತ್ತೆ ವಿಸ್ತಾರದ ವಿಚಿತ್ರ ಗ್ರಹಂಗಳಿ
ರ್ಪುತ್ತಮ ಬಲಾಹಕಸ್ಥಲರಚನೆಗಳನೇಕ
ಚಿತ್ರಮೆನೆ ನೋಡಿ ಭೂಲೋಕಮಂ ಸಾರ್ದರಾನಂದಶರನಿಧಿಲೋಲರು ೩೩

ತರತರಂಗೊಂಡು ರಾಜಿಪ ಭುವನದೊಳ್ ನೋಡೆ
ಯುರರೆ ಯೀರೇಳ್ಭುವನಪತಿಶಯಂಗಳವರೊಳಗೆ
ನಿರುತ ಭೂಲೋಕ ಮಿಗಿಲೆಂದು [4]ಬ್ರಹ್ಮೋಪೇಂದ್ರ ಶಕ್ರಾದಿ[4] ಮನುಮುನಿಗಳು
ಭರದಿಂದ ಜಪತಪವನೆಸಗಿ ಇಷ್ಟಾರ್ಥಂಗ
ಳಿರದೆ ಪಡೆವರ್ ಬಿಡದೆಯುದರ ಮಧ್ಯದಿ ತೋರ್ಪ
ಶರನಿಧಿಯ[5]ನಭಿವ[5]ರ್ಣನಮದೆಂತೆನಲ್ ಪೇಳ್ವೆನಾನಂದರಸಮುದಿ[6]ಸಲು[6] ೩೪

ಜೀವನ[7]ಜ[7] ರಂಗತ್ತರಂಗ ಕಲ್ಲೋಲ ಫೇ
ನಾವರ್ತ ಪುಟಭೇದ ಜಲನಿರ್ಗ[8]ಮೋತ್ತೀ[8]ರ
[9]ಕಾವಾರಕಾಂತರಿಪದಿಂದ ನಾನಾಭೇದಮಾದ[9] ಶಕುಲಾರ್ಭಕಗಳಿಂ
ತೀಮಿರ್ಪ ಶಿಂಶುಮಾರೋದ್ರ ಕಚ್ಛಪ [10]ಕರ್ಕ
ಟಾವರ್ತ ಮಚ್ಛಂಕದಿಂದ ಮುಕ್ತಾಫಲ
ಕ್ಕಾವಾಸಮಾದ ಬಹುವಿಧ ಶುಕ್ತಿಜಾಲ[10]ದಿಂದೊಪ್ಪಿತ್ತು ನೀರಾಕರಂ ೩೫

---

1 ತದಿ (ಚ) 2 ಮೇಘಸ್ಥಲ (ಚ) 3 ಜೀಮೂತರಹ ವಿದ್ಯಾಧರ ಗಂಧರ್ವರುಂ (ಚ) 4 ಬ್ರಹ್ಮೇಂದ್ರೋಪೇಂದ್ರಾದ್ಯಮರ (ಚ) 5 ವ (ಚ) 6 ಸುಮಂತೆ (ಚ) 7 ದಿ (ಚ) 8 ಮಾತೀ (ಚ) 9 ಮಾವಾರಮಂತರಿಪುವಿಂದ ತೋಯೋದ್ಭಿತಂ ಮತ್ಸ್ಯ (ಚ) 10 ಕುಳೀರ।ಮಾ ವರಾಹ ಕುಂಭೀರಗೋಧಿಕಂ ಕಿಂಚುಳಿಕ।ದೇವ ಶಂಕಂ ಶುಕ್ತಿಭೈತ್ರಗುಣವೃಕ್ಷ (ಚ)

*ಪಲತೆರದ ಬಣ್ಣಗಳನೊಳಕೊಂಡ ರನ್ನಗಳ
ಬೆಳಕಿನಿಂ ಕೂಡಿ ತನ್ನಯ ಗರ್ಭದೊಳ್ ಚಲಿಪ
ಜಲವೆ ಬೋಳೆಯರ ನಿಟ್ಟೆಸಳುಗಣ್ಗಳ ನೋಟಕಿದು ಚಿತ್ರಪಟಮೆಂದೆನೆ
ತೊಳಪನಾಂತರೆ ಕೋವಿದರ ಬುದ್ಧಿಗಿದು ನೋಡ
ಲಿಳೆಯೆಂಬದೇವಿ ಜಘನಪ್ರದೇಶದೊಳುಟ್ಟ
ಲಲಿತಪಟಮೆಂದು ತೋರುತ್ತಿರಲ್ ವಾರಿನಿಧಿಯಿಂ ರಾಜಿಪಂ ೩೬

ಮುನ್ನ ಪಂಕಜಗರ್ಭನಂಡರಚನೆಗಳ ಮಾ
ಳ್ಪುನ್ನತದ ಕಾಲದೊಳ್ ಪದಿನಾಲ್ಕು ಭುವನಕ್ಕೆ
ನನ್ನಿಯಿಂ ಮಿಗಿಲೆನಿಪ ಭೂಲೋಕವದರ ಮಧ್ಯದಿ ಲಿಂಗವೆಂಬಂದದಿಂ
ಸೊನ್ನೆವಟ್ಟಂ ನಿಲಿಸಿ ಸ್ವರ್ಣಪೀಠ[1]ಮಿದೆ[1]ನಲ್
[2]ನನ್ನಿಯಿಂ[2] ವಿಶ್ವಂಭ[3]ರೆಯ ರಚಿಸೆ ಮೇಣದರ[3]
ಸನ್ನುತಾ[4]ವರಣ[4] ನೀಲೋತ್ಪಲ ಸುಮಾಲಿಕೆಯೊಲೆಸೆದುದಾ ರತ್ನಾಕರಂ ೩೭

ಗಂಗಾತರಂಗಿ[5]ಣಿಯ ಜಲವೆ ಜಲವಾಗಿರಲ್[5]
ತುಂಗ[6]ಫೇನವೆ ಚಂದನದ ಪಿಂಡವಾಗಿರಲ್
ಮಂಗಳಾಕ್ಷತೆಗಳೇ ಪೊಸಮುತ್ತಿನೊಟ್ಟಿಲಾಗಿರಲು ದ್ರಾಕ್ಷಾಫಲಗಳ್[6]
ಹಿಂಗದುಪಹಾರ[7]ಮಾಗಿರಲು ವಿದ್ರುಮಲತೆಗ
ಳಂಗವೇ ತಾಂಬೂಲವಾಗಿರುತ್ತಿರೆ ಮಹಾ
ಲಿಂಗದಂದದಿ ಸಕಲನದಿಗಳಿಂ ನದಗಳಿಂ ಶೋಭಿಪಂ ವಾರಾಕರಂ[7] ೩೮

ವಾರಿಯೆ ಶರೀರ ಗಂಭೀರಮೇ ಮುಖಮಮಳ
ಸಾ[8]ರಾಂಬು[8] ಸಂಭ್ರಮಂ ಮಸ್ತಕಂ ಶೈವಾಲ
ಚಾರುಕೇಶಂ ಶುಭ್ರವರ್ಣಮೆ ಶುಚಿವಸ್ತ್ರ[9]ಮಾಗೆ[9] ಭಸ್ಮೋದ್ಧೂಳನಂ
ಭೂರಿ ಡಿಂಡೀರಂ ಮಹೋಲ್ಲೋಲಮೆ ತ್ರಿಪುಂಡ್ರ
[10]ಚಾರುಬುದ್ಬುದಗಳೇ[10] ಸ್ಫಟಿಕಮಣಿ [11]ಸರಿತ್ಪತಿಯು
ವೀರಶೈವನ ಪಾಂಗಿನಿಂದಿರ್ಪನಾತ್ಮಗತಮೇ ನಾಕಲಿಂಗಮಾಗೆ[11] ೩೯

---

1 ವುಮೆ (ಚ) 2 ತನ್ನಿಜದಿ (ಚ) 3 ರವ ರಚಿಸುತದಕಧಿಕ (ಚ) 4 ವೃತದಿ (ಚ) 5 ಣಿ ಜಲದಿ ಕಣಗಣ ಪೇನ (ಚ) 6 ಶ್ರೀಖಂಡ ಪಿಂಡಾಕ್ಷತಂಗಳ್ ದೀಪ।ಸಂಗ ವಿದ್ರುಮಲತಾಕೀರ್ಣ ಜಲಧೂಮ್ನವೆ ಧೂಪ ದ್ರಾಕ್ಷಾದಿಫಲಮೇ (ಚ) 7 ಬಿಂಬ ಪರಾಗ ತಾಂಬೂಲ । ಮಂಗಳಪ್ರಾಗ್ಭೂತ ಕಲ್ಲೋಲನಿನದದಿಂ। ಲಿಂಗಕ್ಷೇತ್ರದವೇಷ್ಮಪಾಂಗಿನಿಂ ಸರಿತ್ಪತಿ ಮಹಾಪೂಜ್ಯದಿಂದಿರ್ಪುದು (ಚ) 8 ರಂಭ (ಚ) 9 ಮಮರೆ (ಚ) 10 ನೀಲ ಸ್ಫೋಟಿಕಸ್ಥೂಲ (ಚ) ? 11 ಧಾರಣದೊ।ಳಾರಮ್ಯ ಕಂಕಣಂ ಧವಳಜಪಮಾಲೆ ಮಹ ಶೈವನಂದದಿ ತೋರ್ಪುದು (ಚ)

*ಚ ಪ್ರತಿಯಲ್ಲಿ ೩೬ ನೆಯ ಪದ್ಯಕ್ಕೆ ಸಂವಾದಿಯಾಗಿ ಬಂದಿರುವ ಪದ್ಯ : ಆ ಪಾರ್ಥಿಯನ್ನಯನ್ನಂಶ ವಹ ಪ್ರಾಡಿನಿಗ!ಳಾವಾಗಳುನ್ನತಭಿಮಾನದಿಂದೊಳಕೊಂಡು । ಓವೃತ್ತ ಮತ್ತಖಿಳಜನದ ಲಜ್ಜಾಭಿ ಮಾನಕ್ಕೆ ಕಾರಣವಾಗಿಹ॥ ಭೂವನಿತೆಯನವರತ ಉಟ್ಟುರಾಜಿಪ ವಸನ। ವೋ ವಿವಿಧರತ್ನಭೂಷಣ ಳುಡು ತೊಡಿಸಲದು । ಭಾವಿಸಲ್ ಮಿಸುನಿವಣ್ಣಬಲೆ ನೀಲಾಂಬರವನುಟ್ಟಳಿನೆ ರಾಜಿಸುವುದು (ಚ)

ಎಳೆವರೆಯುದಣುಗನೆ[1]ನ್ನಯು[1] ಮಗಳ ಗಂಡನಂ
ಅಳಿಯನಗ್ರಜನ ವಂಶಾವಳಿಯನೆಲ್ಲ[2]ವಂ[2]
ಘಳಿಲನೇ ನುಂಗಿ ಕಡೆವುತ ಕಟ್ಟಿ ಸುಟ್ಟಹಿಯು ಬಿಡೆನೆನುತ್ತಿಳಿದಂದದಿಂ
ಇಳಿದು ಪಾತಾಳಪರಿಯಂತ ಭೇದಿಸಿ ಸರ್ಪ
ಕುಲ[3]ಗಳಂ[3] ಪಿಡಿತಂದು ಸೆರೆಯಿಟ್ಟ ವಿಷದಂತ
ಪಳಿಯಿಯದಂತುದು[4]ರೆಗುಟ್ಟಿದನೆನಲ್ ಸಿಂಧುವೊಪ್ಪಿತ್ತು ಶೀಕರಗಳಿಂದ[4] ೪೦

ಶಿವನು ಜೀವನವೆನ್ನ ಜೀವನದೊಳೊಂದಿತ್ತು
ಭುವನಜಾಂಬಕನರಸಿಯೆನ್ನೊಳಗೆ ಕೂಡಿದಳು
ಭುವನೇಶನಪುಲವಧು ಸರಸರಸದಿಂ ಸೋಲ್ತು ನುಡಿಯೊಳಡಗಿಹಳೆನ್ನಯ
ಕುವಲಯಾರಿಯ ಕನ್ಯೆ ರೇವತೀಶ್ವರಗಂಜಿ
ಭುವನದೊಳಗೀತಗೆಣೆಯಿಲ್ಲೆಂದು ಮರೆಹೊಕ್ಕ
ಳವಿರತಂ ದೊರೆಗಿರಿಗಳಿದಿರಿಲ್ಲವೆಂದು ಘರ್ಜಿಸುತ್ತಿರ್ದುದಪ್ಪಂ ವಾರ್ಧಿ ೪೧

ಎನ್ನ ಮಗಳಖಿಳ ಗೀರ್ವಾಣರ್ಗೆಯಾಶ್ರಯಂ
ಎನ್ನ ಮಗಳಖಿಳ ಲೋಕಕ್ಕೆ ಮಾತೆಯು ಸತ್ಯ
ಎನ್ನ ಮಗಳಿಂದೆನ್ನಳಿಯನದಟತ್ರಿಪುರಮಂ ಗೆಲ್ದ ತ್ರಿಪುರಾಂತಕಸಖಿಂ
ಎನ್ನ ಜಾಮಾತನಗ್ರಜ ದೇವತಾರಾಜ
ನೆನ್ನ ಜೀವನ ಚರಾಚರ[5]ಗಣಕ್ಕಾಧಾರ[5]
ವೆನ್ನ ಸಂಪದಕೆ ಪಡಿಯಿಲ್ಲೆಂಬ [6]ನಗೆಯು ಬಣ್ಣದೊಳು[6]ದಧಿ ರಾಜಿ[7]ಸಿದಂ[7]ದು ೪೨

ತೆರೆಗಳಿಂ ಶೃಂಗಾರ ಬೆನ್ನ ಬಿಳ್ದ[8]ವನಿಯೊಂ[8]
ದಿರವಿನಿಂ ವೀರಕರುಣಂ ಜೀವರ[9]ಕ್ಷೆಯಿಂ[9]
ಕರತಳಸುಚುಳುಕಿ[10]ತದೆ ಹಾಸ್ಯ ಕುಂಭಜನಕಲ್ಲೋಲಂಗಳಿಂದ ರೌದ್ರ[10]
[11]ಶರದಿಂದಭಯರಾಘವನ ಪೂತಿಗಂಧವನ
ಚರರಿಂದ[11] ಭೀಭತ್ಸ ನವ[12]ರತ್ನ[12] ತತಿಗಳಿಂ
[13]ದರೆಯದ್ಭುತಂ[13] ಶಾಂತಿ ಗಂಗೆಯಿಂ[14]ದಿಂತು[14] ನವರಸಭರಿತ[15]ವಾದುದಬ್ಧಿ[15] ೪೩

---

1 ನ್ನಂ (ಚ) 2 ರಂ (ಚ) 3 ವಳಿಯ (ಚ) 4 ಗುರ್ಟಿ; ಮೆರೆವೋಲಗದದಿಂದೊಪ್ಪಿತ್ತು ಸಿಂಧು ಸಾಂದ್ರ (ಚ) 5 ಮುನಿಸುಹೃದ್ರಾಜ (ಚ) 6 ಹಸನ ದೀಧಿತಿಯೊಳು (ಚ) 7 ಸಾವ (ಚ) 8 ರನೀಯ (ಚ) 9 ಕ್ಷಣದಿ (ಚ) 10 ತಂ ಹಾಸ್ಯಕಲ್ಲೋಲ ತಾಟಿತಶೈಲಪ್ರೋದ್ಭೂತದಿಂ (ಚ) 11 ಚಿರರೌದ್ರ ಭಯ ಘಾತದಿಂ ತರಂಗಾದಿಗುಣ।ವಿರಹಿತಂ (ಚ) 12 ವಸ್ತು (ಚ) 13 ದರರೆಯದ್ಭುತ (ಚ) 14 ನೋಡೆ (ಚ) 15 ರರಥಿರಾಜಂ (ಚ)

ಭೈಕ್ಷಯಾಚಕನಂತೆ ಪಾತ್ರದಿಂದಂ ಮಹಾ
ಲಕ್ಷಾಧಿಪತಿಯಂತೆ ನವರತ್ನತತಿಗಳಿಂ
[1]ದೀ[1]ಕ್ಷಿಸಲ್ಕುಂಭಕರ್ತೃವಿನಂತೆ ಜಲಕುಂಭಿಗಣದಿಂದ ಲಕ್ಷ್ಮಿಯಿಂ
ಪಕ್ಷಿಪಯನಂತೆ ಪಾಠೀನಕೇತನದಿಂದ
[2]ಇಕ್ಷುಚಾಪನ ತೆರದಿ ಮಕರಾದಿರಾಶಿಯಿಂ
ದೀಕ್ಷಿಸೆ ಭುವರ್ಲೋಕದಂತೆ ಶರನಿಧಿ ನೋಳ್ಪ ಜನರಿಗರಿದಾಗಿರುವನು[2] ೪೪

ಇಂತು ನಾನಾವಿಭವದಿಂ ಮೆರೆವ ಶರಧಿಯ
ಭ್ಯಂತರಾಳದ ಹೇಮಕೂಟನಗ ನೀಲಗಿರಿ
ಕಂತುಪಿತ ಬ್ರಹ್ಮರಂತೆಸೆಯಲಿಡಬಲದೊಳಾವಿರ್ಭವಿಸಿಯವರ ನಡುವೆ
ತಿಂಥಿಣಿಸಿ ಬೆಳೆದಂತರಿಕ್ಷಮಂ ಮೀರಿ ನಿ
ಶ್ಚಿಂತ ನಿರವದ್ಯದುರುಲಿಂಗದೊಳ್ ಝಗಝಗಿಸು
ತಂತು ಮೆರೆವುದು ಮೇರುನಗ ಸುರರ ಬೀಗು ಅಸುರರ ಚೇಗು ಪುಣ್ಯದಾಗು ೪೫

ಶರಧಿಯೇ ಕೊಳ ಚೆಲ್ವ ಧರಣಿಯೊಳ್ ಪುದುಂಗಿರ್ದ
ಸುರ[3]ಪಾಶ್ರಯಾಷ್ಟವರ್ಷಂಗಳೇ ನೋಡಲ್ಕ[3]
ಪಿರಿದಾದ ದಳವೆಂಟವರ ನಡುವಣ ಇಳಾವೃತದ ಖಂಡ ಮಧ್ಯಮಾಗೆ
ಆರರೆ[4]ಯಾ[4]ವೃತರಾದ ಗಣರೆ ಕಿಂಜಲ್ಕಂಗ
ಳಿರದೆಯಾ ಮೇರುಕರ್ಣಿಕೆಯಂತೆ ರಾಜಿಸಲ್
ಪರಮಮಂಗಳನಿಳಯಮೆನಿಸುತಿಹ ರತ್ನಸಾನುವಿನ ಘನವೆಂತಪ್ಪುದೊ ೪೬

ಅಯ್ಯಯ್ಯೊ ಯೆನ್ನ[5]ಣ್ಣ[5]ನಂ ಪಾವು ಪಿಡಿದುದೆನು
ತೊಯ್ಯನಾ ಕಮಲಿನಿ ಮಹಾರಜತನಗ[6]ಮಾದ[6]
ಮಯ್ಯಾಂತು ಕಂಕಣಗಳೆಂಬ ದಿಂಡುಡಿಗೆಯುಟ್ಟಂಬರಂ ಮುಸುಕಿಡುತ್ತ
ಪೊಯ್ವೆನೆನುತದರ ಶೃಂಗವ ಕರದಿ ಮುದವಳಿದು
ಸುಯ್ಯಲಿಂದಣಿವಣಿಲ್ ನಿರ್ಜರಾಮೃತ ಪರಿಯ
ಲಯ್ಯೊಗನ ಪದತಳವ ಸೇರಿ ಶೋಕಂಗಳೆವೆನೆಂಬಂತೆ ಮೇರುವಿಹುದು ೪೭

---

1 ಈ (ಚ) 2 ವಕ್ಷವಸದಂತೆ ಗುಣವಕ್ಷಕದಿ ಭುವರ್ಲೋಕ। ಲಕ್ಷಿತದವ್ಪೋಲ್ ಗ್ರಹಗಳಿಂದ ಜಲನಿಧಿ ಯೋಮದಂತೆ ಉಡುಪಲಕ್ಷಣಂ (ಚ) 3 ರಾಶ್ರಯಂಗಷ್ಟವರ್ಷಗಳೆತಾಂ (ಚ) 4 ಯೋ (ಗ) 5 ಣುಗ (ಚ) 6 ರೂಪ (ಚ)

ಗೋತ್ರವರ್ಧೆ[1]ಯನ್ನು[1] ಮಾಡಿದನಂತುಮಲ್ಲದೆಯು
ಗೋತ್ರಮಂ ಬಂಧಿಸಿದ [2]ಪುತ್ರನೇರ್ದನ[2] ಬಿಡದೆ
ಗೋತ್ರಮಂ ನೋಯಿಸಿದ ಗೋತ್ರ ನೀರಂ ಪೊಗಲ್ಕಂಬು ಮಳೆಗರೆದನೆಂದು
ಗೋತ್ರವೈರಿಯ ಮೇಲೆ ದಂಡೆತ್ತುತಖಿಳಸುರ
ಗೋತ್ರಮಿತ್ರರು ಕೂಡಿ ಬರೆ ಸುರಾಲಯ ಪೊಗಲ್
ಗೋತ್ರಭೇದಕನ ಕೊಲ್ವುದೆ ಪಾಪಮೆನೆ ಮೇರುರಾಜನಂತರದೊಳಿರ್ದಂ ೪೮

ಉರಗೇಂದ್ರ ಸ್ವರ್ಣಮಯ ಸುಸ್ಥೂಲರೂಪನಾಂ
ತಿರದೆ ಧಾರುಣಿಯ ಬಗೆ[3]ದೆದ್ದು[3]ನ್ನತಾಕಾರ
[4]ಕರಣ[4]ಮಂ ತಳೆವಲ್ಲಿ ಮೂರುತೆಕ್ಕೆಯ ಸುತ್ತುತತಿಗಾಢದಿಂದೊಪ್ಪಿ[5]ರಲ್[5]
ಪರಿವಿಡಿಯ ಸಾಸಿರ ಶಿರಂಗಳೇ ಶೃಂಗ ಭೂ
ಧರಗಳಂತೆಸೆಯಲಜ ಹರಿ ಸುರಪ ದಿಕ್ಪಾಲ
ಗರುಡ ಗಂಧರ್ವ ಸುಮನಸರ ಧರಿಸುತ ಹೇಮಗಿರಿ ಶೇಷನಂತೆಸೆದುದು ೪೯

ಆ ಪನ್ನಗಾಧಿಪನನೇಕ ಪೆಡೆಗಳೊಯೆನ
ಲ್ಕಾ ಪರಿಯ ಕೋಡು[6]ಗಲ್ಲುಗಳೊಪ್ಪು[ವ]ದರ ರುಚಿ[6]
ಲೋಪವಿನಿತಿಲ್ಲದಾವೃತವಾಗಲಾ ಶಿರಂಗಳೊಳು ರಾಜಿಸುತಲಿರ್ಪ
ಶ್ರೀಪರಮ ಕಾಂತಿಯುತ ಮುಕ್ತಾಫಲಂಗಳಂ
ದೀಪಿಸುವವೊಲುಗುಳ್ದನಹಿಪ ರಾತ್ರಿಯೊಳೆನ
ಲ್ಕಾ ಪರ್ವತಂ ಬಳಸಿ ಭಗಣತತಿಯೊಪ್ಪಿದವು ಕೌತುಕಂ ಕಣ್ಗೆ ಬೀರೆ ೫೦

ನಗಸತಿಯ ನೀಲಕುಂತಳಗಳಂತಂಬರಂ
ಸೊಗಸಲಾ ಕೇಶ ಕಬರಿಯೊಳು ತುರುಬಿದ್ದವೆನಲ್
ಮಘಮಘಿಪ ಮಲ್ಲಿಗೆಯ [7]ಅರಲಂತೆ[7] ತಾರೆಗಳ್ ರಂಜಿಸಲ್ಕಂಜನಾದ್ರಿ
ಪೊಗರೊಗುವ ತುರುಬಿನೊಳ್ ಸೂಡಿರ್ದ [8]ನಳಿನವೇ
ಮಿಗೆ ಶಶಿಯು ಶಶಿಯ ಪತ್ತಿದ ಕಳಂಕಂ ಭ್ರಮರ[8]
ಜಗವರಿಯದಾಲಪುತ್ತೆಂದು ಪೇಳ್ತಿ[9]ರುವರಾವಸ್ತುದೂಷಣ[9]ದೊಳು ೫೧

---

1 ಯುಂ (ಚ) 2 ಪುತ್ರನಿರ್ಧನ (ಕಗ) 3 ದೆಂಮು (ಕಗ) 4 ಶರಿರ (ಚ) 5 ರೆ (ಗ) 6 ಧರಣೀಧರಂಗಳ್ ಚೆಲ್ವ (ಚ) 7 ಎಲರಂತೆ (ಚ) 8 ಪುಂಡ್ರಿಕ । ಭಗಣ ಪತಿ ಪತ್ತಿರ್ದ ಚಾ ಭ್ರಮರಂಗಳಂಕಕ್ಕಂ (ಚ) 9 ಪರನಾ ವಸ್ತುಭೂಷಣ (ಚ)

ತಪನೀಯ ನಗತಾಪದುಪಹತಿಗೆ ತಪ್ಪಲೊಳ
ಗಪರಿಮಿತ ಪದ್ಮಕೈರವಮಿರ್ಪ ಸರಸಿಯೊಳ್
ಚಪಳಲೋಚನೆಯರಪ ಮುಗ್ಧಕನ್ನೆಯರಾದ ಕಿನ್ನರಿಯರಾ ಕೊಳದೊಳಂ
ವಿಪುಳಜಲಕ್ರೀಡೆಯಾಡುತ್ತಿರಲ್ [1]ಪೂರ್ವಕೃತ
ವಿಪರೀತ ಕಾಮು ವಿರಪ ಜ್ವಾ[1]ಲೆಯಃದಿಸಲ್ಕೆ
ಕುಪಿತರಾಗುತ ವಟಚ್ಛಾಯೆಯೆಂದಿಂದುಲಾಂಛನವ ಸಾರುತ್ತಿರ್ದರು ೫೨

ಇಟ್ಟ ಭಸಿತದ ಮೆಯ್ಗೆ ತೊಟ್ಟ ಚಿನ್ಮಯ ಕಾಂತಿ
ಕಟ್ಟಿದಿಂ[2]ದ್ರಿ[2]ಯ ವಿಷಯ ಕರಣಗಳ ಷಡ್ವರ್ಗ
ನೆಟ್ಟನೆ ನಿಮಿರ್ದೂರ್ಧ್ವಬಾಹುಯುಗಳಂಗಳೊಳ್ ವಕ್ರವಿಲ್ಲದೆ ಮುದದೊಳು
ದಿಟ್ಟಿಯವೆ ಪೊಯ್ಮದೇಕಾಗ್ರಚಿತ್ತದಿ ನಿಂದು
ಕಟ್ಟಿಸಕದವಿರಳ ಬ್ರಹ್ಮಲಿಂಗದ ನಿಜವ
ನಿಟ್ಟಿಸುವ [3]ಮುನಿಗಳಿರ್ದರು ನೋಡಲಘಯುವಘರಟ್ಟವಹ[3] ಬೆಟ್ಟದಲ್ಲಿ ೫೩

ಪಾಸಿರ್ದ ಪಂಚನಖಿಚರ್ಮಗದ್ದುಗೆಯು ಸಿ
ದ್ಧಾಸನದಿ ಮಂಡಿಸಿಯಧೋದ್ವಾರವನ್ನುಭಯ
ಶ್ವಾಸಗಳ ಬಂಧಿಸುತೆಯಾಧಾರಬಂಧಮಂ ಕಟ್ಟಿ ಮೇಲಣಪವ[4]ನನ[4]
ಲೇಸಿನಿಂ ತಡೆದು ಪ್ರಾಣಾಯಾಮಮಂ ಮಾಡಿ
ಘೋಷಿಸುವ ದಶವಿಧದ ನಾದಾನುಸಂಧಾನ
ದಾಸಕ್ತ ಯೋಗಿಜನರಿರ್ದರು ಸದಾಶಿವನ ಚಾರುಗಿರಿ ಗುಹೆಗಳಲ್ಲಿ ೫೪

ಆನಂದನಯನಾಂಬು[5]ಗಳ ಶುಭ್ರಮೇ[5]ಗಂಧ
ವಾನನ್ಮೈಲ್ಯಮೆ ಕುಸುಮವಕ್ಷತಂ ತೇಜಸ್ಸು
ಹೀನಮಿಲ್ಲದ ಕಾಂತಿ ಜ್ಯೋತಿಯವೆ ಚಂಚಲಮೆ ಧೂಪಧೂಮ್ರಂ ಭಾವಿಸೆ
ಜಾನಿಪೊಡೆಯವರ ನಿಶ್ಚಲತೃಪ್ತಿಯುಪಹಾರ
ಸಾನುರಾಗಮೆ ವೀಳಯಮಿದಷ್ಟಪೂಜೆಯಂ
ಜ್ಞಾನನಿಧಿಯೋಗಿಜನರೆಸಗುವೊಲ್ ಖೇಚರಿಯ ಮುದ್ರೆಯಿಂದಿರ್ದರಲ್ಲಿ ೫೫

---

1 ಶಶಿಜೋತ್ಸ್ನ! ಕಿಪರಿತಾನಂಗ ವಿರಹದಜ್ವಾ (ಚ) 2 ಡ (ಗ) 3 ಸನ್ಮುನಿಗಳಿರ್ದರಘರಟ್ಟನಸುರ್ವ ರ್ಣದುರೆ (ಚ) 4 ನಂ (ಚ) 5 ವವರಶುಭ್ರಮೆ (ಚ)

ಮರ್ಬಿನಿಂದಿರ್ಪ ಪೆಳೆಯೊಳಗೆ ಪದ್ಮಾಸನದೊ
ಳೊ[1]ರ್ಬದ್ಧಿ[1]ಯಿಂ ಕುಳಿತು ಧ್ಯಾನ ಶಿವನೊಳ್ ಬಲಿದು
ಪುರ್ಬಿನಿಂದಿರೆ ಬೇರ್ಗಳಂದದಿಂ ಜಡೆ ನಖಗಳಿ[2]ರೆ[2] ಬೇರ್ಪರಿದು ಧ[3]ರಣಿ[3]ಗೆ
ಯುರ್ಬುತಂ ಪುತ್ತ ಮೇಲಕ್ಕಡರಿ ಬೆಳೆಯಲದು
ಪರ್ಬಿರ್ದ ಯೋಗಮಂಟಪಪಾಗೆಯುದರೊಳತಿ
ಕೊರ್ಬಿರ್ದ ಕಾಲಾರಿಯಂತೆ ಕಲ್ಪಗಳನರಿಯದಿರ್ದರು ಮಹಾಮುನಿಗಳು ೫೬

ಶೈವಾಗಮಂಗಳಂ ಕೇಳ್ವ ಶ್ರುತಿ[4]ಗಳ್[4] ಪೇಳ್ವ
ಆವಾಗ ಕೀರ್ತಿಸು[5]ತಭವನ[5] ಸ್ಮರಣೆಯ ಮನದಿ
ಸೇವಿಸುತ್ತಾನಂಗಹರಪಾದದರ್ಶನೆ[6]ಯ ತ್ರಿಕರಣಂ ಮುಟ್ಟಿಮಾಡಿ[6]
ಭಾವಚಾರಿಗೆ ವಂದನೆಯನೆಸಗು[7]ತಂ ದಾ[7]ಸ
ಭಾವಾತ್ಮ ನೈವೇದ್ಯಜ್ಞಾನ ನವವಿಧಭಕ್ತಿ
ಸಾವಧಾನದಿ ಮಾಳ್ಪ ಮುನಿನಿಕರವಿರ್ದುದಾ ಹೇಮಾದ್ರಿತಪ್ಪಲಲ್ಲಿ ೫೭

ಶಿವಪುರಾಣದ ಕಥೆಯ ವಿಸ್ತರಂ ಮಾಡುತತಿ
ಭವನಲೀಲೆಯ ಮಹಿಮೆಯಂ ಬಣ್ಣಿಸುವ ಮಹಾ
ಸವಿಶೇಷ ವೇದರಾಶಿಯ ಮುಖ್ಯಭೇದವರಿದಾ ಪಠನಮಂ ಪೇಳುವ
ಶಿವೆಯ ವಲ್ಲಭನ ಕಲ್ಯಾಣಗುಣವನ್ನು ಶಂ
ಭುವಿನ ಮೂರ್ತಿಯ[8]ನು ಧ್ಯಾನಿಪ[8] ತಪೋಧನರಿರ್ದ
ರವಿರಳ ಪರಂಜ್ಯೋತಿಯಂ ನಿಟ್ಟಿಸುತ ನೋಡಲದ್ರಿಯಂ ಬಳಸಿಕೊಂಡು ೫೮

ಪಂದಿಗಳ್ ಶುನಿಯೊಡನೆ ಸರಸವಾಡುಗು ಕಿರುಬ
ಪಂದಿಮರಿಗಳ ಲಾಲಿಸುಗು ಪೆರ್ಬುಲಿಯ ಪಾಲ
ಪೊಂದಿ [9]ಪುಲ್ಲೆಯ ಮರಿಗಳುಣ್ಬು[9] ಕೀಶಗಳು ಋಕ್ಷದ ಮೆಯ್ಯೊಳಿಹ ಹೇನಿನ
ಗೊಂದಣಮ ಕಳೆಗು ಸಾರಂಗ ಶಾರ್ದೂಲಂಗ
ಳೊಂದಾಗಿ [10]ಜೋಡಗಲದಿರ್ಕು[10] ಮುಂಗುಲಿ ಸರ್ಪ
[11]ವೊಂದೆ ಬಿಲದೊಳ[11]ಗಿಹವು ಮೇರುಗಿರಿ ತಪ್ಪಲಿನ ಮುನಿಗಳುಪಶಾಂತಿಯಿಂದ ೫೯

---

1 ರ್ಬಂಧಿ (ಚ) 2 ರದೆ (ಚ) 3 ರೆ (ಚ) 4 ಯಂ (ಚ) 5 ತ್ರಿಭವ (ಚ) 6 ಕರ ಫಣಾಮಣಿ ಯಲಂಕೃತನಹ (ಚ) 7 ತಸದಾ (ಚ) 8 ಜಾನಿಸುವ (ಚ) 9 ದ ಕದಳಿಮರಿಯುಣ್ಬು (ಚ) 10 ದಂಪತಿಯೊಲಿರ್ಕು (ಚ) 11 ನೊಂದನೊಂದೊರ (ಚ)

ಅಲ್ಲಿರ್ಪ ಬ್ರಹ್ಮಋಷಿಗಳ ತಪೋಮಹಿಮೆಯಿಂ
ಸಲ್ಲಲಿತ ಗೋ[1]ವ್ಯಾಘ್ರವೊಂದಾಗೂ[1]ಡಿರೆ ಹಸ್ತಿ
ಮೆಲ್ಲನೆ ಕರಾಗ್ರದಿಂ ಮುದ್ದಿಸಲ್ ಮೃಗ[2]ಪತಿಯ ಮಹಿಷಶೃಂಗದ್ವಯ[2]ಗಳಂ
ಮೆಲ್ಲಿತಾಗಿಯೆ ಪಿಡಿದು ಲಂಘಿಸುತ್ತಿರೆ ಶರಭ
ಸಲ್ಲಲಿತ ಮೋಹದಿಂ ನಡುವೆ ಮುಂಡಾಡುತಿರೆ
ಪಲ್ಲವಾಧರೆಯ ಹ ಸತಿಯುರವಗೊಡನೆ ನೆರೆ ಚಲ್ಲವಾಡುತ್ತಿರ್ದರು ೬೦

ಎಮ್ಮಯ ಮಹಾನೇತ್ರಕೆಣೆಯೆ ನಿಮ್ಮಯ ಕಣ್ಗ
ಳೆಮ್ಮಯ ಕುಚದ್ವಯಂ ನಿಮ್ಮ ಕುಂಭಗಳಿದಿರೆ
ಯೆಮ್ಮಯ ಮೃಣಾಳತಂತುವ ಪೋಲ್ವ ಮಧ್ಯಕ್ಕೆ [3]ನಿಮ್ಮ ನಡು ಸಾಟಿಯಹುದ[3]
ಹಮ್ಮಿನಿಂ ಕವಿಗಳರಿಯದೆ ಪೋಲಿಸಲ್ಬಹುದೆ
ಗಮ್ಮನೆ[4]ರಲೆ[4]ಯ ಕರಿಯ ಹರಿಗಳಂ ಪಿರಿದಾಗ
ಸುಮ್ಮಾನದಿಂ ಸೂಕ್ಷ್ಮನಿರ[5]ಪೃಥುಲವಪೆಂದು[5] ಜರೆವರಾ ಮುನಿಸತಿಯರು ೬೧

ಪಂಚನಖವಾ ನಖಾಗ್ರದಿ ವಲ್ಕಲಗಳ ತೆಗೆ
ದುಂ ಚದುರಿನಿಂ ಕೊಡುಗು ಋಷಿಗಳ್ಗೆ ಫಲ ಮಧುವ
ವಂಚಿಸದೆ ತಂದೀವುತಿಹವು ಧೇನುಗಳ ಗಣ ತಪಿಪ ಮುನಿಮಸ್ತಕದೊಳು
ಪಂಚಾಮೃತಂ ಕರೆಗು ಕರಿಕರದೊಳುದಕಮಂ
ಮುಂಚುತ್ತ ತಂದು ಚಳಯಂಕೊಟ್ಟು ಸೇವಿಸುಗು
ಮಿಂಚುವತಿ ವ್ಯಾಘ್ರಾಜಿನಂಗಳಂ ನೆರೆ ತಂದು ಪಾಸುಗು ಮೃಗೇಂದ್ರ[6]ನೊಡನೆ[6] ೬೨

[7]ಕರಿಗಳಾ ಭೂಮಿಯಂ[7] ಖನನ ಶೋಧ[8]ನೆ[8]ಗೆಯ್ವು
ತಿರದೆ ಹೋಮದ ಕುಂಡರಚನೆಗಳ ಮಾಡುತಿಹ
ವರರೆ ಶಿಖಿ ಶಿಖಿಯು ಪಿಂ[9]ಛವ್ಯಜನದಿಂದ[9] ಪಟುವಾಳ್ಪುದಾ ಹಂಸರಾಜಂ
ನಿರತ ಕ್ಷೀರಾಜ್ಯದಿಂ ತರ್ಪಣವನೀವುತಿರೆ
ಭರದಿ ಪಂಡಿತ ದ್ವಿಜರ್ಕಳ್ ಮಂತ್ರಮುಚ್ಚರಿಸ
ಲರಿದೆನಿಪ ಯಜ್ಞೋಪಚರ್ಯಂಗಳಂ ಮಾಡುತಿರ್ದವಾ ಯಮಿಕುಲಕ್ಕೆ ೬೩

---

1 ಮಿಂಡು ವ್ಯಾಘ್ರಕೂ (ಚ) 2 ರಾಜ ನೋಡಿ ಶೃಂಗದಯು (ಚ) 3 ನಡುವೆಂತುಸಾಟಿಯೆನುತ (ಚ)
4 ರವೀ (ಚ) 5 ಸಸ್ಥೂಲಮಿದೆಂದು (ಚ) 6 ಸಾಂದ್ರಂ (ಚ) 7 ವರಹಮಹ ಭೂಮಿಯಂ (ಚ)
8 ವ ( ಛ) 9 ಜಾತ ಪತ್ರದಿ (ಚ)

ಶಾಖಾಮೃಗಂ [1]ಪಂಚಪರಿಮಳದ ಪೂಗಳಂ[1]
ಜೋಕೆಯಿಂ ಶಶಿಕಾಂತ [2]ಡೊ[2]ಣೆಯೊಳಗೆ ಕೈ[3]ಯಾಡಿ[3]
ಬೇಕಾದ ಪರ್ಣಪಾತ್ರೆಯೊಳು ತಂದಿತ್ತವರ ಜಡೆಯ ಕೊಡಹುತ [4]ಕಟ್ಟುತ[4]
ಭೀಕರದಿ [5]ಪಿಚ್ಚೆ[5]ರಿಸುತ್ತ ಜಡೆಯಂ ಕಟ್ಟಿ
ಮೇಖಲೆಯ ಮೌಂಜಿಯಂ ಪೊಸೆದು ತಂದೀವುತ್ತ
ನೇಕವಿಧದಿಂದ ಮೃಗತತಿ ಸೇವೆಯಂ ಮಾಡೆ ಸುರರು ವಿಸ್ಮಯಗೊಂಡರು ೬೪

ಈ ವಿಧದ ಬಹುವೈಭವಂಗಳಿಂ ರಾಜಿಸುವ
ಭಾವಜಾಂತಕ ದುರ್ಗದಮಿತಮುನಿಯಾಶ್ರಮವ
ಸಾವಧಾನದಿ ನೋಡುತಲ್ಲಿರ್ಪ ಮುನಿಜನಕೆ ಘನದರ್ಶನಮನೀವುತ
ಪಾವನಾತ್ಮಕರಾದ ಪಾಪಾಂಧಶೂರರಹ
ಮಾವರಾದ್ಯಮರ ವಂದಿತ ಪಾದಪಂಕಜರ್
ಕೈವಲ್ಯಪತಿ ಮುಖ್ಯಪ[6]ಟ್ಟ[6]ಣಂಗಳ ಸಿರಿಯನಲ್ಲಿಂದ ನೋಡಿ ಬಳಿಕಂ ೬೫

ಇದಂ ಚತುರ್ಯುಗದೊಳಾಚಾರ್ಯ ರೂಪಂ ತಾಳಿ
ಯೊದವಿ ಶಾಂಭವಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ವಿಕರಾಮಾಧ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದು ಕೃತಿಯ ಸಂಧಿ ಸುಜ್ಞಾನಬಂಧಿ ೬೬

---

1 ಚಂಪಕಾದಿ ಪರಿಮಳಪುಷ್ಪ (ಜ) 2 ಶಾ (ಗ) 3 ದೊಳೆದು (ಜ) 4 ನೋಡುತ (ಜ) 5 ಚಿಪ್ಪೀ (ಜ) 6 ತ್ತ (ಜ)

## ನಾಲ್ಕನೆಯ ಸಂಧಿ

ಸೂಚನೆ* :
ನಿರತ ಶ್ರೀಕಾಶಿದೇಶಂ ಕಳಮಕ್ಷೇತ್ರಮುಂ
ಚರಿತಪಥಪಾನೀಯಶಾಲೆ ಶೈವಲಿನಿಪುರ
ಭರಿತ ಶಿವನಿಳಯಸಂಪದ ಸಭಾಸ್ಥಾನದಭಿವರ್ಣನಂಗೇಳ್ಪುದೊಲಿದು

ಗೋಪತನುಜೇ ಗೌರಿಗೋಪಪ್ರಕಾಶ ನುತ
ಗೋಪಾಭಿಧಾನಯುತ ಗೋಪತಿ ಮಹಾ[1]ಪ[1]ದ್ಮ
ಗೋಪಪುರಜಾತಸಂಹರಣಕಾರಣಮೂರ್ತಿ ಜನಕ ಸನಕಾದಿವಂದ್ಯ
ಗೋಪಲಿಂಗಾಂಕಿತೇಕ್ಷಣಚರಣ ಗೋಪ[2]ಯುತ[2]
ಗೋಪಾ[3]ಲ[3]ತನುಜಮರ್ದನವರ್ಧಿತಾನಂದ
ಗೋಪಕುಲಜಾತನುತ ಗೋಪವಾಹನ ಚೆನ್ನಮಲ್ಲಿಕಾರ್ಜುನ ಗುರುವರ ೧

ಕಲ್ಯಾಣಪುರದಲ್ಲಿ ಬಸವದಂಡಾಧೀಶ
ಸಲ್ಲಲಿತ ಮಹಿಮೆಯಂ ಮೆರೆವುದಂ ಕೇಳುತ್ತೆ
ಮುಲ್ಲಾಸದಿಂದ ಪಡ್ಡಿಯ ದೇಶದಿಂ ಬರ್ಪ ಪಥದೆ ಮಾತಂಗನೆಂಬ
ಕಲ್ಲಬೇಡಗೆ ಲಿಂಗ[4]ಮಾಹಾತ್ಮ್ಯಮಂ[4] ಪೇಳೆ
ಸಲ್ಲದೆನೆ ಸತಿಸು[5]ತರ ಕೂಡೆ[5] ಜಾತಿಯ ಬಿಡ
ಲ್ಕಲ್ಲಿ ಲಿಂಗವ [6]ಕೊ[6]ಟ್ಟು ನನ್ನಯ್ಯನೆಂದು ಬೋಧಿಸಿದ ಸುಜ್ಞಾನಿ ಶರಣು ೨

[7]ಹೈಮಂತ[7]ಗಿರಿಯ ದಕ್ಷಿಣದ ನಾನಾವರ್ಣ
ಭೂಮಿಯೆಂತೆನಲು ಭೂಬಾಲಕಿಯ ಪಣೆಯೊಳಿ
ಟ್ಟಾ ಮಹಾನವರತ್ನಕೆತ್ತಿದರಳೆಲೆಯ ಪಾಂಗಿನೊಳಿರ್ಪ ವರ್ಷದಲ್ಲಿ
ಪ್ರೇಮದಿಂದಿರ್ಪಂಗವಂಗ ಬಂಗಾಳ ಕುರು
[8]ಸೌ[8]ಮಲಯ ಗೌಳ ಪಾಂಚಾಳ ಸಿಂಗಳ ಕುಂತ
ಳಾ ಮಾಳವಂ ಮಗಧ ಮುಖ್ಯದೇಶದ ಪುಣ್ಯಕೋಶ ಕಾ[9]ಶೀ[9]ದೇಶವು ೩

---

1 ಸ (ಚ) 2 ಸಹ (ಚ) 3 ಲಿ (ಕ) ರಿ (ಚ) 4 ದ ಮಹತ್ವವ (ಚ)5 ತಾಹಾರ (ಚ) 6 ಯಿ (ಕ)
7 ಹಿಮವಂತ (ಚ) 8 ವಾ (ಚ) 9 ಶಿಯ (ಚ)
ಕಾಶ್ಮೀರದೇಶದ ವರ್ಣನೆ (ಗ)

ಇರಿತರಿಗಳೆಂಬ ನುಡಿ ಸ್ಥಾಪ್ಯ[1]ಪಿಷ್ಟ[1]ದೊಳುಂಟು
ಹರಿವೊರೆಗಳೆಂಬ ನುಡಿ ನದಿ ಪ್ರವಾಹದೊಳುಂಟು
ಸೆರೆ ಬಂಧನಗಳೆಂಬ ನುಡಿಯುಂಟು ಹಸ್ತದೊಳು ವರವೆಂಬ ನುಡಿ ರನ್ನದೊಳ್
ಜರಿಯೆಂಬ ಮಾ[2]ತು[2] ಪರ್ವತ[3]ದ ಸಾನುವಿನಲ್ಲಿ[3]
ಮುರಿಯೆಂಬ ಮಾತು[4]ಕ್ಷನಗ್ರ[4]ದೊಳ್ ಭಾವಿಸಲ್
ನಿರುತವಾ ದೇಶದೊಳಗಿಲ್ಲದರ ಮಹಿಮೆಯಂ ಬಣ್ಣಿಸುವ ಕವಿಯಾವನು ೪

ದಂಡ ದೋಷಗಳುಂಟು ಯತಿಹಸ್ತರಜನಿಯೊಳ್
ಬಂಡುಮಾತುಗಳುಂಟು ಕುಸುಮಂಗಳೊಳ್ ತತ್ವ
ಷಂಡಂಗಳೊಳ್ ದೇಹಿ ನಾಸ್ತಿಯುಂಟಾ ಶಶಕಶೃಂಗದೊಳ್ ಪಾಪಮುಂಟು
ಮುಂಡನ[5]ದಿ ಪೆಣ್ಣ[5]ನದ ಕಂಕುಳೊಳ್ ಕೊಲೆನೆತ್ತ
ತಂಡ[6]ದಾ[6]ಟದೊಳುಂಟು ವುಳಿದೆಡೆಯೊಳಿಲ್ಲವಾ
ಖಂಡಲೇಶ್ವರ ವಿಶ್ವನಾಥನಿಪ ದೇಶದುನ್ನತವನದನೇವೇಳ್ವೆನು ೫

ಡೊಣೆ ಕಣೆಯು ಕಾಸಾರ ತೃಣ ವೃಕ್ಷ ಪು[7]ದೇವ
ಗಣಗಳೆಣಿಸಲ್ಕಿವರೊಳೆಲ್ಲವು[7] ಸಿದ್ಧರಸ
ಡೊಣೆ ಪರುಷಕಣಿಯು ತಾವರೆಗೊಳಂ ಮರುಜವಣೆ ಸಂಜೀವನದ [8]ಪೆರ್ಮರಂ[8]
ತ್ರಿಣಯ[9]ನೆಂತಂತೆ ಪೂಜ್ಯಂ[9] ನೋಡೆಯತಿಶ[10]ಯಂ[10]
ಭಣಿತೆಯಿಂದಿರ್ಪ ನಾನಾದೇಶದೊಳ್ ಸೇವ್ಯ
ಪ್ರಣವಮಯ ಪರಶಿವನ ಮುಕ್ತಿಗಾಗರನೆನಿಸಿ ಕಾಶಿದೇಶಂ ಮೆರೆದುದು ೬

ಆ ದೇಶದೊಳ್ ಪುಣ್ಯಚರಿತರುಂ ವಿರತರುಂ
ಮಾದೇವನಂ ನೆನೆವ ಯುಕ್ತರುಂ ಶಕ್ತರುಂ
ಮಾಧವನ ತೆರದಿ ನಿರ್ಜರರು ದುರ್ಜನರಹಿತ ಸಾತ್ವಿಕ ಸದಾಚಾರರುಂ
ಶ್ರೀಧರೆಯ ಪೋಲ್ವ ಕ್ಷಮೆವಂತರುಂ ಶಾಂತರುಂ
ಬಾಧೆಯಿಲ್ಲದ ಭಾಗ್ಯಲೋಲರುಂ ಶೀಲರುಂ
ಓದದೆಯುಪನ್ಯಾಸ ಭಾಷಣರ್ ಭೂಷಣರ್ ಉಳಿದರಾ ನಾಡೊಳಿಲ್ಲ ೭

---

1 ಪೀಠ (ಚ) 2 ತುಂಟು (ಗ) 3 ಗಳೊಳಸ್ಥಿಗಳ (ಚ) 4 ವಕ್ರ (ಗ) 5 ಸ್ತ್ರೀಜ (ಚ) 6 ವಾ (ಚ)
7 ಕ್ಷುಸುರಗಣದಿಸಲ್ಕಿವರೊಳಗೆ (ಚ) 8 ಮರಂನಾರಾಯಣಂ (ಚ) 9 ನಂ ಎನಲೊಪ್ಪುತಿರಲಿಲ್ಲೆ (ಚ)
10 ಯಂದ (ಕ)

[1]ನರವ[1]ರಾಶ್ರಿತ ನಿಗಮಶ್ರೇಣಿ ಶಾಖಾನಗರ
ದಿರವಿನಿಂ ಪುರವರ್ಗತತಿಯಗ್ರಹಾರ ಬಹು
ವರಗಳ ಗ್ರಾಮಂಗಳಿಂದ ಕಾಲ್ವಳ್ಳಿಗಳನೇಕೋಪಶಲ್ಯದಿಂದ
ಪರಿಪರಿಯ ಆಭೀರಶ್ರೇಣಿ ಪೆಕ್ಕಣಗಳಿಂ
ಭರಿತ ಶಿವಮಯ ನಿಖಿಳದೇವಾಲಯಂಗಳಿಂ
ಮೊರೆವ ಪಂಚಮವಾದ್ಯ ನಿನದದಿಂ ರಂಜಿಪುದು ಕಂಜಜನ ವಾಸದಂತೆ ೮

ಎಸೆವ ಚಂದ್ರಮ ದೇವತಾಳಿಯೊಡವೆರಸಿ ತಾ
ನಸಮ ವಿಶ್ವೇಶಲಿಂಗದ ದರ್ಶನಾರ್ತದಿಂ
ದಸ[2]ವ[2]ಸದಿ ಪೌರ್ಣಮಾಸಿಯೊಳು ಬರಲವನ ತಣ್ಗದಿರಿನಿಂ ಶಶಿಕಲ್ಗಳಿಂ
ಒಸರಿ ಕೆರೆ ಕಾಸಾರ ಕಾಲುವೆಗಳಲ್ಲಿ ತ
ಣ್ಣಸದಿ ಪರಿಯಲ್ ಗದ್ದೆ ಬೆಳೆ[3]ಯ[3] ಗೊಬ್ಬರ ದಿವಾ
ಕಸರಿಟ್ಟು ಕುಸುಮಂಮಾಲೆಯ ರಜಮದಾಗೆಯನಿಲಂ ಪರಪುತಿರ್ಪನನಿಶಂ ೯

ಸರಸಿಜಾನನೆ ಧರಾವನಿತೆಯಾ ದೇಶದೊಳ
ಗಿರಂತಿರ್ಪ ಸಕಲ ದ್ವಿಜಮುಖ್ಯಜೀವರನೆಲ್ಲ
ಭರದಿ ರಕ್ಷಿಸಬೇಹುದೆನುತಲಲ್ಲಲ್ಲಿ ಕಳವೆಂಯಂ ಸಸಿಯ ರೂಪಿನಿಂದ
ತರತರಂಗೊಂಡು ಪಸುರ್ವರ್ಣದಿ ಬಳಂಕುತ್ತ
ತರವರಿದು ಹರಿಮಣಿಯ ದಂಡೆಯಂ ಮುಂಡೆಯೊಳ
ಗಿರದೆ ತಳೆದಳೊ ಎನಲ್ ಪಾಲ್ದುಂಬಿ ಪಚ್ಚೆವರ್ಣದ ತೆನೆಗಳಲ್ಲೆಸೆದವು ೧೦

ಆ ಕಳವೆ ಮಡಿಗಳಂ ಕಾಯ್ವ ಪಾಮರ [4]ವಧ್ವಾ[4]
ನೀಕ ಸೌಂದರ ಜಗೆಗಗೋಚರಂ ಮಿಗೆ ನೋಡೆ
ನಾಕೇಂದ್ರಸತಿಯ ನೀರ್ವೆಣ್ಗಳೋ ನೀರಿನೊಳಗನಿಶ ಸಂಚರಿಸುತಿಪರು
[5]ರಾಕೇಂದುಬಿಂಬಮಂ ಮೊಗದಿಂದ ಸೋರ್ಮುಡಿಯಂ
ಜೋಕೆಯಿಂ ನವಿಲಗೊಂದಣಮನಿಂ[5]ಚರದಿಂದ
ಕೋಕಿಲಂ[6]ಗಳ ಪಳಿವ ಪೊಸ ಹರೆಯದಬಲೆಯರ್ ಪದಪಿನಿಂ[6]ದೆಸೆದರಲ್ಲಿ ೧೧

---

1 ಸುರನ (ಚ) 2 ಮ (ಕಗ) 3 ಯೆ (ಗ) 4 ಕನ್ಯಾ (ಚ) 5 ರ್ಯ್ಮಕೆ ಕಂಬುಗ್ರೀವ ಕುಂಭಕುಚ ಬಿಂಬೋಷ್ಠ।ರಾಕೇಂದು ಪೋಲ್ವನಗೆಮೊಗದ ಇಂ (ಚ) 6 ಪಳಿವ ಸೋರ್ಮುಡಿಯು ಸೊಗಸಿಂ ಬಗಸೆಗಣ್ಗಳಿಂ (ಚ)

ಎಳಗಿಳಿಯ ಬಳಗಂಗಳಬಳಾಜನಂಗಳಾ
ಬಳವಮಾದ ಪೊರವಾರ ಕುಚ[1]ಗಳಲಿ ಕುಜಗಳಿಂ
ದಿಳಿದು ಬಂದವರ ಕರಕಂಕಣಗಳಾದ ಜೇನಿನ ಬಳಿಯ ಕಂಡು ತೊಲಗಿ
ಕಳವೆಯನು ಸಾರಿ[1] ಖಂಡಿಸೆ ನಳಿನವದನೆಯರ್
ಜಳಜಾ[2]ಳಿ[2]ಸಖಿಯ ಕೀಳಿಡುತಿರ್ದರಳವಡಿಸಿ
ತೊಳ[3]ಪೆಮ್ಮ[3] ಕಣ್ಗೆಣೆಯೆ ನೀವೆಂದು ಮುಳಿದು ನಿಡುದನಿಗಳಿಂ ಪಾಮರಿಯರು ೧೨

ಬಿಂಬಯುತ ಗಂಧಶಾಳಿಯ ಗರ್ದೆಗೆರಪ ಗಿಳಿ
ಬಂಬಲ್ಗಳಂ ತೆವರುತಿರೆ ಮೇಲುದಂ ಜಾರಿ
ಕಂಬುಕಂಠದೊಳಿಟ್ಟ [4]ಶಂಖ[4]ಹಾರಂ ಪರಿದು ಚೆಲ್ಲೆ [5]ಚಾತಕದ ವಿಂಡು[5]
ಅಂಬುದದ ಪನಿಗಳಿವ ಸೇವಿಸುವೆನೆನಲಾ ನಿ
ತಂಬಿನಿಯ ಮುಡಿಯಳಿಯಲುದಿರ್ದ ಮಲ್ಲಿಗೆ[6]ಯೆರಲ್[6]
ಬಿಂಬದಂತೆಸೆಯೆ ರೋಲಂಬಯೆರಗಲ್ ಚಂದ್ರಲಾಂಛನ ದೊಳಿರ್ದುವವಮಂ ೧೩

ಇಂ[7]ತೊಪ್ಪುತಿಹ ಕಳವೆ ಪೊಲಗಳೆಡಬಲದೊಳುರೆ[7]
ತಿಂತಿಣಿಸಿ ತೋರ್ಪ ಕಮ[8]ಲಾಕರಗಳಲಿ ಕಮಲ
ಸಂತತಿಯ ಕೂಡಿ[8] ಕೊಳರ್ವಕ್ಕಿ ಪೊಣರ್ವಕ್ಕಿ [9]ನೀರ್ವಕ್ಕಿಗಳು ರಾಜಿಸುತಿರೆ[9]
ಸಂತತಮುರ್ದುಂ[10]ಬ ಮರಿದುಂಬಿಗಳ್ ಪರಿದಾಡ
ಲಂತರದೊಳವರ ಪ್ರತಿಬಿಂಬಮಂ ತಳೆದ ಶಶಿ
ಕಾಂತ ಸೋಪಾನಗಳನೊಳಕೊಂಡ ಜಲಮೆ ಗಂಗಾಯಮುನೆಯಂತಿರ್ದುದು[10] ೧೪

[11]ರಂಭೆಯಿಂ ದೇವೇಂದ್ರಸಭೆಯಂತೆ ಪೊಸತಾದ
ಜೃಂಭೋತ್ಕಟದೆ ದೇವಪುರಿಯಂತೆ ಮನ್ಮಥೋ
ಜ್ಜೃಂಭಿತ ಫಲಂಗಳಿಂ ವಿಟಜನದ ಹೃದಯದಂತೆಸೆವ ನವಮಾಲಿಕೆಗಳಿಂ
ಸಂಭೃತಾಲಂಕಾರಿ ಪಣ್ಯಾಂಗನೆಯರಂತೆ
ಕುಂಭಿಗಳ ಸಾಲಿಂ ಗಜಾಗಾರದಂತೆ ಕೌ
ಸುಂಭ ಕೇತಾರದಿಂ ಚಂದ್ರಗಾವಿಯ ತೆರದೊಳಾ ವನಂ ರಾಜಿಸಿತ್ತು[11] ೧೫

---

1 ಗಮನ ನಡುಗಳಂ। ತಿಳಿದು ಬಂದಿಳೆಯಲ್ಲಿ ನಳನಳಿಸಿ ಬೆಳೆದ ಕಳಮದ ಪೊಳೆವ ಕಣಸಂಗಳಂ। ಘಳಿಲನೆಯ್ತಂದು (ಚ) 2 ರಿ (ಚ) 3 ಪೆಂದು (ಗ) 4 ತಾರ (ಚ) 5 ನವಿಲ್ಮುಡಿ ಕೇಕಿಯ (ಚ) 6 ಯೆನಲ್ (ಚ) 7 ತೊಪ್ಪ ಕಳಮವನಕ್ಷೇತ್ರದೆಡಬಲದೊಳತಿ (ಚ) 8 ಲಂ ಕಮಲ ಕಮಲದಿ। ನತ್ಯಂತ ಕಲ್ಹಾರದಿಂ (ಚ) 9 ಜನ್ನವಕ್ಕಿಗಳಿಂದಲು (ಚ) 10 ಬುತಿಹ ಅರಸಂಚೆ ಕೊಂಚೆಗಳನಂತಭ್ರಮ ರಾಳಿ ಝೇಂಕಾರದಿಂದೂಪಲ ಸಮಯ ಸೋಪಾನ ಕಟ್ಟುಗಳ ಚೆಲ್ವಿಂ ಕಣ್ಗೆ ಮಂಗಳಕೊಳಂಗಳೆಸೆಗುಂ(ಚ) 11 ರಂಭ ಮನ್ಮಥ ಚಮರಿಕಸ್ತೂರ ಸುರಭಿ। ಜಂಭವಾನಪ್ರಸ್ಥದೇವವಲ್ಲಭವೆಂ। ಬಿಂಬಾದ ಕೂಟದಿ ಸುಧರ್ಮದಂತಂ ಪುಷ್ಪಬಾಣನಂತಟನಿಯಂತೆ। ಅಂಬುಜೋದ್ಭವನರಸಿಯಂತಮೃತದಾಯಿನಿಯೊ। ಲಂಬುಧರವಾಹನನಯುದ್ಧದಂತಾಶ್ರಿನಿಯೊ। ಲಂಬಕತ್ರಯನ ಪರಿಯಂತೆ ರಾಜಿಪ ಉದ್ಯಾನವನ ವನೇವರ್ಣ್ಣಪಂ (ಚ)

ದಾಡಿಮಫಲಂ[1]ಗಳೊಡದೊಂದ[1]ದರ ರಸ ಸುರಿಯೆ
ಕೂಡಿ ಪರಿಯಲ್ಕದರ ತಣ್ಪಿನಿಂ ಬೆಳೆ[2]ಯೆ ಪೊಸ
ಜೋಡು[2] ತೆಂಗುಂ ಕೌಂಗು ನಾರಂಗನಾ[3]ರಯೆ ಸ್ವಾ[3]ದ್ವಿ ಪುಂಡ್ರೇಕ್ಷು ಲಕುಚಂ
ರೂಢಿಯೆಂಹ ಸಹಕಾರಫಲರಸಂ ಪೀರ್ದ ಪಿಕ
ಕೂಡೆ ಪಂಚಮಸ್ವರದಿ ಪಾಡೆ ಪಾಂಥರ್ ನಲಿದು
ಮೂಡುತಾನಂದರಸದೊಳ್ ಮುಳುಂಗುತ ಚಂದ್ರಚೂಡ ಶಿವಶಿವಯೆಂದರು ೧೬

ಭೂವನಿತೆ ಚಂದ್ರಸೀಮಂತರೇಖೆಯವೊಲಿ
ರ್ಪಾ ವಿಮಳಮಾರ್ಗದೊಳಗಲ್ಲಲ್ಲಿ ಮಂಟಪಗ
ಳಾವಾವ [4]ಸತ್ರಂಗಳಲ್ಲಿ ಸಣ್ಣಕ್ಕಿ ಸಾಣಂಗಿ ಬೇಳೆಯನೀವುತ[4]
ಏವೇಳ್ವ ಶಿಶುಗಳ್ಗೆ ತೊಟ್ಟಿಲಂ ಬಟ್ಟಲಂ
ಸಾವಧಾನದಿ ಪಾಸುಮಂಚ ದೀವಿಗೆ ಗಿಂಡಿ
ತೀವಿರ್ಪ ಶ್ರೀಖಂಡ ಮುಖ್ಯವಸ್ತುಗಳಿಂದ ಧರ್ಮಚಾವಡಿಗಳಿರ್ಕುಂ ೧೭

ಪೊಳೆಯುವೆಳೆ ಪಚ್ಚೆವಣ್ಣದ ಕೌಂಗು ಕಂಭಗಳ್
ನಳನಳಿಪ ಸುಳಿವಾಳೆದೊಲೆ ಕಮಲ ಕುಸುಮಕು
ಟ್ಮಳಗಳಿಂದಳವಟ್ಟ ಬೋದಿಗೆಯ ಮಧುರಸಹ ಪುಂಡ್ರೇಕ್ಷುಗಳ ಜಂತೆಯಿಂ
ಕಳೆಯುಳ್ಳ ಮುಡಿವಾಳ ಮೇಲುಪೊದಕೆಗಳಿಂದ
ಕಳಕಳಿಸುತಿಹ ಲಾವಂಚದ ನೆರಕೆಯುರವಟಿಗೆ
ನಳಿ[5]ನಾಸ್ಯೆಯರ ಕೆಯ್ಯ ಕಾಂತಕರಗಂಗಳಿಂ ಸ್ವರ್ಣಪಾತ್ರಗಳ್[5]ಸೆದವು ೧೮

ಚೊಲ್ಲೆಹದ ಬಳಲುಮುಡಿ[6]ವೆತ್ತವರ್ ಮತ್ತವರ್[6]
ಚೆಲ್ಲೆಗಂಗಳ ಚೆಲ್ಲೆಗಾತಿಯರ್ ಖ್ಯಾತೆಯರ್
ಲಲ್ಲೆವಾತಿನ [7]ವಿಟ ವಿ[7]ದಗ್ಧೆಯರ್ ಮುಗ್ಧೆಯರ್ ಸೊಗಸುರತಿಕೋವಿದೆಯರು
ಕಲ್ಲೆರ್ದೆಯರಂ ಸೋಲಿಸುವ ಖುಲ್ಲಗಾತಿಯರ್
ಸೊಲ್ಲಿನೊಳ್ ಸಕಳಕಳೆವರಿವವರ್ ಮೆರೆವವರ್
ಫುಲ್ಲಶರನಂಕಕಾತಿಯರು ಕನಕದ ಪುತ್ತಳಿಯೊಲು ಶೋಭಿಸುತಿರ್ದರಂ ೧೯

---

1 ಪಣ್ಮೊಡದ (ಚ) 2 ವಖಿಳ । ನಾಡೆ (ಚ) 3 ದೆಯಿಾ ಸಾ (ಚ) 4 ವ್ಮೃತ ಸತ್ರನ್ನಸತ್ರ ಘೃತ ಪಿಷ್ಟತಂಡುಲರುಗೊಡವ ಸತ್ರಂಗಳು (ಚ) 5 ನ ಗಂಧಿಯರೆರೆವಿಂದುಕಾಂತದ ಕರಗ ಸ್ವರ್ಣ ಘಟ ಗಳಿನೆ (ಚ) 6 ಚೆಲ್ವಭ್ರಮರಾಳಕದ (ಚ) 7 ಬಲ್ಲ (ಚ)

ಪಲವುಮುಖದೊಳ್ ಪರಿವ ನಿಮ್ಮ ಜೀವನಗಳಂ
ಪೊಲವಿನಿಂ ಕರಗತಂ ದೃಢವಾಗಿ ಸೂಡುತ್ತ
ನಲಿದೇಕಮುಖವಾಗೆ ಕರದೊಳ್ ಕೊಡುವರೇನಿದನ್ಯಜಾತಿಗಳೆನ್ನದೆ
ಲಲಿತಾಂಗಿಯರ್ ವಸನ ಧನಕೀಗ ವಪುಗಳೇ
ಪಲತೆರದ ದಾನವೀಯಲ್ ತಲೆಯ ತೂಗರೇ
ಬಲುಮೋಹದಿಂದ ಜೀವನಧಾರೆ[1]ಯೆರೆಯಲಿನ್ನಾರು ತಲೆಯಂ ತೂಗರಂ[1] ೨೦

ಇಂದುವದನೆಯರಾ ಪ್ರಪಾಶಾಲೆಯೆಡೆಯೊಳಿ
ರ್ಪಂದಮಂ ನೋಡಿ [2]ತೃಷೆಯಿಲ್ಲದಾಗಲೆ[2] ಬಂದು
ಕುಂದುತೆಮ್ಮಂ ಬಗೆವರಲ್ಲೆನಲ್ಕವರು ಕನಕದ ಕಲಶಗಳ ಪಿಡಿವುತ
ಸಂದಣಿಸಿ ಜಲಗೊಂಡು ಯೆರೆಯಲದರೊಳ್ಮೊಗಂ
ಸಂದಿಸಲ್ ದಿವದೊ[3]ಳೀ[3] ರಾಕೇಂದು[4]ವೇ[4] ಚೋದ್ಯ
ಮೆಂದು ಮೇಲಕ್ಕೆ ನೋಡುತ ನಾಣ್ಚಿದಾ ಪಾಂಥನಂ ನೋಡಿ ನಗುತಿರ್ದರು ೨೧

ತಾರಾಳಿ ಗೋಕ್ಷೀರಹಾರ ತೋಯಜಹಾರ
ಮಾರ ಮಾತ್ರಗ್ರಜಪಟೀರ ಮಂದಾರ ಘನ
ಸಾರ ಡಿಂಡೀರ ಶಂಕರ ಕುಲಾಚಲ ನೀಲಕಂಠ [5]ಸುರ[5]ಮತ್ತೇಭವು
[6]ಸಾ[6]ರ ವಿಚಿಕಿಲ ಕುಂದ ಕಂಬು[7]ಮಲ್ಲೀ[7] ಕುಸುಮ
ಭೂರಿಸುರ[8]ಪತಿ ಹಯ ವೃಷಾ ಕಪಿ ವೃಷಭವಿವರ
ಚಾರುಕಾಂತಿಯ ಪೆತ್ತ ಜನನಿಯಿವಳೆನೆ ಗಂಗೆ ರಾರಾಜಿಸುತ್ತಿರ್ದಳಂ[8] ೨೨

ಸುರರ ಸಂತಾನದಿಂ ಸುರಪುರಿಯ ತೆರನಂತೆ
ಗಿರಿಭೇದಕತ್ವದಿಂ ವಜ್ರಿಯಂ[9]ದದಿ[9] ನೋಡೆ
ಪರಿಯಂತೆ ಪ[10]ದ್ಮಾಳಿ ಶೋಭೆಯಿಂ ಶಂಭನಾದ[10] ಕೈಲಾಸನಾಥ[11]ನಾದ[11]
ಹರನಂತೆ ಶುಭ್ರವಂಯ[12]ದೇಹದಿಂದೈಲಬಿಲ
ನರಮನೆಯ ತೆರದಂತೆ ಮಕರಕಚ್ಛಪಗಳಿಂ
ದಿರದೆ ಸಾಂದ್ರಚ್ಛಾಯೆಯಿಂದ ಸುರ[12]ಗಂಗೆ ಕಣ್ಗೊಳಿಸಿದಳು ಜನದ ಕಣ್ಗೆ ೨೩

---

1 ಪೆರೆವುತಿಹ ಕಲುಷ್ಹೃದಯರಂ ನೋಡಿರೆ (ಚ) 2 ತೃಷೆಯಿಲ್ಲದು ಶಿವನೆ (ಚ) 3 ಳತಿ (ಚ) 4 ವೇಂ (ಚ) 5 ವಿಬುಧ (ಗ) 6 ಹಾ (ಚ) 7 ಮಾಲತಿ (ಚ) 8 ಹಾರಹರಿಹಯಕಪಿದ್ವಿಜವೃಷಭ ಸಾರಿವಕೆ ಕಾಂತಿಯಿತ್ತಳು ಕರಗಿ ಪರಿಪರಿದಳೋಯೆನೆ ಗಂಗೆ ರಾಜಿಸಿದಳು (ಚ) 9 ತಂ (ಚ) 10 ದ್ಮಸಹ ಪುಣ್ಯಜನ ಪತಿತ್ವದಿಂ (ಚ) 11 ನಂತೆ (ಚ) 12 ಯಭ್ರದಂತಂ ಸರಸ್ವಾದಂತೆ ನದಿಕೂಟದಿಂ ಲಾಸ್ಯ ಮಂದಿರದಂತೆ ರಂಗತ್ತರಂಗದಿಂ (ಚ)

ಮಂಗಳಾತ್ಮಕ ಮುನಿಜ[1]ನ ಪ್ರೇಮಪಾತ್ರ ಶಿವ[1]
ಪಿಂಗಳ ಜಟಾಪಾಸೆ ದುರ್ದೋಷಭೀತಿ ದು
ಸ್ಸಂಗ ಸಮವರ್ತಿಕೃತ ಶಾಸನಾಂತಕಿ ಕಾಮಕಾರ್ಯ ಶಿರವಿಚ್ಛೇದನೆ
ಜಂಗಮಸ್ಥಾವರಾಧಾರ ಸಂಜೀವ[2]ನೆ ಶು
ಭಾಂಗೆ ದುಷ್ಕೃತ ಸಕಲ ದುಃಖ[2]ಭೂತಪ್ರೇತ
ಭಂ[3]ಗೆ ಶಿವಪುಣ್ಯರಾಶಿಯ[3] ಸಿರಿಯ ಕಡಲಂತೆ ಮೆರೆ[4]ದಳಾ[4] ಗಂಗಾನದಿ ೨೪

ಮಿಸುಪ ಕಾಶಿಯ ದೇಶ ಮಂಡಲದ ಮಧ್ಯದೊಳ್
ಕೃಶಮಧ್ಯೆಯೆನಿಪ ಭೂವನಿ[5]ತಾಸ್ಯದಂದದಿಂ[5]
ದಸಮ[6]ಗುಣಶೀಲ ಶಿವಗಣ ವಿಪ್ರಗಣ ಭಾಗವತ ದೇವ ಯಕ್ಷರ್ಕಳ[6]
ವಿಸರ[7]ಗಳಿಗಾತ್ಮಮಂದಿರಮೆನಿಪ[7] ಕೈಲಾಸ
ವಿಷಜಸಂಭವ ನಗರ ವೈಕುಂಠಮಮರಪುರಿ
ಯೆಸೆವಳಕೆ [8]ಮೊದಲಾದ ಪುರಿಯಮೆಣ್ಗಳಿಗ[8]ರಸಿಯಹ ಕಾಶಿ [9]ಕಂಗೊಳಿಸುಗುಂ[9] ೨೫

ಶತಕ್ರತುಗಳಧಿಪತಿಗಳಿಂದ [10]ಸುರಪುರಿಯಂತೆ[10]
ವಿತತ ಧನಪತಿಗಳಿಂ ಯಕ್ಷೇಂದ್ರ[11]ಪುರಿಯಂತೆ[11]
ನುತಿವೆತ್ತ ಶ್ರೀ[12]ಮಂತರಿಂ ವಿಷ್ಣುಲೋಕದಂದದಿ ಭೋಗಿಕುಲಗಳಿಂದ
ಸತತಾಹಿಲೋಕದಂದದಿ ಗುರು ಕವೀಂದ್ರ ಬುಧ
ಯತಿ[12]ಪರಮಹಂಸ ತ್ರಿಕಾಲ ಶಿವಪೂಜನ
ವ್ರತಿನಿಕೇತನಗಳಿಂ ಬಹುಲೋಕದಂತೆ [13]ಶೋಭಿಸಿದುದಾ ಕಾಶೀಪುರಂ[13] ೨೬

ಧವಳ[14]ಮೇಚಕ[14] ಶೋಣಮಯಂ ಹರಿಹರಬ್ರಹ್ಮ
ನವತರೇಡಾ ಪಿಂಗಳಾ ಸುಷು[15]ಮ್ನಾ ಶಿರೆಗ
ಳವಿರತಂ ಬೆರೆದ ಭ್ರೂ[15]ಮಧ್ಯಮೆಯಂವಿಮು[16]ಕ್ತಮೆನಿಸುವದು[16] ಯೋಗಿಜನರ್ಗೆ
ತವೆ ಸರಸ್ವತಿ ಗಂಗೆ ಯಮುನೆ ನದಿಗಳ್ ಕೂಡಿ
ಭುವಿಯಲ್ಲಿ ಕ್ಷೇತ್ರಮೆನಿಸುತ ನಾಗ ನರ ಸುರರ್
ಸವಿಶೇಷ ಸಕಲ ಜೀವರ್ಗೆ ಮುಕ್ತಿಯನೀವ ಕಾಶಿಯಿಂದಧಿಕಮುಂಟೆ ೨೭

---

1 ನಂಗಳಿಂ ಸೇವ್ಯ ಶಿವತುಂಗ (ಚ) 2 ನಸು| ವಂಗ ಪೀಡಿತ ಸಕಲವ್ಯಾಧಿ (ಚ) 3 ೧ ಸಮಸ್ತ ದೇಶದ (ಚ) 4 ದುದಾ (ಚ) 5 ತೆ ಮೊಗದ ಪಾಂಗಿನಿಂ (ಚ) 6 ಬ್ರಹ್ಮೇಂದ್ರೋಪೇಂದ್ರಾದ್ಯಮರ ನರನಾಗ ಗರುಡ ಗಂಧರ್ವಯಕ್ಷ (ಚ) 7 ವಿಷಯಾಳಿನಿಳಯಮುಮೆನಿಸಿ (ಚ) 8 ಮುಖ್ಯಪುರನಾರಿಯರ್ಗೆ (ಚ) 9 ಪಟ್ಟಣಮೊಪ್ಪುಗುಂ (ಚ) 10 ಸ್ವರ್ಲೋಕದೊಳ್ (ಚ) 11 ಪತ್ತನಮ (ಚ) 12 ಲೋಲರಿಂ ವಿಷ್ಣುಪುರಿ ಭೋಗಿ ಜನದೆ ಪಾತಾಳದಂತಮತಿವಂತ ಗುರುಕವೀಶ್ವರ ಭೌಮ ಬುಧ ರಾಜತತಿ (ಚ) 13 ಗ್ರಹಮಂಡಲಂಗಳಂತೆಸೆದುದು (ಚ) 14 ಶಾಮಳ (ಚ) 15 ಮ್ನ ವೇಣಿತ್ರಯಂಗಳವಿರತಂ ಬೆರೆದಭ್ರ (ಚ) 16 ಕ್ತಿಕ್ಷೇತ್ರ ಶಿವ (ಚ)

ವೀರರಿಂ ವಿತರಣ ವಿಚಾರರಿಂ ಧನಧಾನ್ಯ
ಪೂರರಿಂ ಕುಸುಮ [1]ಸುಕುಮಾರರಿಂ[1] ರಾಜಕುಲ
ಧೀರರಿಂ ಪಡೆವ[2]ಳರ ಕಟ್ಟಾಯತರ ರಾಯಭಾರಿಗಳ ಗೊಂದಣಗಳಿಂ[2]
ಸಾರವಮೌಕ್ತಿಕ ರನ್ನಹೊನ್ನ ಕರುಮಾಡಗಳ
ಭೂರಿಯಂಗಡಿ[3]ಯ ಸಾಲಿನಲಿ ಸರಪಿರುವ ಕ
ಸ್ತೂರಿ ಘನಸಾರ ಗೋರೋಜನಾದ್ಯಖಿಳ ವಸ್ತುಗಳಿಂದ ರಾಜಿಸಿರ್ಕುಂ[3] ೨೮

ಆ ಪುರದೆ ಶಿವನ ಶಾಂಭವಲೋಕದೊಳ್ ಪೊಳೆಯು
ಲಾ ಪರಮ ಶಿವಭಕ್ತ ಸಕಲದರ್ಶನಜೀವ
ರೇಪೇಳ್ವೆ ಹರಿ ಸುರ ಬ್ರಹ್ಮೇಂದ್ರ ಮಂಸಂ ಮುನಿ ಮಹಾಗಣಂಗಳ್ ಭಾವಿಸೆ
ದೀಪಿಸುವ ವಿಶ್ವೇಶನಾಲಯಂ ಲೋಕದೊಳ್
ಶ್ರೀಪರಂಜ್ಯೋತಿಮಂದಿರ ಮುಕ್ತಿಮಂಟಪಮುಂ
ಮಾಪತಿಯ ಮೋಲಗದ ಶಾಲೆ ಸತ್ಯಂ [4]ನಿತ್ಯ ಮುಕ್ತ್ಯಾಂಗನೆಯ[4] ನೆಲೆಮನೆ ೨೯

ಬೆಳವರ್ಣ್ಣವಿಡಿ[5]ಯೆ ದುರ್ವರ್ಣಮೆಂಬರ್ ಕೂಡ
ಲ[5]ಳಿಕಾಕ್ಷನೆನ್ನನುಳಿದೆಂತು ಪೋ[6]ಪಂ[6] ಪೋಗಿ
ಘಳಿಲನೇ ಬಳಸಿಬಿಡೆನೆಂಬ ಪಾಂಗಿಂ ಪ್ರಕಾರಂ ಪೊಳೆಯೆ ದೆಸೆದೆಸೆಯಲಿ
ಕಳಿವೆತ್ತ [7]ಕನಕ[7]ಶಿಖರಿಗಳುಭಯ ತಾಮ್ಯಿದಿ
ನಳಿನಗರ್ಭಾಂಡ ಭಿತ್ತಿಯ[8]ಲಿ ಮಿಗೆ[8] ರುಂಗರುಗಿಸು
ತೊಳಹೊರಗಣಮುಳ ಗೋಪುರಗಳಾಗೆಸೆಯೆ ತಣ್ಗದಿರ್ಗಲ್ಲ ಗೇಹದೊಳಗೆ ೩೦

ಶತಪತ್ರರಿಪುರಾಜ [9]ರೇಖಾವತಂಸನಂ
ಮತಿಶಬ್ದಪಾತ್ರ ನಿರ್ಮಲಧರ್ಮರೂಪರಥ
ಪ್ರಥಿತ ಪಾವನ ಶಿರೋಧೃತ[9] ಮೇಘಪುಷ್ಪ ವಿಶ್ವಾಧಾರ ವಿಶ್ವಂಭರ
ಸತತಪ್ಟತನುಮೂರ್ತಿ ರತಿರಾಜ[10]ಭಸ್ಮಚ
ರ್ಚಿತ ದಿವ್ಯದೇಹ ಮಾಯಾತೂಲ ವಾತೂಲ
ಶತಕರ್ಮ[10]ಗೋಕುಲಿಶ [11]ಭಕ್ತೇಷ್ಟಫಲದಾತ[11] ವಿಶ್ವೇಶನಿರ್ದ ಮುದದಿಂ ೩೧

---

1 ಶರಹಾರರಿಂ (ಚ) 2 ಳ್ಯರಿಂದ ಕಲ್ಲಾಯತರ್ ಕಚರ್ಕುಳಾಯತರಿಂದಲು (ಜ) 3 ಸೋಮಸೂರ್ಯ ವೀಧಿಗಳ ಹಯ ಸಾರಂಗದೇರಾಟ ವೇಶ್ಯಜನ ವೀಣಾದಿ ನಿನದದಿಂ ಪುರರಾಜಿಕುಂ (ಚ) 4 ಸತ್ಯನಿತ್ಯ ಮುಕ್ತಿಯ (ಚ) 5 ದು ದುರ್ವರ್ಣಾಚಲಂ ನಾಡೆ। ಅ (ಚ) 6 ಪರೆ (ಗ) 7 ದ್ರವಿಣ (ಚ) 8 ತುಡುಕಿ (ಚ) 9 ರಾಜರಾಜಸುಮಿತ್ರಪ್ರತಿಥಯಜಯಮಾನ ಪುಷ್ಕರ ಧರ್ಮರಾಜಧ್ವಜ ಅತಿ ಶಯಹಾರ ಹುತವಹ (ಚ) 10 ಚಿತಭಸ್ಮಕ್ರತುಮಾಯಾಪಾಶಗತನುತಧರ್ಮ ಪ್ರೋಷಭವಹತಕರ್ಮ(ಚ) 11 ಭಕ್ತಜದಾತೇಷ್ಟ (ಚ)

ಆ ವಿಶ್ವನಾಥನೋಲಗವನದನೇವೇಳ್ವೆ
ಭೂವನಿತೆಯೊಣ್ಮರಖಿಳರ್ ರವಿ ಸುಧಾಂಶುಕುಲ
ಸಾವಂತ ಮನ್ನೆಯರ್ ಮಂಡಲೀಕರು ಪ್ರಧಾನರು ಚತುರುಪಾಯಂಗಳೊಳ್
ಕೋವಿದರ್ ಕುಶಲಮಂತ್ರಿಗಳು ಪರಬಲಜಲಧಿ
ತೀವಿರಲ್ ಬಡಬನಂದದಿ [1]ಘೋಷಣಂದಾಳು
ವಾ[1] ವೀರವಿತರಣದ ಸೇನಾಧಿಪತಿಗಳಿಂ ಪೊಗಳ್ವ ಮಾಗಧಭಟ್ಟರಿಂ ೩೨

ಕರಣಿಕರು ರಾಯರಾವುತ ವಜೀರರು ಜೋಧ
ರರು ನಿಯೋಗಿಗಳು ವೈದ್ಯರು ನಿಪುಣಶಿಲ್ಪಿಗಳ್
ಪರಿಪರಿಯ ಚಿತ್ರಕರು ಸಾಣೆಗಳು ಹಯಗಜಪರೀಕ್ಷೆಯಲಿ ಕಡುಜಾಣರು
ಸರಸ ಪರಿಹಾಸಕರು ರತ್ನಶಾಸ್ತ್ರಜ್ಞ ಚಪು
[2]ರರು ಮೃದುಲ ಗೀತ ಪ್ರಬಂಧಲಯ[2]ಕಾರರು ಸು
ಭರತಶಾಸ್ತ್ರಪ್ರವೀಣರು ನಾಟ್ಯಕೋವಿದರ್ ಸಿಂಗರಂಬಡೆದಿರ್ದರು ೩೩

ಧೀರಮಲ್ಲರು ಫುಲ್ಲಶರಶಾಸ್ತ್ರ[3]ಕೋವಿದರ್[3]
ನಾರೀಪುರು[4]ಷದೇಹಲಕ್ಷಣ ಶಕುನರೀತಿ
ಯಾರೈದು ನೋಳ್ಪವರ್ ಚಾಂಗೆರಿಕವಾದವನು ಬಲ್ಲ ಮಾಂತ್ರಿಕ ಪುಂಗವರ್[4]
ಸಾರವೈತಾಳಿಕರ್ ಶರಶಸ್ತ್ರನಿಪುಣರಹ
ಭೂರಿ[5]ಯೋಧರ್ಕರುರ[5] ಬಿಜ್ಜಣಿಗೆಯುವ[6]ರುಗಳ್[6]
ದೂರದೇಶಸ್ಥರಹ ಜನರೊಗ್ಗಿನಿಂದ ಪೆಗ್ಗಳದ ಸಭೆ[7]ಯೊಳಗಿಪ್ಪರು[7] ೩೪

ಶಿವರುದ್ರಭೇದಮುಯುಪಾದಾಗಮಜ್ಞ[8]ರಿಂ[8]
ಭವವಿಷ್ಣು ಬ್ರಹ್ಮರವಿಯಗ್ನಿ ಸ್ವರೂಪಮುಸು
ರ್ವ ವಿತತಪುರಾಣಜ್ಞಪುರುಷರಿಂ ಪಾಶುಪತ ಕಾಪಾ[9]ಲಿಕರ ಬೃಂದದಿಂ[9]
ದ್ವಿವಿಧ ಶಾಕ್ತೇಯರಿಂ ಸೌರ ಗಾಣಾಪತ್ಯ
ರವಿ[10]ರಳದ[10]ಯತಿಗಳಿಂ [11]ಸಾ[11]ಷ್ಟಾಂಗಯೋಗ[12]ಜ್ಞ[12]
ಶಿವಶರಣಸಂತತಿ[13]ಯ ಶಿಷ್ಯಪ್ರಶಿಷ್ಯರಿಂ ಭವನೋಲಗಂ ರಂಜಿಕುಂ[13] ೩೫

---

1 ಘೋಷಣಂಗೊಂಬಾ (ಚ) 2 ರಸ್ವರಗೀತ ಪ್ರಬಂಧಭಯ (ಚ) 3 ಬಲ್ಲಿದರ್ (ಚ) 4 ಪರ ಸಕಲ ಸಾಮುದ್ರೆ ಶಕುನಗಳನಾರೈದು ನೋಳ್ಪರಿಂ ಜಾಂಗುಲೀಕ ರಸವಾದ ಬಲ್ಲ ಮಾಂತ್ರಿಕರಿಂಪಲು (ಚ) 5 ಬಗಾರರಿಂ (ಚ) 6 ರಿಂದ (ಚ) 7 ರಂಜಿಸಿಹುದು (ಚ) 8 ರುಂ (ಗ) 9 ಲಶೈವರಿಂದ (ಚ) 10 ತತದ (ಚ) 11 ದ (ಚ) 12 ರಿಂ (ಚ) 13 ಯು ಸದ್ವ್ರತಿಗಳಿಂದಭವನೋಲಗಂ ರಮ್ಯ ತೋರ್ಕುಂ (ಚ)

ಛಂದ[1]ಸ್ಸಿನನುವರಿದು ಯತಿಯ ನೇಮಂಗೊಂಡು
ಬಂದು ಬಂದೊಡನೆ ಕಾಕುವ ಪ್ರಾಸಮಂ ತಿಳಿದು
ಹೊಂದುವ ಪದಂಗಳಂ ಹೊಂದದ ಪದಂಗಳಂ ನೋಡಿ[1] ಶೃಂಗಾರ ವೀರ
ಸಂದ ಕಾರುಣ್ಯ ಭಯ ರೌದ್ರಾದ್ಭುತಂ ಹಾಸ್ಯ
ಮಂದ ಬೀಭತ್ಸ ಶಾಂತಗಳೆಂಬ ನವರಸದ
ಸೌಂದರಪ್ರಬಂಧಕಾವ್ಯವ ರಚಿಪ ಕವಿಶಿರೋಮಣಿಗಳಿಂ ರಂಜಿ[2]ಸುವು[2]ದಂ ೩೬

ಸೊಗಯಿಸುವ ಸ್ವರರಚನೆಯಮೃತಮಯ ನಿನದದಿಂ
ಮಿಗಿಲೆನಿಸಿ ಪದವಿಭಾಗಾಕ್ಷರ ಸುಲಕ್ಷಣವ
ಜಗದೊಳರಿದೆನ[3]ಲ[3]ರಿದು ವಸ್ತುಕಂ ವರ್ಣಕಂಗಳ ಸಕಲಲಿಪಿ[4]ರೂಪದ[4]
ಬಗೆಗಳಂ ತಿಳಿದು ವರ್ಣಗಳೆಲ್ಲರೊಡಗೂಡು
ತೊಗುಮಿಗೆಯ ತುರಗವಾಚಕಶಕ್ತಿಯಿಂದೋದು
ಪಗಣಿತದ ಬಿರಿದಿನಗ್ಗದ ರಾಜಗಮಕಿಗಳ್ ಮೆರೆದರಾ ಸಭೆಯ ನಡುವೆ ೩೭

ಸಭೆ ವಿಸ್ಮಯಂಗೊಳ್ಳೆ ಶಾಸ್ತ್ರಿಜನ ಬೆರಗಾಗ
ಉಭಯಕವಿಗಳ್ ಮಿಸುಗದಿರೆ ತಾರ್ಕಿ[5]ಕರ್[5] ಪೊಗಳೆ
ಶುಭವಾದ ಪ್ರಶ್ನೆಗಳ ಮಾಳ್ಪ [6]ಮೋಕ್ಷಿನ[6] ವಾದಿಗಳ್ಗೆ ಪ್ರತಿವಾಕ್ಯವಿತ್ತು
ಸಭೆ ಸೂರಿಜನರುಮಹುದೆನೆ ಸುಧಾಮಯವಾದ
[7]ವಿಭವಯುತ[7] ವಾಕ್ಪ್ರೌಢಿ[8]ಯಿಂ[8] ಕಾವ್ಯಶಾಸ್ತ್ರಗಳ
ಸೊಬಗಿನಿಂ ರಸಭಾವಚಿತ್ರಾರ್ಥ[9]ಮನ್ನುಸಿರ್ವರ[9]ಗ್ಗಳದ ವಾಗ್ಮಿಗ[10]ಳಿರ್ದರು[10] ೩೮

ದಶವಿಧದ ವೈಯಾಕರಣರ ನೈಯ್ಯಾಯಿಕರ
ಕುಶಲವೇದಾಂತಭಟ್ಟರ ಪ್ರಭಾಕರರಖಿಲ
ದಸಮವಸ್ತುಗಳೊಳ್ ವಿಶೇಷಗುಣಮಸ್ತಿಯೆಂದೆಂಬ ವೈಶೇಷ[11]ಜ್ಞರ[11]
ವೆಸೆಗೆಟ್ಟನೀಶವಾದಂ ಮಾಳ್ಪ ಮೀಮಾಂಸ
[13]ಕಶಕದಣುವಿಂಗಣುವೆ ಪರವೆಂಬ ವಾದ[12] ಕ
ರ್ಕಶ[13]ದ[18] ತಾರ್ಕಿಕರಿಂದ ವಿಶ್ವೇಶನೊಡ್ಡೋಲಗಂ ದೊಡ್ಡಿತಾಗೆ[14]ಸೆವುದು[14] ೩೯

---

1 ಯತಿ ಪ್ರಾಸಃ ದೇಸೀಯ ಸಕ್ಕದ ಚೆಲ್ವಂದ ಚಿತ್ರಾರ್ಥಮುಚಿತೋತ್ಪ್ರೇಕ್ಷೆ ಶ್ಲೇಷಾರ್ಥದಂದವಹಗೌಳ ಪಾಂಚಾಳ ವೈದರ್ಭ ರೀತಿಗಳ (ಚ) 2 ಸಿಹು (ಚ) 3 ಲ್ಕ (ಚ) 4 ಯನೇಕಂ (ಚ) 5 ಗಳ್ (ಗ) 6 ಮೆಚ್ಚಿನ (ಗ) 7 ದಭ್ಯುದಯವಹ (ಚ) 8 ಯಂ (ಚ) 9 ವಂ ಪೇಳ್ವವೆ (ಚ) 10 ಳಿಂದಲು (ಚ) 11 ರಿಂದ (ಚ) 12 ಷಸರಸಾಸಿರನ್ಯಾಯಗಿರಿವಜ್ರಮೆಂಬ (ಚ) 13 ವ (ಕಗ) 14 ತ್ರವು (ಗ)

ತುರುಗೆವೆಯ ಓರೆನೋಟಂ ಮೋಹಿಗಳ ಕಾಟಿ
ಸರಸನುಡಿಗಳ ತಂಪು ಭೋಗಿಗಳಯೆರ್ದೆಗಿಂಪು
ನಿರತವಧರದ ಕೆಂಪು ವಿಟರ ಭಾಗ್ಯದ ಪೆಂಪು ರದನ ಮೋಹನದ ಕದನ
ವರಮೊಗದ ಹೊಗರು ಕೋವಿದರ ಹೃದಯದ ತಿಗುರು
ಪರಮಕತ್ತುರಿಬೊಟ್ಟು ಸಂಗಸುಖರಸದೊಟ್ಟು
ಭರಿತಜವ್ವನ ಪೊನ್ನಪುತ್ತಳಿಯ ಪಾಂಗಿನಿಂದಿರ್ದರಾ [1]ಕಾಮಿನಿಯರು[1] ೪೦

ತೋರದುರುಬಿನ [2]ಸಣ್ಣನವಿರಿನೊಳ್[2] ಮುಡಿದಿರ್ದ
ಭೂರಿಮಲ್ಲಿಗೆ[3]ಗಳಿಂ[3] ತಾರಹಾರದ ಚೆಲ್ವ
ಸಾರಯೇಕಾವಳಿಯ ಮೌಕ್ತಿಕದ ಗುದಿಯ[4]ಪೆಂಪಾದ[4] ಹರಳೋಲೆ[5]ಯುಸುಮಿಂ[5]
ಚಾರುಕನಕದ ಕಟಕ ಕೇಯೂರ ಪವಳಸರ
[6]ಹೀ[6]ರರತ್ನಗಳಿಂ[7]ದ ಕೆತ್ತಿದುಡಿದಾರದಿಂ[7]
ನೀರೆಯರು ನಿರುಪಮವಿಹಾರೆಯರು ಸರ್ವೇಶನೋಲಗದೊಳಿರ್ದರೊಲವಿಂ ೪೧

ಹೊನ್ನರನ್ನದ ಪಿಡಿಗಳುಳ್ಳ ಚಾಮರ ಕುಂಚ
ಮುನ್ನತದ ಭೃಂಗಾರು ವೇಟುಪಾವುಡ ಹಡಪ
ಸನ್ನುತದ ಸಂಬಳಿಗೆ ಕಾಳಾಂಜಿ ವ್ಯಜನವಾವುಗೆ ಖಡ್ಗ ವೇತ್ರಂಗಳಂ
ಚೆನ್ನೆಸೆವ ಕನ್ನಡಿಯು ಮುಂತಾದವಂ ಪಿಡಿದು
ಕನ್ನೆಯರು ಸಕಲಸಂಪನ್ನೆಯರು ಬಹುಕಳಾ
[8]ಭಿನ್ನೆ[8]ಯರು ವಿಶ್ವೇಶನೂಳಿಗದೊಳಿರ್ದರಾ [9]ಸಭೆಯ[9] ಸಿರಿವೆಣ್ಣನಂತೆ ೪೨

ಆ ಸಮಯದೊಳಗಖಿಳ ವಿನಿಯೋಗವೆರಸಿ ನೃಪ
ರಾಶಿ ನಿಂದಿರೆ [10]ಪುರಾಣಾ[10]ಗಮಪ್ರಶಸ್ತರಹ
[11]ಭೂ[11]ಸುರಸ್ತೋಮ ಶೈವಾಚಾರನಿಪುಣ ನಂಬಿಗಳು ಕುಂಭಿಯ ಶಿರದೊಳು
ಲೇಸಾದ ಸುರನಿಮ್ನಗಾಂಬು[12]ವ ಮಹಾರಜತ[12]
ಭಾಸುರದ ಘಟದೆ ತಂದಾಗ ಕಲಶದ ಮಂತ್ರ
ನ್ಯಾಸಮಂ ಮಾಡಿ ಯೋಗ್ಯದ್ರವ್ಯದಿಂದರ್ಘ್ಯಪಾದ್ಯಾಚಮನವನಿತ್ತು ೪೩

---

1 ನಂದದಿಂದ (ಚ) 2 ಕಬರಿಕೇಶದೊಳ್ (ಚ) 3 ಯರಲ (ಚ) 4 ಸೋರಂಭ (ಚ) 5 ಯೆಸೆಪ (ಚ) 6 ಹಾ (ಕಗ) 7 ತೆತ್ತಿಸಿದ ಉಡಿದಾರ (ಚ) 8 ಮಾನ್ಯೆ (ಕಗ) 9 ಸ್ಥಾನ (ಚ) 10 ವೇದಾ (ಚ) 11 ಭಾ (ಚ) 12 ಮಂ ಜಾಂಬೂನ (ಚ)

ಶ್ರೀರುದ್ರ ಶಿವಸೂಕ್ತ ಬ್ರಹ್ಮ ಪಂಚಬ್ರಹ್ಮ
ನಾರಾಯಣೀಯ ಪವಮಾನ[1]ಕೈವಲ್ಯ[1] ಬೃಹ
ದಾರಣ್ಯ ಪುರುಷಸೂಕ್ತಾದಿ ರವಮುಣ್ಮಲಭಿಷೇಕಮಂ ಮಾಡುತಿರಲು
ಭೇರಿ ಪಟಹಂ ಢಕ್ಕ ಡಮರು ಡಿಂಡಿಮ ಮಡ್ಡು
[2]ಘೋ[2]ರಜರ್ಝರ ಕಾಂಶ್ಯತಾಳ ವಂಶಾದಿ ಸುಷಿ
ರಾರ[3]್ದ[3]ವಾದ್ಯ ಪೊಳಗಲ್ಕೆ ದೆಸೆ ಘುಮ್ಮಿಡಲ್ಕೊಡ್ಡೋಲಗಂ ಮೆರೆದುದು ೪೪

ಇಂತು ನಾನಾವಿಧಾನದ ಪೂಜೆ ಮಾಡೆ ತದ
ನಂತರದೊಳಂಬಕತ್ರಯನ ಮುಂದೆಸೆಯೊಳ್ ಸ
ಮಂತು ನರ್ತಿಸಲೆಂದು ಬಂದರತಿ ಸಿಂಗರಂ ಮೆರೆಯೆ ಮೋಹನಗರೆಯಲು
ಸಂತಸಂ ಸೈಗರೆಯೆ ಕಾಮರಸ ಮೈ[4]ಮಿಾ[4]ರೆ
ಕಂತು ಮೇಘಂ ಮೂಡೆ [5]ಕಾಂತ[5]ಶಿಖಿ ನಲಿದಾಡೆ
ಚಿಂತೆಯೊಳೆ ಯಮಿನಿಕರ ಕೂಡೆ ಮನಮೋಡಾಡೆ ದಿಟ್ಟಿಗಳ್ [6]ನಟ್ಟು[6] ನೋಡೆ ೪೫

ಉಟ್ಟು ಪಟ್ಟಾವಳಿಯ ಚೀನಿ ಚೀನಾಂಬರವ
ತೊಟ್ಟು ಕಂಚು[7]ಕವ[7] ಸೀಮಂತರೇಖೆಯೊಳೆಳ
ಲಿಟ್ಟ ಮುತ್ತಿನ ಥಾಳ ತೋರಬೊಟ್ಟಿನ ಕೆಳಗೆ ಯಿಟ್ಟ ಕತ್ತೂರಿಯ ಸಿರಿಯ
ಬಟ್ಟಗಲ್ಲದ ಮಕರಿಕಾಚಿತ್ರಲೇಖನದ
ಕಟ್ಟೆಸಕದೆಳೆವರೆಯದಾವೆಣ್ಗಳಡಿಯಿಡಲ್
ನಿಟ್ಟಿಸುತ ಹಂಸೆ[8]ಗಳೆ[8] ನಾಣ್ಚೆ ಸರಸಿಯ ಸಾರ್ದವೇನೆಂಬೆನಾಶ್ಚರ್ಯಮಂ ೪೬

ನವಯೌವನದ [9]ಹೇಮ[9]ಲತೆಯ ಪಾಂಗಿಂ ಬಳುಂ
ಕುಮ[10]ಮೆಯ್ಯ[10] ವಾರನಾರಿಯರು ಸವಿಶೇಷಮಹ
ವಿವಿಧಮೌಕ್ತಿಕ ರತ್ನ ಕನಕಮಯ ಭೂಷಣಂಗಳ ತಿಣ್ಣಕಾರದಲಸಿ
ಅವಯವಂಗಳ ಪ್ರಸಾರಣ[11]ದಿಂದಲೊ[11]ಲೆಯಲ್ಕೆ
ತಮೆ ಘರ್ಷಣಂಗೆಯ್ಯಲುದಂರ್ದರಲ[12]ಪುಡಿಯಿಂದ[12]
ತವಕದಿಂ ರಂಗವಲ್ಲಿಯನಿಡುತ ವೀಧಿಯೊಳ್ ಬಂದರೆಂಬಂತೆಸೆದರು ೪೭

---

1 ಚಮುಕಂ (ಚ) 2 ತೋ (ಚ) 3 ಮ್ಯ (ಚ) 4 ದೋ (ಕ) 5 ಭ್ರಾಂತು (ಚ) 6 ಕೋಟು (ಗ) 7 ಕಿಯ (ಚ) 8 ಗಳ್ (ಚ) 9 ಸ್ವರ್ಲ (ಚ) 10 ವರ್ಷ (ಚ) 11 ದೇಹವ (ಚ) 12 ಮಣಿ ಹೇಮ (ಚ)

ಉತ್ಪಲ[1]ದ ಕರ್ಣಾವತಂಸಮಂ[1] ಜವ್ವಾದಿ
[2]ಕತ್ತುರಿ ಪುಣುಂಗು ಸಿರಿಗಂಧದೆಣ್ಣೆಯಿನಂಮು
ತ್ತುತ್ತಮದ ಗಂಧವಿಧಿಯಂ ತಾಳಿ ಮಘಮಘಿಸುತೆಣ್ದೆಸೆಯ ಬರುತಿರಲ್ಕೆ
ಎತ್ತಲೆತ್ತಲು ತುರುಬಿನೊಳ್ ಸೂಡಿದಲರ ಪಾ
ಯ್ದೊತ್ತರಿಸಿ ಕುಳಿತು ಝೇಂಕರಿಪ ತುಂಬಿಗಳ ಪೊ
ಯ್ಯುತ್ತಿರುವರೆಂತು ನಡೆದಪರೆಂಬ ವಿಟರಿಂದ ವೇಶ್ಯಾಜನಂ ಸೊಗಸುಂಗುಂ[2] ೪೮

ಕಂಗಳೋ [3]ಕಾಮಂಬಾಣಂಗಳೋ ಕಟ್ಟಿದಲ
ಕಂಗಳೋ ಕಾಮುಪಾಶಂಗಳೋ ಶಿಖರನಖ
ರಂಗಳೋ ಕಾಮಕುಂತಂಗಳೋ ಪೊಚ್ಚಪೊಸವಾಳೆ ಸುಳಿಯಂತೊಪ್ಪುವ
ಅಂಗವೋ ಕಾಮರಾಜ್ಯಾಂಗವೋ ತ್ರಿವಳಿಗಳ
ಭಂಗವೋ ಕಾಮರಸನದಿಯಮೇಲ್ವಾಯ್ದೆಸೆವ
ಭಂಗವೋ ಮೇಣಾ ವಧೂಟಿಯರು ಲೂಟಿಸಿದರಖಿಲ ವಿಟಚಿತ್ತಧನಮಂ[3] ೪೯

ಮುನ್ನ ಕಾವಂ ಹರನ ಕೂಡೆ ಜಯಿಪನೆಯಿಲ್ಲ
ತನ್ನ ಪೊಂಬೊಗುರಿ [4]ವಿಃಕ್ಕಾದವರ್ಗಳವಡದು[4]
ನನ್ನಿಯಿಂದಿವ[5]ನೀಗ[5] ಹೃದಯದೊಳ್ ಮರಸುತೆನ್ನಂ ಪೋಲ್ವ ವಿಟರ ಕೈಗೆ
ಬಿನ್ನಣದಿ ಕೊಡಲವರ್ ನನ್ನ ಮೋಹದಿ ನಿಮ್ಮ
ಮನ್ನಿಸುವರರ್ಥಪ್ರಾಣವನೀವುತೆನ[6]ಲಿತ್ತ[6]
ಪೊನ್ನ[7]ಬೊಗರಿಗಳಿವೋ ಎನಿಸುವ ಪಯೋಧರೆಯರಾಗಲೊಡನೈ[7]ತಂದರು ೫೦

ಪಚ್ಚೆಕರ್ಪುರ ರಜತ ಪೊಸತಾದ ತಣ್ಪನೆಲೆ
ಯಚ್ಚ[8]ಪರಿಮಳದ ಸೊಬಗಾಂತ ಚೆಂದುಟಿಗೆ ಪೊರ
ಪೊಚ್ಚಮಿಲ್ಲದ ಪಲ್ಲವಪ್ರತಿಮಹಸ್ತಕ್ಕೆ ಕಮಲಕೋಮಲಮುಖಕ್ಕೆ[8]
ಪಚ್ಚೆವಣ್ಣದ ಗಿಳಿಯು ಕೋಕಿ[9]ಲವು[9] ಭ್ರಮರಾಳಿ
ಮುಚ್ಚುತ್ತ ಝೇಂಕಾರದಿಂದ ಪಾಡುತ್ತಬರೆ
ಪಚ್ಚೆವಿಲ್ಲನ ಪರಮಶೃಂಗಾರದುದ್ಯಾನದೇವತೆಯರೆನೆ ನಡೆದರು ೫೧

---

1 ಸುಕರ್ಣಾವತಂಸ (ಚ) 2 ಬಿತ್ತರದಿ ತಳೆದ ಶ್ರುತಿಪುಟದ ಕತ್ತರಿರಜದ।ಮೊತ್ತಕುಂತಳಕಬರಿ ತುರುಬಿರ್ದ ಕುಸುಮಧಮ್ಮಿಲ್ಲ ಕುಂಕುಮಮಲಯಜ।ಉತ್ತಮ ಸುಕರ್ದಮಂ ಲೇಪಿಸಿದ ನಿಬಿಡಕುಚ।ವೆತ್ತ ವಾರಾಂಗನೆಯರ್ಕೈದೆ ಪುರ ಮಘಮಘಿಸ।ಲಿತ್ತಲೆಂಬಂದದೀ ನಾಗಕರ್ನಿಕೆಯರೆನೆ ಮೆರೆದರಾ ನರ್ತಕಿಯರು (ಚ) 3 ವಿರಹಿಗಳ ತಿಂಗಳೋ ಓರೆದುರುಬಂಗಳೊ ವಿಟರದುರುಜಂಗಳೊ ಚೆಂಡಿನಳಕಂಗಳೊ ಸುಖದ ಪುಳಕಂಗಳೊ ವಚನಂಗಳೊ ನಂದಕಗಳೊ ಜೇಂಗಳೊ ಅರೆಬಿರಿದರಲಂಗಳೊ ಬಾಯ್ಗುಳಿನಿಸುವಂ ಪೆಣ್ಗಳೊಗ್ಗಿನಿಂದಂಗಜಾರಾತಿಯುಗಜಾರ್ದಂಗನೋಲ್ಯೆಸಲೆಂದು ಬರ್ದಿಂ ಬಂದರು (ಚ) 4 ಕನಕದ ಕಂತುಕಗಳಂ (ಚ) 5 ನಿಮ್ಮ (ಚ) 6 ಲೆಸೆವ (ಚ) 7 ಕಂತುಕ ಬೊಗರಿ ಕುಂಭ ಪಾಂಗಿನ ಪಯೋಧರೆಯರುಗಳ್ಳೈ (ಚ) 8 ಸೌರಭವೆರೆದ ಚೆಂದುಟಿಯ ಪಣ್ಗ ಕರ।ವಚ್ಚರಿಯ ಕೋಮಲ ಸುಕಿಪಲಯುಕೆ ಕುಮುದ ಕಮಲದ ಸವಡಿತನುಗಂಪಿಗೆ (ಚ) 9 ಲಂ (ಚ)

ವಿದ್ರುಮದ ಲತೆಯು ಜವಳಿಯ ದೇಹದಬಲೆಯರು
ಕ್ಷುದ್ರನವಮಲ್ಲಿ[1]ಕೆ[1]ಯ ಕಳಿಕೆಗಳ [2]ತೆರದೊಳ
ಚ್ಛಿದ್ರವಾಗಿರುವ[2] ದಂಭೋಳಿಯಂದ[3]ದೊಳು ಪೊಸಸಾಣೆಯಿಂದೊಪ್ಪವಾದ[3]
ಅದ್ರಿವೈರಿಯ ಮಣಿಯ [4]ಭಾವದೊಳು ದಾಡಿಮದ[4]
ಸದ್ರುಚಿಯ ರ[5]ನ್ನಂಗಳಂದದೊಳು ರದನತತಿ[5]
ಭದ್ರದೋಲಗಶಾಲೆ ಮುಂದೆ [6]ಕಿರುನಗೆಯಿಂದ ಥಳಥಳಿಸಲವರೆಸೆದರು[6] ೫೨

ಅವರ ದೇಹದ ಕಾಂತಿ ಯತಿಜನರ ಹೃದ್ಭ್ರಾಂತಿ
ಯವರ ಮೋಹದ ವದನ ಬ್ರಹ್ಮಚರಿಯರ ಸದನ
ಯವರ ಕುಡಿನೋಟಕಪತ್ನಿಗಳ [7]ಕಡೆಯಾ[7]ಟ ಪುರ್ಬು ಯೋಗಿಗಳ ಮರ್ಬು
ಅವರ ಅಳಿಕದ ತಿಳಕ ಭೋಗಿಗಳ ತನುಪುಳಕ
ಮವರ ಪೂವಿನ ಹಾರ ವ್ರತಿಗಳ್ಗೆಯದೆಹಾರ
ವಂವರ ಸೊಬಗಿನ ಸೊಲ್ಲು ಕವಿನಿಕರಮನ [8]ರಥ[8]ಲ್ಲೆನಲು ನಡೆದ[9]ರಂದು ಮುದದಿ[9] ೫೩

ಅಲರ್ಗಣ್ಣ ಘಾಳಂಜನಂವೆರಸಿ ರಂಜಿಸಿರೆ
ಅಲರ್ದ ಮೊಗ ಮೃದುಳೋಷ್ಠ ಕ[10]ಳ[10]ಕಳಿಸೆ ರದನ ನಿ
ವರ್ಗಳಪ್ರೌಢಿಯಿಂ ನಲಿಯೆ ಮಲ್ಲಿಕೋತ್ಪಲಕಮಲಮಸು[11]ಗೆ[11] ಮಾಂದಳಿರ ಕಳೆ[12]ಯು[12]
ಚೆಲುವಾದ ಕಾವನಂ ನೆರೆ ಪೈಸರಂಗೊಂಡು
ನಲವಿನಿಂ ನರ ನಾಗ[13]ಸುರ[13]ರೆಂಬ ಮೃಗಗಳಂ
ತೊಲಗದಂತೆಸೆದು ಕೆಡಪುವೆವೆಂಬ ವಾರನಾರಿಯರಳ್ತಿಯಿಂ ಬಂದ[14]ರು[14] ೫೪

[15]ಕಾ[15]ಳಾಹಿನಿಭವೇಣಿ [16]ಕಮಲಕೋಮಲಪಾಣಿ[16]
ತೋಳಚಂಪಕಮಾಲೆ [17]ವೀರರ್ಗೆ[17] ಸಂಕೋಲೆ
ನೀಳ್ಕದ[18]ಪಿನ[18] ತೆಳ್ಪು ನಿರ್ಜರರ ಕಣ್ಪೊಳಪು ತ್ರಿವಳಿ ರಸಿಕರ ಪೊಂ[19]ಪು[19]ಳಿ
[20]ಭಾಳ[20]ಚಂದ್ರನ ಲೇಖೆ ಶೃಂಗಾರರಸಲೇಖೆ
ಸ್ಥೂಲಜಘನದ ಭಾವ ಕಾಮಿಗ[21]ಳ ಸಂಜೀವ[21]
[22]ಭಾಳ[22]ಲೋಚನನ ಓಲಗಕೆ ಬರುವಬಲೆಯರ [23]ಪೆಂಪ[23]ನದನೇವೇಳ್ವೆನಂ ೫೫

---

1 ಗೆ (ಚ) 2 ಪಳಿವವ.ಳರುದ್ರಮಿಲ್ಲದ (ಚ) 3 ಗಳ ಪಾಗಿವ ಸೇರುವೆಯ ಚೆಲ್ವ (ಚ) 4 ಪೋಲ್ವ ದಾಡಿಮಬೀಜ (ಚ) 5 ತ್ನಂಗಳಂತೆ ಬಹುರದನದ್ಯುತಿ (ಚ) 6 ಪುಷ್ಪಾಪಚಯ ನೀವಾಳಿಯುವರಲಿ ನಂತೆಸೆದವು (ಚ) 7 ರೋಡಾ (ಚ) 8 ಯಿ (ಕ) ವಿ (ಗ) 9 ದರ್ ಮುದದೊಳು (ಚ) 10 ದ (ಚ) 11 ಕೆ (ಚ) 12 ಯು (ಚ) 13 ಮಲ (ಚ) 14 ರಂದು (ಚ) 15 ನೀ (ಚ) 16 ನಿಪುಣ ಮುನಿಗಳ ಥಾಣಿ (ಚ) 17 ವಿಟರ್ಗೆ (ಗ) 18 ಪದ (ಚ) 19 ಬು (ಕಗ) 20 ಫಾಲ (ಗ) 21 ಳಿಗತಿ ಥಾವ(ಚ) 22 ಫಾಲ (ಗ) 23 ಅದಟ (ಚ)

ಬಳ್ಕುವತಿಬಡನಡಂವಿನಬಲೆಯಂ [1]ಪೊಗರೊಗುವ
ತಳ್ಕಿನ ಲಸಜ್ಜಲಂ[1] ನಾಭಿಕೊಳದೊಳ್ ತುಂಬಿ
ತುಳ್ಕ[2]ತ್ತಮಿರೆ[2] ಯೆಯುವತಿಜನದ [3]ಹರೆಯದ[3] ಕರ್ಚುಗಳಾಯತಂ ಕನಕಮಯದ
ಉಳ್ಕಕಳಶಗಳಲ್ಲಿಯೆ ರೆಯುತ್ತನಂಗನೃಪ
ಗಳ್ಕರಿಂ ತಳ್ಕಿಟ್ಟು ರನ್ನಗವಸಣಿಗೆ[4]ಯದ
ರೊಳ್ಕಟ್ಟಿ ಕಾಣಿಕೆಯ ತಂದವೊಲ್[4] ಪೊಲೆಯಡಕ ಮೊಪ್ಪಿ[5]ದುಸು[5] ನಚ್ಚಣಿಯರ ೫೬

ರನ್ನ[6]ದೆಸಳಿನ[6] ಕೊಪ್ಪು ಮದನ ಮೋಹದ [7]ಕೊ[7]ಪ್ಪು
ಹೊನ್ನಹೂವಿನ ಹೊಳವು ಮೋಹನದ [8]ನೆಲೆ[8]ಸುಳುಹು
ಕೌರ್ನಪೂರದ[9] ಭಾವ ಜತಿಗಳೆರ್ದೆಯ [10]ವಿಭಾವ[10] ಬಾವುಲಿಯ ಮಣಿ ಸಂರಮಣಿ
ಬಿನ್ನಣದ ಯಂಟಿ ಋಷಿಜನರ ಮನಸಿನ [11]ಮಿಂ[11]ಟೆ
ಕನ್ನೆಯರ ಜಂಪು [12]ಸರ[12]ದಿಂಪು ಸೂಸಕಪಾಶ
ದನ್ನೆಯರು [13]ಚಾರು[13]ಭೂಷಣಗಳಿಂ ನಡೆತಂದರೀಶನೋಲೈಸಲೆಂದು ೫೭

ಸಾರ[14]ತರವೆನಿಸುವಾಮಳಕಫಲದಂತೆಸೆವ[14]
ತೋರಮುತ್ತಿನ ಯಕ್ಕಸರದ ದೇವಚ್ಛಂದ
[15]ಹಾರಗಳ[15] ಸೂಕ್ಷ್ಮಮಣಿಗುಂಚ್ಛ ಗುಚ್ಛಾರ್ಧಮಾಣವಕ ಗೋಸ್ತನಸರಗಳ
ನೂರು[16]ಮೂವತ್ತೆರಡು ಪದಿನಾರು ಅರುವತ್ತ
ಮಿರಿರ್ದ ನಾಲ್ಕುನಾಲ್ವತ್ತು ಯಿಪ್ಪತ್ತೈದು
ನೂರರೊಳಗರ್ಧಮಣಿಗಳನಾಂತ[16] ಸರಗಳಿಂ ಸಿಂಗರಿಸಿ ನಡೆದರಾಗ ೫೮

ಮುಂಡಿಯ ಮುತ್ತಿನ ಚಂಡು ತಾಪಸರ ತಲೆಗುಂಡು
ಸಡಗರದ [17]ಕಟ್ಟಾಣಿ ಜತಿಜನದ ಕಾಲಾಣಿ[17]
ತೊಡರ್ದ ಗ್ರೈವೇಯಕಂ ಮಾ[18]ಯಾವಿದೂರರೆಂದೆನಿಪರ್ಗೆ ಘನಸಾಯಕಂ[18]
ಬೆಡಗಿ[19]ನಂದಿಗೆ ಶಾಂತರಾದ ಮುಂದಿಗೆ ಕಿಲುಕು
ತೊಡರು ವಿರತರ ಕೊಲೆಗಜಡರು ಪೇಳುವರು ಮೇ
ಲೊಡಲೆಂದು ತಮ್ಮೊಳಿಂತೆಸೆಯೆ ತಾನೊಂದಾಗಿ[19] ನಡೆದುದಾ ವೇಶ್ಯಾಜನಂ ೫೯

---

1 ಶೃಂಗಾರ|ವಳ್ಕುತಿಹ ರಸಜಲಂ (ಚ) 2 ವ ಮೇರೆ (ಗ) 3 ಯುವನೆನಿಪ (ಚ) 4 ಗವಿಸಿ।ಯುಳ್ಕು ತೆರ್ದೆಯೊಳಾಂತು ಬಂದವೊಲ್ (ಚ) 5 ದವು (ಚ) 6 ದಳಿಕಿನ (ಚ) 7 ಕ (ಚ) 8 ಸಂ (ಚ) 9 ನ್ನವುರುವಿನ (ಚ) 10 ಸುಖಾವ (ಚ) 11 ತಿಂ (ಚ) 12 ರಸ (ಚ) 13 ಕರ್ಣ (ಚ) 14 ನೀರೊಸರ್ವಮಳವಾಮಳಕಫಳ ಪೊಳೆವ (ಚ) 15 ನೀರೆಯರು(ಚ) 16 ಮೌಕ್ತಿಕಹಾರ ಮೂವತ್ತೆರಳ್ ಸರಂ। ಆರುಪದಿಯುಪ್ಪಿನಾಲ್ವತ್ತುಮಾಲೆಯರಮ್ಯ। ಭೂರಿಯೈವತ್ತು ಇಪ್ಪತ್ತೈದು (ಚ) 17 ಪತ್ರಪಾಶ್ಯಂ ಸಿದ್ಧರತಿಹಾಸ್ಯ (ಚ) 18 ಯಿಕಂ ವಿಸಾಂತ್ರಿಕಲಲಾಂತಿಕ ಭ್ರಾಂತಿನೋಡೆ (ಚ) 19 ಮಹಸೂಡಗಂ ಕವಡುವಾಗ್ಮಿಗಳ ಗಡಣ ಗಮಕಿಗಳವಲಯಂ ವಿಲಯವೆನಿಸುತ್ತಿಹ ಜಡಿವ ಆಭರಣ ಆವರಣದ ಬೆಡಂಗಿನಿಂ (ಚ)

ಕೊರಲ ಕನಕದ ಬಿಂದಿ ಮದನ ಮೋಹದ ಸಂಧಿ
ತರಳ ತಾರಾಹಾರ ತರ್ಕಿಪರಯದೆಹಾರ
ಬೆರಲವುಂಗುರದಂದ ಬೆಸೆದ ಕಾಮಾನಂದ ಸಾಕ್ಷರಂ ಮಾಯಾಕ್ಷರಂ
ಮರುಳಂಗೊಳಿಸುವ ಕಂಕಣಂ ಮುಕ್ತರಾಗರಾ
ದರ ಕಣ್ಣ ಕಂಕಣಂ ಕೈಕಟ್ಟು ಮನದಟ್ಟು
ಪರಲೋಕಸಾಧಕರ ಕಾಮರಾಯನ ವೀರಭಟರವೊಲ್ ನಡೆತಂದರು ೬೦

ನೀಲಮೇಘಂ ದಾಂಟಿ ಸಪ್ತವಿಂಶತಿಋಕ್ಷ
ಜಾಲಚಂದ್ರನ ಕೆಳಗೆ ಬಳಸಿಯಿರ್ಕೆಲದೊಳಗೆ
ಸಾಲಿಟ್ಟು ನಿಂದುಭಯ ಶಿಖರಿಗಳ ಮರೆಗೊಂಡು ಬರ್ಪ ಕಾಳಾಹಿ ಶಿರಮಂ
ಲೀಲೆಯಿಂ ತುಳಿದಂತೆ ತಾರಸರ ಬಡಬಾಸೆ
ಸ್ಥೂಲಕುಚಯುಗ್ಮ ಮುಖ ಕೇಶದಲೆಯುರು ಶಶಿ
ಮೌಳಿಯಂ ಯಜಶಿರಕಪಾಲಿಯಂ ಓಲೈಸಲೆಂದು ಚದುರಿಂ ಬಂದರು ೬೧

ಅಂಶುಮಾಲಿಯ ಸ[1]ಖದ[1] ಮೊಗದ [2]ಪೆಣ್ಗಳ್[2] ದೇವ
ಹಂಸನಾಲಯಕೆ ಬರುವಲ್ಲಿ ಮಂಜೀರರವ
ಹಂಸ[3]ರವದಂತೆ ಶೋಭಿಸೆ ಕಂಡು ನಿಜಹಂಸಪಕ್ಷಿಗಳ್ ಬೆಡಗುಗೊಂಡು[3]
ಸಂಶಯಗಳಿಲ್ಲದಡಿಗಳ ತೊಡರ್ದವೋ ಎನಲ್
ಹಂಸಕಂ ವೊಪ್ಪೆ ನಡೆತಂದರನವರತ ಸುರ
ವಂಶ [4]ರಕ್ಷಕನ[4]ಕಂಸಾರಾತಿಯರಸನೋಲೈಸಲೆನುತತಿಮುದದೊಳು ೬೨

ಧೀರನುರೆ ಧೀರೋದ್ಧತಂ ಧೀರಲಲಿತನತಿ
ಧೀರಶಾಂತನೆನಿಪ್ಪ ಪುರುಷರಂ ಬಿಡದೆ ತ
ಮ್ಮೋರೆನೋಟದ ಸರಳಿನಿಂದಿಟ್ಟು ಕೆಡಹಿಯನುಕೂಲನಂ ದಕ್ಷಿಣನನು
ಮೇರೆ ಮೀರಿದ ಶಠನ ದೃಷ್ಟನಂ ನಗೆನುಡಿಯಂ
ಕೂರಲಗಿನಿಂದಿರಿದು ಕೆಡಹಿ ಶಶ ವೃಷ ಹಯರ
ಸಾರಿಕೊಂದರೆ ಪಾಪಮಿವರು ಪಶುಜಾತಿಯೆಂದಂಗಜಂಗರುಹುತಿಹರು ೬೩

---

1 ಖಿಯ (ಚ) 2 ವೇಶ್ಯರ್ (ಚ) 3 ಮಾಗಿರೆ ಕೇಳ್ದು ದೀಹದಂಚೆಗಳ್ ಬಂದು ನೋಡುತ್ತ ನಡೆಯಂ ದವಂ (ಚ) 4 ನಾಶನ (ಚ)

ವಿಟರ ತಲೆಗಳ ತುಳಿದುಂ ನಟಿಸುತ್ತ ಹಾಸ್ಯದು
ತ್ಕಟ ವಿದೂಷಕರ ವಿಾಸೆಯ ಪಿಡಿದುಂ ಕಸ[1]ಗಳಂ[1]
ಕಟಕಿಯಿಂ ಪೊರಿಸುತ್ತ ಪೀಠಮರ್ದ[2]ನ ನರರ ನರ[2] ಪಶುಗಳಂ ಮಾಡುತ
ಕುಟಿಲತನದಿಂ ನಾಗರಿಕರ ಚಿಟುಕಿಕ್ಕುವತಿ
ಯಟವುಟದ ಕುಟಿಲಾಳಕದ ವಿಾಟಿನಬಲೆಯರ್
ನಟಿಸಲೆಯ್ದಿದರು ಸುರಕೋ[3]ಟೀರಧನ್ಯ[3]ಪದ ಪಂಕಜನ ಮುಂದೆಸೆಯೊಳು ೬೪

ಕಾಲಸರಪಣಿ ಘಂಟೆ ಮೌಕ್ತಿಕದ ಪೆಂಡೆಯುದ
ಲೋಲರನ್ನದ ತುರಾಯದ ಚಂದ್ರಲೇಖೆ[4]ಯುಂ[4]
ಕೀಲಿಸಿದ ಖದ್ಯೋತ ಪಂಚವರ್ಣದ ಧವಳಮಲಹಾರಿ ಮುಖ್ಯಪಾದ
[5]ಮೇಲು[5]ಬಿರಿದುಗಳುಳ್ಳ ವೇಶಿಯರ್ [6]ಸಗ್ಗಿಗರ
ನೀಲಾಳಕಿಯರುಗಳ[6] ಜರೆವುತ್ತ ಯೌವನ[7]ದಿ[7]
[8]ಸ್ಲೋ[8]ಲಿಸುತ [9]ಸುರಧುನೀ[9]ಮೌಲಿಯ ಸಭಾಂತರದ ಮುಂದೆಸೆಗೆ ನಡೆತಂದರು ೬೫

ಬಂದೆಗರ ಸಿಂಹ ನವರತ್ನಮಯದಿಂದೆಸೆವ
ಸುಂದರದ ಸ್ವರ್ಣಕಂಭಗಳು ಸಾಸಿರ ಪೊಳೆವ
ತೆಂದವಡೆದಿರ್ಕೆಲದೊಳಿರೆ ರಂಗಮಂಟಪದ ಮಧ್ಯಕ್ಕೆ ಬರಲು ಮುದದಿಂ
ಬಂಧುರದ ಮಾಧವಕೆ ಶುಕಪಿಕ ಭ್ರಮರಾಳಿ
ಯಂದದಿಂ ಧ್ವನಿದೋರುವೊಲ್ ತಾಳಮದ್ದಳೆಯು
ಸಂದಣಿಸೆ ಪೊಂಬಟ್ಟೆ ತೆರೆಯ ಮರೆಯೊಳ್ ನಿಂದು ಪಾಡಿದರು ಪರಮೇಶನಂ ೬೬

ಶರಣು ಶಶಿಲೇಖಾವತಂಸ ಶಾಶ್ವತಗಿರಿಶ
ಶರಣು ಶುಭ್ರಾಂಶಾಂಶುಮೌಲಿ [10]ಶುಚಿನೇತ್ರ ನಿ
ಷ್ಕರುಣ[10] ಸಮವರ್ತಿಮದಭಂಗುರುಗಜಾರ್ಧಾಂಗ ಶರಣು ಪ್ರದ್ಯುಮ್ನನಾಶ
ಶರಣು ಪರಮೇಷ್ಠಿನುತ ಪರಮಾತ್ಮ ಪರ[11]ಮೇಶ[11]
ಶರಣು ಶಂಕರಗೆ ಭವಹರಗೆ ಕರುಣಾಕರಗೆ
ಶರಣೆನುತ ಪಾಡಿ ಪುಷ್ಪಾಂಜಲಿಯನಿತ್ತು ಸಂಭ್ರಮದಿಂದ ಕೈಮುಗಿದರು ೬೭

---

1 ಸಗಣಿ (ಚ) 2 ನರಮೇಟಿಯು (ಚ) 3 ಟಿ ಕೋಟೀರ (ಚ) 4 ಯಿಂ (ಚ) 5 ಸ್ಥೂಲ (ಚ) 6 ವೃದ್ಧಶ್ರವ|ಲೋಲ ರಂಭಾದಿಗಳ (ಚ) 7 ದಿಂದೆ (ಗ) 8 ಶೂ (ಚ) 9 ಶೈವಲಿನಿ (ಚ) 10 ಸಪ್ತಾ ರ್ಚಿಗೋ।ಶರಣು (ಚ) 11 ಬೊಮ್ಮ (ಚ)

ಪೊಂಗಳಶದಾತಪತ್ರಂಗಳಿತ್ತಿರೆ ಚಾವಂ
ರಂಗಳಂ ಢಾಳಿಸಲು ದಾಡಿಮಂ ಪಣ್ಮೊಸರ್ವೊ
ಲಿಂಗಡಲ ತೆರೆ[1]ಯ ಮೇಲ್ದೆರೆದೆರೆಗಳಂತೆ[1] ಸಹಕಾರಫಲಧಾರೆಯಂತೆ
ಪಿಂಗದಮೃತದ ಸೋನೆಗರೆವಂತೆ ಗಾನರಸ
[2]ಕಂಗೊಳಿಸೆ[2] ರಾಗವಂ ಪಾಡಿದರು ದಂಡಿಗೆಯು
ಪಾಂಗಂಗಳಾಂತ [3]ಗಂಧರ್ವರಿಂಗಿವರ್ಕಳಧಿ[3]ದೇವತೆಯರೆಂಬಂದದಿಂ ೬೮

[4]ಎರಡೆ ಮುಂದೆನಿಸಂಬಿಪ್ಪತ್ತು ಶ್ರುತಿಗಳ ಸು
ಸ್ವರ ಕೇಳಿಕೆಗೆ ಸೊಂಪುದಟ್ಟುವಂದದಿ ಪಾಡಿ
ಮರಳಿ ಷಡ್ಜಗ್ರಾಮದಲ್ಲಿ ಸಂಚರಿಸಿ ಗಾಂಧಾರ ಸಂಗ್ರಾಮವಿಡಿದು
ಚರಿಸಿ ಮಧ್ಯಗ್ರಾಮಂವಂ ತಿಳಿದು ಸೂರ್ಯಶಶಿ
ಕರಗಳಿಂದೊಗೆದಂ ತಂತಮ್ಮ ದಿನಯಾಮಿನಿಯ[4]
ಪರಿವಿಡಿಯೊಳಾದ ಮೂವತ್ತಾರು ರಾಗಂಗಳಲ್ಲಿ ಪಾಡುತ್ತಿರ್ದರು ೬೯

[5]ಸುಮುಖರಿ ಗವಂಪಧನಿಸಯೆಂಬ ವೃಷಜಾತಿಯಿಂ
ಧಮುಮ ಧನಿ ಸರಿಗಮುಪಯೆಂಬ ಧೈವತಜಾತಿ
ಪ್ರಮುಖದಿಂ ನಿದಸಸರಿಯೆನಿಸುವ ನಿಷಾಧಜಾತಿಯೆ ಮೊದಲುಗೊಂಡು ಮೆರೆದ[5]
ಕ್ರಮದಿಂದ ಪದಿನೆಂ[6]ಟು ಸ್ವಾಲಾಪರಸವೊ[6]ಸರೆ
ಯಮರರೀತಿತ್ರಯಂಗೂಡಿ ಪಾಡಿದರುದಿ[7]ಸಿ[7]
ಸುಮನಸರು ನಲಿದಾಡೆ ಗಾಯಕರು ಕೊಂಡಾಡೆ ಸಭೆಯ[8]ವರ ಮಕುಟವಂಲಂಗೆ[8] ೭೦

ಲಲಿತೆ ಭೂಪಾಳಿ ಸಾಳಗ ಗೌಳ ರಾಮಕ್ರಿ
ಮಲಹರಿ ವಸಂತ ಗುರ್ಜರಿ ನಾಟಿ ಕಾಂಬೋದಿ
ಘಳಮಂಜರಿಯು ಮೇಘ ದೇಶಿ ಧನ್ನಾಸಿ ಗಾಂಧಾರಿ ಬಂಗಾಳಿ ಪಹಡಿ
ಸಲೆ ಶಂಕರಾಭರಣ ಮುಖ್ಯರಾಗಂಗಳಂ
ಕಲ ಮಂದ್ರ ಗಂಭೀರ ತಾರ ಸ್ವರಯುಕ್ತದಿಂ
ದೊಲವಿ[9]ನಲಿ ಸಾರಿಣೀ ಮುಖ್ಯಮಾದೇಳು ತಂತ್ರಿಗಳಿಂದ ಪಾಡುತಿಹರಂ[9] ೭೧

---

1 ಯಂತೆ ತವರಾಜದಂತೆ (ಚ) 2 ವಂಗವಿಸೆ (ಚ) 3 ತುಳಗಂಧರ್ವರಿಷ್ಟದಧಿ (ಚ) 4 ಸ್ವರಸಪ್ತ ಶ್ರುತಿಗಮಕಗೀತಪ್ರಬಂಧಗಳೆ। ಮರಿತು ಸುಸ್ವರಸುರಾಗಮಧುರಾಕ್ಷರಂ। ಭರಿತಲಂಕಾರಮೆಂಬಾರು ಲಕ್ಷಣ ಷಡ್ಜಗ್ರಾಮಮಧ್ಯಮಗ್ರಾಮಮುಂ । ನಿರತಗಾಂಧಾರ ಗ್ರಾಮತ್ರಯಂಗಳ ತಿಳಿದು। ವರಪಂಚದಶರಾಗ ಷಟ್ಕ್ಯದ್ಧಜಾತಿಯಂ (ಚ) 5 ಗಮುಪದನಿಸಮೆನಿಪ ವೃಷಭಜಾತ್ಯಾಳಾ। ಪಮಿತದ ನಿಸರಿಗಮುಪದದ್ಯೆವ ಜಾತಿಯೆಂ। ದಮುಮನಿದಪಗರಿಸನಿಯೆಂಬ ವಿಷದ ಜಾತ್ಯಾಳಾಪ ಮುಖ್ಯವಾದ (ಚ) 6 ಟಾಲಾಪರ ಸಮೋ (ಚ) 7 ವಿ (ಚ) 8 ಮಕುಟವಲ್ಲಾಡಲು (ಚ) 9 ನಿ ನಿಶಾದ ಮೊದಲಾದೇಳು ತಂತ್ರಿ ಮೇಳದೊಳು ಪಾಡಿದರಭವನಂ (ಚ)

ಶುದ್ಧಸಾಳಂಗ ಸಂಕೀರ್ಣ ತವಣೆಗ[1]ಳೆನಿಸು
ವ[1]ದ್ಧಕ ಚತುರ್ವಿಧ ಮೃದಂಗವಂ ಮೇಳೈಸಿ
ಶುದ್ಧರೂಪಕ ಮೋಹರವಮೆಂಬ ತಾಳ[2]ದಿಂ ಕತ್ತುರಿಯ ಬೊಟ್ಟಿನಿಂದ[2]
ತದ್ಧಿಮ್ಮಿಧಿಮ್ಮಿಕಿತ ತದ್ಧಿಮ್ಮಿಕಿಟವೆಂದು
ವೃದ್ಧಿಯಿಂ ನುಡಿಸಿದರು [3]ಲಯ ರೀತಿದಪ್ಪದನಿ
ರುದ್ಧನೇತ್ರಾಕ್ಷಪ್ರದಾಯನಾ ಶಂಕರನ ಮುಂಗಡೆಯ ಭಾಗದೊಳಗೆ[3] ೭೨

ಕಾಲ ಮಾರ್ಗ ಕ್ರಿ[4]ಯಾಭೇದವುಂಮುನಾರೈದು
ತಾಳದ ದಶಪ್ರಾಣಗಳ ವಿಚಾರಿಸಿ ಮೇಲೆ
ಮೇಲೇರುವಲ್ಲಿ ಕೆಳಕೆಳಗಿಳಿವ ಕಾಲದೊಳ್ ನಾದ ಕಟ್ಟೊಡೆಯಂದಂತೆ[4]
ಲೀಲೆಯಿಂ [5]ಚಂಚತ್ಪುಟಾಟಂಕಗಳ ತೆರನರಿದು
ಕೇಳಿಕೆಯ ಕೇಳಿಸುವ ಮಾರ್ಧಂಗಿಕರ ಸಾಲು
ಸಾಲು ನಿಂದಿರ್ಪುದೀಶನ ಸಮ್ಮುಖದಲಿ ನಾನಾಮೃದಂಗಗಳ ಪಿಡಿದು[5] ೭೩

ತಿಂಗಳಿನ ತಣ್ಗದಿರ ಪಸರಿ[6]ಸುತ ನೃತ್ಯವಿಭ
ವಂಗೊಂಡು ಕಣ್ಮರಲ್ಕಾಂತಿ ಪುಂಸಭೆಯೊಳಗೆ[6]
ಪೊಂಗಳಶಕುಚ[7]ದ ಗಣಿಕಾಜನಂ ಸೊಗಸು ಕಳಕಳಿಸೆ ನಳಿದೋಳಲುಗಲಂ[7]
ಪೊಂಗೆಜ್ಜೆಯಱಲಿಯ ಕಾಂಚೀದಾಮ ಕದಕದಿಸೆ
ಪಿಂಗದರ್ಧೋರುಕಂ [8]ಚಲಿಸೆ ಕಂಕಣಮದಂರೆ[8]
ಯಂಗಜಾರಿಯ ಮುಂದೆ ನಟಿಸುತಿರ್ದಳು [9]ವೃಷ್ಟಿಗಾಲದ ನವಿಲ ಪಾಂಗಿನಿಂ[9] ೭೪

ಮತ್ತೊರ್ವ ಬೆಲೆವೆಣ್ಣು [10]ರತ್ನಾಂ[10]ಗುಲಿಯನಿಟ್ಟು
ಉತ್ತಮದ [11]ರತ್ನಗಂಧಂ ಪೂಸಿಯೆಳೆಗಾವಿ
ಯೊತ್ತಿ ಥಾಳಿಪ ಕಸೆಯ ಪಾವುಡಂಗಟ್ಟಿ ಕಡುಚೆಲ್ವ ರವಕೆಯನು ತೊಟ್ಟು[11]
ಬಿತ್ತರದ ನೂಪುರಂಗಳನಿಟ್ಟು ಕಾಲೊಳಗೆ
ಯತ್ಯಧಿಕ ಸಪ್ತತಾಳದ ಪೇರಣೆಯ ನಟಿಸೆ
ಮೃತ್ಯು[12]ಸಂಹರನ[12] ದೇವೋತ್ತಮನ ಮುಂದೆಸೆ[13]ಯೊಳೇನೆಂಬೆನಾ ಪೊಂಕಮಂ[13] ೭೫

---

1 ಳೆಂ।ಜು (ಚ) 2 ಗತಿ ಕತ್ತುರಬೊಟ್ಟನನುವದಿಸುತ(ಚ) 3 ಮಹಿಮಾಂಬುನಿಧಿಸಿತಕೃದ್ಧರನಮೋಕ್ಷಾಭಿವೃದ್ಧನ ಸಮಸ್ತಗುಣಬುದ್ಧಿನಟಿ ಮುಂದೆಸೆಯೊಳು (ಚ) 4 ಯೆ ಅಂಗಜಾತಿಗ್ರಹಂ ವಲಕಳಿಲಯ ಯತಿ ಪ್ರಸ್ತಾರ ದಶಪ್ರಾಣ ತಾಳಮಟತಾಳೆರಡು ಸ್ಥಾಯಿ ಸಂಚಾರಿಯಾರೋಹಿಯವರೋಹಿ ನಾಲ್ಕುಂ (ಚ) 5 ದುವ ಝಂಪೆ ತ್ರಿವುಡೆ ಕಟಮಟೆಯ ತಾಳ ಷಡ್ಜಿತ ಚಾಗಟಡಚ್ಚಪುಟಮುಖ್ಯ ತಾಳದರಿಗಳ ನುಡಿಸೆ ನಟ್ಟಣೆಯರತಿ ಪೆರ್ಚೆಮಚ್ಚ ಕೋವಿದರಮುದದಿಂ (ಚ) 6 ಪೊಲ್ ನೃತ್ಯಲಲಿತಂಗನೆಯ ಕಣ್ಮಲರ ಕಾಂತಿ ಸಭೆಯೊಳ್ ತೀವೆ (ಚ) 7 ಮೌಕ್ತಿಕಕಂ ಬಗಿದ ಮೊಲೆಕಟ್ಟು ಕಳಕಳಸೆ ಬೃಹತಿ ಜಾತಿ (ಚ) 8 ಸೊಗಸೆ ಲಾಸ್ಯಶೇಖರಿ (ಚ) 9 ವರ್ಷಗಾಲ ಕೇಕಿಯ ಪರಿಯೊಳು (ಚ) 10 ಪತ್ರಾಂ (ಚ) 11 ರಕ್ತ ಚಂದನ ಪೂಸಿ ಚಂಡಾತಕತ್ತಿತ್ತ ದೊರದೊಲ್ ಪಾತ್ರ ಪತ್ರೋರ್ಣಮಹಧವಕಾಸಿಯಂ ಕಟ್ಟುತ (ಚ) 12 ನಾಶನನ (ಚ) 13 ಯ ಸಭೆ ಚಿತ್ರದೊಲಿರ್ದುದು (ಚ)

[1]ಪೊಸತೊರ್ವ[1] ನರ್ತಕಿ [2]ವಿಭಾವಾದಿ ಭಾವದಿಂ
ದೆಸೆವ ಚಾತುರ್ವಿದ್ಯ ನರ್ತನಂ ನಟಿಸಲಾ
ಗಸವಟ್ಟೆಗರ ತೆರದೊಳಾದರಾ ಸಭೆಯೊಳು ನಿರೀಕ್ಷಿಸುವ ಸಕಲಜನರು
ಅಸದೃಶಸುರೂಪದಿಂ ನರ್ತನಂ ನರ್ತನವೆ
ಅಸದೃಶಸುರೂಪಂ ಪ್ರಕಾಶಿಸೆ ಪ್ರಕಾಶವು
ನೆಸೆವ ಗುಣಿನಿಷ್ಠೆಯೆಂದರ್ ಕೆಲರದನ್ನೊಪ್ಪರೆರಡಹುದೆನುತ್ತಂ[2] ೭೬

ಅಭ್ರದೊಳಗೆಳೆಮಿಂಚು ಪೊಳೆಪೊಳೆದು ರಂಜಿಪೊಲ್
ಶುಭ್ರಾಂಶುಸಖಿ ಲಲಿತನಯನ ಚಂಚಲಪ್ರಭಾ
ವಿಭ್ರಮಂಬೆತ್ತು [3]ನಸುನಗೆಯ ಬಿತ್ತರಿಸದಿರಿ ನಿನ್ನೀತೋರ್ದ ಸುಲಿಪಲ್ಗಳು[3]
ಅಭ್ರವಾಹನ ಶಸ್ತ್ರದೊಳ್ [4]ಪೊಳೆಯೆ ವಿಟರ ಧೈ
ರ್ಯಾಭ್ರ ಮತ್ತಪರ್ವತಂ ಪೋಳಾಗದಿರುತಿಹುದೆ[4]
ಶುಭ್ರಾಂಗನಿದಿರೊಳಾಡಿದ[5]ಳೊರ್ವ ಕನಕಲತೆಯೆಂಬವೆಸರಿನ ಗಣಿಕೆಯು[5] ೭೭

ಅತಿತಾಂಡವಂ ನಾಟ್ಯ ನೃತ್ಯ ಲಾಸ್ಯಂಗಳಿಂ
ಬತಿಶಯದ [6]ವಿದ್ಯೆಯಿಂ ವಾರನಾರಿಯರು ಸಂ
ಗತಿವಿಡಿದು ಶಾಸ್ತ್ರದಿಂದಾಡುತಿರೆ ಮಾರ್ಪೊಳಪು ಕುಂಭಂಗಳೊಳ್ ಬಿಂಬಿಸೆ[6]
ಚತುರತನದಿಂದ ನರ್ತಿಸೆ ತೂರ್ಯತ್ರಯಗಳು
ನ್ನತವಾಗೆ ಸಭೆ [7]ಸುಖದ ವಾರಿನಿಧಿಯೊಳು[7] ಮುಳುಂ
ಗುತಲೇಳುತಿರುತಿರ್ಪ [8]ಕಾಲದೆೊ[8]ಳಗಲ್ಲಿ ಲಿಂಗದೊಳು ನಾದಂ ಜನಿಸಿತು ೭೮

ಇದು ಚತುರ್ಯುಗದೊಳಾಚಾರ್ಯ ರೂಪಂ ತಾಳಿ
ಯೊದವಿ ಶಾಂಭವ ಮಧ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥವಪ್ಪುದು ಚತುರ್ಥಸಂಧಿ ಸುಜ್ಞಾನಬಂಧಿ ೭೯

---

1 ಎಸೆವ (ಚ) 2 ನಿಂದು ರಸಭಾವ ಸುವಿಧಾನ ಸಮಾಶ್ರಯಂಗಳಹ ಚತುರ್ವಿಧದ ಪ್ರಬಂಧಂಗಳೊಸೆದಂಶಗಳ ತೋರಿ ಷದಪಟ್ಟಿ ಜಾತಿ ಜಕ್ಕಡಿ ಚೆಂದುಗಿತಂಗಳಂ ವಿಸರಕನುಗುಣವಾಗಿ ನರ್ತಿಸುತ ಹಾವಭಾವಸದೃಶ ವಿಲಾಸ ವಿಭ್ರಮ ನಾಲ್ಕು ಮೋಹನದ ರಸವಮೃತಮಯವಾಗೆ ನಟಿಸಿದಳು ಪಾತ್ರ ಚೂಡಾಮಣಿ ಭುಜಂಗವೇಣಿ (ಚ) 3 ಈಶ ಶಿರಃಕಂಪ ಎಳನಗೆ ಧಾಳ ಸುಲಿಪಲ್ಗಳು (ಚ) 4 ಗಾಡಿ ಗಮಕಂಗಳು ಭ್ರಮಿಸೆ ಶುದ್ಧ ದೇಶೀಯ ಮಾರ್ಗನರ್ತನಮು (ಚ) 5 ಳು ಕನಕ ಪರಿಜದೊಲ್ ಮೋಡಾಮೋಡಿಯಿಂದ (ಚ) 6 ಗುಂಡಿಲಂ ಪೆಕ್ಕಣಂ ಲಚ್ಚಣಂ ವಿತತ ಪರಪಾತ್ರ, ಸುಪಾತ್ರ ಸರ್ವತೋಭದ್ರ ದಶವಿವಿಧದ ಪಾತ್ರಂಗಳಂ (ಚ) 7 ಶುಭಾರಸವಾರ್ಧಿಯೊಳ್ 8 ವೇಳೆಯೊ (ಚ)

# ಐದನೆಯ ಸಂಧಿ

ಸೂಚನೆ : •

ಭರದಿಂದಲಾಚಾರ್ಯವರಶಿರೋಮಣಿಗಳಾ
ದರದೆ ದಕ್ಷಿಣಭಾರತಾಖ್ಯವರ್ಷಕೆ ಬಂದು
ಚಿರಸ್ವಯಂಭುಗಳಾದ ಲಿಂಗಂಗಳಲ್ಲಿ ಜನ್ಮಿಸಿ ಮೆರೆದರಾನಂದದಿಂ

ಶೀತನಗಜಾ[1]ತಾಸ್ಯ[1] ಶತಪತ್ರಖದ್ಯೋತ
ವಾತಾಪ್ತನೇತ್ರ [2]ಭಸ್ಮೀಭೂತ[2]ರತಿಪತಿ
ದ್ಯೋತಿ [3]ನೂ[3]ತನಕಾಯವಾತಭಕ್ಷಣ ಭೂಷಜಾತ ಲೋಕೇಶ ವಂದ್ಯ
ಭೂತಪತಿ ಸಕಲಾದಿತೇಯ ಪುರುಹೂತನಂತ
ಪೂತಾತ್ಮ ಯಮಿಹೃದಯ [4]ಜ್ಯೋತಿಸ್ವರೂಪ ವಿ
ಖ್ಯಾತಾಂಕ ಗತಮಾಯ[4] ಕೂರ್ತಿಷ್ಟಮಂ ಕೊಡು ಮಹಾಮಹಿಮ ಚೆನ್ನಮಲ್ಲ ೧

ಜಿನಮತಸ್ಥಾಪನಾಚಾರ್ಯನಾಗಿರ್ದ[5]ನಂ[5]
ಘನಶೂಲಿ [6]ತಾಂ[6] ಶೂಲರೋಗದೋರಲ್ಕಗ್ಕ
ನನುಮತದಿ ಶೈವೋಪದೇಶಮಂ ಪಡೆದಂ ಸೌಗತಸಮಯಮಂ ಪಳಿಯಲು
ಮುನಿದು ವಧಿಸಲ್ಕಗ್ನಿ ವಿಷಫಣಿಗಜಂಗಳಿಂ
ದನುವಾಗದಿರೆ ಮಹಿಮನೆಂದವರು ಬಿಡೆ ಶಿವನ
ನೆನಹಿನಿಂ ತಿರುಪಾಟುಗಳ ಪಾಡಿ ಲಿಂಗದೊಳ್ [7]ನೆ[7]ರೆದ ವಾಗೀಶ ಶರಣು ೨

ಜಡಜೋದರಾಂಡಭಿತ್ತಿಯ ಬೆಸುಗೆ ಬಿಚ್ಚಲದ
ರಡಿಯಣ್ಯೈರಾವತಂ ಮುಖ್ಯದಿಗ್ಗಜ ಕೆಡೆಯೆ
ಪೆಡೆಗಳುಡುಗುತ ಮಹಾಶೇಷ ಕಂಪಿಸೆಯಂಡ [8]ನಡುಗೆ ರತ್ನಾಕರಗಳ[8]
ಎಡೆಯೊಳಿಹ ಜಡಗಳಿಂಗಲ್ ಜರಿಯೆ ಕುಲಗಿರಿಗ
ಳುಡುಗಣಗಳುದುರೆ ಸಭೆ ಮೂರ್ಛೆಯೊಂದಲ್ ಕೋಟಿ
ಸಿಡಿಲ ರವದೊಲ್ ನುಡಿದ ಶಿವನಧಿಕ ಗುರುವಿ[9]ನುದಯವ ನೋಡಿ ನೋಡೆನುತ್ತ[9] ೩

---

1 ಮುಖ(ಚ) 2 ಭಸ್ಮಕೃತ (ಚ) 3 ಮಾ (ಕಗ) 4 ಜ್ಯೋತಿನಿರುಪಾದಿ ಸಂಘಾಘ ತತ ಮಾಯಾಘ(ಚ) 5 ನಘ (ಚ) 6 ಯಂ (ಚ) 7 ಬೆ (ಚ) 8 ನಡನಡುಗೆ ಕಡಲಂಗಳ (ಚ) 9 ನುದ್ಭವಮನೋಡೆಂದೆ ನುತ್ತ್ರೆ (ಚ)

•ಆಚಾರ್ಯರು ದಕ್ಷಿಣ ಭರತಾಖ್ಯಕ್ಕೆ ಬಂದು ಸ್ವಯಂಭು ಲಿಂಗಗಳಲ್ಲಿ ಉದಿಸಿದ ವರ್ಣನೆ (ಕ)
ಆಚಾರ್ಯರು ಸ್ವಯಂಭುಲಿಂಗಗಳಲ್ಲುದಿಸಿದ ವರ್ಣನೆ (ಗ)

ಎಳ್ದು ಸಭೆ ಮೂರ್ಛೆ[1]ಯಿಂದಾ[1]ಳ್ದು ಸುಖಶರಧಿಯೊಳ್
ಪೇಳ್ದುದಾಸ್ಥಾನಜನವಚ್ಚರಿಯಿದೇನೆಂದು
ಕೇಳ್ದು ಕಂಡರಿಯೆವೇ ಲಿಂಗದೊಳ್ ಮುನ್ನ ರವ[2]ಮಾಯ್ತೆಂದು ಪೇಳ್ದ[2] ಬಂಧರಂ
ಸೀಳ್ದುದವನೀತಳಂ ಸರ್ವರುಂ ತನುವಿಂದು
ರುಳ್ದು ಭೂಮಿಯೊಳು ಸೈಗೆಡದೆಳ್ದು ಮುದದಿಂ ಪೊ
ಗಳ್ದರಾನಂದಸಂದೋಹ ಕೈರವಕಳಾಧರನನಜ್ಞಾನಹರನಂ ೪

ಕ್ಷಿತಿಪ ಬಿಜ್ಜಳಗೆ ಕಿನ್ನರದೇವಲಿಂಗಮು
ನ್ನತಿಯಿಂದ [3]ಓ[3]ಯೆನಿಸಿದಂ ಮತ್ತೆ ಬಸವೇಶ
ಕ್ಷಿತಿಯ ಸುರರಿಗೆ ಸಂಗಮೇಶನಂ ನುಡಿಸಿದಂ ಯೌವನಾಳದ ರಾಶಿ[4]ಯೊಳ್[4]
ಮತಿವಂತ ಬಾಹೂರಬ್ರಹ್ಮಯ್ಯ ಶಂಕರನ
ನತಿಶಯದಿ ಮಾತನಾಡಿಸಿದ ಮುದನೂರದಾಸ
ಖತಿಯಿಂದ ವಾದದೊಳ್ ರಾಮೇಶನೊಳ್ ನಾದ‌ಮಂ ತೋರಿಸಿದನತಿಭರಂ[5] ೫

ನಂಬಿ ಬಿಂಬಾಧರೆಯು ಕುಂಭಕುಚದೊಳಗಂದು
ಶಂಭುವಂ ಕರೆದು ಓಯೆನಿಸಿ ಪಡಿಪೊನ್ಗಳಂ
ಯಿಂಬಾಗಿ ಪಡೆದವೋಲಲ್ಲಿ ತಿರುವಾಗೀಶ ಕೇಳೆ ಭಜನಾರ್ಥವಾಗಿ
ಕುಂಭಿನಿಯು ಸಕಲಜನರೆಲ್ಲ ಕೇಳ್ವಂದದಿಂ
ದಂಬುಜಾಸನ ಮುಖ್ಯಸುರವಂದ್ಯ ಪಾದಾಬ್ಜ
ನಂಬಕತ್ರಯ ನುಡಿದವೋಲಲ್ಲಿ ನಿರುಪಾಧಿ ಜ್ಯೋತಿ ಬಾಯ್ದೆರೆದಂದಮಾವಂ ೬

ಜಯಜಯ ಮಹಾದೇವ ಭವವಿಪಿನ[6]ಚಯ[6]ದಾವ
ಜಯಜಯ ಮಹಾಲಿಂಗ ಶರಣಜನಹೃತ್ಸಂಗ
ಜಯಜಯ ಮಹಾಶೇಷಭೂಷ ಭಕ್ತೌಘಸಂಜೀವ ಕರುಣಾಪಾಂಗನೆ
ಜಯಜಯ ಗರ[7]ತೃತ್ಸ[7]ಗಮನ ವಂದಿತ ಚರಣ
ಜಯಜಯ ಸುರಜ್ಯೇಷ್ಠ ನಿಖಿಳ ಸರಸಶ್ರೇಷ್ಠ
ಜಯಜಯ ಜಗದ್ರಕ್ಷ ವೃಕ್ಷವಾಹನನೆಂದು ನುತಿಸಿದರ್ ಭಕ್ತಜನರು ೭

---

1 ಯಿಂ ಆ (ಚ) 2 ಮುದಿಸಿತೆಂದು ಪೇಳ್ವ (ಚ) 3 ಲೋ (ಚ) 4 ಯಾ (ಗ) 5 ದೋರಿಸಿದ ಪರಿಯಿದಲ್ಲ (ಚ) 6 ತಟು (ಕ) ತರ (ಚ) 7 ತೃಂತ (ಚ)

ಇಂತು ಸಭೆ ನಿಂದು ಕೀರ್ತಿಪ ಸಮಯದೊಳ್ ಮಂದಿ
ರಾಂತರಾಳದೊಳು ಸೌದಾಮಿನಿಯ ಕಾಂತಿ ಪೊದ
ಳ್ದಂತರಿಕ್ಷದೊ[1]ಳು ತೋರ್ದಂದದಿಂ[1] ಕಾರೊಡಲ ಬಿದಿಗಳೀರ್ವರ ಮಧ್ಯದಿ
ಯಂತಕಾಂತಕನು ಉ[2]ರಿ[2]ಲಿಂಗದಾಕೃತಿದಳೆಯು
ಲಂತದರ ತೇಜದೊಬ್ಬುಳಿ ಧರಾತಳಗಗನ
ದಂತರಂ ತೀವಿದಂತಮುಮು ವಿಶ್ವೇಶಲಿಂಗದೊಳು ಪ್ರಭೆಯುದಿಸಿತಚಲಂ ೮

ಆ ಮಹಾಸಭೆ ವಿಸ್ಮಯಂಗೊಂಡು ನೋಡುತಿರೆ
ಸೋಮಶೇಖರನ ಗರ್ಭದೊಳು ಗುರುವಿನ ಪೊಳಪು
ಪ್ರೇಮದಿಂ ಕಾಣಿಸುತ್ತದೆ ನೋಡಿ ಪಂಚಕೆಂಜೆಡೆ ಪವಳಕಾಂತಿಯೆಂತೆ
ಹೇಮಮಯ ಕಾಂತಿ ಥಳಥಳಿಸುತಿದೆ ಫಾಲದೊಳ್
ಕಾಮಹರಭಸಿತತ್ರಿಪುಂಡ್ರವಿದೆ ಪೌರ್ಣಮಿಯ
ಸೋಮನಂದದಿ ವದನವಿದೆ ಪಂಡಿತಾಚಾರ್ಯವರ್ಯ ಶಿವಮತ [3]ಧನ್ಯನ[3] ೯

ಮಿಸಂಪ ಸುಲಿಪಲ್ ಕಾಂತಿ ಕುಂದಾಭದಂ[4]ತಿದೆ[4]ಕೊ
ಪಸರಿಸಿದ ಪಾಶುಪತ ಮಕುಟ [5]ರಾಗಾಂ[5]ಬರಂ
ಹಸನಾದ ಯೋಗದಂಡಂ ಕಮಂಡಲು ರ[6]ನ್ನ[6]ಕುಂಡಲಂ ಕರ್ಣದೊಳಗೆ
ಎಸೆವುತಿ[7]ರೆ[7] ಕನಕಯಜ್ಞೋಪವೀತಂ ತೋರ
ಲಸಮ ಶಿವಲಿಂಗಮಿಹ ಸೆಜ್ಜೆಯದೆ ಕಕ್ಷದೊಳ್
ಲಸಿತ ಬಿಸಿಗಣ್ಣದೆಕೊ ನೋಡಿ ಘನಶರಣಜನರೆಂದು ತೋರುತ್ತಿರ್ದರು ೧೦

ತುಂಗಪ್ರಣಮದೊಳು ಪರನಾದ ಜನಿಸುವ ತೆರದೊ
ಳಿಂಗಡಲೊಳಿನಿದೊಗೆದು ತೋರ್ಪಂದದಿಂದತುಳ
ರಂಗುವೆತ್ತಿಹ ರನ್ನರೋಹಣಾದ್ರಿಯೊಳು ದಿನಪನೊಳು ಪ್ರಭೆ ತೋರುವಂತೆ
ತಿಂಗಳೊಳು ತಣ್ಗದಿರ್ಗಳೊಗೆವಂತೆ ವಿಶ್ವೇಶ
ಲಿಂಗದೊಳಗುದ್ದಂಡಗುರುಂ ಪಂಡಿತಾರಾಧ್ಯ
ಪಿಂಗದವತರಿಸಲ್ಕೆ ಸರ್ವಜನ ಸೈಗೆಡೆದರೇನೆಂಬೆನಾಶ್ಚರ್ಯಮಂ ೧೧

---

1 ಳಿಂದು ರೇಖೆಯೊಲ್ (ಚ) 2 ರು (ಕಗ) 3 ಧೈರ್ಯನ (ಗ) ಸ್ಥೈರ್ಯನು (ಚ) 4 ತವೆ (ಕ)
5 ಕಾಶಾಂ (ಚ) 6 ತ್ನ (ಚ) 7 ವೆ (ಚ)

ಅಂಬರದೊಳಮಿತ ಬೃಂದಾರಕರ್ ಜಂಭಾರಿ
ಯಂಬುಜೋದ್ಭವನಂಬುಜಾಂಬಕಂ ಪ್ರಮಥರ ಕ
ದಂಬ ತರತರವಿಡಿದು ನೋಡುತಿರೆ ದೇವದುಂದುಭಿನೀಕ ಭೋರ್ಗರೆಯಲು
ಇಂಬಾದ ದಿಕ್ಕುಗಳ್ ಘುಮ್ಮಿಡಲ್ ಸುಮವೃಷ್ಟಿ
ಬೊಬ್ಬೆಗರೆಯೆ ಮುನಿನಿಕರ ನರ್ತಿಸಲ್ ಸಕಲ
ಕುಂಭಿನಿಯೊಳಖಿಳ ಶುಭಚಿಹ್ನಗಳ್ ತೋರಿದವದೇನೆಂಬೆನದ್ಭುತವನು ೧೨

ಬಧಿರರ್ಗೆ ಸಕಲಶಬ್ದಂ ಕೇಳಲಾಯಿತ್ತು
ಮುದದೆ ಕುಣಿಗಳ್ಗೆ ಕರನೆರ[1]ದೆನಿಸಿದ[1]ವುಗಡಲ
ರೊದಗಿ ಶುದ್ಧಾಂಗವಾದರ್ ಪಂಗುಗಳ್ ನೋಡಿ ನಡೆದರಾನಂದದಿಂ
ಪದುಳದಿಂ ಜಾತ್ಯಂಧಕರ್ಗೆ ಬಂದವು ನೇತ್ರ
ಮುಂದಿಸಿದವು ಮೋಟರ್ಗೆ ಕೈಕಾಲ್ಗಳಂ ನೋಡಿ
ವಿದಿತ ಜಗದಾರಾಧ್ಯ ಲೋಕಮಂ ಉದ್ಧರಿಸಲೆಂದು ಬಂದಾಕ್ಷಣದೊಳು ೧೩

ಪೊಡವಿಯೊಳಗಲ್ಲಲ್ಲಿ ಬರಡುಗಳ್ ಕೊಡವಾಲ
ಯೆಡವಿಡದೆ ಕರೆದರಾನಂದದಿಂ ಕರುವಿಲ್ಲ
ದಡಿಯೊಳಿಹ ತರುಸಾರವರತ ಮರ ಕಡಿದೊಣಗಿ ಬೆಂಡಾಗಿ ಬಿಳ್ದ ಮರನು
ಸಡಗರದಿ ಕೊನರ್ದು ಪಲ್ಲವಿಸಿ ಫಲದೋರಿದವು
ಜಡಗಳಿಂಗಿದ ಸರಸಿ ಪದ್ಮಾಕರಾಖಾತ
ನಿಡಿದಾದ ಧುನಿಗಳೊಳ್ ನೀರ್ತುಂಬಿ ಚರಿಸಿದವು ಗುರುವುದಯವಾಗಲೊಡನೆ ೧೪

[2]ಜನಬಂ[2]ಜೆಯರ್ ಸಕಲಸೂತಕಂ ತಡೆದತುಳ
ವಿನಯದಿಂ ಪುತ್ರರಂ ಪಡೆದರರ್ಭಕರಿಂಗೆ
ಸ್ತನಕ್ಷೀರಮಿಲ್ಲದಿರ್ಪಬಲೆಯರ್ಗಂ ಕ್ಷೀರಪೂರಿತ[3]ನಂ[3]ವಾದವಮುವು
ತನು[4]ಕು[4]ಷ್ಠದಿಂದಿರ್ಪ ನರರು [5]ಕು[5]ಷ್ಠಂ ಪೋಗಿ
ಕನಕಪ್ರಭೆಯಂತೆಸೆಯೆ ಘನರೋಗದಿಂ ನಡೆವ
[6]ಮನಂಜರೆಲ್ಲಾ[6] ರೋಗ ಪೋಗಿ ಸುಖಮಿರ್ದರಾ ಪಂಡಿತಾರ್ಯಗ ಮಹಿಮೆಯಿಂ ೧೫

---

1 ವಾದ (ಚ) 2 ಒನೆಭಂ (ಚ) 3 ತನು (ಚ) 4 ಕೋ (ಕಚ) 5 ಕೋ (ಚ) 6 ಮುನಿಜನ ರೆಲ್ಲಂ (ಚ)

ಕಾಡ ಶಿಲೆಗಳ್ ಕರಗಿ ಪರಿದು ವಿಧುಶಿಲೆಯಂತೆ
ಮೂಡಿರ್ದ ಸ್ವಾಯಂಭುಲಿಂಗಗಳ್ ಸ್ಥಾಪಿಸಿದ
ನಾಡೆ ಶಿವಲಿಂಗ ಶಿವಪ್ರತಿಮೆಗಳ್ ನಲಿದು ವೋಲಾಡಿದವು ಸಂಭ್ರಮದೊಳು
ಕೂಡೆ ಗೋಪುರದ ಬೊಂಬೆಗಳು ನಟಿಸಿದವಿಂದು
ಚೊಡನಪರಾವತಾ[1]ರದ[1] ಪಂಡಿತಾರಾಧ್ಯ
ರೂಢಿಯೊಳು ಜನಿಸೆ ಶಿವಸಮಯರತ್ನಾಕರಂ ಪೆರ್ಚಿತಾನಂದದಿಂದೆ ೧೬

ಹರಿಸ[2]ಮಯವೆಂಬ ಕತ್ತಲೆಗಂತವಾಯ್ತು ಜಿನ
ವರಸುಮತ ಕೌಶಿಕಂಗಳ ಕಣ್ಣಿನೋಟ ಪೋ[2]
ಯ್ತುರರೆ ಬೌದ್ಧನೆ ದೈವವೆಂಬ ಮತಕೈರವಂ ಸಂಕೋಚವಾಯ್ತು ನೋಡೆ
ಭರದಿ ಮೀಮಾಂಸ[3]ಕನ ಮತಕೈರವಂ ಮುಚ್ಚಿ
ತಿ[3]ರದೆ ಮಾಯಾವಾದ ತಸ್ಕರಂ ಕೊರಗಿದಂ
ತರುಣಾರ್ಕಕೋಟಿಪ್ರಭಾಮಯಂ ತಾನಾದ ಪಂಡಿತೇಶಂ ಜನಿಸಲು ೧೭

ಚಾರ್ವಾಕಮತ ನೋಡೆ ಪಾರಾಯ್ತು ವೇದಾಂತ
ಪಾರಿಪೋದುದು ಕರ್ಮ[4]ಬೀಜ[4] ಜಳ್ಳಾಗಿ ಮುದ
ವಾರಿತ್ತು ಕಾಪಾಲ ಸೌರಮತ ಬಾಯ್ಮುಚ್ಚಿ ಬೆರಗುಗೊಂಡಿತ್ತು ಸೋಮಂ
ಕಾರ್ಮುಗಿಲ್ ಪವನನಿಂದೋಡುವಂತೋಡಿತ್ತು
ನೇರಿತ್ತು ಪಾಂಚರಾತ್ರಂ ಪಂಡಿತಾ[5]ರಾಧ್ಯ[5]
ಧಾರುಣಿಯೊಳವತರಿಸಲಖಿಳಮತ ಕಾತರಿಸಿ ಕಳವಳಿಸುತಿರ್ದವಂದು ೧೮

ಕರಕರನೆ ಕಂದಿ ಕಪ್ಪಾದ ಯಮುನಾಗ್ರಜಂ
ಉರಿಉರಿದು [6]ತ[6]ತಭಸ್ಮವಾದ ಪದ್ಮಿನಿಜಾ[7]ತ[7]
ತರತರನೆ ನಡುಗುತಾ ಮಾಯೆ ಮನಮಂ ಸಾರ್ದಳವಧಿ ವಿಧಿಗಳ್ ನೋಡಲು
ಜರೆದವಾಕ್ಷಣ ಮಲತ್ರಯವಳಿದವಘಕುಲಂ
ಭರದಿ ನುಗ್ಗಾದವರಿವರ್ಗವಂಜುತ ಪೋದ
ವರಿದೆನಲ್ ಕರ್ಮತ್ರಯಂ ಪಿಂಗಿದವು ಪರಮಪಂಡಿತ ಪ್ರಭಾವದಿಂದೆ ೧೯

---

1 ರಂ (ಚ) 2 ಮಂ ಧ್ವಾಂತದಾವಂವಾಯ್ತು ಜನನರು ಕಿಮತ ಕೌಶಿಕಂ ಕಣ್ಮುಚ್ಚಿ ಹುಚ್ಚಾ (ಚ)
3 ಮತ ಪಂಕ ನಿಸ್ಸಾರವಾಯ್ತು (ಚ) 4 ದಿಂದ (ಚ) 5 ಚಾರ್ಯ (ಚ) 6 ಚಿ (ಚ) 7 ರ (ಕಗ)

ಇಂತು ಕಾಶಿಯ ವಿಶ್ವನಾಥಲಿಂಗದ ಗರ್ಭ
ದಂತರಾಳದೊಳು ಗರುಪಂಡಿತೇಶಂ ಜನಿಸ
ಲಿಂತು ಶ್ರೀವಾರಣಾ[1]ಸೀ[1]ಪುರಕೆ ದಕ್ಷಿಣಂ ಶ್ರೀಶಿಖರಿ ರಾಜಿಸಿರ್ಕುಂ
ಅಂತವಕೆ ಯಮ[2]ನ ದಿಕ್ಕಿನ ದ್ವಾರಮೆಂದೆ[2]ನಿಸಿ
ಕಂತುಮರ್ದನ ಸಿದ್ಧಜ್ಯೋತಿ ಶಿವಲಿಂಗಮಿಹ
ಸಂತಸದ ಬೀಡು ಮುಕ್ತಿಯ ನಾಡು ನಿಜವೀಡು ಸಕಲಮಂತ್ರಗಳ ಜೋಡು ೨೦

ಅಟಮಟಗಳಿಲ್ಲವಾ ಪುರದೊಳಗೆ ಭಾವಿಸಲ್
ಕುಟಿಲ ಕುಹಕಿಗಳುಳ್ಳ ಜನರಿಲ್ಲ ತಿಳಿಯಲ್ಕೆ
ಕಟಕಿ ಕಪಟಗಳುಳ್ಳ ಭಕ್ತರುಗಳಲ್ಲಿಲ್ಲ ಸರ್ವರು ಸದಾಚಾರರು
ನಿಟಿಲಲೋಚ[3]ನ[3] ಧ್ಯಾನಯುಕ್ತರುಂ [4]ಭ[4]ಕ್ತರುಂ
ಕುಟಿಲಮಾಯಾಮೋಹರಹಿತರುಂ ಮಹಿತರುಂ
ದಿಟಮಯುಳ್ಳ [5]ಶಿವಶರಣರಿಪ್ಪಮಳ[5]ಸಿದ್ಧವಟ ಪುರವನದನೇವಣ್ಣಿಪೆಂ ೨೧

ಸಕಲಶೃಂಗಾರವಸ್ತುಗಳನೊಳಕೊಂ[6]ಡೊಪ್ಪು[6]
ವಕಳಂಕ ಕನಕದ ಕರುಂಡವೋ ಬಗೆವಡತಿ
ಯುಕುತಿ[7]ಯಿಂ[7] ಸರ್ವಸಂಪದದ ಜನನದ ಭೂಮಿ ಯಮಿಜನರ ಮನಕೆ ಪ್ರೇಮಿ
ಅಖಿಳಸುಖರಸ ತರಂಗಿಣಿಗಾಶ್ರಯಮುಮಾದ
[8]ಸುಕರ ವಾರಿನಿಧಿ[8] ಭೂಸತಿಯ ಮುತ್ತಿನ ಬೊಟ್ಟು
ಶಕುತಿಜನವನಚೈತ್ರ ಸಿದ್ಧವಟಪುರಮೆಸೆವುದಾನಂದ[9]ದಾಗರದೊಲು[9] ೨೨

ಕಾಮತಾಪದಿ ಬಂದ ನರರ್ಗೆ ತಂಪಂ ಕೊಡುಗು
ಮಾ ಮಹಾಸಂಸಾರಶ್ರಮಪಾಂಥ ಮನುಜರ್ಗೆ
ಪ್ರೇಮದಿಂ ಛಾಯೆಯಾಗಖಿಳಾಶೆಯೊಳ್ ಬಂದ ದ್ವಿಜಕುಲಕೆ ಸುಖಫಲವನು
ತಾ ಮುದದಿ ಕೊಡುತಿರ್ಕು ತಪಿಪ ತಾಪಸಜನಕೆ
ಭೂಮಿಯೊಳಗಾಲಯುಂ ವಟದಲ್ಲಿ ಬೋಧಿಸಿದ
ಸೋಮಶೇಖರ ನಿಂದ ಕಾರ[10]ಣಂ[10] ಸಿದ್ಧವಟನಾಮ ಧರೆಯೊಳ್ ಮೆರೆವುದು ೨೩

---

1 ಸಿಯ (ಚ) 2 ರಾದ್ದೆಶೆಯ ದ್ವಾರಂ ಎ (ಚ) 3 ನನ (ಚ) 4 ಶ (ಚ) 5 ಸತ್ಯಶಿವಶರಣರಿಹ (ಚ)
6 ಜೆಸೆವ (ಚ) 7 ಸಲ್ (ಚ) 8 ಕೂಪಾರನೋಡೆ (ಚ) 9 ಜನಕೆ ಕೊಟ್ಟು (ಚ) 10 ಣದಿ (ಚ)

ಆ ಪುರದೊಳತಿವಿಚಿತ್ರಮುಮಪ್ಪ ಪ್ರಾಕಾರ
ಗೋಪುರಂ ರತ್ನಮಯ ಮರಕತದ ಶಿಖರದಿಂ
ದೀಪಿಸುವ ಸ್ಫಟಿಕಕುಟ್ಟಿಮ ಹೇಮಮಯಕುಡ್ಯ ನೀಲರತ್ನದ ಮಂಟಪಂ
ಲೋಪಮಿಲ್ಲದ ಶಿವಾಲಯ ಗರ್ಭಗೃಹದೊಳತಿ
ಶ್ರೀಪರಂಜ್ಯೋತಿಸ್ವರೂಪ ಸಾಕ್ಷಾದ್ಬ್ರಹ್ಮ
ಕಾಪಟ್ಯ ಮಾಯಾಘರಟ್ಟ ಸಿದ್ಧೇಶ್ವರಂ ರಾಜಿಸುವನತಿವಿಭವದಿಂ ೨೪

ಲೋಕಪ್ರಸಿದ್ಧವಹ ಸಿದ್ಧವಟಪುರದೊಳಗ
ನೇಕವೈಭವದಿಂದ ಮೆರೆವ ಜ್ಯೋತಿರ್ಲಿಂಗ
ದಾಕಾರದೊಳಗೆ ಜ್ಯೋತಿಯೊಳಂ ಪ್ರತ್ಯೇಕಜ್ಯೋತ್ಯುದಿಸುವಂದದೊಳುದಿಸಿದ
ಏಕರಾಮಾಚಾರ್ಯರಂ ನೋಡಿ ಕೊಂಡಾಡೆ
ನಾಕಪತಿಮುಖ್ಯ ನಿರ್ಜರರು ಪೂಮಳೆಗರೆಯ
ಲಾ ಕಾಲದೊಳ್ ದೇವದುಂದುಭಿಗಳೊದರೆ ಯಮಿನಿವಹ ಜಯಮೆಂದರು ೨೫

ಶ್ರೀಗಿರಿಯ ದಕ್ಷಿಣದ್ವಾರವಹ ವಟಪುರದಿ
ರಾಗದಿಂ ನೆಲಸಿರ್ಪ ಜ್ಯೋತಿಲಿಂಗದ ಬಸುರೊ
ಳಾಗಲುದ್ಭವಿಸಲೇಕೋರಾ[1]ಮ[1]ತಂದೆಗಳ್ ಮಲ್ಲಿಕಾರ್ಜುನನಿಳಯದಿಂ
ಸಾಗಿ ಪನ್ನೆರಳ್ಗಾವುದದಯಳತೆಯಲ್ಲಿರ್ದು
ಯೋಗದಿಂ ಶ್ರೀನಗದ ಪಶ್ಚಿಮದ [2]ದೆಶೆಯಾದ[2]
ಬಾಗಿ[3]ಲದು[3] ತಾನಾಗಿ ಮೆರೆವುತಿರ್ಪವು ಪೂರಪುರವರಂ ಕಣ್ಗೊಳಿಪುದು ೨೬

ಸ್ಥೂಲವಹ ವನಿತೆಯೊ[4]ರ್ವಳ್[4] ಇಷ್ಟಮಾಗಿ[5]ರ್ದ[5]
ಲೋಲದೇವತೆಯಿರ್ದ ತಾಳಿಯುಂ ನಿಜಕಂಠ
ಮೂಲದೊಳ್ ಧರಿಸಿ ರಾಜಿಪ ಪಾಂಗಿನಿಂ ಧರಾವನಿತೆ ತನಗಿಷ್ಟಮಾದ
ಬಾಲಬ್ರಹ್ಮೇಶ್ವರನೆನಿಪ್ಪ ಲಿಂಗಾಂಕಿತದ
ಲಾಲಿತ್ಯದೈರದಾಳಿಯ ತಳೆದು ಮೆರೆವಳೆನೆ
ಭೂಲೋಕದಖಿಳ ಪುರರಾಜಿಯೊಳ್ ಮಿಗಿಲೆನಿಸಿ ಸೂಕ್ಷ್ಮಪುರ ರಾಜಿಸಿರ್ಕುಂ ೨೭

---

1 ಮಿ (ಚ) 2 ದಿಗ್ಭಾಗ (ಚ) 3 ಲಂ (ಚ) 4 ರ್ವಳಾ (ಕಗ) 5 ರ್ದು (ಕಗ)

ಚೆನ್ನೆಸೆವ ಪುರದೊಳಗೆ ನೆಲಸಿರ್ಪ ಲಿಂಗಮದು .
ಸನ್ನುತದ ಬಾಲಬ್ರಹ್ಮೇಶ್ವರ ಸುನಾಮದಿಂ
ಮುನ್ನಮೆಸೆವುದು ಬಳಿಕ [1]ತ[1]ಪಿಸುತಿಹ ಸಿದ್ಧನೊರ್ವನಿಗೊಲಿದು ಸಿದ್ಧಮಾಗಿ
ಬಿನ್ನಣದ ಪಂಚಲೋಹವ ಚಿನ್ನಮಂ ಮಾಡು
ವುನ್ನತದ ಪರುಷಮುಂ ಕೊಡಲುಮದರಿಂದೆ ತಾಂ
ತನ್ನ ಪೆಸರಂ ಪರುಷಮಲ್ಲೇಶನೆಂದು ಭೂಲೋಕದೊಳ್ ಸಿದ್ಧಮಾಯ್ತು ೨೮

ಮಂಗಳಾತ್ಮಕದ ಲಿಂಗಾಲಯಂ ಬಳಸಿ[2]ರ್ಪ
ತುಂಗವಪ್ರದ[2] ಪೂರ್ವದಿಕ್ಕಿನೊಳ್ ನೆಲೆಗೊಂಡು
ಲಿಂಗಕಭಿಷೇಕಮಂ ಮಾಡಲೆಂದಿಳಿತಂದ ದೇವಗಂಗೆಯೊ ಎಂಬಿನಂ
ಹಿಂಗದನುಮಿಷಪ್ರಕರದಿಂದ [3]ಗ್ರ[3]ಹಾಳಿಯಿಂ
ದಂಗವಿ[4]ಸ[4]ಜಸ್ರಮಿಹ ಯಿಕ್ಕೆಲದ ಗರ್ದೆಯಿಂ
ತೆಂಗು ನಾರಂಗ ಪ[5]ನ[5]ಸಾಳಿವಾಳೆಯ ಬನದಿ ರಾಜಿಸುಗು ತುಂಗಭದ್ರೆ ೨೯

ಚತುರಾಸ್ಯನಂಡದೊಲ್ ಭುವನಶ್ರೇಣಿಗಳಿಂದ
ನುತಿವೆತ್ತ ಧಾಮನಿಧಿಯಂತೆ ಕಮಳಾಶ್ರಯಂ
ಸತತಸರಸಾನ್ವಿತದಿ ಸತ್ಕೃತಿಯ ತೆರದಂತೆ ಶಶಿಯಂ[6]ತೆ ಶೀ[6]ತಾಶ್ರಯಂ
ಶಿತಿಕಂಠನೊಲ್ ಸರ್ವಮಂಗಳಾನ್ವಿತಮಾದು
ದತಿಶಯಂ ಹರಿಯಂತೆ ಚಕ್ರದಿಂ ಬ್ರಹ್ಮನೊ
ಲತಿನಿನದದಿಂ ಮೆರೆದುಂಡಾ ತುಂಗಭದ್ರಾನದಿ[7]ಯು ಮಹೋಲ್ಲೋಲದಿಂದ[7] ೩೦

ಏಸೇಳ್ವೆ ಪುಣ್ಯನದಿಕೂಟದಿಂದೆಸೆವ ಪುರ
ಮಾವಾಗಳುಂ ವೇದಪೌರಾಣಘೋಷದಿಂ
ತೀವಿರ್ಪ ಪುರವಂಧ್ಯದೊಳ್ ವಿರಾಜಿಪ ಬಾಲಬ್ರಹ್ಮೇಶಲಿಂಗದಲ್ಲಿ
ಮಾಪರಾಧ್ಯಜಸುರಪ ನಿರ್ಜರರ್ ನೋಡುತಿರೆ
ಕೋವಿದ ಮಹಾಸಭೆಯು ನಿಂದು ನಲಿದಾಡುತಿರೆ
ಪಾವನಾತ್ಮಕ ಪರಮಮರಂಳುಸಿದ್ಧೇಂದ್ರನಾವಿರ್ಭವಿಸಲಲ್ಲಿ ಮುದದಿಂ ೩೧

---

1 ಶ (ಚ) 2 ಪುರ್ಗ।ತ್ತುಂಗಕೋಟೆಯ (ಚ) 3 ಗ್ರಾ (ಚ) 4 ಪ (ಚ) 5 ಲ (ಕಚ) 6 ತೇಷ್ವ (ಕಗ)
7 ರಂಗತ್ತರಂಗದಿಂದೆ (ಚ)

ಜಯಕುಟಿಲ ಮಾಯಾಂಧಕಾರ ಭಾಸ್ಕರಗುರುವೆ
ಜಯಕುಟಿಲ ಮಾಯಾ[1]ಮಹಾರಣ್ಯ ದವ[1]ಗುರುವೆ
ಜಯಕುಟಿಲ ಮಾಯಾದ್ರುಮ[2]ಚ್ಛೇದಿ ಘನಪರಶು[2]ಮಾಯಾಭ್ರ ಜಂ[3]ಝಾನಿಲ[3]
ಜಯಕುಟಿಲ ಮಾಯಾವ್ಯ[4]ಗೇಂದ್ರಖಂಡನಶರಭ[4]
ಜಯಕುಟಿಲ ಮಾಯಾ[5]ಗಿರೀಂದ್ರ[5] ಶತಕೋಟಿಧರ
ಜಯಜಯತು ಮರುಳುಸಿದ್ಧೇಂದ್ರ ಗುರುವರನೆಂದು ಪೊಗಳಿದರ್ ಶರಣಜನರು ೩೨

ಸ್ವಾಮಿ ಶ್ರೀ[6]ಗುರು[6] ಚೆನ್ನಮಲ್ಲಿಕಾರ್ಜುನದೇವ
ನೇಮದಿಂ [7]ತ್ರಿಗುರುವರರು[7]ದಯಮಂ ಬಿತ್ತರದಿ
ನಾ ಮುದದಿ ಪೇಳ್ದವೊಲ್ ಗುರುವರೇಣ್ಯಸಿದ್ಧ ರೇಣು[8]ಕಾ[8]ಧೀಶನೆಂಬ
ನಾಮವೆತ್ತಿಹ ಗುರುವಿನುತ್ಪತ್ತಿಯೆಂದಮಂ
ಪ್ರೇಮದಿಂದೊರೆದು ಕೃತಕೃತ್ಯನಂ ಮಾಳ್ಪುದೆನ
ಲಾ ಮಹಾಪರ್ವತೇಶ್ವರನೆ ಲಾಲಿಸುಯೆಂ[9]ದು ಸಾನಂದದಿಂದೊ[9]ರೆದನು ೩೩

ಹಿಂದು[10]ತಲ[10] ಸೈಂಧವಂ ಕೊಂಕಣಂ ಕಂಭಾತಿ
ಯಂ[11]ದದ ಮಹಾ[11]ಚೀನ ಬೋಟಂ ಮಹಾಬೋ[12]ಟ[12]
ಕುಂದದಿಹ ಮಧ್ಯರಾಷ್ಟ್ರಂ ಮಹಾರಾಷ್ಟ್ರ [13]ಹಮ್ಮೀರ ಪಂಚಾಭಿಯವನ[13]
ಮಂದಕಲಹತಿಮುಖ್ಯ ಚಪ್ಪನ್ನ ದೇಶದೊಳ್
ಸೌಂದರದ ತ್ರೈಲಿಂಗದೇಶವೊಪ್ಪುಗುಮದರ
ಕುಂದದಿಹ ಸಕಲ ಸೌಭಾಗ್ಯ[14]ಪದರಾಗ[14]ಮೆನೆ ಕೊಲ್ಲಿಪಾಕಿ[15]ಯ ಪುರವರಂ[15] ೩೪

ಶ್ರೀಶೈಲ ಸೇತುಕೇತಾರ ಕುರುಕ್ಷೇತ್ರ ಹಾ
ಲಾಸ್ಯಮಧ್ಯಾರ್ಜುನಂ [16]ವೃದ್ಧಾ[16]ಚಲಂ ಸುಜಾ
ಪೇಶ್ವರಂ ಕುಂಭಕೋಣೆಯುಂ ಕ[17]ಕು[17]ದ್ಗಿರಿಯುಂ ವೇದಾರಣ್ಯ ನೀಲಕಂಠ
ಭಾಸುರದ ಗೋಕರ್ಣ ಗಯೆ ಕಾಳಹಸ್ತಿ ನಿಜ
ವಾಸ ಕಾಂಚೀ[18]ಪುರ ಸುರಾಮ ಸೋಮೇಶ್ವರಂ[18]
ಲೇಸಾದ ಕ್ಷೇತ್ರದೊಳಗಧಿಕ ನುತಿವೆತ್ತು ಸಿಂಗರವಡೆದು ರಾಜಿಸಿರ್ಕುಂ ೩೫

---

1 ವನದಾವಾನಲ (ಚ) 2 ಮೂಲಕುದ್ದಾಲ (ಚ) 3 ಝುಮಾರುತ (ಚ) 4 ಗರಾಜಾಷ್ಟಚರಣವರ (ಚ) 5 ಸುರೇಂದ್ರ (ಕ) ಮಹೇಂದ್ರ (ಚ) 6 ಗಿರಿ (ಚ) 7 ತ್ರೈಗುರುಗಳು (ಚ) 8 ಕಗಣಾ (ಚ) 9 ದಾನಂದದೊಳೊ (ಚ) 10 ವಸು (ಚ) 11 ದಮಹ (ಚ) 12 ಟವರ (ಚ) 13 ಸೌರಾಷ್ಟ್ರ ಹಮ್ಮೀರಯವನಾಂ (ಚ) 14 ದಾಗರ (ಚ) 15 ಮೆರೆದುದು (ಚ) 16 ವೃಂದಾ (ಚ) 17 ಕೋ (ಗ) 18 ಪರಶುರಾಮ ಕ್ಷೇತ್ರಂ ಮುಖ್ಯ (ಚ)

ಕೀಲಾಲ[1]ನಿಧಿಯಗ್ರಜೆಯಯಗ್ರಜನ ತನ್ನ[1]
ವಮೌಳಿಯೊಳ್ ಧರಿಸಿ ಸೋಮೇಶನಾಮವನಾಂತು
ಲಾಲಿತ್ಯ ಕೊಲ್ಲಿಪಾಕಿಯ [2]ಕುರು[2]ಕ್ಷೇತ್ರದೊಳ್ ನೆಲಸಲಾ ಪುಣ್ಯಪುರಿಯಂ
ನೀಲವೆಯ್ಯವನುಳಿದು ಬಂದು ಬಳಸಿದಳೆನಲ್
ಸ್ಥೂಲಕನಕದ ಕೋಂಟೆ ರಂಜಿಸಲ್ ಪಾಲ್ಗಡಲು
ಲೋಲಮಗ[3]ನಂ ಮಗಳ[3] ಬಳಸಿದೊಲವ್ಯ್ಮತದಗಳಿಂದ ತಳತಳಿಸಿತವಂಮ ೩೬

ಕನಕ[4]ಸಾಲದ[4] ಮೇಲಣನುನಯದಿ ಬಜ್ಜರದ
ಘನ[5]ವಾದ ತೆನೆಗಳಂ ಕಂಡು ಮಘವಂ ತನ್ನ
ವಿನುತಾಯುಧಂ ಭಿನ್ನಭಿನ್ನಮಾದುದು ಚೋದ್ಯ[6]ಮೆನುತಾಗ ವಿಬುಧರೊಡನೆ[6]
ವಿನಯದಿಂ ನೋ[7]ಡುತ್ತ[7]ಬರೆ ನೀಲರತ್ನಮಯ
ಮಿನುಗುವತಿ ಪುಷ್ಪಕಂಗಳನಡರಿಯಲ್ಲಲ್ಲಿ
ಯನವರತ ನೋಳ್ಪರೆನೆ ಕೃಷ್ಣಮಣಿ ಮುಂಗಿಲಟ್ಟಣೆಗಳೊಳಗೆ ಜನರೆಸೆದರು ೩೭

[8]ಈ ಪುರ[8] ಚತುರ್ದ್ವಾರ ಗೋಪುರಂಗಳ ನೋಡ
ಲಾ ಪರಮಧನ ನೀಲರಜತ ನವರತ್ನದಿಂ
ದೀಪಿಸುತ್ತ ನಾಕ ತೇಜೋವತಿಯು ಶುದ್ಧಾವತಿಯು ಮಹೋದಯೆಯಿವರ್ಕಳ
ಲೋಪಿಸುತ್ತಧಿಕತರಕಾಂತಿಯಿಂದೆಸೆವುತಿರೆ
ಗೋಪುರದ ಬಾಗಿ[9]ಲಿನ[9] ವೇತ್ರಧಾರಕ[10]ರಿರವ
ನೇ[10]ಪೇಳ್ವೆ ಪಾಕಶಾಸನ ಶಮನಪಾಶಿ ಯ[11]ಕ್ಷೇಶ್ವ[11]ರಂತಿರ್ದರಲ್ಲಿ ೩೮

[12]ಶ್ರೀಲ[12]ಭಾಗ್ಯದ ಪೆಂಪು ಬಹುಕಳಾನ್ವಿತರಿಂಪು
ಕೋಳುಹೋಗದ ಧರ್ಮ[13] ಕೊಡುತಿರುವುದೇ ಕರ್ಮ
ಮೇಲೊದಗಿ ಬಂದು ಬಂದೆಡೆಯಾಡುತಿಹ ಯಾಚಕರಿಗೆ ಮತ್ತೇವೇಳ್ವೆನು
ಖಿಳರ ಮನೋಭಿಷ್ಟಮೆಂಬ ಬೀಜಘರಟ್ಟ[13]
[14]ಭಾಳ[14]ಲೋಚನ ಸೋಮನಾಥನಿಹ ಪುರವರಂ
ಪೇಳಲೇನಲ್ಲಿ ನೂರೊಂದುಕುಲಕೊಂದೊಂದು ಮಠಗಳಿಂ ಚಿತ್ರ ತೋರ್ಕುಂ ೩೯

---

1 ಸಾಗರಜೆಯಗ್ರಜನ ಶಿವನಂತ (ಚ) 2 ಪುರ (ಚ) 3 ನುಂಮಗಳು (ಗ) 4 ಕೋಂಟೆಯ (ಚ)
5 ತೆನೆಯನೇಕರಾಜಿಸಲು ಮಘವಾನ್ (ಚ) 6 ಮೆನುತೀ ಬುಧಸಂದೋಹಮಂ (ಚ) 7 ಡೆನಲ್ (ಚ)
8 ಆಪುರದ (ಚ) 9 ಲದ (ಚ) 10 ರೆರೆಯ।ರೇ (ಚ) 11 ಕ್ಷೇಂದ್ರ (ಚ) 12 ಬಾಳ (ಚ)
13 ಕರ್ಮಿಗಳಿಗತಿವರ್ಮ1 ತಾಳಿರ್ಪ ಮಹಾಸತ್ವ ತಾಪಸರ ತಪ ತತ್ವನಿಷ್ಠರಿಹ ಮನದಿಷ್ಟವು॥ ಖೂಳರ್ಗೆಯತಿತಿಷ್ಟ ಸಕಲಕರ್ಮಘರಟ್ಟ (ಚ) 14 ಫಾಲ (ಗ)

ಸೋಮಸೂರ್ಯರ ವೀಧಿ[1]ವೀಧಿಯೊಳ್[1] ಪರಿಮಳಿಪ
[2]ಲಾ[2]ಮಚದ ನೆರಕೆ ಚಪ್ಪರ ಗಗನವಂ ಮುಟ್ಟ
ಲಾ ಮೇಲುಪನ್ನೀರಚಳೆಯುದೋಳಿಂಪು ವೀಧಿಗಳೊಳಗೆ ಮಘಮಘಿಸಲು
ಹೇಮಮಯ ಸೌಧಂಗಳಪರಿಮಿತ ರಂಜಿಸಿರ
ಲಾ ಮನೆಯ ಉಪ್ಪರಿಗೆ ಸರ್ವತೋಭದ್ರದೊಳ್
ಪ್ರೇಮದಿಂ [3]ಬಾಳ್ವ[3] ರವಿಶಶಿವಂಶದಗ್ಗಳ ಮಹಾರಾಜರಿಂ ಮೆರೆದುದು ೪೦

ಪೊಳೆವಮಳಮೃಗನಾಭಿ ಕಾರಣೆಯ ಸಾರಣೆಯ
ಬೆಳಗುಪತಿಧಾರಣದ ತೋರಣದ ಕಾರಣದ
ಲಳಿತಮಯ ಸೀಗುರಿಯ ವಾರಣದ ವೀರಣದ ಮಧ್ಯರವ ಪೂರಣದೊಳು
ಬಲವಂತಧನಕನಕವಿತರಣ ವಿಚಾರಣದ
ಮಿಳಿತ ಪರಬಲಜಲಧಿವಾರಣದ ಮಾರಣ[4]ದಿ
ಚಲಮುಳ್ಳ ಪಟು[4]ವೀರರಿಂದಧಿಕತರಮೆನಿಸಿ ಪುರವರಂ [5]ರಾ[5]ಜಿಸಿದುದು ೪೧

ಆಮರ್ದುನಂಬರಿದೊರ್[6]ಡಂ ಶತಮನ್ಯುನಾಮಕಂ
ಗಮರಿದಾಳಿಕೆಗೊಂದಿತಮರಾವತಿಯುಂ ಭಾಗ್ಯ
ರಮೆಯೆ ಮೊದಲಾದ ನಾರಿಯರಿರ್ಪ ವಿಷ್ಣುಪುರಿ ಗೋವಿಂದ ವಾಸವಾಯ್ತು
ವಿಮಲಿನ ಚತುಷ್ಷಷ್ಟಿ ವಿದ್ಯಾಢ್ಯವಾದೊಡಂ
ಕಮಲಾಸನನ ರಾಜಧಾನಿಯಜಧಾಮಮಾ
ಯ್ತಮಮ ಸೋಮೇಶಲಿಂಗವನಾಂತ ನನಗಾರು ಸರಿಯೆಂದು ರಾಜಿಸಿತ್ತು[6] ೪೨

ಬಿತ್ತರದ ಕೊಲ್ಲಿಪಾಕಿಯ ಪುರದ ಸೊಬಗನು
ಳ್ಳಿತ್ತರದ ರಾಜವೀಧಿಯೊಳು ಚರಿಸುವ ಜನರ
ಮೊತ್ತಮೊತ್ತಂ ನೋಡಿ ತುತಮ್ಮ ವೀಧಿಯೊಳಗೆಯ್ದಲೆಡೆಯಿಲ್ಲದಿರಲು
ಹತ್ತುನೂರ್ಗೈಯ್ಯ ಕತ್ತಲೆಯಾಣ್ಮರೀರ್ವರರಿ
ವುತ್ತಲಂಬರಕಡರಿ ಶಿವನಿಳಯದಗ್ರಮಂ
ಪತ್ತಿ ಚರಿಸಲ್ಬಾರದೆಂದುತ್ತರಾಯಣ ಸುದಕ್ಷಿಣಾಯನರಾದರು ೪೩

---

1 ಯನೆಕದೊಳ್ (ಚ) 2 ರಾ (ಗ) 3 ಸೋಳ್ವ (ಚ) 4 ದ। ಚಲಮುಳ್ಳ (ಚ) 5 ರಂ (ಗ) 6 ಡೇಂ ಶುದ್ಧಶ್ರವಂಗೆ ತಾ।ನಮರಿಸತಿಯೆನಿಪ ತಮ್ಮಮರಾವತಿಯು ಶೃಂಗಾರ । ರಮೆಮುಖ್ಯಗೋಪನಾರಿಯ ರಿರ್ಪ ವಿಷ್ಣುಪುರಿ ವೈಕುಂಠವಾಸು।ಮದುಮ ಚತುಷಷ್ಟಿವಿದ್ಯೆಯುಸತ್ಯಮುಳ್ಳಡೆ।ನಮಿತ ಶಿರಭಂಗಗಾ ಶ್ರಯಮಾಯ್ತು ಬ್ರಹ್ಮಪುರಿಯಮರ್ದಭಂಗಂಗಳಂ ನಗುತ ಪುರನಾರಿ ಸೋಮೇಶಲಿಂಗವನಾಂತಳು (ಚ)

ಪಾತಾಳದಿಂ ಬಂದೆ[1]ಪೆಂದು[1] ಕುಲಮೂಲಮಂ
ಖ್ಯಾತಿಯಿಂ ಲೋಹನಖದಿಂ ಕೊಯ್ದು ಮೂಗರಿದು
ಭೀತಿಯಿಲ್ಲದೆ ಕಟ್ಟಿ ಜಲದೊಳದ್ಭುತ ಬೀದಿಯೊಳ್ ಮಾರ್ಪ ಕೊಂಬ ಜನರಂ
ಭೂತೇಶನರ್ಚನೆಯ ಕಡೆಯಿಂದಲಾಪ್ತರಹ
ಓತಿರ್ಪರುಂ ಕೂಡಿ ಘಳಿಗೆಗೊಪ್ಪೊಮ್ಮೆ ಬಿಡ
ದಾತುರದಿ ಬಾ[2]ಯ್ಬಿಡಿಸದಿರ[2]ವೆಂದು ತಾಂಬೂಲದಳಮೆಸೆದವಂಗಡಿಯೊಳು ೪೪

ಪಗಲು ಭಂವನದೊಳು ಭುವನಜೆಯ ರವಿಂಸುವನೆಂ[3]ಬು
ವ[3]ಗಣಿತದ ನಿಂದ್ಯ ನಿಮ್ಮಿಂದಾದುದೆನಗೆಂ[4]ದು[4]
ಬಗೆಯಿಂದ ಮಿಹಿರ ತನ್ನಂಶುಸಾಸಿರಗಳಂ ನೂಂಕೆ ಭೂಲೋಕಕಿಳಿದು
ಮಿಗೆ ಸೋಮನಾಥನಿರ್ಪಮಲ ಪುರಮಂ ಸಾರ್ದು
ಜಗದಜನಕುಪಕಾರಮಂ ಮಾಳ್ಪವೊಲ್ ಕಿರಣ
ಬಗೆಬಗೆಯ ರೂಪುದಳೆದಂತಲ್ಲಿ ಕಂಚುಗಾರರ ಪಸರ ಮೆರೆದಿ[5]ರ್ದುದು[5] ೪೫

ನಗ[6]ದೊಳಗರಣ್ಯದಲಿ[6] ಬಗೆಬಗೆಯ ಮೂಲಿಕೆಯ
ಮಿಗೆ ಸೃಜಿಸಿ [7]ಘನ[7]ಫಲಂ ದೇವಮಾನವಕುಲಕೆ
ಸೊಗಸಿನಿಂದೀಯಲಿಲ್ಲ[8]ಜನೆ[8] ತಾನಜನಾ[9]ಗಿ[9] ಮೇವು[10]ದಕ್ಕೇ[10] ಮಾಡಿದಂ
ನಗು[11]ತೆನಂತ[11] ನಾಗ ಹಯ ವೈದ್ಯವಸ್ತುವ ದೇವ
ರಗಣಿತದ ಯಜನದ್ರವ್ಯಗಳ ಚೀಲಂಗಳೊಳ್
ಮಿಗೆ ತುಂಬಿಕೊಂಡಿರ್ಪ ಗಂದಿಗರ ಪಸರ ತರತರಗೊಂಡು ಮೆರೆ[12]ದುದಲ್ಲಿ[12] ೪೬

ಧರೆ ದೇವಲೋಕದೊಳ್ ಸರ್ವಭೂಷಣಗಳಿಂ
[13]ಸ್ಫುರಿಸುವಾ[13]ಲಂಕಾರಮಿಲ್ಲ[14]ವೆಂತೆಂಬುದಕೆ[14]
ಕುರುಹುಂಟು ಜಿನಭೈರವರು ನಗ್ನತೆಯನಾಂತು ಲೋಕಗರ್ಹಿತರಾದರು
ಪರಮ ಪೀತಾಂಬರದೊಳಧಿಕನಾದಚ್ಯುತಂ
ಹರಕೃತ್ತಿವಸನದಿಂ ದೇವವಲ್ಲಭನಾದ
ನರಸುರಾಸುರನಾಗ ಮಾನ ನಮ್ಮಿಂದೆಂದು ಜವಳಿವಸರಗಳೆಸೆದವು ೪೭

---

1 ವೆಮ್ಮ (ಚ) 2 ಯ್ಬುಡಿದುಸದಿರೆ (ಚ) 3 ಬುಗ (ಚ) 4 ಬ (ಚ) 5 ರ್ದವು (ಚ) 6 ಮರಣ್ಯ ಗಳಲ್ಲಿ (ಚ) 7 ಏಂ (ಚ) 8 ಜ (ಚ) 9 ಗಿಯೆ (ಚ) 10 ಕಾರಣ (ಚ) 11 ತನರ (ಚ) 12 ದುವ (ಕ) 13 ನಿರುತದಿನ (ಚ) 14 ಪೂಜ್ಯಮುಮಿಲ್ಲ (ಚ)

ಪುರದ ವೀಧಿಗಳಲ್ಲಿ ಪರಮಧಾರ್ಮಿಕರಾದ
ವರ ಚಿನ್ನವರದರಿರ್ದರ್ ಮೇರುಪರ್ವತದ
ತೆರೆದ ರಾ[1]ಜಿ[1]ಗಳೊಂದುದಿನದ [2]ದಾನಕ್ಕೆ[2] ಸಾಲವು ದಿನಪನೇಂ ಪಿಸುಣನೊ
[3]ಗೊರವನೊರ್ವನ ಕಯ್ಯೊಡಕಮಾದುದನೆ ಬಿಡದೆ
ತಿರುಗುತಿಹ ದಿನದಿನಂ ಪೋದಪುದೆನುತ್ತವನ[3]
ಜರೆದಧಿಕ ತ್ಯಾಗದಿಂ ಮೆರೆವು[4]ತಿಹರಾಣಿಕಾರರ್ ಪಸರಪಸರಗಳಲಿ[4] ೪೮

ವರ ರತ್ನವಾಂತುದಧಿ [5]ರತ್ನಾಕರಾಖ್ಯೆಯಂ
ಧರಿಸಿದಂ ರತ್ನಗರ್ಭಾಖ್ಯೆಯಂ ಪೆತ್ತವಂ
ಧರಿಸಿದಳ್ ಧರೆ ಮೇಣವಂ ತಾಳಿ ಮೇರು ಪಡೆದುದು ರತ್ನಸಾನ್ವಾಖ್ಯೆಯಂ[5]
ಭರದಿ [6]ಪೇ[6]ಳಿಸಿಕೊಂಡಿತಾ ರೋಹಣಾದ್ರಿ ಕೆಂ
ಬರಲಲ್ಲದನ್ಯ[7]ಮಿನ್ನೊಂದಿಲ್ಲಮೆಂದವಂ
ಜರೆದು[7] ನವರತ್ನರಾಶಿಗಳಿಂದ ವೈಶ್ಯಜನರಿರ್ದರಾ ವೀಧಿಯಲ್ಲಿ ೪೯

ಬಟ್ಟಮೊಲೆ ಮೇಲುದಂ ಜಾರೆ ರನ್ನದೆ ಬಿಗಿದ
ತೊಟ್ಟ ಕಂಚುಕಮಿನಿತು ಪೈಸರಿಸೆ ನಿಬಿಡಕುಚ
ಮಿಟ್ಟಿಸಲ್ ನಸುದೋರೆ ತೋರಮುತ್ತಿನಹಾರ ನಲಿಯೆ ಬೆಮರ್ವನಿ ಪೊಳೆಯಲು
ಕಟ್ಟಿರ್ದ ಎಣ್ಣೆಗಂಟಿಳಿಯೆ ಸುಮಮುದುರಲಳ
ವಟ್ಟ ಕಂಕಣನಾದಮುದಿಸೆ ಶೃಂಗಾರರಸ
ತೊಟ್ಟಿಡುತ್ತಿರೆ ಕಾಮಿಗಳ್ಗೆ ಕೌತುಕ [8]ಮೂಡೆ[8] ಗಟ್ಟಿವಳ್ತಿಯರೆಸೆದರು ೫೦

ಬಿದಿರ್ವ ನೀರಂಬುದದ ಧಾರೆ ಚಲಿಸುವ ಕೇಶ
ಕೆದರ್ದ ಘನಮಾಲೆ ಮಲ್ಲಿಗೆಯಲರ್ ವಾರಿಶಿಲೆ
ಪುದಿರ್ವ ಧಮ್ಮಿಲ್ಲ ನರ್ತಿಪ ಕೇಕಿಯುಚ್ಛ್ವಾಸಪವನ ಕಣ್ಕಾಂತಿ ಮಿಂಚು
ಚದುರ್ವೆತ್ತ ಘಟ್ಟಿವಳ್ತಿಯರು ಮಳೆಗಾಲದೊಳ
ಮರ್ದಿರೆ ಭುಜಂಗರೆನಿಸುವ ಚಾತಕಂ ಬಿಡದೆ
[9]ಯಿದಿರ್ವಂದದರ[9] ಕಣಂಗೊಳಲೆಂದು ಬರ್ದಿನಿಂ ನೋಡುತಿರ್ದವು ನಲಿವುತ ೫೧

---

1 ಶಿ (ಚ) 2 ಬೆದರ್ಕೆ (ಕಗ) 3 ಹರನಗಮಜಸ್ರ ಬಳಸುತ್ತ ಪರರ್ಗೆ ಇನಿತಿ|ಲ್ಲಿರದೆ ನಿಧಿಗಳ ಕಾಯ್ವ ಭೂತದೊಲ್ ಧನಪನಂ (ಚ) 4 ತಿರ್ದರ್ ಚಿನ್ನವರದರಂಗಡಿಗಳಲ್ಲಿ (ಚ) 5 ರತ್ನಗರ್ಭಸುನಾಮ। ಮುರೆದಳೆದದೇ ಫಲಂ ಮುನಿಮೂತ್ರಮೆಂಬ ನುಡಿ।ಧರೆಯೊಳಪಕೀರ್ತಿಯಾದುದು ರತ್ನಸಾನುವೆನಿಸುತ ಮೇರುಗಿರಿಯಮರರಿಂ (ಚ) 6 ಕೀ (ಚ) 7 ಥಮಿಲ್ಲೆಂಡು ಪಳಿವುತಂ। ಭರಿತ (ಚ) 8 ಬೀರಿ (ಚ) 9 ಯದಿರ್ವದರಜ (ಚ)

ನೀಲಾಂಬರ[1]ದಿಗ್ಗೈದ ಕಂಚುಕವನೇ[1]ದೊಟ್ಟು
ಬಾಳೆ ಕತ್ತುರಿ ಕುಂಕುಮ ಜವಾದಿಯ ಬೆರಸಿ
ಲೀಲೆಯಿಂ ತೆಯ್ಯುತಿರಲಿಕ್ಕಲದಿ ಛಾಯಾತ್ಮ[2]ಭವನು[2]ಭಯ ಶಿರದಿಂದವೆ
ಲೋಲಚಂದ್ರನ ಪಿಡಿದು [3]ನುಂಗಿಯೆಯು[3]ಗುಳ್ದವೋ
ಲಾ ಲಲಿತ ಕಾಂತಿಗತ ಶಶಿಯಂತೆ ಪರಿಮಳದ
ಜಾಲದೊಡವೆರದ ಶ್ರೀಗಂಧಸಾರಣೆಯೊ[4]ಳಿಹುದೇ[4]ನೆಂಬೆನದ್ಭುತವನು ೫೨

ದುಂಡುಮಲ್ಲಿಗೆಯರಲ ಕಟಕಗಳ ಸುರಗಿ ಸುಮ
ದಂಡೆಗಳ ಮಾಲತಿಯ ಕುಸುಮ ನವಪರಿಮಳದ
ಬಂಡುಳ್ಳ ದಿಂಡುಗಳ ಮೊನೆ[5]ಮಲ್ಲಿಗೆಯ ಬಿಡುತುರಾಯಿ[5]ಗಳ ಸೊಬಗು ಮೆರೆವ
ಮಂಡನದ ಮೊಲ್ಲೆಪೂ ವೈಸರದ [6]ಚಂಪಕದ[6]
ದುಂಡುಳ್ಳಯೆಕ್ಕಸರ ಬಿಸ[7]ತಂತುವಿಂಗೈದು[7]
ಪುಂಡರೀಕಾಕ್ಷಿಯರ್ ಮಾಲೆಗಾರ್ತಿಯರು ಪೂವಂಗಡಿಯೊಳೆಸೆದಿರ್ದರು ೫೩

ಸ್ಮರರಾಜ ತನ್ನ ಶರಶಸ್ತ್ರಶಾಲೆಯನುಯಿಾ
ಪುರದ ಸುಂದರಿಯರಹ ಪೂವನಿತೆಯರ್ಗೀಯೆ
ಹರನ ಪಣೆಗಣ್ಣವನ[8]ನು[8]ರಿಮಾಡೆ [9]ನಾಥನಿಲ್ಲದ ಶಸ್ತ್ರ[9]ಜಾಲಂಗಳಂ
ಭರದಿಂದಲರಿತಂದು ಬೀದಿಯೊಳ್ ಕಟ್ಟುತಂ
ತರವರಿವುತವನವೊಲ್ ವಿಟರ್ಗೆ ಮಾರುವೆ[10]ನೆಂ[10]ಬ
ಪರಿಯಿಂದ ಮಾರುತಿರ್ದರು ಮಾಲೆಗಾರ್ತಿಯರ್ ಪರಮಮೋಹದ ಸೊಬಗಿನಿಂ ೫೪

ಸುಯಿಲ್ಗಂಪಿನಿಂ ಕಂಪ ಪಳಿವುತಂ ನುಂಪುಗಳ
ಮೆಯಿನುಂಪಿನಿಂ ನಿಂದಿಸುತಲರೆವಿರಿದಲರ
ಬಾಯ್ದೆರೆಯ ಸೊಂಪಿನಿಂ ಸೊಂಪ ಜರೆವು[11]ತಶೋಣ[11]ಸಿತನೀಲವರ್ಣಂಗಳಂ
ಕಯಿ ಮಧುರವಾಣಿ ಕಣ್ಕಾಂತಿಯಿಂ ಧಿಕ್ಕರಿಸು
ತಯಿಸರಗೆ ಶರಗಳಭ್ಯಾಸಮಂ ಕಲಿಸುವತಿ
ಯೆಯಿಗಾರರಂತಿರ್ದರಾ ಪುರದಿ ಮಾಲೆಗಾರ್ತಿಯರರ್ತಿಯಿಂದಲಮಮ ೫೫

---

1 ದಿಂದ ರಚಿತ ಕಂಚುಕಿ (ಚ) 2 ಜಂ ಉ (ಚ) 3 ಮಥಿಸಿ ನುಂಗು (ಚ) 4 ಳಿರ್ಪಳೇ (ಚ)
5 ಯುಕ್ತ ವಿಚಿಕಿಲ ತುರಾಯ (ಚ) 6 ಚಾಂಪೇಯದ (ಚ) 7 ಜ ತಂತೊಳ್ ರಚಿಪ (ಚ) 8 ಗು(ಚ)
9 ಕಾವಶರಮುಖ್ಯ ಪೂ (ಚ) 10 ವೆಂ (ಚ) 11 ತ್ರಸೆಣ (ಕಗ)

ಅರಲಸರಗಳ ಕಟ್ಟುವಲ್ಲಿ ಸೂಸಿದ ಬಂಡಂ
ಪರಳುವೊಲೆ ಯೆಳೆವೆಣ್ಗಳ[1]ೊಳು ಸೂಸೆ[1] ಕುಚಕಿಟ್ಟ
ಸಿರಿಗಂಧ ಕಾಶ್ಮೀರ[2]ದುಪರಾಗ[2] ಮುಡಿಯಕತ್ತುರಿಯ [3]ಬಿತುಪುಡಿ ಜೆ[3]ಡೆಯೊಳಂ
ಧರಿಸಿರ್ದ ಸುರಗಿವೊದಲಾದ ಪುಷ್ಪದ ರಜಂ
ಸುರಿಯೆ ಬೀದಿಯೊಳು ಮಾರುತ[4]ನ[4] ತಳಿದೆಣ್ದೆಸೆಗೆ
ಭರದಿಂದ ತೀಡೆ ಜನ ಕೊಂಡಾಡೆ ಗಂಧವಾ[5]ಹಾಂಕವಾಗಾ[5]ಯ್ತದ್ಭುತಂ ೫೭

ತೊಂಡೆವಣ್ಣಿನ ಕೆಂಪ ಪಳಿವಧರ ಪರಿಮಳದ
ಮಂಡೆ ನವಿರಿನ ಮುಡಿಯ ಲಲಿತ ಕೋಮಲೆಯರಹ
ಮಿಂಡಿವೆಣ್ಗಳ ತಂಡ ಮಂಡನದೆ ಬರೆ ಕೀರ ಭ್ರಮರಪ್ರತಾನ ಮುಸುಕೆ
ಪುಂಡರೀಕಾಕ್ಷಿಯರ್ ತೋಳೆತ್ತೆ ಕನಕಮಯ
ದಂಡಗಳ ತೆರದಿ ರಂಜಿಸೆ [6]ಹರಿನ್ಮಯನೀಲ[6]
ಚಂಡಾತಪತ್ರಗಳ ಕಾ[7]ಪೆತ್ತಿ[7] ಪಿಡಿದವೊಲ್ ಬೀದಿಯೊಳಗೆಸದವಮಮ ೫೭

ಇಂತು ಪುರದಂಗಡಿಯ ಮಿಂಗಡದ ಸಾಲ್ಗಳಂ
ಸಂತಸದ ಸಕಲಸೌಭಾಗ್ಯಗಳ ಯೋಗ್ಯಗಳ
ತಿಂಥಿಣಿಸಿದಪರಿಮಿತ ಭವನಗಳ ಭುವನಗಳ ಸಿರಿಯ[8]ಸಿಂ[8]ಗಾರಂಗಳಂ
ಕಂತುಮರ್ದನಮುಖ್ಯ ನಿಳಯಗಳ ವಳಯಗಳ
ಮುಂತೆ ಪೋಲ್ವೆಸುತಿಪ ರಾಜ[9]ಗ[9]ತಿ ತೇಜ[10]ರ ಸ[10]
ಮಂತು ನೋಡುತ್ತ ಪದ್ಮಿನಿನಾಥನಾಗಸ್ತಗಿರಿಯ ಸಾರ್ದಂ ಮುದದೊಳು ೫೮

•ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದು ಪಂಚಮಸಂಧಿ ಸುಜ್ಞಾನಬಂಧಿ ೫೯

---

1 ಳಿಡೆಯಾಡೆ (ಚ) 2 ಮಕರಂದ (ಚ) 3 ಪುಡಿಜೆಡೆಯೆ (ಚ) 4 ನು (ಗ) 5 ಹಾಸುನಾಮವಾ (ಚ)
6 ನೀಲಹರಿನ್ಮಯದ (ಚ) 7 ವಂಗೆ (ಚ) 8 ಶೃಂ (ಗ) 9 ರ (ಚ) 10 ಗಳಸ (ಚ)
•ಈ ಪದ್ಯ ಕಗೆ ಪ್ರತಿಗಳಲ್ಲಿಲ್ಲ

# ಆರನೆಯ ಸಂಧಿ

ಸೂಚನೆ : *

ಎಸೆವ ಸಂಧ್ಯಾರಾಗವಿನಬಿಂಬ[1]ವ[1]ಸ್ತಮಯ
[2]ವ[2]ಸಮಂ ತಾರಾಳಿಯಂ ಗಾಢಾಂ[3]ಧ[3]ಮಂ ಜಾರ
ವಿಸರ ತಸ್ಕರ ಚಂದ್ರ[4]ಕಾಂತಿವರ್ಣನೆಗಳಂ ಪೇಳ್ವೆ ಲಾ[4]ಲಿಪುದೊಲವಿನಿಂ

ಶಶಕಧರಧರ ಧರಾಧರರಾಜನಂದನಾ
ಕುಶಜಾನನಾನಂದ ರವಿರಾಜ ರಾಜಸಖ
[5]ಬಿಸಜಾಕ್ಷಮಿತ್ರ[5] ಗಣನಾಥ ಗಾಂಗೇಯುತಾತಖ್ಯಾತ[6] ನಾಮಾವಳಿ[6]
ಝುಷಕೇತುಕುಧರ ಶತಕೋಟಿ [7]ಕಾಲಾರಣ್ಯ[7]
[8]ವಿಷಮು ದಾವಾನಲಕೃತಾಂತಭಯಭೀತ ಭ
ಕ್ತಸಮೂಹ ಮಾರವನಗಾವಳಿಪಯೋದ[8] ಹರಹರ ಶರಣು ಶರಣು ಸಲಹಾ ೧

ತನ್ನ ನೇಮಕ್ಕಧಿಕ ಜಂಗಮಂ ಬರೆ ಮಠಕೆ
ಕನ್ನಗತ್ತಿಯ ಕೊಂಡು ಪಗಲೆ ಬರುತಿರೆ ಬಸವ
ತನ್ನರೇಂದ್ರನ ಮನೆಯ ಬೊಕ್ಕಸಂ ತೋರೆಯುದಕೊಂಡೊಯ್ವುತಿರೆ ನೃಪಂಗೆ
ನಿನ್ನ ಮನೆ ಪಾಳ್ಗೆಯ್ದ ಬಸವನೆನೆ ಭುಗಿಲೆಂದು
ಉನ್ನತಾಗ್ರಹದಿಂದ ನೋಡೆ ವಂಣ್ ಕಲ್ಲೆಲ್ಲ
ಹೊನ್ನರನ್ನದ ನಿಧಿಗಳಂ ಮಾಡಿ [9]ಮೆರೆ[9]ದ ಕನ್ನದಬ್ರ[10]ಹ್ಮರಿಂಗೆ[10]ರಗುವೆಂ ೨

ದಿನನಾಥ ಘನರಾಜ ವರತೇಜನಿನಯನೆ
ನ್ನನು[11]ವ[11]ರಿಸಿ ನೆರವೆನೆಂದೆಯ್ದಲಾ ಪೂ[12]ರ್ವದಿ
ಕ್ಕಿನ ಕಾಮಿನಿಯ[12] ಧವಳಮಯದಂಬರಂ ಬಿಡಿಸಿಯಾಕೆಯಂ[13] ಮುಂದುಗೆಡಿಸಿ[13]
ತನುಸೋಂಕನಿತ್ತು ಶಾಂತಿಯನೆಸಗಿ ಪಶ್ಚಿಮಾಂ
ಗನೆಯರುಣ ವಸನಮಂ ಪೊ[14]ದೆಯಳೇಯೆನಲುಂ ಗ
ಗನಮೆ ಕೆಂಪಾಗಿ[14] ಸಂಧ್ಯಾರಾಗದಿಂದಲದನೇನೆಂಬೆನಾಶ್ಚರ್ಯಮಂ ೩

---

1 ದ (ಕ) ನ (ಚ) 2 ದ (ಚ) 3 ದ (ಚ) 4 ಜ್ಯೋತ್ಸವರ್ಣಂಗಳಂ ಪೇಳ್ವೆನಾ (ಚ) 5 ನಸದೃಶಾಗಣ್ಯ (ಚ) 6 ತ್ರೈಲೋಕ್ಯನಾಥ (ಚ) 7 ಕಾನನಕಾಲ (ಚ) 8 ಲಸಿತ ಶಶಿಕಾಂತ ತನುಸಂಕಾಶಗೋಗಗನ ದಶದಿಶಾಧೀಶ ನುತಚರಣ ಸಂಸ್ಮರಣ (ಚ) 9 ಬರೆ(ಕಗ) 10 ಹ್ಮಿಗಳ್ಗೆ (ಚ) 11 ಬ (ಕಗ) 12 ರ್ವಾಂಗನೆಯುಡಿಸಿ (ಚ) 13 ಸಂಗತಿಗ್ಮಗೆಡಿಸಿ (ಚ) 14 ದಿಸಿದಳೆನಲ್ಕಂಬರಂ ಬಿನದಿಸಿತ್ಯಾಗ (ಚ)

•ಚಂದ್ರಕಾಂತಿವರ್ಣನೆ (ಗ)

ಜಲಜಸಂಭವನಂಡಮಂಡಲವೆಂನಿಪ್ಪ ಗೃಹ
ವಳಯದೊಳಗಸ್ತಾದ್ರಿಯೆಂಬ[1] ದೀವಿಗೆ ಕಂಭ
ಕ[1]ಳವಟ್ಟ [2]ಪೆಂಜೊ[2]ಡರೊ ಪೊನ್ನರಾಶಿಯ ಸೊಬಗೊ ಸಾಯಾಹ್ನವೆನಿಪಬಲೆಯ
ಲಲಿತ ಶೋಣಾಬ್ಜಮಯಮುಖಬಿಂಬವೋ ನೋಡೆ
ಸಲೆ ಪ್ರಾ[3]ಗ್ನಿತಂಬಿನಿಯ ಪೂರ್ವಾಭಿಮುಖವಾಗ
ಲೊ[3]ಲವಿನಿಂ [4]ಪಿಡಿದ[4] ರನ್ನದ ಕನ್ನಡಿಯ ಬಿಲ್ಲೆಯೆನಲೆಸೆದುದಿನನ ಬಿಂಬಂ ೪

ಪಗಲೆನ್ನ ಸತಿ ಬಾಯಿಬಿಡುತಿರಲ್ ಜನರೆಯ್ದೆ
ನಗುತ ಕೈಸೆರೆಗೊಂಡು ಪೋಗುತಿರೆ ಕಂಡು ತಾಂ
ಜಗಮರಿವವೊಲಾಕೆಯಂ ಬಿಡಿಸಲಾರೆನೆಂಬಗಣಿತಾಕೀರ್ತಿಯಾಂತು
ಸೊಗಸುಳ್ಳ ಶಶಿಕಳೆಯನಳಿದೆ ನೀಲೋತ್ಪಲದ
ಮೊಗಗೆಡಿಸಿ ಮುದದಿ ವೃದ್ಧಿಯ ನಿವಾರಿಸಿದೆನೆಂ
ದಗ[5]ಲಿದಿನಸಖನಿಂದ ಕಳೆಗುಂದಿ ತಪನ ಪಡುವಣವಾರ್ಧಿಯೊಳ್[5]ಗಾಳ್ದನು ೫

ಮೊರೆಯಿಟ್ಟವಲ್ಲಲ್ಲಿ ದ್ವಿಜಕುಲಂ ದ್ವಿಜರೆಲ್ಲ
ರಿರದೆ ಕಣ್ಮೊಗು ಮುಚ್ಚಲ್ ಚಕ್ರವಾಕಂಗ
ಳರರೆಯಳಲಿದವಂಬುಜಂ ಮುಗಿದು ಪೊಡೆಯೊಳ್ ಪಲುಂಬಲ್ಕೆ ಕುಮುದ ಮಂದದಿಂ
ದರೆವಿರಿದವೊಂದೊಂದು ತಾರೆ ತಲೆದೋರಿದವು
ಸ್ಮರಕುಸುಮಶರವ ಪೂಡಲ್ ಕುಲಟೆಯರ್ ಮನಂ
ಹರುಷಾಮೃತಂದಳೆ[6]ಯೆ[6] ಗಮಿಸಿದರ್ ಮನಬಂದ ಟಾವಿಂಗೆ ರವಿ ಮುಳುಗಲು ೬

ಆ ಸಮಯದೊಳ್ ನೋಡೆ ದ್ರುಹಿಣಾಂಡವಳಯಮಂ
ಅಸುರದ ತಮ ಮುಸುಂಕಲ್ ರಜನಿಪತಿ ನೋಡಿ
ಮೋಸವಾದುದು ವಿಧುಂತುದ ಬಂದುದೆಂದು ಕೋಪಾಟೋಪಸೂಕ್ಷ್ಮರೂಪಂ
ಲೇಸಾಗಿ ಧರಿಸಿಯೋಡುತ್ತ ಗೃಹದಂಗಡಿಯೊ
ಳಾ ಸಾಲುಗಂಬಗಳ ಗೂಡುಗೂಡಿನೊಳೆಲ್ಲ
ಭಾಸುರದ ಶಶಿ ಬಂದು ನಿಂದವೋಲಲ್ಲಲ್ಲಿ ಜ್ಯೋತಿರಾಶಿಗಳೆಸೆದವು ೭

---

1 ಕಾಲದೀವಿಗೆಯ ಮೇ।ಲ (ಚ) 2 ಪೆಜೊ್ಗ (ಚ) 3 ಚಿದಿಗ್ವ್ಣಾ ಪಶ್ಚಿಮ ಮುಖಾಭಿಮಾ।ಗೊ (ಚ)
4 ನೋಳ್ಪ(ಚ) 5 ಣತಪಕೀರ್ತಿಯಂ ದಿನಕಿರಣಗಳನುಳಿದು ಪಡುವಗಡಲೊಳ (ಚ) 6 ದು (ಚ)

ರಜನಿಯೆಂಬಮಲ ವಧುವಿಂಗೆ ಪುಷ್ಕರವೆ ತಾಂ
ನಿಜಶಿರವ ದಾಗೆ ಕಬರಿಯೊಳು ಮುಡಿದಿರ್ದ ಮಹ
ಋಜುವಾದ ವಿಚಿಕಿಲವೊ ಪುಷ್ಪದತ್ತಾಳಿ ಮುದದಿಂದಲೆಡೆವಿಡದೆ ಬಂದು
ನಿಜವಾದ ವ್ಯೋಮಲಿಂಗವ ಪೂಜಿಸಿರ್ದ ಸುರ
ಕುಜದ ಪುಷ್ಪಂಗಳೋ ಸುರಕನ್ಯೆಯರ ಕರಾಂ
ಬುಜದ ನೀರಾಜನವೊ ನೋಡಲೆನಲಾಗ ತೋರಿದುದು ತಾರಾಸಮೂಹಂ ೮

ಸುರಪಥಂ ಸಾಕಾರವಾಗಿ ಬಂದುದೊ ಕೃಷ್ಣ
ನಿರದೆ ಮಾಯುವ ತಾಳಿ ವಿಶ್ವಮಂ ಮುಸುಕಿದನೊ
ಪಿರಿದಂಧಕಾಸುರ ವಿಯತ್ತಳವ ನುಂಗಲ್ಕೆ ಬಂದನೋ ಶಮನನಾಗ
ಪರುಷದಿಂ [1]ಬಲಸಹಂ ಸಂಹರಿಸಲೆಯ್ದಿದನೊ
ಸುರರ ನುಂಗಿದ ಕಾಳಕೂಟವೋ ಶಿವನೊಡನೆ
ಗಿರಿಜೆ ಮುನಿದಾಕಾರವಳಿದು ನಿಂದಳೊ ಎನಲ್ಕಂಧಕಾರ್ಮುಯವಾದುದು[1] ೯

ಶಿರದ ಕೇಶವ ಗಡ್ಡಮೀಸೆಯಂ ಬೋಳಿಸುತ
ಭರದೊಳಾ ನಖಶಿಖಿಯು ಪರ್ಯಂತ ತಿಲರಸವ
ನಿರದೆ ಪೂಸುತ ಜಂತ್ರತಂತುವಂ ಉಡಿಗೆಗಟ್ಟುತ ಹಿಂದಣಟ್ಟೆ ಕೆರಹಂ
ಚರಣದೊಳ್ ಮೆಟ್ಟುತಂ ಕರಿಯ ಪಳೆಯುರುವೆಯು
ತ್ವರಿತದ ಪೊದ್ದು ಬೇಳುವೆಯ ಶವಭಸ್ಮಮಂ
ಪುರೆಕೊಂಡು ಮಳಲಪೊಟ್ಟಣವ ಪಿಡಿವುತ್ತ ಮಾಯದ ತಿಲಕವಿಡುತ ಪಣೆಗೆ ೧೦

ಉತ್ತರಣೆ ಬೀಜ ಮುಳ್ಳಿನ ಚೆಂಡು ನಾಯಿಗಳ
ಮೊತ್ತ ಬಾಯಟ್ಟುದುತ್ತೂರ ಬಿತ್ತುಗಳಡ್ಡ
ಕತ್ತರಿಯು ಬೀಗಿದುರೆ ಕೈಗಳಂ ಬೀಸುಹಗ್ಗಗಳು ಹಿಡಿಗಲ್ಲು ಕನ್ನ
ಗತ್ತಿಯಿಂ ಗಾಳಿಮಂತ್ರಂ ಕೊಂಕಿ ನಾರಚಂ
ಕಿತ್ತಲಗು ಸೆಳೆಗೋಲು ಮುಂತಾದವುಪಕರಣ
ತತ್ತನುವಿನೊಳ್ ತಳೆದು ತಸ್ಕರರ್ ನಡೆದರಾ ರಕ್ಕಸರ ದೂತರಂತೆ ೧೧

---

1 ಸುರರನಟ್ಟುವ ಕಾಳಕೂಟವೋ ಹರನೊಡನೆ ನಿಂದಳೊಯೆನಲ್ಕಂಧಕಾರಂ ತೋರ್ದು (ಕಗ)

ಮನೆಮನೆಯ ಪಿತ್ತಲೊಳ್ ಮೆಳೆಗಳೊಳ್ ಮೂಲೆಯೊಳ
ಗನುವಿನಿಂ ಸಂದಿಸಂದಿಗಳಲ್ಲಿ ಮುಡುಕಿನೊಳ್
ಘನಗೇಹದೊಳ್ ಮೇಲೆ ಬಿಯದಿಪಾಳ್ಮನೆ ಸೂರುಕೀಳಿನೊಳಗಲ್ಲಲ್ಲಿಗೆ
ತನುವು ಗೋಡೆಯನಪ್ಪಿ ನಿಂದು ಸದ್ದಂ ಕೇಳು
ತನುನಯದೆ ಪಣೆಹಣಿಕಿ ನೋಡುತ್ತ ಬಾದಳದಿ
ವಿನಯದಿಂದೊರಗುತಂ ಮಲಗುತಂ ಮುಲುಕುತಂ ಕಳ್ಳರೆಸೆದರ್ ತಮದೊಳು ೧೨

ಆ ತಮಂ ನಿಮಿಷನಿಮಿಷಕ್ಕೆ ವೆಗ್ಗಳವಹುದ
ಸಾತಿಶಯ ಕಂಡೊರ್ವ ಪಾಣ್ಬೆ ನುಡಿದಳ್ ನಗುತ
ಖ್ಯಾತಿವೆತ್ತಿಹ ಜಂಬುಫಲಕಪ್ಪುವದರೊಳಿನಿದುಂಟಲಾ ಕತ್ತುರಿಯೊಳು
ರೀತಿಯುಳ್ಳಧಿಕ ಕಂಪುಂಟು ಸರ್ವಕ್ಕೆ ಲೇ
ಸೀತೆರದ ನೀಲೋತ್ಪಲ[1]ಕ್ಕೀ[1]ಗ ವಿಕಸನಂ
[2]ಜಾತಮು[2]ಹುದೆಂದು ಪುರುಷನ ಕೂಡೆ ಕಟಕಿಯಿಂ ನುತಿಸಿದಳ್ ತಮದ ಸೊಗಸಂ ೧೩

ಒತ್ತೊತ್ತಿ ಬಹ ಕಾಳಗತ್ತಲೆಯ ರಾತ್ರಿಯೊಳ
ಗತ್ಯಧಿಕ ಜಾರೆಯರ್ ನೀಲಾಂಬರವನುಟ್ಟು
ಉತ್ತಮದ ಇಂದ್ರನೀಲಾಭರಣಮಂ ಭೂಷಣಂಗೆಯ್ದು ಕತ್ತುರಿಯನು
ವೃತ್ತಕುಚಕಂಠವಕ್ಷಸ್ಥಲಕ್ಕೆಡೆವಿಡದೆ
ಬಿತ್ತರದೆ ಲೇಪಿಸುತ್ತುಪಕಾಂತನುಪಚರಿಪ
ಚಿತ್ತಕನುಕೂಲವಹ ವಸ್ತುಗಳ ಕೊಂಡು ಸಂಕೇತಭವನಕೆ ನಡೆವುತ ೧೪

ಪತಿಯ ರೋಗಂ ಪಿಡಿದುಯೆಡೆಬಿಡದೆ ಪೀಡಿಸುಗೆ
ಸತಿಯರಹ ಆತ್ತೆ [3]ಮೊದಲಾದ ಜನ[3]ರೆಲ್ಲರುಂ
ಹತಮಕ್ಕೆ ಸಂಗಡಿತಿಯರ್ಗೆಯಾಯುಷ್ಯ[4]ಭಾಗ್ಯಂ ಬಹ[4]ಳಮಕ್ಕುಗೆನುತ
ರತಿಯುಳ್ಳ ಪ್ರಾಣಪದವಪ್ಪ [5]ಭು[5]ಜಗನ ದೇಹ
ಸತತಸಂ[6]ತು[6]ಷ್ಟ ಜಯಮಕ್ಕುಗೆ ಮಹಾತಮಂ
ಮಿತವಿಲ್ಲದಿರಲೆಂದು ಹರಸಿಕೊಂಡಳ್ ಜಾರೆ ಮಾರಿ ಮಸಣಿ[7]ಯರಿಗಾಗ ೧೫

---

1 ಕ್ಕಾ (ಕ) 2 ಪೂತವ (ಚ) 3 ಅತ್ತಿಗೆ ಮುಖ್ಯ (ಚ) 4 ಬಹುಸೌಖ್ಯ (ಚ) 5 ಬೊ (ಗ) 6 ಪು(ಗ)
7 ಯಂ ದೈವಕೆ (ಚ)

ಶಿಶುವ ಮಲಗಿಸುವ ನೆವದಿಂ ಜೋಗುಳಿಯ ಪಾಡು
ತಸವಸದಿ ಓ ಗುಮ್ಮ ಬಾರೆಂದು ಕರೆದು ಬ
ಣ್ಣಿಸುತಯಿದೆ ಬಂತುಸುರಬೇಡ ಸಂಮ್ಮನೆಯೆಂದು ಮಗುವ ಮಲಗಿಸಿ ಪಾಣ್ಬನಂ
ಒಸೆದು ಪೊಳಯಿಂಕೆಪೊಡಗೋಡು ಕೊಟ್ಟಿಗೆ ಪಜೊಲಿ
ಎಸೆವಂಧಕಾರಗೃಹಪೊಳಗೆಯೆಲ್ಲಾದೊಡಂ
ಸಸಿನೆ ಕೂಡುವರ್ಗಿಪ್ಪವೀವ ಕುಲಟೆಯರು ಬಲ್ಲರೆ ಪತಿಯ ಮನೆವಾರ್ತೆಯಂ ೧೬

ಬಿಡದೆ ಕುಂಟಣಿ ಒರಲ್ ಕಂಡು ನೀನೇತಕ್ಕೆ
ಸಡಗರದಿ ಬಂದೆ ನಿನ್ನಾಲಯಕೆ ನಡೆಯೆಂದು
ಕಡೆಗಟ್ಟುವಂತೆ ಕಣ್ಮುಚ್ಚಿ ಸಂಜ್ಞೆಯ ತೋರಿ ಕಳುಪಿ ರಮಿಸುತ ಪುರುಷನಂ
ಕಡುಮೋಹದಿಂದಲಾತನ ತಣಿಸಿ ಸುಪ್ತಿಯೊಳ್
ಎಡೆವಿಡದೆ ಪ್ರೈಮರೆದುದಂ ಕಂಡು ಪಾಣ್ಬರೊಳ್
[1]ತ[1]ಡೆದುಬಂದಾ ಪತಿಯ ಮಗ್ಗುಲೊಳ್ ಮಲಗುವ ಪತಿವ್ರತೆಯರೆಂಬಂದದಿ ೧೭

ಮತ್ತೊರ್ವ ಜಾರೆ ಸಂಕೇತಭವನಕೆ ಪೋಗ
ಲತ್ತೊಬ್ಬ ವೃದ್ಧಜಾರಂ ಕುರುಪಗಾಣದಿರ
ಲತ್ಯಧಿಕ ಮೋಹದಿಂದೀತನೇಯುಪಪತಿಯೆಂದು ತ್ತೆ ತಳ್ಕೈಸಿ ರಮಿಸೆ
ಕುತ್ತುಗೊಳಿಸುವ ಮದನಜೀಮಂಗೊಸರೆ ರತಿ
ಮತ್ತೆಯುಪರತಿಗೆಯ್ವೆನೆಂದಧರವಂ ಸೊಕ್ಕು
ಗತ್ತಲೆಯೊಳಂ ಕಚ್ಚೆ ಪೊಸಬನೆಂದರಿದು ಪೋದಳ್ ಸೀರೆಯುವಚಿಕೊಳುತ ೧೮

ನಳಿ[2]ನಿಯೆಂಬೆಳೆವೆಣ್ಣ ಳಾಸ್ಯರುಚಿ ನೆರೆ ಬೀಗೆ
ಕಳಕಳಿಪ ಕುಮುದಿನೀ ಸಂತೋಷಮುಂದಾಗೆ
ಜಳಜಳನೆ ಚಂದ್ರಕಾಂತಂ ಜಲವ ಮುಕ್ಕುಳಿಸಿ ಪರಿದು ಕಾಲುವೆಗಳಾಗೆ[2]
ಜಲನಿಧಿ ಮಹಾರಾಗದಿಂದ ಪೆರ್ಚುತ ಕೂಡೆ
ಯೊಲವಿನಿಂ ಸ್ಮರ[3]ನ ಪೆರ್ಬಲಮಕ್ಕರಿಂ[3] ನೋಡೆ
ಪೊಳೆವ ನಕ್ಷತ್ರಕಾಂತಿಗಳೋಡೆ ಚಂದ್ರೋದಯಂ ಮೂಡಲಾಕ್ಷಣದೊಳು ೧೯

---

1 ನ (ಕ) 2 ನ ನಳಿನಾಶ್ಚರ್ಯರ್ ಕುಂದೆ ಕುಮುದಂ ಕುಮುದ । ನಳನಳಿಸೆ ಚಂದ್ರೋಪಳಂ ಪರಿಯೆ ಚಕೋರಮಹ । ಕುಳನಶ್ಲೆಯ ವಿರಹಿಜನಕುಪತಾಪಮೂಡೆಯರೋಡೆ ವೀಡಿನಿಂದ (ಚ) 3 ರಾಜ ಬಲವ ಪರವುತ (ಚ)

ಅರರೆ ತಮಮೆಂಬಸುರನಂ ಕೊಲಲ್ ಬಿಟ್ಟ ನಿಜ
ಹರನಕ್ಷಿಯೋ ಜಲಂಧರನ ವಧಿಸಲ್ ಬರೆದ
ವರಚಕ್ರಬಿಂಬವೋ ಮುರಹರನ [1]ಕೈಯೊಳಟ್ಟಿದ ಸುದರ್ಶನಕಾಯವೊ[1]
ಕರಿದೈತ್ಯನಂ ಕೊಂದ ವಿಘ್ನರಾಜನಖಂಡ
ಪರಶುತೇಜವೊ ಕುಧರಕುಲವ[2]ಮರೆ ಪೋಳ್ದುವ
ಪರಮಶತಕೋಟಿಕೋಟಿಯ ಕಾಂತಿಯೆಂಬಿನಂ ಚಂದ್ರಮಂಡಲಮೆಸೆದುದು[2]   ೨೦

ಮೆರೆವಿಂದ್ರ ದಿಗ್ವೆಣ್ಣ[3]ನನುಸರಿಸಿ ಬಂದಿರುವ[3]
ಸುರ[4]ರ ಸಂತಾನಕೌತಣವ ನೀಡುವ ಪೊನ್ನ
ಪರಿವಾಣವೊ ಮುಳಿದು ದೂರ್ವಾಸಮುನಿ ಶಪಿಸಲುಗ್ರತರ ಕೋಪದಿಂದ[4]
ಸುರಪತಿಯ ಸಂಪದಂ ಪೋಗೆಯಮೃತಾಂಧಸ
ರ್ಗಿರದ [5]ಮ[5]ತವಿಲ್ಲೆಂದು ಶರಧಿ ಚಿಂತಿಸಿ ಗುಡಂ
ಬೆರಸಿದಮೃತದ ಗುಳಿಗೆ ಮಾಡಿಟ್ಟವೊಲ್ ಚಂದ್ರಬಿಂಬ ಸಂಭ್ರಮಿಸಿ[6]ತಾಗ[6]   ೨೧

ಘುಡುಘುಡಿಸಿ ಕಾಮನಂ ಸುಟ್ಟೆವಾತನ ಮೋಹ
ಮೆಡಮಿಡದೆ [7]ಯೋಗಿಗಳ ಹೃದಯಕಮಲಂಗಳಂ
ತೊಡರಿ ಪೀಡಿಸಿ ಮುಂದುಗೆಡಿಸಿ ಕಾಡುವುದೆಂದು ತಿಳಿದು ಗಿರಿಜಾವಲ್ಲಭಂ[7]
ನಡುಗಣ್ಣ ತೆರೆದವೊಲ್ ಚಂದ್ರಬಿಂಬದ ರಾಗ
ವಡರಿತ್ತು ಪೂರ್ವಾದ್ರಿಯಲ್ಲಿ ಕಿಡಿಯುಗುಳ್ದವೊ
ಲುಡುಗಣಂ ರಂಜಿಸಲ್ ಕಡುಬೇಗೆಯಿಂ ಕಾಮಿಗಳ್ ಬೆಂದರತ್ಯದ್ಭುತಂ   ೨೨

ಇದೆ ತಮಸ್ಸೆಂಬ ಪರ್ವತವ ಪೋಳ್ದುಟ್ಟುವತಿ
ಬಿದುರವಿದೆಯಿಡರ್ದ ತಮಮೆಂಬಟವಿಯಂ ದಹಿ[8]ಸು
ವ ದವ[8]ವಹ್ನಿಯ ರಾಶಿಯಿದೆಯಂಧಕಾರಮೆನಿಸುವ ವಾರ್ಧಿಯಂ ಪೀರುವ
ವಿದಿತ ಬಡಬಾನಲಂ ಯಿದೆರಾತ್ರಿಯೆಂದೆಂಬ
ಮದಗಜಂಗಳ ಮೊತ್ತಮಂ ಗೆಲುವ ಮೃಗರಾಜ
ನಿದೆಯಿದೆಕೊ ನೋಡೆಂಬ ಜನದ ಮನಕುತ್ಸವಂ ಬೀರಿತ್ತು ಚಂದ್ರಾತಪಂ   ೨೩

---

1 ಸಂಹರಿಸಲಟ್ಟಿದ ಸುದರ್ಶನಮೊ (ಚ) 2 ನುರೆ ಪೋಳ್ದಿಂದ್ರ। ನಿರುತ ಶತಕೋಟಿಯಮೆಂಬಿನಂ ಚಂದ್ರಬಿಂಬಮೊ (ಚ) 3 ನಾಣ್ಮನಂಟರಹ (ಚ) 4 ಸಂತಾನಕೌತಣಂ ಪೇಳಮೃತನಿರದೆರೆಯಲೆಂದು ಬೆಳಗಿಟ್ಟ ಪೊಂಬರಿಯಾಣಮೆಂಬ ಲೋಲಂತಲ್ಲದೆ (ಚ) 5 ವ್ಯ (ಚ) 6 ತರರೆ (ಚ) 7 ಬೆಡಗಿನಿಂದಾಡುತಿಹ ಮೋಹಿಗಳ। ಮೃಡ ಸುಡುವೆನೆಂದು ಯೋಚಿಸಿ ತನ್ನ ಹೃದಯದೊಳ್ ನಲಿದು ಪರಮೋಲ್ಲಾಸದಿಂ (ಚ) 8 ಪ । ಗದಿತ (ಚ)

ತಮವೆಂಬ ರಾಹು ಸರ್ವವ ನುಂಗಿಕೊಂಡುದೆಂ
ಬಮಿತ ಚಿಂತೆಯೊಳು ಶಶಿ ಸಚರಾಚರಂಗಳಂ
ಸಮದೃಷ್ಟಿಯಿಂ ಸಲಹಲೆಂದಮೃತವಳಿಗರೆದನೋ ಸು[ಸಂ]ಭ್ರಾಂತಿಯಿಂದ
ತಮಮೈದೆ ಮುಸುಕೆ ಸವಿಗಡಲು ಹುಡುಕುವನೆಂಬ
ಮಮತೆಯಿಂ [1]ಮೇಲಕ್ಕೆ ನೆಗೆದು ಧರೆಗಿರಿಗಳಂ[1]
ಕ್ರಮದೆ ಗಗನವ ವ್ಯಾಪಿಸಿತ್ತೆನಲ್ ಚಂದ್ರ[2]ಮನ ಕಾಂತಿ ತಾಂ[2] ರಂಜಿಸಿತ್ತು ೨೪

ಶಶಿಕಿರಣಕಾಂತಿಯೋ ಇದು ಚೆಲ್ವಪರಶಿವನ
ಪಸರಿಪ ತನುಚ್ಛವಿಯೆ ಪೂರ್ಣವಾದುದೊ ನೋಡ
ಲಸಮಾಕ್ಷ ಜಡೆಯೊಳ[3]ಗೆ[3] ತಾಳ್ದಿರ್ದ ಗಂಗೆ ಲೋಕವ ನೋ[4]ಡಬೇಕೆನುತ್ತ[4]
ಒಸೆದಟ್ಟಿದಾತ್ಮ[5] ಪ್ರವಾಹವೋ [6]ನಿರ್ಬಾ[6]ಣ
ರಸರೂಪವಾದಮೃತ[7]ವೋ ಚರಾಚರಜಗವ[7]
ಸಸಿನೆ ರಕ್ಷಿಪೆನೆಂದು ಧರೆಗಿಳಿದುದೋ ಎನಲ್ ಬೆಳ್ದಿಂಗಳೊಪ್ಪಿರ್ದುದು ೨೫

ರಂಜಿಸುವ ಶಶಿ ಜೊನ್ನ ನೋಡಲದು ಪರಶಿವನ
ಮಂಜುಳ ಮಹಾ[8]ಶರೀರದ ಧಾಳದಂತೆಸೆಯೆ[8]
ನಂಜುಗೊರಲನ ಶಿರಃಕೇಶ[9]ಸಂಚಯದಂತೆ ಗಗನಾಂಗಣಂ ರಾಜಿಸೆ[9]
ಕಂಜವೈರಿಯ ಬಿಂಬ ಮುಡಿಯಲ್ಲಿ ಮುಡಿದ ಸಿತ
ಕಂಜ[10]ದಂದದಲಿ[10] ಸಿಂಗರ[11]ಮೊಂದಲು ಕಳಂಕ
ಪುಂಜಮೇ ರೋಲಂಬರಾಜಿಯಂತಲ್ಲಿ ಪ್ರೈಮರೆದೊರಗಿದಂತಿರ್ದುದು[11] ೨೬

ಶ್ವಶುರನೆನಿಸುವ ದಕ್ಷ ಪಗೆ ಗಡಾ ದೇವ[12]ತಾ
ವಿಸರ ಗುರುವಾಗ ಪೆಂಡತಿಯು ದೆಶೆಯಿಂ ರಾಹು
ಮುಸುಕಿ ಪಿಡಿಪಂ ಕಾಲಕಾಲದೊಳು ದುರ್ಯೋಗವೊಂದುತಿರಲೀ[12]ಜಗದೊಳು
ಪಸುಳೆ ನೋಡಲ್ಕೆ[13]ನ್ನ ಮಗನೆಂದು[13] ರಾತ್ರಿಯೊಳ್
ಮಿಸುಗು[14]ತ್ತ ಗಾಳಿ[14]ವಟ್ಟೆಯೊಳು ಚರಿಸುವನೆನು
ತ್ತಸಮ ಮಂತ್ರಾಂಜನವನಿಟ್ಟು[15]ನೆನೆ ಕ್ಷೀರಾಬ್ಧಿ[15] ಶಶಿಕಳಂಕಂ ಮೆರೆದುದು ೨೭

---

1 ದೂರ್ಧ್ವ ಕೀಳುತ್ತ ಧರೆಗಿರಿಗಳೊಳ್ (ಚ) 2 ಜ್ಯೋತ್ಸ್ನಂ ಕಂಗೆ (ಚ) 3 ತಿ (ಚ) 4 ಲ್ವೆನೆಂಬ ಭರದಿಂ (ಚ) 5 ಗೆಯಿಂ ಬಂದ (ಚ) ದಟ್ಟಿದಾ (ಗ) 6 ಸಿತ್ಕರ್ಬಾ (ಗ) ಗೀರ್ವಾ (ಚ) 7 ಸ್ಥಾವರ ಚರಾಳಿಯಿಂ (ಚ) 8 ವರ್ಪದೊಲೆಸೆಯಿತಯ್ಯಯ್ಯ (ಚ) 9 ಮೆ ವಿಯಚ್ಚರಾಂಗಣಮಾಗೆಯಲ್ಲೊಪ್ಪುವ (ಚ) 10 ಪಾಂಗಿದೆ (ಚ) 11 ವಾಯ್ತು ಪರಿಮಳಂ ಭುಂಜಿಸಲ್ಕೆರಗಿರ್ದ ರೋಲಂಬದಂತೆ ರಾಜಿಸಿತು ಚಂದ್ರನ ಕಳಂಕಂ (ಚ) 12 ರ್ಕ । ಳೊಸಗೆಯಿಂ ದೀಕ್ಷೆಯಂ ಮಾಳ್ಪ ಆಂಗೀರಸಂ ಅಸುವೈರಿ ಸ್ವರ್ಭಾನು ಕಾಲ ಕಾಲಕ್ಕಯ್ದಿ ಬಾಧಿಪ ಗಡಾ (ಚ) 13 ತಿಂಗಳ ಮಗಂ (ಚ) 14 ಕಡೆಯಲ್ಲಾಳಿ (ಚ) 15 ಳೆಸೆ ಪಾಲ್ಗಡಲ್ (ಚ)

ನೀಲೋತ್ಪ[1]ಲಾವಳಿಗೆ ಮನದನ್ನನಾದೊಡಂ[1]
ನೀಲಾಂಬರಾ[2]ಶ್ರಯಂ ನೀಲಾಭನಾದ ಶನಿ
ಗೇಳನೆಯ ಮನೆಯನಾಳ್ದುದರಿಂದ ಕಪ್ಪಾದ ರಾತ್ರಿಸತಿಗೋಪನಾದಂ[2]
ಲೀಲೆಯಿಂ ಮದುವೆಯಾದಪೆನೆನುತ ಕಮಲೆ ಬಂ
ದಾ ಲಲಿತ [3]ಮಲ್ಲಿಕಾಧವಳ ವಸ್ತ್ರವ[3] ಪೊದಿಸಿ
ನೀಲ [4]ರತ್ನದ ಪದಕಮಿಟ್ಟಳೋ ಎನೆ[4] ಚಂದ್ರಲಾಂಛನಂ ತೋರಿತಮಮ ೨೮

ಧರೆಯೆಲ್ಲ[5]ರಾಜತನಿ[5]ಬದ್ಧ ಭೂಮಿಯೊಲಾಯ್ತು
ತರುಗಳೆಲ್ಲಂ ಕಲ್ಪತರು[6]ರಾಜಿಯಂತಾಯ್ತು
ಗಿರಿಗಳೆಲ್ಲಂ ಹರಾದ್ರಿಯ ಕೂಟದಂತಾಯ್ತು ಪರಿವ ಕಾಲ್ದೊರೆಗಳೆಲ್ಲ[6]
[7]ಸುರತರಂಗಿಣಿಯ ಪೂರದೊಲಾಯ್ತು ಮುನ್ನೀರ
ನೆರವಿಯೆಲ್ಲಂ ಸುಧಾಂಬುಧಿಯ ತನುವಂತಾಯ್ತು
ಕರೆಗೊಂಡ ಮುಗಿಲು ಧೌತಾಂಬರದವೊಲ್ ತೋರಿತಾಗ ಬೆಳ್ದಿಂಗಳಿಂದ[7] ೨೯

•ಪರಿಪರಿಯ ಪಕ್ಕಿಗಳನೇಕೆಮಾಡಿದನಜ್ಜ
ಗರುಡಾಂಡಜಂಗಳಂಗೆಯ್ಯದೇ ಮೃಗಜಾಲ
ಮಿರದೇಕೆಗೈದನಜನೆಲ್ಲಮಂ ಮೃಗರಾಜಜಾತಿಯಂ ತಾಂ ಮಾಡದೆ
ಕರಿಗಳೇತಕ್ಕಿಲ್ಲಿ ರಚಿಸಿದಂ ಚೌದಂತ
ದುರುಭದ್ರಗಜಗಳಂ ಸೃಜಿಸದೇ ಎಂದೆನಿಪ
ನರರಕ್ಷಿಗವರಿಚ್ಛೆಯಂ ಸಲಿಸುತಿರ್ದುದಾ ಚಂದ್ರಮನ ಕಳೆಯ ವೊತ್ತಂ ೩೦

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಪುದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದು ಷಷ್ಠಮಂ ಸಂಧಿ ಸುಜ್ಞಾನಬಂಧಿ ೩೧

---

1 ಲಾಣ್ಮ ಸೀತಾಂಶು ಮಾಲಾಧರಂ (ಚ) 2 ಶ್ರಿತಂ ತಾರಾಳಿಯೊಡೆಯ ಶಿವವಳಿಭೂಪನೆಂಟರರ್ ಕಲೆಯ ಷೋಡಶಾಬ್ದದ ತುಂಬು ಜವ್ವನಿಗನು (ಚ) 3 ರಜತಸುಮಮಯಂದಂಬರಂ (ಚ) 4 ವರಲಿನ ಪದಕವ ಧರಿಸಿದಳೆನಲ್ (ಚ) 5 ರಜತದನಿ (ಚ) 6 ನೋಡೆ ಕುಸುಮಚಯ ಅರಳಂತೆ ಮಲ್ಲಿಗೆಯ ನದಿಗಳೆಲ್ಲಂ ಸುರತರಂಗಿಣಿ ಭಾವಿಸೆ (ಚ) 7 ಸರಿತ್ಪತಿಗಳೆಲ್ಲ ಕ್ಷೀರಾಬ್ಧಿವೊಲ್ ಸರಸಿಗಳ್ । ಮೆರೆವಮೃತ ಕೊಣಗಳಂತಬ್ಜ ನೀಲೋತ್ಪಲಗಳರಳ್ದ ಪುಂಡ್ರೀಕದೊಲೆಸೆದವಾ ಶಶಿಜೊನ್ನವಣಿಸುವಕವಿಯಹಾದನೊ(ಚ) ಗಿರಿಗಳೆಲ್ಲಂ ಚೆಲ್ವಚಂದ್ರೋಪಲದ ಗಿರಿಗಳ್। ಅರೆಗಳಂ ಎಲ್ಲೆಲ್ಲಿ ನೋಡಲವು ವಜ್ರಮಯ ।ವರಲ್ಗಳುಂ ಶೃಂಗಾರವೆತ್ತ ಮುಕ್ತಾಳಛವಿ ಪಶುಮೃಗಾದಿಗಳ ನೋಡೆ । ವರಸು ಸಲೆ ಶ್ವೇತ ಚಮರಿಗಳ ಫಾಂಗಿಂ ತೋರೆ । ಯರರೆ ವಿಹಗಗಳೆಲ್ಲ ಹಂಸೆರಾಜಿಗಳಾಗಿ । ಮೆರೆವುತಿರ್ದುವು ಚೆಲ್ವ ಚಂದ್ರಾತಪಪ್ರಭಾ ವರ್ಣನತಿಶಯ ಜಗದೊಳು (ಚ)

• ಚ ಪ್ರತಿಯಲ್ಲಿ ೩೦ ನೆಯ ಪದ್ಯಕ್ಕೆ ಪ್ರತಿಯಾಗಿ ಈ ಪದ್ಯವಿದೆ

# ಏಳನೆಯ ಸಂಧಿ

ಸೂಚನೆ : •

ಎಸೆವ ಚಂದ್ರೋದಯಂಗಾಣುತೆ ನರೇಂದ್ರಂಗೆ
ಒಸಗೆಯುಂ ಸಖಿರೆಯ್ದಿ ಪೇಳೆ ಕೇಳುತ್ತ ಮನ
ವೊಸೆದು ವೇಶ್ಯಾವಾಟಕುಶಲಗಳ ನೋಡಿ ತೀರಲ್ಕೆ ಭಾಸ್ಕರನುದಿಸಿದಂ

ಸರಸಿಜಭವಾಂ[1]ಡಗಳ ರೋಮಕೂಪಂಗಳೊಳ್
ಪರಿಸಿ ನೋಯದೊಲಿಹನ ಬಾಂದೊರೆಯ ನೀರಮಂ
ಶಿರದೊಳಾಂತಾವಾಗ ಶಿತವರೆದ ತಲೆಯ[ಪರಿ]ದಿಟ್ಟನ ಮಹಾಮಹಿಮನ
ಉರಿವ ಕಣ್ಣಿಂ ನೊಸಲೊಳಾಂತು ತಂಪಾದ ಕ
ಪ್ಪುರದಂಜನವನೊಮ್ಮೆನೆಚ್ಚದನ ತಲೆಗೇರಿ
ಸರವ್ಯೆಯನಿತ್ತು ಪೆಣ್ಗಳಿಗೆ ಕಾಮನ ಸುಟ್ಟ ಚೆನ್ನಮಲ್ಲನ ಪೊಗಳುವೆಂ[1] ೧

ಷರವೆಯ ಪಯೋಧರಂ ಲಿಂಗದಂಡವಲಿ ಕ
ಣ್ಗಿರದೆ [2]ಕಾಣಿ[2]ಸಲವಳ ನಯನ[3]ಮುತ್ಪಲಮೆಂದು[3]
ಸರಸ[4]ಹಾರಂಗಳಕ್ಷತೆ ಮೆಯ್ಯ ಘರ್ಮಾಂಬು ಮಜ್ಜನೋದಕಮುತ್ತಮಂ[4]
ಪರಿಮಳಿ[5]ಸುಪ್ವುಚ್ಛ್ವಾಸ ಧೂಪನೇತ್ರದ ಕಾಂತಿ
ಯರರೆ ದೀಪಾಮೃತ[6]ದ ನೈವೇದ್ಯ[6] ಬಿಂಬೋಷ್ಠ
ಪರಮ ತಾಂಬೂಲಮಾಗರ್ಚಿಸಿಷ್ಟವ ಪಡೆವ ಸೌಂದರಗಣೇಶ ಶರಣು ೨

ಈಪರಿಯ ಶಶಿಜೊನ್ನದತಿಶಯಂಗೊಂಡು ಮಿಗೆ
ಈಪುರದ ರಾಜ ವಿಟ ನಾಗರಿಕರಿರ್ಪ್ಪರುಂ
ಕೂಪರಹ ಪೀಠಮರ್ದನ ವಿದೂಷಕರೆಂಬ ಜಾತಿಪುರುಷರ ಮೇಳದಿಂ
ದೀಪಿಸುವ ಅಂತಪುರಮಂ ಪೊರಟು ಪರಿಪರಿಯ
ನೇಪೇಳ್ವೆ [7]ಪುರ[7]ರಚನೆಯಂ ನೋಡಿ ಮುದದಿಂದ
ಲಾ ಪಣ್ಯವಧುವಾಟಮಂ ಪೊಗಲ್ ಕಣ್ಗೆ ಮಂಗಳ ಸೊಬಗು ಸೈಗರೆದುದು ೩

---

1 ಡೌಘಗರ್ಭಸಾವಿತ್ರಿನತ।ಶಿರ ನಿಗಮಸ್ಥಿತ ಶೀತಕರಧರ ಸುರಶ್ರೇಷ್ಠ ವರಸೂರ್ಯ ಶೀತಾಂಶುಧರ ವಿಶ್ವಾನರನೇತ್ರ ಶೇಷನಯನ ಸುಕಳತ್ರ।ಪರಮಭಕ್ತರ್ಗೆ ಸ್ವೈಪಂಕೊಡುವ ಸೋಮೇಶ ಹರಿಸಮಯ ಸೌಗತಾದ್ಯಖಿಲನ ನತಭಂಗಸಂ ಶರಣಾಂತರಂಗ ಸಹಗುರು ಚನ್ನಮಲ್ಲೇಶನಂ ನುತಿಪೆನೊಲವಿನಿಂದೆ (ಚ) 2 ರಂಜಿ (ಚ) 3 ನೀಲೋತ್ಪಲದೆ (ಚ) 4 ಮುಕ್ತಾಹಾರಾಕ್ಷತಂ ಘರ್ಮಾಂಬು ತನುಗಂಪ ಮಲಯ ಜದೊಳು (ಚ) 5 ಪ (ಚ) 6 ಲಲಾಜಲಂ (ಚ) 7 ಸು (ಕಗ)

• ವೇಶ್ಯಾವಾಟ ವರ್ಣನೆ (ಗ)

ಹರಿನೀಲಕುಟ್ಟಿಮ ಹರಿನ್ಮಣಿಯ ಕುಡ್ಯ ಸಿಂ
ಗರದ ಗೋಮೇಧ ತೊಲೆ ಮಿಸುನಿ ಮುಚ್ಚಳ ಚೆಲ್ವ
ಪಿರಿದಾದ ಕಂಭ ಬಜ್ಜರ[1]ದ ತೊಲೆಯಮೃತ[1]ಕರಕಾಂತ [2]ಶ[2]ಯ್ಯಾ[3]ನಿವೇಶಂ
ಕೊರೆತೆಯಿನಿತಿಲ್ಲವೊಂದಿಸಿದ ಪವಳದ ಲೋವೆ[3]
ಮಿರುಪ ಮುತ್ತಿನ ಕದಂ ವೈಡೂರ್ಯದುಯ್ಯಲಿಂ
ಪರಿಪರಿಯ [4]ರಯ್ಯಮಹ[4]ಮನೆಗಳಿಂ [5]ಮನೆಗಳಿಂ ಸೂಳೆಗೇರಿಗಳೆಸೆದವು[5] ೪

ಠಕ್ಕಿನಾಗಾರ ಹದಿರಿನ ಪಾಸ ಗನ್ನದುರೆ
ಯಿಕ್ಕೆ ಮಾಯದ ಮಂದಿರಂ ಪುಸಿಯ ತಾಣಮದ
ದಕ್ಕರಿನ ಕಣಜ ಮೋಹದ ಬಂದಿ [6]ಪಾಡು[6] ಪಂತದ ಗೊಂತ ಕುಹಕದಟವಿ
ಹಕ್ಕಿ ಕಲಹದ ಪಸರ ಚದುರಿನಾಲಯ ಪುರುಡಿ
ನೆಕ್ಕಸರ ನೆವದ ಮಡುವಳುಪಿನರಮನೆ [7]ಗುಣದ[7]
ಮೊಕ್ಕಳಂ ಮಾಳ್ಪ ವೇಶ್ಯಾವಾಟ [8]ಮಾರನೆಡೆಯಾಟ[8] ವಿಟಜನದ ಕೂಟ ೫

ಸ್ಮರಶಾಸ್ತ್ರ[9]ಗೋಪ್ಯ[9]ಮರ್ಥಗಳ ಪಂಡಿತವಕ್ಕಿ
ನಿರತದಿಂ ಪೇಳ್ಗು ಪೊಸವಿಟರ್ಗೆ ಪರಭೃತ ನೋಡೆ
ಕೊರಲಸರ[10]ದಂದಮಂ[10] ತಿರ್ದುಗುಂ ಪಾರಾವತಂ ನೋಡಲಲ್ಲಿ ಮುದದಿಂ
ಸ್ಮರಕೇಳಿಗಳ ರವಂಗಳ ತೋರ್ಪ[11]ವೆ[11]ಬಿಡದೆ
ಯರರೆ ವೇಶ್ಯಾವಿಟರ ನೀತಿ[12]ಯಂ[12] ಚಾಳಾಂಕಿ
ಭರದಿಂದ ವಿಸ್ತರಿಸುವಂತಲ್ಲಿ ವೇಶ್ಯೆಯರ ಜಾಣ್ಮೆಯಂ ಪೇಳಲೇನು ೬

ಕಾಮದೇವನ ಕುಸುಮಫಲಗಳುದ್ಯಾನವೋ
ಭೂಮಿಯೊಳನಂಗವೀರನ ಶಸ್ತ್ರದಾಲಯಮೊ
ನಾಮವೆತ್ತಿರ್ಪ ಪ್ರದ್ಯುಮ್ನರಾಜನ ಪಟ್ಟದಾನೆಗಳ [13]ಸೆಜ್ಜಾಗರವೊ[13]
[14]ಕಾಮಪಂಡಿತನ ಚಿಂತಾಮಣಿಯ ಭರಣಿಯೋ
ಕಾಮವೇಶ್ಯನ ನವರಸದ ಸರಕಿನಂಗಡಿಯೊ
ಈ ಮಹಾಪುರಮಧ್ಯದೊಳಗೆ ರಾಜಿಸುವ ವೇಶ್ಯಾವಾಟವೆನಲೊಪ್ಪಿತು[14] ೭

---

1 ಮಮೃತ (ಚ) 2 ರ (ಗ) 3 ಗೃಹಂ ರನ್ನದೆ।ಭರಿತ ಖಚಿತದ ಸೌಧರಾಜಿ ಪವಳದ ತೊಲೆ (ಚ)
4 ಚಿತ್ರತರ (ಚ) 5 ವನಗಳಿಂ ಸೂಳೆಗೇರಿಯೆಸೆಯುತಮಮ (ಚ) 6 ಕಾನ (ಚ) 7 ಸುಗುಡ (ಚ)
8 ಸ್ಮರಕಾಟದೂಟ (ಚ) 9 ಪಠಣ (ಚ) 10 ಗಾನಮಂ (ಚ) 11 ವುಂ (ಚ) 12 ಯಿಂ (ಕಗ)
13 ಮಾಲೊನೋಡೆ (ಚ) 14 ತಾನುರಸಲೋಚನನಲಂಕಾರಭರಣ ಎನಲಾಜಯಂತ ನಳಕೂಬರರ
ಭಾಗ್ಯದುದ್ಧಾಮಜನ್ಮದಭೂಮಿ ಸೂಳೆಯರ ಕೇರಿ ಮೋಹನಕಾರಿ ಸುಖದ ಭೂರಿ (ಚ)

ಹೊಳಿವ ಮಣಿಯುಪ್ಪರಿಗೆವನೆ ಸೆಜ್ಜೆವನೆಗಳೊಳ್
ಜಳಜಗಂಧಿಯರು ಪರಿಮಳಜಲಂಗಳ ಮಿಂದು
ತೊಳಪ ಧವಳಾಂಬರವನುಟ್ಟುಯುಂದುಗೆಯಿಟ್ಟುವುಡಿಗೆ ಕಟ್ಟುತ ಕಾಂಚಿಯಂ
ಲಲಿತಘುಸೃಣವನಿಟ್ಟು ಕನಕ[1]ನಿಚಯಂ[1]ದೊಟ್ಟು
ಪಲತೆರದ ಪಂಚರತ್ನ[2]ದ ಮಾಲೆಗಳ ಧರಿಸಿ[2]
ಥಳಥಳಿಪವುಂಗುರಗಳಂ ಬಾಹು[3]ಪುರಿಮುಖ್ಯವಾದ ತೊಡಿಗೆಗಳ ತೊಟ್ಟು[3] ೮

ಆಣಿಮುತ್ತಿನ ಹತ್ತೆಕಟ್ಟು ಮುತ್ತಿನ ಗುದಿಯು
ನಾಣು ಕಾಸಿಯು ತಾಲಿ ಹರಳೋಲೆ ಹೊನ್ನಪೂ
[4]ಮಾಣಿಕದ ಪೊಸನತ್ತು[4] ಮೋಹನದ ಮಾಲೆ ಬಹುಭೂಷಣಂಗಳನಿಡುತ್ತೆ
ಏಣನೇತ್ರೆಯರು ಮೃಗಮದದ ತಿಲಕವನಾಂತು
ಜಾಣೆಯರ್ ತೆಳ್ಗದಂಪಿನೊಳು ಮಕರಿಕೆ ಬರವು
ತಾಣೆವಣ್ಗಳ್ ಕುರುಳ ಮೇಲೆ ಮುತ್ತಿನ ಬಲೆಯ ಕೈಗೊಳಿಸುತಿರ್ದರಲ್ಲಿ ೯

ನಿಡುಜಡೆಯೊಳೆಡೆವಿಡದೆ ಮಾಲತೀಮಾಲೆಯಂ
ತೊಡರಿಚುತ ನಿಬಿಡಕುಚ[5]ದೊಳು[5] ಯಕ್ಷಕರ್ದಮವ
ಬಿಡದೆ ತೀಡುತ್ತ ಲಾಕ್ಷಾರಾಗರಸಪುಡಿಯ ಕೀಳ್ಗಡೆಗೆ ಲೇಪಿಸುತ್ತ
ಜಡಿವ ಕರ್ಣದೊಳುರೆ ಜವಾದಿಯಂ ಮುಡಗುತ್ತ
ಕಡೆಗಣ್ಣ ಕಾಂತಿ ಕುಸುಮಾಸ್ತ್ರಮಂ ಸೈಗರೆವ
ಬೆಡಗುಳ್ಳ ಕಡುಚೆಲ್ವ ವಾರವಧುಗಳ್ ಸಿಂಗರಂ ಮಾಡುತಿರ್ದರೊಲವಿಂ ೧೦

ಕೆಂಬಲ್ಲು ನುಣ್ಬೆಳಗು ದೆಸೆಗೆ ವಿಸಟಂಬರಿಯೆ
ಬಿಂಬಾಧರದ ರಂಗು ರನ್ನಗೆಂಪಂ ಜರಯೆ
ರಂ[6]ಭಾಗಮಂ[6] ಪೋಲ್ವ ತೊಡೆವೆಳಗು ಥಳಥಳಿಸೆ ತೋಳ್ವೆಳಗು ಚಾಂಪೇಯದ
ಇಂಬಾದ ಮಾಲೆಯಂ ನೀಕರಿಸೆ ಮುಡಿಯ ರೋ
ಲಂಬ[7]ಗಳ್ ತೊಡರೆ ಸುಖರಸಮುಕ್ಕುತಿರೆ ಮೊಗದಿ[7]
ಯಂಬುಜಾನನೆಯರಹ ಬೆಲೆವೆಣ್ಗಳೊಗ್ಗಿನಿಂದಿರ್ದರಾ [8]ನಗರದಲ್ಲಿ[8] ೧೧

---

1 ಕಂಚುಕಿ (ಚ) 2 ಪದಕ ರತ್ನದ ಮಾಲೆ (ಚ) 3 ಪೂರ ಭುಜಮಕರಿಕೆಯುಲಂಕರಿಸುತ (ಚ) 4 ಘೋಣಮೂಕುತಿನೆತ್ತು (ಚ) 5 ಗಳ್ಗೆ (ಚ) 6 ಭಸ್ತಂಭವ (ಚ) 7 ಬಳಸಿರೆ ಸುಖರಸಂ ತುಳಿ ಪರಿವುತಿರೆ. (ಚ) 8 ನಂಪದಿಂದೆ (ಚ)

ನಡೆಯಂದಕಂಚೆವಿಂಡುಗಳು ತೊಡರುತ್ತಿರಲ್
ನುಡಿಯ ಸೊಬಗಿಂಗೆ ಶುಕಶ್ರೇಣಿ ಪಿಂದಾಗುತಿರೆ
ಬೆಡಗಿನ ಸ್ವರಂಗೇಳಿ ಪಿಕರಾಶಿ ಮುಖರಸಂ [1]ಬಾ[1]ಡುತಿರಲತಿ[2]ಭೇದದಿಂ[2]
ಎಡೆವಿಡದ ದೃಢಮುಳ್ಳ ಬಟ್ಟಮೊಲೆಗಳ ಕಂಡು
ಸಡಗರದಿ ಕೋಕಗಳ್ ಕೂಡಿಯಗಲದೆಯಿರಲ್
ಮುಡಿಯ ಭಾರಕೆ ಮೆಚ್ಚಿ ಕೇಕಿ ಬಂದಾಡುತಿರಲೇನೆಂಬೆನವರ ಸೊಗಸಂ ೧೨

ವನಜಾಸ್ತ್ರಭೂಪಗಿಕ್ಕೆಲದೊಳಿಕ್ಕುವ ಕಾಂತಿ
[3]ವಿನುಗುತಿಹ ಚಮರಂಗಳೋ ಎನಲ್ ಥಾಳಿಸುತ[3]
ಘನ[4]ಮಾದ ಬಿಳಿದಾದ ವೇಟುಪಾವಡೆಗಳೋ ಕಾಮರಾಜನ ಪಕ್ಕದಿ
ಒನೆದೊನೆದು ವಿಟರ ನೋಡುವ ಕಾಲದೊಳ್ ಕಣ್ಣ
ಕೊನೆಯೊಳೊಕ್ಕಾಡುವ ಲಸದ್ಧವಳಕಾಂತಿಗಳ್
ತನತನಗೆ ಸೊಗಸ ಬೀರುತ್ತಿರುವರಿದನಾವ ಕವಿ ಲೋಕದೊಳ್ ಬಣ್ಣಿಪಂ[4] ೧೩

ಕಂಬುಕಂಧರೆಯರಹ ಬೆಲೆವೆಣ್ಗಳಾ ಶಾತ
ಕುಂಭ[5]ಕಂದುಕವೊಂದಿ[5] ನೋಡಿ ನಿಜದೃಷ್ಟಿಯಿಂ
[6]ಸಂಭಾವಿಸುವರೆ ಬಲ್ಲವರು ಬಾಲೆಯರ ಕುಚಗಳಿಗಿವು ಸಮಾನವೆಂದ
ಸಂಭಾವಿಸಿದರೊಮ್ಮೆ ಮೋಹದಿಂ ಸಾಟಿಯನು
ತಂ ಬಿಗಿದು[6] ಪಾಶದಿಂ ಮೇಲಕೆತ್ತುತ ಪೊಡವಿ
ಗಂ ಬಿಡದೆ ಪೊಡೆ[7]ಯುವಂತಿ[7]ಡುತ ಬೊಗರಿಯನಾಡುತಿರ್ದರಾಯೆಳೆವೆಣ್ಗಳು ೧೪

ಇಂದುಮುಖಿಯೊರ್ವಳಾನಂದದಿಂ ನಿಜವದನ
ದಂದಮಿದು [8]ನಿಲುಗನ್ನಡಿಯ ನಡುವ[8] ಮಾರ್ಪೊಳೆಯೆ
ಬಂಧುರದ [9]ಕಮಲಮೇನಿಂತೆಸೆದುದೋ ಎನುತ್ತೆಣಿಸಿ ಮತ್ತಂತಾದೊಡಂ[9]
[10]ಮುಂ[10]ದಿರ್ಪ ಕಮಲ[11]ದೋಪನ ಬಾಲ[11]ಸೂರ್ಯನಂ
[12]ಕಂದುಕಂಗೈದು ಪೊಯ್ಯಲ್ಕಾಂತಿಯಿಂದೊಮ್ಮೆ
ಕುಂದುವದೆನುತ್ತ ರನ್ನದ ಚೆಂಡ ಪಿಡಿದಾಡುತಿಹಳೊರ್ವ[12] ಹರಿಣನಯನೆ ೧೫

---

1 ನೋ (ಚ) 2 ಮುದದೊಳು (ಚ) 3 ಮಿನುಪ ಚವರಗಳೊ ಎವೆಥಾಳಿಸುವ ಧವಳಮಯ (ಚ) 4 ವೇಟಿ ವಸ್ತ್ರಗಳೊ ನಯನ ಚಂಚಲ ನೋಡೆ ಕಲಧೌತ ಛತ್ರಂಗಳೊ ವಿನುತ ನೇತ್ರಾವೃತ ಸಿತನೀಲ ರತ್ನದಿಂದನುನಯದ ವೆಜನಗಳೊ ಕಾನೀನವಿವು ಚಿಲ್ವಮನುಮಥನ ಹೊಳೆವ ಕನ್ನಡಿಗಳೊ ಕಂಗಳೊ ಎನಲೆಸೆದರಾನಂದದಿಂ (ಚ) 5 ಬೊಗರಿಯ ಬಡಿದು (ಚ) 6 ಬಿಂಬಯುತ ಮೃದುಲ ಕಠಿಣಂ ರಸಾನ್ವಿತ ಕ್ಷೀರಪೂರ್ಣಪ್ರಧಾನ ಸುಖದ ಬಂಬಲ್ಗಳಿವೆಮ್ಮ ಕುಚಕೆಂತು ಪಡಿ ಎನುತ್ತಂ ಬಿಗಿದು (ಚ) 7 ವಂತಿ (ಚ) 8 ನಿಲವುಗನ್ನಡಿಯೊಳಗೆ (ಚ)9 ಲಪನೋಪಮೆಗೆ ತುಲ್ಯಮೇನಾರ್ವ ಕರ್ದಮದೊಳೊಗೆದು ಚಿದ್ರಂ (ಚ) 10 ಸಂ (ಚ) 11 ತಾಪವಳಿನೆಯನಹಬಾಲ।ಸುಂದರ (ಚ) 12 ಪಿಡಿದಾಡಿಸುವೆನೆಂಬಂದದಿಂ ಕೆಂಗದಿರ್ ಕರೆವ ರತ್ನದ ಚೆಂಡನಾಡಿದಳ್ (ಚ)

[1]ಕಾವನಬ್ಜಾಶೋಕ ಚೂತಮಲ್ಲ್ಯುತ್ಪಲ ಶ
ರಾವಳಿಯನಾಂತು ಜಯಿಸಲ್ ಕೂಡದಿರೆ ಯೋಗಿ
ಭಾವಮಂ ನಿನ್ನ ಕರಚರಣೋಷ್ಠ ದಂತ ನಯನಂಗಳೊಳಗವನೊಂದಿಸಿ
ತೀವಿರಲ್ ದೇವಮುನಿಗಳ ಜಯಿಸು ನೀನೆನು
ತ್ತ್ಯೋವಿ[1] ಕಳ್ಳುಪುವ ತೆರದೆ ವಿಟನೊರ್ವನುಯ್ಯಲೆಯ
ಸಾವಧಾನ[2]ದಿ ತೂಗಿಯೊತ್ತುತಿರಲಾಗಸಕ್ಕಡರಿದಳಬಲೆಯೊರ್ವಳು[2] ೧೬

ನುತ[3]ದಿವ್ಯ[3]ರತಿರೂಪೆಯಾನಂದವೀವ ಮಂ
ನ್ಮಥನ ಮದದಾನೆ ನಳಕೂಬರ ಜಯಂ[4]ತಾದಿ
ವಿತತ ಸಂರವಿಟವಿಜಯ ಜಯವಂತೆ ನಿನ್ನ ಕರನಖರದಿಂ ದುರ್ಮತಿಯನು[4]
ಗತಶುಕ್ಲಧಾತು[5]ಗವಿರೋಧಿತ್ವಮಾಂತೊಡಂ
ಮಿತಿಮೀರಿಯೈದುವರೆ ನಾಗರಿಕರೆಂದು ಸಂ
ಗತಿಯಿಂದ ಪೇಳ್ದಳೊರ್ವಳಿಗೊರ್ವ ಗೆಳತಿ ನೀನೋ ವಿಶಾರದೆಯೆನುತ್ತ[5] ೧೭

ಶರದಿಂದುವದನೆ ಹಿಮ[6]ಸಂಕಾಶ[6]ದರಹಸನೆ
ವರ ತಪೋಧನ ಮ[7]ನೋಹಾರೆ ಶಿಶಿರಾಲಾಪೆ
ಸುರಭಿಕುಸುಮಾಲಂಕರಣಪಾತ್ರಕಬರಿಧನೆ ಪೊಳೆವ ಸೊಬಗಿನ ಸೋನೆಯೆ
ಕರೆದರೇಕೀಕಡೆಗೆ ಬರೆ ನಿನ್ನ ನೋಳ್ಪ ವಿಟ
ರರಿಯರೇರುಮ ಮತಿಯೆನುತ್ತೊರ್ವ ಬೆಲೆವೆಣ್ಣ
ನಿರದೆಯೆಳೆವೆಣ್ಣೊರ್ವಳೆಂದಳೀ ಜಾಣ್ಮೆಯೇನಾ ವೀಧಿಯಲಿ ಪುಟ್ಟಿತೊ[7] ೧೮

ಶ್ರೀಕ[8]ರ ಶ್ರಾವಣೆಕರಂ ಭಾದ್ರಪದ ನೋಡೆ
ಸೌಕುಮಾರ್ಯದ ಕಲಾಶ್ಲೇಷೆ ಬಾಹುಲ್ಯೆ ನೀ
ನೀ ಕಾಮಮಾರ್ಗದಿಂ ಪುಷ್ಯನ್ಮೃಗೀಷೆ ಮನದನ್ನನ ತಪಃಶ್ರಾಂತಿಯಂ
ಕೈಕೊಂಡೊಡಂ ತಪಸ್ಯೆಯೆ ಸುರಭಿ ಮಾಧವ ಪ
ದಾಕೃತಿಯನಾಂತ ಶುಚಿರಸದಿ ಸಂಪನ್ನೆ ಲೋ
ಕೈಕಮೋಹಿನಿ ನಿನ್ನ ಪೊಗಳ್ವ ಕವಿ ಯಾವನು ಸಮಾಸಪದವೊಪ್ಪುತಿರಲು[8] ೧೯

---

1 ಕಾಮನುರೆ ಶೋಕಾಮ್ರ ಕುಮುದ ಮಲ್ಲಿಗೆ ಕಮಲಾದಾವಳಿಯ ಬಿಲ್ಲು ಬತ್ತಳಿಕೆ ಬಲ ನಿನ್ನ ಮುಖ ಭಾವೆ ಕರಚರಣನಗೆ ಕಣ್ಬುರ್ಬ ಪ್ರಸ್ತುತೆಯುಮಂಯಮಂಗಳದಿ ಮುದದಿಂ ತೀವಿರಲ್ ದೇವತೆಗಳಂ ಜಯಿಸು ನೀನೆಂದೋವಿ (ಚ) 2 ದೆ ಬಿಡಲ್ ಕಾಡುತಿರ್ದಳ್ ಚೆಲ್ವಪೆಣ್ಣು ವಿರಹಿಗಳ ಕಣ್ಣು (ಚ) 3 ಪ್ರಭವ (ಚ) 4 ತ ವಿಜಯುತಿ ವಿಭವೆದುರ್ಮುಖಿ ವಿಕಾರಿ ವಿಟರೊಳ್ ರೌದ್ರಿ ಕ್ರೋಧಿ ನಿಕರ (ಚ) 5 ವಯವಿರೋಧಿ ಕಾಳಾಯುಕ್ತಿ। ಜತಿ ಪರಾಭವ ಭಾವಜಾಂತ ಇಮು-ಯನೆಯುನ್ನತ ಪಿಂಗಳಾಂಗಿ ರಸಯುತೆಯೆಂದು ಪೇಳ್ವಂತೆ ಪೇಳಿದಂ ವತ್ಸರಗಳಂ (ಚ) 6 ಸನ್ನಿಭಸು (ಚ) 7 ನಮಹಾರಾತಿ ನುತ ವೇಶಿ। ಶಿರರತ್ನ ನವಸುರಭಿ ಪುಷ್ಪಕ ಬರಿಪ್ರಿಯೆಂ ಮನೋಜ ಶಾಸ್ತ್ರಾಣುನಿಪುಣೆ ನಿರು ಈರಾರುದರ್ಪದ ಸಖಿಯೆ ನಿನ್ನಿಯ ಭರದಿಂದ ಬರಲಿಲ್ಲವೆಂದು ಸುಯ್ಯದಿರೆಂದಿರದೆ ಪೇಳ್ವಂತೆ ಋತುಗಳ ಪೇಳೆ ಕೇಳುತ್ತ ನಡೆದರಾನಂದದಿಂದೆ (ಚ) 8 ರಾಕಾರ ಶ್ರಾವಣೆ ಮಾಧವ ಸುತಮೋಹನಾಕಾರಕರ ಸುಮಬಾಣಾಶ್ರಯೆ ಬಾಹುಲಾಕಾರ ಸೌಂದರ್ಯಜ್ಯೇಷ್ಠ ಸಂಪನ್ನೆ ಸದ್ಗುಣಮಾರ್ಗ ಭಾದ್ರಚರಿತೆ ಲೋಕನುತಮಘುದಾಣೆ ಸಹಸ್ಯಸರ್ವರೊಳಿಷು ಜೋಕೆಯೆಂಬೀಮಾಘದೂರೆ ಶುಚಿವ್ರತೆ ಮಹಪಾಕಾರಿ ತನುಜಜಾಮಾತ ಮದ ಧಂತಿಯೆಂದೋತು ಸುತೆಯಂ ಪೊಗಳ್ದಳು (ಚ)

[1]ಕಲಹಂಸ[1]ಗಮನೆ ಶುಭ್ರಾಂಶು [2]ಪಟುದಂತೆ ಮಂ
ಗಲಗಾನೆ ಬುಧವಿನುತಭಾಯೆ ಗುರುಕುಚೆ ಕಾವ್ಯ
ಕಲನಾಭಿನಂದೆ ಶೋಭನ ಶನೈಶ್ಚರೆ ಗುಣಧ್ವಜೆ ಗುಣಗ್ರಹೆಯೆನುತ್ತಂ
ಒಲಿದೊಲಿದು ಕರೆವ ವಿಟರೊಳು ನವಗ್ರಹೆ ಯಾಗ
ದಳಲಿಸುವದಾವಗುಣಮೆಲೆಬಾಲೆ ಯೆಳೆವಾಳೆ
ಯೊಳಗಲ್ಲದುತ್ತಮಸ್ತಂಭದೊಳ್ ಪೊರೆ ನಿನ್ನೊಳೀಗಾದುದೇಂ ಚಿತ್ರಮೊ[2] ೨೦

ಮಾರುವತಿಮೋಹದಿಂದಾನೆ ಬಲವಂತದಿಂ
ನೀರೆ ಸಿಕ್ಕಿದೆನು ನೀನೇನ ಮಂತ್ರಿಸಿದೆ ಮನ
ದಾರತಂ ಬಿಡದೆ ನೊಂಕಿತು ನೋಟದುರುಗೆವೆಯ ಬೇಟ[3]ದಾ[3] ನೃಪಸಭೆಯೊಳು
ತೋರುತಿದೆ ಪರಿಪರಿಯ ಸೇನೆಯುಂ ಲೆಕ್ಕಿಸದೆ
ಚಾರು ಚದುರಂಗಮಂ ತೋರಿ ಲಲ್ಲೆಸೊರ್ವ
ನೀರವಿಟ ಬೆಲೆವೆಣ್ಣ ಟಕ್ಕಿಸುವ ಛಂದಮಂ ನೋಡುತ್ತ ನಡೆತಂದರು ೨೧

ನಿನಗೆ ಪೂರ್ವದ ಭುಜಂಗನ ತೇಜಮಂ ಕಂಡು
ಮನದೊಳತಿಮೋಹ ಬಿಡದವನೆ ಜೀವಾಂತಕಂ
ಘನಚಿಂತೆಯಾಸುರಂ ಬಿಡು [4]ಸರ್ವತೋಮುಖಿ ಪತಿಯ ಸದಾಗತಿಯ ರತಿಯುಂ[4]
ಧನದನತು ರಾಜನಾಯಕನೀತನಂ ವರಿಸಿ
ವಿನಯದಿಂ ಪತ್ತುಸಾಸಿರ ಪೊನ್ನ ಪಡೆ ದಿನದೊ
ಳನವರತ ಮರೆಸಿ ನೋಡಲ್ಕೆಣೆಯೆ ಎಣ್ದೆಸೆಯೊಳಿಹ ಪೆಣ್ಣು[5]ಗಳ ರನ್ನವೆ[5] ೨೨

ಹರಿಯಂತೆ ಶಂಖಚಕ್ರಾನ್ವಿತೆ ಮಹಾಶೂಲ
ಧರನಂತೆ ಚಂದ್ರ[6]ರೇಖಾನಿಭಲಲಾಟೆ[6] ಸುರ
ರೆರೆಯನೊಲ್ ವ[7]ಜ್ರಸಂ[7]ಯುತೆ ಸುರಜ್ಯೇಷ್ಠನೊಲ್ [8]ಜವ್ವನದಿ[8] ಚತುರಾನನೆ
ವರದೇವತಾಚಿಹ್ನದಳವು ನಿನ್ನಿಂ ಮುಕ್ತಿ
ಭರದಿಂದಲಕ್ಕು ಕೊಟದೊಳೆಂದು ಕಾಮುಕಂ
ಸರಸದಿಂದಾಲಿಂಗನಂಗೆಯ್ಯೆ ನೋಡೆ ನಡೆತರುತಿರ್ದರತಿಮುದದೊಳು ೨೩

---

1 ಸಲೆಹಂಸೆ (ಚ) 2 ಸಖಿಯೆನೆ ನಿಲಲಿತ ಬುಧನುತ ಲೋಹಿತಾಂಗ ಸೌಂದರ್ಯ ನರಕಲಿತ ಕವಿತಾ ಪ್ರೌಢೆ ಮಂದದರಹಸನೆ ಮಜ್ಜೀವಿನೀಕೇತುಭಾವೆ ಜಲಜತನುಗಂಧಿನಿ ತಮಂಧಗುಣದೂರೆ ನಿನ್ನೊಳಗೆ ಗ್ರಹಗುಣವಿರಲ್ ನೀನೆ ಗ್ರಹಿಸೆಂದು ಮುದವಲರೊರ್ವ ಭುಜಗ ಪೇಳಲ್ ಕೇಳಿ ನಗುತ ನದವರ್ಗಾಂದ ಕಲ್ಲಿಂದಲು (ಚ) 3 ವಾ (ಚ) 4 ವರಣಾಧರೆ ಸದಾಗತಿಯೆ ಪೇಳ್ ಮಗಳೆ ಕೇಳು (ಚ) 5 ಮನದ ಕಣ್ಣೆ (ಚ) 6 ಕಾಳೋರಗ ಸಂಯುಕ್ತ (ಚ) 7 ಜೈಭ (ಚ) 8 ವಸುವರ್ಷ್ಮ (ಚ)

ಘನವಜ್ರ[1]ದಂದದಿಂ ವಿವರವಿಲ್ಲದ ನಿನ್ನ[1]
ತನಂವಿನೊಳ್ ರತ್ನತತಿಯಂತೆ ಕಾಠಿಣ್ಯ ನೀ
ಸನವರತ ಸೂರ್ಯೇಂದುಸಂಗಮದ ತೆರದಿ ದೋಷಾನ್ವಿತೆ[2]ಯುಮಪಾಗಿ[2] ಮತ್ತೆ
ಅನಘಪೌರ್ಣಮಿಯ ಶಶಿಯೊಲ್ ಕಳಂಕಿ[3]ನಿ[3]ಸದಾ
ನನದೊಳರಿಯನುಮ[4]ತೆಯ ವದನದೊಳ್[4] ನೀನೆಂದು
ಯಿನಿಯನೊರ್ವಳ ನುತಿಸುವಂತೆ ದೂಷಿಸುವದಂ ಕೇಳಿ ನಗುತಂ ನಡೆದನಂ ೨೪

ಅಂಕುರಿಪ ಪೊಲ್[5]ಯ ಪೊಗ್ಗೆಯ ಪೇಲುದಂ ಜಾರೆ
ಬಿಂಕಗಾರಂ ನೋಟಕಳುಕಿಯೊಳಸರಿಯೆಲ್ ಮೃ
ಗಾಂಕನಂದದ ಪೊಗದ ಕಳೆಯೇರ್[5] ಸಂಲಿಪಲ್ಲ ಕೆಂಬಾಯ ಸವಿಪಾತಿನ
ಶಂಕೆಯಿಂ ಬೆದರ್ದೆರಲೆನೋಟದಬಲೆಯರು ಮೀ
ನಾಂಕನಾಗಮದ ನುಡಿ[6]ಯಂ ನುಡಿಯಲಾರದ[6] ಬ
ಳುಂಕಿ ತಲೆಗುತ್ತಿ ಬೆ[7]ದ[7]ರುತ ಸಖಿಯ ಮರೆಗೊಂಬವೆಳೆವೆಣ್ಗಳೆಸೆದಿರ್ದರು ೨೫

•ಪಿರಿದಾದ ಬಗೆಗಳಿಂದೊಳಗಾಗಿ ರತಿವೆರಸೆ
ಯರಿದದನೆ ಮನದೊ[8]ಳುರೆ[8] ಬಯಸಿ ಪುರುಷನ ಮುಂದೆ
ಯಿರದೆ ಲಜ್ಜೆಯನುಂತು ಲವಲವಿಕೆ ಸಿಂಗರಕೆ ಪರಿಮಳ ಸುಪುಷ್ಪಾಳಿಗೆ
ಯರರೆ ಭೂಷಣ[9]ವ[9]ತಿಗೆ ಲೋಭಿಸದೆ ಹದಿ[10]ರು[10]ಚದು
ರರಿಯದಂತಿರ್ಪ ವಿಂಶತಿವರ್ಷದಬಲೆ ತಾಂ
ನೆರೆಮುಗ್ಧೆಯಿವಳೆಂದು ಪೇಳೆ ಕೇಳುತ್ತ ನೋಡುಂತಿರ್ದರತ್ತಿಮುದದೊಳಂ ೨೬

[11]ಪಸುರಳಿದ ನಿಂಬೆವಣ್ಣಿನ ಪೊಲೆಯ ಕನ್ನೈದಿ
ಲೆಸಳಿನಂದವ ಪಳಿವ ಲೋಚನದ[11] ನಿಡುಜೆಡೆಯ
ಮಿಸುನಿವಣ್ಣದ ಮೆಯ್ಯ [12]ತೆಳುಗದಂಪಿನ ರಂಗುದುಟಿಯ ಯುಂಗುರನಡುವಿನ[12]
ನಸುನಗೆಯ ವಿಟರ ದಿಟ್ಟಿಪ ದಿಟ್ಟಿಗಳ ಭಾವ
ರಸವೊಸರ್ವ [13]ಬಗೆನುಡಿಗಳಿಂ ವಿಟರ ಚಿತ್ತಮಯ
ನಸುವನಪಹರಿಪ ಜಾಣ್ಮೆಯನುಳ್ಳ ಗಣಿಕೆಯರ ಗೊಂದಣಂ ರಾಜಿಸಿದುದು[13] ೨೭

---

1 ಪಾಂಗಿನಿ ವರಗುಣಹಿತೆಕೇಳ್ (ಚ) 2 ಯಜಪ್ರ (ಚ) 3 ಯು (ಚ) 4 ತಿಯು ತನುವಿನೊಳ್ (ಚ)
5 ಸೂಕ್ಷ್ಮ ಕೋರಕಂಗಳು ಮೊಲೆಯ ಬಿಂಕ ಪರಳ್ಮೊಲೆಯಮುರ್ವವೊಲೆಪ ಬವರಿವೊಲೆ ಮೃಗಾಂಕ
ಮೊಗ ದಿನದಿನಕೆ ಕಳೆಯೊರ್ವ (ಚ) 6 ಸೆ ನಾಣ್ದ್ದಣ್ಣದೆ (ಚ) 7 ಮ (ಚ) 8 ಳತಿ (ಚ) 9 ತ (ಚ)
10 ಮ (ಕಗ) 11 ಎಸೆವಡಕೆಯಾಮಳಕ ನಾರಂಗಶಾಂಡಿಲ್ಯ ಬಿಸಜಕುಟ್ಮಳ ಜಂಭಪಳ ಮೊಲೆಯು
(ಚ) 12 ಕೃಷ್ಣಮಧ್ಯಹೊಳೆವ ಕದಪಿನ ರಂಗುದುಟಿಯ ಹೊಗರ (ಚ) 13 ಕಠಿಣೋಕ್ತಿಯಿಂ
ಹೃದಯ ಭೇದಿಸುವ ಕಾಮಸಿಂಗರ ಮೋಹರಸ ತುಳುಕುವ ಪಚ್ಚೆಪಸಿವರೆಯರಿರ್ದರೊಲವಿಂ (ಚ)
• ಈ ಪದ್ಯ ಚ ಪ್ರತಿಯಲ್ಲಿ ೩೭ ನೆಯ ಪದ್ಯವಾದ ಮೇಲೆ ಬಂದಿದೆ

ತೋರಪೊಲೆಗಳ[1]ನಾಂತು ನೋಡುವರ ನೋಟಕೆ ವಿ
ಕಾರವಿಲ್ಲದ ರೂಪಿನಿಂ ದೇವರಮಣಿಯರ
ಸೀರೆಸೆರಗೋಸರಿಸೆ[1] ನಸುದೋರ್ಪ ಪೊಲೆ ಕಣ್ಣುಸನ್ನೆ ಬೆಳ್ನಗೆಯ ನೋಟ
ತೋರುವತಿ ಜಾಣ್ನುಡಿಯ ಸವಿಗಲೆವಿಲಾಸಮಂ
[2]ಬೇರೂರಿ ನೆಡುವ ಲೀಲೆಯ ನಡತೆಯಿವರಿಂದ[2]
ನೀರೆಯರ್ ಮೋಹನಾಕಾರೆಯರ್ ಪ್ರೌಢನಾಯಕಿಯರೊಲವಿಂದಿರ್ಪರು ೨೮

ಕೈರ[3]ವಾಪ್ತಾಸ್ಯೆ ಭ್ರಮರಾಲಕಿ[3]ರಸಾಲದಳ
ಸಾ[4]ರೋಷ್ಠೆ ಘನವೇಣಿ ಚಕ್ರವಾಕಸ್ತನಿ ಚ
ಕೋರಾಕ್ಷಿ ಮತ್ತಗಜಗಮನೆ ಬಾರೆಂದೊರ್ವ ವಿಟಶೇಖರಂ ಕರೆಯಲು
ಸೂರಿಜನಮಿತ್ರ ಚಂಪಕನಾಸಿಕೋಷ್ಣಸಂ
ಚಾರಶೋಭನ ಕೌಮುದೀಶುಭ್ರವಸ್ತ್ರ ಸ
ತ್ಕಾರ ಲಕ್ಷ್ಮೀವಾಸ ನರಸಿಂಹ ಬರ್ಪನೆನೆ ತಿರುಗಿದನಿದೇಂ ಜಾಣ್ಮೆಯೊ[4] ೨೯

ಚೆಲ್ಲೆಗಣ್ಗಳ ಮುಗ್ಧೆ ಬೆರಲಡಿಯು ಪರಡು ಮಂ
[5]ಬಲ್ಲಧರ[5] ಪೊಳಕಾಲ್ ಜಘನ ಪೊರ್ಕುಳಿರ್ದೆಯು ಮೇ
ಣುಲ್ಲಸಿತ ಕುಚ ಕೌಂಕುಳೆಸೆವ ಕಂಠಂ ಕದಪು[6]ಗಳ ಮಧ್ಯ ಕಣ್ ಪಣೆಗಳಂ[6]
ಬಲ್ಲಿತಹ ಶಿರಮೆಂಬ ತಾಣಂಗಳೊಳ್ ಬಿಡದೆ
ಯಲ್ಲಲ್ಲಿ ಶಶಿಕಳೆಗಳಿಹವು ನಿನ್ನಯ ದೇಹ
ದಲ್ಲಿ[7]ವಂ[7] ತಿಳಿಯೆಂದು ಮುಗ್ಧೆಯೊಳ್ ಪ್ರೌಢನಾಯಕ ಪೇಳ್ದುದಂ ಕೇಳ್ದ[8]ರು[8] ೩೦

ಮತ್ತೆ ಕೇಳ್ ಮುಗ್ಧೆಯೆಡದಂಗುಟಮೊದಲಾದಿಯಂಹ
ಬಿತ್ತರದ ತಾಣಂಗಳೊಳ್ ಕಳೆಯು ದಿನದಿನಕೆ
[9]ಪತ್ತುಗುಂ ಬಲದ ಭಾಗಂ[9] ಶುಕ್ಲಪಕ್ಷದೊಳ್ ಕೃಷ್ಣಪಕ್ಷದೊಳು ನೋಡಿ
ನೆತ್ತಿಯಿಂದೊಂದೊಂದುದಿನಕಿಳಿಗು ಮದನ ಕಳೆ
ವೃತ್ತಕುಚೆ ಕೇಳೆಂದು [10]ಪ್ರೌಢ[10]ನಾಯಕನಾಗ
ಲತ್ಯಧಿಕ ಕಲೆಗಳಂ ಕೂರ್ತು ಬಿತ್ತರಿಸಿದಂ ಮುಗ್ಧನಾಯಕಿಗೆ ಮುದದಿಂ ೩೧

---

1 ನಾರಿಕೇಳ ಫಳಮೊಲೆಗಳುಳ್ಳಾರಮ್ಯ ವೃತ್ತಕುಚ ನುಣ್ಮೊಲೆ ಮಹಾರಜತಕುಂಭಮೊಲೆ (ಚ) 2 ಭೂರಿ ಧನದಾಸೆಯಿಂ ವೈಶಿಕಂಗಳ ತೋರ್ಪ (ಚ) 3 ವಸುನೇತ್ರೆ ಭ್ರಮರಾಳಿ (ಚ) 4 ರಾಧರೆ ಕಾಮುರ್ಗಿಲಮಯ ಧಮ್ಮಿಲ್ಲೆ ನೀರೇಜ ತನುಗಂಧಿ ಕುಂಭಕುಚೆ ಕೀರ ವಿಶ್ರುತವಾಣಿ ನೀಂ ಪೇಳೆನೆ ಚಾರು ದೀವ ಹಸನ ಚಂಪಕ ಘ್ರಾಣ ಪಿಕನಾದ ಭೂರಿತರಪ್ರಿಯಜಂರಷಾವಮಾರುತಸ್ವಾಸ ಕ್ಷೀರೇಜಮುಖಿ ಸಿಂಹಾಕ್ಷತ ಕೇಳೆನಲ್ ತಿರುಗಿದನಿದೇಂ ಚಿತ್ರಮೋ (ಚ) 5 ಸಲ್ಲಲಿತ (ಚ) 6 ರಂಗುದುಟಿಕಣ್ಪಣೆಗಳಂ (ಚ) 7 ದಂ (ಚ) 8 ಳು (ಚ) 9 ಪೊತ್ತುತ್ತಲಿಹವುದಕ್ಷಿಣಭಾಗವು (ಚ) 10 ವಿದಗ್ಧ (ಚ)

ತಲೆನವಿರ್ ಗುಡ್ಡಡಿಯುಂ ಕರಮಧರ ಚೆಂದಳಿ
ರ್ವೆಲರ್ಗಣ್ಣುಂ ತುರುಗಿದೆವೆ ತೋರವೊಲ್[1]ಗಳ್[1] ಜಘನ
ಲಲಿತಾಂಗ [2]ಕೊರುಗರ್ ತೆಳುಗಲ್ಲ[2] ಮಿಂಚುದೊಡೆ ಜಂಘೆಯು[3]ಲ್ಪಂ[3]ಯೊಡಲಿನ
ಸಲೆ ಸರಳ ತೋಳ್ವೆರಳ್ ಗಜಯಾನ ಸವಿವಾ[4]ತು
ಅ[4]ಲರ್ಗಂಪಿನ್ನೈಸರನ ಜಲ [5]ನಸುಮುನಿಸು ಕೋಪ
ವಳಿದ ರತಿಯುಂಟಾದವಳಿ ಲೋಕದೊಳಗೆ[5] ತಾಂ ಹರಿಣಿಯೆಂದುಸುರ್ದ [6]ಶಶಂ[6] ೩೨

ಸ್ಥೂಲಕಟಿ [7]ನುಣ್ಣ[7]ಸಿದ ನವಿ[8]ರು ಕೊಬ್ಬಿ[8]ದ ಕುಚಂ
ಮೇಲಾದ ವದನ ನಿಡುಪಣೆ ಕೊರಲ್ [9]ಪೊರವಾರ
ತೋಳು ಸುಳಿಯಂತೆ ತೋರುವ ನಾಭಿ ಬಡಬಾಸೆ ಸುರತೇಚ್ಛೆಯೆಲ್ಲವಕ್ಕುಂ
ತಾಳಿದೊಳ್ಮುಡಿ ನೀಳವಾದ ತೊಡೆ ತನು[9]ಮೃದುಳ
ಬಾಳಪುರುಷಪ್ರಿಯೆ ಪುರುಡಿನಿಂ ಮುನಿ[10]ವ[10] ಸ್ಮರ
ನಾಲಯ ನವಾಂಗುಲದ ಮಾನಮುಳ್ಳೆಪಳಶ್ವೆಯೆಂದೊರೆದ ವೃಷ ಮುದದೊಳು ೩೩

ಕೊರಲುಂ ಕಾಲ್ ಕೈ ಪಿರಿದು ತೋಳ್ತೊಡೆಯುನರದೋ[11]ರ್ಪು
ದಿರದೆ ಧೂಮಲಕೇಶ ಕುಟಿಲದಂತಂ ಸುದ
ರ್ದುರ ಗಲ್ಲ[11] ಮಿಶ್ರತನುಕಾಂತಿ ಜೋಲ್ದುಟಿ ಕ[12]ಣ್ಣು ಕುಳಿಯಾದೊಡಂ ಪಿಂಗಲಂ[12]
ಕರಿನಿನದ[13]ದಂತೆ ದನಿ ಕೂಟಕಲಸದ ಸ್ಮರಾ
ತುರೆಯಾದ ಮೇಣವಳ ಮದನೋದಕದ ಜಲಂ[13]
ದ್ವಿರದ ಮದಗಂಧ [14]ಚಿತ್ತಿನಿಗೆಯಾರಾರ್ಪರಳ್ ಮಾರಗೃಹವೆಂದ[14] ಹಯನು ೩೪

ಮಾತನಾಡಿಸೆ ನುಡಿಯದಾರೊಡನೆ ಮನದೊಳತಿ
ಪ್ರೀತಿಯುಳ್ಳವ ನುಡಿಸೆ ನಾಣ್ಚೆ ಮೈಮರಹುವಿಡಿ
ದಾ ತೆರದಿ ನೋಳ್ಪಳವ ನಗಿಸೆ ನಗುತಂ ಶಿರಮನೊರಗಿ ಕಡೆಗಣ್ಣೆ ನಿಂದೆ
[15]ಆತುರದಿಯಾ*[ಳೋಕಿಸಲ್]*ನಡೆದು ಸೋಕೆ ತನು[15]
ಭೀತಿಯಿಂ ಬೆಚ್ಚಿ ಬಿಡೆಯದಿ ಕೂಡೆ ಹಾವಭಾ
ವಾತಿಶಯ[16]ಮಂ ತೋರುವವಳು ದ್ವಾದಶವರ್ಷ[16]ಬಾಲೆಯೆನುತಂ ನಡೆದರು ೩೫

---

1 ಯುಂ (ಚ) 2 ಕೊರಲಲ್ಲಿ ಕಿವಿ ನೀಳ (ಚ) 3 ಲ್ಪಸಿ (ಚ) 4 ತಿ।ನ (ಚ) 5 ಮುಣಿಸು ಮಿತ ಮತ್ಸರಳಿದ ರತಿ ಇಚ್ಛೆನಾಣರು ಬೆರಲಿನವಳಿ (ಚ) 6 ಶಶನು (ಚ) 7 ನುಂಟಿ (ಚ) 8 ರಕೊಂಬಿ (ಚ) 9 ಕಂಕಳಂಗಳೊಳಸಿತು ನಳಿತೋಳ ಸುಳಿದ ಪೊರ್ಕುಳ ಬಟ್ಟದಿಗದಲ್ಪಸುರತೆಚ್ಛೆಯ ಲೋಲವಳ್ಮುಡಿ ನೀಲರಳ್ದ ಕಣ್ಣಾತನು (ಚ) 10 ವಿ (ಕಗ) 11 ರ್ಪಶಿರಕೇಶ ಹಸ್ವಮೇಚಕಕುಟಿಲ ದಶನತತಿ ಸರಿಸಲ್ಲ (ಚ) 12 ಣ್ಕಳಿ ಪಿಂಗಳಾಭದಿಂದೆ (ಚ) 13 ದೊಡ್ಡೊಡಲ ಕೂಟಕಲಸದೆ ಸದಾ ತುರಲಂಬನಾ ಸಹನೆಗೆಲ್ಲಬಲತನುಜಲಂ (ಚ) 14 ದೀರಾರ್ಪೆರಲ್ ನಾಣವಳಭಿಕೆಯೆಂದುಸುರ್ದ (ಚ) 15 ಯಾತುರದೆಯಾಲೋಕಿಸಲ್ ನಡೆವವೊಲ್ ಸೋಕೆತನು (ಚ) 16 ಮಿಲ್ಲ ಈರಾರ್ವರುಷದಿವ ಳೀಗ (ಚ) * ಲೋಂ (ಕಗ)

ಅಲ್ಲೊರ್ವ ನಾಯಕಂ ಬಾಲವೆಣ್ಣಿನ ಲಜ್ಜೆ
ಮೆಲ್ಲೆರ್ದೆಯಳಹ ಕೆಳದಿಯಿಂದ ತಿಳುಪುತ ನೂತ್ನ
ಸಲ್ಲಲಿತ[1]ವಹ[1] ಪರಿಮಳದ್ರವ್ಯ ವಸನ ವಸಂರತ್ನ ವಂಕ್ತಾಳಿಮಯದ
[2]ಒಳ್ಳೆಯಾ[2]ಭರಣತತಿಯಿತ್ತು ಮತ್ತಂತೊರ್ವ
ಉಲ್ಲಾಸಮುಳ್ಳ ಸೊಬಗಿಯು ಕಂಡು ಮರೆದಿವಳ
ಖುಲ್ಲತನದಿಂದ ತಿರ್ದುವ ಛಂದಮಂ ಕಂಡು ನಗುತ ನಡೆದರ್ ಮುಂದಕೆ ೩೬

ಕುರುಳ ನೇವರಿಸು[3]ವೊಲ್ ನೆವದಿ[3] ಮುಡಿಯಂ ಪಿಡಿದು
ಭರದಿ ಗಲ್ಲವ ಮುದ್ದಿಪಂತಧರಮಂ ಕರ್ಚು
ತುರುಹಾರಮಂ ನೋಳ್ಪ ವ್ಯಾಜದಿಂ ಕಂಚು[4]ಕವ ತೊಲಗಿಸಿ ತೊಡರ್ದ[4] ನಿರಿಯಂ
ಭರದೆ ತೊಲಗಿಸಿ ಲಜ್ಜೆ ತಿಣ್ಣಗೆಡಿಸುತಮವನ
ನರೆ ಕಲೆಯ ತೋರಿಯಾಲಿಂಗಿಸುತ ಬಾಲೆಯಂ
ತರವರಿದು ಚದುರನೊಂದುವ ತೆರಂಗುಡು ನಡೆದರ್ ಮುಂದಕಲ್ಲಿಂದಲು ೩೭

ಮತ್ತೊರ್ವ ವಿಟ ವಸ್ತ್ರ ಗಂಧ ಪೂವಿನ ಮಾಲೆ
ಬಿತ್ತರದ ಕಟಕ ಕಂಠದ ಸರಂ ಪದಕಮಣಿ
ಕೆತ್ತಿಸಿದ ಭೂಷಣಗಳಿಂದಲಂಕರಿಸಿ ಕತ್ತುರಿತಿಲಕವಿಟ್ಟು ಪಣೆಗೆ
ಚಿತ್ತಜನ ಪಾಂಗಿನಿಂ ಸೇರಿಯಭಿಮಾನಮಂ
ಪೊತ್ತರಿಸಿಯಾಭರಣ ವಸನ ಪೊಂಗಳನೀವು
ತತ್ತ್ಯಧಿಕ ನೇಹದಿಂ ಮುಗ್ಧೆಯಂ ವೊ[5]ಲಿ[5]ಸಿ ನೆರೆವುದ ಕಂಡು ನಡೆದರತ್ತ ೩೮

ಪರಮಂಸಿಂಗರ[6]ಕಾ[6]ತಿ ಯಿನಿವಾತಿನಬಲೆ ಬಂ
ಧುರರೂಪವತಿ ಯೌವನಾಂಗಿ ಸುರಪದ ಕಲಾ
ಗರುವೆ ಪ್ರವೀಣೆ ಗಾನಪ್ರಿಯೇ ಬೆಡಗಿನ ವಿಡಾಯೆ ಮೋಡಾಮೋಡಿಯ
ಇರವೆ ಸದ್ಗುಣನಿಪುಣೆ ಸರಸರಸಸಂಪನ್ನೆ
ಯರವಿಂದವದನೆ ಕಂ[7]ದೋಪಮಾ[7]ರದನೆ ಮಂ
ದಿರದ ಮುಂಬಾಗಿಲೊಳ್ ನಿಂದಿರಲ್ಕಿವಳೆ ಕನ್ನಡಜಾ[8]ಣೆ[8]ಯೆನುತಿರ್ದರು ೩೯

---

1 ಪೂ (ಚ) 2 ಬಲ್ಲಿತಾದಾ (ಚ) 3 ವ ನೆವದಿಂದ (ಕಗ) 4 ಕಿಯ ಪೈಸರಿಸಿ ಸಡಿಲ್ದ (ಚ)
5 ರಿ (ಕ) 6 ಕಾಂ (ಕಗ) 7 ದದಕಳಿಕೆ (ಚ) 8 ಡೆ (ಚ)

ವಿರಹ[1]ವೆಂಬ ವಸಂತಸಮಯದೊಳ್ ಬಳಲ್ದ ವಿಟ
ವರ ನಿನ್ನ ತನು[1]ವನವನಾಶ್ರೈಸಿ ಶೃಂಗಾರ
[2]ಸರಸಿಯೊಳಗಾಳಿ[2] ತಳಿರ್ವಾಸಿನೊಳ್ [3]ಮಲಗಿ[3] ಶುಭ್ರೇಕ್ಷಣ [4]ಶ್ರೀ[4]ಖಂಡದಿಂ
ದರರೆ ತಣ್ಪಾಂತು ಬಿ[5]ಣ್ಪಾದ ತೊಂಡೆಯವಣ್ಣೆ
ನುಣ್[5]ರಸವನೀಂಟಿಯುಚ್ಛ್ವಾಸ ಮಲಯಾನಿಲದಿ
ಸ್ಮರ[6]ನ ಪಾಪಂಗಳೆದನೆಂದೊರ್ವಯಂಬ್ಬೆ[6] ಕೊಂಡಾಡೆ ನಗುತಂ ನಡೆದರು ೪೦

ಅರವಿಂದವದನೆ ತಿಲಪುಷ್ಪನಾಸಿಕೆ ಶುಭಾ
ಧರೆ ಪದ್ಮಗಂಧಿನಿ ಸುವರ್ಣಾಂಗಿ [7]ಹಂಸಗತಿ[7]
ಮರಿದುಂಬಿಗುರುಳಿನ ಕುರಂಗಾಕ್ಷಿ ಪಿಕಗಾನೆ ಬಟ್ಟವೊಲೆ ಬಡನಡುವಿನ
ನರವಮಾನ್ಯೆ ಕಂಬುಕಂಧರೆ ಘನನಿತಂಬೆ ತಾಂ
ಪರಿಮಳದ ಕುಸುಮ ಧವಳಾಂಬರಮನುಟ್ಟು ಸಿಂ
ಗರಿಸಿ ನಿಂದಿರೆ ಸೆಜ್ಜೆವನೆಯಲ್ಲಿ ಕಂಡು ಪದ್ಮಿನಿಯೆನುತ್ತಡಿಯಿಟ್ಟರು ೪೧

ಶಶಿಮೊಗದ [8]ಜೇನಕಂಪೆಸೆವತನು[8]ಜಲದ ಚಿ
ಲ್ವಸಿಯೊಡಲ ಬಿಸ[9]ಜದಂದದಿ ತೋರ್ಪ ಕಣ್ಗೆ ಕಾ
ಣಿಸುವಂಗಜನ ಕಲೆಯ[9] ಹಂಸಸ್ವನದ ಕುಂಭಕುಚ ಕಂಬು[10]ಕಂಠಂಗಳ[10]
ಕುಸುಮಶರಯುದ್ಧ[11]ಸನ್ನದ್ಧವಾದಾತ್ಮಮುಖ
ರಸದ ಗಜಗತಿ ಘನಾಧರಬಿಂಬ[11] ಚಿತ್ರತರ
ವಸನ[12]ಕುಟಿಲಾಳಕದ ಸೊಬಗಿ[12]ನಿಂದಿರಲಿವಳ್ ಚಿತ್ತಿನಿಯೆನುತ್ತಿರ್ದರು ೪೨

•ಶಂಕದ•ಧ್ವನಿಯ ಕುಡಿತೆಗಂಗಳ ತಳಿರ್ದುಟಿಯ
ಪಂಕಜ[13]ದ ಮುಕುಳದಂದದ ಮೊಲೆಯ ನಿಡಿದೋಳಿ
ನಂಕಿತದ ಲಜ್ಜೆವನೆಯಾದ ಚಿತ್ತದ ಪುರುಷನೊಳಗಣೇಷತ್ಪ್ರತೀತಿಯ[13]
ಬಿಂಕದಿಂ ಕೂಡಿದಂತಿಪ್ಪ ಪುರ್ಬಿನ ಸಗಾ
ತಂಕರತಿಯಿಂ ದಂತನಖ[14]ದ ಗಾಯದ ಸಹಿಸೆ
ಶಂಕಿಸುವ ರಕ್ತವಸನದ ನೀರೆ ಶಂಖಿನಿಯೆನುತ ನೋಡಿ ನಡೆತಂದರು[14] ೪೩

---

1 ಸುರಭಿ ಸಮಯದೊಳ್ ಬಳಲ್ದ ವಿಟರ್ ನಿನ್ನುರುದೇಹ (ಚ) 2 ರಸ ಸರಸಿಯೊಳಾಳ್ದು (ಚ) 3 ವರಗಿ (ಚ) 4 ಸುಶ್ರೀ (ಚ) 5 ಣ್ಪಾಂತತುಳ ದಾಡಿಮದ ಬೀಜಂಗಳುರೆ (ಚ) 6 ತಾಪಸೌಖ್ಯ ಪಡೆವರೆಂದಟ್ಟೆ (ಚ) 7 ಅಂಚೆನಡೆ (ಚ) 8 ಮೇಷಗಂಧಿ ಶರೀರ (ಕಗ) 9 ಜಾಕ್ಷಿ ಪಸರಿಸಿದ ಜಘನ ಸಲೆಪೊಸರುತಿರ್ಪಂಗಜವಾಸ (ಚ) 10 ಗ್ರೀವೆ (ಚ) 11 ಸಂಪೂರೆ ನವಗಾನ । ರಸರಸಿಕೆ ಸ್ಥೂಲಾಧರೆ ಗಜಗಮನೆ (ಚ) 12 ಕೊಂಕಿದ ಕುರುಳ್ ನೀರೆ (ಚ) •ಸಂಕೀರ್ಣ (ಕ) 13 ಸುಮುಕುಳಸ್ತನಿ ನಿಡಿದೊಡಲ ರೋಮದಿಂದಕಿತದ ಲಜ್ಜೆವನೆ ನಿರಿಗುರುಳ ಈಶತ್ಕಾಮನಿಯಾ ಪುರುಷಪ್ರೀತಿಯ (ಚ) 14 ಕ್ಷತಂಗಳಿನೆಸೆವ। ಶಂಕೆಯಿಲ್ಲದ ರಕ್ತವಸನೆ ಹಿಮಗಂಧಿಯಂ ಶಂಕಿನಿಯೆನುತ ನಡೆಯೆ (ಚ)

ಮದನಾಂಬು ಮತ್ತಕರಿಮದಗಂಧಿ ಕಿರಿದಿವಳ
ಮದನಮಂದಿರ [1]ಕೊರಲ್ಲುಗ್ಗಡ್ಡ ಕಣ್ಸಣ್ಣ[1] ಕೊ
ಬ್ಬಿದ ಶರೀರಂ [2]ಕೆಂಚುಕೂದಲುನ್ನತಮಾಗದ ಸ್ತನಂ ಸ್ಥೂಲಮಂಧ್ಯ[2]
[3]ಗದುಗದದ ನುಡಿಯು ಬಡವಾದ ದನಿನಿಷ್ಠುರಂ
ಕದನಮಂಗಜನ ದರ್ದುರವಾದ ಸಮ್ಮಸಂ
ಗದ ಸೊಗಂ ಪುರುಷನೊಂದಿರಲಿವಳ್[3] ಹಸ್ತಿನಿಯೆನುತ್ತ ನಡೆದರ್ ಮುಂದಕೆ ೪೪

ರಮಣಿ ನಿನ್ನಯ ನೋಟಮೆನ್ನ ಹೃದಯದ ಬೇಟ
ಸುಮ[4]ದಂಥ[4] ಸುಯಲ್ಗಂಪು ಸ್ಮರತಾಪ ಹರದಿಂಪು
ವಿಮಲಮುಖ ಬಡದೇಹ ನಿಲ್ಲದೆಂಬತಿಚಿಂತೆವುಣಲೀಸದ ಮುಮುಕಾಂತ
ಭ್ರಮೆ ಬಿಡದು ಸವಿನುಡಿಯ ಮಚ್ಚು ವಚಿಸುವ ಹುಚ್ಚು
ಕಮನೀಯಪರವಶದ ಭೋಗ ಮರಣವಿಯೋಗ
ವಮರಿ[5]ತ್ತೆನಲ್ಕೋಪನೊಳಗೊರ್ವಳದರಿಂ[5] ದಶಾವಸ್ಥೆಯಂ [6]ಪಡೆದರು[6] ೪೫

ಪರಿಮಳಿಪ ಮಧುರಸಂ ವಿಧುಶಿಲಾಚಷಕದೊ
ಳ್ವಿರದಿರ್ವರೀಂಟುತತಿಮೋಹದಿಂದೋರೋರ್ವ
ರಿರದೆ ಪಾನವ ಮಾಡಿಸುತ್ತಾಗ ಬಿಡದೊಂದೆ ವೇಳೆ ಕೊಳಬೇಹುದೆನುತ
ಭರದಿ ಕೊಂಬುತ್ತಿರಲು ಮುಖಬಿಂಬ ಪ್ರತಿಫಲಿಸೆ
ತರುಣಿಯಧರ[7]ವಿದೆಂದವಂ ತದೋಷ್ಠಮಿದೆಂದು
ತರುಣಿ ತಾಂ[7] ಪೀರುತ್ತ ಮರೆದು ಪಾತ್ರೆಯ ಬಿಡಲ್ಕೊಡೆಯೆ ನಗುತಂ ನಡೆದರು ೪೬

ಕೆಂದಾವರೆಯ ಪೋಲುವಂದದ ಮೊಗದ ಬಾಲೆ
ಯೈಂದವ ಶಿಲಾಪಾತ್ರೆಯೊಳ್ ಮಧುವನೀಂಟುತಿರ
ಲಂದು ಮಾರ್ಪೊಳೆಯೆಯುದರೊಳ್ಮೊಗಂ ರವಿ[8]ಯಮೇನಿಲ್ಲಿ ತಾಂ ಬಂದು[8] ಪ್ರಭೆಯಂ
ಸಂಧಿಸಿದ ನೋಡಲಾರದೆ ಕಣ್ಣ ಮುಚ್ಚಿದಳೊ
ಸುಂದರದ ಕುವಲಯೇಕ್ಷಣೆಯಾಗೆ [9]ಮುಂಚಿದಳೊ[9]
ಬಂಧುರದ ಲಹರಿಯಿಂ[10]ದೆನುತ ಸಂದೇಹಿಸುತ ನಡೆದರಾ ಬೀದಿಗಳಲಿ[10] ೪೭

---

1 ಬದಿತೋರ ಪೊರವಾರ (ಚ) 2 ಗೆಂಗೂದಲುಬ್ಬಿದ ಮಧ್ಯದಿಂ (ಚ) 3 ಧನಧರ ಸ್ಥೂಲದ ಹೀನ ಸ್ವರಗಾನನಿಬುದ್ಧಿ ಮದನರತಿ ನಿಷ್ಠೂರದ ಬಹುಮಾಡಿಯ ಜೇಷ್ಟೆಯುಳ್ಳುದ ನೋಡಿಯೊತ್ತೊ ಗೊಡುತಿರಲಿವಳ್ (ಚ) 4 ತುಲ್ಯ (ಚ) 5 ಪ್ರಿಯನ ನುತಿಸುವೊಲು (ಚ) 6 ವೇಳೆ ನಗುತಂ ನಡೆದರು (ಚ) 7 ವನೆಂದವನಧರ ತರುಣಿಯೆಂ। ದುರವಣಿಸಿ (ಚ) 8 ಯುದಯವಾದನೆನುತವನ (ಚ) 9 ಮುಗಿದವೋ (ಚ) 10 ಮುಚ್ಚಿದಳೆಯೆನೆ ನೇತ್ರಸಂಕೋಚಿ ಕಂಗೆಸೆದಳು (ಚ)

ಮತ್ತರೋಲಂಬ ಪದ್ಮದ ಪರಾಗಕ್ಕೆಳಸಿ
ಕತ್ತಲೆಯು ಸಮಯವರಿಯದೆ ಪೊಕ್ಕು ಪಲುಬುವೊಲ್
ಬಿತ್ತರದ ಬಲೆಗಳೊಳ್ ವಾಜಿಯೊಳ್ ಮೃಗರಾಜಿ ದ್ವಿಜಕುಲಂ ಸಿಕ್ಕುವಂತೆ
ಕುತ್ತಗೊಳಿಸುವ ಸೂಳೆಗೇರಿಯಂ ಪೊಕ್ಕು ವಿಟ
ರತ್ತಿತ್ತವರಿಯದೆ ಮಹಾಮೋಹದಿಂದ ಬಳ
ಲುತ್ತ ಚಿತ್ತಜನ ಬಾಣದಿ ನೊಂದು [1]ಸೊಕ್ಕುತಿಹ[1]ರೇನೆಂಬೆ [2]ಸಂಭ್ರಮ[2]ವನು ೪೮

ಇಂತೊಪ್ಪುತಿಹ ಸೂಳೆಗೇರಿಯ ವಿಲಾಸವ ಸ
ಮಂತು ನವವೀಣಾದಿ ನಿನದಗಾನದ ರಸಂ
ಕಂತುಕೇಳಿಯ ಸೊಗಸ ಕಲೆನೆಲೆಯ ಜಾಣ್ಮೆಗಳ ಪ್ರೀತಿಗಳ ವಿರಹಂಗಳಂ
ಸಂತಸದಿ ನಾಗರಿಕಮುಖ್ಯಪುರುಷರು ಪೇಳ
ಲಂತು ಕೇಳುತ ನೋಡುತಾ ನರೇಂದ್ರಂ ತಿರುಗ
ಲಂತವುರಕಾಗ ಚಂದ್ರನ ಮಹಾಕಳೆ ಬೀತುದೇನೆಂಬೆನಾಶ್ಚರ್ಯಮಂ ೪೯

ವರ ಕುಕ್ಕುಟಂಗಳಲ್ಲಲ್ಲಿ ಕುಕ್ಕೊಯೆನು
ತ್ತೊರಲಿದವು ದಿನರಾಜನಗ್ರದೊಳ್ ಧ್ವನಿದೋರ್ಪ
ವರೆ ಸನ್ನೆಗಹಳೆಯಂ [3]ತವೆ[3] ಕೇಳುತಾಗ ಭಯದಿಂದ ಭೂಕಾಂತರ್ಬೆದೆ
ಭರದಿಂದಲೆದ್ದು ಸಿಂದರ್ ಭೇರಿ ತಂಬಟಂ
ಪರಮ ನಿಸ್ಸಾಳ ಡಿಂಡಿಮ ಮಡ್ಡುವಾದ್ಯತತಿ
ಯಿರದೆಯಾರ್ಭಡಿಸೆ ರವ ಮುಸುಕಲೆಣ್ದೆಸೆಯೊಳಾ ವೇಳೆಯೊಳಗತಿಮುದದೊಳು ೫೦

ತುಂಬಿಗಳ್ ಸಂಭ್ರಮಿಸಿ ಝೇಂಕರಿಸಿದವು ನಿಜ
ತ್ರ್ಯಂಬ[4]ಕನ ಭಕ್ತರಾ[4] ಲಿಂಗಪೂಜೆಯೊಳಿರ್ದ
ರಂಬುಜಾಳಿಯು ವಸಗೆದಳೆದವಾ ಜಕ್ಕವಕ್ಕಿಗಳಾಳ್ದವಾ ರತಿಯೊಳು
ಅಂಬುಜಾಂಬಕಜಾತ ಯುದ್ಧಮೂರ್ಛಿತ[5]ಜನಕ
ದಂಬಮೆಚ್ಚತ್ತುದಸಿತಾಸಿತೋತ್ಪಲದ[5] ನಿಕು
ರುಂಬ ಚಿಂತೆಯನೆಸಗೆ ಗಾಯಕರು ಗಾನರಸವೊಸರೆ ಪಾಡುತ್ತಿರ್ದರು ೫೧

---

1 ಮೃತವಪ್ಪ (ಚ) 2 ಅದ್ಭುತ (ಚ) 3 ತದ (ಚ) 4 ಕಾಪ್ಪನ ಭಕ್ತ (ಚ) 5 ಕದಂಬಜನ ಎಳ್ಚತ್ತರಾಗ ಕೈರವ (ಚ)?

ವಿರಹದುರಿಯಿಂದ ಸತಿ ನಿನ್ನನುಳಿದಿರುಳಿನೊಳ
ಗಿರಲೊಂದುಲಕ್ಷಯೋಜನ ಪೋಗಿ ನೀರಿನೊಳ್
[1]ಪರಪಿದೆಯಲಾ ಪದ್ಮಿನಿಯು ಸಿರಿಯನೆಂದು ನಾನಾದಿಕ್ಕುಗಳ ತೊಳಲುತ[1]
ಮರುಗುವಾ ಚಕ್ರಮಿಥುನದ ಬಾಳ್ವೆಯಂತಾಯಿ
ತರರೆ ಕಿರಣಂಗಳೆಂಬ [2]ಚರರ ಕಳುಹಿ[2] ಪೂರ್ವ
ಗಿರಿಯಡರ್ದು ನೋಳ್ಪವೋಲಿನನುದಿಸಿದಂ ಧರಾತಳವೆಲ್ಲ ಝಗಝಗಿಸಲು ೫೨

•ಇದು ಚತುರ್ಯುಗದೊಳಾಚಾರ್ಯ ರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವರಿಷ್ಟಾರ್ಥಮಪ್ಪುದು ಸಪ್ತಮ ಸಂಧಿ ಸುಜ್ಞಾನ ಬಂಧಿ ೫೩

---

1 ಶರಿರವೆಲ್ಲಾಳ್ದು ಮೊಗಮುಗಿದು ನಿಂದಿಹಳೆಂದನಿಲಸಖನೆಯ್ದಿ ಪೇಳೆ (ಚ) 2 ಬಲವ ಊಡುತ (ಚ)

• ಈ ೫೩ ನೆಯ ಪದ್ಯ (ಕಗ) ಪ್ರತಿಗಳಲ್ಲಿಲ್ಲ.

# ಎಂಟನೆಯ ಸಂಧಿ

ಸೂಚನೆ :•

ರಾಜಶೇಖರನಾಜ್ಞೆಯಿಂದ ದ್ವಿಜರಾಜ ಗುರು
ಮೂಜಗಂ ಪರಿವಂತೆ ಕೊಲ್ಲಿಪಾಕಿಯ ಲಿಂಗ
ತೇಜದೊಡಲೊಳ್ ಜನಿಸಿ ಮೆರೆವುತಿರ್ದಂ ಮಹಿಯೊಳೇನೆಂಬೆನಾಶ್ಚರ್ಯಮಂ

ರಘುಪಕೇತುಕು[1]ಧರ ಶತಕೋಟಿ[1]ಸ್ವರೂಪವಾ
ರಿಶಯನ ಸುನಯನಕೀಲಿತಪಾದ ಪವನಸಖ
ಶಿಶಿ[2]ರಾಂಶು ತಪನಾಕ್ಷ[2] ಗೋನಾಥಜಾಮಾತ ಮಾಧವ[3]ರುಮಾ ಕಲತ್ರ[3]
ಲಸಿತ[4]ಶುದ್ಧ ಸ್ಫಟಿಕ ಸಂಕಾಶದೇಹಸಂ
ಗ್ರಸಿತ ಕಾಲಾನಲ ಪ್ರತಿಭಟ•ದಯಾ•ಪಾರ್ಥಿ
ವಿಷಜಾಲನಹ[4] ಚೆನ್ನಮಲ್ಲಿಕಾರ್ಜುನ ಗುರುವ[5]ರೇಣ್ಯನಂ ನುತಿಪೆ[5]ನೊಲವಿಂ ೧

ಗುರು ಸೋಮನಾ[6]ಥನ[6] ಕೊಟಾರದೊಳ್ ಬಂದು ನಿಲೆ
ವರಪೂಜೆಯಿಂದ ಶಿವರಾತ್ರಿಯಂ ತೀರ್ಚಿ [7]ತಾಂ[7]
ಮರಳಿ ಲೆಕ್ಕದ ಸಂಪುಟಂಗಳೊಳ್ ಮಂತ್ರಮಂ ಲಿಖಿಸೆ ರಾಯಗೆ ಪೇಳಲು
ಮುರಿದೇಳುತಾರ್ಭಡಿಸಿ ಶಿರವ ಪೊಡೆಯೆಂದು ಬಲ
ಭರದಿ ಬರೆಯುವರ ಸಂಹರಿಸುತ್ತ ಕುಣಪಗಳ್
ಮೆರೆಯೆಯೆರಗಿದ ಧರಣಿಪತಿಯ ಸಲಹಿದ ಬಾಚಿದೇವಗಳ್ಗನೆರಗುವೆಂ ೨

ಈ ತೆರದ ಬಹುವಿಧದ ಸೊಬಗಿನಿಂ ರಾಜಿಸುವ
ಸಾತಿಶಯಕ್ಷೇತ್ರವೆಂನಿಸುವ ಕೊಲ್ಲಿಪಾಕಿಪುರ
ಖ್ಯಾತಿವೆತ್ತಿರಲದರ ಮಧ್ಯದೊಳ್ ಸೋಮೇಶನಾಲಯಂ ಕಣ್ಗೊಳಿಪುದು
ಶಾತಕುಂ[8]ಭ[8]ಸ್ಥೂಲ ಕಲಶಮಂಬರಮುಟ್ಟೆ
ಲಾತುರದಿ ಬರ್ಪೆಲರ್ವಟ್ಟೆಗರ್ ನೋಡಲತಿ
ನೂತನದ ಕನಕಾದ್ರಿ ಪಾಂಗಿನಿಂ ರಘುಗರಘುಗಿಸಿತೇನೆಂಬೆನದ್ಭುತವನು ೩

---

1 ಕಾವನ ಕಾಲ । ಕುಶಶಯ (ಚ) 2 ವಂಶುಮಾಲಿಗೋ (ಚ) 3 ಉಮಾಕಲತ್ರ (ಗ) ಕಳತ್ರಮಿತ್ರ(ಚ) 4 ಸಂಕಾಶತನು ಮನು ದೀಪ್ತಿಮಯದೇವ । ವಸುರೆ ತನುತಭೂತ ಹತರೂಪ ಪ್ರತಿತಭವ । ಗ್ರಸನ ಮುನಿಜನ ವಂದ್ಯನಹ (ಚ) •ವಯೋ (ಕ) 5 ನುತಿಪೆ (ಚ) 6 ಥಂ (ಚ) 7 ಮುದ (ಚ) 8 ಭದ
• ರೇಪಹೋತ್ಪತ್ತಿ (ಗ)

ಧಗಧಗಿಪ ಘೃತಮಯದ ದೀಪದಿಂ ಧೂಪದಿಂ
ಮಘಮಘಿಪ ಶ್ರೀಖಂಡಪಿಂಡದಿಂ [1]ಖಂಡದಿಂ[1]
ಬಗೆಬಗೆಯ [2]ಪುಷ್ಪದಳಜಾಲದಿಂ ಶೀಲದಿಂ[2] ಮಾಲೆಯಿಂ ರಂಜಿಸಿರ್ಪ
ಸೊಗಸಿರುವ ಘಂಟಾದಿನಿನದದಿಂ ಬಿನದದಿಂ
ದೊಗುವಿಂಗುವ ಯೇಕಾಂತಕೇಳಿಕೆಯ ಹೇಳಿಕೆಯೊ
ಳಗಜಾಧಿಪತಿಯಪ್ಪ ಸೋಮೇಶನಾಲಯದ ಸಂಪದವನೇವೇಳ್ವೆನು ೬

ವರಮಕುಟವರ್ಧನರ ತರತರದ ತಂಡದಿಂ
ಪರಿಪರಿಯ [3]ಚಿನ್ನದಂದಣದ[3] ಗೊಂದಣಗಳಿಂ
ಕರಿತುರಗರಥ ಪದಾತಿಯ ಸಾಲ್ಗಳಿಂ ನಿಂದು ಸೇವಿಪ ನೃಪಾಲರಿಂದ
ಭರತಪ್ರವೀಣ ನೃತ್ಯದಿ ಪೊಗಳ್ವ ಭಟ್ಟರಿಂ
ದರಿದೆನಿಪ ವೇದಘೋಷಣಪುರಾಣಸುಗೋಷ್ಠಿ
ನೆರವಿಯಿಂ ಸುರರ ಗೈರಿಕ ಭೂಧರಾವಾಸನೋಲಗಂ ಕಣ್ಗೊಳಿ[4]ಪುದು[4] ೭

ಸಭೆ ಮಹೋತ್ಸಹದಿಂದ ನಿಂದೋಲಗಂಗೊಟ್ಟು
ಉಭಯಕರಕಂಜಮುಕುಳಿತರಾಗಿ [5]ಚಿರ[5]ದೃಷ್ಟಿ
ಹಬೆ ಪೊಯ್ಯದೊಲ್ ಚಿತ್ರಬೊಂಬೆಗಳ ತೆರದಿ ಶಿವಲಿಂಗಮಂ ನೋಳ್ಪಾಗಲು
ಅಭವ [6]ಆ[6]ರಾಧ್ಯಚಕ್ರೇಶ್ವರಂ ಮುನಿನಮಿತ
ವಿಬುಧಸೇವಿತ ಪಾದಪದ್ಮರವಿಸಂಕಾಶ
ಮಭಯವರಕರಯುಕ್ತ ಸಿದ್ಧೇಂದ್ರಯತಿಯ ಪ್ರಭೆ ತೋರಿತಾ ಲಿಂಗದಲ್ಲಿ ೮

•ನೋಡಿರ್ಪ ಸಭೆಯಜನ[7]ರದ್ಭುತಂ[7] ಲಿಂಗದೊಳ್
ಗಾಡಿಯಿಂ ತೋರ್ಪ ಪರಿ[8]ಯನು[8]ಮಾಧವನೋ ಶಶಿ
ಚೂಡನೋ ತಾಂಡವಾಡಂಬರನೊ ವೃಷ[9]ಭರಥ[9]ನೊ ಭಿಕ್ಷಾಟ[10]ಣನೊ[10] ಭಾವಿಸೆ
ಜೋಡಗಲದಿರ್ಪರ್ಧನಾರೀಶ್ವರಂ ತಾನು
ರೂಢಿವೆತ್ತಿಹ ದಕ್ಷಿಣಾಮೂರ್ತಿಯೆಂದು ನಲಿ
ದಾಡುತಿರ್ದರ್ ಸೂರಿಜನರು ಬಗೆಬಗೆಯಿಂದ ಪಾಡುತಿರ್ದರ್ ಮುಂದದೊಳು ೯

---

1 ಇಂಡೆಯಿಂ (ಚ) 2 ಪತ್ರಪೂಜಾಲದಿಂ ಶಾಲದಿಂ (ಚ) 3 ಸ್ವರ್ಣದಂದಣ (ಚ) 4 ಸಿತು (ಚ)
5 ಸ್ಥಿರ (ಚ) 6 ರಾ (ಚ) 7 ವದ್ಬುತವ (ಚ) 8 ಜಂ ಉ (ಚ) 9 ಭವಹ (ಚ) 10 ನಂ (ಚ)
• ೯ ನೆಯ ಪದ್ಯದಿಂದ ೨೩ ನೆಯ ಪದ್ಯದ ವರೆಗೆ ಕಪ್ರತಿಯಲ್ಲಿಲ್ಲ.

ಅದೆ ಅದೆ ಲಲಾಟಾಕ್ಷಿವಹ್ನಿ ಪ್ರಜ್ವಲಿಸುತಿದೆ
ಅದೆ ವಿದ್ರು[1]ಮದ[1] ಲತೆಯ ಪೋಲ್ವ ಕೆಂಜೆಡೆಯ [2]ಬಲು[2]
ಹೊದರಿವೆ ತ್ರಿಪುಂಡ್ರ ಥಳಥಳಿಸುತಿದೆ ಫಾಲದೊಳ್ ರುದ್ರಾಕ್ಷಮಾಲೆ[3]ಗಳಿವ[3]
ಅದೆ ಶಾಂತಮಲ್ಲಿಕಾರ್ಜುನಲಿಂಗಮಿಹ ಸೆಜ್ಜೆ
ಯದೆ ನೋಡಿ ನಗೆವೊಗದ ಚೆಲ್ವಿನಂದದ ಭಾವ
ಗದಿತ ಜಗದಾರಾಧ್ಯ ರೇವಣಾಸಿದ್ಧಯತಿಯಂ ನೋಡಿ ಪರಮಮುದದಿಂ ೮

ನೀಲಕುಪ್ಪಸಕಂಥೆ ಇಂದ್ರನೀಲದ ಮಣಿಯ
[4]ಮೇಲಾದ ಕಾಂತಿಯಂ[4] ಪಳಿವುತಿದೆಯಂಗದೊಳ್
ಮಾಲೆಯಾ ಮೊಗ್ಗೆಯಂದದ ದಶನದೀಧಿತಿಯಂ ಪಸರಿಸಿದೆ ಹೇಮಮಯದ
ಲೀಲೆಯಿಂ ಧರಿಸಿ[5]ರ್ಪ[5] ಕೌಪೀನ ಪೊಳೆವುತಿದೆ
ಸ್ಥೂಲಕುಂಡಲವಜ್ರ ಯೋಗದಂಡಂ ಕರದಿ
ಬಾಲಚಂದಿರಧರನ ಮೂರ್ತಿ ರೇವಣಸಿದ್ಧ ತೋರಿದಂ ಜನದ ಕಣ್ಗೆ ೯

ಮಾನಸಸರೋವರದೊಳಾ ರಾಜಹಂಸ ಸಂ
ಭಾನುಮಂಡಲದಿಂದ ಕಿರಣವೊಗೆವಂತೆ ಸು
ಜ್ಞಾನ ಸಜ್ಜೀವನೊಳಗಮೃತದೊಳ್ ರುಚಿಯು ಸಂತಾನದೊಳ್ ಕುಸುಮಚಯವು
[6]ಮಾನಸದ್ಭಕ್ತಿಯಿಂ ಧ್ಯಾನ ಸು[6]ಜ್ಞಾನದಿಂ
ದಾ ನವ್ಯಕಾಂತಿರತ್ನದಿ ಹೇಮ[7]ದಲಿ[7] ಬಣ್ಣ
ತಾನೊಗೆದು ತೋರ್ಪಂತೆ ಲಿಂಗದಿಂದುದ್ಭವಿಸಿದಂ ಸಿದ್ಧಯತಿ[8]ರಾಜ[8]ನು ೧೦

ಆಸಮಯದೊಳಗಖಿಳಪುಷ್ಪದತ್ತರ್ ಬಿಡದೆ
ಭಾಸುರದ ಮಂದಾರಕುಸುಮವರ್ಷಂ ಕರೆಯ
ಲಾ ಸುರಸ್ತೋಮ ಜಯಜಯ[9]ಶಬ್ದ[9]ದಿಂದುಲಿಯೆ ನಲಿಯೆ ಮುನಿಸಂದೋಹವು
ಲೇಸಿನಿಂ ಹಾಹಾದಿ ಗಂಧರ್ವತತಿ ಗಾನ
ರಾಸಿಗೈಸಲ್ ಸಿದ್ಧವಿದ್ಯಾಧರಸ್ತೋಮ
ಘೋಷಿಸುವ ದುಂದುಭಿಯ ವಾದ್ಯಗಳ್ ಘುಮ್ಮಿಡಲ್ ಬಹಳಭುವನಗಳು ಕೇಳೆ ೧೧

---

1 ಮಾ (ಚ) 2 ಷ್ಟ (ಚ) 3 ಕೆಯಿವೆ (ಚ) 4 ಯಾಲಲಿತಕಾಂತಿಯಂ (ಚ) 5 ರ್ದ (ಚ) 6 ಮಾನಸಸ ಸದ್ಭಕ್ತಿ ಸಂಧ್ಯಾನ ವಿ (ಗ) ? 7 ದಿಂ (ಚ) 8 ತುಂಗ (ಚ) 9 ಧ್ವಾನ (ಚ)

ಜಯಜಯತು ಕಲ್ಯಾಣ[1]ನರ[1]ಚಾಪ ಹರರೂಪ
ಜಯಜಯತು ಕಲ್ಯಾಣ[2]ಸುಕಲಾಪ[2] ಗುರುರೂಪ
ಜಯಜಯತು ಕಲ್ಯಾಣಶಿಖರಿ [3]ಪದ್ಮಿನಿನಾಥಪೂಜಿತಪದಾಬ್ಜದೇವ[3]
ಜಯಜಯತು ಮಲ್ಲಣಮಯೂರ[4]ಸನ್ನುತಿ[4]ಪಾತ್ರ
ಜಯಜಯತು ಕಲ್ಯಾಣಮಯಲಕ್ಷ್ಯ ಮುನಿಪಕ್ಷ
ಜಯಜಯತು ಜಯತೆಂದು ಪೊಡಮಟ್ಟರಾ ಸಭಾಜನರು ದಿಗ್ವರರು ಮುದದಿಂ ೧೨

ಖಗರಾಟ್ ತುರಂಗಭಾವಿತ ವಂದನಾನಂದ
ಖಗರಾಟ್ ಪ್ರಿಯಮುರ್ಖ್ಯ ನುತಿಪಾತ್ರ ಸಿತಗಾತ್ರ
ಖಗರಾಟ್ ಕಪೀಟ [5]ಗುರುನೇತ್ರ ಗೋತ್ರಾಧೀಶನುತ[5]ಸಕಲಸೇವ್ಯವರದ
ಖಗಕುಸುಮ ಘಸ್ಮರಾಕಂಬಲಾಶ್ವತರ ಕರ್ಣ
ಖಗಕುಲಸಪತ್ನಯಜ್ಞೋಪವೀ[6]ತನೆ[6] ಪರಮ
ಖಗಜಾತಿ ಹೃಜ್ಯೋತಿಯೆಂದು ನುತಿಸಿತು ವಿಬುಧಸಂದೋಹ [7]ಚೆಂದ[7]ದಿಂದೆ ೧೩

ಸಾಗರ ಸರಾಗದಿಂ ಪೆರ್ಚಿತ್ತು ಮುದದಿಂದ
ನಾಗರ್ಕಳೆಲ್ಲ ನಟಿಸಿದರು ಚಟುಲತ್ವದಿಂ
ರೋಗಿಗಳ್ ಭಯವಿಲ್ಲದಪಮೃತ್ಯುವಂ ಜಯಿಸಿ ಸುಖದಿಂದಲಿರ್ದರಾಗ
ರಾಗವಿದ್ವೇಷಂಗಳಳಿದರತಿಥಿಗಳೆಲ್ಲ
ಯೋಗಿಜನರ್ಮೈದೆ ಶಿವಧ್ಯಾನದಿಂದಿರ್ದರತಿ
ತ್ಯಾಗಭೋಗಯೋಗತ್ರಿವಿಧಾಂಗಲಿಂಗಸಂಯುಕ್ತಸಿದ್ಧೇಶನಿಂದ ೧೪

ಧನಕಾಮಿಜನಕೆ ಧನಸಂಪದಂ ದೊರಕಿತ್ತು
ಮನದಿಚ್ಛೆಯೆನಿತುಂಟನಿತು ಕಾಮಂ ಲಭಿಸಿ
ತನುನಯದಿ ಧರ್ಮವಂ [8]ಬ[8]ಯಸುತಿಹ ನರರ್ಗಖಿಳಧರ್ಮದೈಶ್ವರ್ಯಮಾಯ್ತು
ಘನಮೋಕ್ಷದಿಂ ಸುಖದೊಳಿಹೆವೆಂಬ ನರರ್ಗೆಲ್ಲ
ವಿನಯದಿಂ ಮುಕ್ತಿ ಘಟಿಸಿತ್ತು ಮುದದಿಂದರರೆ
ಮನಸಿಜಾಂತಕ ಶಾಂತಮಲ್ಲಿಕಾರ್ಜುನಲಿಂಗದುದಯದಾನಂದದಿಂದೆ ೧೫

---

1 ಚಲ (ಚ) 2 ಕಾಂತೋಪ (ಚ) 3 ಸದ್ಮಂ ಪದ್ಮನಿನಾದ ಪೂಜಿತಪದಂ (ಚ) 4 ಸ್ತೋತ್ರಪ (ಚ)
5 ಖಗ ಗೋತ್ರ ಛತ್ರಗೋಪತಿ (ಚ) 6 ತಂ (ಚ) 7 ಹೆಂದ (ಚ) 8 ಜ (ಗ)

ತಪಿಪ ತಾಪಸಜನಕೆ ತಪಸಿದ್ಧಿ ಸಿದ್ಧಿಸಿ
ತ್ವಪರಿಮಿತ ಯಮಿಜನರ ಯತಿ[1]ತೆಯ[1]ತಿಶಯವಮಾಯ್ತು
ಕುಪಿತವಿಲ್ಲದೆಯಖಿಳಜಪಗಳುನ್ನತವಾದವತಿಜಾಗ್ರದಿಂ ಭಾವಿಸೆ
ಸುಪಥವಮಂತ್ರಂಗಳ್ಗೆ ಮಹಿಮೆ ಘನತರವಾಯ್ತು
ಸಫಲವಾದವು ಸಕಲಕ್ರಿಯೆಗಳಭಿನವಿಸುತ್ತ
ತಪನೀಯಗೋತ್ರಗೃಹಮೃಗಧರಾಂಕಿತ ಸಿದ್ಧಲಿಂಗನುನ್ನತಮಹಿಮೆ[2]ಯಿಂ[2] ೧೬

ನಗಗಳೌನ್ನತ್ಯದಿಂ[3]ದೊಪ್ಪಿ[3]ದವು ಸಕಲ ತೀ
ರ್ಥಗಳೆಲ್ಲ ಮಹಿಮೆಯಂ ಮೆರೆದವಗಣಿತ ಕ್ಷೇತ್ರ
ಮಿಗೆ ಮಹತ್ವಂದಳೆದವಪರಿಮಿತದಧಿದೇವತೆಯ[4]ರಪ್ಪ[4] ದೇವ[5]ತೆಗ[5]ಳು
ಬಗೆಬಗೆಯ ದೇವತ್ವದಿಂದವೋಲಾಡಿದರ್
ಭಗಣಪತಿ [6]ಕಾಂತಿಯಂ ಸೋಡಲತಿ[6]ಶಯಮೆನಿಸಿ
ತೊಗುವಮೃತಫಲದಿನೊಪ್ಪಿ[7]ದುದು[7] ಸಂತಾನಕುಜಮೇನೆಂಬೆನಾಶ್ಚರ್ಯಮಂ ೧೭

ಬೌದ್ಧ[8]ಮಾಯಾತನಯ ಲೋಕಾಯತರು ನೋಡಿ
ಬುದ್ಧಿಯಿಂದಿವ ಜೈನಮಿವನಸುವೆನಿತ್ತಲೇ
ನಿರ್ಧರಿಸಿದರು ಧರ್ಮಮೀಮಾಂಸಕರು ನೋಡಿ ಸತ್ಕರ್ಮವೆಂದರಾಗ[8]
ಸಿದ್ಧಿಗಳ [9]ಬೀಡೀತನೆಂದರಾ ಯಮಳರುಂ
ಶುದ್ಧಸತ್ವಮೆ ಮೂರ್ತಿಗೊಂಡಿತೆಂದರು ಸಾಂಖ್ಯ
ರುದ್ಧತಂ ಪರಮೇಶಗೆಂದು ಯೋಗಿಗಳು ಪೊಡಮಟ್ಟರಾ ರೇಣುಕಂಗೆ[9] ೧೮

ಈತನೇ ವಾಸುದೇವಂ [10]ಪರಾ[10]ಪ್ರಕೃತಿಯೆಂ
ದಾತುರದಿ ಪೊಡಮಡುತ್ತಿರ್ದರಾ ವೈಷ್ಣವರ್
ಖ್ಯಾತಿವೆತ್ತಿಹ ಸಾಂಬಶಿವನೆಂದು ಶೈವಮತ[11]ದವರು ಸೈಗೆಡೆದರಾಗ[11]
ಭೀತಿಯಿಂ ಷಡ್ದರ್ಶನವ್ರಾತಮೆಯ್ತಂದು
ಓತೆಮ್ಮ ಕುಲದೈವವೆಂದು [12]ಮರೆವೊಕ್ಕರಶಿ
ಯಾ[12]ತೆರದಿ ಸಕಲರುಂ ಪೊಡಗೆಡೆಯೆ ಪುಂಗವಧ್ವಜನ ಸನ್ನಿಧಿಯೊಳಿ[13]ರ್ದರು[13] ೧೯

---

1 ತ್ವಮ (ಚ) 2 ಯಂ (ಗ) 3 ಪೆರ್ಚಿ (ಚ) 4 ರಹ (ಚ) 5 ರ್ಕ (ಚ) 6 ಕಾಮದುಘಮ ಮೃತಮತಿ (ಚ) 7 ದವು (ಚ) 8 ಸೌಗತರೆಲ್ಲ ಬುದ್ಧಿಯಿಂ ನಮಿಸಲ್ಕೆ। ಬದ್ಧ ಮೀಮಾಂಸಕರ್ತನು ಮೆಂದು ನುಡಿದರ।ತ್ಯುದ್ಭತದ ಖಂಡ ಬ್ರಹ್ಮವುವೆಂದು ನಲಿದವರಧೂತಮತ ಕಾಪಾಲರು (ಚ) 9 ನೀವಾತನೆಂದು ಪೊಗಳಿದರಾ । ಗೌದ್ಧತದ ಇಷ್ಟದೇವತೆಯೆಂದು ಸಾಂಖ್ಯನುಂ । ವೃದ್ಧಿಯಿಂ ಪಾತಂಜಲಾದಿಗಳ್ ಪೊಡಮಟ್ಟರಾ ರೇಣುಕಾಧೀಶಂಗೆ (ಚ) 10 ಪರಃ (ಚ) 11 ಕೊಂಡಾಡಿ ಸೈಗೆಡದರು (ಚ) 12 ಶರಣರ್ಯೊಕ್ಕರತಿ। ಈ (ಚ) 13 ರ್ದಂ (ಚ)

•ಮುನ್ನು ಸುರ್ದ ಚತುರ್ವಿಧದ ಗುರುಗಳಾವಿರ್ಭವವ
ಸನ್ನುತಾಗಮಪುರಾಣದಲಿ ಪೇಳಿದ ತೆರದೊ
ಳುನ್ನತಪುರಾತನಸುವಾಕ್ಯಾನುಸಾರದಿಂ ರಚಿಸಿದ ಮತಸ್ಥಲದೊಳು
ಚೆನ್ನಾಗಿ ಪೇಳಿದದನೇ ಶಿಲೋಚ್ಚಯದೇವ
ನನ್ನಿಯಿಂ ನಿನಗೊಲಿದು ವಚಿಸಿದೆವು ಮತ್ತೆ ಕೇಳ್
ಬಿನ್ನಣದ ವೀರಾಗಮಪ್ರಮಾಣವನು ಮನವೊಲಿದಾಲಿಸೈ ಕುಮಾರ ೨೦

ಸಲ್ಲಲಿತ ಸಕಲಶೈವಂ ವೀರಶೈವಕ್ಕೆ
ಬಲ್ಲಿದಂ ಗುರುಚಾರುಚಕ್ರೇಶ್ವರಂ ಜಗ
ದ್ವಲ್ಲಭಂ ರೇಣುಕಂ ಸಾಂಬಶಿವಶಾಸನವ ವಹಿಸಿ ರಾಜಿಪ ಧರೆಯೊಳು
ಕೊಲ್ಲಿಪಾಕ ಸೋಮನಾಥಲಿಂಗದ ಬಸುರೊ
ಳುಲ್ಲಾಸದಿಂದಲಾವಿರ್ಭವಿಸಿ ಜಗದೊಳಗೆ
ಚೆಲ್ಲಲಿತ ರೇವಣಪ್ರಭುವೆಂಬ ಪೆಸರಿನಿಂ ಮೆರೆವಂ ನಗೇಂದ್ರಕನ್ಯೆ ೨೧

ಉದ್ಧತಗುಣಾಧ್ಯಕ್ಷ ಶಿವಸಮಯ ಜನಪಕ್ಷ
ಕೃದ್ಧಮಾಯಾಮಥನ ಸ್ನಿಗ್ಧಶಿವಮನುಸದನ
ಬದ್ಧಮಲ ಪಾಪಪಂಕವಿಶೇಷ ದಾರುಕಂ ಹರನಿರೂಪಣವ ಪೊತ್ತು
ಸಿದ್ಧವಟಪುರದ ಘನಜ್ಯೋತಿ ಸಿದ್ಧೇಶನೊಳ್
ಸಿದ್ಧಿಸುತೆ ಲೋಕದೊಳ್ ಮೆರೆವ ನಾಮವು ಮರುಳು
ಸಿದ್ಧೇಶನೆಂದೆನಿಸಿ ಶಿಷ್ಯರ್ಗೆ ಬೋಧಿಸುವವೈ ಸದಾಚಾರದಿರವಂ ೨೨

ಕ್ಷುದ್ರಕಾಮಾಂತಕ ಪುರಾಂತಕ ಶಿವಾನಂದ
ಮುದ್ರಿತಾಂತಃಕರಣ ಕಾಮಾದಿ ರಿಪುಹರಣ
ನಿದ್ರಾದ್ಯವಸ್ಥಾದಿ ಕಾಯವರ್ಜಿತ ನಿರಾಮಯ ಶಂಕುಕರ್ಣನನಘಂ
ಮುದ್ರಾಪುರೀರಾಮನಾಥನುದರದೊಳು ಶ್ರೀ
ರುದ್ರನಾಜ್ಞೆಯೊಳುದಿಸಿ ಪರಮತಕುತರ್ಕಮಂ
ವಿದ್ರಾವಣಂಗೆಯ್ದು ಮೆರೆವ ಏಕೋರಾಮದೇವ ಕಾರುಣ್ಯಭಾವ ೨೩

---

• ಚ ಪ್ರತಿಯಲ್ಲಿ ೨೦ ನೆಯ ಪದ್ಯದಿಂದ ೨೫ ನೆಯ ಪದ್ಯದವರೆಗೆ ಇಲ್ಲ

ವಿಮಲವಿಖ್ಯಾತಪೂಜಿತಪಾದ ಸಕಲಸುರ
ಕಮನೀಯ ಕಾಮಿಂಕಾದ್ಯಖಿಳಮಲ ನಿರ್ಮೂಲ
ಸುಮನಶ್ಶರವಿಕಾರ ನಿರ್ಮುಕ್ತ ಗೋಕರ್ಣಗುರುವರಂ ಶಿವನಾಜ್ಞೆಯಿಂ
ಅಮರಗುಂಡದ ಮಲ್ಲಿಕಾರ್ಜುನನ ಗರ್ಭದೊಳ
ಗಮರರುಘೆಯೆನಲು ಸಂಜನಿಸಿ ಭೂಭಾಗದಲಿ
ತಮಗೆ ಸರಿಯಿಲ್ಲೆಂದು ರಾಜಿಸಿದ ಶಿವಲೆಂಕಮಂಚಣ್ಣ ಪಂಡಿತಾರ್ಯಂ ೨೪

ವಿಶ್ವತಶ್ಚಕ್ಷುರುತಮೆಂಬ ಶ್ರುತಿಮುಖದಿಂದೆ
ವಿಶ್ವದೊಳ್ ಶಿವಮಹಿಮೆಯಂ ಮೆರೆವ ಸದ್ಗುರುವೆ
ಶಾಶ್ವತಂ ಸಕಲೇಶನಾಜ್ಞೆಯಂ ಧರಿಸಿ ಕ್ಷೇತ್ರದೊಳಧಿಕತರಮೆನಿಸುವ
ಭಾಸ್ವತ್ಸುಕಾಶಿಯೊಳ್ ರಂಜಿಸುವ ಶಿವನಾದ
ವಿಶ್ವೇಶನುದರದಲಿ ಜನಿಸಿ ಮರ್ತ್ಯದಿ ಮೆರೆವ
ವಿಶ್ವನಾಥಾರ್ಯ ಗುರುವರ್ಯರ ಮಹತ್ವಮಂ ಪೊಗಳಲ್ಕೆ ಶಕ್ತರುಂಟೆ ೨೫

ಶ್ಲೋಕ :

ಶ್ರೀಕೊಲ್ಲಿಪಾಕಿಸೋಮೇಶಾಬ್ಜಾತಃ ಶ್ರೀರೇಣುಕೋ ಗುರುಃ
ಶ್ರೀಸಿದ್ಧವಟಸಿದ್ಧೇಶಾದ ಭವನ್ಮರುಳ್‌ಸಿದ್ಧರಾಟ್ ೧

ಮುದ್ರಾಪುರೀರಾಮನಾಥದೇಕೋರಾಮ ಭವದ್ಗುರುಃ
ಆರ್ಯೋಭೂದಮೃಗುಣ್ಣಸ್ಯ ಪಣ್ಡಿತೋ ಮಲ್ಲಿಕಾರ್ಜುನಾತ್ ೨

ಕಾಶೀ ವಿಶ್ವೇಶ್ವರಾದ್ವಿಶ್ವನಾಥಾರ್ಯೋ ಸಮ್ಬಭೂವಹಿಃ ೩

•ಇದು ಚತುರ್ಯುಗದೊಳಾಚಾರ್ಯ ರೂಪಂತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದಹುದೆಂಟನೆಯ ಸಂಧಿ ಸುಜ್ಞಾನಬಂಧಿ ೨೬

---

• ಈ ಪದ್ಯ ಕಗ ಪ್ರತಿಗಳಲ್ಲಿಲ್ಲ. ಚ ಪ್ರತಿಯಲ್ಲಿ ೧೯ ನೆಯ ಪದ್ಯವಾದ ಮೇಲೆ ಬಂದಿದೆ

# ಒಂಬತ್ತನೆಯ ಸಂಧಿ

ಸೂಚನೆ :•

ಆ ಸೋಮನಾಥನವತಾರ ರೇಣುಕಗುರುವ
ಭಾಸುರದ ನೃಪಕದಂಬಂ ಭಕ್ತಜನದ ವಾ
ರಾಶಿ ಬಿನ್ನವಿಸಲ್ಕೆ ನಷರತ್ನಮಯ ವ್ಯೋಮಯಾನ[1]ದೊಳ್ ಸಾರ್ದ ಮುದದಿ[1]

ರಂಗತ್ತರಂಗಗಂಗಾರಮಣಿ ವಿಮಲನಿಜ
ಪಿಂಗಳಜಟಾಲವಾಲೋತ್ತಂಸ ಭಕ್ತಹೃ
ತ್ಸಂಗ ಮಧುಮರ್ದನ ಕಳತ್ರ ಕೃತಮಿತ್ರ ಶುಭ್ರಾಂಶು ಶುಚಿನೇತ್ರಯೇಕ
ಪಿಂಗ ವರಮಿತ್ರ[2]ರವಿಪುತ್ರ[2] ನಗಶತಕೋಟಿ
ತುಂಗ ಕನಕಾದ್ರಿಕೋದಂಡಮಂಡನ ಸರ್ವ
ಮಂಗ[3]ಳಾ[3]ರಮಣ ಗುರುಚೆನ್ನಮ[4]ಲ್ಲೇಶಲಿಂಗನ[4] ನಮಗೆ ಕೊಡುಗಿಷ್ಟಮಂ ೧

ಎಸೆವಯೇಲೂರ ಜಲಕಂಠೇಶ್ವರನ ಗುಡಿಯೊ
ಳಸಮಶಿವಪೌರಾಣಕಥೆಯ ಪೇಳುತ ಹರನ
ವಿಷಧರದ ಲೀಲೆಯಂ ಪೇಳೆ ಕೇಳುತ್ತಾಗ ಮೂರ್ಛೆಯಿಂ ಬಿಳ್ದೇಳಂತೆ
ವಿಷದೊಳಾಳುತ್ತ ಮಿಗೆ ವೀರಭದ್ರಾದಿಗಣ
ವಿಸರಕ್ಕೆ ಮೊರೆಯಿಡುತೆ ಕೊರಲರಿದುಕೊಂಬಾಗ
ವಿಷಮಾಕ್ಷ ಮೆಂಚ್ಚಿ ತೊಡೆ[5]ಯೇರಿ[5] ನೋಡುವ ರುದ್ರಪಶುಪತಿಗೆ ಶರಣು ಶರಣು ೨

ಲೀಲೆಯಿಂದಾ ಪುರವ ಸಿಂಗರಂ ಮಾಡಿದರ್
ಸಾಲುಬೀದಿಗಳಲ್ಲಿ ಪನ್ನೀರಚಳ[6]ಯದಿಂ[6]
ಮೇಲಾದ ಕುಂಕುಮದ ಸಾರಣೆಯ ಕ[7]ತ್ತು[7]ರಿಯ ಕಾರಣೆಯ ರಚಿಸುತಲ್ಲಿ
[8]ಮೇಲಾದ ಬಂಗಾಳಿ[8] ಜಲ್ಲಿಪಟ್ಟೆಯ ಕಟ್ಟು
ತಾ ಲಲಿತ ಕನಕತೋರಣ ಮಕರತೋರಣ
ಸ್ಥೂಲವಹ ಮುಕುರದೋರಣ ರನ್ನದೋರಣದಿ ರಂಜಿಸಿತು ಸೊಬಗಿನಿಂದೆ ೩

---

1 ದೊಳಿರ್ದ ಮುದದಿಂ (ಚ) 2 ಮಧುಮಿತ್ರ (ಚ) 3 ಳಮನೋ (ಚ) 4 ಲ್ಲಿಕಾರ್ಜುನಲಿಂಗ (ಚ)
5 ಯಲ್ಲಿ (ಕಗ) 6 ಯಿಡುತ (ಚ) 7 ಸ್ತು (ಕ) 8 ಲೋಲ ಶ್ರೀಕಂಠ ಮಲ (ಚ)

• ಪುಷ್ಪಕೋತ್ಸವ (ಗ)

ಲೇಪಿ[1]ಪ ಜವಾದಿಸಾದಿನ ಯ[1]ಕ್ಷಕರ್ದಮಂಗ
ಳಾ ಪುರದ ಮನೆಮನೆಗಳಲ್ಲಿ ಬೀದಿಗಳೊಳಗೆ
ಯೇಪೇಳ್ವೆ ಮಘಮಘಿಸೆ ಅಗರುಮಹಿಷಾಕ್ಷಿ[2]ಧೂಮಂ ಗಗನಮಂ[2] ಮುಸುಕಿತು
ದೀಪಿಸುವ ಕುರುಜುಗಳ್ ಸ್ಥಾನಸ್ಥಾನದಿರೈಸ
ಲಾ ಪರಮಪುಷ್ಪಕೋತ್ಸವಮ ನೋ[3]ಡಲ್ಬಂದ[3]
ಶ್ರೀಪತಿ ಶಚೀಶ ವಾಗೀಶ ಮುಖವಿಬುಧರ ವಿಮಾನಂಗಳೆನೆ ಮೆರೆದವು ೪

ಮೆರೆವ ಮುತ್ತಿನಮಣಿಯ ಗುಚ್ಛಗುಚ್ಛಗಳಿಂದ
ಸರಿಯಿಲ್ಲದಿಹ ಪುಷ್ಯರಾಗಮಣಿ ಸೂಸಕದಿ
ತರತರಂಗೊಂಡು ರಾಜಿಪ ರ[4]ನ್ನ[4]ದುಂಡುಚೆಂಡುಗಳಿಂ ವಿಚಿತ್ರಮಾದ
ಪರಿವಿಡಿದು ಬಳಸಿರ್ದ ಪಂಚಾಂಗರಾಯನಂ
ತರವರಿವುತಲ್ಲಲ್ಲಿಯಿಟ್ಟು ಕನ್ನಡಿಕಲಶ
ಭರಿತರಸ[5]ಮೈದಿರಾಜಿಸೆ ತೆಂಗು ಬಾಳೆಗಳು ಬೀದಿಬೀದಿಯೊಳೆಸೆಯಲು[5] ೫

ಮತ್ತೆ ರೇವಣಸಿದ್ಧ ಲಿಂಗಲಿಂಗದೊಳುದಿಸೆ
ಚಿತ್ತಜಾಂತಕನಗರ ಗಣ[6]ವರರ ಪುಷ್ಪಕಂ
ಅತ್ತಣಿಂ[6]ದಳ್ತಿಯಿಂದಿಳಿ[7]ದಂದದಿಂದೇಕ[7]ಶತಕುಲದ ಶರಣಜನದ
ಬಿತ್ತರದ ಮಠಗಳಂ ನೋಡಲ್ಕೆದಿದ[8]ರೋ[8] ಗ
ಣೋತ್ತಮರ ದರ್ಶನ[9]ಕೆ ಬಂದವೊ ಪುಷ್ಪಕದ
ಮೊತ್ತಮೆಂ·ದೆ·ನಲಾ ಪುರದಿ ಮಹಾಮೇರುವೆಗಳೇನೆಂಬೆನೆಸೆದವಲ್ಲಿ[9] ೬

ನವರತ್ನಖಚಿತದೃಢಹರಡೆಯಲ್ಲಲ್ಲೆಸೆಯ
ಲವರ ಮಧ್ಯದೊಳು ಶೋಧಿಸಿದಯಪರಂಜಿ[10]ಗಳ
ಪವಣಿನಿಂ[10] ಕುಸುರಿಗೆಲಸಗಳಿಂದ ರಂಜಿಸಲ್ ಮೌಕ್ತಿಕದ ವೃಷಭ[11]ದ[11]ಲ್ಲಿ
ಸವಿಶೇಷದಿಂದ ಪೌರುಷಮಾನದೊಳ್ ಮೆರೆಯೆ
[12]ಸುವಿಧಿಯಿಂ[12] ನಲಿವ ಪಟಗೊಂಡೆಗಳ ಸಾಲ್ಗಳಿಂ
ದಿವಿಯನಳ್ಕಿರಿವ ನಂದಿಧ್ವಜಗಳಿಂ ಸೊಬಗುವೆತ್ತು ತೋರ್ಪುದು ಚೆಲ್ವಿನಿಂ ೭

---

1 ಸಿದ ಜವಾದಿಸಾದುಗಳೆ (ಚ) 2 ಹೊಗೆವಿಯಚ್ಚರಂಗಣವ (ಚ) 3 ಡುವೆಂದು (ಚ) 4 ತ್ನ (ಚ)
5 ಮೊ ಪರ್ವಾಳೆ ದಾಡಿಮಗಳಿರ್ದವಿರ್ಕೆಲದ ಬೀದಿಯೊಳು ಸೋಡೆ (ಚ) 6 ಪುಂಗವರವರಪುಷ್ಪ।
ಕತ್ತಲಿಂ (ಚ) 7 ದವಂತಲ್ಲೇಕ (ಚ) 8 ವೋ (ಚ) 9 ದಿ ಮುಕ್ತರಾದವರೊಯ್ಯುತ್ಮಧಿಕ ಪುಷ್ಪಂಗಳೊ
ಮಹಾಮೇರುವೆಗಳ್ನೆಸಲೆಸೆದವಲ್ಲಲ್ಲಿಗೆ (ಚ) • ತೆ (ಚ) 10 ಮಯ।ನವಕೊಳಗ (ಚ) 11 ವ (ಚ)
12 ತವಕದಿಂ (ಚ)

ಏನೆಂಬೆನೀ ಮಹೋತ್ಸವಕಿಂದ್ರನಂ ಬೃಹ
ದ್ಭಾನು ಮುಂತಾದ ದಿಗ್ವರರ ಕೈಬೀಸುವೊಲ್
ಸಾನುರಾಗದಿ ಬನ್ನಿಯಮರಗಣ ಪ್ರಮಥಗಣ ರುದ್ರಗಣ ವೃಷಭಗಣರುಂ
ಜ್ಞಾನನಿಧಿ ಶರಣಸದ್ಭಕ್ತರಂ ಕೈಲಾಸ
ನಾನಾವಿಚಿತ್ರಭುವನಾಶ್ರಿತರ ಕರೆವಂತೆ
ಯಾನಂದಿಪಟಗಳಾಗೆಸೆ[1]ವ[1]ವಾಗಸದಿ ಶಿವಭಕ್ತಿವಧು ನರ್ತಿಪಂತೆ ೮

ಬಗೆಬಗೆಯ [2]ನೆರವಾಂತ[2] ಘೋಷಣದಿ ಭೂಷಣದಿ
ಮಿಗೆವಿಂಗೆ ಮಹಾಮೇಲುಕಟ್ಟುಗಳ ಪಟ್ಟುಗಳ
ಪೊಗರೊಗುವ ಕನ್ನಡಿಯ ಕಳಶದಿಂ ವಿಳಸದಿಂದುಘೆ ಚಾಂಗು ರವದಿಂದಲು
ಸೊಗಸುವತಿಪುಷ್ಪಗಳ ಮಾಲೆಗಳ ಲೀಲೆಗಳ
ಜಗದೊಳರಿದಹ ಬಾಣಕುರುಜುಗಳ ಪರಿಜುಗಳ
ಅಗರು ಗುಗ್ಗುಳ ಧೂಪದಾರತಿಯಯಾರತಿಯ ಶಿಂಗರದಿ ಮೆರೆಯಿತಮಮ ೯

ಎಲರ್ವಟ್ಟೆಗಡರ್ದ ಧೂಪದ ಧೂಮಮೇಘಗಳೆ
ಲಲಿತಮಾಲೆಗಳಾಗೆ ವಾದ್ಯರವ ಮೊಳಗಾಗ
ಲೊಲವಿನಿಂ ಪನ್ನೀರಚಳೆ ಮಳೆಯೆದಾಗೆ ಕನ್ನಡಿಕಳಶ ಮಿಂಚಾಗಲು
ಬಲಿದ ಬಾ[3]ಳೆಗಳು[3] ದಾಡಿಮಫಲ[4]ಗಳು ಬಿರಿಯೆ[4]
ಮಲೆಯಾನಿ[5]ಲನ ಪಾಂಗಿನಿಂದ ಸುಳಿಗಾಳಿ ಬಂ
ದೊಲೆಯೆ ಮಳೆಗಾಲದಂತಿರ್ದುದಾ ನಗರವದ ಬಣ್ಣಿಸುವ ಕವಿಯಾವನು[5] ೧೦

ಇಂತು ನಾನಾವಿಭವದಿಂದ ಪುರಜನರಾಗ
ಕಾಂತ ನವರತ್ನಮಯಪುಷ್ಪಕವ ತಂದು ಬಿಡ
ದಂತಖಿಳ ರಾಜಕುಲಋುಷಿನಿವಹ ಭಕ್ತಜನ[6]ರೆಲ್ಲ ಸಂತಸವೆಯ್ದಲು[6]
ಕಂತುವಿಜಯಂಗಡ್ಡಬಿದ್ದು ಬಿನ್ನೈಸೆಯದ
ರಂತರಂಗದ ಭಕ್ತಿಗೋಸು[7]ಗಂ ಮೆಚ್ಚಿ ಭೂ
ಕಾಂತ[7] ಪುಷ್ಪಕವಡರಿದಂ ಜಗದ್ಗುರು ರೇವಣಾಸಿದ್ಧ[8]ಯೋಗೀಂದ್ರನು[8] ೧೧

---

1 ದ (ಚ) 2 ವಾದ್ಯರವ (ಚ) 3 ಳೆಯ (ಚ) 4 ಪಣ್ಪೊಸರೆ (ಚ) 5 ಲಂ ತೀಡೆ ಪರಿಮಳಂ ಓಡಾಡೆ ಮಳೆಗಾಲೊ ಸಂತಮೊಂದಳಗಿಳಿಮಯಾರ ಹಂಸೆಗಳಾಡುತಿರ್ದವಲ್ಲಿ (ಚ) 6 ದರ್ಶನ ಸಮಸ್ತ ಬುಧರುಂ (ಚ) 7 ಗಮೆನ್ನುತ್ತನಲಿ।ದಂತು (ಚ) 8 ಹೃತ್ಸಿದ್ಧನು (ಚ)

ಆಡರೆ ಪುಷ್ಪಕವಾಗ[1]ಲಾ ವಿಯತ್ತಲ[1]ದಲ್ಲಿ
ನುಡಿಸಿದರ್ ದೇವದುಂದುಂಭಿಯು ಕೃಷ್ಣಾಜಿನ[2]ವ
ತೊಡಹಿ ರುದ್ರಾಕ್ಷಮಾಲೆಗಳ ಕರದೊಳಗಾಂತು ನಡೆದರಾ ಸಂಯಮಿಗಳು[2]
ಸಡಗರದ ವಾದ್ಯತತಿ ನಲಿಯೆ [3]ವೈದಿ[3]ಕರುಲಿಯೆ
ಬಿಡದೆ ಪುಷ್ಪಾಂಜಲಿಯನೆಸಗೆ ಉಘೆರವ ಮುಸುಗೆ
ಬೆಡಗಿನ ವಿಮಾನವಾಗಸಕಡರೆ ಇನಮಂಡಲಾಕೃತಿಯೊಲಾಯಿತದ್ಭುತಂ ೧೨

ಭೂಪತಿಗಳಖಿಳೇಷ್ಟ[4]ದಾಯಕನೆ ನೀನೆನು[4]
ತ್ತಾ ಪರಮಮಂತ್ರಿಗಳ್ ಮಂಡಲೀಕರು [5]ಕೂಡಿ
ಭಾಪುರೇ ಪುಣ್ಯಮೆಂದೆನುತ್[5] ದಿಂಡುಡುಗೆಗಳ ಸುತ್ತಿ ಕಾಲ್ನಡ[6]ಗಳಿಂದ[6]
ಏ ಪೇಳ್ವೆ ರತ್ನರಜತದ ಕನಕವೇತ್ರಗಳ
ಭೂಪರ್ ಮಹಾಮಕುಟವರ್ಧನರ್ ಪಿಡಿ[7]ದೊಡನೆ[7]
ದೀಪಿಸುವ ಪುಷ್ಪಕದ ಮುಂದೆ ಬೀದಿಯ ಬಿಡಿಪರೇನೆಂಬೆ ಸಂಭ್ರಮವನು ೧೩

ನೆಗಪಿದರ್ ಕನಕಮೌಕ್ತಿಕ ಪವಳರತ್ನಂಗ
ಳಗಣಿತದ ಛತ್ರಜಾಲಂಗಳಂ ಸೂರೆ ಪಾ
ನುಗಳ ಪಕ್ಕಿಗಳಾಲವಟ್ಟಿಗಳ ಪಂಚವರ್ಣದ ಸಿಂಧಸೀಗುರಿ[8]ಗಳ[8]
ಸೊಗಸಿನಿಂ ಪಿಡಿಯೆ ದಿನಮಣಿಯ ಕಿರಣಂ ತಡೆಯೆ
ಪಗಲರಸ ಮುಳುಗಿದನೆನುತ್ತಲಾರತಿ ಬರಲ್
ಭಗಣತತಿ ಮೂಡಿದವೊ ಪುರದೊಳುದಿಸಿದವೆನಲ್ಕಾರತಿಗಳೆಸೆದವಲ್ಲಿ ೧೪

ಜನಜಾತ್ರೆ ಪೊಳಲಂತರಾಳದೊಳ್ ಪೊರಗೆಲ್ಲ
ಘನಗೇಹದಗ್ರದುಪ್ಪರಿಗೆ ಸೆಜ್ಜೆಗಳ ಮೇ
ಲನುನಯದಿ ಗುಡಿಗಳೊಳು ಗೋಪುರಂಗಳ ಮೇಲೆಯೊಬ್ಬರೊಬ್ಬರು ನಿಲ್ಲುತ
ವಿನಯದಿಂ ನೋಳ್ಪಾಗ ತೊಲಗುತಲೆದೆಗೆ ಮೇಲ
ತನುವಿನಿಂದೊರಗದಿರು ಸೆರ[9]ಗನೋಸರಿಸೆ[9] ತ
ಕ್ಕಿನಿತು ಮ[10]ದ[10]ಬೇಡೆಂಬ ಜನದ ಸಂದಣಿಯ ಗುಜುಗುಜುರವವನೇವೇಳ್ವೆನು ೧೫

---

1 ವಿಯಚ್ಚರಾಂಗಣ (ಚ) 2 ಗ।ಳಿಡುತಲೂರ್ಧ್ವಕೆ ತಪೋಧನರು ನಲಿನಲಿದಾಡೆ ಭೂಮಿಯೊಳ್ ನೋಡೆ ಮುದದಿಂ (ಚ) 3 ವೈದ (ಕಗ) 4 ಕರ್ತಭರ್ತನುಮೆನು (ಚ) 5 ಮುಖ್ಯಾ ಪುಣ್ಯಪುರುಷರುಂ (ಚ) 6 ನಡೆವುತ (ಚ) 7 ದೆತುಳ (ಚ) 8 ಳಂ (ಚ) 9 ಗುವೊ ಸರಿಸೆ।ಕಿ (ಚ) 10 ಡ (ಗ)

ಶತ[1]ಶತ[1]ಸ್ವರ್ಣಮಯಘೃತದ ದೀವಟಿಕೆಗಳ್
[2]ಮಿ[2]ತವಿಲ್ಲದಿಹ ಪಂಜು[3]ಗಳ ರಾಜಿ ರಂಜಿಸಲ
ಯುತ ಭಾನು ಹುತವಹರೆ ನಿಂದಂತೆಸೆಯಲಾಗಲೇ[3]ನೆಂಬೆನಾ ಪ್ರಭೆಯುನು
ನುತಿವೆತ್ತ ಗಂಧ[4]ಕದ[4] ಪಗಲ್ಜ್ಯೋತಿಗಳ್ ತೀವ
ಲತಿಶಯದ ಶಶಿಗಳುದಯವೊ [5]ಚಾಂದ್ರಿಯೋ ಎನೆ[5]
ಲ್ಕತಿನೂತ್ನವಹ ಬಾಣಬಿರಿಸುಗಳ ರವವೊ ದಂಭೋಳಿಧ್ವನಿಯೆನಲದ್ಭುತಂ ೧೬

ಪೊನ್ನರನ್ನದ ಪಿಡಿಗಳುಳ್ಳ ಧಾವಳ್ಯಮಾ
ದುನ್ನತದ ಚಾಮರಂಗಳ ನಗರಕಧಿಕರಹ
ಕನ್ನೆಯರ್ ಸಕಲಸಂಪನ್ನೆಯರ್ ಮದನಮಂನದನ್ನೆಯರ್ ಢಾಳೈಸಲು
ಮನ್ನಣೆಯ ನಿಟ್ಟೆದೆಯರೆಯ್ದೆ ಧವಳಾರಗಳ
ಬಿನ್ನಣದಿ ಪಾಡಿ ಪರಸುತ ದಿಟ್ಟಿಯಾರತಿಯಂ
ನನ್ನಿಯಿಂದೆತ್ತುತ್ತ ಮನದಿಷ್ಟಮಂ [6]ಕೇಳ್ವ[6]ರಭವನಜ್ಞಾನಹರನಂ ೧೭

ಬಗೆವಡತ್ಯದ್ಭುತದ ವಾದ್ಯರವ [7]ನಾಂ[7] ಪುಟ್ಟಿ
ಮಿಗೆಬಳೆದೆನಂದೀದ ಕಾಣೆನೆಲೆಯಕ್ಕ ನೀ
ನಗಲದುಸುರೆನೆ ಕೇಳ್ದುದಿಲ್ಲವೇ ನೀಂ [8]ಹುಚ್ಚ[8]ಲಾ ತಂಗಿ ವಿದಿತಮಪ್ಪ
ನಿಗಮದುರ್ಲಭ ನೀಲಕಂಠಲಿಂಗದ ಬಸುರೊ
ಳಗಣಿತದ ರೇಣುಕೇಶಂ ಜನಿಸೆ ರಾಜಕುಲ
ಬಗೆಬಗೆಯ ಸಂಭ್ರಮಗಳಿಂದ ಮೆರವಣಿಗೆಯುಂ ಮಾಳ್ಪರದನೇವೇಳ್ವೆನು ೧೮

ಅನಿತರೊಳಗಾ ಪುರದ ಕಾಮಿನಿಜನಂ ನೋಡ
ಲನುವಿನಿಂ ಮುಗುಳ್ನಗೆಯುಮಂದಿಸೆ ಮುಖದೊಳ್ ನೋಡೆ
ಮಿನುಗುವತಿ ನೇತ್ರಂಗಳಲರೆಯಾನಂದರಸಮೊಸರೆಯಾನನದೊಳಾಗ
ವಿನಯದಿಂ ವಚನರಚನಂ ಪ್ರೌಢಿಯಿಂದುಲಿಯೆ
ನನೆಗೋಲನಂಬುಗಳ್ ಬತ್ತಳಿಕೆ[9]ಯಿಂ ಪೊರಟ[9]
ವೆನಲು ಮನೆಯಿಂ ಬೀದಿಗೆಯ್ತಪ್ಪ ಬರವನದನೇವೇಳ್ವೆನತಿಮುದದೊಳು ೧೯

---

1 ಲಕ್ಷ (ಚ) 2 ಮ (ಕಗ) 3 ವಲ್ಲಿಲ್ಲಿ ರಂಜಿಸಲ್।ಅಯುತ ಖದ್ಯೋತ ಹುತವಹರೆ ನಿಂದಂತೆಸೆಯಲೇ (ಚ) 4 ಯುತ (ಚ) 5 ಚಂದ್ರಜೋತ್ಸ್ನಮೆನ (ಚ) 6 ಬೇಳ್ಪ (ಚ) 7 ನಂ (ಗ) 8 ಪುರ್ಚ (ಚ) 9 ಯುಂ ಪೊರಮಟ್ಟ (ಗ)

ಕೆಂಬಲ್ಲ ಕಾಂತಿ ದಾಡಿವಂ[1]ಬಿತ್ತುಗಳ ಜರೆಯೆ[1]
ಬಿಂಬಾಧರದ ರಂಗು ವಟಫಲಂ[2]ಗಳ ಪಳಿಯೆ[2]
ಶಂಬರಾರಿಯ ಕಣೆಗಳಂ ನಿರಾಕರಿಪ ನೋಟದ ನಗೆಯ ಸೊಗಸು [3]ಬೀರೆ[3]
[4]ಸಂಭ್ರಮಂದ[4] ಬೆಳ್ದಿಂಗಳಂ ತಿರಸ್ಕರಿಪ [5]ಮೊಗ
ದಿಂಬಾದ ಸುಲಿಪಲ್ಲ ಕಾಂತಿಯಿಂ[5] ನಿಬಿಡಕುಚ
[6]ಕುಂಭದಿಂ ಲೋಕ[6]ಕತಿಶಯವುಮಾದ ಸೊಬಗಿನ ಲತಾಂಗಿಯರ್ ನಡೆದರಾಗ ೨೦

ಪೊಂಗಳಶಕುಚದ ಮೇಲುದು ಜಾರೆ ತೋಳೆತ್ತೆ
ಪಿಂಗದೆನಸುಂದೋರೆ ಮೊಲೆ ಜಘನ ಜಡಿಯಲ್ ಬೆ
ಡಂಗಿನಿಂ ನಡು ಬಳುಂಕಲ್ ಮುಡಿಯಕಟ್ಟಳಿದಂ ಮಲ್ಲಿಗೆಯ ಪೂ ಸೂಸಲು
ಕಂಗೊಳಿಪ ಕಂಕಣಕ್ವಣತ್ಕಾರದೋರೆ ಕಾ
ಲುಂಗುರಂ ವೀರಮುದ್ರಿಕೆ ಘಲಿರ್ ಘಲಿರೆನ
ಲ್ಕಂಗನೆಯರೆಯ್ದಿದರ್ ಭರದಿಂದ ರೇವಣಾಸಿದ್ಧ[7]ನಂ[7] ನೋಳ್ಪೆವೆಂದು ೨೧

ತರತರದಯಿಕ್ಕೆಲದ ಮಣಿಮಾಡನೆಲೆಗಳೊಳ್
ಮೆರೆವ ಮಂಟಪಗಳೊಳ್ ಮಾಳಿಗೆಯ ಮೇಲೆ ಸಿಂ
ಗರದ ಬಾಗಿಲ ಹೊನ್ನಜಗಲಿ ರಂಗೋಲೆ ತೀವಿದ ಜಗಲಿ ವಜ್ರಮಯದ
ಪಿರಿದಾಗ ಸ್ತಂಭಂಗಳೊತ್ತಿನೊಳ್ ನಿಂದು ಮೈ
ಮರೆದು ನೋಡುವ ವಾರಿಜಾಸ್ಯೆಯರ್ ಚಿತ್ರದೊಳ
ಗಿರದೆ ರಚಿಸಿದ [8]ಮೇಲು[8]ಹೊನ್ನರನ್ನದ ಚೆಲ್ವಪುತ್ತಳಿಗಳಂತಿರ್ದರು ೨೨

ತಲೆಯಮೇಲಣ ಸೆರಗು ಜಾರೆ ಪೊದೆವರ್ ಕೆಲರು
ಕೆಲರು [9]ಮೊಲೆ[9]ಮೇಲುದಂ [10]ಜಾರೆ ಪೈಸರಿಸುವರ್
ಕೆಲರು ಬಿಣ್ಪಾದ ಮೊಲೆ ಪೊರ[10]ಮಡಲ್ಕೊಂಕುವರು ಕುಪ್ಪಸದೊಳತಿಗಾಢದಿಂ
[11]*ದೊ*ಲದು ಮೊಗಮಾವರಿಪ[11] ಕುರುಳ ತಿದ್ದುತ ಮುಡಿಯು
ಭರದಿಯಳಿಯಲ್ ಕಟ್ಟುತಂ ಸಡಿಲ್ದ ನಿರಿಗಳಂ
ತರದಲ್ಲಿ ಪಿಡಿಯುತಂತತಿಭರದಿ ಬ[12]ರ್ಪುದ[12]ಬಲಾಜನಂ ಮುದದಿಂದಲು ೨೩

---

1 ಬೀಜಗಳ್ ಜರೆಯೆ (ಗ) ಬಿತ್ತುಗಳ ಜರೆವ (ಚ) 2 ಪಳಿವಮುಳ (ಚ) 3 ಚೆಲ್ವ (ಚ) 4 ಬಿಂಬಯುತ (ಚ) 5 ಮುಖ। ಇಂಬಾದ ತಿಂಗಳಂ ನಿಂದಿಸುವ (ಚ) 6 ಪೊಂಬೊಗರಿಯಂದ (ಚ) 7 ಗುರಂ (ಚ) 8 ನೀಲ (ಚ) 9 ಕುಚಂ (ಚ) 10 ಪೈಸರಿಸೆ ಮುಚ್ಚುವರ್ ಕೆಲರು ಸ್ಥೌಲ್ಯದ ಕುಚಂ ಪೊಡ (ಚ) * ಒ (ಕ) 12 ರ್ಪರ (ಚ)

ಕುಸುಮಗಂಧಿಯರ ತನುಗಂಪಿಂಗೆ ರೋಲಂಬ
ಮುಸುಕೆ ನಡೆಯಂದಮಾ ನೂಪುರರವಂಗೇಳ್ದು
ವೊಸೆದು ಹಂಸೆಗಳೈದೆ ಧವಳಾರಶೋಭನಸ್ವನಕೆ ಪಿಕರಾಜ ಬರಲು
ದಶನದಾಡಿಮ[1]ಬೀಜದತಿಶಯುವ ಕಂಡು ನಗೆ
ಯೊ[1]ಸಗೆಯಿಂ ಗಿಳಿವಿಂಡು ಸಾಲಿಡಲ್ ಮದನನೃಪ
ನಸಮುಬಲ ನಡೆದುದೋಯನಂಗನುಗ್ಯಾನಕೆನೆ ಬಂದರಾ ಪುರ[2]ಸತಿ[2]ಯರು ೨೪

ಅಂಗಾಲ್ಗೆ ಲೇಪಿಸಿ[3]ದ ಲಾಕ್ಷಾರಸದ ರಾಗ[3]
ಮುಂಗಾಲುಗುರ್ವೆ[4]ಳಗನೊಳಕೊಂಡುವೇಳಿಸೆ[4] ಧ
ರಾಂಗ[5]ನೆಯು ರತ್ನಾಂ[5]ಬರವನುಟ್ಟ ಪಾಂಗಿನಿಂದೆಸೆದಳಾ [6]ನಿಡುನವಿಗ್ರ್ಗಳಂ[6]
ಕಂಗಳ ಸುನ್ನೈಲ್ಯ ವ್ಯಾಪಿಸೆ [7]ಗಗನಸತಿಯುಂ[7] ತಾಂ
ಪಿಂಗದೆ ಮಹಾನೀಲ[8]ಪಟವ[8] ಮುಸುಕಿಟ್ಟವೋ
ಲಂಗನೆಯ:ರೆಯ್ದೆಯಾಗಸಧರಣಿಗಳ್ ನಿಜದ ಸಿಂಗರಂಬಡೆದ[9]ರಂ[9]ದಂ ೨೫

ಪುರದ ಮುತ್ತಿನಹಾರವಚ್ಚರಂ ಕುಣಿಯೆ ಬಂ
ಧುರ[10]ದ ಬಂದಿಯ ಬಳೆಗಳು[10]ಯ್ಯಲೆಯನಾಡೆ ಸೌಂ
ದರದ ಮುಡಿಕುರುಳ್ಗಳುಂ ನರ್ತಿಸಲ್ಕಧರ ಕದಪುಗಳು ಕದಕದಿಸೆ ಮುದದಿಂ
ಉರದ [11]ಮೊಲೆ ಪೊರವಾರ್ಗಳುರೆ[11] ಜಡಿಯೆ ಚೆಲ್ವಾದ
ಕಿರುದೊಡೆಯು ಪೆರ್ದೊಡೆಯು ದಡದಡಿಸೆ ನೋಟದಾ
ತುರದಿಂದ [12]ಪರೆದ ಕುರುಳಂ ಪಿಡಿದು ತಿರ್ದುತುಸುರಿಡುತಿರ್ದರಾ ಪೆಣ್ಗಳು[12] ೨೬

ಮುಡಿಗೆ ಸೂಡುವ ಕುಸುಮಮಾಲೆಯಂ ಬಿಸುಟೊರ್ವ
ಳೊಡರಿಚಿದ ಕತ್ತುರಿಯ ತಿಲಕ[13]ಮಂ ತಿರ್ದುತ್ತೆ[13]
ಪಿಡಿದ ಕನ್ನಡಿಯ [14]ನೋಡದೆ ಕುರುಳ ನೇವರಿಸಿ ಕೈಯ ಕೊನೆಯಿಂದ ಬೇಗ
ಪಿಡಿದೊಂದುವೋಲೆಯನ್ನಿಟ್ಟು[14] ಕೊಪ್ಪಂ ಮರೆದು
[15]ತೊಡದೆ[15] ರವಕೆಯ ಹಿಂದುಮುಂದಾಗಿ ನಡೆನುಡಿಯುಂ
ತಡಬಡಂಬೋಗಿ ಕಡುಸಂಭ್ರಮದಿ ಬರ್ಪ ಪೆಣ್ಗಳ ನೋಡಿ ನಗುತಿರ್ದರು ೨೭

---

1 ಬಿತ್ತವಧರಫಲ ಕರ್ದುಂಕಲೆಂದೊ (ಚ) 2 ಸ್ತ್ರೀ (ಚ) 3 ರ್ದಲಾಕ್ಷರಾಗರಸ (ಚ) 4 ಗುಮುಭಯ್ಯ ವೇಧಿಸೆ (ಚ) 5 ನಾ ಸ್ವರ್ಣದಂ (ಚ) 6 ನವಿಕರ್ಾಂತಿಯುಂ (ಚ) 7 ಬಾನ್ವೆಣ್ಣು (ಚ) 8 ವಸನ (ಚ) 9 ವಂ (ಚ) 10 ಬಂದಿಗಳ್ ಓಲೆಉ (ಚ) 11 ಕುಚ ಪೊರವಾರ್ಗಳವು (ಚ) 12 ಬಾಯ್ಬಿಡುತ್ತು ಸುರಿಡುತ ಬರ್ಪರದನೇವೇಳ್ವೆನು (ಚ) 13 ನಿಡುತಂಬಿಟ್ಟು(ಚ) 14 ನೆಲಕಿಟ್ಟು ತಿದ್ದುವ ಕುರುಳ ಕೆದರಿ ಕಪ್ಪೊಂದು ಕಣ್ಗೆ। ಇಡದೊಂದು ಓಲೆಯಂ ಇಟ್ಟು (ಚ) 15 ತೊಡುತ (ಚ)

ಏಕೆ ಪೋದಪೆಯಕ್ಕ ನಿಲ್ಲು ನಾ ಬಂದೆಯೆನ
ಲಾಕೆ ನೀನಲಸುಗಾತಿಯು [1]ಮುಂದೆ[1] ನಡೆಯೆನಲ್
ಕೋಕಕುಚೆ ನಿನ್ನ ಕಾಲೊಳ್ ನಡೆವೆನೆನೆ ನಿನ್ನ ಹೆಗಲನೇರಿಸಿ ಪೋಪೆಯೊ
ಸಾಕು ನಿನ್ನಯ ಮಾತೆನಂತ್ತ ಮುಂದಕೆ ನಡೆಯೆಂ
ರಾಕೇಂದುವದನೆ ಪಿಂದಟ್ಟಿ ಸೆರಗಂ ಪಿಡಿಯೆ
ಜೋಕೆಯಿಂದೆಯ್ದಿದಳ್ ಲೋಕಗುರು ರೇವಣೇಶನ ನೋಡುವವಸರದೊಳು ೨೮

ಮಿಸುನಿವಣ್ಣದ [2]ಶೋಭೆ[2]ಯಂ ಪಳಿವ ತನಂಗಳು
ಳ್ಳಸಿತ[3]ಸರ್ಪ[3]ನ ಪೋಲ್ವ ಜಡೆಗಳಿಂ ಬಾಲಶಶಿ
ಯೆಸೆದು ಥಂದದ [4]ಫಾಲ[4]ತಟದ ಭ್ರುಮರಾಳಕದ ಹೊಳೆವ ಕನ್ನಡಿಯಂ ಮೊಗದ
ಬಿಸಜಗಂಧದ ಸ್ವರ್ಣಕಲಶ ಕಠಿಣಸ್ತನವ
ಪಸರಿಸುವ ಕಾಂತಿಯುತ ನೇತ್ರಗಳ ತೆಳ್ವಸುರ
ಹಸನಾದ ಪೆಣ್ಗಳೈದಿದರು[5]ಯಸ[5]ಮಾಕ್ಷರೇಣುಕಗಂರುವ ನೋಡಲೆಂದು ೨೯

ಇನಿಯನನೆಗಲ್ದು ನೀನೇಕೆಬಂದಪೆ ಬೇಡ
ವೆನಲು ನಸುನಗುತಾತ ಮುಳಿವನೇ[6]ಯೇನಕ್ಕ[6]
ಯೆನೆ ನಿನ್ನ ರಂಗುದುಟಿ [7]ಸುಕ್ಕು[7] ಬೆಮರ್ವನಿ ಮೊಗಂ ಕೆದರ್ದ ಕೇ[8]ಶಗಳ್[8] ಮುಡಿಯ
ಮಿನುಗುಕಣ್ಗಳ ಕಡೆಯಂ ಕೆಂಪು ನೆಗಳ್ದಿಹ ಲಜ್ಜೆ
ಮನಸಿಜನ ಸಮರ[9]ದಲಸಿದ ಭಾವವಂ ಪೇಳ್ವ
ದನುವಿನಿಂದೆನೆ ಕೇಳಿ ನಾಣ್ಚಿ[9] ತಲೆಗುತ್ತಿ ನೋಡುತ್ತಿರ್ದಳೊರ್ವ ಮುಗ್ಧೆ ೩೦

[10]ಸುಲಲಿತವಿಭಾವಮಾಂತಿರುವ ತಿಲಕುಸುಮವೋ[10]
ಲಲಿತನಾಸಿಕಗಳೋ ಬಗಸೆಗಣ್ಗಳೊ [11]ಮಹೋ[11]
ತ್ಪಳಗಳೋ ನಿಂಬಪತ್ರಂಗ[12]ಳೋ[12] ಪುರ್ಬುಗಳೊ ಕಾವನುನ್ನತ ಧನುಗಳೊ
ಹೊಳೆವ ಕನ್ನಡಿಗಳೋ ಮೊಗಗಳೋ ಶಶಿಗಳೋ
[13]ತ್ರ[13]ಳಿತ ಬೆಳ್ದಿಂಗಳೋ ನಗೆಗಳೋ ಮಲ್ಲಿಗೆಗ
ಳೆಲೆವೆರೆಗಳೋ ಫಣಿಗಳಷ್ಟಮಿಯ ವಿಧುಗಳೋ ಎನಲೆಸೆದುದಬ[14]ಲೆಯರೊಳು[14] ೩೧

---

1 ಮುಂದ (ಚ) 2 ಕಾಂತಿ (ಚ) 3 ವ್ಯಾಳ (ಚ) 4 ಬಾಳ (ಚ) 5 ವಿಷ (ಚ) 6 ಯಲ್ಲಕ್ಕ (ಚ)
7 ಚಿಹ್ನ (ಚ) 8 ಶಳಿದ (ಚ) 9 ಸದಲಸದ ಭಾವಿಪೆ ಸಖಿ।ಯನುವಿನಿಂ ನಾಣ್ಚಿಯೊಡನೆಯ್ದಿ (ಚ)
10 ತಿಲಕುಸುಮದಾಯಸಂಪಗೆ ಎಸಳ್ಗಳೊ ಚೆಲ್ವ (ಚ) 11 ನೀಲೋ (ಚ) 12 ಳಂ (ಚ) 13 ಮಿ (ಚ)
14 ಲಾಜನಂ (ಚ)

ಕಂಪೆಸೆವ ಕತ್ತುರಿ ಜವಾದಿ ಮೃಗಮದವಗರು
ತಂಪೀವ ಪಚ್ಚೆಕಪ್ಪುರ ಮಲಯರುಹ [1]ನಖಂ
ಪೆಂಪುಳ್ಳ ಚಾಪಳಂ ಬಾವಂಜಿಯುಂ[1] ಶಿಲಾರಸ[2]ಸಜ್ಜ ರಸದಾಳವುಂ[2]
ನುಂಪಾದ ಶ್ರೀಗಂಧತೈಲ ಕಮ್ಮೆಣ್ಣೆ[3]ಯುಂ
ಸೊಂ[3]ಪುಳ್ಳ ಪರಿಮಳದ ಲೇಪನ[4]ವನಾಂತವರ್[4]
ಗುಂಪಾಗಿ ನಡೆತರಲ್ ವರಪುರಂ [5]ತಾನೆ ಮಘಮಘಿಸಿತೆಣ್ದೆಸೆಗಳಲ್ಲಿ[5] ೩೨

ಏಣನೇತ್ರೆಯರು ಸ್ಮರತೂ[6]ಣಾಭ[6]ಜಂಘೆಯುವ
ರಾಣಿಮುತ್ತಿನ ಸರದ ಸೊಬಗಿಯರು [7]ಸರಸಿರುಹ
ಬಾಣನಾಜ್ಞಾಧಾರಕಿಯರು ಪೊಸಪುಟದ •ಪೊಂದ•ಗಡ ಮೈವಣ್ಣದವರು[7]
ವಾಣಿಯರು ಸರ್ಪನಿಭವೇಣಿಯರು ಪಲ್ಲವ ಸು
ಪಾಣಿಯರು ರಸಿಕಕಟ್ಯಾಣಿಯರು [8]ಶಶಿಕಲೆಯ[8]
ಜಾಣೆಯರು ನೋಡಲೆಂದೆಯ್ದಿದರು ರೇವಣೇಶನ ಪುಷ್ಪಕೋತ್ಸವವನಂ ೩೩

ಎಲೆಯಕ್ಕಯಿಾ ಮಹಾತ್ಮನೆ ಸೋಮನಾಥನು
ಜ್ವಳಗರ್ಭದೊಳಗೊಗೆದ ಮೂರ್ತಿಯಿತನೆ [9]ಸರ್ವ[9]
ಕುಲತಿಲಕ ಗುರುಸಾರ್ವಭೌಮನಡಿಯಂ ಕಂಡೆ ನೀಂ ಮಹಾಧನ್ಯಳ[10]ಲ್ತೆ[10]
ನಳಿನಾಸ್ಯೆಯಾದರ್ಶನಂ ಮಾಡೆ ಪೋಪಸಂ
ಕುಳದೇಹ[11]ಧೃತ[11]ಕಿಲ್ಬಿಷಂ ಕೆಡುಗುಮೆಂದರಿದು
ವೊಲವಿನಿಂ ಬಂದೆ ಪಾದವ ಕಂಡುದಿಲ್ಲಲಾ ಜನದ ಸಂದಣಿಯಿಂದಲು ೩೪

ಚೆಲ್ಲೆಗಂಗಳ ಚಲ್ವೆ ನಲ್ಲನಂ ವುಳಿದೇತ
ಕುಲ್ಲಾಸದಿಂ ಬರ್ಪೆ ತೋರಮುಡಿ ವೊಲೆ ಜಘನ
ವೆಲ್ಲ[12]ಲಟಕಟ[12]ಸುತಿವೆ ಯೆಂತುಬಂದಪೆಯೆಂಬ ಹಾಸ್ಯದಿ ನಿತಂಬಿನಿಯರ
ಸೊಲ್ಲ ಜರಿವುತ್ತೋಡಿ[13]ಬರುವ ವೇಗಕ್ಕೆ[13] ಮುಡಿ
ಯಲ್ಲಿ ಮುಡಿದಿರ್ದಲರು ಚೆಲ್ಲೆ ಕಾಂ[14]ಚೀದಾಮ
ಮಲ್ಲಿ ಕಿರುಗಂಟೆಗಳ ಧ್ವನಿಯ ಸುಯಿಧಾನಮಂ ಬಿಡಲಾಗದ[14]ತ್ಯದ್ಭುತಂ ೩೫

---

1 ವಗಿಲಿಂ ಪುಳಜಾಪುರಂ ಯಕ್ಷಘಕರ್ದಮ (ಚ) 2 ಕದಂಬದ ಗಂಧಮಂ (ಚ) 3 ಮಹಾ।ಹೆಂ (ಚ) 4 ಸುಗಂಧಿಯರ್ (ಚ) 5 ಕಂಪನೀವುತಿರ್ದುದೆಣ್ದೆಸೆಯೊಳು (ಚ) 6 ಣೀರ (ಚ) 7 ಸುಮಪಂಚಬಾಣ ನಾಸ್ತ್ರವ ಪೋಲ್ವ ಮೊಗದ ಸುಲಿಪಲ್ಲ ಪಸರಿಸುವ ಪ್ರಭೆಯುವರು ಸರಸ (ಚ) • ಹದದ (ಗ) 8 ಬಹುಕಲಾ (ಚ) 9 ದೇವ (ಚ) 10 ಲೆ (ಕಗ) 11 ಮಲ (ಚ) 12 ನಡಿಯಿಡಿ (ಚ) 13 ನಿರಿವುಗಳು ಸಡಿಲೆ (ಚ) 14 ಚಿಯು ಮುರಿಯು।ಲೆಲ್ಲರಂ ಬಗೆಯದತಿವೇಗದಿಂ ಬಂದು ನೋಡುತ್ತಿರ್ದಳ (ಚ)

ಸೆರಗ ತೆಗೆದೇಕೆ ತಲೆಯಂ ಮುಚ್ಚೆ ಎಲೆ ಹೆಣ್ಣೆ
ಮರುಳಲಾ ನೀ ತಂಗಿ ನಿನ್ನನೊಡಗೊಂಡು ನಾಂ
ಬರಬಹುದೆ ನಗೆಯೆತ್ತ ನೋಟವೆತ್ತಲು [1]ನಿನ್ನ ಬಗೆಯ ತಿಳಿಯಲ್ಬಾರದು[1]
ಬರಿದೇತಕೆಲೆಯಕ್ಕ ಗಡಬಡಮೆನುತ್ತ ನೀ
ಜರಿವುತಿಹೆ ಬಹುಜನ[2]ದ ಘರ್ಷಣವೆ ಯೆನ್ನ[2]ವುರ
ಸಿರದ ಸೆರಗುಂ ಜಾರಿತೆಂಬ ನುಡಿಗೇಳ್ದು ನಗುತಿರ್ದರಾ ಜನರು ಮುದದಿಂ ೩೬

ಉಟ್ಟ ಪೀತಾಂಬರವ ಬಿಗಿಬಿಗಿದುಡುತ್ತ ಪಸು
ಕಿಟ್ಟ ಬಾ ತಾರಹೀರಾವಳಿಯಸರ ಜತನ
ಬಟ್ಟಗಲ್ಲದ ಮಕರಿಕೆಯ ಮರಸು ಮನಬಂದರಂ ನೋಡಬೇಡ ನೀನು
ದಿಟ್ಟೆ[3]ಯೆ[3]ವಳೆಂದು ಬಾಯ್ಮುಗ್ಗಟ್ಟುವಂ ನಿನ್ನ ಸಖ
ಯಿಟ್ಟ ಮೂರ್ತಿಯು ನೋಡಬಂದೆಯೋ ವಿಟಜನಕೆ
ದಿಟ್ಟಿಯಿಡಲೆಯ್ದಿದೆಯೊ ಎಂದು ಪೇಳಿದಳಿಂದುಮುಖಿಗೊರ್ವ[4]ಳಂಬುಜಾಸ್ಯೆ[4] ೩೭

ಜಾಣೆಯಿ ಪಣಾಂಕಧರನ ಮೂರ್ತಿಯ ಕಂಡು
ಕಾಣೆಯೋ ನಾವಿರ್ವರುಂ ಬೇಗದಿಂ ಪೋಗಿ
ಕಾಣಲೇವೇಳ್ಕಖಿಳಭುವನ ಬ್ರಹ್ಮಾಂಡ ನಿಜಕುಕ್ಷಿ ನಿಕ್ಷಿಪ್ತವಿಭುವಂ
ಏಣಲೋಚನೆ ನೋಡೆ ಬಹುಭಕ್ತಸಂಪದವ
ಮಾಣದೀಕ್ಷಿಸಿ ಮುಂದೆ ನಡೆವುತ್ತ ರಾಜ[5]ಬಲ
ಚೋಣಿಯಂ ದಾಂಟಿ ನೋಡುತ್ತಿರ್ದರಲ್ಲಿ ಕಟ್ಬಾಣಿವೆಣ್ಗಳು ಲೀಲೆಯಿಂ ೩೮

ಬಿಡದೆ ಪೊಂಬರಿಯಾಣದಲ್ಲಿ [6]ಮುತ್ತಿನ ಸಾಲ
ನಿಡುವಂತೆ ತಂಡುಲವ[6] ಪರಿಪರಿಯ ಚಿತ್ರಗಳ
ಸಡಗರದೆ ರಚಿಸಿ ತಂದಾರತಿಯನೆತ್ತಿ ಶರಣಂಬೊಕ್ಕ ಸತಿಯ ಜನಕೆ
ಮೃಡರೂಪ ಸಿದ್ಧಪುರುಷದ ದಿಟ್ಟಿಯಂ ನೋಡೆ
ತಡೆಯದಾ ಪಾತ್ರೆಯೊಳ್ ಪೊನ್ನರಾಶಿಗಳೆಸೆಯೆ
ಜಡಿವುತ್ತ ಕಳಶದಾರತಿಗಳಂ ಪಿಡಿಯಲಾರದೆ ನಡೆದರೇನೆಂಬೆನು ೩೯

---

1 ಮುಡಿಯು ಕಂಚದ ಮೇಲುದವ ನೋಡಿ (ಚ) 2 ದರ್ಶನದೊಳಿನ್ನ (ಚ) 3 ಯಿ (ಚ)
4 ಳಬುಜಾನನೆ (ಚ) 5 ಯ (ಚ) 6 ಮೌಕ್ತಿಕ ರನ್ನಗಚಣ ತಿಲತಂಡುಲದಿ (ಚ)

ಬರುವ ಪುಷ್ಪಕದ ಮುಂಗಡೆಯಲ್ಲಿ ಪೊಂಘಟದೊ
ಳಿರದೆ ಪನ್ನೀರ್ಗಳಂ ತಂದು ಚಳೆಯಂಗೊಡುವ
ವರನಿತಂಬಿನಿಯರಿಂ ರಂಗವಲ್ಲಿಯ ತುಂಬುವಂಬುಜಾನನೆಯರಿಂದ
[1]ಸ್ಥಿ[1]ರರತ್ನಮೌಕ್ತಿಕಾ[2]ದ್ಯುತ್ತಮವಿಸರ್ಜನವ[2]
ತ್ವರಿತದಿಂ ತೆಗೆದಿಡುವ ಬೆಡಗಿನಬಲೆಯರರಲ
ಸರಿಗರೆವ ಮಾಳ್ಕೆಯಿಂ ಪುಷ್ಪಾಂಜಲಿಯ [3]ಪರಮವಧುಗಳ್ ಕೊಡುತ್ತಿರ್ದರು[3] ೪೦

ನೋಡಿ ಬರ್ಪರ ಕೈಗಳಂ ಪಿಡಿದುವೊಡಗೊಂಡು
ನೋಡಲೆಂದೆಯ್ದುವರು ನೋಡಿ ಕೊಂಡಾಡಿ ಬಿಡ
ದಾಡುತಿಹರಮಿತಸಂತೋಷದಿಂ ಕುಣಿಕುಣಿದು ಬೇಡುತಿಹರಿಷ್ಟಾರ್ಥಮಂ
ನೀಡಿ ತನುಗಳನಂ ಸೈಗೆಡಹುತಿಪ ಭಕ್ತರಿಂ
ಕೂಡೆವುಡುಗೊರೆ ವಿಭೂತಿಯ ವೀಳ್ಯಮಂ ತಂದು
[4]ಮಾಡುತಿಹರೆಡೆಯ ಶರಣರ್ಗೆ ಶ್ರೀಗುರು ರೇವಣಾರಾಧ್ಯನರ್ತಿಗಾಗಿ[4] ೪೧

ಸ್ವಸ್ತಿಯಮೃತಾಂಶುಲೇಖಾಂಚಿತಶಿರಸ್ಕ ಪ್ರ
ಶಸ್ತಮುನಿಜನಹೃದಯ ಚಿಜ್ಯೋತಿರೂಪಕ ಸ
ಮಸ್ತಸಚರಾಚರಾಧಾರ ಪರಮಾನಂದ ಪರಬೊಮ್ಮ ಪರಮಾತ್ಮನೆ
ಅಸ್ತಿಭಾತಿಪ್ರಿ[5]ಯಾಕಾರಮಾತ್ರನೆನುತ್ತ[5]
ವಿಸ್ತರಿಸಿ ಬುಧರ ಸಂದೋಹಮಾನಂದದಿಂ
ಪ್ರಸ್ತುತದ ಹರಕೆಗಳನಿತ್ತು ಜಯಜಯತೆಂದು ಪಾಡಿದರ್ ಪರಮಗುರುವಂ ೪೨

ಈತೆರದೊಳತ್ಯಂತವಿಭವದಿಂ ದೀಪಿಸುವ
ಸಾತಿಶಯದುತ್ಸವಂ ಮಾಳ್ಪ ಭಕ್ತವ್ರ[6]ಜ
ಪ್ರೀತಿಯಿಂ ಬೆರೆದ[6] ಕರುಣಾಪಾಂಗದಿಂ ನೋಳ್ಪ ನೋಟಮಂ ತಿಳಿದಾಕ್ಷಣಂ
ಖ್ಯಾತಿವಡೆದಿಹ ಭಕ್ತಮಾಹೇಶ್ವರರ್ ಮಹಾ
ನೀತಿಯಿಂದೆಸೆವ ಭೂಪರ್ [7]ತಮ್ಮ ತಮ್ಮಯ [ಪ]
ದಾತಿ ಕರಿ ತುರಗ ರಥ ಸಂದೋಹದಿಂದ ಲೇಸೆನಲು ತಿರುಗಿದರು ಮುದದಿಂ[7] ೪೩

---

1 ಚಿ (ಚ) 2 ದ್ಯಂಬರ ನಿವಾಳಿಯಂ (ಚ) 3 ಮಾಳ್ಪ ಪರಮ ವಧುಗಳಿನೆಸೆದುದು (ಚ) 4 ಎಡೆ ಮಾಡುತಿಹ ಶರಣ ಸಂದಣಿಂದಲುಘೇಚಾಂಗು ಬಲರವದೆ ರೈಯ ತೋರ್ಕುಂ (ಚ) 5 ಯ ಮೂರ್ತಿ ಮಹಿಮನೆಯೆಂದು (ಚ) 6 ಜಯೆ ! ಪ್ರೀತಿಯಂದಧಿಕ (ಚ) 7 ಮಂತ್ರಿ ಮನ್ನೆಯರ ವ್ರಾತ ಕರಿಘಯ ರಥ ಪದಾತಿ ಜನ ಸಂಪದರ ಭೋರನೆ ತಿರುಗಿತಾಗ (ಚ)

ಬಂದು ಸೋಮೇಶನಾಲಯದ ಮುಂದೆಸೆಯಲ್ಲಿ
ಚಂದದಿಯಲಂಕಾರಮಾಡಿಹ ಹಜಾರದೊಳ್
ತಂದು ಮೂರ್ತಿಗೊಳಿಸಿ ಪಟಹ ನಿಸ್ಸಾಳ [1]ಡಿಂಡಿಮ ಗೋಮುಖಿಂಗಳಿಂದ
ತುಂದಿಲಧ್ವನಿಯುಳ್ಳ ಕರಡೆ ವೀರಣ ಡೋಳ್ಗ
ಳಿಂದ ಲೋಲೈಸುತ್ತ ನಾನಾವಿಶೇಷವಹ[1]
ಸುಂದರರವ ಗೀತನೃತ್ಯಗಳಿಂದ [2]ಬಿನ್ನೈಸ[2] ಪಾಡಿದರ್ ಮಂಗಳವನು ೪೪

ಮಂಗಳಂ ಮಾಂಗಲ್ಯತಾರಾಗವಾಸನಿಗ
ನಂಗಭಂಗಂಗಖಿಳ ಸ್ಥಾವರೇಶಗೆ ಸರ್ವ
ಮಂಗಳೆ ಮನೋರಮಣಗಿಷ್ಟಗಣನಾಥಂಗಭೀಷ್ಟಫಲದಾಯಕನಿಗೆ
ತುಂಗ[3]ವಿಕ್ರಮದೇವ[3]ವಂದಿತಪದಾಂಬುಜಗೆ
ಪಿಂಗಳಜಟಾಜೂಟ[4]ನಿಗೆ ಸಕಲಪಾವನಿಯ
ಗಂಗೆಯುಂ ಶಿರದೊಳಾಂತವಗೆ ಸಲ್ಲಿಂಗ[4]ತ್ರಯಂಗನಾರತ ಮಂಗಳಂ ೪೫

[5]ಉ[5]ಳ್ಳುತತಿಹರುಷದಿ ತುಳಿಲ್ಗೈದು ಭಕ್ತಾಳಿ
ಯ.ಳ್ಕರದೆ ಪುರದೊಳಿರ್ದೆಮ್ಮ ಪೊರೆವುದೆನಲ್ಕೆ
ತುಳ್ಳುತಾನಂದರಸದಿಂ ಪೇಳ್ದ ಶಿವನಿರೂಪಂ ಮೀರಿವುಳಿವುದಲ್ತು
ಬೀಳ್ಕೊಟ್ಟ ಭಕ್ತಾಳಿಗಿಷ್ಟವಸ್ತುವನಿತ್ತು
ತಳ್ಕೈಸಿ ಶರಣರಂ ಸೈತಿರಿಸಿಯಲ್ಲಿಂದ
[6]ತಳ್ಕೆಸೆವ[6] ಸಗ್ಗಿಗರವಟ್ಟೆಯಡದರ್ದಂ ಜಗದ್ಗುರು ರೇಣುಕಾಗಣೇಶಂ ೪೬

•ಶ್ರೀಪರಮಕೈಲಾಸವಾಸ ಸ್ವಯಂಜ್ಯೋತಿ
ರೂಪನಭಿನವಪರಬ್ರಹ್ಮ ಸಂಪಾದನಾ
ದೀಪಿತ ಮಹಾಚನ್ನಮಲ್ಲಿಕಾರ್ಜುನ ತನ್ನ ಪದಪದ್ಮಭೃಂಗನೆನಿಪ
ಶ್ರೀಪರ್ವತಾರ್ಯಂಗೆ ವೊರೆದ ಗುರುಕುಲಚಕ್ರ
ದೀಪಂ ಲಸತ್ಕಥಾಚಾರಿತ್ರದೊಳ್ ಕೇಳ
ಲೇಪೇಳ್ವೆನಿದರೊಳಗೆ ಒಂದನೆಯಕಾಂಡ ಸುಜ್ಞಾನಮೌಕ್ತಿಕಕರಂಡ ೪೭

---

1 ಗಿಡಿಬಿಡಿ ಡವುಡೆ ಕಂಸಾಳವುಂ ಮುಂದ ಭೇರಿಯುಂ ತಮ್ಮಟಂ ಕರದೆ ವಿರಣಂ ಸಂದ ಹೆಗ್ಗಾಳೆ ಕಹಳೆಗಳೆಲ್ಲ ಭೋರಿಡಲ್ (ಚ) 2 ಲಭಿನವಿಸೆ (ಚ) 3 ಹರ್ಯಜರೇಂದ್ರ (ಚ) 4 ಭಾಳನೇತ್ರಗೆ ಭಕ್ತರಂಗಮನ ಪ್ರಾಣದೊಳ್ ನೆಲೆಗೊಂಡ ಲಿಂಗ (ಚ) 5 ಅ (ಚ) 6 ನೀಳ್ಕುತ್ತ (ಚ)

• ಕ ಪ್ರತಿಯಲ್ಲಿ ೪೭ ನೆಯ ಪದ್ಯ ಮುಂದಿನ ಸಂಧಿಯ ಆದಿಯಲ್ಲಿ ಬಂದಿದೆ.

# ಒಂದನೆಯ ಸಂಧಿ

ಸೂಚನೆ :•

ಸಲ್ಲೀಲೆಯಿಂ ಕೊಲ್ಲಿಪಾಕಿಯಿಂ ದಕ್ಷಿಣ
ಕ್ಕುಲ್ಲಾಸದಿಂದೆಲರ್ವಟ್ಟೆ[1]ವಟ್ಟೆಯಲಿ ತಾಂ[1]
ಮೆಲ್ಲನೆ ಮಹಾಮಲಯ[2]ಶಿಖರಿಯಂ ಸಾರ್ದ[2]ಗಸ್ತ್ಯಂಗೆ ಪ್ರತ್ಯಕ್ಷವಾದಂ.

ಪಾಳುಗೆಯ್ದ್ದ ಮೂರುಪುರವ ಮುಪ್ಪಿನ ರೂಪ
ತಾಳಿ ರಾಯನ ಮಗಳ ಮುಡಿಯ ಕೊಯ್ಸಿದೆ ಚೆಲ್ವ
ಸೂಳೆ ಬೇಡರಯೆಂಜಲುಂಡೆ ಎಲುವಾಲೆಗಳ ತೊಟ್ಟು ತಲೆಯೋಡಪಿ[3] ಡಿದು[3]
ಬಾಳದಿರಿಕೆಯ ತಿರಿದೆ ಬ[4]ಕು[4]ತನಾಗುತ ಶಿರಪ
ಹೋಳುಮಾಡಿಸಿದೆ ಪಳಬರ ಮಾತ ಕೇಳಿ ನೀಂ
ಪೇಳ್[5]ಲೇನ್[5]ವಗುಣವ ಮಲ್ಲಿಕಾರ್ಜುನಲಿಂಗ ಬಾ[6]ಳುಪೆನ್ನೆ[6]ರ್ದೆವನೆಯೊಳು ೧

ಮಲಯಾವತಿಯೊಳಿರ್ದು ಲಿಂಗದಪ್ಪಣೆಯಿಂದ
ಸಲೆ ತನ್ನ ದೇಶದೊಳಗಿರ್ಪ ಸಚರಾಚರಂ
ನೆಲೆಯಾಗಿ ಹರಪೂ[7]ಜೆ ಮಾಳ್ಪುದಂ[7] ಕಂಡು ಪುರಕೈದಿ ಪರಮಾನಂದದಿಂ
ಒಲವಿನಿಂದಿರ್ದು ಶಿವಲೋಕಕ್ಕೈದುವ ಭರಂ
ಬಲಿದು ಚಿತ್ತದೊಳು ಪೂಜಿಸಿ ನುತಿಸುತಾಗಧಿಕ
ಮಲಹರಾದ್ರಿಗೆ ಪೋದ ನವಲಕ್ಷದೇಶ[8]ದಿಂ[8] ಮಲಯರಾಜೇಂದ್ರ ಸಲಹ ೨

ಕರತಳದೊಳುಜ್ವಲಿಪ ವರಯಿಷ್ಟಲಿಂಗವಂ
ನೆರೆಯನುಮಿಷಾಕ್ಷಿಯಿಂ ನೋಡೆ ತಲ್ಲಿಂಗದೊಳ್
ಪರಶಿವಂ ತಲೆಸಾಸಿರಂ ಕಣ್ಣು ಮೂರ್ಭಾಸಿರಿಭಾಸಿ[9]ರದ[9] ತೋಳ್ಗಳುಂ
ಚಿರವಿರಾಣ್ಮೂರ್ತಿಯಂದದಿ ತೋರಲೊಲವಿನಿಂ
ಪರಮಪ್ರಸಾದ[10]ದದಿಂ ತನ್ಮೂರ್ತಿಯಂ ಚಿತ್ತ[10]
ದರಮನೆಯೊ[11]ಳೊಂದಿಸಿ[11] ವಿಯಚ್ಚರಾಂಗಣಕಡರಿ ದಕ್ಷಿಣಕೆ ಮುಖವಾದನು ೩

---

1 ಮಾರ್ಗದಿಂ ಬಂದು (ಚ) 2 ಪರ್ವತಂ ನೋಡುತ್ತ (ಚ) 3 ದೆ (ಚ) 4 ಗ (ಕ) ಗು (ಚ) 5 ಬಹುದ (ಚ) 6 ಳೆನ್ನಯೆ (ಚ) 7 ಜೆಯಂ ಮಾಳ್ಪಂದ (ಚ) 8 ಸಹ (ಚ) 9 ರಂ (ಚ) 10 ದಾಂತು ತನ್ಮೂರ್ತಿ ಹೃತ್ಪಿಂಡ (ಚ) 11 ಳಿಂಬಿಟ್ಟು (ಚ)

• ಸುಜ್ಞಾನ ಕಾಂಡ (ಗ)

ಕೆಂಜೆಡೆಯು ಚೆಲ್ವ ಪವಳದ ಲತೆಗಳಂತೆ ನವ
ಮಂಜುಳದ ಸುಲಿಪಲ್ಲು [1]ಬಜ್ಜರದ ಪರಲಂತೆ[1]
ಕಂಜದಂತೆಸೆಯೆ ಮೊಗ [2]ಪೊಂಗುತ್ತೆ[2] ವಜ್ರಕುಂಡಲ ಯೋಗದಂಡ ಪೊಳೆವ
ರಂಜಿಸುವ ಪಳುಕಿನ ಮಹಾಕಮಂಡಲು ರತ್ನ
ಪುಂಜ ಮಿಸುನಿಯ ಕೌಪು ಯೋಗವಾವುಗೆಗಳಿಂ
ನಂಜುಗೊರ[3]ಲ್[3]ನ ಮೂರ್ತಿ ರೇವಣಾಸಿದ್ಧಯತಿ[4]ರಾಜ ಗಮಿಸು[4]ತ್ತಿರ್ದನು ೪

ತೊಳಪ ತ್ರಿಪುಂಡ್ರಾಕ್ಷಮಾಲೆಗಳ [5]ತೋಳ್ ನಾ[5]ಡೆ
ನಳನಳಿಸಿ ಥಾಳಿಸುವ ಮೌಕ್ತಿಕಂಗಳ ನಡುವೆ
ಥಳಥಳಿಪ ಜಪಸರಂ ಮೆರೆಯೆ ಕರದೊಳ್ ರತ್ನಕೋಟೀರಕಾಂತಿಗರೆಯೆ
ಲಲಿತಮಂದಾರಸುಮಮಳೆ ಸುರಿಯೆ ಗಂಧರ್ವ
ರಳವಟ್ಟ ಗಾನರಸವಿವಾರೆ ಜಯಜಯಯೆನ
ಲ್ಕಳಿಕಾಕ್ಷ ರೇವಣಾಸಿದ್ಧ ಚಂದನವಟ್ಟನೆಡೆಗೆಯ್ದಿದಂ ಮುದದೊಳು ೫

ಎಸೆವ ಜಲಪಾಕಭೇದದೆ ತಾಮ್ರ[6]ಪುಷ್ಪ[6]ದಂ
ತಸಮಭೂಷಣವಾದ ಮುಕ್ತಾವಳಿಯನೀವ
ಜಸವೆತ್ತ ತಾಮ್ರಪರ್ಣಿಯುಯೆಂಬ ನದಿಯು[7]ದಿಸಿತದರಿಂದಲಂ[7]ಬುನಿಧಿಗೆ
ಹಸನಾದ ತಂಬೆಲರ್ ಪುಟ್ಟಿತೆನ್ನಲ್ಲಿ ತ
ಣ್ಣಸುಗಂಧಮುಳ್ಳ ಚಂದನವನಂ ತನ್ನೊಳಗೆ
ಪಸರಿಸುವ ಪದ್ಮ[8]ದಿಂ ಮಲಯಾದ್ರಿ[8]ಪೆಸರಿನಿಂ ಸೊಂಪಡರ್ದು ಸಂಭ್ರಮಿಸಿತು ೬

ಸಿಂಗಂಗಳುಗುರ್ಗೊನೆಗಳಿಂ ಸೀಳ್ದ ಗಜಮಸ್ತ
ಕಂಗಳಿಂ ಕಡೆಗುರುಳ್ದು ಸಾಲಿಟ್ಟು ಮುತ್ತು ಶರ
ಭಂಗಳಿರದೇ ಗಂಪರಂಗಳಿಂ ಪೊರ[9]ಮಟ್ಟು ಮೃಗಗಳಂ[9] ಪೊಡೆಯೆಬಿಳ್ದ
ರಂಗುವೆತ್ತಿಹ ರನ್ನಗುಪ್ಪೆಗಳ ದಂಷ್ಟ್ರಿವ್ಯಾ
ಘ್ರಂಗಳಾಹವದೊಳುದುರ್ದೆಳೆಯ ಮೌಕ್ತಿಕದ ಜಾ
ಲಂಗಳಿಂದಗಣಿತ ಮಹಾಸಂಪದಂಬೆತ್ತು ರಾಜಿಸಿತು ಮಲಯಾಚಲಂ ೭

---

1 ವಜ್ರವರಲಗಳಂತೆ (ಚ) 2 ಪೊಂಗಂಧೆ (ಚ) 3 ಲಿ (ಗ) 4 ತುಂಗನುಸುರು (ಚ) 5 ತೋಳ್ನೊ (ಕ) 6 ಮಪ್ಪ (ಚ) 7 ದ್ಭವಿತದನಿತ್ತುವಂ (ಚ) 8 ಮಹಾಮಲಯೆಂಬ (ಚ) 9 ಟ ಮೃಗರಾಜಗಳ (ಚ)

ಬಿಡದೆ ಸಾಸಿರವರ್ಷ ತುಂಬಿದುರಿಸಿಂಗಿ ತಾ
ನೆಡೆವಿಡದೆ ಮಘಮಘಿಪ ಜಾತಿ ಚಂದನಕಂ[1]ಜ[1]ದ
ಬುಡವ ಸುತ್ತುತ ಸೈಪಿನಿಂ ಶಿರಗಳೆತ್ತಿ ಪೆ[2]ಡೆ[2]ವರಲ್ಗಳವು ಝಗಝಗಿಸಲಂ
ಪೊಡವಿಗಚ್ಚರಿಯೆನಿಪ ತೃಣಕಾಷ್ಠಜ್ಯೋತಿಗಳ
ಗಡಣವಲ್ಲಲ್ಲೊಗೆಯೆ ರತ್ನಂಗಳೆಳೆವಿಸಿಲ್
ಮಡಲಿರಿದು ಪಸರಿಸಲ್ ರನ್ನವೆಟ್ಟಿನ ಹಾಂಗೆ [3]ಭಾವಂ ಬಿಡದೆ[3] ಶೋರ್ಪುದು ೮

ಇಳಿದೆಣ್ಣೆಗಂಟು ಸೆಳೆನಡುವಿನೊಳ್ ಚೆಂದಳಿರ
ಬಳಸುಟ್ಟು ಪೊಗರೊಗುವ ಪದ್ಮಪತ್ರಗಳ ಕೋ
ಮಳ ಕಮಲಕುಟ್ಮಳಂಗಳ ಪೋಲ್ವ ಕುಚಕೆ ಕುಪ್ಪಸದೊಡು[4]ವ[4] ಕರ್ಣದೊಳಗೆ
ಲಲಿತನಗಪದ್ಮ[5]ಕೇಸರದ[5] ತಾಟಂಕವಮುವಂ
ನಳವಡಿಸಿ ಜಾಲ[6]ಗಳ[6] ಸಂಳಿಗುರುಳ್ಗೆ ತುರುಬಿ ತ
ಣ್ನೆಳಲೊಳಗೆ ವನದೇವತೆಯರೆಂಬಿನಂ ಮೆರೆದರಲ್ಲಿ ಶಬರಿಯರು ಮುದದೆ ೯

ಆನೆದೊವಲುಟ್ಟು ಸಾರಗಸಮ್ಮಕುಪ್ಪಸವಿ
ತಾನದಿಂದಳವಡಿಸಿ ಬಿದಿರ ಮೌಕ್ತಿಕಗುದಿಯ
ತಾ ನವ್ಯಕಂಬು[7]ಕಂಠಕೆ[7] ಧರಿಸಿ ಕ[8]ನ[8]ಕಕೇತಕಿಯ ಕಿವಿದೊಡವ ಮಾಡಿ
ಪೀನ ಕಠಿನೋತ್ತುಂಗ ಕಂಚಕೆ ಲೇಪಿಸಿ ಗಂಧ
ಬಾಣಬಿಲ್ಲುಗಳಾಂತು ಮಲಯಪರ್ವತ ಮಹಾ
ಕಾನನದಿ ಕಾದಲ[9]ರೊಡನೆ[9] ಚರಿಪ ಚಂಚುವೆಣ್ಣುಗಳ ಘಟನೇನೆಂಬೆನು ೧೦

ಕನ್ನೆಯೊರ್ವಳ್ ಪುಳಿಂದಿನಿ ಸಿಂಗದಲೆವಣೆಯ
ಬಿನ್ನಣದ ಸರದಿಂದ ಬೈತಲೆಯಲಂಕರಿಸಿ
ಯುನ್ನತಿಕೆಯಿಂದ ಕನ್ನೆಯ್ದಿಲಂ ಕರ್ಣಾವತಂಸಮಂ ಸೂಡಿ ಬೆಡಗಿಂ
ಚೆನ್ನೆಸೆವ ಪಲ್ಲದಲೆಯಿಂದುದುರ್ದ ಮುಕ್ತಾಳಿ
ಸನ್ನುತದ ನವಮಾಲೆ ಕುಚದ ಮೇಲಿಟ್ಟಧಿಕ
ಕಿನ್ನರಿಯ ಸೆಳ್ಕುಗುರ್ಗಳಿಂ ಬಾ[10]ಜಿ[10]ಸುತ್ತ ಗಾನವ ಪಾಡಿದಳ್ ನಲಿಯುಲಂ ೧೧

---

1 ಲ (ಗ) 2 ರೆ (ಕ) 3 ಬಾವನ್ನನಗ (ಚ) 4 ತ (ಕ) 5 ನವಕುಸುಮ (ಚ) 6 ಸುಮ(ಚ)
7 ಗ್ರೀವಕೆ (ಚ) 8 ತ (ಗ) 9 ರು ಸಹ (ಚ) 10 ಠ (ಕಗ)

ಪಸುರ್ವರ್ಣದೆಳೆಗರಿಂಕೆಯುಮೋವೆರಲೆಯುತ
ಣ್ಣಸದ ನುಣ್ದನಿಯಿಂಚರಂಗೇಳ್ದು ಕಿವಿಯು ತಾಂ
ಪಸರಿಸುತ ಪುಲ್ಗೊಂಬುದಂ ಬಿಟ್ಟು [1]ಲಾಲಿಸುತಿರುತ್ತಿರ್ದುದಾ[1] ಗಾನಕೆ
ಸಸಿನೆ ತಾರಾಪಥದೆ ಚರಿಪ ಕಿನ್ನರಮಿಥುನ
ರಸೆಗಿಳಿದು ರಾಗಮಂ ಕೇಳಿಯೆಂ ಪುಳಿಂದಸತಿ
ಪುಸಿಯಲ್ಲ ಗಂಧರ್ವ ನಾಯಕಿಯೆಯೆಂದು ಮೆಚ್ಚಿ[2]ದುದು[2] ಮುದದಿಂದ ಬಿಡದೆ ೧೨

ಬಿಡದೆ ಬದಿರಕ್ಕಿಯುಂ ತಂದು ಚಂದನವನಕೆ
ಸಡಗರದಿಯ[3]ರೆ[3]ಯ ಮೇಲಣ ಪೊರಳಿನೊಳ್ ಪೊಯ್ದು
ಅಡ್ಡಿಯ ಹಿಂದಕೆ ಮುಂದಕಿಡುತ [4]ಧ[4]ಡಧಡಿಸೆ ಕುಣಿಯೆ ಮುಡಿ[5]ವೊಲ್[5]ತೊಡೆಕದಂಪು
ಬೆಡಗಿನಿಂ ಕದಕದಿಸೆ ಪಾಡುತಂ ಸುವ್ವಾಬಿ
ಯಡವಿ[6]ಯೊಳ್ ವಿಹರಿಸುತ್ತಿರಲಾ ಧ್ವನಿಯ ಕೇಳಿ
ಕಡವೆಗಳ್ ಸೊಕ್ಕಿ ಮೇವುದನುಳಿದು ನಿಂದಿರಲ್ ನಗುತಿರ್ದರಾವೆಣ್ಗಳು[6] ೧೩

ಹರನಂತೆ ಹರಪುತ್ರನಂ[7]ತೆ ಸುಮ[7]ಬಾಣನಂ
[8]ತುರೆ ವೇದಮಾತೆಯಂತಾ[8] ಹರಿದ್ವಾರದಂ
ತಿರದೆ ಸುರ[9]ರ[9]ರೆಯನೊಲ್ ಶಚಿಯಂತೆ ಸರಸಿಯಂತಸಮ ಶೃಂಗಿಯ ಪಾಂಗಿನಿಂ
ಸುರಪನಂದನನಂತೆರಡನೆಯ [10]ಸುದ್ವೀಪ[10]ದಂ
ತುರುಸುಭಟನಂತಮೃತಕರನಂತೆ ರವಿಯಂತೆ
ಮೆರೆವ ರೌದ್ರಾನನಂ ಕಾನನಂ ಪೊಪ್ಪಿತ್ತು ಸಾಕಲ್ಯಮಾಂಗಲ್ಯದಿಂ ೧೪

ಮರ ಸಿಂಹ ಶಾರ್ದೂಲ ಶರಭಭೇರುಂಡ[11]ಗಳ್
ಕರಡಿ ಕಾಡ್ಗೋಣ ಕಾಡೆಮ್ಮೆ ಸಾರಗ ಕಡವೆ
ಕಿರಬ ಹೆಬ್ಬುಲಿ ಕೋರೆವಂದಿ ಮುಂಗಿಲಿಯೇದಂ ಮುಳ್ವಂದಿ ಗಂಡುಡುಗಳು
ಎರಳೆ ಗಂಡಕಮೃಗಂ ಚಮರೀಮೃಗಂ ನಾಭಿ
ಪರಿಮಳಮೃಗಂ ಮುಷ್ಕ ಪರಿಮೃಗಂ ಸೃಮರ
ಘೇರುಶಶ ಶಾಖಾಮೃಗಂ ಚಲಿಪುದಾದಿ ಬನದಲ್ಲಿ[11]? ೧೫

---

1 ಬಳಸುತಿರ್ದವಾ (ಚ) 2 ದರು (ಚ) 3 ದೆ (ಚ) 4 ತೊಡೆದ (ಚ) 5 ಕುಚ (ಚ) 6 ಚಂಚರ ದೇವ ಯೆರಲೆಯುಂ ಪಿಡಿದ ಪಾವುದೊಡಗಿವಿಯುಯ್ಯನೆನುತಂ ಚಲಿಸುತಿರ್ದರ್ಧಾ ವನಚರಿಯರಾ ಮಲೆ ಯೊಳು(ಚ) 7 ತರಲ (ಚ) 8 ತರಿದಾಮ್ನಮಾಭಯಂತರರೆ (ಚ) 9 ದೆ (ಕಗ) 10 ಯಸುದ್ವೀ (ಕಗ) 11 ಮುಂ । ಚಿರಗಂಡಕಂ ಕರಡಿ ಸೈರಿಭಂ ಮೃಗಧೂರ್ತ।ಕಿರಿಶಲ್ಯಗೌಥೆಯು ಕೋಕ ಸಾರಂಗ ಚಮರಿ ಮೃಗಂ ಗಂಧರ್ವಪುಂಗುರುರಂ ಕುನ್ಯಂಕು ಖುಷ್ಯಂ ರಾಮಗವಯಸೃಮರಶಶಜವಾದಿ ಮಾರ್ಜಾಲ ಕತ್ತುರಿಯಂ ಮಿಗ ಕರಿಮುಖ್ಯಮೃಗಚರಿಪ ಹರವರಿಯ ಸೀಂ ಪುಣ್ಯದ ಭೂಮಿ ಯಮಿನಿಕರಕೆ (ಚ)

ಶಶಿಕಾಂತ [1]ವೇದಿಕಾಸ್ಥಲಮಯಂ ಕುಲಮಯಂ
ನಿಶಿತಾಟವಿಕತತಿಯ ಜಲಮಯಂ ಫಲಮಯಂ
ಶಶಿಧರಮಹೀರುಹದ ಮೃಗಮಯಂ ಖಗಮಯಂ ಪೊದರ್ವನೆಗಳಿರ್ಪುದಲ್ಲಿ
ಹಸನಾದ ಕೆಂಬರಲ ಖನಿಮಯಂ ಮುನಿಮಯಂ
ರಸದಾಳಿಗಳ ಮನೋಹರಮಯಂ ಶರಮಯಂ
ಬಿಸಜಾವಳಿಯ ರೇಣುಗಣಮಯಂ ಗುಣಮಯಂ ಪೊಳ್ತುದಾ ವಿಪಿನವಳಯಂ[1] ೧೬

[2]ಪಾರಿವಾಳವು ಕೂಕಿ ಹಂಗ ಶುಕ ಪಿಕ ಕೇಕಿ
ಕಾರಂಡ ಕೆಂಬೂತ ಕಾಗೆ ತಿತ್ತಿರಿ ಹರಡೆ
ಸಾರಸಂ ಹದ್ದು ಗಿಡುಗಂ ಬಿಜ್ಜು ಗರುಡ ರಣಹದ್ದು ನಾಡಾಡಿ ಹದ್ದು
ಚೀರಿಕೆ ಚಕೋರ ಕುರರಂ ಹಂಸ ಟಿಟ್ಟಿಭಂ
ಗೇರಂಜ ಕೆಂಪಲಾವುಗೆ ಕಾಡೆ ಶಿಪಿಲೆ ಕ
ಮ್ಮಾರ ಕಾಗೆಯು ಕೊಂಗ ಕಾಡ್ಕೋಳಿ ಪಿಕ್ಕಳಂ ಕಬ್ಬಕ್ಕಿಗಳ್ ನೆರೆದವು[2] ೧೭

*ಬೀಸಂವಲೆ ಸವಡಿವಲೆ ತೊಡರುವಲೆಯೊಡ್ಡುವಲೆ
ಹಾಸುವಲೆ ಕಟ್ಟುವಲೆಯುಳಿವಲೆ ಪರಂಪುವಲೆ
ಸೂಸುವಲೆ ದಡಿವಲೆಗಳಿಂದ ಜಗಿರಿನ ಕೋಲ್ಗಳಿಂದ ಜಗಿರಿನ ಜವಳೆಯಿಂ
ಹಾಸನೂರಿದ ನಾಯ್ಗಳಿಂದ ಗಿಡುಗಗಳಿಂದ
ಪೈಸರದ ತುಂಡು ಡೊಣ್ಣೆಗಳಿಂದ ನಾರನಿಡು
ಕಾಸೆಗಳ ಚಲ್ಲಣಗಳಿಂ ತೊಗಲ್ಟೋಪಿಯಿಂದೊಪ್ಪಿತಲ್ಲಿರುವ ಬೇಡಂ ೧೮

ತೊಗಲ ಕುಪ್ಪಸ [3]ಕೆಂಚು[3] ಜುಂಜದಲೆ ಕೆಮ್ಮಾಸೆ
[4]ಬಗಲ್ಪೈದಿದೆಲವು ಕಾರೊಡಲಂ ಬತ್ತಿದಯೆಂದೆಯು
ಜಗತಿ ನಿಗುರಿದ ಕುಸಿದ ಕೊರಲು[4] ಬೆನ್ನಿನ ಕೂನು ಡೊಂಕುನಡು ಕೊಂಕುಗೈಯು
ಪೆಗಲ ಹೆಬ್ಬಲೆಕೈಯ ಬಡಿಗೋಲು [5]ಮರಬಿಲ್ಲು
ಬಿಗಿದ ಹಾಸಿನ ನಾಯ್ಗಳೆಡಗೈಯಲಗಡುತ
ಮೃಗಲದಿರಲಾ ಪುಳಿಂದರು ಮಲಯವಿಪಿನ[5]ದಲಲ್ಲಲ್ಲಿ ಕಂಗೆಸೆದರು ೧೯

---

1 ಶರಪೂರ್ಣ ಡೋಣೆಮಯಂ ಕಣೆಮಯಂ ರಸವೊಸರ್ವ ಮಧುರಯುತ ಫಲಮಯಂ ಜಲಮಯಂ। ಪಸರಿ ಮಘಮಘಿಸುತಿಹ ಪೂಮಯಂ ಸೋಮಯಂ ಗುಚ್ಛಮಯುಮುಂ ಭಸಿತಭೂಷಿದ ದೇಹ ಮುನಿಮಯಂ ಜನಮಯಂ ಮುಸುರಿ ಝೇಂಕರಿಸುತಿಹ ಅಳಿಮಯಂ ಗಿಳಿಮಯಂ ಎಸಕದಿಂ ನರ್ತಿಸುವ ಶಿಖಿಮಯಂ ಪಿಕಮಯಂ ಕಂಗೆಸೆದವಾ ನಗದೊಳು (ಚ) 2 ಪಾರಾವತಂ ಪತ್ರಿ ಗೌಜು ಹಂಗಂ ಕಂಕ ಸಾರಂಗ ಹಾಂಗಾಗೆ ವಾಯಸಂ ಚಟಕಕಾಕಾರಾತಿ ಟಿಟ್ಟಿಭಮುಹುರಡೆವನಪ್ರಿಯ ಚರಣಾಯುಧ ಚಕೋರಂಗಳುಂ। ಸಾರಸಂ ಚಕ್ರವಾಕಂ ಕ್ರೌಂಚ ಭುಜಂಗ ಭುಕ್ಕೀರ ತಿತ್ತಿರಿ ಕಕುಭ ಜಾಳಂಕಿ ರಾಯಂಚೆ ಸಾರತರ ಪಕ್ಷಿಗಳವಾಸ ಚಂಚರಕೋರ ಮುನಿಜನ ಮನೋಲ್ಲಾಸಮುಂ (ಚ) 3 ಕಾಲ (ಚ) 4 ಯಗಲಾದಯೆರ್ದೆಯ ಕಾರೊಡಲ ಕೆಂಗಣ್ಣ ಪಲ್ಲೊಗೆದ ಕಿನಕಿ ಕುಸಿದ ಕೊರಲ (ಚ) 5 ಬಿಲ್ಲು ಬಾಣಗಲದಿಹ ಕುಕ್ಕುರಗಳೊಡಗೊಂಡ ಗಿಡುಗಲಗಡುಗಳಾಂತ ಬಿಲ್ಲರುರೆ ಮಲಯಪರ್ವತವಿಪಿನ (ಚ)

* ಚ ಪ್ರತಿಯಲ್ಲಿ ೧೮ ನೆಯ ಪದ್ಯವಿಲ್ಲ

ಆ ಗಿರಿನಿತಂಬಗಹ್ವರಗಳೊಳ್ ಶಶಿಬಿಂಬ
ವಾ ಗಗ[1]ನಮಣಿಬಿಂಬ ತೋರದಂದದಿ ಬೆಳೆದಂ
ಬೀಗಿದರ್ ಪೊರವನೆಯಂ ಕೆಂದಳಿರವಾಸಿನೊಳ್[1] ಮಘಮಘಿಪ ಕುಸುಮಂಗಳು
[2]ನಾಗೇಂದ್ರಮಸ್ತಕಮಣಿಪ್ರಭೆಗಳೊಳ್ ದೇವ[2]
ನಾಗ ಗಂಧರ್ವ ಕಿಂಪುರುಷ ಕಿನ್ನರ ಮಿಥುನ
ಯೋಗಭೋಗಸಂರಾಗರಚನೆಯಿಂ ಸುಸಿಲ ಸುಗ್ಗಿಯೊಳೆಸೆ[3]ದಃದಾ[3] ನಗದೊಳು ೨೦

ತಳಿರ್ಗಾಸೆಯುಟ್ಟು ಪುಲಿಸಮ್ಮಕುಪ್ಪಸವ ತೊ
ಟ್ಟೊಪ್ಪಲವಿನಿಂ ದಂತದೋಲೆಯ ಸೂಡಿ ಮಿಡಿವಿಲ್ಲ
ಲಲಿತಕರದೊಳ್ಪಿಡಿದಿರಲ್ಕಾ[4]ಗಲಾನೆ[4]ದಲೆವಣಿ ಮಿಂಟೆ ಬಾ[5]ನಿನೆಡೆಯಂ[5]
ಥಳಿಲನೆ ಮುಸುಂಕಿ ಬೀಳಲ್ಕರುಣ ಶ್ವೇತಮಯ
ಮಳೆಗರೆದ[6]ವೊಲ್ ತೋರಲಲ್ಲಿರುವ ಮುಗ್ಧೆಯರ್
ಜಲಕೇಳಿಯಂ ಮಾಡಲೆಳಸಿ ತಮ್ಮಯ ನಲ್ಲರಂ ಕರವರೇನದ್ಭುತಂ[6] ೨೧

ಕರಿಪೋದ ತಾಣವಿದೆ ಸೈರಿಭಂ ಮಲಗಿರ್ದ
ಕುರುಂಪಿದೆ [7]ಪದದ ಚಿಹ್ನವಿಂದೆ ಕಿಟಿಯ[7] ಮೃಗಧೂರ್ತ
ಮಿರದಿರ್ದ ಪೊದರಿದೆ ಜವಾದಿಕತ್ತುರಿಯ ಮಿಗನಿಂದ ಹಕ್ಕಿಯ ಕುರುಂಪಿದೆ
ಹರಿಯುಗುರ್ ಪಜ್ಜೆಯಿದೆ ಮದದಂಬುವಿದೆ ಬಾಯಿ
ನೊರೆಯಿದೆಕೊ [8]ಶರಭಗಳ ನೋಡೆಂದು •ತಮ್ಮ•ವರಿ
ಗಿರದೆ ತೋರುತ್ತಲಾಯಾ ಕಿರಾತರ ಪಿಂಡು ಮಂಡಳಿಸಿಕೊಂಡಿರ್ಪುದು[8] ೨೨

ನಿಡುಗಯ್ಯನಿಭ[9]ತತಿಗೆ ಮಧ್ಯಮಂ ಮೃಗಜಾಲ
ದೊಡೆಯಂಗೆ ಚಮರೀಮೃಗಂಗಳ್ಗೆ ಕೇಶಮಂ
ಬಿಡದೆ ಲಂಘಿಸಿ ಬೆದರಿ ಹಿಂಗಡೆಗೆ ತಿರುಗಿ ನೋಡುವ ಪುಲ್ಲೆಗಂ ನೇತ್ರಮಂ
ಕಡಗಮಂ ಕೋರೆವಂದಿಗೆ ಗುಂಜೆಯಿಂ ರಚಿಸಿ
ದೊಡವೆಗಳ ಸೈರಿಭಂಗಳಿಗೆ ತೋರಿಸಿವೇಡ
ರೊಡತಿಯರ್ ನಗುವದಂ ಕಂಡು ನೋಡದರೊಳರೆ ಮಿಗೆ ಬೇಡಿನೊಳ್ ತರುಣರು[9]
೨೩

---

1 ನ್ಮಣಿ ಕಿರಣಾಭೇದ್ಯ ಕುಜ ಪೊದರೊಳತಿರಾಗದಿಂದರಲ್ದು (ಚ) 2 ರಾಗಯುತ ಸಿಂಗದಲೆವಣಿ ಬೆಳಗಿನಲ್ಲಿ ಮಹಾ (ಚ) 3 ದರಾ (ಚ) 4 ನೆ ಸಿಂಗ (ಚ) 5 ನ್ಮಂಡಲಂ (ಚ) 6 ವೊಲಲ್ಲನಂಗಸತಿಯ ವೆರಸಿ ಮಲಯಾದ್ರಿಯಲ್ಲಿ ಜಲಕ್ರೀಡೆಯಾಡಿದ ಪಾಂಗಿನಿಂದೆಸೆದವತ್ಯದ್ಭುತಂ (ಚ) 7 ಮಹಾಯೆಕ್ಕ ಲಡಿಯಿವೆಕೊ (ಚ) 8 ಪಂಕಚಿಹ್ನಗಬ್ಬು ಗಂಧವದೆ ವರ ಪುಳಿಂದರ್ ನೆಲೆಯ ..ತಲ್ಲಲ್ಲಿ ಖೋ ಎಂದು ಬೇಂಟೆಯೊಳೆಸೆದರು (ಚ) • ವಂದು (ಚ) 9 ಕಿರಳ್ ಬೆರಲ್ಗಳಂ ಕವಲಿರಿದಡರ್ದ ಮಿಗಜಾತಿಗೆ ಮೃಗೇಂದ್ರಂಗೆ ಮದ್ಯಮಂ ಸಡಗರದ ನುಂಗುರುಳ್ಗೊಂಗಲಂ ಚಮರಿಗ್ಯೆ ಬಾಯಿ ತೋರ್ಕೆ ಗವಾರಾತಿಗೆ ಎಡವಿಡದ ನೇತ್ರ ಚಂಚಲ ಪುಲ್ಲೆಗಂ ಪಂದಿಗಡಣಕ್ಕೆ ಮೊಳಗ್ಯೆಯಕುದ್ದಾಲ ಸಜ್ಜೆಗಳ ಬಿಡದೆ ತೋರುವ ಪ್ರೌಢ ಬಿಯದರೊಪ್ಪಿದರಡವಿಯಲ್ಲಿ ಬೇಂಟೆಯನಾಡುತ (ಚ)

ಬೆದರ್ದು ನಿಡಿದಾಗಿ ಸರಳಿಪ ಪುಲ್ಲೆ ಜುಣುಗುತಿ
ಪದಟವ್ಯೃಗಧೂರ್ತವೋಡುವ ವೊಲಂ ಯಿದಿರಾಂತು
ಮದದಿ ಮಾರ್ವುಲೆವ ಪೆರ್ಮರೆ ತಿರಿಗಿ [1]ಜಂಘೆಯಂ ತೂಗುತ್ತಿರುವ ಪಂದಿಯು
ಪದದ ಹತಿ[1]ಯಾಲಿಸುವ ಹಸ್ತಿ ಲಂಘಿಪ ಕೋಕ
ಹದುಗು[2]ತಿಹ[2] ಪೆರ್ಬುಲಿಯು ಮುರಿದೆಳ್ದು ಗರ್ಜಿಸುವ
ಸದವಳಮೃಗೇಂ[3]ದ್ರನಿದೆಯಿದೆ ಯೆಂದು ಬೇಡು ತಾನೇ[3]ಮುಸುಕಿತಾ ವನವನು ೨೪

ತೊಡರ್ಚು ಸರಳ್ಗಳ ಬೇಗ ನಾಯ್ಗಳಂ ಪಾಸಳಿದು
ಬಿಡು ಜವದೊಳಾರ್ದಸು ವ್ಯೃಗೇಂದ್ರನಂ ಸುತ್ತಿಯೆಡೆ
ವಿಡದೆ ಮುಂದಕೆ ಪತ್ತಿ ಬೊಬ್ಬಿಡುತ ಹೇರಿಟ್ಟಿಯಿಂದಿರಿ ಗಜೇಂದ್ರನಧಿಕ
ಬಡಿಗೋಲ್ಗಳಿಂದಿಡಿ ವೊಲಂಗಳಂ ಪುಲ್ಲೆಗಳ
ಜಡಿದಿರ್ದ ಗುಂಡಿನಿಂ ಕೆಡಪು ಖಡ್ಗಿಯನೆನು
ತ್ರಡಿಗಡಿಗೆಯಾರ್ಭಡಿಪ ಭಿಲ್ಲರ[4]ಲ್ಲಿಯ[4] ತಂಡವೆಸೆದುದಾ ಕಾನನದೊಳು ೨೫

ಮತ್ತೊರ್ವ ಲುಬ್ಧಕಂ ಕಿಟಿಯ ಕಾಣುತ್ತ ತಾಂ
ಬತ್ತಳಿಕೆಯಿಂ ಬಾಣಗೊಂಡು ಸಂಧಾನಿಸು
ತ್ತಿತ್ತ ತಿರುಗೆಲೆಯೆಂಬ ಮಾತು ಬಾಯೊಳ್ ನುಡಿಯೆ ಮುನ್ನ ಖೇದಂದಳಿವುತ
ಚಿತ್ತದೊಳ್ ಕಿಡಿಕಿಡಿಗಳುದುರೆ ಕಂಗಳೊಳು ಮಸೆ
ವುತ್ತ ದಾಡೆಯ ಫಿರಂಗಿಯ ಗುಂಡು ಪೊರಟವೋ
ಲತ್ತ[5]ಲಾ[5]ರ್ದೆಸೆಯೆ ದಂಷ್ಟ್ರದಿ ಪೊಯ್ಯೆ ಮಡಿದ[6]ನಾಕೊಡಲಾಕ್ಷ[6]ಣ ಶಬರನು ೨೬

ಪಣೆಯ ಮೇಲಣ ಗಾಯದರುಣಾಂಬುಧಾರೆಯಂ
ಯೆಣಿಸದ್ಯೆದುತ್ತಿರಲ್ ಕಂಡೊರ್ವ ಬಿಯದ ತಾಂ
ಹೊಣಕೆಯಿಂ ಶಬರನಸುಗೊಂಡು ಪೋಪೆಯೊ ನಿಲ್ಲುನಿಲ್ಲೆನುತ ಕುರುಚಿಟ್ಟೆಯಿಂ
ಬಣೆತೆಯಿಂ ಬಾಯೊಳಿಡೆ ತಲೆಯೊಳದು ತಟ್ಟುಗಿಯೆ
ಸೊಣಗ ಸಂದಣಿಸಿ ಪಿಡಿಯಲ್ ಪೊಣರ್ಚುತ ಬಿಡದೆ
ಹೆಣಗಲದ ಕತ್ತಿಯಿಂ ಕಡಿಯೆ ಬಿದ್ದುದು ಸೈರಿಭಂ ಕೆಡೆದ ಮಾಳ್ಕೆಯಿಂದ ೨೭

---

1 ನಿಂದು ಜಂಘೆಯು ತೂಗುವೆಕ್ಕಲಿಗನುಂ। ಗದಿತಧ್ವನಿ (ಚ) 2 ವತಿ (ಚ) 3 ದ್ರಾದಿತೋರೆ ಬೇಡರ ಬೇಂಟೆರವ (ಚ) 4 ಮಹಾ (ಚ) 5 ಲೆಯ್ದುಲ್ಲಾ (ಚ) 6 ನಾಕ್ಷ (ಚ)

ಬಾಲಮಂ [1]ಬ[1]ಡಿವುತ್ತ [2]ಪಿಂಗಾಲ ಕಣ್ಣಿನಿಂ[2]
ದಾಲೋಕಿಸುತ್ತ ಮಂೂಗರಳಿಸುತ ಮಿಾಸೆಯಂ
ಚಾಲನಂಗೆಯ್ಯುತ್ತ ಬಲುದಲೆಯ ತೋರಿ ದೇಹವ ತಗ್ಗಿಸುತ್ತ ಹದಿಗಿ
ಕಾಲ ಸಾರ್ಚುತ ಧರೆಯೊಳಾನನಂ [3]ಗಂಟಿ[3]ಕ್ಕು
ತಾಲಸ್ಯಮುಳಿದು ಮನನಲಿವುತಂ ಮೆಳೆಯೊಳದಂ
[4]ಕಾಲಮೃತ್ಯುವಿನಂತೆ ಪುಲಿಯೆಂದು ಪಿಡಿದುದಾ ತನ್ನನರಸುವನೊರ್ವನಂ[4] ೨೮

ಘುಡುಘುಡಿಸೆ ಮೃಗದಂಶಕಂ ಬೆದರೆ [5]ಕವಲಂಬ
ನಿಡುವ[5] ಬಿಯದನ ತಲೆಯ ಮಿದುಳ ಚಲ್ಲಲ್ ಕಡಿದು
ಬಿಡದೆಯಬ್ಬರಿಸಲೊರ್ವಂ ಖಡ್ಗವೆತ್ತಲಾ[6]ತನ ಮೇಲೆ ನಡೆದುಬಂದಂ[6]
ಪಿಡಿ[7]ಯುತಿರುತಿರಲೊರ್ವ[7] ಹೇರಿಟ್ಟಿಗೊಂಡದರ
ನಡುಯೆದೆಯೊಳಿರಿದಂ ಕೆಡಪಲ್ ಶಬರಿ [8]ಪಿಂ[8]ದಿರ್ದು
ಸಡಗರದಿಯಪ್ಪಿದಳ್ ಬೀರ[9]ಸಿರಿ ಬಂದು ತಳ್ಕೈಸುವಂತಾಗಲವನ[9] ೨೯

ಸರಸಿಜಾನನೆಯೆನಿಪ್ಪುರುಶಬರಿ ಪುಲ್ಲೆ ತಾ
ನಿರದೆ ಬೆದ[10]ರುತ[10] ಬೆರ್ಚುತದಿರ್ವ[11]ಕಣ್[11]ನಟ್ಟ ಕಿವಿ
ಸುರಿವ ಬೆಮರ್ವೆಯ್ಯಳ್ಕೆ ನಿಟ್ಟುಸಿರ್ ನಿಡಿದಾಗಿ ಲಂಘಿಸುತ್ತಿರೆ ಧನುವನಂ
ತಿರುವೇರಿಸುತ್ತೆಮ್ಮ ಮುಖವೈರಿ ಸಖನಲ್ಲ
ದಿರದೆ ಕಣ್ಗೆಣೆ ನಿನ್ನ ಕಣ್ಣೆನಂತಾರ್ದದಂ
ಸರಳಿನಿಂದಿಟ್ಟು ಕೆಡಪಲ್ ಪುಳಿಂದಂ [12]ನೋಡಿಯಪ್ಪಿ[12] ಚುಂಬಿಸಿದನವಳಂ ೩೦

ಕೋರಿವೇಡಿತಿ ಮುಂಗ್ಧೆಯೆಂದಳೆಲೆ ರಮಣ ನೀ
ಸಾರಂಗಗಮನೆ ಸಿಂ[13]ಹಾವಲಗ್ನೇ[13]ಯೆರಳೆಗಣ್
ನೀರೆ ಬಾರೆಂದು ಮುದ್ದಿಪೆ ಗಡಾ ಗಜಸಿಂಹ [14]ಹರಿಣಗಳ ಕೊಲಲೆ[14]ನ್ನಯ
ಸಾರ[15]ತರವಾದ ನಡೆ ನಡುಕಣ್ಗಳುರೆತಗ್ಗ
ಲಾರ್ಕೈವ ಭಾರ ನಿನದೆನಲೊರ್ವ ಶಬರ ಕೇ
ಳ್ದಾರ್ದೈದು ನಗುತ ವೆಂಚ್ಚುತ ವಿಸ್ಮಯಂಗೊಳುತ ಬೇಂಟೆಯಾಡುತ್ತಿರ್ದನು[15] ೩೧

---

1 ಪಿ (ಚ) 2 ಪೈಂಗಲ್ಯ ನೇತ್ರದಿಂ (ಚ) 3 ಗಟ್ಟಿ (ಕಗ) 4 ಸ್ಥೂಲ ಬಿಲ್ಲರ ಪಣೆಯೊ ಯಕ್ಕರಂಗಳ ತೊಡೆವ ಕಾವ್ಯಾಘ್ರನೊಲಿರ್ದುದು (ಚ) 5 ಬಾಗೊತ್ತಿ ಕಣೆ। ಇಡುವ (ಚ) 6 ಕ್ಷಣ ನಖಾಗ್ರದಿ ಕೊರಲನು(ಚ) 7 ದು ಕೀಳಲ್ಕೊರ್ಬ(ಚ) 8 ನಿಂ(ಗ) 9 ಜಯಲಕುಮಿಯಂತೇಬೆನಾಶ್ಚರ್ಯಮಂ (ಚ) 10 ರ (ಗ) 11 ಕಣೆ (ಕಗ) 12 ಕಂಡಪ್ಪಿ (ಚ) 13 ಗದ ನಡುವ (ಚ) 14 ಪುಲ್ಲೆಗಳ ಕೊಲಲ್ಕೆ (ಚ) 15 ನಡೆ ನಡು ನೇತ್ರ ಲುಪ್ತ ವಪ್ಪವುನಾಡೆ ಈರ್ಕೈದುವವನುಳಿದು ಮಿಕ್ಕಮಿಗ ಸದೆಯೆಂಬಾರಮಣಿ ಮೋಹದಿನೀವಾತ ನೆನವುತ ಬೇಂಟೆಯಾಡಿದ ಕಿರಾತನೊರ್ವಂ (ಚ)

ಮತ್ತೊರ್ವ ವಿಪಿನಚರಿಯೆಂದಳೆಲೆಯಂಕ್ಕ ನಿನ
ಗುತ್ತಮದ ಮೌಕ್ತಿಕದ ಮಾಲೆಯಿತ್ತಪೆ ನಿನ್ನ
ಚಿತ್ತವಲ್ಲಭ ಮತ್ತಗಜದ ಬೇಂಟೆಯನಾಡಿ ತರಲಿಲ್ಲವೇಯೆನಲ್ಕೆ
ವೃತ್ತಕುಂಚೆ ನಿನ್ನಿನಯು ಶಕ್ತ ನೀನಬಲೆಯೆನೆ
ತತ್ತರುಣಿ ಪಿಡಿದು ಮುತ್ತುಗಳ ನಾಂ ಕೊಡುವೆನೆನೆ
ಮತ್ತೊರ್ವ ಸತಿ ನಗಲ್ ನಾಣ್ಚಿ ತಲೆಗುತ್ತಿ ಯೋಚಿಸಿದಳೇನೆಂಬೆ ಚಿತ್ರಂ ೩೨

ವನಚರಂ ತನ್ನ ಸತಿ ಬಳೆವುತಿರೆ ದಿನದಿನ
ಕ್ಕನುನಯದಿ ಕುಚಮುರ್ಬಿ ಬಟ್ಟಿತಾಗಿರೆ ಕಂಡು
ನೆನಹಿನಿಂದವಳ ನಡೆಯುಂದಮಂ ಭಾವದೊಳ್ ಭಾವಿಸಂತ್ತತಿಮೋಹದಿಂ
ನನೆವಿಲ್ಲನಂಬಿನಿಂ ನೋವುತ್ತ ಬೇಂಟೆಯಂ
ದಿನಚರಿಯೊಳೆಸಗುವಂತೆಯ್ದಲಾ ವಿಪಿನದೊಳ್
ಘನಕುಂಭಿ ಬರೆ ನೋಡಿ ನೆಲಕೆ ಬಿಲ್ಲಂ ಬಿಟ್ಟು ಚಿತ್ರದಂತಿರ್ದ ಚಿತ್ರಂ ೩೩

ಮರೆಗಳಂ ಕಡಿವುತ್ತ ಸೈರಿಭಂಗಳನಿಟ್ಟು
ಹರಿಯ ಬಾಯೊಳಗಿರಿದು ಮೊಲಪುಲ್ಲೆಗಳ ಬಡಿದು
ಕರಿಶಿರದ ಮೌಕ್ತಿಕಂಗಳ ತೆಗೆದು ಕವಿದೆಸೆಯುತಾಲುತ್ತ ಶಾರ್ದೂಲಮಂ
ಕಿರಿಗಳಂ ಸದೆವುತ್ತ ಕೋಕಂಗಳಂ ತಿವಿದು
ತರಿವುತ್ತ ಮೃಗ[1]ಧೂರ್ತಮಂ ಮೃಗಂಗಳೊಳಿಂತು[1]
ಗಿರಿನಿತಂಬದೊಳೆಸಗುತಿರ್ಪ ಬೇಡರ ಬಲಂ [2]ಕಾಲಸೇನೆಯೊಲೆ[2]ಸೆದಂದಂ ೩೪

ಈತೆರದ ಬೇಂಟೆಯಂ ಪರ್ವತದ ಮಧ್ಯದೊಳ್
ಸಾತಿಶಯದಿಂದಾಡುತಿರಲಲ್ಲಿ ಮುಂದದೆ ಯಮಿ
ಪ್ರಾತ[3]ಮಾ[3] ಶಿಖರಿ ಶೃಂಗಂಗಳೊಳ್ ವೃಕ್ಷಕೋಟರದೊಳುಂ [4]ತತ್ಕು[4]ಜಗಳ
ನೂತನದ ತಣ್ನೆಳಲಿನೊಳ್ ತಳಿರ್ವಾಸಿನಲಿ
ಖ್ಯಾತಿವೆತ್ತಿಹ ದೇವಖಾತಬಿಲದಲ್ಲಿ ಬಿಡ
ದಾತುರದೊಳತಿಕಂದರಂಗಳೊಳ್ ತಪಮೆಸಗುತಿರೆ ವಸಂತಂ ಬಂದುದು ೩೫

---

1 ವೈರಿಯ ಮಿಗಂಗಳಂ ಬೇಂಟೆ (ಚ) 2 ಕಾಲನ ಸೇನೆಯಂತೆ (ಚ) 3 ಚಂದನ (ಚ)
4 ಕು (ಚ)

ಸ್ಮರನೃಪಂ ನಲಿಯೆ ಮಧುಸೇನಾಧಿಪಂ ಬಲವ
ನಿರದೆ ಕೂಡಲ್ಕೆ ಯಮಿಗಳಿಗುಂಪದ್ರವ ಮಾಡೆ
ಮರುತೆ ದಕ್ಷಿಣದಿಂದ ತೀಡೆ ತಣ್ಣನೆ ಬಿಡದೆ ಕಾಮಿಗಳ್ ಕೊಂಡಾಡಲು
ಪರಭೃತಂಗಳ್ ಕೊರಲ್ದೆರೆದು ಕೂಗಲ್ಕೆ ಮಾ
ಮರಗಳುಂ ಕೆಂದಳಿರ್ಗಳ ಕೂಡೆ ಪೂಗಳೊಳ್
ಪರಮೆಗಳ್ ರೆಝೇಂಕರಿಸೆ ಭೋಗಿಗಳು ವಿಸ್ತರಿಸೆ ಮೆರೆದುದು ವಸಂತಕಾಲಂ ೩೬

•ನೀರಡಿಸಿ ವನಮೃಗಂಗಳು ವಿಪಿನವಿಪಿನದೊಳ್
ಚಾರಿವರಿವರಿದು ನೋಡುತ ಪಳುಕಿನೊಟ್ಟಿಲಿನ
ಸಾರಕಾಂತಿಯ ಹಸರೆಗಳಲಿ ಕಂಡಾಬಳಿಗೆ ಬಂದು ಮೊಗವಂ ಮೊಗೆಯಲು
ನೀರಾಗಲೆಳೆಯು ಗರಿಕೆಯು ಕೊನೆಗಳೊಡಗೂಡ
ಲಾರ್ಯದಂ ಮರಳಿ ಬೆಗಡೊಂದುತಿರೆ ಜನರು ಕ
ಣ್ಣಾರೆಕಂಡೆಂತುಪಯಣಂ ಪೋಪರೆನಲಾಗ ಪೊಳೆದುದಾ ಗ್ರೀಷ್ಮಕಾಲಂ ೩೭

ದುಂದುಭಿಯ ರವದಂತೆ ದ್ವಿರದ ಘಟೆ[1]ಯಂತೆ ಹರಿ[1]
ಚಂದ[2]ನದ ರುಚಿಯಂತೆ ಕೋದಂಡದಂತೆ ಹಿಮ
ಬೃಂದದಾ ಗತಿಯಂತೆ ಸೈರಿಭಗಳಂತೆ ಕಡೆಯೊಣೆಚಿನ್ನಗಳಂದದಿ[2]
ಬಂಧುರಸ್ತನಿತ[3]ಸನ್ಮೇಘಮಾಲಾತಟಿ
ನ್ಮಂದ[3]ಸುರಚಾಪವರ್ಷಾಸಾರಘನ[4]ಸಂಚ
ಯೇಂದ್ರಗೋಪಗಳಿಂದ ವರ್ಷಾಸಮಯಮಾಗ ತೋರಿತತ್ಯಾಶ್ಚರ್ಯದಿಂ[4] ೩೮

ಎಲ್ಲೆಲ್ಲಿಯುಂ ಪೊಳೆವ ಶಿಲೆಗಳಿಂ ಮಲೆಗಳಿಂ
ದೆಲ್ಲೆಲ್ಲಿ ನಿರ್ಝರಗಳದ ಗಿರಿಗಳಿಂ ದರಿಗಳಿಂ
ದೆಲ್ಲೆಲ್ಲಿಯುಂ ಚರಿಪ ತೊರೆಗಳಿಂ ಕೆರೆಗಳಿಂ ಹೊಳೆಗಳಿಂ ಕೊಳಗಳಿಂದ
ಎಲ್ಲೆಲ್ಲಿಯುಂ ಬೆಳೆದ ಹೊಲಗಳಿಂ ಫಲಗಳಿಂ
ದೆಲ್ಲೆಲ್ಲಿ [5]ಪೂವಿಡಿ[5]ದ ತೋಟದಿಂ ಕೂಟದಿಂ
ದೆಲ್ಲೆಲ್ಲಿ[6]ಯುಂ ಧರೆಯ ಸಿರಿಯನೊಳಕೊಂಡಾ[6] ಶರತ್ಕಾಲ [7]ರಾಜಿಸಿದುದು[7] ೩೯

---

1 ಯೊಲ್ ವಿಷ್ಣು (ಚ) 2 ಕದ ತೆರ ಧನುರ್ಬಾಣಗಳ ಮಳೆಯಂತೆ ಗಂಧರ್ವಗತಿಯಂತೆ ರನ್ನವಸರ ಗಳಂತೆ ಜಲಪ್ರಳಯವಾದಂದದಿಂ (ಚ) 3 ದಿಂ ಮೇಘಮಾಲಾ ಚಪಲಾಬೃಂದ (ಚ) 4 ಯಾಸನದಂದ ಜಲಶಿಲೆಯಿಂದ್ರಗೋಪ ಪಯಮಯದಿಂದ ವರ್ಷರುತು ಕಂಗೆಸೆದುದು (ಚ) 5 ಪುಷ್ಪಮಯ (ಚ) 6 ಧರೆಗಗನ ಸ್ವಚ್ಛಮಯದಿಂ (ಚ) 7 ಸಂ ಮೆರೆದುದಮಮ (ಚ)

• ಚ ಪ್ರತಿಯಲ್ಲಿ ೩೭ ನೆಯ ಪದ್ಯವಿಲ್ಲ.

ಕುಳಿರರಸಗಂಧರ್ವರಂ ಮಾಡಿ ನರರ ಸಂ
ಕುಳವಪ್ಪುಗೈಗಳಿಂ ನಿಲಿಸಿ ಮಂಡೆಯನೆರಡು
ಮೊಳಕಾಲೊಳಿರಿಸಿ ತಲೆಗೆಳಗುಮಾಡುತ ಮೊಗಮನಗ್ನಿಯಿಂ ಸುಡುತ ಮತ್ತೆ
ಘಳಿಲನೀಶನ [1]ಪಣೆಯ ತಟದೊ[1]ಳನಲನನಿರಿಸಿ
ಬಳವಂತ[2]ರಹ ಸುರರ[2] ವಹ್ನಿಮುಖರಂ ಮಾಡಿ
ಜಳಧರಾನಲ ಮರುತಗಳ ತಣ್ಪ ಮಾಡುತಿಹ ಹಿಮರಾಜನೇಂ ವೀರನೊ ೪೦

ಮಾಗಿ ಪಣ್ಣಾಗಿ ಯೆಲೆಯುಂದುರ್ದುದಾಗವಂಕುಳಂ
ಕೋಗಿ[3]ಲೆಗಳುರೆ[3] ಮೂಗುವಟ್ಟಿರ್ದವಲ್ಲಿ ಬಿಡ
ದಾಗಳಾಜಾಲಪಾಲಾಶಾದಿ ಕುಸುಮಂಗಳಟವಿಯೊಳ್ ಶೋಭಿಸಿದವು
ಭೋಗಿಗಳ್ ಮೃಷ್ಟಾನ್ನ[4]ಮಂ ಕಾರವೆರಸಿ ಕಡು[4]
ರಾಗ ತಾಂಬೂಲ[5]ಸಂ[5]ಭೋಗದಿಂ ಶೀತಮಂ
ನೀಗಿಯಾನಂದಿಸುತ್ತಿರಲಾಗ ಶಿಶಿರರುತು ಮೆರೆದುದು ಮಹಾವಿಭವದಿಂ ೪೧

ಗಿರಿಯ ಕೋಡ್ಗಲ್ಲ ತುದಿಯಲ್ಲಿ ಸೂಜಿಗಳ ಮೇ
ಲಿರದಲಗಿನಗ್ರದೊಳ್ ತಲೆಗಳಂ ಪೂರಿ ಕೆಲ
ರರೆಯಮೇಲ್ ನಾಲ್ದೆಸೆಯೊಳಗ್ನಿಯಂ [6]ಪಟು[6]ಮಾಡಿ ಕುಳಿತೈ[7]ದನೆಯಪೆಂಕಿಯೆ[7]
ಭರದಿಂದ ರವಿಕಿರಣ[8]ಮಾಗೆ ಮೃದು[8]ಪವನಮಂ
ತರಗೆಲೆಯ ಶಿಲೆಯ ಚೂರ್ಣಂಗಳಂ ಸೇವಿಸು
ತ್ತಿರರೆ ಬೇಸಿಗೆಯಲ್ಲಿಯುಗ್ರತಪಮಂ ಮಾಳ್ಪ ವರತಪೋಧನರೆಸೆದರು ೪೨

ನಿಟಿಲತಟಮಧ್ಯದೊಳ್ ಸ್ಫಟಿಕಪ್ರದೀಪದೊಲ್
ಘಟಿಸಿದಮಲಬ್ರಹ್ಮಧ್ಯಾನದೊಳ್ ನಿಂದು ಕರ
ಪುಟಗಳೂರ್ಧ್ವಕ್ಕೆತ್ತಿ ಕೆಲರೇಕಪಾದದಿಂ [9]ಸ್ವಮುಖಮಂ[9] ಮೇಲಕೆತ್ತಿ
ಸ್ಫಟಿಕಸನ್ನಿಭಮೂರ್ತಿಯಂ ಜಾನಿಸುತ್ತಮಂ
ತ್ಕಟತಪವ ಮಾಡುತ್ತ ಕಂದಮೂಲವ ಸವಿ[10]ದು[10]
ವಟವೃಕ್ಷದಡಿ[11]ಯ ವರ್ಷಾ[11]ಕಾಲದೊಳು ಮಹಾಸಂಯಮಿಗ[12]ಳಿರುತಿ[12]ರ್ದರು ೪೩

1 ಪಣಾಕರದೊ (ಚ) 2 ಸಮನಸರ (ಚ) 3 ಲಂಗಳ್ (ಚ) 4 ಕಟುಮಯದ ಉಣಿಸಿನಿಂ (ಚ)
5 ಸ್ತ್ರೀ (ಚ) 6 ಪುಟ (ಕಗ) 7 ದು ಸೂಜಿಯ ನಡುವೆ (ಚ) 8 ಮನಲಕರ (ಚ) 9 ನಿಂದುಮೊಗ (ಚ)
10 ಸಿ (ಚ) 11 ಯಲ್ಲಿ ವರ್ಷ (ಚ) 12 ಳೊಪ್ಪಿ (ಚ)

ಸರಸಿಜಾಸನ[1]ವೆ ಮೊದಲಾವಾಸನಂಗಳಂ
ವಿರಚಿಸುತ ಯೋಗವಮುದ್ರಾಪಟ್ಟಬಂಧ ಬಂ
ಧುರರಾಗಿ ಕದ್ದು ಕಂಡೆಡೆಗೆ ಯೆಡೆಯಾಡುವ ಮನಂಬಿಡಿದು ಗುರುಶಂಭುವಂ[1]
ಭರದಿಂದ ಧ್ಯಾನಿಸುತ ಮೃತ್ಯುಂಜಯಂ ಘೋರ
ಚಿರ[2]ತ್ರ್ಯಂ[2]ಬಕ ಪಂಚಬ್ರಹ್ಮ ಪಂಚಾಕ್ಷರವ
ನಿರದೆ ಗಾಯತ್ರಿಗಳ ಜಪಿಸುತ್ತ ನದಿಯ ತೀರದೊಳು ತಾಪಸರಿರ್ದರು ೪೪

ದೃತಭಸಿತ[3]ಮೇ ಚಾರು[3]ಶೃಂಗಾರಕ[4]ರ ರಸಂ
ತತಿಜಯಮೆ[4] ವೀರ [5]ಕಡೆಗಣ್ಣ ನೋಟವೆ ಕರುಣ
ವಿತತಮಾನಸನಿಗ್ರಹವೆ ವಿಸ್ಮಯಂ ಭವದ ಸಂದರ್ಶನವೆ ಹಾಸ್ಯವು
ಇತರ ಜನಸಂಗವೆಂ ಭಯಂ ವಿಷಮದಲಿ ರೌದ್ರ
ಕುತನುಸ್ಥಿತಿಯಲಿ ಬೀಭತ್ಸ ನಿಜವಿಪಿನಮೃಗ
ತತಿವೈರವಿಲ್ಲದುದೆ ಶಾಂತಿ[5] ನವರಸಮಯ[6]ದಿ ಕಣ್ಗೆ[6]ಸೆದರಾ ಮುನಿಗಳಂ ೪೫

ಅಡಿಯಂನೆಡಮಡದಿಂದವೊತ್ತೆ ಶಿವನಿಯ ಮೇಲೆ
ಮಡಗಿ ಬಲಹಿಮ್ಮಡಿಯ ಸಿದ್ಧಾಸನಂ ಬಲಿವು
ತೆಡೆವಿಡದೆಯಾಧಾರಬಂಧಮುಡ್ಯಾಣಬಂಧಂ ಬಂಧಜಾಳಾಂದರ
ದೃಢವಾದ ಬಂಧತ್ರಯಂಗಳಿಂ ಮರುತಾಗ್ನಿ
ಕುಡಿವರಿದ ತೇಜಗಳುವೂರ್ಧ್ವಕಡ[7]ರಲು[7] ನಾಭಿ
ಯೆಡೆಯ ರವಿಮಂಡಲಂ ಬೆಳಗೆ ಹೊಂದಾವರೆಯರಲ್ದುದಾನಂದದಿಂದೆ ೪೬

ಅದು ತಾನನೇಕ ರನ್ನದ [8]ಪೊನ್ನ[8]ಕಾಂತಿಯಂ
ಪದೆದಂ ಥಳಥಳಿಸುತ್ತ ಚಂದ್ರಮಂಡಲವಡರಿ
ವಿಧು ರವಿಗಳಂ ತಡೆದ ಮಧ್ಯದೊಳ್ ಕೋಟಿ ಶಶಿ ಸೂರ್ಯಾಗ್ನಿ[9]ಗಳ ಥಾಳಮಂ[9]
ಪದುಳದಿಂ ಪಳಿವ ಲಕ್ಷ್ಯಾನುಸಂಧಾನದೊಳ
ಗೊದವಿ ಮನ ಪವನಾತ್ಮರಂ ಸಮಾಧಿಯನ್ನೈದಿ
ಸಿದ ಮಹಾಮುನಿಗಳೊಪ್ಪಿರ್ದರಾ ಕುಂಭಜನ ಸಂಭ್ರಮದ ಸನ್ನಿಧಿಯೊಳು ೪೭

---

1 ಮುಖ್ಯಾಸನದೊಳಿರ್ದು ಬಂಧುರ ಶರತ್ಕಾಲ ಹಿಮತ್ಕಾಲದೊಳ್ ತುಹಿನ ಕಣವರ ಚಂದ್ರ ಶೀತಾಂಶು ಮಂಜುಲಾಹಾರಗಳಕೊಂಡು ಚಿನ್ಮಯ ಶಂಭುವಂ (ಚ) 2 ತ್ರಿಯಂ (ಗ) 3 ಮಣಿ ಮಹಾ (ಚ) 4 ರುಣಸಂ । ಹತಿಜಯಂ (ಚ) 5 ಕರುಣಾಪಾಂಗ ವಿಷಯಭಯ । ಹುತವಹ ನೀಲ ಸಲಿಲ ವರ್ಷಾತಪಂಗಳಾಚ್ಛಾವಸಂ ವದ್ಭುತವಲಾ । ನುತಮಾಯ ಸಂಸಾರಹಾಸ್ಯಭೀ।ಭತ್ಸ ಉನ್ನತ ಗ್ರಹೋಚ್ಚಾಟನಂ ದರ್ಶನ ಸುರೌದ್ರ ಮೃಗತತಿ ವೈರಯಿಲ್ಲದುಪಶಾಂತಿ (ಚ) 6 ದೆ ಕಂಗೆ (ಚ) 7 ರುತ (ಚ) 8 ಕೀರ್ಣ (ಚ) 9 ಮಿಂಚುಬಳಗಂ (ಚ)

ವೇದದೊಳ್ ಗಾಯತ್ರಿ ವರ್ಣಂಗಳೊಳ್ ನಾದ
ವೋದದಿಂ ಮಂತ್ರಂಗಳೊಳಗೆ ಶಿವಮಂತ್ರ ಮಿಗೆ
ಯೊದರದಿ [1]ಬ್ರಹ್ಮಾದಿ ಪದಗಳೊಳ್ ಲಿಂಗಪದ ಸಕಲದೇವರ್ಕಳೊಪ್ಪಿರ್ದರೊಳಗೆ
ಆದಿಪರಶಿವ ಪುರುಷರೊಳಗೆ ಪುರುಷೋತ್ತಮಂ
ಭೇದವಹ ಬಹುಮುನಿಗಳೊಳಧಿಕನಾಗಿ ಮಹ
ನಾದಾನಂಸಂಧಾನನಾಗಿ ಕಲಶಜನಖಿಳರಿಂ ಸೇವ್ಯನಾಗಿರುತ್ತ[1] ೪೮

ಇಂತು ಮುನಿಶಾರ್ದೂಲನಹ ಕುಂಭಜಂ ಮುನ್ನ
ನಂತ ಮಹಿ[2]ಮೆಯ[2] ವಿಭವದಿಂ[ದ] ದ್ರಾವಿಡದೇಶ
ದಂತಸ್ಥ ಭಾ[3]ಷೆಯಿಂ[3] ಶಾಸ್ತ್ರಂಗಳಂ ರಚಿಸಿ ವಿಷ್ಣು[4]ಪ್ರ[4]ತಿಮೆಯನು [5]ನಿಲಿಸಿ[5]
ಕಂತು[6]ಹರ[6]ನವತಾರಮಂ ಮಾಡಿ ವೈಷ್ಣವರ
[7]ಸಂತತಿಯ ಭಂಗಿಸಿ ಮಹಾಜಲಧಿಯಂ ಕರದೊ
ಳಾಂತು ಪಾವನರಾದ ಋುನಿಗಳಿಂ ಕಾವೇರಿಯುಭಯತಟದೊಳ್ ಪ್ರತಿಷ್ಠಿಸಿ ಲಿಂಗಮಂ[7]
೪೯

ಈ ತೆರದಿ ರಾಜಿಸಂತ ಘಟಸಂಭವಂ ದಕ್ಷಿ
ಣಾತೀರ ಮಲಯಶಿಖರಿಯೊಳು ಮುದದಿಂದ ತಾಂ
ಭೂತೇಶನಪ್ಪಣೆಯೊಳಾ ನಗವ ತ್ಯಜಿಸಿಬಾರದೆ ತನ್ನ ಶಿಷ್ಯಾಳಿಯಂ
ಖ್ಯಾತಿವಡೆದಿಹ ಬಹಳ ಮುನಿಗಳಂ ಕರೆದಧಿಕ
ಶೀತಾಂಶುಶೇಖರನ ಓಲಗಕ್ಕಾವಾಗ
ವೋತುಪೋಗಲ್ಬೇಹುದೆನಲವರ್ ಶರಣೆಂದು ಪೊರಮಟ್ಟರಾನಂದದಿಂ ೫೦

ಕುಳಿರ್ಗಲ್ಲಿ[8]ನುತ್ತಮ ಕಮಂಡಲುಗಳಂ ಪಿಡಿದಂ[8]
ಸುಲಿಪಲ್ಲ ಬೆಳಗು ವಿಸಟಂಬರಿವುತಿರಲು ಪ
ಜ್ಜಳಿಪ ಭಸ್ಮೋದ್ಧೂಳಿತಾಂಗದಿಂ ಮುಳ್ತುಗಂ ಮುಂಖ್ಯದಂಡಗಳನಾಂತು
ಪೊಳೆವ ತ್ರಿಪುಂಡ್ರ [9]ಭಾಳ[9]ದೆ ಗಳದ ರುದ್ರಾಕ್ಷ
ವಲಯದಿಂ ರಂಜಿಸುವ ವಲ್ಕಲಂಗಳ ಮುದದೆ
ತಳೆವುತಂ [10]ತನ್ಮುನಿಗಳ[10]ಯ್ದಿದರ್ ನಳಿನಾಕ್ಷನೊಡೆಯನೋಲೈಸಲೆಂದು ೫೧

---

1 ದೇವತೆಗಳೊಳಗೆ ಪರಶಿವ ಪುರುಷರೊಳಗೆ ಮಿಗೆ ಪುರುಷೋತ್ತಮಂ । ಶೋಧಿಸಲ್ ಶ್ರೇಷ್ಠನಾದಂತೆ ಮುನಿಗಣದೊಳಗೆ । ತಾಂ ಧನ್ಯನೆನಿಸಿ ಕಲಶಜನಾದ ಮುನಿಸಕಲವಾದ ಸೇವ್ಯನಾಗಿರುತಲಿಹನು (ಕಗ) 2 ಮಾ (ಚ) 3 ಕ್ಷಿ (ಚ) 4 ವಿನಪ್ರ (ಚ) 5 ಜಡದೆ (ಚ) 6 ಜಿತ (ಚ) 7 ಸಮಂತು ಭಂಗಿಸಿ ರತ್ನ ಖಚಿತದುಪಕರಣಂಗಳಂತುದಧಿಯಂ ಬಂಧಿಸುತ್ತಲೊಪ್ಪಿಸಿಕೊಂಡಿರ್ದನತಿಹರುಷದಿಂದೆ (ಚ) 8 ನಮಳ ಮಮೃತದ ಕಮಂಡಲು ಚೆಲ್ವ (ಚ) 9 ಫಾಲ (ಗ) 10 ತಾಂ ಶಿಷ್ಯರೆ (ಚ)

ಭರದಿಂದಲಾ ಮುನೀಶ್ವರರು ಬಾನ್ವಟ್ಟೆಯಂ
ನಿರುತದಿಂದಡರಿ ನಡೆತಂದು [1]ರಜತಾಚಲದ[1]
ವರ ಶಿಖ[2]ರವಂ[2] ಪೊಕ್ಕು ನೋಡಲ್ಕೆಯಲ್ಲಿ ಶ್ರೀಸಾಂಬನುಂ ಪ್ರಮಥಗಣರುಂ
ಇರದಿರಲ್ ಕಂಡು ಕೇಳಲ್ಕೆ ಪೇಳ್ದರ್ ಶಿವಂ
ಹರುಷದಿಂ ಗಣಪುಂಗವರ್ಗೆ ರಾಹಸ್ಯಾರ್ಥ
ದಿರವನುಪದೇಶಿಸಲ್ ಮಂದರಾದ್ರಿಗೆ ಪೋದರೆನೆ ಕೇಳ್ದು ಮರಳ್ದರಾಗ ೫೨

ಬಂಧು [3]ಪುತ್ರಾದಿ[3] ಮುನಿಗಣರೆಲ್ಲರೆಯ್ತಂದಂ
ವಂದಿಸುತ್ತಾಗ ಲೋಪಾಮುದ್ರೆಯರಸ ಗಾ
ನಂದದಿಂದುಸುರ್ದರೀಶಂ ಸಕಲ ಶಿವಗಣಂಗಳ್ಗೆಯತಿ ಮುದದಿ ಬಿಡದೆ
ಚಂದದಿಂ ಪರಮ ರಾಹಸ್ಯಮಂ ಬೋಧಿಸ
ಲ್ಕೆಂದು ತಾರಾಚಲಮನುಳಿದು ಮಂದರ ನಗಕೆ
ಸ್ಕಂದನಂದಿಪ್ರಮಥ[4]ರಿಂ[4] ಪೋದ[5]ನ[5]ಲ್ಲಿಲ್ಲ ವರತಪೋಧನನೆ ಕೇ[6]ಳ್ದು[6] ೫೩

ಇಂತೆಂದು ಪೇಳಲಾ ವಚನಮಂ ಕೇಳ್ದಧಿಕ
ಚಿಂತೆಯೊಳಗೊಂದಿ ಮನದೊಳಗೆ ಯೋಚಿಸುತಲದ
ರಂತಸ್ಥಮಾವುದದ ಮುನ್ನುಸುರ್ದರಾರಾ ಪರಮ ರಾಹಸ್ಯಮೆಂಬ
ಚಿಂತೆಯಿಾ ನಾಮವಾರಿಂದಾಯ್ತು ಯಿದರೊಳ
ತ್ಯಂತ ಭೇದಾಭೇದಮೇನುಂಟು ಶಿವ ಬಲ್ಲ
ಸಂತಸದೊಳಾಂ ಕೇಳ್ವೆನೆಂದೆನುತ್ತಾಗ ಹೃದಯದೊಳು ಯತ್ನೀಕರಿಸಿದಂ ೫೪

ಆವ ವಿಧದಿಂದಲೆನಗಪ್ಪುದೋ ಶಿವಶಿವಾ
ದೇವ ದಾನವ ಮಾನವರ್ಗತಿ ರಹಸ್ಯವಹ
ಮಾವರಾದ್ಯರ್ಗುಸುರಬಾರದೆಂಬಮಲತರ ವೀರಶೈವಾಚಾರಮಂ
ಸಾವಧಾನದೊಳು ಪೇಳುವ ಗುಹ್ಯತರವಾದ
ಪಾವನಾತ್ಮಕ ಪರಬ್ರಹ್ಮಮಯ ಶಾಸ್ತ್ರಮಂ
ಭಾವಜಾರಿಯ ಕೃಪಾಶೇಷಮಂ ಪಡೆ[7]ದಾಗದೆಂದೆಣಿಸಿ ಚಿತ್ತದೊಳಗೆ[7] ೫೫

---

1 ಮಹಕೈಲಾಸ (ಚ) 2 ರಿಯಂ (ಚ) 3 ಪುಷ್ಪಾಳಿ (ಚ) 4 ಸಹ (ಚ) 5 ರ (ಚ) 6 ಳು (ಚ) 7 ದಲ್ಲದೆಂದತಿ ಮುದದೊಳು (ಚ)

ವರತಪೋಧನ ಕುಂಭಜಂ ಮುನ್ನ [1]ತಾನಿರ್ದ[1]
ಪರಮಯೇಕಾಂತವಹ ಸ್ಥಲದೊಳಗೆ ಮಂಡಿಸಂತ
ಕರಣೇಂದ್ರಿಯಂಗಳಂ ಕಟ್ಟಿ ಮಾಯಾಮೋಹಮಂ ಮರೆದು ವಿಷಯಾಳಿಯಂ
ಜರೆದು ಮನವಂ ಪರಮ ನಿರುಪಾಧಿ ಜ್ಯೋತಿಯೊಳ್
ಬೆರಗೊಂದಿಯಖಿಳ ಫ[2]ಲ[2]ಪದಕಾಂಕ್ಷೆಯಂ ಮಿರಿ
ಯರರೆ ಹರಚರಣಾರವಿಂದಧ್ಯಾನದೊಳು ತಪಮೆಸಗುತಿ[3]ರ್ದಂ ಕಲಶಜಂ[3] ೫೬

ಅತಿನಿಷ್ಠೆಯಿಂ [4]ಜಿತಮದನ[4]ನಾಗಿ ಭಸ್ಮ[5]ಸಂ
ವೃತ[5]ಗಾತ್ರನಾಗಿ ಸಂರ[6]ತರುವ[6] ತಣ್ಣೆಳಲೊಳಗೆ
ಮಿತವಾಗಿ ಪರ್ಣಾಶನಂಗೊಂಡು ತನುಶೋಷಣಂ ಮಾಡಿ ತಪಿಪ ತಪದ
ವ್ರತವ [7]ನೆಗ[7]ಳ್ದಾ ನಂದಿಯಿಂದ ಶಿವ ತನ್ನವು
ನ್ನತವಾದ ಚಿತ್ಕಳಾಮೂರ್ತಿಯಂ ಕರೆದು ನೀಂ
ಕ್ಷಿತಿಗೆ ಪೋಪಿರಿಯಲ್ಲಿ ಮಲಯಪರ್ವತಮುಂಟದರೊಳಗೆ ಮಹಾಶೈವನು ೫೭

ಮುನಿಜನೋತ್ತಮಂನು ಯಮಿ ಶಾರ್ದೂಲ ಕುಂಭಜಂ
ಘನತಪವನೆಸಗುತಿಹ ವರರಹಸ್ಯಂ ಕುರಿತು
ಮನುವಿನಿಂದಾತಂಗೆ ಬೋಧಿಸುವುದೆಂ[8]ದು ಪೇಳಲು ಶಿವನಂ[8] ಸಿದ್ಧ ತಿಲಕಂ
ಘನಮಾರ್ಗದಿಂದ ಚಂದನ[9]ಶಿಖರಿಯಂ[9]ದಮಂ
ಮನವೊಲ್ದು ನಿಟ್ಟಿಸುತೆ ಬರಬರಲ್ ಮುನಿ[10]ಯಿರ್ದ
ವನದೊ[10]ಳಗೆ ಪೊಳಪುದೋರಿತು ಮೇಘದೊಳ್ ಮಿಂಚು ಸಂಚಲಿಸುವಂದದಿಂದೆ ೫೮

ಆ ಸಮಯದೊಳ್ ತಪೋಧ್ಯಾನ ಪರವಶಭಾವ
ದಾಸ[11]ಕ್ತಿಯಿಂ[11] ಪೊಲ್ಲಮೆಲ್ಲನೆಚ್ಚರಂತೆ ಮನ
ಭಾಸುರದ ಮಂತ್ರಮಂ ಸ್ಮರಿಸುತ್ತ ನೇತ್ರದ್ವ[12]ಯಗಳರಳಿಸುತ್ತ[12] ಮುದದಿಂ
ಲೇಸಿನಿಂದೆಡಬಲಂ ಯೂರ್ಧ್ವಕ್ಕೆ ನಯನದ್ಯುತಿ
ಸೂಸೆ ಕಂಡಾಕ್ಷಣಂಯೆಳ್ದು ನಿಲ್ಲುತೆ [13]ಮಹಾ[13]
ತೋಷನಾಗಡ್ಡಬಿಳ್ದೇಳುತ್ತಲಡ್ಡಬೀಳುತಲೇಳುತತಿಭಯದೊಳು ೫೯

---

1 ತಪಮಾಳ್ಪ (ಚ) 2 ರ (ಗ) 3 ರ್ದತಿಥಿರಾಜಂ (ಚ) 4 ಮದನಜಿತ (ಚ) 5 ಧೂ।ಳಿತ (ಚ) 6 ದ್ರುಮದ (ಚ) 7 ಗೇ (ಚ) 8 ಬನಿಯಮದೊಳು ಶಿವ (ಚ) 9 ಮೆಟ್ಟಿನಂ (ಚ) 10 ಯಿರ್ದೆಯ। ಮನೆಯೊ (ಚ) 11 ಭಕ್ತಿಯಿಂ (ಚ) 12 ಯಂಗಳರಳಿಸುತ (ಚ) 13 ಮರಳಿ (ಚ)

ನಾನು ಧನ್ಯಂ ಧನ್ಯನೆನಂತ ಬದ್ಧಾಂಜಲಿಯ
ನಾ ನವ್ಯಶಿರದೊಳಾನಂತ್ತ ನಲಿವುತ ಮನದೆ
ಜ್ಞಾನನಿಧಿಯತ್ಯಂತ ಹರುಷವಾರ್ಧಿಯೊಳಾಳುತೇಳುತ್ತಲಿರಲಾಕ್ಷಣಂ
ಸಾನುರಾಗದೊಳಖಿಳ ಮೌನಿಗಳ್ ಜಪತಪ
ಧ್ಯಾನಯೋಗಾದಿ ಕ್ರಿಯೆಗಳ ಸಮಾಧಿಯಂ ಮೌನ
ನಾನಾವಿಚಿತ್ರತರ ಕರ್ಮಗಳನುಳಿದು ಪೊ[1]ಡ[1]ಮಟ್ಟರಾನಂದದಿಂದೆ ೬೦

ಕೆಲರು ನಲಿವುತ ಕೆಲರ್ ಕುಲಿಲಿಯೆಂದುಲಿವುತ್ತ
ಕೆಲರಂ ಕೃಷ್ಣಾಜಿ[2]ನಂಗಳ ಮೇಲೆ ಹಾರಿಸುತ[2]
ಕೆಲರು ಕುಣಿ[3]ದಾಡುತ್ತ[3] ಕೆಲರರ್ಘ್ಯಪಾದ್ಯಂಗಳಂ ಕೊಡುತ್ತಾನಂದದಿಂ
ಕೆಲರುಘೇಯುಘೆ ಚಾಂಗು ಭಲರೆ ಭಾಪುರೆಯೆನುತ
ಕೆಲರಂ ಮಂತ್ರಾಕ್ಷತೆಯಂ [4]ಮಳೆಯ ಸೈಗರೆವುತ್ತ[4]
ಕೆಲರು ಪುಷ್ಪಾಂಜಲಿಯನೀವುತ್ತ ಜಯಜಯ ಮಹಾದೇವಯೆನುತಿರ್ದರು ೬೧

ಕಂಡೆ [5]ದಕ್ಷಾಧ್ವರವಿಘಾಲನಂ ಶ್ರೀಲನಂ[5]
ಕಂಡೆ [6]ನಿಗಮಾಗಮ ಸ್ತೋತ್ರನಂ ಚೈತ್ರನಂ[6]
ಕಂಡೆ [7]ಕಾಮಿತಫಲವನೀವನಂ ದೇವನಂ ಸಕಲಜೀವಾಧಾರನಂ[7]
ಕಂಡೆ[8]ನಾನಂದರಸಸಾರನಂ ಧೀರನಂ[8]
ಕಂಡೆ [9]ಷಟ್ಸ್ಥಲಕೋಶದೀಶನಂ ಯಿಶನಂ[9]
ಕಂಡೆ[10]ನೆನ್ನಿಷ್ಟಫಲದಾಯಕನ ನಾಯಕನನೆಂದು ನುತಿಸಿದ ಮುನಿವರಂ[10] ೬೨

ಇಂತೆಂದು ನಂತಿಸುವ ಮುನೀಶನಂ ಕುರಿತಾಗ
ಲಂತರಿಕ್ಷದೊಳು ಬಹ ಮೂರ್ತಿಯೆಂಭವನೊ ಮೇಣು
ಕಂತುಪಿತನವತಾರಮೋ ಗಣೇಶನೊ [11]ಗಂಗೆಯಣುಗನೊ[11] ಪ್ರಮಥವರನೊ
ಭ್ರಾಂತಿಯಿಂ ಯೆಮಿ[12]ಗಳೇನೆಂದು[12] ಬೆಸಗೊಳಲಾಗ
ಸಂತಸದಿ ಪೇಳ್ದನೀಮೂರ್ತಿಯಖಿಳಾಂಡತತಿ
ಯಂತರಾಳದೊಳು ಬೆಳಗುವ ಪರಂಜ್ಯೋತಿಯಣುವಿಂಗೆಯಣು [13]ಗುರುವಿಗೆ ಗುರು[13]
೬೩

---

1 ರ (ಗ) 2 ನಗಳೂರ್ಧ್ವಕಿಡುತಂ ಮತ್ತೆ (ಚ) 3 ಕುಣಿವುತ್ತ (ಚ) 4 ಗಂಧಪುಷ್ಪಂಗಳಂ (ಚ) 5 ನೆನ್ನಾತ್ಮಜ್ಯೋತಿರ್ಮಯನ ಪರಶಿವನ (ಚ) 6 ನಾನಂದ ಶರನಿಧಿಲೋಲ ಸೌಂದರನ (ಚ) 7 ನಾನತ ಭಕ್ತಮಂದಾರಭವ ಭಯೋತ್ತರನ ನಿರುಹರಣಮಯನ (ಚ) 8 ಕಾಮಾದಿ ತಸ್ಕರಹರಣ ಗುರುವರಣ (ಚ) 9 ಕಲ್ಪಾಂತ ಶಾಶ್ವತಸಕಲಚೇತನನ (ಚ) 10 ಕರುಣಾಂಬುನಿಧಿಯೆನುತ ಸ್ತುತಿಸಿದ ಮುನಿವರಣ್ಯನತಿಮುದದೊಳಾಗ (ಚ) 11 ಗಾಂಗೇಯನೊ (ಚ) ನಿಕರ ಕರುಂಬ (ಚ) 13 ಮಹಾ ಮಹವು (ಚ)

ಆ ಜಗದ್ಗುರು ಹರನಿರೂಪಮಂ ತಳೆ[1]ದೀಗ[1]
ಮೂಜಗಂಗಳೊಳು ಗುರುವೆನಿಸಿಯೊಪ್ಪುತಲಮಲ
ತೇಜವಹ ಕೊಲ್ಲಿಪಾಕಿಯ ಸೋಮನಾಥನುದರದೊಳುದಿಸಿ ಭೂಮಿಯೊಳಗೆ
ರಾಜಿಸುವ ವೀರಶೈವಾಚಾರಮತವನಂರೆ
ನೈಜದಿಂ ಸ್ಥಾಪಿಸಲ್ಕೈದಿದರ್ ಸಾಂಪ್ರತಂ
ಸಾಜದಿಂದೆನಗೆ ವರಪರಮರಾಹಸ್ಯಮಂ ಬೋಧಿಸಲ್ ಬಂದರೆಂ[2]ದು[2] ೭೪

ಈ ವಿಧದೆ ಪೇಳ್ವ ಪೊಂಗೊಡಮಗನ ಮುಂದೆಸೆಯೊ
ಳಾ [3]ವಿಮಲಗಣ[3]ರಾಜನಾಕಾಶಮಾರ್ಗಮಂ
ಸಾವಧಾನದೊಳಿಳಿದು [4]ನಿಲೆ ರೇವಣಾಖ್ಯಾತ[4]ಸಿದ್ಧೇಶಯತಿತಿಲಕನು
ಓವಿ ಯಮಿನಾಥ ಮುನಿನಿಕರಮಷ್ಟಾಂಗದಿಂ
ದಾ ವಿಶ್ವಮಯಮೂರ್ತಿ ಪಾದದೊಳ್ ಸೈಗೆಡೆದು
ಭಾವಭಕ್ತಿಯೊಳು ಕರವಿಡಿದೊಯ್ದು ಸಿಂಹವಿಷ್ಟರದಲ್ಲಿ ಮೂರ್ತಿಗೊಳಿಸಿ ೭೫

ಅರ್ಘ್ಯಪಾದ್ಯಾಚಮ[5]ನ ಮುಖ್ಯೋಪಚಾರಮಂ
ದೀರ್ಘಭಯಭಕ್ತಿಯಿಂದೊಡಗೂಡಿ ಘನಹರ್ಷ
ಘೂರ್ಘರಧ್ವಾನವೊತ್ತೊತ್ತೆಯಿಂದೊತ್ತುತಿರೆ ಕುತ್ತಿಗೆಯ ಹೃತ್ಕಲಮನಂ
ಅಘಾರ್ತಕಂಜದವರಘತತಿಯನಾವಿಂಡ
ನರ್ಘ್ಯ ಗುರುಚರಣ ಸಂದರ್ಶನವೆ ನಿರ್ಭೀತಿ
ವಾರ್ಘಟ್ಟಮೈದಿದೆವೆನುತ್ತ ಪೊಂಪುಳಿವೋದರಡಿಗಡಿಗದೇಂ ವೇಳ್ವೆಸು[5] ೭೬

ಸಾರಗಂಗಾ ಸರಸ್ವತಿ ಯಮುನೆ ನರ್ಮದೆಯ
ಪಾರ[6]ಜಲ[6]ಸಾಗರಂ ಗೌತಮಿಯು ಚಂದ್ರಭಾ
ಗಾರಮ್ಯ ಕಾಳಿಂದಿ ಪುಷ್ಕರ ಮಲಪ್ರಹರಿ ಕಾವೇರಿ ಕಪಿ[7]ಲಾನದಿ[7]
ಚಾರುಗೋಮತಿ [8]ತುಂಗಭದ್ರೆ ಕೃಷ್ಣೆಯು ಮಹಾ[8]
ಭೂರಿ ತೀರ್ಥಕ್ಕಿವಕ್ಕಧಿಕ ಜಂಗಮಚರಣ
ವಾರಿಯಂ ಯಮಿನಿಕರ ಸೇವಿಸುತ್ತಘಕು[9]ಳಂ ಪೋದುದೆಂದುದು[9] ಮುದದೊಳು ೭೭

---

1 ದಳಿಳ (ಚ) 2 ದಂ (ಚ) 3 ವಿಬುಧತತಿ (ಚ) 4 ಬಂದುನಿಲೆ ರೇವಣಾ (ಚ) 5 ನಂ ಸ್ನಾನ ಮುಖ್ಯನರ್ಘಮಯದುಪಚಾರಗಳನೆಸಗಿ ಯುವರಂತರ್ಗತಂದು ಜಲಗಂಧಾಕ್ಷತಮಿವೆಂದು ಪರಿಮಳ ಧೂಪದಿಂ ಪೂಜಿಸಿ। ಅರ್ಗಳದ ಪಾದಮಂ ತೊಳೆದು ಪದವಾರಿಯಂ ಸ್ವರ್ಗಸ್ಥಿತಿಲಯ ಮಲಂಗಳ ಕೆಡಿಪುದೆಂದು ಮುನಿವರ್ಗ ಪಾದಾಂಬುಮಂ ಮಂಡೆಯೊಳ್ ತಳೆದು ಭಯಭಕ್ತಿಯಿಂ ಪೊಗಳ್ದರಾಗ (ಚ) 6 ಮಹಿ (ಚ) 7 ಲೆ ಕನ್ಯೆ (ಚ) 8 ಭೀಮವತಿ ಕೃಷ್ಣವೇಣಿ ಮಹ (ಚ) 9 ಳಂ ಗೆಲಿದೆವೆಂದರ್ (ಚ)

# ಎರಡನೆಯ ಸಂಧಿ

ಸೂಚನೆ :*

ಜ್ಞಾನನಿಧಿ ಶಿವಸಿದ್ಧರೇವಣೇಶಂ ಮುದದಿ
ತಾನೊಲಿದು ಮೈತ್ರಾವರುಣಿ[1]ಮುಖ್ಯಮುನಿಗಳಿಗೆ[1]
ಸ್ವಾನುಭಾವದೊಳೊರೆವುತಿರ್ದನಾ ಪರಮರಾಹಸ್ಯಮಂ [2]ಮನ ನಲಿಯಲು[2]

ದೇವ ಕಲ್ಯಾಣಾದ್ರಿ ಕೋದಂಡಕರ[3]ಧರ್ಮ[3]
ದೇವವಾರಣ್ಯಮೃತ [4]ಧರಾತಲಾಮರವರ್ಗ[4]
ದೇವ ಹೈಮವತೀ[5]ಕಟಾಕ್ಷವೀಕ್ಷಣ ಮಹಾಕಾಸಾರ ರಾಜಹಂಸ
ದೇವ ಪನ್ನಗಕಟಕಹಾರ ಕುಂಡಲದೇವ[5]
ದೇವಕಾರುಣ್ಯಾಂಬುನಿಧಿ ಸಕಲಮಾಂಗಲ್ಯ
ದೇವ ಕಲ್ಯಾಣಗುಣನಿಳಯನಹ ಗುರು ಚೆನ್ನಮಲ್ಲಿಕಾರ್ಜುನ ಪಾಹಿಮಾಂ ೧

ಹರಹರ ಮಹಾದೇವಯೆನುತೆಳ್ದು ಹರುಷದಿಂ
ದರಳ ಕರಡಿಗೆಯಾಂತು ಪೂ[6]ದೋ[6]ಟಕೈದಧಿಕ
ಅರಲ್ಗಳಂ ಕೊಯ್ದು ತುಂಬುತೆ ಮರಳಿಬರ್ಪ ತಿ[7]ರುಚಿಟ್ಟಾಂಬಲೇಶಗಣನಂ[7]
ಭರದಿ ಕರಿ ಪಿಡಿಯೆ ಸುಮಂಗಳ್ ಚೆಲ್ಲೆ ಶಿವಶಿವಾ
ಮೊರೆಯೆನಲ್ ಕೇಳ್ದು ಬಂದಾ ಗಜವನಾರ್ದಿರಿದಂ
ಹರಭ[8]ಜಕ[8]ನಂ ಬಿಡಿಸಿ[9]ದಾ[9] ಭಕ್ತನಡಿಯ ತಾವರೆಯೊಳಾಂ ಪರಮೆಯಪ್ಪೆಂ ೨

ಅಡಿದೊಳೆದ ಪೂರ್ಣಪಾದಾಂಬುವಂ ಭಕ್ತಿಯಿಂ
ಕುಡಿತೆಗೈಗಳಿನಾಂತು ಮುನಿಕದಂಬಂ ಸವಿದು
ಕಿಡಿಗ[10]ಣ್ಣನವನ ಪ್ರತಿಬಿಂಬವೇ ಸಂಸಾರಭಯಹರನೆ[10] ಭವಭಂಗನೆ
ಮೃಡನಿಂ ನಿರೂಪಿಸಲ್ಪಟ್ಟ ಮತಮಂ ಜಗದಿ
ನಡೆಸಲಿಳಿವೈ ಜಗದ್ಧಿತಮೂರ್ತಿ ಪತಿತರಂ
ಕಡೆಹಾಯಿಸಲ್ಕೆ ನೀಂ ವೀರಶೈವವನೆಂದು ಕೊಂಡಾಡಿನಲಿದುದಾಗ[11] ೩

---

1 ಮುನಿಮುಖ್ಯರ್ಗೆ (ಚ) 2 ಮುನಿ ನಲಿಯಲುಂ (ಚ) 3 ದರಸು (ಚ) 4 ಸಾಗರ ತನುಜಾರಮಣ ನುತ (ಚ) 5 ತಾರುಣ್ಯವನಚೈತ್ರದೇವ ಪಣ್ಯಾಂಕಟಕ ಹಾರಕುಂಡಲಕೃತ (ಚ) 6 ದೋಂ (ಚ) 7 ರ ಚಿತ್ರಾಂಬಲೇಶಗಹನಂ (ಚ) 8 ಕ್ತ (ಚ) 9 ದಿರಿ (ಚ) 10 ಣ್ಣ ನೆತಿಸಿದ್ಧತುಂಗಗಂಗಾವತಂಸನೆಯುಭವ (ಚ) 11 ಮೊವರಾದ್ಯ ನಿರ್ಜರ ವಂದ್ಯ ನಿರ್ಲಿಖಿತ ಜಡಜೋದರಾಂಡ ಮಂಡಲ ಛಾಂಡ ಗರ್ಭನೆಂದಡಿಗೆರಗಿ ಕುಂಭಜಂ ಮುಂತಾದ ಮುನಿಗಣಂ ನಿರವಿಸುವುದೆಂದರಾಗ (ಚ)

* ರೇವಣೇಶ ಮುಖ್ಯ ಮುನಿಗಳಿಗೆ ಉಪದೇಶ ಮಾಹಾತ್ಮೆ (ಕ) ಷಟ್ಸ್ಥಲೋಪದೇಶ (ಗ)

ಎಲೆ ಮುಮುಕ್ಷುಗಳಾದ ಮುನಿಗಳಿರ ನೀವು ಮನ
ವಲರಿ ಕೇಳುವ ಶಾಸ್ತ್ರಮಾವುದೆನೆಯವರೆಲ್ಲ
ಕಲಶಜನ ಮುಖವ ನೋಡಲ್ ಕಲಶಜಂ ನಲಿದು ಬಿನ್ನೈಸಿದಂ ಭಕ್ತಿಯಿಂ
ಅಳಿಕಾಕ್ಷ ಯೋಗಿಕುಲತಿಲಕ ಮುನ್ನಂ ಶಿವಂ
ಪೊಲವಿನಿಂ ಪ್ರಮಥರ್ಗೆ ಮಂದರಾದ್ರಿಯೊಳು ತಾಂ
ಸಲೆಯುಂಸುರ್ದಂ ಪರಮರಾಹಸ್ಯಮಂ ನಿಗಮದುರ್ಲಭವನೆಂದು ಮುನಿಪಂ ೪

ಪೊಂಗೊಡದ ಮಗನೆ ಕೇಳಿಂಗಡಲಮಗದಲೆಯ
ನಂಗಜಾರಾತಿ ತನ್ನರ್ಧಾಂಗಿಯಹ ಶಿವೆಗೆ
ಹಿಂಗದೇಯತ್ಯಂತ ಸಾಗರಾಂತರ್ಗತದ ಬಡಬಾಗ್ನಿಮಂಟಪದೊಳು
ಲಿಂಗಾಂಗಸಂಗಸಮರಸವೀರಶೈವ[1]ಮಂ
ಮಂಗಳೋಂಕಾರಗರ್ಭೀಕೃತಮನುಂ ಚಾರು
ಸಂಗತಿಯು ಕೂಡಿ ನಿರವಿಸಿದುದಂ ಪೇಳ್ವೆನೆಂದೊರೆದನಾ ರೇವಣೇಶಂ[1] ೫

ವರವೀರಮಾಹೇಶ್ವರಾಚಾರಮಾರ್ಗಮತಿ
ಧರೆ ಗಗನವಿಹಾರೇಳು ಭುವನಂಗಳೊಳ್ ನೋಡೆ
ಯರಿದು ಗುಹ್ಯಾದ್ಗುಹ್ಯತರಮೆಂದುಮಾವುದಾನೊಂದುಕಾರಣದಿಂದ[2]ಲು[2]
[3]ಒ[3]ರೆಯಲಾಗದು ಯಾರಿಗಾದೊಡೆ[4]ಯು[4] ಭಕ್ತರ್ಗೆ
ಗುರು[5]ಸೇವೆಯಂ[5] ಮಾಳ್ಪ ಶಿಷ್ಯರ್ಗೆ ವೈರಾಗ್ಯ
ದಿರವುಳ್ಳ ವಿರತರ್ಗೆ ಬೋಧಿಸುವುದೆಂದು ಶಿವನಗಜೆಗುಪದೇಶಿಸಿದನು ೬

ಆ ಪರಮಬೋಧೆಯಂ ಶೈ[6]ಲಾದಿ[6] ಕೇಳ್ದಧಿಕ
ತಾಪತ್ರಯಾಪ[7]ಹರ[7] ಮೋಕ್ಷವಾರ್ಧಿಯೊಳಾಳ್ದ
ನೇಪೇಳ್ವೆ[8]ನೆಂತು ಗೋಪ್ಯಾದ್ಗೋಪ್ಯತರವೆಂದಂ ಗಣಗಳಿಗೆ ನಂದಿಗೊರೆದಂ[8]
ಆ ಪರಬ್ರಹ್ಮ ಪರಶಿವನದರ ದೆಸೆಯಿಂದ
ದೀಪಿಸುವ ಪರಮರಾಹಸ್ಯ ನಿಮಗೆಂತೆನಲ್
ಲೋಪರಹಿತನೆ ನಮಗೆ ಶ್ರೀಪರಂಜ್ಯೋತಿಪರಮೇಶನೇ [9]ದೈವಮಲ್ತೆ[9] ೭

---

1 ಮಯ । ತುಂಗ ಓಂಕಾರ ಗರ್ಭೀಕೃತಂ ಸುಕರವಹ ಮಂಗಳ ಮಹಮೋಕ್ಷ ರೂಪವಹ ನಿಗಮಾಗಮ ಸಾರತರಮೆನಿಸುವ (ಚ) 2 ಲುಂ (ಚ) 3 ದೊ(ಕಗ) 4 ಯ(ಕಗ) 5 ಶುಶ್ರೂಷ್ಟಿಯ (ಚ)6 ಲೇಯ(ಚ) 7 ವಹ(ಚ) 8 ಕಲಶಜನೆಯುದನುಸುರ್ದ ಮತಿಗೋಪ್ಯವೆಂದು ಗಣಪುಂಗವರ್ಗೆ(ಚ) 9 ದೈವಮತ್ತೈ(ಚ)

ವರ ಷಡಕ್ಷರವು ಪಂಚಾಕ್ಷ[1]ರಂ ಮನುನಮ್ಮ[1]
ಚಿರಶರೀರ[2]ದೊಳು ಮುಖ್ಯಾಂಗದೊಳ್ ಪೊಳೆಯುತ್ತ
ಲಿರಲು[2] ಶ್ರೀಭಸ್ಮರುದ್ರಾಕ್ಷಿಗಳು ಸತತ[3]ಮಿವರಲ್ಲಿ[3] ಪ್ರಜ್ವಲಿಸು[4]ವೀಶಂ[4]
ಮೆರೆವು[5]ತಿದೆ ನಿಮ್ಮ ಭಜನೆಗೆ ಯೋಗ್ಯರಾವೆಂದು
ಪರಿಕಿಸಿಯೆ ಪೇಳ್ವೆ ವಿಧದಲ್ಲಿ ಕೊರೆಯಿಲ್ಲೆಂದು[5]
ಪರಮಕುಂಭಜಮುಖ್ಯ ಮುನಿನಿಕರ ಬಿನ್ನೈಸುತಿ[6]ರ್ದುದಾ[6] ಸಿದ್ಧಯತಿಗೆ ೮

ಎನಲಾಗ ಶಿವಸಿದ್ಧಕುಲಲಲಾಮಂ ನಗುತ
ಮನವೊಲ್ದು ಪೇಳ್ದನಾ ಪರಮರಾಹಸ್ಯಾರ್ಥ
ಘನ[7]ಸು[7]ವಿಸ್ತಾರವಂತಿ ಬಾಹುಲ್ಯಮತಿದುರ್ಘಟಂ ಮಹಾಕಲ್ಪಾಂತರಂ
ಅನುವಿನಿಂದುಪದೇಶಿಸಲ್ ತೀರದೆಂದು ವರ
ಮುನಿಜನೋತ್ತಮ ಕೇಳು ಸ್ಥೂಲವಹ [8]ಮದಕರಿಯು[8]
ವಿನಯದಿಂ ಸೂಕ್ಷ್ಮದರ್ಪಣದಲ್ಲಿ ಕಾಣಿಪೊಲ್ ಬೋಧಿಸುವೆನೆಂ[9]ದು[9] ಮುದದಿಂ ೯

ಆ ಶಿವಂ ನಮಗೆ ಮುಂನ್ನುಸುರ್ದ ದಿವ್ಯಾಲಾಪ
ದಾಸಕ್ತಿಯಿಂ ಮುಕ್ತಿದೀಪ ಮಾಯಾಲೋಪ
ಮಾ ಸಕಲಮಾಂಗಲ್ಯಕಾರಣಂ ಚಿತ್ಸುಧಾಪೂರಣಂ ಭವತಾರಣಂ
ಭಾಸುರಾನಂದರಸಧಾರಣಂ [10]ಘನ[10]ಬೋಧೆ
ಲೇಸಾಗಿ ಪೇಳುವೆಂ ಕೇಳೆನುತ್ತಾಗ ತಾಂ
ತೋಷದಿಂ ರೇವಣಾಸಿದ್ಧಯತಿತುಂಗನುಸುರ್ದಂ ಸಾರತರ ದಯೆಯೊಳು ೧೦

ಉನ್ನತದ ವೀರಾಸನಾರೂಢನಾಗಿ ಮಹ
ಚಿನ್ಮುದ್ರೆಯಾಂತಧಿಕ[11]ಮೂ[11]ರ್ಧ್ವಖೇಚರಿಯಿಂದ
ಹೃನ್ಮಧ್ಯದೊಳ್ ತೊಳಪ ವರಶಾಂತಮಲ್ಲಿಕಾರ್ಜುನಲಿಂಗಪದಪದ್ಮಮಂ
ಸನ್ನುತದೊಳೇಕಾಗ್ರಚಿತ್ತದೊಳ್ ನೆಲಸಿ ನಿಜ
ಮನ್ನಿರೀಕ್ಷಿಸುತಮುಪಕ್ರಮಿಸಿದಂ [12]ರ[12]ಸನೆಯೊಳ್
ಚಿನ್ಮಯಾಂಬುಧಿ ಚಿತ್ಕಳಾಭಾವಚೈತನ್ಯಮಂತ್ರಜಪಮಂ ಜಪಿಸುತೆ ೧೧

---

1 ರವು ಮಮ ನಮ್ಮ(ಕಗ) 2 ದ ಬಾಹ್ಯಾಂತರದೊಳಂ ಹೊಳೆವು । ತಿರಲು(ಚ) 3 ಮಂಗದೊಳು(ಚ) 4 ತನಿಶಂ (ಚ) 5 ತಿರೆ ನಿಮ್ಮ ಮೂರ್ತಿಯು ಮನೋಮಧ್ಯದೊಳ್ ಹರಹರ ಮಹಾದೇವನೆ ಪೊರೆಗೆ ನಿಮಗಾವೆಂದು (ಚ) 6 ರ್ದರಾ (ಚ) 7 ಸ (ಚ) 8 ಮತ್ತೇಭ (ಚ) 9 ದ (ಚ) 10 ಮಯ (ಚ) 11 ಪೂ (ಕ) 12 ಗ (ಗ)

ಒಲವಿನಿಂ ಕಳಶಸಂಜಾತ ಮುನಿ ಲಾಲಿಸೈ
ಚಲನೆಯಿಲ್ಲದೆ ಸದ್ಯೈಕಾಗ್ರಮಾನಸದಿಂದ
ಬಲವಂತ ಸಚ್ಚಿದಾನಂದಾತಿ ನಿತ್ಯಪರಿಪೂರ್ಣಲಕ್ಷಣಗಳುಳ್ಳ
[1]ನೆಲೆಯಾದ ಪರತರಾನಂದಮಯದಿಂ ಪೊಳೆವ
ಪರಮಶಿವತತ್ತ್ವಮಂ ಶ್ರೀಗುರೊತ್ತಮರಾಗ[1]
ಸ್ಥಲಮೆಂದುಮಾದರಣದತ್ತಣಿಂ ಬೋಧಿಸುವರಾ ಶಿವಂ ಪೇಳ್ದ ಪಾಂಗಿಂ ೧೨

ಪರಮಕಾರಣಕ್ರಿಯಾಜ್ಞಾನಯಿಚ್ಛಾದಿ ನಿಜ
ಪರಶಕ್ತಿಮುಖ ಮಹಾಶಕ್ತಿಸಂಕುಳಕಮಿತ
ವರಕಾಂತಿಗಳ್ಗಖಿಳ ಸಚರಾಚರಾತ್ಮ ಚೈತನ್ಯದ್ರುಹಿಣಾಂಡತತಿಗೆ
ಚಿರಶಿವ ಸದಾಶಿವೇಶ್ವರ ಸಕಲತತ್ವಕ್ಕೆ
ಯಿರದೆಯಾಶ್ರಯಮಾದ ನಿರವಯುವೆ ಸ್ಥಲಕಣಾ
ಪೊರವೆನಾಸ್ಥಲದ ಭೇದಮಂ ಕೇಳೆನುತ ಸಿದ್ಧೇಶನುಸುರ್ದಂ ಮುನಿಪಗೆ ೧೩

ನಾನೊರವೆ ಸ್ಥಲವೆಂಬೆರಳ್ವರ್ಣಗಳ ನೆಲೆಯ
ಸಾನುರಾಗದೊಳು ಮಹತ್ತತ್ವಮೊದಲಾಗುಳ್ಳ
ನಾನಾವಿಶೇಷವಹ ತತ್ವನಿಚಯಕ್ಕೆಯುದಯಸ್ಥಾನಮಪ್ಪುದದರಿಂ
ತಾನೆ ತನ್ನೊಳ್ ಜನಿಸಿದಾ ತತ್ವಮೂರ್ತಿಗಳ
ಲೀನಮೆಯ್ದುಪುದರಿಂದೂರ್ಣನಾ[2]ಭನ[2] ತೆರದೆ
ಜ್ಞಾನನಿಧಿಸ್ಥಲಮೆಂದು ನಿರ್ವಹಿಸಲಾದುದದನೇನೆಂಬೆನತಿಮುದದೊಳು ೧೪

ಕೇಳಂ ಮುನಿವರನೆಯಾ ಪರಬ್ರಹ್ಮ ಪರಮಾತ್ಮ
[3]ಭಾಳ[3]ಲೋಚನನಾದ ಪರಮೇಶನೊರ್ವನೊಳ್
ಲೀಲೆಯಿಂ ಮುಕ್ತಿಪದ ನೆಲಸಿರ್ಪ ಕಾರಣದಿ ಸಂಸಾರಶುಷ್ಕ[4]ತರುವ[4]
ಮೂಲಮಂ ಕಿಳ್ತು ಕೆಡಿಪುದರಿಂದ ಸ್ಥಲಮೆಂದು
ಹೇಳಲಾದುದು ಮತ್ತೆಯಾ ಶಿವಂ ಸ್ಥಲಮೆಂಬ
ಸ್ಥೂಲಶಬ್ದದಿ ತನ್ನ ಶಕ್ತಿಯಿಂದಾರುತೆರನಾದುದದ ವಿಸ್ತರಿಸುವೆಂ ೧೫

---

1 ಏಕ ಏವಾ ಪರಬ್ರಹ್ಮವಹ ಪೊಳೆವ। ಪರಶಿವತತ್ವಮಂ ಶ್ರೀಗುರೋತ್ತಮರ್ (ಚ)? 2 ಭಿಯ (ಚ)
3 ಫಾಲ (ಗ) 4 ದ್ರುಮದ (ಚ)

ಕ್ರಮದೆ ಸರ್ವಜ್ಞತ್ವ ನಿತ್ಯತೃಪ್ತತ್ವಮುಂ
ಭ್ರಮೆಯಿಲ್ಲದಿರ್ಪನಾದಿಯ ಶಿವಜ್ಞಾನವಮುಂ
ಸಮನಿಸಲ್‍ಬಾರದಿಹ ಸರ್ವಸ್ವಾತಂತ್ರ್ಯ ಶಾಶ್ವತದ ಸಾಮರ್ಥ್ಯತ್ವಮಂ
ಅಮಲತರವಾದ ನಾನಾಶಕ್ತಿಗುಣಗಳಿಂ
ದಮಿತ[1]ವ[1]ಹ ಪರಬ್ರಹ್ಮದಾ ಗುಣಂ[2]ಗಳ್ ಸದಾ[2]
ಗಮಕಗೋಚರವಹ ಚಿದಂಗಷಟ್ಸ್ಥಲ[3]ಪದ ಮುನೀಶ ನೀಂ ಕೇಳೆಂದನು[3] ೧೬

ಸರ್ವನಿರುಪಾಧಿ ಸರ್ವಜ್ಞ ಘನ ಚೈತನ್ಯ
ಸರ್ವಕಾರಣನಾದ ಶಿವ ತಾನೆ ನೋಡೆ ನಿಜ
ಸರ್ವಸಚರಾಚರಮು[4]ಯಾಕಾರ ವಸ್ತುವವನಿಂದನ್ಯಮಾವುದಿಲ್ಲ[4]
ನಿರ್ವಾಣಪರಬ್ರಹ್ಮಸ್ಥಲಮಾಸ್ಥಲಂ ತನ್ನ
ವೂರ್ವ ಶಕ್ತಿಯ ಚಲನ ಮಾತ್ರದೆ ಯೆರಳ್ತೆರ[5]ದ[5]
ಪೂರ್ವಮವರೊಳ್ ಲಿಂಗಸ್ಥಲಮಂಗಸ್ಥಲಮೆಂದು ದ್ವಿವಿಧಮಾದುದು ಮುನಿವರ ೧೭

ಗುರುಂವೆಯೇಕಸ್ಥಲಂ ಯೆರಡಾದ ಪರಿಯೆಂತು
ವೊರೆವುದೆನೆ ಕಳಶಸಂಜಾತ ಮುನಿ [6]ನೀ[6] ಕೇಳು
ಮೆರೆವ ಪುಷ್ಕರವೊಂದು ಘಟಭೇದದಿಂ ಘಟಾಕಾಶ ಮಹದಾಕಾಶದ
ಎರಡುತೆರನಾಗಿ ತೋರಿತ್ತಲಾ ವಿಧದಿಂದ
ವುರುವಯೇಕಸ್ಥಲಂ ಲಿಂಗಾಂಗಭೇದದಿಂ
ಧರರೆಯೆರಳಾಯ್ತೆಂದು ರೇವಣಾಸಿದ್ಧಯತಿ ಬೋಧಿಸುತ್ತಿರ್ದನಮಂಮ ೧೮

ಆ ಮಹಾಘನಲಿಂಗಮದು ತಾನೆ ನೋಡಲ್ಕೆ
ನೇಮದಿಂ ಸೇವ್ಯ ಸೇವಕನೆಂಬ ಭೇದದಿಂ
ಧೀಮಂತ ದ್ವಿವಿಧಮಾದುದು [7]ಭಾವದಿಂ[7] ವಿವೇಕಿಸೆ ಸೇವ್ಯಲಿಂಗಸ್ಥಲಂ
ಪ್ರೇಮದೊಳಗಂಗಸ್ಥಲಂ ಸೇವಕಂ ವಂತೆ
ತಾ ಮುದದೆಯಾಸ್ಥಲಂ ಶಿವ ಜೀವ ಭೇದದಿಂ
[8]ಸೌಮುಖ್ಯ ಲಿಂಗಾಂಗರೂಪವಮಂ[8] ನೆರೆತಳೆದುದೆಂದನಾ ರೇವಣೇಶಂ ೧೯

---

1 ಮ (ಕಗ) 2 ಗಳೆವೇದಾ (ಚ) 3 ಮುನೀಶನೆ ಕೇಳೆನುತ್ತೊರೆದನು (ಚ) 4 ಯವಾದ ವಸ್ತುವಿಂ ಬೇರಿಲ್ಲವಾ ವಸ್ತುವೆ (ಚ) 5 ನ (ಚ) 6 ನೀಂ (ಚ) 7 ಮವರೊಳಂ (ಚ) ೮ ದೀಮತವೆ ಲಿಂಗಾಂಗ ತತ್ವಮಂ (ಚ)

ಬಳಿ[1]ಕ ತಚ್ಚಿ[1]ನ್ಮಾತ್ರವೇ ಸ್ಥಲಂ ಅಹುದಲಾ
ನೆಲೆಯಾದ ಶಿವ ತಾನೆ ಲಿಂಗವಾ ಜೀವನೇ
ಸಲೆಯಂಗಸ್ಥಲಮಹುದು ಹೆಂಗೆಯಾಸ್ಥಲ ದ್ವಿವಿಧವಾಯ್ತುದಂ ಹಾಂಗೆ ನೋಡೆ
ಬಲವಂತ [2]ಶಕ್ತಿ[2]ಯೇಯೆರಡುತೆರನಾಯಿತ್ತು
ವೊಲವಿನಿಂ ಪ್ರತಿಬಂಧವಿಲ್ಲದಾ ಶಕ್ತಿ ತಾ
ನಳಿನಾಕ್ಷನೊಡವೆರೆದು ಚರಿಪ ಧರ್ಮವನುಳ್ಳುದೆಲೆ ಮುನಿಪ ಕೇಳೆಂದನು ೨೦

ಆ ಶಕ್ತಿಯಂ ನೋಡೆ [3]ಶಿವನು ಶಿವನೊಡನೆ ಮೇಣ್[3]
ತಾ ಸಮಾ[4]ನಾತ್ಮ[4]ಧರ್ಮವನುಳ್ಳಕಾರಣಂ
ಲೇಸಾಗಿ ಭಕ್ತರೊಳ್ ಕರುಣಮುಂಟಾಗಿ ಸ್ವಾತಂತ್ರ್ಯಸಾಮರ್ಥ್ಯದಿಂದ
ತೋಷದಿಂ ವಿಭ[5]ಜಿ[5]ಸಲ್ಪಟ್ಟಕಾರಣದಿಂದೆ
ನಾಶವಿಲ್ಲದೆಯೆರಳ್ತೆರನಾದಂದದ ವಂದೆ
ಭಾಸುರಾನಂದದಿಂದೊರೆವುತಿರ್ದಂ ಮುನಿಕದಂಬ ನಲಿನಲಿದಾಡಲು ೨೧

ಗುರು[6]ಲಿಂ[6]ಗವಾ ಶಕ್ತಿ ದ್ವಿವಿಧಪರಿಯೆಂತೆಂದು
ಕರುಣದಿಂದೊರೆವುದನೆ ಕೇಳಿರೈ ನೀವೆಲ್ಲ
ರಿರದೆರಡುಶಕ್ತಿಯೊಳಗೊಂದು ಲಿಂಗಸ್ಥಲವ ಹೊಂದಿತಂಗಸ್ಥಲವನು
ಎರಡನೆಯ ಶಕ್ತಿಯೈದಿತ್ತು ಲಿಂಗಸ್ಥಲವ
ನಂರೆ ಪೊಂದಿದಾ ಶಕ್ತಿ ವರಕಳಾಮೂರ್ತಿಯಾ
ಯ್ತುರರೆಯಂಗಸ್ಥಲವ ಹೊಂದಿದಾ ಶಕ್ತಿಯೇ ಭಕ್ತಿ ಭವಮಂ ಕೆಡಿಸಿತು ೨೨

ಆ ವಿಧದ ಶಕ್ತಿಯೆಯಧೋಮುಖಿ[7]ಯೆಯು[7]ಹುದಲಾ
ವೋವಿಯಾ ಭಕ್ತಿಯೇ ಊರ್ಧ್ವಮು[8]ಖಿಯಾಗಲಿಂ
ತೀ ವಿಷಮಗತಿಯೊದ[8] ಶಕ್ತಿಭಕ್ತಿಗಳೊಳ[9]ಗೆ ಶಕ್ತಿಯೇ ವಿಶ್ವರೂಪ[9]
ತೀವಿಯಾ ಶಕ್ತಿ ತಾಂ ಮಾಯೆಯೆಂದಾಯಿತ್ತು
ಭಾವಿಸಲ್ ಭಕ್ತಿಯೇ ನಿರ್ಮಾಯೆಯೆನಿಸಿ ಬಿಡ
ದಾ ವಿಮಲಶರಣಪದ್ಧತಿಯನೆಯ್ದಿತ್ತಗಸ್ತ್ಯನೆ ಕೇಳು ಕೇಳೆಂದನು ೨೩

---

1 ಕಲಾಚಿ (ಚ) 2 ಸತ್ತೆ (ಕಗ) 3 ಶಿವನೊಡನೆ ಕೂಡಿ ಮಹಾ (ಚ) 4 ನತ್ವ (ಚ) 5 ಕ್ತಿ (ಗ)
6 ಷಂ(ಚ) 7 ಯುಮ(ಚ) 8 ಖಿವಾದುದಂ।ತಾವೆರಡು ತೆರನಾದ (ಚ) 9 ಗಾ ಶಕ್ತಿ ವಿಶ್ವರೂಪಿಂ(ಚ)

ಎಲೆ ಮುನಿಯೆ ಶಕ್ತಿ ತಾಂ ಪ್ರಕೃತಿಭಕ್ತಿಯೆ ಪರಮ
[1]ಮಲಘುಭಾವ[1]ನಿವೃತ್ತಿಯೆಂದು ಪೇಳಲ್ಪಡುಗು
ನೆಲೆಯಾಗಿಯಾ ಶಕ್ತಿಯಿಂದಲಾ ವಿಶ್ವಪ್ರಪಂಚ [2]ಸಂಜನಿಸಲಾಯ್ತು
ಬಲವಂತ ಭಕ್ತಿಯಿಂದಾ ಪ್ರಪಂಚಿಸಸ್ಥಿತಿಯು
ವಿಲಯಂವೆಯ್ದಿಪುದಲಾ ಕೇಳು ಹರುಷದೊಳಿಂ
ದಳಿಕಾಕ್ಷಸಿದ್ಧ ಯತಿತುಂಗ ಲಿಂಗಾಂಗಿಗಳರಸ ನಿರವಿಸುತ್ತಿರ್ದನು[2] ೨೪

ಈ ತೆರದ[3]ಲಾ[3]ದ ಪ್ರಮಾಣಂಗಳೆರಡರಿಂ
ಸಾತಿಶಯಮಾವುದೆನೆ ಶಕ್ತಿಭಕ್ತಿಗಳೊಳಗೆ
ನೂತನದ ಶಕ್ತಿಯಿಂ ಭಕ್ತಿಗುಣಮಧಿಕವಾದುದು ಕಣಾ ಮತ್ತೆ ಕೇಳು
ಖ್ಯಾತವಹ ಶಕ್ತಿಪ್ರಭಾವದಿಂ ಸೇವ್ಯತ್ವ
ಪೂತಭಕ್ತಿಯ ಕಾಂತಿಯಿಂ ಸೇವಕತ್ವ[4]ಮಹು
ದೋ[4]ತು ಪೇಳಿದೆವು ನಿನಗಾ ಶಕ್ತಿ ಭಕ್ತಿಗಳ ತಾರತಮ್ಯದ ವಿವರಮಂ ೨೫

ಆದಿಮಧ್ಯಾಂತಮಿಲ್ಲದೆ [5]ಮಹೇಶ್ವರ ಪರಮ[5]
ವಾದ ನಿತ್ಯಾನಂದಮಯ [6]ಬೋಧರೂಪ ತಾ
ನಾದ ನಿರುಪಮ ಮಹಾಲಿಂಗವೇ ತಾನೊಂದುಸ್ಥಲವುಮಾ ಶಕ್ತಿಯಿಂದಂ[6]
ಸಾಧಿಸುತ್ತಂತದಂ [7]ತರಮೆಯಂತಿಹಂದದುವೆ[7]
ಮೋದ[8]ವಂ[8]ಗಸ್ಥಲಮೆನುತ್ತೆ ನಿಶ್ಚೈಸೆಂದು
ಬೋಧಿಸುತ್ತಿರ್ದ ಪರಮಾರಾಧ್ಯ ಶ್ರೀರೇವಣಾಸಿದ್ಧ ಯಮಿನಾಥನಂ ೨೬

ಅಂಗಮೆನಿಸುವ ದ್ವ್ಯಕ್ಷರದ ವಿಗ್ರಹಾರ್ಥಮಂ
ಸಂಗಮಿಸೆ ಪೇಳಂವೆಂ ಕೇಳು [9]ನಿನಗೀ ಎಂಬ
ಮಂಗಳಾತ್ಮಕಧಾತುವಾವುದದು ಶಾಬ್ದಿಕರ ರಾಜಿಯೊಳಗೆಣಿಕೆವೆತ್ತು[9]
ಭಂಗಮಿಲ್ಲದ ಸುಗತ್ಯರ್ಥಮಂ ಪೇಳ್ವುದಾ
ಲಿಂಗತತ್ವವ ಬಿಡದೆಯಾಶ್ರೈಸಲದು ತಾನೆ
ಅಂಗಮೆಂದರಿಯೆನುತ್ತಂಗಜಾರಾತಿ ನಮಗುಸುರ್ದನೆಲೆ ಮುನಿಶಾಂತನೆ ೨೭

---

1 ನಲವಿನಿಂ (ಚ) 2 ಸಂಸಾರಮಿದು। ಲೋಪಮಾಗುವುದು ಮತ್ತಂ ಜನಿಸಿದರು ಮಲಿನ ಲೇಪ ಪ್ರಪಂಚ ಗುಣಶಕ್ತಿ ಸ್ವಭಾವಮದ ಕೆಡಿಪ ಗುಣಭಕ್ತಿಭಾವಂ (ಕಗ) 3 ವಾ (ಚ) 4 ದಿಂ। ಓ (ಚ) 5 ಯಜಂ ಪರಮಪದ (ಚ) 6 ತಚ್ಛಬ್ದವಾಚ್ಯವಾದಾದಿ ಮಹಾಲಿಂಗಮಂ ಕುರಿತಾವುದಂ ನೊಂದು ಸ್ಥಲವು ಮಹಾಭಕ್ತಿಯಿಂದಂ (ಚ) 7 ಯೆಯ್ದುತಿಹುದದುವೆ ತಾಂ (ಚ) 8 ದಂ (ಚ) 9 ಅಂ ಯೆಂಬ ಪದ। ಹಿಂಗದೆ ಪರತತ್ವ ಪರಾತ್ಪರ ವಸ್ತುವಂ ಭಕ್ತಿಯಿಂ (ಚ)

ಮುನಿವರನೆ [1]ಲಿಗಿಗತಾವೆನಿಪ ಧಾತುವೆ ಭುವನ
ವನು ತನ್ನೊಳಡಗಿಸಿಕೊಳುತ್ತಿಹುದು ಯೋಗವುಂ[1]
ವಿನಯದಿಂದೆಯ್ದುತಿಹುದದುಂ ಕಣಾ ಲಿಂಗಪದಮಂತಲ್ಲದಮಲಮಪ್ಪ
ಘನಲಿಂಗ[2]ವಂಗವನ್ನಾ[2]ಶ್ರೈಸಿ ನೆಲಸಿಹುದುಂ
ಚಿನುಮಯಾಂಗಂ ಲಿಂಗಮುಂ ಪೊರ್ದಿ ತಾನಿಹುದು
ಅನುಪಮಾತ್ಮಕವಾದ ಲಿಂಗಂಗಳೊಂದೊಂದ ಬಿಡದೆಯಾಶ್ರೈಸಿರ್ಪವು ೨೮

ಸಕಲಮಂತ್ರಂಗಳಂಗದಲಿ ಲಿಂಗದೊಳಿಹವು
ಅಕಳಂಕಭರ್ಗಯೆಂಬಾ ಪದಂ ಶಿವಲಿಂಗ
ಸುಕರವಹ ಸವಿತುರೆಂಬಾ ಪದಂ ಜ್ಞಾನಾಂಗಮುಹುದ ಧೀಮತಿಯೆಂಬುದು
ಮುಕುತಿಸಂಪದ ತಾನೆ ಲಿಂಗಾಂಗಮುಂಭಯೈಕ್ಯ
ಮುಕುರವಹ ಮಂತ್ರಮಾತೆಯೊಳಖಿಳಮಂತ್ರಂ[3]ಗ
ಳಕುಟಿಲದೊಳಡಗಿರುವದದರಿನಿಂ[3] ಗಾಯತ್ರಿ ಲಿಂಗಾಂಗಸಂಗಮಯವು ೨೯

ಮತ್ತೆ ನೀಂ ತಿಳಿಯುಖಿಳತತ್ವಬ್ರಹ್ಮಾಂಡ[4]ಗ[4]ಳ
ವೊತ್ತ[5]ವಿಾ ಚರಜಾಲಮುಚರಜಾಲಂಗಳಿ[5]
ತತ್ತ್ವಮಸಿ[6]ಯೆಂಬ ಸುಪದತ್ರಯವ ಹೊಂದಿಹವದೆ[6] ಮಹಾಲಿಂಗಮಯವು
ಬಿತ್ತರದ ತ್ವಂಪದವನಂಗಸ್ಥಲಂ ಪೇಳ್ವ
ರುತ್ತಮದಯಿಾಯರಡರೈಕ್ಯವೇಯಸಿಪದಂ
ಸತ್ತುಚಿ[7]ತ್ತುಪ್ರಮೋದಮಿವರೊಗ್ಗಡೆ ಕೂಟವೇ ಮಹಾಲಿಂಗಾಂಗಸಂಬಂಧವು[7](?) ೩೦

ಜ್ಞಾನನಿಧಿಮುನಿಯೆ ಕೇಳ್ ತಾನಖಿಳಬ್ರಹ್ಮಾಂಡ
ದಾ ನಿಯಾಮಕನಾದ ಶಿವನೆ ಲಿಂಗಸ್ಥಲಂ
ಜಾನಿಪೊಡೆ ಸಚರಾಚರಾತ್ಮಪ್ರಪಂಚಮಂಗಸ್ಥಲಂ ಶರಣಮತಕೆ
ಲೀನವಹ ವಿಶ್ವಮಾಯಾಮಯದ ರಚನೆಗೆಯ
ನೂನಲಯಕಾರಣಸ್ಥಲವೆ ಸಂಬಂಧಮುಂ
ದಾ ನವ್ಯಸುಜ್ಞಾನಸಂಪನ್ನರಿದನರಿವರೆಂದನಾ ಸಿದ್ಧೇಶ್ವರಂ ೩೧

---

1 ಕೇಳು ಯೆನಲ್ ಬ್ರಹ್ಮ ಸನ್ಮಾತ್ರನನುವಿನಿಂ ಗಂ ಎಂದು ಆ ಬ್ರಹ್ಮತತ್ವಮುಂ (ಚ) 2 ದಂಗವನ್ನಾ (ಗ) ವಂಗಮುಂ ಆ (ಚ) 3 ಗಳ್ । ಯುಕುತಿಸಲ್ಕಡಗಹವುವದರಿನಿಂ (ಚ) 4 ಕು (ಚ) 5 ಸಚರಾಚರ ಭುವನಗಳ್ (ಚ) 6 ಯತ್ಯಧಿಕ ಪದತ್ರಯಂ ಹೊಂದಿಹವು ವಾ ತತ್ಪದಂ (ಚ) 7 ತ್ತಾನಂದ ತತ್ವಮಸಿ ಲಿಂಗಾಂಗ ಸ್ಥಲಮತಿಶಯಂ ಭಾವಿಸೆ (ಚ)

ಅಂಗವೇ ಶಕ್ತಿಯಾ ಶಕ್ತಿಯುಳ್ಳಾ ಶಿವಂ
ಭಂಗವಿಲ್ಲದ ಲಿಂಗವೈಕ್ಯ ಸಮರಸಜ್ಞಾನ
ಹಿಂಗದೇ ಮತ್ತೆ ಕೇಳ್ ಲಿಂಗಂ ಶಿವಂ ಭವಾನಿಯೆ ಅಂಗವಾವುಭಯದ
ಸಂಗಸಮರಸ ಸದಾನಂದ ಸಂಗತಿಯೆ ತಾ
ಮಂಗಳದ ಸಂಬಂಧವೆಂದರಿವುದೆಲೆ ಮುನಿಯೆ
ಲಿಂಗಾಂಗಸಂಗಗಳ ಪೇಳ್ವಡಗಣಿತಶ್ರುತಿತತಿಗಗೋಚರ[1]ವೆಂ[1]ದನು ೩೨

ಶಿವಲಿಂಗಸ್ಥಲವು ತನ್ನಯ ಶಕ್ತಿಯತ್ತಣಿಂ
ವಿವಿಧವಪ್ಪುದು ಹೆಂಗೆ ಹಾಂಗೆಯಂಗಸ್ಥಲಂ
ಸವಿಶೇಷಮಹುದು ತನ್ನಯ ಭಕ್ತಿಭಾವದಿಂದಾವಾವ ಲಿಂಗಸ್ಥಲಂ
ಅವಿರತಂ ಶಕ್ತಿಯಿಂ ಪ್ರ[2]ತ್ಯೇಕ[2]ಶಿವನಹುದು
ಭವದೀಯ ಭಕ್ತಿಯಿಂದಂಗಸ್ಥಲಂ ನೋಡ
ಲವಿರಳದ ಪ್ರತ್ಯಕ್ಷದಾತ್ಮನಹ ಕುಂಭಜನೆ ಕೇಳೆಂದನತಿಗೋಪ್ಯಮಂ ೩೩

ಶಕ್ತಿಯುಳ್ಳಾ ಶಿವಂ ಸೇವ್ಯನಹತನದಿಂದ
ವ್ಯಕ್ತವಹ ಆವಾವರೂಪಂ ಧರಿಸುವನೋ
ಭಕ್ತಿಯುಳ್ಳಾತ್ಮಕನುಪಾಸಕನೆಯಹುದರಿಂದಾಯಾಯ ರೂಪ[3]ವೊಡನೆ[3]
ಯುಕ್ತಿಯೊಳ್ ಧರಿಸುವಂ ಮ[4]ತ್ತಂ ಮ[4]ಹೇಶ್ವರಂ
[5]ಶಕ್ತಿಯಿಂ[5] ಪೂಜ್ಯನಪ್ಪುದರಿನಿಂದಾವಾವ
[6]ವ್ಯಕ್ತಿಯಾ[6]ಕಾರಮಂ ತಳೆವನೋ ಜೀವ ತಾಂ ಪೂಜಕ[7]ನೆನಿಪ್ಪನೊಡನೆ[7] ೩೪

ಒಡನೆ ಯಾವಾವ ರೂ[8]ಪಂ ಘಟಿಪುದೋ[8] ಮುನಿಯೆ
ಬೆಡಗಿನಿಂ ಕೇಳುಪಾಸ್ಯೋಪಾಸಕ[9]ರೆನುತ್ತ[9]
ಯೆಡೆವಿಡದ ಪೂಜ್ಯಪೂಜಕರೆಂದು ಸಾಧ್ಯಸಾಧಕರೆಂದು ಸಂತಸದೊಳು
ದೃಢವುಳ್ಳ ಗುರುಶಿಷ್ಯರೆಂದು ಶಿವಜೀವರೆಂ
ದೊಡನೆಯಿಾ ಪರಿಪರಿಯ ನಾಮರೂಪಗಳಾಂತು
ಸಡಗರದೆ ತೋರ್ಪವಾ ಲಿಂಗಸ್ಥಲಾಂಗಸ್ಥಲಂ [10]ಮಹಮುನಿಯೆ ಕೇಳು[10] ೩೫

---

1 ಮದೆಂ (ಕಗ) 2 ತ್ಯಕ್ಷ (ಚ) 3 ಮುದದಿಂ (ಚ) 4 ತ್ತೆಮಾ (ಚ) 5 ಶಕ್ತವಹ (ಚ) 6 ಯುಕ್ತಾ (ಚ) 7 ನಹತನದೆ ನೋಡೆ (ಚ) ೮ ಪವನೆಯ್ದುವಂ (ಚ) 9 ರೆಂದು (ಚ) 10 ಸಕಲಭುವನಂಗಳಲ್ಲಿ (ಕಗ)

ಸದಮಳಾಂಗನೆ ಸತ್ಯನಿತ್ಯಸಂವಿದ್ರೂಪ
[1]ಪದನೆ ನಾಂ[1] ಲಿಂಗಾಂಗಸ್ಥಲವಿವರಮಂ ನಿಮ್ಮ
ಪದಪದ್ಮದಿಂದರಿದು ಕೃತಕೃತ್ಯನಾದೆ[2]ನೀ[2] ಸ್ಥಲಷಟ್ಕಭೇದಂಗಳಂ
ಒದವಿ ನಿರವಿಸುವುದೆನೆ ಕೇಳು ಮುನಿಗಳ ರಾಯೆ
ಮುದದಿ ಲಿಂಗಸ್ಥಲಂ ವೊಂದೆ ಮೂದೆರನಾಯ್ತು
ಅದನರಿಯಬೇಕು ಕ್ರಮದಿಂದ ಪೇಳುವೆನೆಂದ ಶಿವಸಿದ್ಧ ಯತಿವೃದ್ಧನು ೩೬

ಪ್ರಥಮದೊಳ್ ಭಾವಲಿಂಗಸ್ಥಲಂ ಅಹುದು ಮೇಣ್
ದ್ವಿ[3]ತಯಮನೆ[3] ಪ್ರಾಣಲಿಂಗಸ್ಥಲಂ ಜನಿಸಿತ್ತು
ತ್ರಿ[4]ತಯಮದು ನೋಡಲಾಗಿಷ್ಟ[4]ಲಿಂಗಸ್ಥಲಂ ವುದಯವಾಯ್ತಂತು ತ್ರಿವಿಧಂ
ಯತಿರಾಜನೇ ತ್ರಿವಿಧದೊಳ್ ಭಾವಲಿಂಗವಂದು
ಸತತ ಶಿವಭಾವದಿಂ ಗ್ರಹಿಸಬೇಕಾಗಿಯುಂ
ನತಪರಾತ್ಪರವಾಗಿ ನಿರವಯಂ ತಾನಾಗಿ ಸರ್ವತೋಧಿಕಮಾಗಿಯುಂ ೩೭

ಅನವರತಮುಂಟೆಂಬ ಮಾತ್ರವೇಯಹುದಂ ತಾಂ
ಚಿನುಮ[5]ಯಂ[5] ಜ್ಞಾನಲಿಂಗಂ ತೃಪ್ತಿಲಿಂಗಮೆಂ
ದನಘ ನಿಃಕಳಲಿಂಗಮೆಂದು ನಿರವಯಲಿಂಗವೆಂದಾತ್ಮಲಿಂಗವೆಂದು
ಘನಭಾವಲಿಂಗಕ್ಕೆ ಪರಿಯಾಯ ನಾಮಂಗ
ಳನುವಿನಿಂ ಪೇಳಲಾದಂದು ಲಿಂಗಲಕ್ಷಣಂ
ಮುನಿತಿಲಕ ಪೇಳ್ವ[6]ಡದನೇನೆಂಬೆ[6] ವಿಸ್ತಾರವೆಂದು ಸೂಕ್ಷ್ಮದೊಳೊರೆದೆವು ೩೮

ಚೈತನ್ಯಪ್ರಾಣಂಗಳೊಳಗೆ ಮನದೊಳ್ [7]ಮಹ[7]
ಜ್ಯೋತಿರ್ಮಯದ ಲಿಂಗವಾಗಿ ಬೆಳಗುವದೆಂದು
ವೋತು ವೇದಂ ಪೇಳುತಿಹು[8]ದಲಾ[8] ಲಿಂಗಂ ಮನೋಗ್ರಾಹ್ಯವೆಂದು ಮುದದಿಂ
ನೀತಿಯಿಂ ಸಕಲನಿಃಕಲಲಿಂಗವೆಂದು ಕ್ರಿಯೆ
ಗಾತೀತವಹ ನಿಃಕ್ರಿಯಾಲಿಂಗಸೂಕ್ಷ್ಮಸು
ಖ್ಯಾತವಹ ಪ್ರಾಣಲಿಂಗಮುಮೆಂಬ ಪರ್ಯಾಯನಾಮಂದಿಂದಿಹುದು ಮುನಿಪ ೩೯

---

1 ಪಮುಳದಿಂ (ಚ) 2 ನಾ (ಚ) 3 ತಿಯದೊಳ್ (ಚ) 4 ತಿಯದೊಳ್ ನೋಡೆ ಮಹಾ ಇಷ್ಟ (ಚ)
5 ಯು (ಕಗ) 6 ಡದುವತ್ಕಂತ (ಚ) 7 ತಹ (ಕಗ) 8 ದುವಾ (ಚ)

ಅಧಿಕತರದಿಷ್ಟಲಿಗಂ ಸಾವಯುವವಾಗಿ
[1]ವಿ[1]ದಿತ ದೃಕ್ಕಿರಣಂಗಳಿಂ ಗ್ರಾಹ್ಯಮಹುದಾಗಿ
ಪದುಳದಿಂದಿಷ್ಟಾರ್ಥಸಿದ್ಧಿಪ್ರಧಾನಮಾ[2]ಗಿಲ್ಲಿ[2] ಪ್ರತ್ಯಕ್ಷವಾಗಿ
ಒದ[3]ಗಿ[3]ರ್ದನಿಷ್ಟಕರ್ಮಂಗಳಂ ಕೆಡಿಸುತ್ತ
ಮಿದು ಕ್ರಿಯಾಲಿಂಗ [4]ಕಾರ್ಮಿಕಲಿಂಗ ಸದ್ಭಕ್ತಿ
ಪದಲಿಂಗಮಾಚಾರಲಿಂಗ ಯಿಂತೆಂಬ[4] ನಾಮಂಗಳಿಂದೆಸೆದಿರ್ಪುದು ೪೦

ತನ್ನ ನಂಬಿದ ಭಕ್ತಸಂಕುಳಕೆ ಯಿಷ್ಟವಹ
ಉನ್ನತೋತ್ಸವವ ಸರ್ವತ್ರಯಿಾವುದರಿಂದ
ಮುನ್ನ ಬಿಡದುತ್ತಮಾಥರ್ವಣದ ವೇದ ತಾನಿಷ್ಟಲಿಂಗಮಿದೆನುತ್ತ
ಸನ್ನಿಯಿಂ ಕೊಂಡಾಡುತಿಹಂದಲಾ ಮುನಿವರನೆ
ಹೃನ್ನಳಿನದೊಳಗೆ ತಿಳಿಯಲದು ಜ್ಯೋತಿರ್ಲಿಂಗ
ಸನ್ನುತದ ಸಕಳಸ್ಥಳಕುಳಕೆ ಮೂಲಲಿಂಗಮಿದೆಂದನಾ ರೇಣುಕೇಶಂ ೪೧

[5]ಎತ್ತಲಾನೊಂದು ನಿರ್ಗುಣಭಾವಲಿಂಗ ತ
ನ್ನತ್ತ ಗುಣಮಂ ಬೆರೆದುದೇ ಪ್ರಾಣಲಿಂಗ ಮೇ
ಣತ್ಯಧಿಕ ರೂಪಮಾಂತುದೆಯಿಷ್ಟಲಿಂಗಯಿಾ ತ್ರಿವಿಧರೂಪವನು ತಿಳಿಯೈ[5]
ಮತ್ತೆ ಕೇಳ್ ಭಾವಲಿಂಗಂ [6]ಪರಮತತ್ತ್ವವು ಮ[6]
ಹತ್ತಾದ [7]ಸೂಕ್ಷ್ಮತತ್ತ್ವವು[7] ಪ್ರಾಣಲಿಂಗಮೆಂ
ದುತ್ತರೋತ್ತರಮಿಷ್ಟಲಿಂಗಮೆ ಸ್ಥೂಲತತ್ವಂ ಕಣಾ ಗುಣಭೂಷಣ ೪೨

ಒಂದೊಂದು ಲಿಂಗಲಿಂಗಸ್ಥಲಗಳವು ಮರಳಿ
ಚಂದದಿಂದೆರ[8]ಳೆರಡು[8]ಭೇದಂಗಳಾಗಿಹವು
[9]ಹೊಂದಿದಾ[9] ಭಾವಲಿಂಗಸ್ಥಲಂ ದ್ವಿವಿಧಮಾಯ್ತು ಪ್ರಾಣಲಿಂಗಸ್ಥಲಂ
ಕುಂದದೇಯುಭಯಮಾ[10]ದಂದು[10] ಮುನಿಜನೋತ್ತಮನೆ
ಸಂದಿಲ್ಲದಿಷ್ಟಲಿಂಗಸ್ಥಲ[11]ವೆಂ ಯೆ[11]ರಡು ತೆರ
ನೆಂದುದಾ ಪರಮರಾಹಸ್ಯದೊಳಗದನುಸುರ್ವೆನೆಂದೆನಾ ಸಿದ್ಧೇಶ್ವರಂ ೪೩

---

1 ಗ (ಚ) 2 ಗಮಲ (ಚ) 3 ವಿ (ಚ) 4 ಕರ್ಮೇಶಲಿಂಗಮುವೆಂದಧಿಕೇಷ್ಟಲಿಂಗಮಾಚಾರಲಿಂಗ ಮುಮೆಂಬ (ಚ) 5 ಸತ್ತುಚಿತ್ತಾನಂದಲಕ್ಷಣಂಗಳೆ ಕೇ।ಳತ್ಯಧಿಕಭಾವಲಿಂಗಂ ಪ್ರಾಣಲಿಂಗಮೆಂ। ದಿತ್ತರನನೊಳಕೊಂಡಿಷ್ಟಲಿಂಗಂ ಕ್ರಮದಿ ತಿಳಿಯಣುಗ ಮೂರರಿರವಂ (ಚ) 6 ಪರಂತತ್ವಮಾ (ಚ) 7 ಸುಸೂಕ್ಷ್ಮ ತತ್ವಂ (ಚ) 8 ಳ್ತರದ (ಚ) 9 ಛಂದದೊಳ್ (ಚ) 10 ದವು (ಚ) 11 ಮುಮೆ (ಚ)

ಕೇಳ್ ಮಹಾಲಿಂಗ ಪ್ರಸಾದಲಿಂಗ[1]ವೆನುತ್ತ
ಪೇಳಲಾ[1] ಭಾವಲಿಂಗಂ ಯೆರಡುತೆರ[2]ನಾದು
ದಾಳೋಚನ[2] ಪ್ರಾಣಲಿಂಗಮದು ಚರಲಿಂಗ ಶಿವಲಿಂಗ[3]ಮೆಂದಾಯಿತು[3]
ಲೀಲೆಯಿಂದಾಚಾರ[4]ಲಿಂಗ ಗುರುಲಿಂಗಮೆಂ
ದಾಲೋಕಿಸಲ್ಕಿಷ್ಟಲಿಂಗಮಿತ್ತೆರಮಾಯ್ತು[4]
[5]ಭಾಳ[5]ಲೋಚನ ಭಕ್ತಜನ ಶಿರೋರತ್ನಮೆಂದಾ ಸಿದ್ಧಯತಿಯುಸುರ್ದನು ೪೪

ಅತಿಸೂಕ್ಷ್ಮದರ್ಥಂಗಳಂ ಬಲ್ಲ ಜ್ಞಾನಿಗಳ್
ಮತಿ[6]ವಂತ[6]ರುಸುರುವರ್ [7]ಅಂ[7]ಗಮೂದೆರನೆಂದಂ
ಪ್ರಥಮಯೋಗಾಂಗಸ್ಥಲಂ ದ್ವಿತಿಯ[8]ಮೇ ವಿಚಾರಿಸಲು ಭೋಗಾಂಗಸ್ಥಲಂ[8]
ಅತಿಶಯದ ತ್ಯಾಗಾಂಗ[9]ಸ್ಥಲಮೆ ತ್ರಿತೀಯಕಂ[9]
ಸತತಮಿಾ ಪ್ರಾಕಾರ್ಯದಿಂದಂಗ ತ್ರಿವಿಧಮಾ
ಯ್ತತಿಮುದ[10]ದಿ ಕೇಳದರ ತಾತ್ಪರ್ಯ[10]ವಿವರಮಂ ಮುಂದೆ ಪೇಳುವೆನೆಂದನು ೪೫

ಶಿವಯೋಗದಲ್ಲಿಯ ಮಹಾಸುಖದ ಪ್ರಾಪ್ತಿಯಿಂ
ದವೆ ಕಣಾ ಯೋಗಾಂಗಮೆಂದು ಪೇಳಲ್ಪಡುಗು
ಮವಿರತಂ ಶಿವನೊಡನೆ ಕೂಡಿ ಭೋಗಿಪುದರಿಂ ಭೋಗಾಂಗಮೆನಿಪುದನಘ
ತವಿಪ ಬಹುಸಂಸಾರಭ್ರಾಂತಿಯಂ ಲೇಸಾಗಿ
[11]ಶಿವಭಾವ[11]ಭಕ್ತಿಯಿಂ ತ್ಯಜಿಪುದೇ ತ್ಯಾಗಾಂಗ
ಮವಿ[12]ರಳದ ಯೋಗದಿಂ[12] ಸತ್ಯಮೆಂದತಿಹರುಷದಿಂದ ಬಿತ್ತರಿಸುತಿರ್ದಂ ೪೬

ಯೋಗಾಂಗಮೆನೆ ಮಹಾಕಾರಣಶರೀರಮದು
ಭೋಗಾಂಗಮೆಂದೊಡಾ ಸೂಕ್ಷ್ಮದೇಹಂ ಗಡಾ
ತ್ಯಾಗಾಂಗ[13]ಮೆನಿಪುದೆ ಸ್ಥೂಲವಿಗ್ರಹಮೆಂದು ತಾನು[13] ನಿಶ್ಚೈಸಲಾಯ್ತು
ಯೋಗಿವರನೇ ತ್ರಿವಿಧ[14]ಭೇದಂಗಳಲ್ಲಿ[14] ಮುಂ
ತಾಗಿ ಪೇಳಿದೆವು ನಿನ್ನಂ ಕೂರ್ತು ಮುದದೆ ಚಿ
ತ್ಸಾಗರಮೆನಿಪ್ಪ ರಾಹಸ್ಯಮಯ ವೀರಶೈವವನೆಂದನಾ ಗುರುವ[15]ರ[15] ೪೭

---

1 ಸ್ಥಲಂ । ಮೇಳದೊಳ್ (ಚ) 2 ನಂ । ದಾಳೋಕಿಸಲ್ (ಚ) 3 ಮುಭಯು ಮತ್ತೆ (ಚ) 4 ಯುತ ಮಿಷ್ಟಲಿಂಗದ ಸಕೀಲವೆ ಗುರುಲಿಂಗಾಚಾರ ಲಿಂಗಮವು (ಚ) 5 ಫಾಲ (ಗ) 6 ಮಾನು (ಚ) 7 ಲಿಂ (ಚ) 8 ಭೋಗಾಂಗಸ್ಥಲ ತೃತೀಯಂ ಭಾವಿಸೆ (ಚ) 9 ಸುಸ್ಥಲಂ ತಾನಹುದು (ಚ) 10 ದೆ ಪೇಳ್ದೆವವರಂತಸ್ಥವಹ (ಚ) 11 ಭವದೀಯ (ಚ) 12 ತತಂ ಇಲ್ಲಮಿದು (ಚ) 13 ಮೆಂದ ದುವೆ ಸ್ಥೂಲವರ್ಷಮಂ ತಾನಂದು (ಚ) 14 ಭೇದೋಪಭೇದ (ಚ) 15 ರಂ (ಚ)

•ಯೋಗಾಂಗವೈಕ್ಯನೆಂದೆನುತ ಶರಣನೆನುತ್ತ
ಭೋಗಾಂಗ ಪ್ರಾಣಲಿಂಗಿ ಪ್ರಸಾದಿಯೆಂದೆನುತ
ತ್ಯಾಗಾಂಗ ಭಕ್ತನೆಂದೆನುತ ಮಾಹೇಶ್ವರನೆನುತ್ತಂ ದ್ವಿವಿಧಮಾದುದು
ಹೋಗೆ ಮೂರಂಗಂಗಳೊಂದೆರಡನ್ನೈದಿಯಾ
ರಾಗಿ ಭಕ್ತಂ ಶಾಂತರಂ ಪ್ರಾಣಲಿಂಗಿ ತಾ
ನಾಗಿ ಪ್ರಸಾದಿ ಶರಣಂ ನೋಡಲೈಕ್ಯನೆಂದೆಣಿಕೆವೆತ್ತಿರುತಿರ್ಪುದು ೪೮

ಎಲೆ ಕುವರ [1]ಆಯಂ[1]ಗಸ್ಥಲದಲ್ಲಿ ಸ್ಥಿರವಾ[2]ಗಿ
ನೆಲಸಿಹುದು ಸದ್ಭಕ್ತಿ[2] ಮತ್ತೆ ಸಂಸ್ಕೃತಿಸಂಗ
ವಿಲಯಮಪ್ಪುದಂ [3]ಭುವನ[3]ಸ್ಥಲದಲ್ಲಿಯದುಂ ಮಹಾಸ್ಥಲ ನೋಡೆ ಸತ್ಯವಾಗಿ
ಸ್ಥಲವೆಂಬ ಶಬ್ದದವಯವದರ್ಥಮಂ ಬಲ್ಲ
ಸುಲಲಿತ ಜ್ಞಾನಿಗಳ್ ಪೇಳ್ವರಂಗಸ್ಥಲಂ
ಸ್ಥಲಮೆಂದು ಬಿತ್ತರಿಪರೆಂದು ರೇವಣಸಿದ್ಧನುಸುರ್ದನಾನಂದದಿಂದ ೪೯

ಈಗ ಪೇಳ್ದೀ ಭಕ್ತಿ ಷಟ್ಸ್ಥಲದೊಳೆಡಬಿಡದೆ
ಬೇಗ ತಾನೇ ಪ್ರವೇಶಿಸಿ ಯಾರುತೆರದ ರೂ
ಪಾಗಿಯದುಸೋಪಾಧಿಭೇದದಿಂ ಕ್ರಮಂದೆಯಾಯಾ ನಾಮದಿಂ ಚರಿಸುತ
ಯೋಗಿವರನದಂಪೆ ಸಮರಸ[4]ಘನಾನಂದವೆಂ
ದಾಗಲನುಭವ[4] ಸಾವಧಾನ [5]ನಿಷ್ಠಾ ಶ್ರದ್ಧೆ
ಯಾಗಲೀ ಪದಪೂರ್ಣದಿಂದ ಪೇಳಲ್ಪಡುವುದಾರು ತೆರದಿಂ ಭಕ್ತಿಯುಂ[5] ೫೦

ಎಲೆ ಕುಂಭ[6]ಜನ್ಮ[6] ಕೇಳಷ್ಟವಿಧ [7]ಕೀ[7]ಲಂಗ
ಳಲಘು [8]ಪಾದಾಂಗಲಿಂಗಂ[8] ಶಕ್ತಿಭಕ್ತಿಯುಂ
ಬಲ[9]ವಾದ[9] ಮುಖಹಸ್ತಮುಂ ಪದಾರ್ಥಂ [10]ಪೂಜಕನುಮಖಿಲಲೋಕವರಿಯೆ[10]
ಸಲೆಯಷ್ಟವಿಧಸ್ಥಲಂಗಳು ಬೇರೆಬೇರೆ ತಾ
ವೊಲವಿನಿಂದೊಂದು ಸ್ಥಲಗಳೇ ಷಡ್ವಿಧ
ಸ್ಥಲಗಳೆಂಬಾ ಸಂಜ್ಞೆ[11]ಗಳ ತಾಳ್ದವೆಂದು[11] ಗುರುರೇವಣೇಶಂ ಪೇಳ್ದನು ೫೧

---

1 ನಾಮಂ (ಚ) 2 ದ ! ಸಲೆಭಕ್ತಿನೆಲಸಿಹುದು (ಚ) 3 ವಾವ (ಚ) 4 ಭಕ್ತಿಯತ್ಯಧಿಕಮಾಗಿ ಯಾನಂದಮನುಭವ (ಚ) 5 ಶಿವರಾಗಯುತನೈಷ್ಠೆಶ್ರದ್ಧೆಗಳೆಂದು ಷಟ್ಪ್ರಕಾರಂ ಕೇಳು ನೀನೆಂದನು (ಚ) 6 ಜ (ಚ) 7 ಸಕೀ (ಚ) 8 ವಂಗಂ ಲಿಂಗಮುಂ (ಚ) 9 ವಂತ (ಚ) 10 ಪ್ರಸಾದಂಗಳೆಂದರಿಯೆಂಟ್ಪೆರಂ (ಚ) 11 ಳಾದವೆಂದಾ (ಚ)

• ಚ ಪ್ರತಿಯಲ್ಲಿ ೪೮ ನೆಯ ಪದ್ಯವಿಲ್ಲ

ವರ ಪರಮಗುರುವೆ ಬಿನ್ನಪವ ಲಾಲಿಸಿ ನೀವು
ವೊರೆದಷ್ಟವಿಧ [1]ಕೀಲಕದ ರೀತಿ ಯಾವುದದ[1]
ನಿರವಿಸುವುದೆನಲಂಗಲಿಂಗಮುಭಯಂ [2]ನೋಡಲಿತ್ತೆರಂ ತಾನಪ್ಪುದು[2]
ಭರದಿಂದಲಾ ಶಕ್ತಿ ಭಕ್ತಿ[3]ಯುಂ ವದನಮುಂ
ಕರಮುಂ ಸದರ್ಪಣಪ್ರಸಾದಿಯುಂ ನೋಡಲೀ
ತೆರಮಾಗಿ ಯೆಂಟರೆಣಿಕೆಯಲಿ ಕೀಲಕಗಳೆಂದೆನಿಸಿಕೊಳುತಿರುತಿರ್ಪವು[3] ೫೨

ಧರಣಿಯೇ ಭಕ್ತನಂಗಂ ಸುಚಿತ್ತವೆ ಕರಂ
[4]ಭರದೊಳಾ[4]ಚಾರಲಿಂಗಂ ಘ್ರಾಣವೇ ಮುಖಂ
ವರಕ್ರಿಯಾಶಕ್ತಿ ಸದ್ಭಕ್ತಿಗಂಧದ್ರವ್ಯಶೇಷ[5]ಕನೆ ಭಕ್ತನಪ್ಪಂ[5]
ಚಿರವಿಧ[6]ದ ಮಾಹೇಶವಾರಿಯೇಯಂಗ[6] ಸಂ
ಸ್ಥಿರಬುದ್ಧಿ ಹಸ್ತ ಗುರುಲಿಂಗಮುಖರಸನೆ ತಾ
ನಂರೆ[7]ಭಕ್ತಿನಿಷ್ಠೆ[7] ರಸದ್ರವ್ಯಶೇಷಂ [8]ಜ್ಞಾನಶಕ್ತಿಯಿಂತಷ್ಟರೂಪಂ[8] ೫೩

ಜಾತವೇದಾಂಗ ನಿರಹಂಕಾರ ಕರವಮಳ
ಖ್ಯಾತಲಿಂಗಂ ನೇತ್ರವದ[9]ನೇ*ಚ್ಛೆ*ಶಕ್ತಿಸಂ
ಭೂತಾವಧಾನವೇ ಭಕ್ತಿರೂಪಂ ದ್ರವ್ಯಶೇಷಪ್ರಸಾದಿ ಭಕ್ತಂ[9]
ವಾತಾಂಗ[10]ಚಿತ್ತ[10]ಹಸ್ತಂ ಮಹಾಚರಲಿಂಗ
ಮಾ[11]ತ್ವಕ್ಕೆ ಮುಖ[11]ಮಾದಿಶಕ್ತಿಯನುಭ[12]ವಭಕ್ತಿ
ಜಾತಸಂಸ್ಪರ್ಶನಂ ದ್ರವ್ಯಮಿಾ ಪ್ರಾಣಲಿಂಗಿಯೆ ಭಕ್ತನಾಗಿರ್ಪನಂ[12] ೫೪

ಸುರವರ್ತ್ಮದೇಹ ಸುಜ್ಞಾನಕರ ಶ್ರೋತ್ರಮುಖ
[13]ಚರಮೂರ್ತಿ[13]ಲಿಂಗಮಾನಂದಭಕ್ತಿ ಸುಶಕ್ತಿ
ಪರನಿನದದ್ರವ್ಯಮದೆ ಶೇಷಮರಿ ಶರಣಾಷ್ಟವಿಧ[14]ಕೀಲಮಾ[14]ತ್ಮನಂಗಂ
ಭರದೆ ಸದ್ಭಾವಕರಮಾಲಿಂಗಹೃನ್ಮುಖಂ
ಯಿರದೆ ಸಮರಸಭಕ್ತಿ ಚಿಚ್ಛಕ್ತಿ ಸಂತೃಪ್ತಿ
ಯರರೆ ದ್ರವ್ಯಂ ಶೇಷ[15]ನೈಕ್ಯನಿಂತೆಂಟು ತೆರಮಾದ ಕೀಲಕವ ತಿಳಿಯೈ[15] ೫೫

---

1 ಸಕೀಲದ ಜನನಮಾವು ದ (ಚ) 2 ಸತ್ತುನೀಳ್ತೆರಂ ತಾಸೆಂದರಿ (ಚ) 3 ಗಳ್ ನೋಡ ಚಿತ್ಪರರೆ ಯಾನಂದಮರ್ಪಣ ಪ್ರಸಾದವೆ ಕಣಾ ತರುಣ ಕೇಳಿನ್ನುಳಿದವವು ಸತ್ತು ಚಿತ್ತುಮಾನಂದಮಯಮೆಂದರಿವುದು (ಚ) 4 ಕರಕೆಯಾ (ಚ) 5 ಮಿವುಭಕ್ತನಷ್ಟ (ಚ) 6 ಸಕೀಲ ಜಲಮಾಹೇಶನಂಗ (ಚ) 7 ಜ್ಞಾನನೈಷ್ಠೆ (ಚ) 8 ಮಾಹೇಶ್ವರನಷ್ಟವಿಧ ಸಕೀಲಂ (ಚ) 9 ನೆಚ್ಛಾಸಾವಧಾನಾದಿಭಕ್ತಿಯು ರೂಪುದ್ರವ್ಯಶೇಷಪ್ರಸಾದಿಯು ಸಾಷ್ಟವಿಧ ಸಕೀಲಂ(ಚ) *ಚ್ಛಾ (ಗ) 10 ಸುಮನ(ಚ) 11 ತೆರದ ತ್ವನ್ಮುಖ(ಚ) 12 ವದಭೂತಿಭಕ್ತಿಯು ಪರ್ಶದ್ರವ್ಯ ಪ್ರಸಾದಾಷ್ಟ ಪ್ರಾಣಲಿಂಗಿಯ ಸಕೀಲಂ (ಚ) 13 ವರಶೇಷ (ಚ) 14 ಸಕೀಲಾ (ಚ) 15 ನಮಳಾಷ್ಟವಿಧ ಸಕೀಲಂ ಮುನಿಯೆ ಐಕ್ಯಮಯವು (ಚ)

ಕೇಳಂ ಯತಿ ಸೂಕ್ಷ್ಮಷಟ್ಸ್ಥಲಗಳಂ ಶ್ರದ್ಧೆಯಿಂ
ದಾಲಿಸ ಸ್ಥಿರಚಿತ್ತ ತಾನಾಗಿ ಗ[1]ದ್ದು[1]ಗೆಯ
ಮೇಲಾಗ [2]ಮಂಡಿಸಿಯೆ ಭಸ್ಮರುದ್ರಾ*ಕ್ಷಿಯಿಂ*[2] ಪೂತಾತ್ಮನಾಗೆ ಭಕ್ತಂ
ಮೂಲಮಂತ್ರವ ನಿಷ್ಠೆಯಿಂ ಸ್ಮರಿಸೆ ಮಾಹೇಶ್ವ
ರಾಲಿಂಗಮಂ ಸಾವಧಾನದಿಂ ಹಸ್ತಕ್ಕೆ
ಲೀಲೆಯಿಂದೆಯ್ದಿಸಲ್ಕಾ ಪ್ರಸಾದಿಸ್ಥಲಂ ಎಂದು ಬೋಧಿಸುತಿರ್ದನು ೫೬

ತಲ್ಲಿಂಗಮನುಭಾವಭಕ್ತಿಯಿಂ [3]ಭ[3]ಜಿಸಲ್ಕೆ
ಸಲ್ಲೀಲೆಯುಹ ಪ್ರಾಣಲಿಂಗಿಸ್ಥಲಂ ಮರಳಿ
ಚಿಲ್ಲಿಂಗಕಾನಂದಭಕ್ತಿಯಿಂದಖಿಳದ್ರವ್ಯಗಳರ್ಪಿಸಲ್ಕೆ ಶರಣಂ
ತಲ್ಲಣಿಸದಾ ಲಿಂಗಶೇಷವಂ ಸಮರಸದಿ
ಯುಲ್ಲಾಸದಿಂ ಕೊಳಲ್ಕೈಕ್ಯನೆಲೆ ಸಕಲಯಮಿ
ವಲ್ಲಭನೆ ಕೇಳ್ ಮಹಾವೀರ ಶೈವಾರ್ಚನಾಕ್ರಮವೆಂದನಾ ದೇಶಿಕಂ ೫೭

ಅನವರತ ಶಿವನೊಳತಿಭಕ್ತಿಯುಳ್ಳವನಾಗಿ
ಘನಲಿಂಗಜಂಗಮವನೇಕಭಾವದಿ ಕಂಡು
ಮನಮುಟ್ಟಿಯರ್ಚಿಸುತ್ತಾವಾಗ ದಾಸೋಹಮೆಂಬ ಭಾವವನೆ ಬಲಿದು
ವಿನಯದಿಂ ಲಾಂಛನಕೆ ಶರಣೆನುತ [4]ಕಿಂಕರತೆ
ಯನುವನರಿದಾ[4]ಚಾರವ್ರತನಿ[5]ಯಾಮಂ[5] ಬಲಿದು
[6]ಜನವಿರೋಧವನು ಕೈಗಟ್ಟಿದೂರಿಗೆ ಬರದೆ ಬಾಳುವನೆ ಭಕ್ತನೆನಿಪಂ[6] ೫೮

ಗುರುಲಿಂಗಜಂಗಮತ್ರಯದೊಳಾಸ್ತಿಕಬುದ್ಧಿ
ಪರಧ[7]ನವ[7] ಪರಸತಿ[8]ಯ ಹತಿಯ[8] ಪರದೈವಗಳ
ನಿರದೆ ತ್ಯಜಿಸುತ್ತಲತಿವೀರವ್ರತನಿಯಮಂದಿಂ ಸತ್ಯಸದ್ಧರ್ಮದಿಂದ
ಭರಿತಶೌಚಾದಿಸಲ್ಲಕ್ಷಣಗಳಿಂ ಲಿಂಗ
ವರನಿಷ್ಠೆಯಿಂದಿತರಸಮಯಮಂ ನೀಕರಿಪ
ಸ್ಥಿರಧೃತಿಯೆ ಮಾಹೇಶ್ವರಸ್ಥಲಂ ಕೇಳೆಂದು ಕೂರ್ತು ಬಿತ್ತರಿಸುತಿರ್ದಂ ೫೯

---

1 ರ್ದು (ಗ) 2 ಮೂರ್ತಂಕೊಂಡು ಭಸ್ಮರುದ್ರಾಕ್ಷಯುತ (ಚ) * ಕ್ಷದಿಂ (ಗ) 3 ಸ್ಮ (ಕ) ದೆ (ಚ)
4 ಕಿಂಕುರ್ವಾಣಭಾದನುವಿಡಿದುವಾ (ಚ) 5 ಯಮಮಂ (ಚ) 6 ಸಮಯದಿಂ ಸತ್ಪಾತ್ರಸೂತಕಮಿಲ್ಲದವನೆ ಸದ್ಭಕ್ತನೈ ಕೇಳ್ ಕುಮಾರ (ಚ) ? 7 ನಂ (ಚ) 8 ಯು ಹಿಂಸೆ (ಚ)

ಪಳಿ[1]ದ[1]ಹಂಕೃತಿಯು ನಿರಹಂಕಾರದೊಳ್ ನಿಂದು
ತುಳಿದಿಂದ್ರಿಯದ ವಿಷಯವಾತ್ಮೋಪಭೋಗಗಳ
ನುಳಿದು ಮತ್ತಮಿತಗುರುಲಿಂಗಜಂಗಮತ್ರಿವಿಧಕಂ ಸಾವಧಾನದಿಂದ
ಸಲಿಸುತಂ ಸಕಲದ್ರವ್ಯಾದಿವಸ್ತುಗಳ [2]ತಾಂ
ಲಲಿತವಹ[2] ಸುಪ್ರಸಾದವ ಸೇವಿಸುತ್ತ ಮನ
[3]ಮೊಲಿದುದೆ ಮಹಾ[3]ಸುಪ್ರಸಾದಿಸ್ಥಲಂ [4]ಧರೆಯೊಳೆಂದನಾ[4] ಗುರುಶೇಖರಂ ೬೦

ಪ್ರಾಣಗುಣವೆಲ್ಲವುಂ ಲಿಂಗಗುಣವಾಗಿಯಾ
ಪ್ರಾಣಲಿಂಗಂ ಪ್ರಾಣವುಂ ಏಕರಸವಾಗಿ
ಪ್ರಾಣೇಂದ್ರಿಯಾದಿ ದುರ್ಗುಣಗಣನೆಯಾ ಮರವೆಯಂ ನೀಗಿ ನಿರ್ಭ್ರಾಂತಿಯಿಂ
[5]ಹೂಣೆ[5] ಮನಮಂ ಲಿಂಗದೊಳ್ ನಿಂದ ನಿಶ್ಚಲದ
ತ್ರಾಣಮನುಭವದಿಂದ ಸುಖದುಃಖಮಿಲ್ಲದ
ಕ್ಷೀಣತ್ವಮೆ ಪ್ರಾಣಲಿಂಗಿಸ್ಥಲಂ ಕಣಾ ಎಂದನಾಚಾರ್ಯವರ್ಯಂ ೬೧

ಶರಣಸತಿ ಲಿಂಗಪತಿಭಾವದಿಂ ನಿಜ[6]ವಿಷಯ
ಕರಣ[6]ಮುಂತಾದವಂ ಲಿಂಗದೊಡನೆಯ್ದಿಸುತ
ಮಿರದೆ ಪಂಚೇಂದ್ರಿಯಂಗಳ ಪ್ರಪಂಚಂ ಪೊರ್ದದವಿರಳಜ್ಞಾನದಿಂದ
[7]ಹರನೊರ್ವನಧಿಕನುಳಿದವನಿತ್ಯವೆಂಬ ನಿ
ರ್ಭರವಮತದೆ[7]ಯಾನಂದಭಾವದೊಳಗೊಂದಿರ
ಲ್ಕರರೆ ಶರಣಸ್ಥಲಂ ಕೇಳೆಂದು ಬಿತ್ತರಿಸುತಿರ್ದ [8]ಗುರು[8]ಚಕ್ರೇಶ್ವರಂ ೬೨

ನಾನು ನೀನೆಂಬ ಪ್ರಕೃತಿಯನಳಿದು ಷಡ್ವರ್ಗ
ಹೀನದೇಹೇಂದ್ರಿ[9]ಯಾಂತಃಕರಣ ಕೊರ್ಮೆಗಳ[9]
ನ್ಯೂನತ್ವಮಂ ಕಳೆದು ಸಮರಸದ ಭಕ್ತಿಯಿಂದಷ್ಟವಿಧಪೂಜೆಗಳನು
ಧ್ಯಾನವಮೌನಾದಿ ಭ್ರಮೆಂಗಳ ತ್ಯಜಿಸುತಂ ಮುದದೆ
ತಾ ನವ್ಯಲಿಂಗದೊಳ್ ಬೆರೆದು [10]ಕರ್ಪೂರಂ ಕೃ
ಶಾನುವಂ ಬೆರದ[10]ಪಾಂಗಿಂದಿರಲ್ಕದುವೆಯ್ಯೈಕ್ಯಸ್ಥಲಂ ಕೇಳ್ ಮುನೀಶ ೬೩

---

1 ದು (ಕಚ) 2 ತಾನಕಳಂಕ (ಚ) ? 3 ವಿಕಳಮಿಲ್ಲಮುದೀಗ (ಚ) 4 ಯೆಂದನಾ (ಚ) 5 ಪೂಣೆ (ಚ)
6 ಕರಣ | ಹರಣ (ಚ) 7 ಚಿರಶಿವಂ ಸತತ ನಿತ್ಯಂ ತಾಂ ನಿತ್ಯನೆಂಬುರು ಮತದೆ (ಚ) 8 ಯತಿ (ಚ)
9 ಯಾತ್ಮಂ ಷಡೂರ್ಮೆಗಳ (ಚ) 10 ಶಿಖಿ ಕರ್ಪೂರ ಮಾನಯೋಗದ (ಚ)

ಎಲೆ ಯಮಿಯೆ ಕೇಳ್ ಪಿಂದೆ ಪೇಳ್ದ ಲಿಂಗಾಂಗಮಯ
ಸ್ಥಲ ಷಡ್ವಿಧಗಳ ಸರ್ವಾಚಾರಸಂಪತ್ತ
ನೊಲವಿನಿಂ ಪೇಳುತಿಹೆವಾಚಾರಲಿಂಗ ಗುರುಲಿಂಗ ಶಿವಲಿಂಗವೆಂದು
ಫಲಿತಚರಲಿಂಗ ಪ್ರಸಾದಲಿಂಗಂ ಮತ್ತೆ
ಯಲಘು[1]ತರವಾಗಿಯೆ ಮಹಾಲಿಂಗವೆಂದಿವರೊ
ಳಳವಟ್ಟ ಮೊದಲಲಿಂಗವೆ ಸದಾನಿಯತಗಣವೆಂಬ ತ್ರಿತ್ವವ ಪಡೆವುದು[1] ೭೪

ಶರಣಜನರೆಲ್ಲರಹುದೆಂಬುದೆ ಸದಾಚಾರ
ಧರಿಸಿರ್ದ ಶೀಲ[2]ಗಳ ನಡಸೆ ನಿಯತಾಚಾರ
ಹರನಿಂದೆಯಂ ಕೇಳದಿರುವದೆ ಗಣಾಚಾರವಿಾ ತೆರದಿ ಗುರುಲಿಂಗವು
ವರದೀಕ್ಷೆ ಶಿಕ್ಷೆಯನುಭವವೆಂದು ತಾಂ ಮೂರು
ತೆರನಾಗಿಹಂದು ಕ್ರಿಯಾರೂಪದಿಂ ದೋಷಮಂ
ಪರಿವಂದದಿಂ ಚಿತ್ತವೃತ್ತಿಗೆ ಶಿವಾರ್ಥಮಂ ಪತ್ತಿಸುವ ಭಾವದಿಂದಂ[2] ೭೫

ಶಿವಲಿಂಗ ತ್ರಿವಿಧಮಿಷ್ಟಪ್ರಾಣಭಾವವೆಂ
ದವಿರಳಾಚಾರ್ಯನುಪದೇಶಿಸುತ ಹಸ್ತದೊಳ್
ತವಕದಿಂದಿತ್ತ ವಸ್ತುವೆ ಕಣಾ ಇಷ್ಟಲಿಂಗಂ ದೇಹಗುಣ[3]ಮಂಟದ[3]
ಸವಿಶೇಷಪ್ರಾಣಲಿಂಗಂ ತ್ರಿವಿ[4]ಧಕಾಲದೊಳ್[4]
ಭವನಲ್ಲದನ್ಯ[5]ಮನ್ನರಿಯದಿರೆಯದು ತಾನೆ[5]
ಕುವರ ಕೇಳ್ ತೃಪ್ತಿಲಿಂ[6]ಗಂ[6] ನಿಜಮೆನುತ್ತ ಗುರುಚಕ್ರೇಶ್ವರಂ ಪೇಳ್ದನು ೭೬

ಚರಲಿಂಗವೇ ಮೂರಂತೆರ ಕಣಾ ಸ್ವಯಮುಚರ
ಪರಮೆಂದಿವಕೆ ವಿವರಂ ಸ್ವಯಮೆನಲ್ಕೆ ತಾಂ
ಚರಮೆನಲ್ ಲಾಂಛನಂ ಮುಂತಾಗಿ ಚರಿಸುವುದು ಪರಮೆಂದೊಡರಿವು ಮುಖ್ಯಂ
ಭರದಿಂದ ಸಂಚರಿಪುದೈ ಶೇಷಲಿಂಗಮಿಾ
ತೆರದ ತ್ರಿವಿಧಂ ಶುದ್ಧಸಿದ್ಧಪ್ರಸಿದ್ಧದಿಂವಿ
ವರವ ಗುರುಮುಖದಿಂ ಮಲತ್ರಯಮನಳಿದುಳಿದ ಶೇಷ[7]ಮೇ ಶುದ್ಧಮೆನಿಕುಂ[7] ೭೭

---

1 ಮಹಾಲಿಂಗವಾರಕೆ ವಿವರಮುಂಟಣುಗ ಸುಲಭಮಾಚಾರಲಿಂಗಂ ಸದಾಚಾರ ನಿಯತಾಚಾರಗಣ ತ್ರಿವಿಧವುಂ (ಚ) 2 ವ್ರತನಿಯಮಂ ಬಿಡದೆಯಾಧಾರದೊಳಿರೆ ನಿಯತಾಚಾರ ಶಿವನಿಂದೆಗೊಡಬಡದಿರೆ ಗಣಾಚಾರವುಂ ಗುರುಲಿಂಗ ತ್ರಿವಿಧ ದೀಕ್ಷಾಶಿಕ್ಷೆ ಸ್ವಾನುಭಾವರರೆ ದೀಕ್ಷಾಯೆನಲ್ ಗುರು ಶಿಕ್ಷೆಯೆ ಚರಂ ಪರಜ್ಞಾನವೆನೆ ತನ್ನಿಂದ ತಾನರಿಪುದೈ ಕೇಳೆಂದು ಬಿತ್ತರಿಸಿದಂ (ಚ) 3 ನಾಸ್ತಿಯೆ (ಚ) 4 ದವಸ್ಥೆಯೊಳ್(ಚ) 5 ಧವನರಿಯದಿರೆಯಾ ಮಹ(ಚ) 6 ಗದ(ಚ) 7 ಮೆಂದೊರೆದನಾಚಾರ್ಯಮೂರ್ತಿ(ಚ)

ಲಾಲಿಸೈ ಸಿದ್ರವೆಂದೊಡೆ ಲಿಂಗಮುಖದಿಂದ
ಮೂಲಕರಣಗಳ ಸಂಪರ್ಕ[1]ಮಂ ಕಳಿದಂದಾ
ಮೇಲೆ ಪ್ರಸಿದ್ಧವೆಂವರೆ[1] ಜಂಗಮುದ ಬೋಧೆಯಿಂದೀಸಚ್ಚೈತನ್ಯಮಂ
ಆಲೋಕಿಸುತ್ತಖಂಡಿತವಂಳಿದು ನಿಂದುದು ಸಂ
ಲೋಲಪ್ರಸಾದ[2]ಲಿಂಗಸ್ಥಲಂ ತಾಂ ತ್ರಿವಿಧ[2]
[3]ಕೇಳು[3] ಪಿಂಡಜಮಂಡಜಂ ಬಿಂದುಜಂಗಳಿವನೇವೇಳ್ವೆನೆಲೆ ಮುನಿವರ ೬೮

ಪಿಂಡಜಂ ತಾನೆನೆ ಘಟಾಕಾಶವಂಡ[4]ಜಂ[4]
ಖಂಡದ್ರುಹಿಣಾಂಡವಂದು ಬಿಂದು ಜಮಹಾಗಗನೆ
ಮಂಡನದಿ ಪೇಳ್ದಿವಾ ಲಿಂಗಷಟ್ಸ್ಥಲಕೆ ಪದಿ[5]ನೆಂಟು ಗೋಪ್ಯಸ್ಥಲಗಳಂ[5]
ಚೆಂಡ[6]ತರ[6]ಭಕ್ತ ಮಾಹೇಶ್ವರ [7]ಭವೌಘ[7]ವೇ
ದಂಡಕೇಸರಿ ಪ್ರಸಾ[8]ದಿ ಪ್ರಾಣಲಿಂಗಿಯು
ದಂ[8]ಡಜಯ ಶರ[9]ಣೈಕ್ಯಸ್ಥಲಗಳೊಳ್ ಭಕ್ತಿಸ್ಥಲಂ ತ್ರಿವಿಧವಾಗಿರ್ಪುದಂ[9] ೬೯

ಗುರುಭಕ್ತಿ ಲಿಂಗಭಕ್ತಿಯುಂ ಸುಜಂಗಮಭಕ್ತಿ
ಯಿರವ ಪೇಳ್ವೆಂ ತನುಕ್ರಿಯೆಯಿಂದ ತನುಮನಃ
[10]ಕರಣಗಳನರ್ಪಿಪುದೆ[10] ಗುರುಭಕ್ತಿ ಮನ[11]ದಿಂದ ತನುಮನೋಧನವಿಮಾವುದೆ[11]
[12]ಹರಭಕ್ತಿ ಧನದ ಮೂಲದಿ ತನುಮನೋಧನವ
ನಿರದರ್ಪಿಸುವುದೆ ಜಂಗಮಭಕ್ತಿಯಿಾ ಮೂರು
ತೆರನ ಚೆನ್ನಾಗಿ ಲಾಲಿಪುದೆಂದಗಸ್ತ್ಯಂಗೆ ರೇವಣಸಿದ್ಧನುಸುರ್ದಂ[12] ೭೦

ಮಾಹೇಶ್ವ[13]ರಂ ತ್ರಿವಿಧಭೇದಭೇದ್ಯಂ ತತ್ವ[13]
ಮಂಹಿಪೊಡೆ ಯಿಹಲೋಕ ವೀರಪರಲೋಕವೀ
ರೀಹದದಿ ಲಿಂಗವೀರ [14]ನೋಡಲಾಗಿ[14] ಮರ್ತ್ಯದ ಮಹಾಭಕ್ತಗಣರು
ಸಾಹಸಿಗನಹುದೆನಲು ಸಕಲದರ್ಶನಗಳಂ
ನೇಹದಿಂ ನೀಕರಿಸಿ ತನ್ನ ಸಮಯಕೆ ಮುದದೆ
ದೇಹಪ್ರಾಣಾರ್ಥಮಂ ಮೆಚ್ಚಿಸುವನಾ[15]ವ[15]ನಹ ಲೋಕ[16]ವೀರಂ[16] ಮುನಿವರ ೭೧

---

1 ಮುಳಿದಾ ಶೇಷಸ್ಥೂಲ ಪ್ರಸಿದ್ಧಮೆನೆ (ಚ) 2 ಮಹಲಿಂಗಸ್ಥಲಂ ತ್ರಿವಿಧಂ (ಚ) 3 ಜಾಲ (ಚ) 4 ಜಾ (ಚ) 5 ನೆಣ್ ಸ್ಥಲಗಳ ವಿವರಮಂ (ಚ) 6 ವಹ (ಚ) 7 ಖಲೌಘ (ಕಗ) 8 ದಿಯುಂ ಪ್ರಾಣ ಲಿಂಗಿಯು ಘ । ತಂ (ಚ) 9 ಣ ಮೈಕ್ಯಂ ಸ್ಥಲಂ ತ್ರಿವಿಧ ನೋಡೆ (ಚ) 10 ಭರದೆಯರ್ಪಿಸುವ ದೆಸೆ ಯಿಂದ (ಚ) 11 ಕ್ರೀಯಿಂದ ಮನತನುಧನಂ (ಚ) 12 ವರಭಕ್ತಿಯಿಂ ನಿವೇದಿಸಲು ಲಿಂಗದ ಭಕ್ತಿ । ಯರರೆ ಧನಕ್ರೀಯಿಂದೆ ಧನುವನಂತನು ಮೂರು । ಮರಿವಿನಿಂದರ್ಪಿಸಲ್ಕದುವೆ ಜಂಗಮಭಕ್ತಿಯುವಿ ಶಾಶ್ವತ ಲಾಲಿಸು (ಚ) 13 ರಸ್ಥಲಂ ತ್ರಿವಿಧ ಭೇದಂ ಕಣಾ (ಚ) 14 ಇವಕೆ ವಿವರ (ಚ) 15 ತ (ಚ) 16 ಓತಂ (ಚ) ?

ದೇವಲೋಕದ ಶಿವಗಣಂಗಳ[1]ದನ[1]ಹುದೆನಲ್
ತೀವಿರ್ಪ ಸಂಸಾರಸರ್ವಸಂಗವ ತ್ಯಜಿಸಿ
ದೇವಲೋಕದ ನಾಲ್ಕುಪದಫಲಂಗಳ ಬಿಡಲ್ಕಾಗಿ ಪರಲೋಕವೀರಂ
ಸಾವಧಾನದಿ ಲಿಂಗಸಂಗದಿಂದಂಗಮುಖ
ಮಾವಾವ ಸಕಲಕರಣಂಗ[2]ಳದ ಶಿ[2]ವನೊಳಗೆ
ವೋವಿ ಸನ್ನಿಹಿತವಾಗಿರೆ ಲಿಂಗವೀರನ್ನೈ [3]ಮುನಿ[3]ರಾಜ ಕೇಳೆಂದನು ೭೨

ನುತಪ್ರಸಾದಿಸ್ಥಲಂ ತ್ರಿತಯವಾವಾವೆನಲ್
ಸತತಾರ್ಪಿತ ಪ್ರಸಾದಿಯಂ ಸಾವಧಾನದು
ನ್ನತಪ್ರಸಾದಿಯು ಪರಿಣಾಮಪ್ರಸಾದಿ ಮೂದೆರಕಾಯ ಕರತಳದೊಳು
ಪ್ರತಿದಿನಂ ಸಕಲದ್ರವ್ಯಗಳಿಷ್ಟ[4]ಲಿಂಗೇಶ
ಗತಿಶಯದಿ[4] ಕೊಟ್ಟುಕೊಳುತಾನಂದದಿಂದಿರಲ್
ಯತಿವರನೆಯರ್ಪಿತಪ್ರಸಾದಿಯೆನುತಂ ಬಿಡದೆ ಕೊಂಡಾಡುವರ್ ಶರಣರು ೭೩

ಪಂಚೇಂದ್ರಿಯಂಗಳೊಳ್ ಪಂಚವಿಧಲಿಂಗವಂ
ತಾಂ ಚದುರಿನಿಂ ಪ್ರತಿಷ್ಠೆಯಮಾಡುತಲ್ಲಲ್ಲಿ
ವಂಚಿಸದೆಯಖಿಳಸುಖಮಂ ಮನದ ಕೈಯಲ್ಲಿ ಕೊಟ್ಟುಕೊಳಬಲ್ಲಡಾತಂ
ಮಿಂಚುವತಿಯವಧಾನ ಸುಪ್ರಸಾದಿಯು [5]ಮೋಹ[5]
ಸಂಛನ್ನದೇಹಾಶ್ರಯಂಗಳಿದಂ ಲಿಂ[6]ಗತ್ರ[6]
ಯಂ [7]ಚಲಿತಮಿಲ್ಲದಿರೆ ಭಾವದೊಳಗಾತ ಪರಿಣಾಮಪ್ರಸಾದಿಯೆನಿಪಂ[7] ೭೪

ಪ್ರಾಣಲಿಂಗಿಸ್ಥಲಂ ತ್ರಿವಿಧವಾ[8]ಗಿರುತಿಹುದು[8]
ಜಾಣನೇಯಾಚಾರಪ್ರಾಣಿ ಲಿಂಗಪ್ರಾಣಿ
ಮಾ[9]ಣದೇ ಜಂಗಮಪ್ರಾಣಿಯೆಂತೆಂದು ತನುಚಿತ್ತವಾಕ್ಯಂಗಳೊಳಗೆ[9]
ಹೂಣಿಯಾಚಾರವನೆ [10]ನಿರ್ವಹಿಪನಾ[10]ಚಾರ
ಪ್ರಾಣಿಯಾತನೆ ಬಾ[11]ಹ್ಯಕರಣಂಗಳಂ[11] ಮರೆದು
ಪ್ರಾಣಲಿಂಗಕೆ [12]ತಾನೆ[12] ಪೂಜೆಯಂ ಮಾಡುತಿಹನಾತ ಲಿಂಗಪ್ರಾಣಿಯು ೭೫

---

1 ಹುದ (ಚ) 2 ಳಾಛ (ಚ) 3 ಯತಿ (ಚ) 4 ಲಿಂಗಕ್ಕತಿಶಯದೆ (ಚ) 5 ಮಹಾ (ಚ) 6 ಗಾಶ್ರ(ಚ)
7 ಚಕಿತಮಿಲ್ಲದ ಭಾವಭರಿತಾದುದೆ ಸುಖಪ್ರಸಾದಿಯು ಮುನಿವರ (ಚ) 8 ವಾವೆನಲ್ (ಚ)
9 ದಾಚಾರಲಿಂಗ ಪ್ರಾಣಿ ಇವರೊಳ್ ಮನೋ ವಚನದೊಳಾಚಾರಮಂ (ಚ) 10 ಗ್ರಹಿಸಿಹನೆಯಾ(ಚ)
11 ಹ್ಯೋಪಚಾರವ (ಚ) 12 ಸ್ವಾತ್ಮಾ (ಚ)

ಮರೆದು ಹೊರಗಣಭಕ್ತಿಯಂ ಜಂಗಮಕ್ಕೆ ಮುದ
ವರಲೆ ತನುಮಂನಪ್ರಾಣಗಳ ಸಮರ್ಪಿಸುತಮಾ
ದರದಿಂದಲಿರಲಾಗಿ ಜಂಗಮಪ್ರಾಣಿ ತದನಂತರಂ ಕೇಳೆಂದನಂ
ಶರಣಸ್ಥಲಂ ತ್ರಿವಿಧಮೆಂತೆನಲ್ ಕಂಗಳೊಳ್
ಕರದಿಷ್ಟಲಿಂಗಾರ್ಚಕಂ ಸತತಮಾನಂದ
ವರಪ್ರಾಣಲಿಂಗಾರ್ಚಕಂ ತೃಪ್ತಿಲಿಂಗಾರ್ಚಕಂ ನೋಡೆ ಮೂರುತೆರ[1]ನು[1] ೭೬

ತನಗನಿಷ್ಟಂ ನಷ್ಟವೆಂಯ್ದಲಾನಂದದಿಂ
[2]ದನಘೇಷ್ಟ[2]ಲಿಂಗಾರ್ಚಕಂ ಸ್ವ[3]ಪರಭಾವಮಂ[3]
ನೆನೆಯದಿರಲವ ಪ್ರಾಣಲಿಂಗಾರ್ಚಕಂ ಮತ್ತಮಿಹಪರದ ಭೋಗಮೋಕ್ಷಂ
ಮನದೊಳರಿಯದನಾಗೆ ತೃಪ್ತಿಲಿಂಗಾರ್ಚಕಂ
ವಿನಯದಿಂದೈಕ್ಯಸ್ಥಲಂ ತ್ರಿವಿಧಭೇದ[4]ಮಹು
ದನುಪಮನೆ ಕಾಯ ಜೀವ ಸುಭಾವಲಿಂಗೈಕ್ಯತೆಯನೈದಿ ತೋರ್ಪ ದೆಸೆಯಿಂ[4] ೭೭

ಕಾಯದ ಕ್ರಿಯಾಕಾರ ಮರೆಯಲ್ಕೆ ಮುದದಿಂದ
ಕಾಯಲಿಂಗೈಕ್ಯ[5]ನ[5]ನಂಭಾವ[6]ಮಂ ಮರೆದವನೆ
ಹೇಯಹರ[6]ಜೀವಲಿಂಗೈಕ್ಯಂ ಕಣಾ [7]ಜಗದ ತೋರ್ಕೆಯಂ ಕಾಣುವವನೆ
ಮಾಯವಿಲ್ಲದ[7] ಭಾವಲಿಂಗೈಕ್ಯ[8]ನೀಪರಿಯ[8]
ನ್ಯಾಯದಿಂ ಪದಿನೆಂಟುಸ್ಥಲಮಾ[9]ದುದಂಗಮು
ತ್ತೀಯುಭಯ[9] ಷಟ್ತ್ರಿಂಶ[10]ದಭಿಧಾನಯೋಗ್ಯಸ್ಥಲಂಗಳಾಯ್ತಾರ್ಯ ಕೇಳ[10] ೭೮

ಇಂತು ಪೇಳ್ದಂಗಲಿಂಗಸ್ಥಲಂ ದ್ವಾದ[11]ಶಂ
ಪಿಂತೆ ಮೂವತ್ತಾರು ಭೇದಂಗಳಂ ಪಡೆದು
ದೆಂತಿದರ ಭೇದಮಂ ಪೇಳಿದೆವು ಸರಹಸ್ಯಮಾಗಿ ತತ್ತ್ವಾರ್ಥಮಾಗಿ[11]
ಕಂತುಮರ್ದನನ ಶಾಸನದಿಂದ ಕೇಳ್ ನಿನಗ
ನಂತವಹ ವೇದವೇದಾಂ[12]ತೇತಿಹಾಸ ನಿ
ಶ್ಚಿಂತಾ[12]ಗಮಾರ್ಥ[13]ದ[13]ಶಿಗೋಪ್ಯತರಮಿದು ಸಾಧ್ಯಮೆಂದನಾ ರೇವಣೇಶಂ ೭೯

---

1 ನುಂ (ಚ) 2 ಘನ ಇಷ್ಟ (ಚ) 3 ಯಂ ಪರಗಳಂ (ಚ) 4 ಮುನಿಜನವಲ್ಲಭಾ ಕಾಯ ಲಿಂಗೈಕ್ಯ ಜೀವಲಿಂಗೈಕ್ಯ ಕೇಳ್ ಭಾವೈಕ್ಯನು (ಚ) 5 ಮ (ಚ) 6 ಮರೆತುದೆ ಕೇಳು । ಮಾಯಮಹ (ಚ) 7 ಅರಿವುಸಿನೆ ಬಂಜೆಯಾಗೆ ಸತತಂ । ಸಾವಧಾನದ (ಚ) 8 ಮಂಗಸ್ಥಲಂ (ಚ) 9 ದಮಂತುಭಯು ಭಾಯ (ಚ) 10 ಮಯಸ್ಥಲ ಮುಖ್ಯಮಹ ಸರ್ವಾಚಾರ ಸಂಪತ್ತಿನಿರವಂ (ಚ) 11 ಶಸ । ಮಂತು ಶತ ಏಕವಿಧ ಸ್ಥಲಗಳಾದುವುತಿಳಿಯಲತ್ಯಂತ ಸಂಕ್ಷೇಪಮಾತ್ರದಿಂದೊರೆದವೈ ಪರಮರಾಹಸ್ಯದಿರವಂ(ಚ) 12 ತ ಪೌರಾಣತತಿ ಸ್ವಾಂತಾ (ಚ) 13 ರ (ಕಗ)

ಸಾರತರ ಶಾಸ್ತ್ರವಿದು [1]ಕೇಳಿಸಿದ ಜನರಿಗಿದ
ನಾರೈದು ಕೇಳಿದವರಿಗೆ ಕೇಳಿದವರಿಂದ
ಸಾರವಂ ಗ್ರಹಿಸಿದವರಿಗೆ ಸಕಲಕಷ್ಟವಂ ಪರಿಹರಿಸಿ ಪರಲೋಕದಿ
ಚಾರುತರವಾದ ಪರಮುಕ್ತಿವಧು ಬಂದು ಕೈ
ಯಾರ ಬರಸೆಳೆದಪ್ಪಿ ಮುಂದ್ದಿಸುವಳೆಂದು ಮೇ
ಣಾ ರೇವಣಾರಾಧ್ಯ ಗುರುಚಕ್ರವರ್ತಿ ಬೋಧಿಸಿದನಾ ಕಲಶಜಂಗೆ[1] ೮೦

ಕುಂಭಜಂ ಮುನಿಗಳಕದಂಬ ಸುಭ್ರಮದಿಂದೆ
ಯಂಬು[2]ರುಹಮುಖ್ಯ ನಾನಾಕುಸುಮಂಗಳನು[2] ಹ
ಸ್ತಾಂಬುಜದೊಳಾಂತತುಳಜಯಜಯಧ್ವಾನದಿಂದೆ[3]ನಗೆ[3] ಪುಷ್ಪಾಂಜಲಿಯನು
ಇಂಬಾದ ಸ್ತೋತ್ರಗಳ ಮಾ[4]ಡಿ ನಿಜತನುವ[4] ವಿ
ಶ್ವಂಭ[5]ರೆಯ[5] ಮೇಲೆಯಿಾಡಾಡಿ ವಂದಿಸಿ ಸತ್ಕು
ಟುಂಬಿ ನತಜನ ಪಾರಿಜಾತ ದೇವರ ದೇವನೆಂದು ನಿಂದಿರ್ದ[6]ನಾ[6]ಗ ೮೧

ಎಲೆ ಶಿಲೋಚ್ಚಯದೇವ ಲಾಲಿಸಾ ಕಲಶಜಂ
ಸಲೆ ತಪೋಧನರು ಬದ್ಧಾಂಜಲಿಗಳಿಂ[7]ದಿರ[7]
ಲ್ಕೊಲವಿನಿಂದವರ [8]ಸಮ್ಮಾನಿಸುತ್ತಾಗಲೀಕ್ಷಿ[8]ಸಿಯಭಯುವಿತ್ತು ಮುದ[9]ದಿ[9]
ಅಳಿಕಾಕ್ಷ[10]ನಾತ್ಮ[10]ಪೂಜೆಗಳಿಂದ ಸುಖಮಪ್ಪ
ದಲಘು ಪರಶಿವನಿರೂಪಣಕಾರ್ಯಮುಂ[11]ಟೆನು
ತ್ತೈ[11]ಲರ್ವಟ್ಟೆಯಡರ್ದನಾ ರೇವಣಾಸಿದ್ಧೇಶ್ವರಂ ಜಗದ್ಗುರು[12]ವೇಗದಿಂ[12] ೮೨

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀ ಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಹುದು ಏಕಾದಶದ ಸಂಧಿ ಸುಜ್ಞಾನಬಂಧಿ ೮೩

---

1 ಸಚ್ಚಿದಾನಂದಮಯ ಭೂರಿಕರ್ಮಕ್ಷಯಾಹಂಕಾರಮಘನಾಶ ರಾಮಜ್ಞಾನಾಭಿಕೋಶ ನಿತ್ಯಾನಿತ್ಯ ವಸ್ತುವಿವರಂ ಮುಕ್ತಿಯಾಗಾರವಿಾಸ್ಥಲಭೇದಮಿದರೊಳೊಂದಂ ಸೊಲ್ಲನಾರ್ ಕೇಳರಾರ್ ಮುಕ್ತಿಕಾಂತೆ ಕೈವಿಡಿದಳೆಂದಾ ರಾಜಶೇಖರಂ ರೇವಣಾಸಿದ್ಧಯತಿ ಕುಂಭಜಂಗೊರೆದನಮಮ (ಚ) 2 ಜಂ ಮುಖ್ಯ ಪೂಜಾಲಂಗಳಂ (ಚ) 3 ಸಗಿ (ಚ) 4 ಡುತ್ತವಪುಗಳಂ (ಚ) 5 ರದ (ಚ) 6 ರಾ (ಚ) 7 ದರಾ (ಕಗ) 8 ಮಾಂಹಾನಿಸುತ್ತಾಗಮನ್ನಿ (ಚ) 9 ದಿಂ (ಚ) 10 ಧ್ಯಾನ (ಚ) 11 ಟೆಂದೆ (ಚ) 12 ಮುದದೊಳು (ಚ)

# ಮೂರನೆಯ ಸಂಧಿ

ಸೂಚನೆ :

ಮಲಯಾದ್ರಿಯಂ ಬಿಟ್ಟು [1]ಬಡಗಮುಖವಾಗಿ ತಾಂ[1]
ಸಲೆ ಶಿವಸ್ಥಾನಗಳ ನೋಡಿ [2]ವಿಕ್ರಮರಾಯ
ಗೊಲಿದಲ್ಲಿ ಕಲ್ಲಿ[2]ಶೆಟ್ಟಿಯನು ಮಾಯೆಯ ಸಲಹಿ ಲಿಂಗಂಗಳಂ ನಿಲಿಸಿದಂ

ಷಟ್ಸ್ಥಲಜ್ಞಾನಸಂಪೂರ್ಣ [3]ಲೌಕಿಕರೂಪ[3]
ಷಟ್ಕರ್ಮ[4]ದೂರ ಸಕಲತ್ರಿದಶಮಧ್ಯ ಸ
ಮ್ರಾಟ್ಸದಾ*ಧೀಶ* ದೇವಾಸುರೇಂದ್ರಾರ್ಚಿತ ಪದಾಂಭೋಜ ದೇವದೇವ
ಷಟ್ತರ್ಕಭಾವನಾಗಮ್ಯ ಮಹಿಮಾಢ್ಯ ಗೋ
ರಾಟ್ಪದಾಂಕಿತ ಪತಾಕಾತ್ಯುಗ್ರ ಪಾಪತೃಣ
ಶೂಟ್ಪ್ಲೊತ ನಾಮಧೇಯಾವ್ಯಯ ಮಹಾದೇವ ಸಲಹೆನ್ನ[4] ಚೆನ್ನಮಲ್ಲ ೧

ವರ ಚಿದಂಬರದೊಳಾ ಹರಗೆರಗಿ ರಾತ್ರಿಯೊಳ್
ಬರುತಿರಲ್ ವಾರವಧುವೆಂಜಲೋದಕ[5]ವೆರಚೆ[5]
ಹರಹರ ಮಹಾದೇವಯೆನೆ ಗೃಹಕ್ಕೊಯ್ದು ಪರಿಮಳವಸ್ತ್ರವಿತ್ತು ಕಳುಹೆ
ತರುಣಿ ಕಾಣುತ ಮುಟ್ಟಬೇಡ ಶಿವನಾಣೆಯೆನೆ
ತೊರೆದು ಯೆಂಬತ್ತಬ್ದವಿರೆ ಖರ್ಪರದ ಸತ್ಯ
ದಿರವಿನಿಂ ಹರನೊಲಿಸಿ ಯುವನಾದ ತಿರುನೀಲಕಂಠರಡಿಗಾನೆರಗುವೆಂ ೨

ಎಲೆ ಮಲ್ಲಿಕಾರ್ಜುನ ಗುರೋತ್ತಮನೆ ಲಾಲಿಸೈ
ಮಲಯಶಿಖರಿಯನುಳಿದು ಬಾನ್ಸಟ್ಟೆಯಡರ್ದ ಗುರು
ತಿಲಕ ರೇವಣಸಿದ್ಧನಾವಲ್ಲಿಗೆಯ್ದಿದನದೇಂ ಮಹತ್ವವ ಮೆರೆದನೊ
ಒಲವಿನಿಂ ಪೇಳೆನಲ್ ಪರ್ವತೇಶ್ವರನೆ ಕೇ
ಳಲಘು ದಶರಥಪುತ್ರದೋಷ[6]ವನು ಕಳೆದು ಪ
ಜ್ಜಳಿಪ ರಾಮೇಶ್ವರವ ಪೊಕ್ಕು ರಾಮೇಶ್ವರನ ದರ್ಶನವನೈದಿ[6] ಮುದದಿಂ ೩

---

1 ಉತ್ತರಕೆ ಮುಖವಾಗಿ (ಚ) 2 ಚೋಳಂ ವಿಕ್ರಮರಿ।ಗೊಲಿದು ಕಲ್ಲಿಯ (ಚ) 3 ಷಡ್ಬ್ರಹ್ಮ ಮಯ (ಚ) 4 ಮಾರಾಘರಟ್ಟವೃಷಕೇತು ಸಟ್ಸ್ಥಿರಾ ಮುಕ್ತಿ ಕಾಂತೋಪ ಫಣಿರಾಡ್ ಭೃತೋನ್ನತ ಕರ್ಣಯುಗಳ ಸ್ವರ್ಗರಾಟ್ಪತಿ ಪರಂಜ್ಯೋತಿಭಗಣರಾಡ್ಭೂಷಾಮೌಳಿ ದ್ವಿಟ್ಕಾಲಕುಧರ ಶತಕೋಟಿ ರುಡ್ಭಾವ ಭಯ ವಿರಾಟ್ ಪರಮಮೂರ್ತಿ ಗೋರಾಡ್ನಂದನೇಶ ಮಾಂ ತ್ರಾಹಿ ಗುರು (ಚ) * ಶಿವ (ಗ) 5 ಚೆಲ್ಲೆ (ಚ) 6 ಪರನಾಶೋಜ್ವಲ ರಾಮಕ್ಷೇತ್ರಮಂ ಪೊಕ್ಕು ರಾಮೇಶ್ವರಗೆ ದರ್ಶನಮನಿತ್ತು (ಚ)

ಅಲ್ಲಿಂದೆಲರ್ವಟ್ಟೆಯಡದರ್ದ ವುಂನ್ನೀರ ಕರೆ
ಯಲ್ಲಿರ್ಪ ಪತ್ತನಂಗಳ ಗಳಗ್ರಾಮಗಳ
ಸಲ್ಲೀಲೆಯಿಂ ನೋಡಿಯಾನಂದಿಸುತ್ತ ವೇದಾರಣ್ಯಮಂ ಪೊಗುತ್ತ
ಉಲ್ಲಾಸದಿಂದಲಾ ಲಿಂಗ[1]ಮಂ ಈಕ್ಷಿಸುತ[1]
ಮಲ್ಲಿ ಸವಿಶೇಷ ಮುನಿವೇಷದಿಂ ನಟಿಸುತ್ತ
ಮಲ್ಲಿಂದಲಮೃತಘಟಕೇಶ್ವರನ ಭಕ್ತಿಯಂ ಕೈಕೊಂಡು ಬರೆ ಮುದದೊಳಂ ೪

ಸದಮಳಾಂಗನು ರೇವಣಾಸಿದ್ಧ ಬರೆ ಮುಂದೆ
ಏದಿತವಹ ಶ್ವೇತವನಮಂ ಕಂಡು ಎಯ್ದುತಿರೆ
ವೊದವಿಯಾ ಶ್ವೇತಾಟವೀಶ್ವರಂ ಬಂದು ವಂದಿಸುತೆ ಕರೆದೊಯ್ದು ವಿನಯ
[2]ಪದವಾದ[2] ಗೋಷ್ಠಿಯಂ ಎಸಗಿಯಲ್ಲಿಂದ ಬಿಡ
ದಧಿಕಾಂತರಿಕ್ಷಮಾರ್ಗದಿ ನಿಂದು ಪಡುವ[3]ಲಂ[3]
ಪದೆದು ನೋಡಲ್ ಕಂಡು ಬಹಳದೇಶದ ಭಾಗ್ಯವಹ ಚೋಳಮಂಡಲವನು ೫

ಬಿಡದೊಪ್ಪುತಿಹ ಚೆಲ್ವಶಾಲಿಯಿಂ ಬಾಳೆಯಿಂ
ನಿಡಿದಾದ ನಿಖಿಳಗೋಪುರಗಳಿಂ ಪುರಗಳಿಂ
ಸಡಗರದ ನಂದನದ ವನಗಳಿಂ ಮುನಿಗಳಿಂ ತೇಲುಂವೆಯ ಕಾಲುವೆಗಳಿಂ
ಅಡಿಗಡಿಗೆ ಓದುತಿಹ ವೇದದಿಂ ನಾದದಿಂ
ಯೆಡೆವಿಡದ ಬಹುಧರ್ಮಶಾಲೆಯಿಂ ಲೀಲೆಯಿಂ
ದೊಡರಿಚಿದ [4]ತಿಳಿನೀರ[4]ಕೊಳಗಳಿಂ ಹೊಳೆಗಳಿಂ ಚೋಳದೇಶಂ ಮೆರೆದುದು ೬

ಆದಿಗುರು ಮಧ್ಯಲಿಂಗಾಂತ ಜಂಗಮವಾದ
ಸಾದರದ ಚೇಯಾಳಿ [5]ಗೌರೀಮಯೂರ ಮುಂ
ತಾದ ಸುಕ್ಷೇತ್ರಂಗಳೊಳ್ ಪೊಗಲ್ ಬ್ರ[6]ಹ್ಮಹ[6]ತಿ ಪೋಗದಿರೆ ಚೋಳನಧಿಕ
ಬಾಧೆಪಡಿಸುವ ಬ್ರ[7]ಹ್ಮಹತಿಯ ಸಂಹರಿಸಿದತಿ[7]
ಚೋದ್ಯವಹ ಮಧ್ಯಾರ್ಜುನೇಶ್ವರ ಕ್ಷೇತ್ರ ಮುಂ
ತಾದ ಶಿವನಿಳಯಂಗಳಂ ನೋಡುತಿರ್ದನಾತಂ ಮಾಣವಕವೇಷದಿಂ ೭

---

1 ವನಿರ್ಸುತ (ಕಗ) ? 2 ಸದಸತ್ಸು (ಚ) 3 ಣಂ (ಚ) 4 ಹಂಸಮಯ (ಚ) 5 ವರಗ ರಿಮಾಯ ವಾರಾದಿಯಹ (ಚ) 6 ಹ್ಮೇ (ಚ) 7 ಹ್ಮೇತಿಯಂ ಕ್ಷಯಿಸಿದತಿ (ಚ)

ವರ ವೈದ್ಯನಾಥೇಶ್ವರಂ ತ್ರಿಭುವನೇಶ್ವರಂ
[1]ತಿರು[1]ನಾಗನಾ[2]ಥೇಶನೈರಾವತೇಶ್ವರಂ
ಸುರಪನಿಂ[2] ಮುಚುಕುಂದನಿಂ ಧರಣಿಗೈದಿದ ಮಹಾತ್ಯಾಗರಾಯನಲ್ಲಿ
ಸರಸದಿಂ ಪೂಜೆಗೊಂ[3]ಬಾ[3] ವಲ್ಮಿಕೇಶ್ವರಂ
ಚಿರಪಾಪನಾಶನಹ ಕುಂಭಕೋಣೆಯ ಮಹೋ
ತ್ಕರನಾದ ಕುಂಭೇಶ್ವರಂ ಚೆಲ್ವ ಸೋಮೇಶ್ವರಂ ಮುಖ್ಯಲಿಂಗಂಗಳಂ ೮

ಅತಿಪ್ರೀತಿಯಿಂ ರೇವಣೇಶ ನೋಡಲ್ಕೆ ಬರೆ
ಯತಿರೂಪಮಂ ತಳೆದ ಲಿಂಗಂಗ[4]ಳೇ[4] ಬಂದು
ನುತಿಸಿ ವಂದಿಸುತೆ ಕರೆದೊಯ್ದು ವುಪಚರಿಸೆಯುವರಂ ಮನ್ನಿಸುತ್ತ ಮುಂದೆ
ನುತಿವೆತ್ತ ಪಿರಿವಡೆಯ[5]ರನ್ನು[5] ತಂಜಾವೂರ
ಸ್ಥಿತಿಯನೀಕ್ಷಿಸುತಲಾಕಾಶಮಾರ್ಗದಿಯ್ದೆದೆ
ಪ್ರತಿದೋರದಾ ಚೊಕ್ಕಲಿಂಗ ಮೀನಾಕ್ಷಿಯರ್ಗತಿದರ್ಶನಂಗೊಟ್ಟನು ೯

ಅಲ್ಲಿಂದ ಗಗನಮಾರ್ಗದೆ ಬಂದು ಪದ್ಮಗಿರಿ
ವಲ್ಲಭನ ನೋಡುತದರಿಂ ಮುಂದೆ ರತ್ನಗಿರಿ
ಯಲ್ಲಿರ್ಪ ಶಿವಲಿಂಗಕಾನಂದದರ್ಶನಮ[6]ನೀವುತಂ[6]ಬರಮಾರ್ಗದೆ
ಸಲ್ಲೀಲೆಯಿಂ ಬಂದು ತ್ರಿಶಿರನಗರಂ ಪೊಕ್ಕು
ಉಲ್ಲಾಸದೊಳ್ ನಾಗಕನ್ನಿಕೆಯರರ್ಚಿಸಿದ
ಬಲ್ಲ[7]ವ[7]ನೆ ಕೇಳ್ ಮಾತೃಭೂತೇಶ್ವರಂಗೆ ಮುದವಿತ್ತನತಿ ಸಂಭ್ರಮದೊಳು ೧೦

ಶೇವಂ[8]ತಿಕೇಶ್ವರದ[8] ಗಿರಿಯನಿಳಿವುತ ಮುಂದೆ
ದೇವಗಂಗಾಪ್ರವಾಹ ಸ್ವರೂಪಿಣಿಯಾಗಿ
ತೀವಿ ಚರಿಸುತ ಸರ್ವಜನಕೆಯುಪಕಾರಿ[9]ಯಹ ಕಾಲುವೆಗಳನ್ನು ಕೊಟ್ಟು[9]
ಭಾವಜಾಂತಕ ಸಕಲ ಕಾಮುಕಾಲಾರಿಯಹ
ಕಾವೇರಿ ಕೊಲ್ಲಡದ ಮಧ್ಯ[10]ದೊಳ್ ತೋರ್ಪ ಸಲಿ
ಲಾವಾಸ[10] ಜಂಬುಕೇಶ್ವರಲಿಂಗಮೂರ್ತಿಯಂ ಕಂಡನಾ ರೇವಣೇಶಂ ೧೧

---

1 ಉರು (ಕ) 2 ಥನೈರಾವತೇಶ್ವರನಿಂದ್ರ । ನಿರದೀಯೆ (ಚ) 3 ಡಾ (ಗ) 4 ಳೊಳ್ (ಚ) 5 ರಂ ಕಂಡು (ಚ) 6 ನಿತ್ತುವಂ (ಚ) 7 ಹ (ಚ) 8 ತಿಗೇಶ್ವರನ (ಚ) 9 ಪಾಪೌಘ ಸಂಹಾರಿ ವಿಜಿತ (ಚ) 10 ದೊಳೊರ್ವ ಮುನಿ ಸೇವಿಸಿದ (ಚ)

ಅದ[1]ರೊಳಂಬರವ ತಾನಡರಿ[1] ಗಂಗೊಂಡೆಪುರ
ವಿದಿತ ಬೃಹದೀಶ್ವರಂಗಾನಂದವಿತ್ತು ಬರೆ
ಮುದದಿ ತಿರುನಾಳ್ಪೋವರ್ಪೈವಡಿಯ ಚೋಳ ಮೊದಲಾದ ಶರಣೇಷ್ಟವಾದ
ಅಧಿಕತರ ಪರಮೇಶನಾನಂದತಾಂಡವಂ
ಪೊದವಿ ನಟಿಸಿದ ಕ್ಷೇತ್ರ ಪೊನ್ನಾಂಬಲಂ ಮನೋ
ಹದ ಹಂಬಲಂ ಮುಕ್ತಿ[2]ಯೊಂಬಲಂ[2] ಭೋಗದುರೆ[3]ಬೆಂ[3]ಬಲಂ ಕಂಗೆಸೆದುದು ೧೨

ಅಲ್ಲುಮಾನಂದನನ ಕಥನದಿಂ ಕೈಲಾಸ
ದಲ್ಲಿಂದಲೆಯ್ತಂದ ಮೂರ್ಭಾಸಿರದ ಗಣರ್
ತಿಲ್ಲವೇಣಾಂದಣಾಹ್ವಯರೆಯ್ದಿ ರನ್ನ ಚಿನ್ನದ ಮಠಗಳಂ ಪೊರಡುತ
ಸಲ್ಲಲಿತ ಸುಜ್ಞಾನವಿಗ್ರಹ [4]ಮಹಾತ್ಮರಹ
ವುಳ್ಳ ಶಾಂಭವರಂ[4] ನಾಲ್ವತ್ತೆಂಟುಸಾವಿರಂ
ಸೊಲ್ಲಾಸದಿಂ ಕಂಡು ರೇವಣೇಶಂಗೆ ಸೈಗೆಡೆದು ಶರಣೆಂದರಾಗ ೧೩

ಸ್ವರ್ಣದಂಬರದಲ್ಲಿ ತಾಂಡವ ಚಿದಂಬರದ
ವರ್ಣಂಗಳೊಂದೊಂದ ಬರೆವುದಕೆ ಲಕ್ಷದ ಸು
ವರ್ಣಂಗಳಿಂ ಶಾಂತಿಯೊಡರಿಚಿದ ನಿರುಪಮಚಿದಂಬರ ತಲವ ಕಾಣುತೆ
ಜೀರ್ಣಕಲ್ಮಷನಾಶ ರೇವಣೇಶಂ ಗಮಿಸೆ
ಪೂರ್ಣ ಭಾಗೀರಥಿಯ ತೀರ್ಥ[5]ಕಿಂ[5]ದಧಿಕ[6]ಮಾ
ಗರ್ಣವದೊಲಿಹ[6] ತೀರ್ಥಕುಂಡಮಂ ಕಂಡನಾ ಪಶ್ಚಿಮದ ದೆಶೆಯೊಳಾಗ ೧೪

ನಿಂದು ಶ್ರೀಗುರು ರೇವಣಾಸಿದ್ಧ ನೋಡುತಿರೆ
[7]ಸಂ[7]ದ ಶರಣರು ಪೇಳ್ದರಾ ತೀರ್ಥದತಿಶಯವ
ಹಿಂದೊರ್ವ ಪಿತನೆಲುವ ಗಂಗೆಗೊಯ್ವುತ್ತಮಲ್ಲಿರ್ದು ಬೆಳಗಾಗಿ ನೋಡೆ
ಚಂದದಿಂ ಮಲ್ಲಿಗೆಯರಲ್ಗಳಾದವು ದೇವ
ಬಾಂದೊರೆಯಿನಧಿಕಮಿಾ ತೀರ್ಥ ಕಾಶೀ[8]ಕ್ಷೇತ್ರ[8]
ದಿಂದ ಮಿಗಿಲಾದ ಪೊನ್ನಾಂಬಲದ ವರಪುರ ಚಿದಂಬರಾಕೃತಿ ನೋಡಲು ೧೫

---

1 ರಿಂದಲಂಬರವನಡರೆ (ಚ) 2 ಯ ಬಂಬಲುಂ (ಚ) 3 ವೇ (ಕಗ) 4 ಹಂತರಹ।ಬಲ್ಲಮಾಹೇಶ್ವರರ್ (ಚ) 5 ದಿಂ (ಚ) 6 ವಹಪೂರ್ಣಾಂಬುಯುತ (ಚ) 7 ನಂ (ಕಗ) 8 ತೀರ್ಥ (ಗ)

ಎನೆ ಚಿದಂಬರಪುರದ ಬೀದಿಬೀದಿಯ ನೋಡಿ
ವಿನಯದಿಂ ಸರ್ವಜನಕಿಷ್ಟಾರ್ಥಮಿತ್ತಧಿಕ
ಘನಲಿಂಗಪೂಜೆಯಂ ಪಾಲ್ಗಡಲ ತೀರ್ಥಕುಂಡದೊಳಿರಿಸಿ ಝಗರ್ಝಗಿಸುತ
ಉನುಮನಿಯಂ ಚಿಲ್ಲಿಂಗವಂನಿಮಿ[1]ಷಾಲೋಕನದ
ಕೊನೆಯಿಂದಲೀ[1]ಕ್ಷಿಸಿ ಪತಂಜಲಿಗೆ ನಟಣಮಂ
ಘನನೇಹದಿಂ ನಟಿಸಿ ತೋರಿದ ಚಿದಂಬರಮನುಳಿದರ್ದದನಾ ಗಗನಕೆ ೧೬

ಹಿಂಡುದೈವದ ಗಂಡನಹ ರೇವಣೇಶಾಭ್ರ
ಮಂಡಲವನೇರಿಯುತ್ತರಕೆ ಮುಖವಾಗಧಿಕ
ತೊಂಡಮಂಡಲಕೆ ಗಮಿಸುತ್ತ ಖಗರಾಣ್ನದಿಯ ಸಂದಿನದಿ ಕ್ಷೀರನದಿಯ
ತಂಡಮಂ ಕಳಿವುತ್ತಬರೆ ರೌದ್ರಕೋಟಿಗಿರಿ
ಮಂಡನದ ವೇದಗಿರಿ [2]ಗೃಧ್ರ[2]ಗಿರಿಯೆಂಬವು
ದ್ದಂಡನಾಮವನಾಂತ ತೀರಕಡಿಕುಂಡಮಂ ಕಂಡಿಳಿದ ಬಾನ್ವಟ್ಟೆಯಂ ೧೭

ಇಳಿದಂ ಬರುತಿರೆ ವೇದವರಗಿರೀಶ್ವರ ತನ್ನ
ನಿಳಯಮಂ ಪೊರಟು ತಾಪಸವೇಷಮಂ ತಳೆದಂ
ಘಳಿಲನೇ ಬಂದು ವಂದಿಸಿಯೊರ್ವರೊರ್ವರಾಲಿಂಗನಂಗೆಯ್ದು ಮುದದಿಂ
ಸಲೆ ಶಿವಾಲಯದ ನಗಗಳ ತೋರುತಿರೆ ಪಕ್ಷಿ
ಕುಲವೆರಳ್ ನಗಪ್ರದಕ್ಷಿಣಮಾ[3]ಚರಿಸೆ[3] ಕಂಡು
ಅಳಿಕಾಕ್ಷ ರೇವಣಾಸಿದ್ಧೇಶ್ವರಂ ಕೇ[4]ಳ್[4]ದೇಂ ಪೂರ್ವಸಂಸ್ಕಾರಮೊ ೧೮

ಎಲೆ ದೇವ ಲಾಲಿಸೀ ಪಕ್ಷಿಗಳ ಪೂರ್ವಮಂ
ನಳಿನಗರ್ಭನ ಪುತ್ರರಿವರೆಂಟು[5]ಮಂದಿ[5] ಮನ
ವಲ[6]ರ[6] ಬ್ರಹ್ಮೇಂದ್ರಾಚ್ಯುತರ ಪದ[7]ಗಳ[7]ಸ್ಥಿರಂ [8]ಸಂಸಾರ[8]ಹೇತುವೆಂದು
ಅಳಿಕಾಕ್ಷ ಚರಣಾರವಿಂದ ಸನ್ನಿಧಿಯೊಳಾ
ವ್ರೊಲವಿನಿಂದಿರಬೇಹುದೆನುತವರ್ ಮುದದಿಂದ
ಲಲಘು ಸಾಲೋಕ್ಯಪದಮಂ ಕುರಿತು ತಪಿಸುತಿರ್ದರ್ ಮಹಾಗುರುನಾಥನೆ ೧೯

---

1 ಷ ದೃಷ್ಟಿಮಹ । ಸನಯದಿಂದೀ (ಚ) 2 ವೃದ್ಧ (ಚ) 3 ಳ್ಪುದಂ (ಚ) 4 ಳ್ದ (ಚ)
5 ನೋಡಿ (ಚ) 6 ರಿಯಾ (ಚ) 7 ಮ (ಚ) 8 ಭವಕೆ (ಚ)

ಅರವಿಂದಭವಜಾತರತ್ಯುಗ್ರತರ ತಪಮು
ನಿರದೆಸಗುತಿರಲವರೊಳಾಯಾಸಮಂ ಕಂಡು
ಭರದೆಯಾ ನಂದೀಶ್ವರಂ ಶಂಕರಂಗೆರಗಿ ಬಿನ್ನೈಸಿದಂ ವರಕೃಪಾ
ಶರಧಿಕಲ್ಯಾಣ ದಶವಿಧಗುಣಾಭರಣ ಭವ
ಹರಣ ರಕ್ಷಿಸಬೇಹುದೀ ಬ್ರಹ್ಮಸೂನುಗಳ
ಪರಮೇಷ್ಟವಹ ಫಲಪದಂಗಳಂ ಕೊಡು[1]ವುದೆಂದಾ[1] ನಂದಿ ಪೇಳ್ದನಾಗ ೨೦

ಎನಲಾಗಿ ಬಿನ್ನಪಂಗೇಳ್ದಭವಬಂಧು ತಾಂ
ವಿನಯದಿಂ [2]ಬೇಡುವುದು[2] ಮುನಿಗಳಿರ ನಿಮ್ಮ ಮನ
ದನುಮತವನೆನೆಯುವರ್ ಮುನ್ನ ಚಿಂತಿಸಿದ ಸಾಲೋಕ್ಯ[3]ಪದಮಂ ಬಯಸದೆ[3]
ಘನವಾದ ಸಾಯುಜ್ಯಮಂ ಕೇಳೆ ಶಂಕರಂ
ಕನಲುತ್ತವಾ[4]ಜ್ಞ್ಮೆ[4]ನಂ ವೊಂದಾದುದಿಲ್ಲ ನಿಮ
ಗೆನುತ ಶಪಿಸಿದನು ವಾಗ್ದೋಷದಿಂ ಗೃಧ್ರಮಯದೇಹಮಂ ಧರಿಸೆಂದನು ೨೧

ಗಡಗಡನೆ ನಡುಗಿ ಮೃಡ[5]ನಡಿ[5]ಗೆರಗಿ ಕರಗಳಂ
ಮಡಗುತ್ತ ಮಂಡೆಯೊಳ್ ಸ್ತುತಿಸುತ್ತ ದುಃಖದಿಂ
ಪೊಡವಿಯೊಳ್ ಜಡಖಗಗಳಾಗ[6]ನ್ಯಭೋಜ್ಯಮಂ[6] ಕೊಂಡು ಜೀವಿಸಲಾರೆವು
ಒಡೆಯ ನಿಮ್ಮಯ ಪ್ರಸಾದವನಿತ್ತು ಮೋಕ್ಷಮಂ
ತಡೆಯದೇ ಕೊಡಬೇಹುದೆನೆ ನಗುತ ನಾಲ್ಕು[7]ಯುಂ[7]ಗ
ಗಡಣಮೊಂದೊಂದು [8]ಕಳೆಯುತ್ತಿರಲ್ಕಾಗಲಿರ್ವರ್ಗೆಯಿರ್ವರ್ಗೆ ಮುಕ್ತಿ[8] ೨೨

ಭರದಿ ಯಮರಾಡ್ದೆಸೆಗೆ ಪೋಗಿ ಕೇತಾರದೊಳ
ಗಿರುತಯಲ್ಲಿಂದ ದಕ್ಷಿಣಕ್ಕೈದಲಲ್ಲಿ ಪಾ
ಲ್ದೊರೆಗ.ತ್ತರಂ ಯೋಜನಾಯುತಂ ಸಾಗರಕೆ ವರುಣದೆಸೆಯೊಳ್ ಯೋಜನ
ದಿರವಿನೊಳಗಂತಕನ ದೆಶೆಯ ಕೈಲಾಸಮಂ
ದುರುವೇದಗಿರಿಯುಂಟು ಅಲ್ಲಿ ಶೇಷಂದೊರೆವು
ದರರೆಯೆಂನ[9]ಲಿ[9]ವರ್ ಗಂಗೆಯೊಳ್ ಮಿಂದು ಪ್ರತಿದಿನಂ ಬರ್ಪರಾಚಾರ್ಯವರ್ಯ ೨೩

---

1 ತಲೆಂದಾ (ಚ) 2 ಬೆಳ್ಪುದೆಲೆ (ಚ) 3 ಮಂ ಬಿಟ್ಟುವಮಳ (ಚ) 4 ಜ್ಞಾ (ಕಗ) 5 ನಿಂ (ಕಗ)
6 ನ್ಯಾಹಾರಮಂ (ಚ) 7 ಜ(ಚ) 8 ಯುಗದೊಳ್ ನೋಡಲಿರ್ವರಿರ್ವಗೆ ಕೈವಲ್ಯ ಕೇಳಿ(ಚ) 9 ಲ (ಚ)

ಎಂದು ಪೇಳಲ್ ವೇದಗಿರಿನಾಥನಾಗ ನಲ
ವೊಂದೆ ರೇವಣಸಿದ್ಧನವರಿಂದ ಬೀಳ್ಕೊಂಡು
ಚಂದದಿಂ ಬಾನ್ವಟ್ಟೆಯೊಳ್ [1]ಬರುತ್ತ[1]ರುಣಾಚಲೇಶನಂ ಕಾಣುತಧಿಕ
ಮಂದಹಾಸದೊಳು ಗುರುಲಿಂಗಪ್ರದಕ್ಷಿಣಮ
ನಂದು ಬರುತಿರಲಷ್ಟಲಿಂಗಾಷ್ಟತೀರ್ಥಂಗ
ಳಂದಮಂ ನೋಡಿಯಾಗಸವಟ್ಟೆಯೊಳ್ ಮಿಗೆ ವಿರಿಂಚಿಪುರಮಂ ಪೊಗುತ್ತ ೨೪

ಇದೆ ಬ್ರಹ್ಮತಪವ[2]ನಾಚರಿಸಿರ್ದ[2] ತಾಣವಿಂ
ತಿದುವೆ ಸರಸಿಜಭವಂಗೊಲಿದಿಷ್ಟಮಂ ಕೊಟ್ಟ
ಸದಮಳ ವಿರಿಂಚೀಶನೆಂದು ಕೇಳ್ವಾಗಲಾ ಮಾರ್ಗ ಸಾರ್ದೇಶಲಿಂಗಂ
ಪದುಳದೆ ತಪೋಧನನ ಪಾಂಗಿನಿಂ ಬಂದಾಗ
ಮುಂದದಿ [3]ಕಾಣ[3]ಸಲವರ ಮನ್ನಿಸುತೆಯಂಬರಮ
ನೊದವಿಯೇರುತೆ ಪೂರ್ವದೆಸೆಯನೀಕ್ಷಿಸೆ ಕಂಡನಾ ಕಾಂಚಿಗೋಪುರವನು ೨೫

ಆ ಪುರದ ಕಿನ್ನರೇಶನ ದ್ವಾರಮಿಂದ್ರನಗ
ಮಾ ಪೂರ್ವದಿಗ್ಭಾಗ ತಿರುನೀಲಕಂಠಪುರ
ಮಾ ಪಾರೆದೆಶೆಯ ಬಾಗಿಲು ನೋಡು ತಿರುಪೊಕ್ಕುಳೂರು ದಕ್ಷಿಣದ್ವಾರಮಂ
ವಿಪೇಳ್ವೆ ತಿರುನೀಲಕಂಠಪಲ್ಲವನಗರಿ
ಭೂಪರಿಂದಖಿಳ[4]ಕುಲ[4]ದೀಪರಿಂ ವಿದ್ಯಾಕ
ಳಾಪರಿಂ [5]ದುರ್ಮತವಿ[5]ಲೋಪರಿಂ ಧರ್ಮಜಲಕೂಪರಿಂ ಕಾಂಚಿಯೆಸೆಗುಂ ೨೬

ಕ್ಷೀರನದಿತೀರದೊಳಗಿನಿಯ ಮಾಮರದ ಕೆಳ
ಗಾ ರಮ್ಯತಪಮೆಸಗೆ ಮಳಲಲಿಂಗವನು [6]ಕೈ
ಯಾರೆ ತಾಂ[6] ಪೂಜೆಮಾಳ್ಪಾಗ ಹೊಳೆ ಭೋರ್ಗರೆವುತಂ ಘುಳುಘುಳುಧ್ವಾನದಿಂ
ಮೀರಿ ಧರೆ ಗಗನಮಂಡಲಮನುರೆ ಮುಸುಗುತ್ತ
ಸಾರಿ ಪೆರ್ದೆರೆಗಳಿಂ ಬರೆ ಜಗನ್ಮಾತೆ ಮಾ
ರಾರಿಯಂ ತಾನುಭಯಕರಗಳಿಂ ತಳ್ಕೈಸಿಯಾಂ ಬಿಡೆನೆನಂತ್ತ ಬೀಳೆ ೨೭

---

1 ಬಂದುವ (ಚ) 2 ನೊಡರ್ಚಿದುರೆ (ಚ) 3 ವಂದಿ (ಚ) 4 ನೀಲ (ಕ) 5 ಪರಮಪದಿ (ಚ)
6 ಮನದಾರತದೆ (ಚ)

ಬೀಳುತಾ ಶಿವೆ ಶಿವಂ ಸಹಿತ ತಾಂ ಪ್ರೋಪೆನೆಂ
ದಾಳೋಕಿಸುತ್ತ ಮೂರ್ಛೆಯು[1]ನೆಯ್ದೆ ಶಂಭುವಾ
ವೇಳೆಯೊಳಗಾ ನದಿಯ[1] ಮುನ್ನಿನ ತೆರದಲಿ ಸೈತಿರಿಸಿ ಮೂರ್ಛೆಯ ತಿಳುಹುತ
[2]ಭಾಳ[2]ಲೋಚನ ಭಕ್ತ ಭಾಗ್ಯಪ್ರಸನ್ನನಾ
ಗಾಳೋಕನಂಗೆಯ್ದು ಮನ್ನಿಸಿಪ್ಪವ ಕೇಳೆ
ಪೇಳಿದಳ್ ಸೈಕತದ ಲಿಂಗಮಾ[3]ಗೇಗಳುಂ[3] ಪೂಜೆಗೊಳ್ವುದು ಮುದದೊಳಂ ೨೮

ಎನೆ ಶಿವಂ ಶಿವಲಿಂಗವಾಗಿ ನೆಲಸಲ್ಕಾಗ
ಮನುಮುನೀಶ್ವರರಖಿಳ ದೇವಗಂಧರ್ವಕುಲ
ವಿನಯದಿಂ ಪೂಜಿಸುತ್ತಿರಲಲ್ಲಿ [4]ಪು[4]ರರಚನೆಯಂ ಮಾಳ್ಪೆನೆಂದು ನೆನೆದು
ವನಜಸಂಭವನಿರದೆ ಗಿರಿಜೆ ತಪವೆಸಗಿರ್ದ
ಘನಕ್ಷೇತ್ರಮಿಲ್ಲಿ ಕಾಮಾಕ್ಷಿ ತಾ[5]ನಿಹಳಾಕೆ[5]
ಗನುವಿನಿಂದಿದೆ ಕಾಂಚಿದಾಮವೆಂದೀ ಪುರಕೆ ಕಾಂಚೀನಗರವೆಂದನು ೨೯

ಚರಿಪ ಪಾಲ್ದೊರೆ ಮುಖ್ಯತೊರೆಗ[6]ಳೊಳಗೇ[6]ಕಾಂಬ್ರ
ವರನಾಥ ಕೈಲಾಸನಾಥ[7]ನೇ[7] ಕಚ್ಛಪೇ
ಶ್ವರಮುಖ್ಯ ಷೋಡಶಸಹಸ್ರಶಿವನಿಳಯದಗ್ಗಳದ ಮಣಿಗೋಪುರಗಳಿಂ
ಚಿರಸೃಷ್ಟಿ ಚಕ್ರಪಾತಾಳಗೃಹಕಾಮಾಕ್ಷಿ
ಯಿರದಿರ್ಪ ಸ್ವರ್ಣಾಯತನ ಮಂಟಪಂಗಳಿಂ
ದರರೆಯಗಣಿತ ಪಾಶುಪತಮಹಾವ್ರತರ ಭೂಸುರರ ಸದ್ಮಂಗಳಿಂದ ೩೦

ಬಿಡದೆಯೆಡೆಯಾಡು[8]ತಿಹ ವಿಹಗಂಗಳಿಂದ[8]ಮರ
ರೊಡೆಯನೆಡೆ[9]ಗೈದಿಬಹ ವರಯೋಗಿಜನರಿಂದ[9]
ಪೊಡವಿಗಚ್ಚರಿಯೆನಿಸುತಾವಾಗ ಫಲ[10]ವೀವ ತ[10]ರುಗಳೀರ್ಪೆದರಿಂದ
ಸಡಗರದ ಭೂದೇವಕುಲಲಕ್ಷತ್ರಿತಯ[11]ದಿಂ[11]
ಬೆಡಗಿನುರೆ ರನ್ನಕರುಮಾಡಕೋಟಿಯ ಸಾಲ್ಗ
ಳಿಡಿಕಿರಿದ [12]ಸೋಮಸೂರ್ಯರನೇಕವೀಧಿಯಿಂ[12] ಕಾಂಚೀಪುರಂ ಮೆರೆದುದು ೩೧

---

1 ನೊಂದೆ ಶಿವ ನಗುತ್ತಾ ವೇಳೆಯೊಳ್ ತರಂಗಿಣಿಯ (ಚ) 2 ಫಾಲ (ಗ) 3 ಗಾವಾಗ (ಕಗ) 4 ಸು (ಚ) 5 ಯಿಹಳೆಂಕೆ (ಚ) 6 ಳಿಂ ಏ (ಚ) 7 ನುಂ (ಚ) 8 ವತಿಯಾರು ಪಕ್ಕಿಗಳ (ಚ) 9 ಗಲ್ಪೆದು ತೀರ್ಥ ಮುನಿಗಳ್ ನಾಲ್ಕು (ಚ) 10 ಗುಡುವವ (ಚ) 11 ಮಹ (ಚ) 12 ಸೂರ್ಯ ಸೋಮಾನೇಕ ವಿಧಿಯಂ (ಚ)

ತರಳನಂತಲ್ಲಿ ಚೇಷ್ಟೆಯ ತೋರಿ ಮೆರೆವುತ್ತ
ದುರುಳನಂತತಿದುಷ್ಟತನವ ತೋರುತ [1]ಜನರ್ಗೆ[1]
ಮರುಳನಂತತಿಕಷ್ಟಭ್ರಷ್ಟವೇಷವ ತೋರಿ ಪಲ್ಗಿರಿವುತಂತರದೊಳಂ
ಸರಳಿಸುತ್ತಂ ಜ್ಞಾನದೃಕ್ಕಿಂಗೆ ಚಿನ್ಮಯದ
[2]ಶರನಿಧಿಯುದರದಂತೆ[2] ಪರಶಿವನ ತಿರುಳಂತೆ
ವರಲಸದ್ವೇದದುರೆ ಪುರುಳಂತೆ ಸುರಮಣಿಯ ಪರಳಂತೆ ರಾಜಿಸಿದನು ೩೨

ಸಣ್ಣನಹ ದೊಡ್ಡನಹ ಗುಡ್ಡನಹ ಪರಿಪರಿಯ
ಬಣ್ಣಗಳ ನಟಿಸುವಂ ಜೀರ್ಣಕಂಥೆಯ ಧರಿಸಿ
ಕಣ್ಣನಲಿ ಜಾರು ತಲೆಗೆದರುತಾ ಪಣೆಯ ಮೇಲ್ಕುಣಿವ ಕುರುಳುಗಳು ನೋಡೆ
ಮಣ್ಣುಮಸಿ[3]ವತ್ತಿದಂಗದ *ಜೋ*ರಿನಿಂ ತಾನು[3]
ಪಿಣ್ಣಾಕನೈನಾರೆನುತ್ತ ಕುಣಿಯಲ್ ಜನರು
ದಣ್ಣನೆದಣಿದು ನಗುತಂ ನೋಡಿ ಬೆರಗಾಗಲಲ್ಲೆಸೆದನಾನಂದದಿಂ ೩೩

ಜೋರಿಳಿದ ಮಲಿನ ತನು ಪಳೆಯರುವೆ ಕಂಬಳಿಯಿ
ನಾರುವಂರಿಯದ [4]ಹುಚ್ಚನಂತೆ ನಗುತಂ ನಿಲುತ[4]
ಸಾರಿಯಲ್ಲಲ್ಲಿ ನಿಲುತಂ ನಗುತ ಗಹಗಹಿಸಿ ನಟಿಸುತಂ ಚಿಟುಕಿಕ್ಕುತ
ಭೂರಿವಾದ್ಯದ ಗತಿಗೆ ಬೆಳ್ಕುತಂ ಬೆದರುತಂ
ಮಿಾರಿ ನಡೆವುತ್ತ ಮನೆಮನೆಯ ಬಾಗಿಲ ಮುಂದೆ
ಚೀರಿ ಭಿಕ್ಷಾಂದೇಹಿಯೆನೆ ಬರಲ್ ಭಿಕ್ಷೆಯಂ ಕರಪಾತ್ರೆಯೊಳ್ ಕೊಳ್ಳುತೆ ೩೪

ಎಲ್ಲೆಲ್ಲಿ ಶಿವಭವನಮುಂಟಧಿಕಲೀಲೆಯ ಮ
ಹೋಲ್ಲಾಸದಿಂ ನೋಡುತಂ [5]ಪಾ[5]ಡುತಂ [6]ಬೇ[6]ಡು
ತಲ್ಲಲ್ಲಿ ತಮ್ಮಿಷ್ಟಲಿಂಗಮಂ ನಿಷ್ಠೆಯಿಂ ದೃಷ್ಟಿಯಿಂ[7]ದೀಕ್ಷಿಸುತ್ತಂ[7]
[8]ಅಲ್ಲಿಂದ[8] ರೇವಣಾಸಿದ್ಧ ಶಿವಕಾಂಚಿಯೊಳ್
ಸಲ್ಲಲಿತ ನಟಣಮಂ ನಟಿಸುತ್ತ ಬರಲಲ್ಲಿ
ಫುಲ್ಲನಾಭಂ ನೆಲಸಿದುರೆ ವಿಷ್ಣುಕಾಂಚಿಯಂ ಪೊಕ್ಕು ಮುಕ್ಕಣ್ಣ ಸಿದ್ಧಂ ೩೫

---

1 ನುಜರ್ಗೆ (ಕ) 2 ದುರುಳಿಪುಂಜಗಳಂತೆ(ಚ) 3 ಪತ್ತಿದೊರೆ ಬಣಗು ಸುರಿವುತ ತಾನೆ (ಚ) • ಜಾ (ಗ)
4 ಪುರ್ಚನ ಪಾಂಗಿನಿಂ ಧರಿಸಿ (ಚ) 5 ಆ (ಚ) 6 ಪಾ (ಚ) 7 ದಿಟ್ಟಿಸುತ್ತೆ (ಚ) 8 ಬಲ್ಲಿದಂ (ಚ)

ಮುನ್ನ ಕೊಟ್ಟಭಯವುಂಟ[1]ದ ತ್ಯಾ[1]ಜದಿಂದೆ ತಾಂ
ಮನ್ನಿಸಲ್ಬೇಹುದೆಂದಿಭಗಿರಿಯ ಮೇಲೆಯುಂ
ತ್ಪನ್ನಮಾದಾ ವಿಷ್ಣುಪ್ರತುವೆಂಯಂ ಬೆಚ್ಚಿ ಬೆದರುತ್ತ ಸುಳಿಸುಳಿದು ನೋಡಿ
ಬಿನ್ನಣದೆ ಗೋಪುರದ ಮಂಟಪದ ಪ್ರತುಮೆಗ[2]ಳ[2]
ಚೆನ್ನಾಗಿ ನಿಗುರುತಂ ಬಗ್ಗು[3]ತ್ತ[3] ಕೀಳ್ಮೇಲ
ನನ್ನಿಯಂ ನೋಳ್ಪವೊಲ್ ನೋಡಿ [4]ಬೆಳ್ನಗೆ[4]ಯಿಂದ ಗಹಗಹಿಸಲದ ಕಾಣುತೆ ೩೭

ಆ ಗುಡಿಯ ವೈಷ್ಣವರ್ ಬಂದು ನಗುತಂ ಬಿಡದೆ
ಬೇಗ ನೀನಾರಡಾ ಯಿಂಗೆವಂದೇನೆನ
ಲ್ಯಾಗೆ ವೋಡಲ್ಕವರು ಪಿಡಿತಂದು ನಮ್ಮ [5]ತೇವರಿ•ಕೆ• ಗುಮ್ಮಟಲಲ್ಲಲ್[5]
ಈಗ ದಂಡಂ ಮ[6]ಣಿಯೆ[6]ನುತ್ತ ಬಗ್ಗಿಸಿ ಕೆಡಹೆ
ಯೋಗಿವ[7]ರ್ಯನನಾಗಲಚ್ಯುತಂ ಬೆಚ್ಚುತ್ತ[7]
ರಾಗದಿಂ ಪೊರಮಟ್ಟು ಪಿಂದಕ್ಕೆ ನೋಡಿಯೋಡುತ್ತ ಬಯಲಾದನಮಮ ೩೭

ಅಡಅಡಾ [8]ಪುಡುಪುಡುಚಿಕೋ ಎಂದು[8] ಬಂದವರು
ತಡಹಿ ಕಾಣದೆ ಪೆಡಂಮೆಟ್ಟುಪೋಗಲ್ಕಾಗ
ಜಡಜಾಕ್ಷನಹ ಕಾಂಚಿವರದನಾ ಪ್ರತುಮೆಯದ್ಭುತ[9]ದಿಂದೆ ಗಡಬಡಿಸುತ[9]
ನಡನಡುಗುವಂದಮಂ ಕಂಡು ವೈಷ್ಣವರಾಗ
ಮೃಡನಲ್ಲದೀ ಪುಚ್ಚು ಬೇರೊಬ್ಬನಲ್ಲಮೆಂ
ದಡಿಗಡಿಗೆ ಹೆದರಿ ಶಿವದ್ರೋಹಮೆಂದವರು ಮನೆಗಳ ಪೊಕ್ಕರತಿಭಯ[10]ದಲಿ[10] ೩೮

ಅವರೊಳತಿಬಲ್ಲ ವೈಷ್ಣವಪೂಜಕರ್ ನೋಡಿ
ಭುವನವಲ್ಲಭಗೆ ವಿಜಯೇಂದ್ರಚೋಳಂಗೆ ಬಿಡ
ದವಿರತಂ ಎಲ್ಲರೀವಾರ್ತೆಯಂ ಪೇಳದಿರೆಯಾಜ್ಞೆಯಮಗಪ್ಪುದೆಂದು
ಸವಿಶೇಷದಿಂದ ಪೋಗುತ್ತ ರಾಜೇಂದ್ರ ಕೇಳ್
ದಿವಿಜರಾಣ್ಮಂ ಪದ್ಮನಾಭವಿಗ್ರಹಮಿರದೆ
ವಿವಿಧವಿಧದಿಂದಲಲ್ಲಾಡುತಿದೆಯಾಶ್ಚರ್ಯಕರ ಶಾಂತಿಹವನಂಗ[11]ಳಂ[11] ೩೯

---

1 ದಂ ವ್ಯಾ (ಚ) 2 ಳು (ಗ) 3 ತಂ (ಚ) 4 ಬಿಳುನಗೆ (ಚ) 5 ತೇರಿಕೆ ಕುಮ್ಮಟಲಿಲ್ಲದ (ಚ)
• ಗೆ (ಗ) 6 ಣುಮೆ (ಚ) 7 ರ್ಯಂ ನೆಗದರುಚುತಂ ಬೆರ್ಚುತಂ(ಚ) 8 ಪಿಡಿಚಿಕೋಯೆಂದಟ್ಟಿ(ಚ)
9 ದೆ ಗಡಗಡಮೆಸುತ್ತ (ಚ) 10 ದೊಳು (ಚ) 11 ಳು (ಗ)

ತ್ವರಿತದಿಂ ಷೋಡಶಮಹಾದಾನ ಮುಂತಾದ
ವರಕರ್ಮದಿಂ ಪ್ರತಿಷ್ಠೆಯ ಮಾಡವೇಳ್ಕುಮೆನ
ಲರಸು ಚಿಂತಾಶರಧಿಯೊಳಗಾಳ್ದಿದೇನು ಲೋಕಪ್ರಳಯವೋ ಹರಹರ
ಗಿರಿಚಲನವೋ ಧರಾಕಂಪನನೊ ನೋಡಿ ದಿ
ಗ್ದಿರದ ಗಳಲಯವೊ ಶೇಷನ ಶಿರಃಕಂಪನವೊ
ಪರ[1]ವೇಂದಿರಾ[1]ವಿಯೋಗವೊಯೆಂದು ಪರಿಪರಿಯೊಳಾ ಸಭೆಯಗಲ್ದನಾಗ ೪೦

ತಿಳಿಯಲರಿಯದೆ ಸಭಾಜನರು ಮಂತ್ರಿಗ[2]ಳಾಗ
ಲೆಲೆ ರಾಯ ಚಿಂತೆಯಾಕಿದಕಂಜಿಕೆಯ ಮಾಣಿ
ಪಲತೆರದ ವಾದ[2]ಮಂತ್ರಾಗಮವ ಬಲ್ಲ ವೈದಿಕರ ತಾಂತ್ರಿಕರ ಕರಸೆ
ಒಲವಿನಿಂ ಪೇಳ್ವರೀಕ್ಷಣ ಶಾಂತಿಯೆಯ್ದಿಪರ್
ನಳಿನನಾಭ[3]ನಿಗೆಂದು ಪೇಳಲಾಗಮದಿ[3] ಪ್ರ
ಬಲ[4]ರಾದ ವೈಷ್ಣವರು ವೈಖಾನಸರ[4] ಪಾಂಚರಾತ್ರರಂ ಭಾಗವತರಂ ೪೧

ಕರಸೆಯಿವರೆಯ್ದಧಿಕ [5]ಪ[5]ರಕೆಗಳನಿತ್ತು ಕು
ಳ್ಳಿರಲಿದಂ ಪೇಳೆಯವರರಸ ಕೇಳಿದು ಮಹಾ
ವರಶಾಂತಿಜಪಹೋಮ ಸಂಪ್ರೋಕ್ಷಣಂ ಮುಖ್ಯವಿಧಿಗಳಿಂ ನಿಲ್ವುದೆನಲು
ಭರದಿಯವರಿಂದಲತಿಶಯವಾಗಿ ಮಾಡಿಸ
ಲ್ಕರರೆ ನಿಲ್ಲದೆ ಪೋಗೆ ಘನಶೈವರಿಂದಲನು
ಕರಿಸಲದು ತರಹರಂಗೊಳ್ಳದಿರೆ ಕಾಲತ್ರಯಂ ತಿಳಿದ ಯೋಗಿವರರಂ ೪೨

ಮುದದಿ ಬರಿಸುತಲವರ್ಗುಚಿತಾಸನಂಗಳಿ
ತ್ತಧಿಕ ಭಯಭಕ್ತಿಯಿಂ ಮೂರ್ತಗೊಳಿಸುತ ಪೇಳೆ
ಸದಮಳಾಂಗರು ಯೋಚಿಸುತ್ತ ನಾವುಸುದೊರ್ಡಿದಂ ಸೇವ್ಯಮ[6]ಲ್ಲೆಂದರಾಗ[6]
[7]ವಿ[7]ದಿತ ವಿಜಯೇಂದ್ರಚೋಳ[8]ನೆ ಕೇಳು[8] ನಗರಕ್ಕೆ
ಯಧಿದೈವಯೇಕಾಂಬ್ರನಾಥ ಕಾಮಾಕ್ಷಿಯರ್
ಪದುಳದಿಂ[9]ದಿಷ್ಟಾರ್ಥ[9] ಫಲವಿಾವರವರನರ್ಚಿಸಿ ವರಿಸಬೇಹುಂದಲ್ತೆ ೪೩

---

1 ಮ ಇಂದಿರೆ (ಚ) 2 ಳಧಿಕ।ಉಲಿದರೆಲೆ ರಾಯನಿದಕಂಜಿಕೆಯೆ ಮಾಣೇಗ।ಬಲವಂತಭಂದ (ಚ)
3 ನನೆಂದು ಪೇಳೆವೇದಾಗಮ (ಚ) 4 ವಹ ವೈಷ್ಣವ ಸುವೈಖಾನಸಂ (ಚ) 5 ಹ (ಚ)
6 ತ್ತೆಂದುರಾಜ (ಚ) 7 ಗ (ಚ) 8 ಕೇಳೀ (ಚ) 9 ಸದ್ಯೇಷ್ಟ (ಚ)

ಎಲೆ ರಾಯ ಮುನ್ನಿಲ್ಲಿ ಮೇನಕಾತ್ಮಜೆ ತಪಂ
ಸಲೆಮಾಡಿಯಳಿಕಾಕ್ಷನೊಲಿಸಿಯಿಾ ಪುರದೊಳಗೆ
ಯೆಲೆ ದೇವ ಭಕ್ತರ್ಗೆ ಮನದಿಷ್ಟಫಲಗಳಂ ತಳುಹಿಲ್ಲದೀವುದೆನಲು
ಒಲವಿನಿಂದೀವು[1]ದಿದನಿದು ಸತ್ಯಮಿದು ಸತ್ಯ
ಮಂ[1]ಲಘು ಸಿದ್ಧಿಗಳಹವುಯಿಾ ಕ್ಷೇತ್ರದೊಳಗೆನಲ್
ನಲಿವುತವರಂ ಕಳುಹಿಯೇಕಾಂಬ್ರನಾಥನಾಲಯಕೆ ಪೋದಂ ಮುದದೊಳು ೪೪

ಪೋಗಿ ಪರಿಪರಿಯ ಪೂಜೆಯನೆಸಗಿಸುತ್ತಲನು
ರಾಗದಿಂ ಸಕಲಭೂಷಣಗಳನಲಂಕರಿಸಿ
ಯಾಗಧಿಕಮಾಹೇಶ್ವರಾರ್ಚನೆಯನೆಸಗಿ ಬಹುವೋಲಗಂಗೊಟ್ಟು ಚೋಳಂ
ಸಾಗಿಸುತ್ತನಿಬರಂ ಪೊರಯಿಂಕೆ ಲಿಂಗಕಿದಿ
ರಾಗಿ ತಾನೊರ್ವನೇ ಕುಳಿತು ದರ್ಭೆಯ ಪಾಸೊ
ಳಾಗ ಪಂಚಾಕ್ಷರಿಯ ಸ್ಮರಿಸುತ್ತಲೆಲೆ ದೇವ ಪದ್ಮನಾಭನ ವಿಗ್ರಹಂ ೪೫

ಚಲಿಸುತಿದೆ ನಿಲುವುದಕ್ಕೇನುಗತಿಯೆಂದು ಮಂಸ
ವಲರಿ ಬಿನ್ನೈಸುತ್ತಲೇಕಾಂಬ್ರನಾಥನು
ಜ್ವಲಪಾದಪಂಕಜವ ಧ್ಯಾನಿಸುತ್ತಿರಲನಿತರೊಳ್ ಸ್ವಪ್ನಮಾಗೆಯುಭವಂ
ಎಲೆ ರಾಯ ನವ್ಮ್ಮಮಳ ಚಿತ್ಕಳಾವಿಗ್ರಹಂ
ಸಲೆ ರೇವಣಾಸಿದ್ಧನಾಮದಿಂದೆಯ್ದಿಯಿಾ
ಪೊಳಲೊಳಿಹ ಪಿಣ್ಯಾಕನಯನಾರೆನುತ್ತಲತಿಮರುಳನಂದದಿ ಭಾವಿಸೆ ೪೬

ಎಸೆವುತಿಹನಾತನಿಂದಹುದು ಸಂಶಯಬೇಡ
ವಸುಧಾಧಿಪತಿಯೆನಲ್ ಕೇಳ್ದು ಶಂಕರಗೆ ಮಂ
ದಿಸಂತ ಗೃಹಕೈದಿ ಚರರಂ ಕರೆದುಯೆಲ್ಲಿ ಪಿಣ್ಯಾಕನೈನಾರೆನುತ್ತ
ಪೆಸರ್ವೆತ್ತ ಶಿವಸಿದ್ಧನಂ ಕರೆದು ತನ್ನಿಯೆಂ
ದೊಸಗೆಯಿಂ ಕಳುಹಲವರೆಯ್ತಂದು ಪಟ್ಟಣದೊ
ಳಸವಸದಿ ಬೀದಿಬೀದಿಯೊಳು ಕೇಳುತ್ತ ಸಾರುತ್ತ ನಡೆತಂದರಾಗ ೪೭

---

1 ತಿಹವಿದು ಸತ್ಯಮೆಂದ ಶಿವಾನ (ಚ)

ನೀವು ನಿಮ್ಮಯ ಕೇರಿಕೇರಿ [1]ಮನೆಮನೆಗಳೊಳ
ಗಾವ ತಾವಿನೊಳೊಡನೆ[1] ಪಿಣ್ಯಾಕಸಿದ್ಧನೆಂ
ಬಾ ವಿಗಡಮರುಳನಂ ಕಂಡು ಕೇಳ್ದಡೆ ಪೇಳಿ ತೋರಿರೇ ಎಂದು ಕೇಳೆ
ಸಾವಧಾನದೆ ತೆಲ್ಲಿಗರ ಕೇರಿಗಂ ಪೋಗಿ
ನೀವು ಕೇಳುವುದೆನಲ್ಕಲ್ಲಿಗೆಯ್ತಂದವರು
ಭಾವಿಸುತ್ತತಿಮರುಳ ಪಿಣ್ಯಾಕ ನಿಮ್ಮ ಬೀದಿಯೊಳುಂಟೆಯವನ ತೋರಿ ೪೮

ಎನಲಾತ ಗರಹೊಡೆದ ಭ್ರಾಂತ ಬವಣಿಗೆ ಬರ್ಪ
ನನುವಿನಿಂದೊಂದೆಡೆಯೊಳಿರ್ಪನೇಯೆನುತರಸೆ
ಘನಮಹಿಮನೊಂದೆಡೆಯೊಳಿರಲೀತನೆಂದು ತೋರಲ್ ಚರರ್ ಕಂಡು ನಿನ್ನಂ
ವಿನಯದಿಂ ರಾಜ ಕರತಹುದೆಂದು ನಡೆಯೆನಲ್
ಮಿನುಗು ನಗೆವೊಗದೊಳೆಂದಂ ನಾನು ಪರದೇಶಿ
[2]ಮಿನುಗು[2]ವರಸಿನ ಸಭೆಗೆ ಬರಲಮ್ಮೆನೇನುಂಟು ನಾನಲ್ಲಿಗಂಜುವೆ ಗಡ ೪೯

ನಾನೊರ್ವ ತಿರಕ[3]ಬಗು[3]ತಂ ದೊರೆಗೆ ನನ್ನಿಂದ
ಯೇನುಂಕಜ್ಜಂ ಬಾರೆ ನೀ[4]ವ[4] ಪೋಗೆನಲವರು
ಸಾನುರಾಗದಿಯರಸಿನೊಡನೆಯಿಾ ವಾರ್ತೆಯಂ ಪೇಳೆ ತಾಮಸದೊಳೆಂದಂ
ಹೀನಭಿಕ್ಷುಕ ಬಾರನೇಯವನ ಬಿಡದಧಿಕ
ಸೇನೆಯೊಡಗೂಡಿ ಪೋಗುತ ಪಿಡಿದುತಹುದೆನ
ಲಾನಂದದಿಂದವರ್ ಪೋಗೆ ಕಾಣುತ್ತಲೋಡಿದ ಜವದೊಳಾರುತ್ತಲು ೫೦

ಅದೆಲದೆ ಮಹಾ ಮರುಳನೋಡಿದನೆನುತ್ತಾಗ
ಲಧಿಕವಹ ಕಾಲ್ವೇಗಮುಳ್ಳ ಭಟರ್ಪಾರುತ್ತ
ಲೊದಗಿಬರಲಶ್ವಗಳ್ ಸುತ್ತಿಮುತ್ತಲ್ ನಗುತ ನಿಂದನಾಕಾಲದಲ್ಲಿ
ಪದುಳದಿಂದೊಡಬಡಿಸೆ ಬಾರದಿರೆ ಕ್ರೂರರತಿ
ಮುದದಿ ಕರಚರಣಶಿರ ಮುಂತಾದವಂ ಪಿಡಿದು
ಮುದದಿಂದೆ ಪೊತ್ತುಕೊಂಡೊಯ್ವುತಿರೆ ಜನರು ಗೋಳಿಟ್ಟರತಿ[5]ಖೇ[5]ದದಿಂದ ೫೧

---

1 ಮನೆಗಳೊಳಾವ ತಾವಿನೊಳಾದೊಡಂ (ಚ) 2 ಕನಲು (ಚ) 3 ಭಕ (ಗ) 4 ನೆ (ಗ) 5 ಭೇ (ಕಗ)

ಆ ಸಮಯದೊಳ್ ಸಿದ್ಧ ಮುದದಿ ತಲೆ ಕೈಕಾಲ
ಲೇಸಾಗಿ ಕೊಡುಹುತಾರ್ಭಡಿಸೆ ಗರಹೊಡೆದವೋ
ಲಾ ಸಕಲಭಟರೆಲ್ಲ ದಿಕ್ಕುದಿಕ್ಕಿನೊಳು ಬಿಳ್ದುರುಳಿ ಮೂರ್ಛೆಯ[1]ನೆಯ್ದಲು[1]
ಶಾಶ್ವತನು ಗಹಗಹಿಸಂತಾ ಗಗನದೊಳ್ ನಿಲ
ಲ್ಕಾಸುರದೆ ಗಂಧರ್ವಕರಣವಂ ಬಲ್ಲಾಳು
ವಾಸಿಯಿಂದಾಗಸಕ್ಕೈದಿ ಪಿಡಿಯಲ್ ದರ್ಪಣಚ್ಛಾಯೆಯಂತೆಸೆದನು ೫೨

ಕೆಲರು ತಲೆಯೊಡೆದು ಕೆಲಕೆಲರು ಕೈಕಾಲ್ಮುರಿದಂ
ಕೆಲರು ಮೂರ್ಛೆಯನೊಂದಿ ಕೆಲರು ಮೃತಿಯಂ [2]ಪೊರ್ದಿ[2]
ಕೆಲರು [3]ಕಾಲ್ಗೆಟ್ಟುವಯೆವೆಹೊಯ್ಯದೆ ಎದೆಯಾರಿ ಬೆಚ್ಚುತ್ತ ಘನ[3]ಭಯದೊಳಂ
ಕೆಲರು ನಾಲಗೆ ಮಿಡುಂಕದೆ ಚಿತ್ರಮೂರ್ತಿಯೊಲ್
ಕೆಲರು ಹೊರಳುತ ಕೆಲರು ಮಿಟಮಿಟನೆ ನೋಡುತ್ತ
ಕೆಲರು ಪಲುಬುವ ಚಂದಮಂ ಕಂಡು ಚೋಳಂಗೆ ಪೇಳಿದರ್ ಚರರವ[4]ರೊಳು[4] ೫೩

ಕೇಳುತ್ತ ರಾಯನೆಂದಂ ನನಗೆ ಮುನ್ನ ಶಶಿ
ಮೌಳಿ ಪೇಳಿದ ವಚನವಂ ಮರೆದೆನಕ್ಕಟಾ
ಖೂಳ ನಾನೆಂದಾತ್ಮಮಣಿಖಚಿತ ಸಿಂಹಪೀಠವನಿಳಿವುತಲ್ಲಲ್ಲಿಗೆ
ನೀಳಕೈಗಳ ಮುಗಿವುತಡ್ಡಬೀಳುತ ಧರೆಯೊ
ಳೇಳುತ್ತೆ ಪುಷ್ಪಾಂಜಲಿಯನೆಸಗುತತಿ ಭಯದೊ
ಳಾಳುತ್ತೆ ಸ್ತುತಿಸಿದಂ ವಿಜಯೇಂದ್ರಚೋಳಧರಣೀನಾಥ ವಿಖ್ಯಾತನು ೫೪

ಪಾಹಿಮಾಂ ಪರಮೇಷ್ಟಿಶಿರಹನನ ಪುರದಹನ
ಪಾಹಿಮಾಂ ಮೋಕ್ಷಾಂಗನಾಕಾಂತ ಸಂಶಾಂತ
ಪಾಹಿಮಾಂ ಭಕ್ತಾಪರಾಧಪಾಲನಕರ್ತ [5]ಭಕ್ತಲೋಕೈಕ[5]ಭರ್ತಾ
ಪಾಹಿ[6]ಮಾಮ[6]ಖಿಳ ಜಗದುದರ ಪಾವನ ಕುಧರ
ಪಾಹಿಮಾಂ ಜಂಭಾರಿನುತಪಾತ್ರ ಸಿತಗಾತ್ರ
ಪಾಹಿಮಾಂ ಶರಣೆನುತ್ತವನಿಯೊಳ್ ತನುವನೀಡಾಡಿದಂ ಭೂರಮಣನು ೫೫

---

1 ನೊಂದಲು (ಚ) 2 ಪೊಂದಿ (ಚ) 3 ಕೈಕಾಲ್ಕೆಟ್ಟುನಿಂದುಯೆವೆಹೊಯ್ಯದೆರ್ದೆಗುಂದಿ ಬೆರ್ಚುತ (ಚ) 4 ರಳುತಲುಂ (ಚ) 5 ಹರ್ತ ಸರ್ವತ್ರ (ಚ) 6 ಮಾಂ ಅ (ಚ)

ಆಕಾ[1]ಶ[1]ದೊಳ್ ಗಗನಮಾರ್ಗದಿಂದಿಳಿತಂದು
ಭೂಕಾಂತನಂ ಸಲಹಿ ನಿನ್ನಿಷ್ಟವೇನೆನೆ
ಲ್ಯಾಕಾಶಕೇಶನ ನಿರೂಪಮಂ ಬಿನ್ನೈಸಲಾಕ್ಷಣಂ ಪೊಡಬಡುತ್ತೆ
ಲೋಕಗುರು ನಿಜರೂಪಮಂ ತಳೆದು ನಡೆಯನಲ
ನೇಕ ಸಂಭ್ರಮದಿ ನೃಪ ಸೇವಿಸುತ ಬರೆ ಮುಂದೆ
ಮಾಕಾಂತನಾಲಯಕ್ಕೈದಿದಂ ಶಿವಸಿದ್ಧತುಂಗ ಚಿದ್ಭಸಿತಾಂಗನು ೫೬

ಪೊಂದೆರೆಯ ಸೀರೆಯಂ ಪಿಡಿಸಿಯುಳಿದರ ಕಳುಹಿ
ಪಿಂದರಸನೊಡಗೊಂಡು ರಾಯ ನೀ[2]ನೋಡೆನು[2]
ತ್ತಂದವೆತ್ತಿಹ ಶಿರದೊಳಾ ವೀರ್ಯಮಂ ಸೂಸಲಾಕ್ಷಣಂ ಭಯಕಂಪನಂ
ನಿಂದಿತ್ತು ಎಲೆರಾಯ ಪದ್ಮನಾಭಂ ಶಿವನ
ಪೊಂದಿ[3]ರ್ಪ[3] ಪುರುಷಾಹ್ವಯದ ಶಕ್ತಿಯಿತ ಕೇ
ಳೆಂದು ಬೋಧಿಸುತಿರಲ್ ಸುರರು ಪೂಮಳೆಗರೆದರೇನೆಂಬೆನಾಶ್ಚರ್ಯಮಂ ೫೭

ಧರಣೀಶಗಭಿಮಂತೇಷ್ಟವನೀವುತವನಿಯ
ತ್ಯುರುತರದ ತಲ್ಲಣವ ನಿಲಿಸಿಯಾ ಕೃಷ್ಣಂಗೆ
ಅರುಳಾಳಪೆರುಮಾಳ್ಗೆಯಲ್ಲಾಳನಾಥನೆಂಬುರು ಪೆಸರನಿತ್ತು ದೊರೆ[4]ಯಿಂ[4]
ವರಪೂಜೆಯಂ ಕೈಕೊಳುತೆ ಪ್ರಕಟಮಾಯಿತಿ
ಲ್ಲಿರಸಲ್ಲ[5]ದೆಮ್ಮ[5] ಬೀಳ್ಕೊಂಡು ಧನಪನ ದೆಸೆಗೆ
ಹರುಷದಿಂ ಸುರಪಥವನಡರಿ ಬಂದಂ ಮಾಸನೂರ ವುಪಕಂಠದೆಡೆಗೆ ೫೮

ಆ [6]ಕಾಲದೊಳ್ ದಿನಪನಸ್ತಾದ್ರಿಯಂ ಸಾರ
ಲಾಕಾಶಮಂ[6] ತಮಂ ಬ್ರಹ್ಮಾಂಡವಲಯ[7]ದೊಳ
ಗೇಕಮಾಗಿರೆ[7] ರೇವಣೇಶನಾ ಪೊಳಲ ಪೊರಗಣ ಶಿವಾಲಯಮಂ ಪೊಕ್ಕು
ಜೋಕೆಯಿಂದಿರೆ ಮೇ[8]ಘಮರೆಯ ಚಂದಿರನವೊಲ್[8]
ಬೇಕಾದ ಪೂಜಕಂ ಬಂದು ನೋಡುತ್ತ ನೀ
ವೇ[9]ಕೆ[9]ಲ್ಲಿ ನೆಲಸಿಹಿರಿಯತಿಭಯಂಕರಸ್ಥಲವಿರಸಲ್ಲ ಪೋಗೆಂದನು ೫೯

---

1 ಲ (ಚ) 2 ಸೆಂದೆನು (ಚ) 3 ರ್ದ (ಚ) 4 ಯಂ (ಕಗ) 5 ದೆಂದು (ಚ) 6 ದೊಳಿನಸ್ತಾದ್ರಿಯಂ ಸಾರ್ದ । ನೇಕವಾದುದು (ಚ) 7 ದೊ । ಳೇಕಮೂರುತಿ (ಚ) 8 ಘದಮರೆಯ ಚಂದ್ರನೊಲ್ (ಚ) 9 ಕಿ (ಚ)

ಏನುಕಾರಣ[1]ಯಿಂ[1]ಲ್ಲಿಯಿರಸಲ್ಲದೆಂದೊರವೆ
ಮಾನಸೋತ್ತಮಸುಸುರೆನುತ್ತ ತಾವರಿಯದೊಲ್
ಜ್ಞಾನಮೂರುತಿ ಕೇಳಲೀ ಶಿವಾಲಯದಂತ್ಯಗೋಪುರದ ಒತ್ತಿನಲ್ಲಿ
ಏನಹೇಳಂವೆ[2]ನಿ[2]ಲ್ಲಿ ವಟಕುಜದ ಪೋಟೆಯೊಳ್
ಹೀನರಾಕ್ಷಸಮಿಥುನ [3]ಕೊಬ್ಬಿರ್ದತಿ[3]ಗುಣಿಯೊಲ್
ತಾ ನೆಲಸಿ ಬಹುಮಂದಿಗಳ ಕೊಂದಂ ರಕ್ತಮಂ ಪೀರ್ದವದರಿಂದಲಭವ ೬೦

ಹರನಿರೂಪಣವಿಲ್ಲದೆಮ್ಮ ಕೊಲಲಾರವೈ
ಭರದಿ ನೀ ಪೋಗೆನಲ್ ಪೋದ[4]ನವನಿ[4]ತ್ತಲಾ
ಪರಮಸಿದ್ಧೇಂದ್ರನಿರೆಯರ್ಧರಾತ್ರಿಯೊಳು ಮರನಿಳಿವುತ್ತೆ ದನಂಜಮಿಥುನಂ
[5]ವಿ[5]ರಸದಿಂ ಮುನ್ನಖಿಲರಂ ತಿಂದ ಸವಿಯಿಂದ
ಬರೆ ಲಲಾಟಾಕ್ಷಿಯಿಂದುರುಹಲಾಕ್ಷಣನುಕ್ಕಿ
ನೆರಡುಗಟ್ಟಿಗಳಾಗಲವ ಬಿನದದಿಂ ಪಿಡಿದುಕೊಂಡೊಯ್ದನಾ ಪುರಕ್ಕೆ ೬೧

ಶಿವಸಿದ್ಧನವನು ಚೆಂಡಿನ ಪರಿಯೊಳಾಡುತ್ತ
[6]ತವಕದಿಂದಾ[6] ಪೊಳಲ ಕಮ್ಮರನ ಕೈ[7]ಸಾರ್ಚ
ಲವಘಡಿಸುತಾ[7]ಮಿಥುನ ಘುಡುಘುಂಡಿಸೆ ಸಿಡಿಲಂತೆಯುಪಬಿಟ್ಟು [8]ಬಿಳ್ದ ಭಯದಿ[8]
ಆವನನೆಬ್ಬಿಸಿಯಭಯವಿತ್ತೆರಡುಗುಂ[9]ಡಿನಲಿ[9]
ಸವಿಶೇಷವಹ ವೊಂದುಸುರಗಿಯಂ ಮಾಡೆನ
ಲ್ಕವಗಡದ ಗುಂಡೊಂದ ಕಾಸಿ ಕಡಿದೊಡೆ ಬಡಿದೊಡೊಂದಿನಿ[10]ಸಂ[10]ನಿಗುರದಿರಲು
೬೨

ಅದರ[11] ರೀತಿಯ[11] ದಿವ್ಯದೃಷ್ಟಿಯಿಂ ಕಂಡಾಗ
[12]ಮುದದಿ[12]ಸಿದ್ಧೇಶ್ವರಂ ದಾಸಾಳಪೂಗೊಂಚ
ಲದರ ಮುಂದಕೆ ತೋರೆ ಸಾಧ್ಯವಾಗಲ್ಕಂಡು ಕಾರುಕಂ [13]ಕೇಳೆ[13] ಹದನಂ
ಪದುಳದಿಂದಿವು ಯಕ್ಷದಂಪತಿಗಳೊರ್ವ ಮುನಿ
ಸದನದೊಳ್ ಸುಸಿಲನೆಸಗುತ್ತಿರಲ್ ಶಪಿಸಿದಂ
ಬೆದರಿ ಮುನಿದನುಜರಾಗೆಂದಡವರೆರಗಿ ನಿಶ್ಶಾಪ[14]ವೆಂದಿಗೆಂದೆನಲು[14] ೬೩

---

1 ವಿ (ಚ) 2 ನ (ಚ) 3 ಗುರ್ವಿತದತ್ರಿ (ಚ) 4 ನಡಿಯಿ (ಚ) 5 ಸ (ಚ) 6 ಲವನು ಆ (ಚ)
7 ಯೊಳ್ ಕೊಡಲ್ । ತವಿಯದಾ (ಚ) 8 ಬಿಳ್ದಂ ಭಯದೊಳು (ಚ) 9 ಡೊಳತಿ (ಚ) 10 ತು(ಚ)
11 ಪೇಕ್ಷೆಯ (ಚ) 12 ವಿದಿತ (ಚ) 13 ಹೇಳೆ (ಚ) 14 ಮಂ ಕೇಳವರ್ಗೆ (ಚ)

ಪೇಳಿದಂ ನಿಮಗೆ ರೇಣುಕರಿಂದ ನಿಶ್ಶಾಪ
ದೇಳಿಗೆಯೆನಲ್ಕವರು ಯಿಾಪುರದ ಶಿವನಿಳಯ
ದಾಲ[1]ದ ವರದ *ಪೊಟರೆ*ಯಲ್ಲಿ[1] ಶಿವಮಂದಿರಕೆ ಬಂದ ಬಹುನರರ ತಿಂದು
ಮೇಲನರಿಯದೆ ನಮ್ಮ ತಿನಬರಲ್ ಪಣೆಗಣ್ಣ
ಪಾಳಿಯಿಂದಿವ ಸುಟ್ಟೆವಿವರೊಳಿದುಗಂಡೆನಂ
ತ್ತಾಳಿಯಿಂದದ ನೂತ್ನಸುರಗಿಯಂ ಮಾಡಿ ಪಿಡಿಯಲ್ ಕುಲಿಲಿಯೆಂದು ಕೂಗೆ ೬೪

ಒರಲಿಯುಜ್ವಲಿಸಿ [2]ಪಲ್ಮೊರೆಯಲೋಜಾಯತಂ[2]
ಭರದೆ ಹೆದರುತಲದರ ಮಹಿಮೆಯಗಣಿತವೆಂದು
ಗುರುವರನ ಕರಕಿತ್ತೊಡವಗೆ ಧನಕನಕವಾಹನವಸ್ತುತತಿಯನಿತ್ತು
ಪುರದ ಮುಂದಣ ಭೀಮರತಿಯ [3]ಪ್ರದದೊಳಗಾ[3]
ಸುರಗಿ ಮೊನೆಕೆಳಗಾಗಿ ನಿಲಿಸಿ ಪೋಗದಿರು ಎಂ
ದಿರದಾಜ್ಞೆಯಂ ಮಾಡೆಯಂತರಿಕ್ಷದೊಳು ಶ್ರೀಯುಜ್ಜನಿಯ ನಗರಕೈದಿ ೬೫

ಅಂತರಿಕ್ಷದ ಮಾರ್ಗದೊಳಗಿಳಿದು ಬಹ ಗುರುವ
ನಂತಪ್ರೀತಿಯೊಳಂ ಸುರರೆರೆಯನಿತ್ತಧಿಕತರ
ಕಾಂತಿಯಿಂದೆಸೆವ ಸಿಂಹಾಸನವನಿಳಿದು ದಂಡಪ್ರಣಾಮವನು ಮಾಡಿ
ಇಂತು ಬಹುವಿಭವದಿಂದೋಲಗಂಗೊಟ್ಟಾಗ
[4]ಸಾಂತಕ[4]ಪುರಕ್ಕೊಯ್ದು ಮಣಿಖಚಿತವಿಷ್ಟರ[5]ದೊ
ಳಂತು[5] ಮೂರ್ತಂಗೊಳಿಸಿ ಪಾದಪ್ರಕ್ಷಾಳನೋದಕವನೀಂಟುತೆ ವಿಕ್ರಮಂ ೬೬

ಸಲ್ಲಲಿತ ಪೂಜೆಯಂ ಸಂಭ್ರಮದೊಳೆಸಗಿ ಜಗ
ದ್ವಲ್ಲಭನ ಮುಂದೆಸೆಯೊಳಾ ವಿಕ್ರಮಾದಿತ್ಯ
ನುಲ್ಲಾಸದಿಂ ನಿಂದು ನುತಿಸಿದಂ ನಿರುಪಮ ನಿರಾಲಂಬ ನಿತ್ಯತೃಪ್ತ
ಇಲ್ಲಿಗೆಯ್ದಿದಿರೆನ್ನ ಸಲಹಲೆಂದೆನ್ನ ತಪ
ಪಲ್ಲ[6]ವಂಗೊಂಡುದೈ ನಾನೇಂ[6] ಕೃತಾರ್ಥನೋ
ಬಲ್ಲಿದನೊ ಎನುತ ಬ[7]ಹಳೋ[7]ಪಚಾರದೊಳು ನಮಿಸಲ್ಕೆ ಶಿವಸಿದ್ಧತಿಲಕಂ ೬೭

---

1 ಮರವೆಡರೊಳ್ ಸೇರೆ (ಚ) * ಪೋಟೆ (ಗ) 2 ಬೊಬ್ಬಿಡಲಾಗರುತಂ (ಗ) 3 ಹೃದಯದೊಳ್ ನಾಟೆ (ಚ) 4 ಸ್ವಾಂತಃ (ಚ) 5 ದಮೇ।ಲಂತು (ಚ) 6 ದದ ಕರುಣಂ ನಾನೇಂ (ಚ)7 ಹುದೋ (ಕಗ)

ಭಲರೆ ವಿಕ್ರಮ ನಿನ್ನ ಭಕ್ತಿಗುಣ[1]ಗಳಿಗೊಲಿದೆ[1]
ಲಲಿತಾಸ್ತ್ರಮಂ [2]ಪಿಡಿ[2] ಮಹಾಗುಣಗಳುಂಟದರೊ
ಳೊಲವಿನಿಂ ಭೋಜನಕೆಯಮೃತಾನ್ನ[3]ಮಂ ದು[ಗು]ಲಮಂ ಪೊದೆಯಲೇರುವದಕೆ[3]
ಸಲೆ ಪರೂಥವನು ನಾನಾರತ್ನಖಚಿತವಂ
ನೆಲೆ ಯಾಗಿ ರಣರಂಗಕಾಯು[4]ಧವ ತೊಡುವುದಕೆ[4]
ಚೆಲುವಾದ ಭೂಷಣ[5]ವನೀವುದೇದಿತ್ತಿದರ ವೃತ್ತಾಂತಮಂ ಪೇಳ್ದನ್[5] ೬೮

ಎಲೆ ವಿಕ್ರಮಾಂಕ ಕೇಳ್ ನಿನ್ನಂ [6]ಸುರೇಶ್ವರಂ
ಕೆಲವುಕಾಲಕ್ಕೆ[6] ನೋಡುವೆನೆಂದು ಕರೆಸುವಂ
ವೊಲವಿನಿಂ ಪೋಗಲಾ ಕಾಲಕ್ಕೆ ಶಸ್ತ್ರಕುರೆ ಶಾಪ ನಿಶ್ಶಾಪಮಾಗಿ
ಚೆಲುವ ಯಕ್ಷಿಣಿಯಾಗಿ ಪೋಗುವಳ್ ಗಡ ನೀನು
[7]ಪಲವ[7] ಚಿಂತಿಸಬೇಡವೆಂದಭಯವಿತ್ತು ತಾ
ನೊಲವಿನಿಂ ಬೀಳ್ಕೊಂಡು [8]ವಿನಯಂದಂಗಣಕಡರಿ ನಡರಿ[8] ಜಯಜಯಯೆಂದರು ೬೯

ಸುರರ ಮಾರ್ಗದೊಳೆಯ್ದುತಂ ಬಹಳಪತ್ತನದ
ಸಿರಿಯನೀಕ್ಷಿಸುತ [9]ಬರಲಮೃತದಾಗರವೊ[9] ಮೇ
ಣರರೆ ಭಾಗ್ಯದ ಜನ್ಮಭೂಮಿಯೋ ಜನಕೆ ಕಲ್ಪದ್ರುಮಂವೊ ಪೆಣ್ಗಳೆಂಬ
ಪರಲ್ಗಳಂ ಕೊಡುವ ಚಿಂತಾರತ್ನವೋ ಕಾಮಿ
ನರರ್ಗೆ ಸುರಧೇನುವೋ ಎನಲು ಮಂಗಳವಾದ
ಮೆರೆವುತಿರ್ದುದಂ ಸೋಮಸೂರ್ಯವೀಥಿಗಳಿಂದನೇಕ ಶಿವಭವನಂಗ[10]ಳು[10] ೭೦

ಆ ಪುರವ ಪೊಕ್ಕು ತನ್ನಯ ದಿವ್ಯಕಾಂತಿಮಯ
ರೂಪವಂ ಮರೆಸುತ್ತ ಪೈಶಾಚದಂತೆ ನಾ
ನೇಪೇಳ್ವೆ ಶತಛಿದ್ರಜೀರ್ಣಕಂಥೆಯನಾಂತು ಬಣಗುಸುರಿವುತೆ ಮೈಯೊಳು
ದೀಪಿಸುವ ಶಿವಶರಣರಂಗಣಕೆ ಮನೆಮನೆಗೆ
ತಾ ಪೋಗಿ ಪಲ್ಗಿರಿದು ಪಸಿದಂ ಬಳಲ್ದವನಂತೆ
ಚಾಪಳದಿ ಬಿಳ್ದಿ[11]ಳ್ದ[11] ಬಳಲ್ವ ಭ್ರಾಂತನ [12]ನೋಡಿ ನಲಿವುತಾ[12] ಕಲ್ಲಿಶೆಟ್ಟಿ ೭೧

---

1 ಕೊಲಿದೆವೀ (ಚ) 2 ಕೋ (ಚ) 3 ಮುಂದುಕುಲಮೂ ಪೊದೆಯಲೇರುವಡತಿ ಸಲೆವರೂಥಂ ದಿವ್ಯವಧು ನೋಡೆ ನೆರವುದಕೆ (ಚ) 4 ಧಂ ಆಭರಣ (ಚ) 5 ಕೆಂದಿರ ವೃತ್ತಾಂತಮಂ ಪೇಳಿ ಕರ ಕಿತ್ತರನು (ಚ) 6 ಸುರೇಂದ್ರ ಮನವಲರಿ ಕೆಲದಿನಕೆ (ಚ) 7 ಪಲುಬಿ (ಚ) 8 ವಿಯಚ್ಚರಾಂಗಣಕಡರಿ ನಡೆಯೆ(ಚ) 9 ಬರೆಸಿಂಗದ ಕಡಲೊ (ಚ) 10 ಳಂ (ಚ) 11 ಳ್ದ(ಕಗ) 12 ಕಂಡು ಕಂಡ ನಾ (ಚ)

[1]ಕಂಡಿವಂ ಹುಚ್ಚ ಪಸಿವಿಂದ ಬಳಲಂತ್ಯಾಗ[1]
ಡೆಂಡಣಿಸಿ ಬೀಳುತಿಹನಿವಗಂಬಕಳನೀಡೆ
ಯುಂಡುಬದುಕುವನೆಂದು ಕರುಣದಿಂ ಕರೆಯಬಂದಾಗ[2]ಲೇ[2] ಕರೆದೆಯೆಂದು
ಗಂಡುಗಲಿ ರೇವಣೇಶಂ ಕೇಳೆ ಮರುಳನೀ
ನುಂಡುಟ್ಟು ಗಾಣಮಂ ಪೊಡೆದುಕೊಂಡಿಹುದೆನಲ
ಖಂಡಚಿನ್ಮಯ ಶಂಭು[3]ವಾಗ[3] ನಗೆಯಿಂದಲೊಡಬಟ್ಟು ನಂಬುಗೆಯನಿತ್ತಂ ೭೨

ವನಜಸಂಭವನಂಡಗಳ ಸಮೂಹಂಗಳಂ
ಬಿನದದಿಂ ಸಲಹುತಿರ್ಪನುಪಮನು ಸಿಟ್ಟಿನಿಂ
ವಿನಯದಿಂದೆನ್ನ ರಕ್ಷಿಸಬೇಹುದೆನಲು ವೃಣಲಿಕ್ಕಿ ಗಾಣವ ಹೊಡೆಯನೆ
ಘನಮಹಿಮನಾ ಜ್ಞಾನಪೂರ್ವ ಸತ್ಕರ್ಮಮಂ
ಬನುವಾದ [4]ಮೂರುಕೋಲಿಂದ ಮುದಜೀ[4]ವನಹ
ಬಿನುಗೆತ್ತ ಬಡಿದು ಪರಿಭವವೆಂಬ ಗಾಣಮಂ ಸುತ್ತಿ ಪೊತ್ತಿರುಗಿಸಿದನು ೭೩

ನರಸುರೋರಗಮುಖ್ಯ ಜೀವರಾಶಿಗಳೆಂಬ
ಪರಿ[5]ಮಿತದ[5] ತಿಲಗಳಂ ಯೋನಿಯಂತ್ರದೊಳಾಡಿ
ಪರಮಸುಜ್ಞಾನರಸಮಂ ಹಿಳಿದು ತೆಗೆವಂತೆ ಎಣ್ಣೆಯಂ ತೆಗೆದುಬಿಡದೆ
ಆರರೆ ನಿಸ್ಸಾರಪ್ರಾರಬ್ಧ[6]ದುಷ್ಕರ್ಮಮಂ
ಬುರುತರದ ಹಿಂಡಿಯಂ ತೆಗೆದೊಡಲ ಗಾಣಮಂ
ಭರದಿಯಾಡುತ್ತಿರ್ದ[6] ಶಿವಸಿದ್ಧಕುಲಲಲಾಮಂ ಮಹಾತೆಲ್ಲಿಗನೊ[7]ಳು[7] ೭೪

ಇಂತು ಗಾಣವನಾಡುತೆಲೆಸೆಟ್ಟಿಯಂಬಲಿಯ
[8]ಮುಂತೊಲ್ಲೆ ಗಾಣದಾ ಪಿಂ[8]ಡಿಯೋ ಸಾಕೆನ
ಲ್ಕಂತ[9]ರಂ ಬಿಗಿಯಪ್ಪಿ ನಾಂ ಭೋಜನವ ಮಾಡುವನ್ನಮಂ ಕೊಳ್ಳುವುದೆನ[9]
ಆಂತದಂ ನಾನೊಲ್ಲೆ ಪಿಂಡಿಯೋ ಲೇಸೆನುತ
ಕಂತುಹರನಪರಾವತಾರ ರೇವಣಸಿದ್ಧ
ನಿಂತು ಕತಿಪಯಕಾಲಮಿರಲವನ ದಯಕೆ ದಯವಾಗಿ ಭಾಗ್ಯವನಿತ್ತನು ೭೫

---

1 ಕಂಡು ಕಂಡು ಪುರ್ಚ ಪಸಿವಿಂದ ಬಳಲುತ್ತಧಿಕ (ಚ) 2 ಲೇಂ (ಚ) 3 ಪುರ್ಚ (ಚ) 4 ಬಾರು ಕೋಲಿಂದಂ ಜೀ (ಚ) 5 ತಂದ(ಚ) 6 ಕರ್ಮವುಮೆಂಬುರ ಪಿಂಡಿಯಾಗೆಸೆಯದೀ ಪರಿಯ ಗಾಣವಂತಿರ ದೆಯಾಡುತ್ತಿರ್ದ (ಚ) 7 ಲು (ಚ) 8 ನಂತೊಲ್ಲೆ ಗಾಣದುರೆಪಿಂ (ಚ) 9 ಮ ಬಿಗಿಯಲಪ್ಪಿನಾಂ ಭೋಜನಂ ಮಾಳ್ಪನ್ನಮಂ ಕೋಜೀಯ್ಯನೆ (ಚ)

ದಿನದಿನಕೆ ಧನಕನಕ ವಸ್ತುವಾಭರಣಂಗ
ಳನುವಿನಿಂ ಪೆರ್ಚುತಿರೆ ರಾತ್ರಿಯೊಳ್ [1]ಸ[1]ತಿಯೊಡನೆ
ಮನನಲಿವುತೆಂದನೀ ಮರುಳ ಬರೆ [2]ಮನೆಗೆ[2]ಯುರಿಪೋಗಿ ಸಿರಿಯಾಯ್ತೆನುತ್ತೆ
ಘನಹರುಷದಿಂ ಪೇಳುತಿರಲಾಗಲವನ ಕ
ಣ್ಣಿನಿಯಳಂ ಕಾಣಲಾದುದುಂ ಅವಳ ಕಣ್ಣು ತಾ
ನಿನಯನಂ ಕಾಣಬರಲಾಶ್ಚರ್ಯದಿಂ ನೋಡಲೆತ್ತಿಂಗೆ ಕಣ್ಬಂದಿರೆ ೭೬

ಈತನತಿಶಯಮಹಿಮನೆಂದಂದಿನುದಯದೊಳ
ಗೋತು ದಂಪತಿಗಳಡಿಗೆರಗಲ್ಕೆ ಪೋಗುತಿರೆ
ಭೂತನಾಥನ ಪಾದಪದ್ಮಮಂ ರುದ್ರಕನ್ನೆಯರೊತ್ತೆ ದೇವರ್ಕಳುಂ
ಸಾತಿಶಯ ಸಿದ್ಧಗಂಧರ್ವ[3]ರ್ಕಳೋ[3]ಲೈಸೆ
ನೂತನಾಭರಣಕಾಂತಿಯೊಳೆಸೆವುತಿರ್ದನುರೆ
ಖ್ಯಾತಿವೆತ್ತಿಹ ತ್ರಿಣೇತ್ರಂಗಳಿಂ ತೊಳತೊಳಗಿ ಬೆಳಗು[4]ತಿಹ ದಶನದಿಂದ[4] ೭೭

ಹೇಮಮಯಕಂಥೆಯಿಂ ಕರ್ಣಕುಂಡಲ[5]ದಿಂದ
ರಾಮಣೀಯಕ ಜಟಾಭಸ್ಮಾಕ್ಷಮಾಲೆಯಿಂ
ದಾ ಮ[5]ಹಾತ್ಮಂ ರೇವಣಾಸಿದ್ಧ ಗುರುವರಂಡೇಳ್[6]ಜ[6]ದೊಳೊಪ್ಪುತಿರಲು
ಧೀಮಂತ ದಂಪತಿಗಳತಿಭಯದಿ [7]ಸೈ[7]ಗೆಡವು
ತೀ[8]ಮಹಾತ್ಮನೆ ಭಸಿತರೂಪಿತಾಜ್ಞೆಯೊಳಿರ
ಲೀ ಮಹಿಯೊಳಾರರಿವರೈ ನಿಮ್ಮ ನಾವು ಪಾಪಿಗಳಾದೆವೆಂದಳಲಲು[8] ೭೮

ನೀವು ಪಾಪಿಗಳಾಗಲೆಂತೊಲಿವೆನೆಲೆ ಭಕ್ತ
ಭಾವಜಾಂತಕನ ಪೂಜಿಸುತ ಸುಖವಿಂಹುದೆನು
ತ್ತಾ ವಿವಿಧಭೋಗಮಂ ನವನಿಧಿಯನಿತ್ತು ಬೀಳ್ಕೊಂಡುಂ ಸುರರಂ ಕಳುಪುತೆ
ಆವೇಳೆಯೊಳ್ ದಿನಪಕಿರಣಮುದಿಸದ ಮುನ್ನ
ಲೇಪೇಳ್ವೆ ನರರರಿವರಿರಬಾರದೆಂದು [9]ಸ
ದ್ಭಾವಿತಾ[9]ರ್ಚಿತ ಪಾದಪಂಕಜಂ ಪೊರಮಟ್ಟು ಬೀದಿಯೊಳ್ ನಡೆತಂದನು ೭೯

---

1 ಮ (ಕಗ) 2 ನಮಗೆ (ಚ) 3 ರುಂಪೋ (ಚ) 4 ವತಿದಶನದಿಂದಂ (ಚ) 5 ಚೆಲ್ವ।ಪ್ರೇಮದ ಜಟಾಮಕುಟ ಭಸ್ಮಾಂಗ ಜಪಸರದಿ।ನಾಮ (ಚ) 6 ಜಗ (ಕ) 7 ಘೊಡೆ (ಚ) 8 ಮಹಿಮ ಪಾಪಿಗುರೆ ಪರುಷಸಿಲೆಯಾ...ಲಿ ಮಹಿಯೊಳಾವೆ ಪಾಪಿಗಳೆಂದು ಶೋಕಿಸಲ್ಕವರ್ಗೆಂದನತಿಮುದದೊಳು (ಚ) 9 ವಜ।ಮಾವರಾ (ಚ)

ಒಡೆಯನಹ ಶಿವಸಿದ್ಧತಿಲಕ ಬರುತಿರಲು ಮುಂ
ಗಡೆಯಲ್ಲಿ ವಾರ[1]ಸತಿಯರ ಕೇರಿಯೊಳಗೊರ್ವ
ದೃಢ[1]ಭಕ್ತೆ ನಿಡುಜಡೆಯ ಕಡುಸೊಬಗಿ ಕೆಂಬಲ್ಲ ಚೆಲ್ವೆ ಕಂಡೆಲೆ ಮರುಳನೆ
[2]ಜಡನೆ ನಮ್ಮೊಳಗಂಬಕಳಮುಂಟದಂ ಕೊಂಡು[2]
ತಡೆಯದೆನ್ನಯ ಮನೆಗೆ ಕಂಬಿಯಂ ತಹುದೆನ
ಲ್ಕೊಡಬಟ್ಟು ಮಾಯೆ ನೀ ತಾಯೆಯೆಂದಂ ಮುನಿಕದಂಬ ಹೃಚ್ಛಿವಲಿಂಗನಂ ೮೦

ಇರುತಿ[3]ರಲ್ಕಂತು[3] ರಾವಣನಳಿವ ಕಾಲದೊಳ್
ಕರೆದನುಜಗೆಂಧ [4]ನನ್ನಿಷ್ಟ[4]ಮಂ ಸಲಿಪೆನೆನೆ
ವರ ಪ್ರಾಣಮಂ ಬಿಡುವೆನೆನುತಲ್ಲದಾಗದೆಲೆ ನವಕೋಟಿಲಿಂಗಂಗಳಂ
ಚಿರಪ್ರತಿಷ್ಠೆಯ ಮಾಳ್ಪೆನೆಂ[5]ದಾರುಕೋಟಿಯಂ[5]
ಪುರದೊಳ್ ಪ್ರತಿಷ್ಠೆಯಂ ಮಾಡಿದೆಂ ಮೂರು ಕೋ
ಟಿರದುಳಿದವಂ ನಿಲಿಸಬೇಕೆನಲ್ ನಗುತ ವೈಷ್ಣವ ವಿಭೀಷಣನೆಂದನಂ ೮೧

ಎಲೆಯಣ್ಣ ಕೇಳಚ್ಯುತಪ್ರತುಮೆ ನವಕೋಟಿ
ಯೊಲವಿನಿಂ ಹದಿಟಗೈಯೆಂದೊಡಾಂ ಗೈಯ್ವೆನೀ
ಸುಲಭ ಶಿವಲಿಂಗಪ್ರತಿಷ್ಠೆಯಂ ನಾನೊಲ್ಲೆನೆನಲಧಮ ಕೇಳ್ ನರಹರಿ
ಒಲಿದಿಲ್ಲಿ ಪೂಜಿಸಿದ ಮತ್ಸ್ಯಕೇಶ್ವರನಿಹಂ
ಸಲೆ ವಾದಮಂ ಮಾಣೆನಲ್ ಬಿಟ್ಟು ಲಿಂಗಗಳ
ನೆಲೆಯಾಗಿ ಸ್ಥಾಪಿಸುವೆನೆಂದು ಭಾಷೆಯನೀಯಲಾಗ ಸ್ವರ್ಗಸ್ಥನಾದಂ ೮೨

ಅಸುರೇಶ ರಾವಣನ ಸಿಂಹಾಸನಕ್ಕೆ ತಾ
ನಸಮಪತಿಯಾಗಿ ನೆನೆದೊಂದೇ ಮುಹೂರ್ತದೊಳ್
ಋಷಿಗಳಿಂ ಲಿಂಗಂಗಳಂ ನಿಲಿಸಬೇಹುದೆಂದೆನುತ ಪೌಲಸ್ತ್ಯನಿರ್ಪ
[6]ಪೊಸತೆನಿಸುವಾಶ್ರಮಕೆ[6] ಬಂದು ತಂದೆಗೆ ನಮಿಸಿ
ಯುಸುರಲೀ ವಾರ್ತೆಯಂ ಕೇಳ್ ಮಗನೆ ವಿಷ್ಣು ಪೂ
ಜಿಸುತಿಷ್ಟಮಂ ಪಡೆದ ಮತ್ಸ್ಯಕೇಶ್ವರಲಿಂಗಮನ್ನೊಲಿಸಲಿಷ್ಟವಹುದಂ ೮೩

---

1 ನಾರಿಯರ ಕೇರಿಯೊಳೊರ್ವ । ಪ್ರೌಢ (ಚ) 2 ಜಡಧರಂಯಿತ್ತ್ರಂಬಕಳನುಂಟು ನೀ (ಚ) 3 ಲ್ಕತ್ತ (ಚ) 4 ನಂ ವಿಷ್ಣು (ಚ) 5 ದಿರ್ದೆಯರುಕೋಟಿ (ಚ) 6 ವಿಶ್ವಾವಸುವಿನಾಶ್ರಯಕೆ (ಚ)

ಎನೆ ವಿಭೀಷಣ ಮತ್ಸ್ಯಕೇಶ್ವರನ ಪೂಜಿಸು
ತ್ತನಘ ದರ್ಭಾಸನದೊಳೊರಗಿರಲ್ ಬಂದು ಶಿವ
ನನುವಿನಿಂ ಕನಸಿನೊಳ್ ನಿರವಿಸಿದ ಕಲಿಯುಗದ ಪ್ರಥಮದೊಳ್ ರೇಣುಕೇಶಂ
[1]ವಿನಯದಿಂದೀ ವಸುಂಧರೆಗೆ ಬಂದಿರುತಿರ್ಪ[1]
ಘನಮಹಿಮನಾತನಿಂದಹುದೆನಲ್ ಕಣ್ದೆರೆದು
ಮನವೊಲ್ದು ನಮಿಸಿಯಾನಂದದಿಂದಿರೆ ಪರಮನುಸುರ್ದ ದಿನವಂ ಸ್ಮರಿಸುತ್ತ ೮೪

ಮರಳಿಯಾ ಮತ್ಸ್ಯಕೇಶ್ವರಲಿಂಗಮಂ ಬಿಡದೆ
ಪರಮಭಕ್ತಿಯೊಳಂ ಪೂಜಿಸಿ ಕುರುಹ ಕೇಳೆಯು
ತ್ತರದೇಶದೊಳಗಾಗಿ ಪ್ರಚ್ಛನ್ನವೇಷದಿಂದಿಹನೆನಲ್ಕಾಜ್ಞೆಯಾಂತು
ವಿರುಪಾಕ್ಷ ಸಿದ್ಧನಾಮವ ಧರಿಸಿ ಕಾಮರೂ
ಪಿರದೆ ತಳೆವುತ ರಾವಣಾನುಜಂ ಬಹುದೇಶ
ದಿರವುಳ್ಳ ವೇಷಭಾಷೆಗಳಿಂದ ಚರಿಸುತ್ತ ನೋಡುತತಿಚಿತ್ರಂಗಳಂ ೮೫

ತಿರುಗಿದಂ ಸಿದ್ಧೇಶನಿರವ ಕಾಣದೆ ಮನಂ
ಮರುಗುತ್ತ ಬರೆ ಮುಂದೆಯಖಿಳಧಾನ್ಯದ ಬೆಳೆಯ
ಸಿರಿಯಿಂದಲುದ್ಯಾನಶಾಲೆಯಿಂ ಸುರಭಿಗಳ ಪೆರ್ಚುಗೆಯ ಪಾಲಿನಿಂದ
ಮೆರೆವ ಪೊಂಗಳಶ ಕೋಟಾಕೋಟಿ ಹರ್ಮ್ಯಂಗ
ಳಿರವಿನಿಂ ಕಣ್ಗೆ ಮಂಗಳವಾಡವೊಪ್ಪೆಯ
ಚ್ಚರಿವಟ್ಟು ತನ್ನ ಪುರಿಗಿಮ್ಮಡಿಯಿದೆಂದು ನೋಡುತ್ತ ನಿಲುತಂ ಬನದೊಳು ೮೬

ಈ ಪುರದೊಳಲ್ಲದಿಲ್ಲೆಂದು ಗುರುನಾಥನಂ
ಮಾಪತಿಯಭಜಕ ಚಿಂತಿಸುವನಿತರೊಳ್ ತನಗೆ
ಯೇಪೇಳ್ವೆನಖಿಳ ಶುಭಚಿಹ್ನಂಗಳಾಗಲಾ ಸಮಯದೊಳ್ ಸಿದ್ಧೇಶ್ವರಂ
ದೀಪಿಸುವ ಬ್ರಹ್ಮಶಕ್ತಿಯೆ ದಂಡ ಗುಣತ್ರಯಮೆ
ಲೋಪಮಿಲ್ಲದ ಪಾಶಚರಣ ಮಾಯೆಯೆ ಸಿಂಬಿ
ಯಿಾ ಪರಿಯ [2]ಕಂಬಿಯೊಳ್ ಪೊಸತಾದ ಪಿರಿದಾದ ಭಾಂಡಂಗಳೆರಡನಿಟ್ಟು[2] ೮೭

---

1 ಸನಯದಿಂ ಸುದದಿಸುವಂ ಧರೆಯ ರಕ್ಷಿಸಲೆಂದು (ಚ) 2 ಅಡೆಯೊಳ್ ಬ್ರಹ್ಮಾಂಡ ಪಿಂಡ ತುಲ್ಯದ ಭಾಂಡಗಳನಿರಿಸುತೆ (ಚ)

ಮಾ[1]ಯೆಯು[1]ಹ ವಿಶ್ವಪ್ರಪಂಚಜಲಮಂ ತುಂಬು
ತಾಯೆರಡರೊಳಗವಕೆಯಾಧಾರ ಮಾರುತಂ
ನ್ಯಾಯದಿಂದಂತರದೊಳಿರಿ[2]ಸಿತದು[2]ಭಯಕಾರಣ ಬ್ರಹ್ಮ ತಾನಾ[3]ಗಿಹ[3]
ವಾಯದಿಂ ಪೊತ್ತವೊಲ್ ಬರುತಿರಲ್ ಕಂಡು ನಿ
ರ್ಮಾಯಶಿವನುಸುರ್ದ ಮೂರುತಿಯಿದೇಯೆಂದೆನಗೆ
[4]ಯಾಯಾಸಮಿಲ್ಲ ನಾ[4] ಧನ್ಯನೆನುತವರ ಕುರುಹಂ ಕೇಳೆ ಜನರುಸುರ್ದರು ೮೮

ಸೂಳೆ ಮಾಯೆಯ ಮನೆಯ ಕಂಬಿಯಾಳೆಂದು ನರ
ರಾಳಿಯುಸುರಲ್ ಮನದೊಳಭಿಮಂದಿಸುತ್ತೆ ವಿಟ
ಜಾಳಮಂ ಪಳಿವಧಿಕ[5]ಭು[5]ಜಗನಂತವಳ ಗೃಹಕೈದೆ ಪರಿಚರಿಯರ್ಕಳ
ಮೇಳದುಪಚಾರಗಳ ಮಾಡಿಸಲ್ ಮನ್ಮಥನ
ತೂಳದಿಂದಿತ್ತು ಧನ ವಸ್ತ್ರಭೂಷಣಗಳ
[6]ನ್ನಾಳಾಪಿ[6]ಸುತ್ತಲಾ ರಾತ್ರಿಯೊಳ್ ಮಾಯೆ ನೀನೇಂ ಧನ್ಯಳೋ ಜಗದೊಳು ೮೯

ಎಂದ ಮಾತಂ ಕೇಳಿ ಪಾಪವೇ ಪುಂಜಮಾ
ಗೊಂದಿಹರೆ ಪೆಣ್ಗಳವರೊಳಗೆಣೆಸೆ ಸೂಳೆಯರ್
ಮಂದಕರ್ಮಿಗಳೆಂತು ಸುಕೃತಿಗಳುಯೆನಲು ತೋರುವೆಯೆನುತ ಕರವ ಪಿಡಿದಂ
ತಂದು ನೋಡಿದಡೆ ಬಾಗಿಲವಾಡಮನೆಯೊಳತಿ
ವೃಂದಾರಕರ್ ನಿಂದು ಸೇವಿಸಲ್ [7]ಸು[7]ರಸತಿಯ
ರಂದವಹ ಕನಕಚಾಮರವ ಢಾಳಿಸೆ ರುದ್ರಗಣರಿರಲ್ಕೊಪ್ಪಿರ್ದನು ೯೦

ಆತನುರೆನೇತ್ರತ್ರಯಂಗಳುಜ್ವಲಿಸಂತಿರೆ
ಭೀತಿಯಿಂ ಮಾಯೆ ಎಲೆ ದೇವ ನಿನ್ನಂ ಕಾಣ
ದೋತು ಕೆಲಸಂಗೊಂಡೆಯಜ್ಞಾನದಿಂದ ನಾನತಿಪಾಪಮಂ ಗಳಿಸಿದ
ಜಾತಿಹೀನಳು ಮುಂದೆ ಗತಿಗಾಣೆನಪರಾಧ
ಮೋತುದೆಂದತಿ ಶೋಕಿಸುತ್ತಡ್ಡಬಿಳ್ದಳಿಗೆ
ಪ್ರೀತಿಯಿಂದುಪದೇಶವಂ ಸಕಲಸಂಪದವನಿತ್ತಭಯವುಮಂ ಕೊಟ್ಟನು ೯೧

---

1 ಯುವ (ಚ) 2 ಸು (ಚ) 3 ದಕತದ (ಚ) 4 ಮಾಯವಿಲ್ಲನಾಂ (ಚ) 5 ಬೊ (ಚ)
6 ತಾಳೋಕಿ (ಚ) 7 ಸ (ಗ)

ಆ ಸಮಯದೊಳಗಸುರನಡ್ಡ ಬೀಳುತ್ತೆರಗಿ
ಮೋಸವಿಲ್ಲದೆ ಕೈಗಳಂ ಮುಗಿದು ನಿಲೆ ಮಂದ
ಹಾಸದಿಂದೆಲೆಲೆ ನರರಾಕೃತಿಯ ತಳೆ[1]ದು ಬಂದಿಹ ಕಜ್ಜಮಂ[1] ಪೇಳೆನೆ
ಶಾಶ್ವತನೆ ದೇವದೇವೇಶ ಸರ್ವಜ್ಞನೆಂ
ದಾ ಸಕಲ ಪೂರ್ವವೃತ್ತಾಂತವಂ ಬಿನ್ನೈಸೆ
ಲೇಸೆನುತೆ ಮಾಯೆಯಂ ಮನ್ನಿಸಿ ವಿಭೀಷಣಂ ಸಹಿತ ಲಂಕೆಗೆ [2]ಪೋ[2]ದನು ೯೨

ಅಲ್ಲಿಪ್ಪ ಮಂತ್ರ್ಯಕೇಶ್ವರಲಿಂಗದೆಡೆಗೆ ತಾ
ನುಲ್ಲಾಸದಿಂದ ಮುನಿಗಳ್ ಸಹಿತ ಗುರುರೂಪ
ಸಲ್ಲೀಲೆಯಿಂದೈದಲಾ ಲಿಂಗರೂಪದಳೆವುತ ಬರಲ್ ತನ್ನ ಮನಮಂ
ಮೆಲ್ಲನೆಸೆವುತ್ತಾಗ ಗಂಗೆ ನರ್ಮದೆ ನದಿಗ
ಳಲ್ಲೊಗೆದ ಲಿಂಗಕೋಟಿತ್ರಯಂಗಳಿಗೆ ತಾ
ನಲ್ಲಲ್ಲಿ ಪ್ರತ್ಯೇಕರೂಪಿನಿಂ ನಿಲುತ[3]ಮೊಂ[3]ದೇ ಮುಹೂರ್ತದೊಳು ಬಿಡದೆ ೯೩

[4]ನು[4]ತಿಪುರಸ್ಸರದಿಂದಗಸ್ತ್ಯ ಗೌತಮ ಗಾರ್ಗ್ಯ
[5]ಸಂತಿಪಾತ್ರ ಕಪಿಲಾದಿ ಮುನಿ[5]ಗುರುವೆ ಪರಿಪೂರ್ಣ
ನುತಜಂಗಮಾಂಗ ಪಿಂಗಳಜಟಾಜೂಟ ದಿವ್ಯಾಂಗಲಿಂಗಾನಂಮೋದ
ಪೃಥುಳಮುನಿಹೃತ್ಕಂಜಕರ್ಣಿಕಾ ಚಿಲ್ಲಿಂಗ
ಸತತ ಪಂಚಾದಿ ದೈವತರೂಪನೆಂದು ಯಮಿ
ತತಿ ವಿಭೀಷಣ ಮುಖ್ಯರೋಲೈಸಿ ನುತಿಸುತಿರೆ ಸುಪ್ರತಿಷ್ಠೆಯನೆಸಗಿದಂ ೯೪

ಆಗಲಾ ರೇವಣೇಶ್ವರಗಗ್ರಪೂಜೆಯಂ
ಬೇಗ ಮಾಡುತಲಂಘ್ರಿಜಲವನೀಂಟುತೆಯುವರು
ರೋಗಂಗಳಂ ನೀಗಿ ಕೃತಕೃತ್ಯರಾದೆವೆನುತಂ ನುಡಿಸೆ ಸಂಯಮಿಗಳಂ
ಸಾಗಿ ನಿಮ್ಮಾಶ್ರಮಂಕ್ಕನೆ ವಿಭೀಷಣನಿಂದು
[6]ಯಿ[6]ಗಖಿಳ ಪಾಪಂಗಳಳಿದು ಧನ್ಯನುಮೆನ
ಲ್ಕಾಗಮಾತೀತ ನಮಗಿಷ್ಟಮೀವುತ್ತೆ ಗಗನಾಂಗಣವನಡರ್ದು ನಡೆದಂ ೯೫

---

1 ದಿಲ್ಲಿಬಂದಕಜ್ಜಂ (ಚ) 2 ಬಂ (ಚ) 3 ಮೊಂ (ಗ) 4 ಅ (ಚ) 5 ಮತಿವಂತಕಪಿಲ ಮುನಿಗಳ್ (ಚ) 6 ಯಾ (ಕಗ)

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವರಿಷ್ಟಾರ್ಥಮಪ್ಪುದು ದ್ವಾದಶಸಂಧಿ ಸುಜ್ಞಾನಬಿಂಧಿ ೯೭

## ನಾಲ್ಕನೆಯ ಸಂಧಿ

ಸೂಚನೆ :

ಘನವಮಾರ್ಗದಿಂ ಕಕುದ್ಗಿರಿ ನಂದಿಗಿರಿಗಳಂ
ವಿನಯದಿಂ ಪೊಕ್ಕು ಹಂಪೆಯನೆಯ್ದಿ ವೀರಬಿ
ಜ್ಜಳನ ಗರ್ವವ ನಿಲಿಸಿ ಗೋರಕ್ಷನಂ ಗೆಲಿದು ಮೆರೆದ ರೇವಣ ಗುರುವರಂ

ಅನಲರವಿಶಶಿನಯನ ಪುರಹನನ ವರವನಜ
ತನುಜ ಶಿರಗಿರಿ ಭಿದುರ ಯಮನಿಯಮ ನಿರಂತನರ
ಘನಹೃದಯಹಿತ ಪಶುಪತಿ ಶರವಿತರಣ ನಿಪುಣ ವಿಮಲಪದ ಕಮಲಯುಗಳ
ವಿನಯಗುಣಗಣನಿರತವಿಜಿತ ಮನಸಿಜಚರಿತ
ಮುನಿಜನನವಿಂತಚರಣ ಮನನಪರವಂತಿ ಸದನ
ವಿನತಿಪರ ತುಹಿನಕರ ತನುತರ ಶುಭತನಂಧರ ಮನದೊಡೆಯ ಸಲಹ ಶಿವನೆ ೧

ನಿತ್ಯಕರವೀರನೇಮದೊಳಗೊಂದಾನೊಂದು
ಹೊತ್ತಿನೊಳಗಿಲ್ಲದಿರೆ ನೇತ್ರಕರವೀರಮಾ
ಡುತ್ತಮದ ಕುಸುಮಮಂ ಶಿವಲಿಂಗಕೀಯಲದರಿಂದ ಹರ ಮೆಚ್ಚಿ ಮುದದಿಂ
ದತ್ಯಧಿಕ ಪಂಚಮುಖ ದಶಪಂಚನೇತ್ರದಿಂ
ದತ್ಯಣ ವಿಚಿತ್ರತರವಹ ಪುಷ್ಪಕದೊಳಿಟ್ಟು
ಬಿತ್ತರದ ಕೈಲಾಸಕೊಯ್ಯೆ ಸಭೆಯೊಳ್ ಮೆರೆವ ಮಲ್ಲಿನಾಥಂಗೆರಗುವೆಂ ೨

ಆಕಾಶಪಥದೊಳೆಯ್ದುತ ಬರೆ ಕಕುದ್ಗಿರಿಯ
ನೇಕಶೃಂಗಂಗಳಿಂ ತೋರಲ್ ಕಣಾದಂಗೆ
ಸಾಕಾರವಾಗೊಲಿದ ಸ್ಥಲಮೆನುತ್ತೀಶಂ ವಿಭಾಂಡಕಜ ಮೊದಲಾಗಿಹ
ಬೇಕಾದ ಮುನಿಗಳ ಕದಂಬ ತಾನಿದಿರ್ವಂದು
ಜೋಕೆಯಿಂದಡಿಗೆರಗಿಯುಪಚರಿಸಿ ಎಲೆಗುರುವೆ
ಯಿಾಕಕುದ್ಗಿರಿಯ ಮಹಿಮೆಯನೊರೆವುದೆನಲು ವೈಭಾಂಡಕನೆ ಕೇಳೆಂದನು ೩

ಆದಿಯೊಳ್ ಬ್ರಹ್ಮಋಷಿ ಮಾಸವೊಂದಕ್ಕೆ ತಾಂ
ಪೋದದೆ ಕರಿಂಕೆಯಂ ಪುಲ್ಲಗ್ರಜನ್ಮನಾ
ಸ್ವಾದಿಸುತ ಸಂತೃಪ್ತಿಯಿಂ ಶಿವನ ಪದಧ್ಯಾನದೊಳ್ ಮನಂ ನಿಂದು ವುಗ್ರ

ಮಾದ ಪಂಚಾಗ್ನಿಯೊಳ್ ತಪವೆಸಗೆ ಬಹುದಿನಗ
ಳಾದವೀ ನಗದಗ್ರದೊಳಗಾಗ ತಾಂ ಮೆಚ್ಚಿ
ಮಾದೇವ ಗಂಗಾಧರಂ ಗಂಗೆಯಂ ಬರಿಸಿ ತಳಿದನಾ ಮುನಿಯ ಮೇಲೆ ೪

ಎಲೆ ಮುನಿಯೆ ನಿನ್ನಿಂ ಪ್ರಸಿದ್ಧಮಾಯ್ತಾ ಕ್ಷೇತ್ರ
ಮೊಲವಿನಿಂದಿದು ಕಣಾದಕ್ಷೇತ್ರವೆನಲಲ್ಲಿ
ಸಲೆ ನಿನ್ನ ಪೆಸರಿನಿಂ ರಾಜಿಸಲಿ ತೀರ್ಥಮಿಾ ನಗ ಜಲಪ್ರಳಯದೊಳಗೆ
ಯಳಿಯದತಿಶಯದಖಿಳ ತೀರ್ಥಂಗಳಿಂ ಸಮು
ಜ್ವಲಿಸುತ್ತ ಧರೆಗಿದೆ ಮಹಾಕ್ಷೇತ್ರಮೆಂದು ಸಸಿ
ದಲೆಯ ಮುನಿಗಿತ್ತ ವರಮಂ ಋಷ್ಯಶೃಂಗನೆಂದಾ ರೇವಣೇಶ ಪೇಳ್ದಂ ೫

ಪರಮ ಜ್ಞಾನಾಮೃತಾಂಬುಧಿಯೊಳಾಳ್ದು ಮಹಾ
ಮರಣ ಜರೆಗಳನಳಿದು ನಿತ್ಯನಾದೆನು ವಿಬುಧ
ರರೆಯನೆಂದತಿಶಯಂದಿ ಶುಶ್ರೂಷೆ ಮಾಡುತಿರಲಾ ಮುನಿಕದಂಬದೊಡನೆ
ನಿರವಿಸಿದನಾ ಪೋಗಿ ಬಂದಪೆಂ ನೀವಿಲ್ಲಿ
ಸ್ಥಿರಚಿತ್ತದಿಂದ ತಪಮೆಸಗೆಂದು ಬೀಳ್ಕೊಂಡ
ಡರಿಯಾಗಸದವಟ್ಟೆಯಿಂದೆಯ್ದಿ ಕಂಡ ಕೂಷ್ಮಾಂಡನಗ ಶಿವನಿಳಯಮಂ ೬

ಜಡಿವ ಫಲಪುಷ್ಪಗಳ ರಾಶಿಯಿಂ ಪಾಳಿಯಿಂ
ದೆಡವಿಡದೆ ಸ್ವರಗೆಯ್ವ ಪಿಕಗಳಿಂ ಶುಕಗಳಿಂ
ದಡರಿರ್ಪ ಬಹುವಿಧದ ಕುಡಿಗಳಿಂ ಪಿಡಿಗಳಿಂಗೊಡನಾಡುತಿರುವಾನೆಯ
ಸಡಗರದಿ ತೋರ್ಪತುಳ ನಗಗಳಿಂ ಮೃಗಗಳಿಂ
ಬೆಡಗಿನಿಂದೆಸೆವಖಿಳ ಜರಿಗಳಿಂ ಕಿರಿಗಳಿಂ
ಕಡುಸೊಗಸಂತಿಹ ನಂದಿಗಿರಿಯಂ ನಿರೀಕ್ಷಿಸುತ್ತಾನಂದಮಂ ತಾಳ್ದನು ೭

ಸರಸಗಾಯಕರು ತುಂಬುರನಾರದರ್ಕಳಾ
ಗಿರೆ ನಂದಿ ಭೃಂಗಿ ಮದ್ದಳೆ ತಾಳಧಾರಿಗಳ್
ಸುರಕನ್ನೆಯರ್ ಕನಕಲತೆಯಂತೆ ನರ್ತಿಸುವ ಪಾತ್ರನಾಯಕಿಯರಾಗೆ
ಚಿರಪಾಠಕರ್ ಮನುಮುನೀಶ್ವರರು ದಿಗ್ರಮಣ
ರಿರದೆ ಸೇವಕರಾಗೆ ಪ್ರಮಥಗಣಸೇನೆಯಾ
ಗಿರದೆ ಹರಕೂಷ್ಮಾಂಡಗೊಲಿದೆಯ್ದಿ ನಿಂದ ನೆಲೆಯಂ ಕಂಡು ಸುಖದೊಳಾಳ್ದಂ ೮

ಸ್ನಾನದರ್ಶನ ಸಂಗವಣಾವಗಾಹನ ಸಲಿಲ
ಪಾನವಂ ಮಾಡಿದೊಡೆ ಭವಭವಂಗಳೊಳಾದ
ಹೀನಕರ್ಮವ ಕೆಡಿಸಿ ಭೋಗಮೋಕ್ಷವನೀವ ಕ್ಷೀರನದಿಯಕ್ಕಾವತಿ
ಪೈನಾಕಿನಿಯು ಸಿರೆಯು ಬೃಹಿತಿಯೆಂದೆನಿಸುವಭಿ
ಧಾನದಿಂದ್ಯೆದುಗಿರಿಗಳ ಮೂಲದೊಳಗುದಿಸಿ
ಯಾ ನಗದ ನಾಲ್ದೆಸೆಯೊಳೆಯ್ದಿ ಶರಧಿಯ ಬೆರೆದವೇವೇಳ್ವೆನಿದರ ಘನವಮಂ ೯

ನಂದಿಗುಹ ವಿಧಿ ವಿಷ್ಣು ದಿವ್ಯಗಿರಿಗಳ ನೋಡೆ
ಸಂದಣಿಸಿಕೊಂಡಿರ್ಪ ಸ್ವರ್ಗಾಪವರ್ಗಗಳ
ಹೊಂದಿದ ಸುಖಂಗಳೆಂ ಸಕಲಸಿದ್ಧಿಯನೀವ ಮಹಿಮೆಯುಂಟವಕೆ ಮತ್ತೆ
ನಂದಿ ಭೃಂಗಿ ಗುಹ್ಯಕದಂತ ಹರ್ಯಜ ಸುರಪ
ಬೃಂದಾರಕರ್ ತಪವಮಾಡಿಷ್ಟಫಲಗಳಂ
ಹೊಂದಿದರೆನುತ್ತಖಿಳ ಜಗದೊಡೆಯ ಶಿವಸಿದ್ಧ ನಿಟ್ಟಿಸಿದನಳ್ತಿಯಿಂದೆ ೧೦

ಆ ರೇವಣೇಶನಂ ಕಂಡಮಿತ ಮುನಿಗಣಂ
ಸಾರ ಭಕ್ತಿಯೊಳೆರಗಿ ನಮಿತ ಜನಮಂದಾರ
ತಾರಾಗವಾಸ ದುರ್ದೋಷನಾಶನಗುರುವೆ ಕೂಷ್ಮಾಂಡಗೊಲಿದ ಲಿಂಗ
ಚಾರು ನಂದೀಶ್ವರನೆನಿಪ್ಪ ನಾಮವನೆಂತು
ಸಾರಿರ್ದನದನೆಮಗೆ ಬೋಧಿಸುವುದೆಂದು ಋಷಿ
ವಾರ ಬದ್ಧಾಂಜಲಿಗಳಿಂದಿರಲ್ಕಿತಿಹಾಸವುಸುರ್ದನಾ ಗುರುಪುಂಗವಂ ೧೧

ಕೇಳಿರೈ ಯಮಿಗಳಿರ ಶೈಲಾದಿ ಮುನ್ನ ಶಶಿ
ಮೌಳಿಯಿಂ ಸಾರೂಪ್ಯಪದವ ಪಡೆವುತಲಧಿಕ
ಕೈಲಾಸದೋಲಗದೊಳಿರೆ ಶಿವಂ ನಿರವಿಸಲ್ ಕರೆಯಬರುತಿರೆ ಸೌಂದರಂ
ಆಲೋಕಿಸುತ್ತಭವನೆಂದರಿದು ಸಖಿಯರ ಸ
ಮೇಳದೊಳಿದಿರ್ದರಲ್ ಪದಕೆರಗಿ ಹರನೆಡೆಗೆ
ಕಾಳಿಯಂ ಕಳುಹಿ ದೋಷಂ ಬಂದುದೆನಗೆಂದು ಸುಯ್ದು ಕಟಕಟಯೆನುತ್ತೆ ೧೨

ಇದಕೆ ಪ್ರಾಯಶ್ಚಿತ್ತ[1]ವಾ[1]ವುದೆಂದತಿ ಪ್ರಳಾ
ಪದಿ ಬಳಲ್ವ ಮನವರಿದು ಕೂಷ್ಮಾಂಡಗಣನುಸುರ್ದ
ನಧಿಕ ಭೂವಳೆಯದೊಳ್ ಕೂಷ್ಮಾಂಡಗಿರಿಯುಂಟದೇ ಮಹಾಘನತರವಲ

ಸದಮಳಾಂಗನೆ ಪೋಗುತಲ್ಲೆಸಗುಂ ತಪವೆನಲ್
ವಿದಿತಮಾಗೊಡರ್ಚಲಾ ತಪಕೊಲಿದು ಶಿವಲಿಂಗ
ಮುದರದಲ್ಲಡಗಿಸುತೆ ಸಾಯುಜ್ಯಮಾಯಲ್ಕೆ ನಂದೀಶನೆನಿಸಿ ಮೆರೆದಂ ೧೩

ಇಂತೆಂದು ನಿರವಿಸಲ್ ಮುನಿಜನಂ ನಲಿವುತ
ತ್ಯಂತಭಕ್ತಿಯೊಳೆರಗಿ ಶುಶ್ರೂಷೆಯೆಸಗುತಿರ
ಲಂತವರ ಪ್ರೀತಿಗೋಸುಗ ಕೆಲವುದಿನಮಿರ್ದಂ ಪೋಗಿ ಬಹೆವೆನಂತವರ್ಗಳಂ
ಸಂತಸಂಬಡಿಸಿಯಲರ್ವಟ್ಟೆಮಾರ್ಗದೊಳೆಯ್ದಿ
ಕಂತುಹರ ಲೀಲಾಸ್ಥಲಮೆನಿಪ್ಪ ಹಂಪೆಯ ಸ
ಮಂತು ಕಾಣುತ್ತ ದ್ವಾಪರದೊಡೆಯನಹ ವಿರೂಪಾಕ್ಷನಾಲಯಮನ್ಮೈದಿದಂ ೧೪

ಆದರೊಳಿಹ ಕಿಷ್ಕಿಂಧಮಂ ಋಷ್ಯಮೂಕಮಂ
ಚೆದರದಿಹ ಜಾಲಾಂಧರಾದ್ರಿಯಂ ಹೇಮಕೂ
ಟದ ಗಿರಿಯನುಂ ಮತಂಗಾದ್ರಿಯಂ ನೋಡಿಯಲ್ಲಿಯ ವೀರಭದ್ರೇಶನಂ
ಮುಂದದಿಯಲ್ಲಲ್ಲಿ ನೆಲಸಿದ ದಿವ್ಯಕಮಲಯುತ
ಸದಮಳಸುತೀರ್ಥಜಲಸಂಕುಳದ ಕೊಳಗಳಿಂ
ಪದುಳದಿಂ ನೋಡುತತಿಶಯದ ಸಹ್ಯಾದ್ರಿ ನಿರುತಿಯ ದೆಶೆಯೊಳೊಪ್ಪುತಿರಲಂ ೧೫

ಆ ಪರ್ವತದ ನಡುವೆ ಸಿತವರಾಹಸ್ಥಾನ
ದೀಪಿಸುತ್ತಿರಲು ಗಿರ್ಯಗ್ರದಿಂದಿಳಿದ ಜಲ
ಭೂಪವಿತ್ರಾರ್ಥ ಪ್ರವಾಹ ತಾನೊಂದೇ ನದೀತ್ರಯಗಳಾದವಲ್ಲಿ
ವಿಪೇಳ್ವೆ ಪಶ್ಚಿಮಕೆ ನೇತ್ರಾವಲಿಯಂ ಪೋಗ
ಲಾ ಪಯಸ್ವಿನಿಯುಭಯತಟಗಳಲನೇಕಲಿಂ
ಗೋಪಲಿಂಗಗಳ ದಿವ್ಯಕ್ಷೇತ್ರಗಳ್ ಮೆರೆವುದೊಡನೆ ಪೂರ್ವಾಭಿಮುಖದಿ ೧೬

ಪರಿಯುತತಿವೇಗದಿಂ ತುಂಗಭದ್ರಾನದಿಯು
ಯೆರಡುದಿಕ್ಕಿನೊಳರ್ಧಯೋಜನದ ಪರಿಯೆಂತ
ಮರಿದೆನಿಪ ಪರ್ಣಶಾಲೆಗಳಲ್ಲಿ ಗುಹೆ ಗಂಹರಂಗಳೊಳ್ ಕೋಟರದೊಳು
ಪರಿದಂ ಪರ್ಬಿದ ಮೆಳೆಯ ಪೊದರೊಳ್ ಮಹಾವೃಕ್ಷ
ದುರೆ ನೆಳಲ ತಂಪಿನೊಳ್ ಜಪತಪಸ್ಥಾನಂಗ
ಳಿರದೊಡರ್ಚುವ ವಶಿಷ್ಠಾತ್ರಿ ಕಪಿಲಾದಿ ಮುನಿಮುಖ್ಯರೊಪ್ಪಿರ್ದರಲ್ಲಿ ೧೭

ನಿಗಮಾಗಮಾತೀತ ನೀಲಕಂಧರನಿತ್ಯ
ನಗಜಾಧಿಪತಿ ತಾಂ ವಿರೂಪಾಕ್ಷನಾಮದಿಂ
ದೊಗೆಯಲಾ ಸ್ವಾಯಂಭುವವ ಕುರಿತು ಗೌರಿ ಪಂಪಾದೇವಿ ನಾಮದಿಂದೆ
ಯಗಲದಿರೆ ನಂದಿವೀರೇಶ ಭೈರವಗಣಪ
ರಗಣಿತದ ದೇವಗಣ ಯಕ್ಷಗಣ ಸಿದ್ಧಗಣ
ಜಗದೀಶ್ವರನ ಸೇವಿಸುತ್ತಿರಲ್ ನಾಲ್ಕುದಿಕ್ಕಿನಲಿ ಲಿಂಗಾಕಾರಮಂ ೧೮

ತಳೆದತುಳ ಕಿನ್ನರೇಶಂ ಪೂರ್ವದ್ವಾರಮಂ
ನಳಿಕಾಕ್ಷ ಜಂಬುಕೇಶ್ವರ ಪಶ್ಚಿಮದ್ವಾರ
ಮುಳಿಯಂದೇ ಸೋಮೇಶ್ವರಂ ದಕ್ಷಿಣದ್ವಾರಮಂ ವಾಣಿಭದ್ರೇಶ್ವರಂ
ಘಳಿಲನುತ್ತರದೆಶೆಯ ಬಾಗಿಲಂ ಕಾಯ್ದುವರ್
ಬಳವಂತರಾಗಿ ಬಹುಪೂಜೆಗಳ ಕೈಕೊಳ್ಳು
ತೊಳಗೊರ್ವರಂ ಶರ್ವನಾಜ್ಞೆಯಿಲ್ಲದೆ ಬಿಡದೆ ದ್ವಾರಗಳ ಕಾಯ್ದಿರ್ಪರು ೧೯

ನಡೆದುನೋಡುತ ಬರಲ್ ಮಣಿವಾಡ ಕರುಂವಾಡ
ಗಡಣ ಸಾಸಿರಮೆಸೆವ ಹಂಪೆಯಂ ಪೊಕ್ಕಾಗ
ಮೃಡವಿರೂಪಾಕ್ಷಲಿಂಗದ ಕೂಡೆ ಸುಖಸಂಕಥಾಪ್ರಸಂಗವನಾಡುತೆ
ತಡೆಯದಲ್ಲಿಂದ ಮಂಗಳವಾಡಕ್ಕೈದಿ ನೆಲ
ದೊಡೆಯನಹ ವೀರಬಿಜ್ಜಳನಂ ಎಪ್ಪತ್ತೆರಳ್
ಸಡಗರದ ವಿನಿಯೋಗದೋಲಗದೊಳಿರಲಲ್ಲಿ ಪೋಗಿ ಭಿಕ್ಷಾಯೆನಲ್ಕೆ ೨೦

ಕೇಳಿಯಾಸ್ಥಾನಜನರಕ್ಕಜಂಬಟ್ಟಾಗ
ಪೇಳಿದರ್ ರಾಯ[1]ನೊ[1]ಡನೀ ಯತಿಗೆ ಭಿಕ್ಷೆಯಂ
ಮೇಳದಿಂ ನೀಡಿಸಲ್ ಬೇಹುದಲ್ಲದೊಡೆ ಭಿಕ್ಷಾಯೆಂಬ ನುಡಿಯ ಕೇಳ್ದು
ಕೇಳದಂತಿರೆ ಬೊಮ್ಮರಕ್ಕಸನಹನುಯೆನಲ್
ಮೇಲಂಕ್ಕಿ ಕುದಿವ ಪರಮಾನ್ನಮಂ ನೀಡಿಸಲ್
[2]ಭಾಳಾ[2]ಕ್ಷ ಕರಪಾತ್ರೆಯಿಂ ಕೊಂಡು ಸೇವಿಸುತ್ತಾ [3]ಪಾ[3]ಣಿಯಂ ಬಿನದದಿಂ ೨೧

ಮಣಿಖಚಿತದಿಂ ಚಿತ್ರಮಹ ಹಜಾರದ ಮುಂದೆ
ಯೆಣಿಕೆಯಿಲ್ಲದ ಪೊನ್ನಗಂಬಕ್ಕೆ ಕೈಯೊರಸೆ
ತ್ರಿಣಯನನ ಕಣ್ಣಿನೊಳ್ ಭುಗಿಲೆನುತ್ತಾರ್ದಗ್ನಿಪತ್ತಿ ಚಾವಡಿಯರಮನೆ

1 ಕೊ (ಕ) 2 ಫಾಲಾ (ಗ) 3 ವಾ (ಗ)

ಗಣನೆಯಿಲ್ಲದ ವಾಜಿಶಾಲೆ ಕರಿಗಳ ಬೀಡು
ಛಿಣಿಛಿಟಿಲ್ ರವದಿಯುರಿವುತ್ತಿರಲ್ ನಡನಡುಗಿ
ಭಣಿತೆಯಿಂ ರಾಜಬದ್ಧಾಂಜಲಿಯ ಪಡೆದೈದಿ ಸೈಗೆಡೆದನಾ ಭುವಿಯೊಳು ೨೨

ಅಂಜಬೇಡಭಯವಿದೆ ಅರಸಯೇಳೇಳೆನುತೆ
ಕಂಜಾರಿಧರನತುಳಮೂರ್ತಿ ಕರೆಯಲ್ಕಾಗ
ಸಂಜೀವನವನಿತ್ತ ವಾಳ್ಕೆಯಿಂದೆಳ್ದು ಮನ್ನಾಥ ಮಾಂ ತ್ರಾಹಿ ದೇವ
ನಂಜುಗೊರಲನೆಯಾನಧಮರೊಳಗಧಮನು ಭವ
ಭಂಜನನೆ ಮನ್ನಿಸುತ್ತಾಗ ಪೊಳಲ ಮೇಲೆಯುಂ
ಮಂಜುಳ ಕೃಪಾಮೃತದ ಸೋನೆಗರೆಯುನೆ ಸರ್ವರೆಳ್ದು ತಣ್ಪಿನೊಳಾಳ್ದರು ೨೩

ಹರಹರಾ ಎನುತಖಿಳರಕ್ಕಸಂಬಡುತಿರಲ್
ಹರಭಕ್ತವಾರ್ಧಿ ವ[1]ರ್ಧಿ[1]ಸುತಿರಲ್ಕಾಗಮಿತ
ಪರಸಮಯ ಜಯಜಯ ಎನುತ್ತಿರಲ್ ಪಟ್ಟಣವ ಸಿಂಗರಂಗೈಸಿ ರಾಜಂ
ವರ ರೇವಣಾಸಿದ್ಧಮೂರ್ತಿಯಂ ಪರಿಪರಿಯ
ಪರಿಚರಿಯದಿಂ ತಣಿಸಿಯಡ್ಡಬೀಳುತೆ ದೇವ
ಭರದೆಯುಪಹಾರಮಂ ಕೈಕೊಳಲ್ ಬೇಹುದೆನಲಾಗರಸ ನೀಂ ಲಾಲಿಸೈ ೨೪

ನೀನೆಸಗಿದಪರಾಧಕಾನೊರ್ವ[2]ನಂಣ್ಣಲದ
ಕೀ ನ[2]ರರಂ ನಗರೆ ನೃಪ ನಿನ್ನ ಪಟ್ಟಣದೇಶ
ದಾ ನವ್ಯಜನರಳ್ತಿಯಿಂ ತೃಪ್ತರಾದಲ್ಲದಾಂ ಸಲಿಸೆನೆನಲಂ ರಾಜಂ
ಭಾನುಕೋಟಿಪ್ರಕಾಶನೆ ನಾನು ಕಿಂಚಿಜ್ಞ
ದೀನ ನಾನೇಂ ಬಲ್ಲೆ ನೀ ಬಯಲ [3]ತಣಿತ[3]ನೆಂ
ದಾ ನರೇಂದ್ರಂ ನುತಿಸಲೈದು ಪಡಿಯಕ್ಕಿಯಂ ಘೃತಮೈದು ಸೊಲ್ಲಗೆಯನು ೨೫

ತರಿಸಿ ಪಾಕಂಗೈಸಿ ಪರಸಾಕ್ಷಿಯಿಂ ನೋಡೆ
ಪರಿಪರಿಯ ರಸರಸಾಯನ ಶಾಕಪಾಕದಿಂ
ಪರಮಾನ್ನಮಂ ಪಂಚಭಕ್ಷ ಸೂಪಂಗಳಂ ದಧ್ಯನ್ನ ದುಗ್ಧಾನ್ನಮಂ
ಪರಮ ದೇವಾನ್ನ ದಿವ್ಯಾನ್ನ ಮುದ್ಗಾನ್ನಮಂ
ಹರನಿಗತಿಪ್ರೀತಿಯಾಗಿರುವ ಪಂಚಾಮೃತದ
ತರತರದ ರಾಶಿಗಳ್ ಧರೆಗಗನದೊಳ್ ತೀವೆ ಜನರದ್ಭುತಂಬಡೆದರು ೨೬

---

1 ರ್ಣ (ಕಗ) 2 ನುಂ ಪೊಲದ।ಕಿನ್ನ (ಕ) 3 ಕಣಿವ (ಕ)

ನೋಡಿದೈ ನೃಪಯೆನಲ್ ಕಂಡು ವಂದಿಸಿ ನಿಲಲ್
ಕೂಡೆ ಡಂಗುರವೊಯ್ಸು ಪಟ್ಟಣವನೆಲ್ಲ ನೀಂ
ಗಾಢ ಕರಸಲ್ಬೇಕು ದೇಶಸ್ಥರೆನಲರಸ ವೇತ್ರಧಾರರ [1]ವೃಂ[1]ದಮಂ
ರೂಢಿಯಿಂ ಕಳಂಹಿ ನಿಮಿಷಕ್ಕೆ ಬರಿಸಲ್ಕೆ ಜನ
ದಾಡಂಬರಂ ನೋಡ ಭೂಮಿ ಬೆಸಲಾದುದೆನ
ಲೋಡೋಡಿ ಮಿಗೆ ನೆರೆದು ಬಂದರಾನಂದದಿಂದೇನೆಂಬೆ ಸಂಭ್ರಮವನಂ ೨೭

ತರತರದಿ ಬಹ ರಾಜಪೌಜುಗಳ ವಾಜಿಗಳ
ಮೆರೆವ ಮನ್ನೆಯರಖಿಳಮಂತ್ರಿಗಳ ತಂತ್ರಿಗಳ
ನಿರದೈದುತಿಹ ಸಕಲದೇಶಸ್ಥ ಭಾಷಜ್ಞರಾದ ನಾನಾ ಮನುಜರ
ಭರದಿಂದ ನಡೆತಪ್ಪ ಯೋಗಿಗಳ ಭೋಗಿಗಳ
ಸರಸದಿಂ ಬರ್ಪಧಿಕ ಕನ್ನೆಯರ ಚೆನ್ನೆಯರ
ಮೆರೆವ ವಾದ್ಯದಿ ಗಮಿಪ ಗುರುಗಳಂ ಹಿರಿಯರಂ ನೋಡಿ ಗುರುರಾಜ ನಲಿದಂ ೨೮

ಬಂದ ಬಂದವರೆಲ್ಲ ವಂದಿಸುತೆ ನಂದಿಸುತೆ
ತಂದಂ ತಂದಾರತಿಯನೆತ್ತುತಂ ಸುತ್ತುತಂ
ಚೆಂದಚಂದದಿ ನೋಡಿಯಾಡುತಂ ಪಾಡುತಂ ಬೇಡುತಂ ಮನದಿಷ್ಟವಂ
ಮುಂದವಾದ್ಯದ ಗತಿಗೆ ಕುಣಿವುತಂ ದಣಿವುತಂ
ಸಂದಣಿಸಿ ಮೈಯುರ್ಬಿ ಹೆಚ್ಚುತಂ ಮೆಚ್ಚುತಂ
ಛಂದವಾದುದು ರೇವಣೇಶನುರು ಪರ್ವವೆಂದಾಲುತಂ ವೋಲಾಡುತಂ ೨೯

ಇಂತು ರೇವಣಸಿದ್ಧ ಶಿವಯೋಗಿ ಬಹ ಜನದ
ನಂತವಾರಾಶಿಯಂ ನೋಡಿ ಹೆಕ್ಕಳಗೊಳು
ತ್ತಂತವರ ಮನದಿಷ್ಟದ್ರವ್ಯಗಳ ನೀಡಿಸಲ್ಕವರವರ ಜಾತಿಯಿಂದ
ಸಂತಸಂಬಡುತಖಿಳಜನರು ಜಯಜಯಯೆನ
ಲ್ಕಂತರಸು ನವರತ್ನಪೀಠದೊಳ್ ಕುಳ್ಳಿರಿಸಿ
ಮುಂತು ಪಾದಾರ್ಚನೆಯ ಮಾಡಿ ಗಂಧಾಕ್ಷತೆ ಸುಪುಷ್ಪದಿಂ ಪೂಜಿಸುತವೆ ೩೦

ನಾನು ಕೃತಕೃತ್ಯನಾದೆನು ಸಕಲಜಂತುಗಳ್
ಹೀನದೇಹವ ತಳೆದು ನಿಮ್ಮ ಕಾಣದೆ ಬಳಲ್ದ
ರೇನೆಂಬೆನೆನ್ನ ಪುಣ್ಯದ ಫಲವನೆಂದಾ ನೃಪಂ ನುತಿಸೆ ಪಲವಂದದಿಂ

---

1 ಬೃಂ (ಕ)

ಸಾನುರಾಗದೊಳವಂಗಿಪ್ಪವೀವುತೆ ರತ್ನ
ದಾ ನವ್ಯಪಾವುಗೆಯು ಪೊಳೆಯೆ ಕೆಂಜೆಡೆ ನಲಿಯೆ
ಭಾನುಕೋಟಿಪ್ರಕಾಶಾಂಗನಡದಾಕಾಶವಟ್ಟೆಯೊಳ್ ಥಳಥಳಿಸುತೆ ೩೧

ನಿರುರುತಿಯ ದೆಸೆಯೊಳೆಯ್ದುತ್ತಬರೆ ಕಂಡನಾ
ವರರೇವಣಾಸಿದ್ಧಮೂರ್ತಿ ಕೊಲ್ಲಾಪುರವು
ನುಸೆಯಲರ್ವಟ್ಟೆಯೊಳ್ ನಿಂದು ನೋಡಲ್ ಕಣ್ಗೆಯದ್ಭುತಂ ತೋರಿತರರೆ
ಭರದಿಂದಲನ್ಯಸಿದ್ಧರ್ ಬರಲ್ಕಾ ಪುರದ
ಪೊರವಳಯದಲ್ಲಿರ್ಪ ಸರಸಿ ಕೂಪ ತಟಾಕ
ದೊರತೆನೀರೆಲ್ಲ ರಕ್ತಂ ಪಂಕಮುಂ ನೋಡೆ ಪಲಲತತಿಯಂತೆಸೆದುದಂ ೩೨

ಸತತಮಲ್ಲಿರ್ಪ ಕೈರವ ಕಮಲನಿಚಯಗಳ್
ವಿತತಭೀಕರವಾದ ರುಂಡದೊಲ್ ಕಾಣಿಸುಗು
ಶತಪತ್ರನಾಳಗಳ್ ಕರುಳಮಾಲೆಗಳ ಪಾಗಿಂ ಭಯಂಕರಮೆಸಗುಗುಂ
ಮಿತವಿಲ್ಲದಿಹ ಮೃಗಖಗಂಗಳೇ ಪೈಶಾಚ
ಪ್ರತತಿಯೊಲ್ ಹಿಂದುಮುಂದೆಲ್ಲ ಪೀಡಿಕು ಬಂದು
ಗತಿವಿಡಿದಂ ತೃಣಗುಲ್ಮವೃಕ್ಷಶಿಲೆಗಳ್ ಚೇತನಂದಾಳಿಯೋಡಾಡುಗುಂ ೩೩

ಆ ಪುರದ ಧರೆಯಲ್ಲಿ ಮಸಣವಟ್ಟೆಗೆಯಂತೆ
ಯೇಪೇಳ್ವೆನಸ್ಥಿತತಿಯೋಡಿನೊಡ್ಡವಣೆ ಪೂ
ಳ್ದಾ ಪೆಣನ ಕೀಳ್ವ ಬಲುಜಾಯಿಲಂಗಳನೂಳಿನಾ ರವವದೆಣ್ದೆಸೆಯೊಳು
ವ್ಯಾಪಿಸಲ್ ಶೂಲಾಗ್ರದೊಳಗಿರ್ಪ ಕುಣಪಗಳ್
ತಾಪಮಿಲ್ಲದೆಯಾಲುತಕ್ಕುಳಿಸಿ ಪಲ್ಗಿರಿಯೆ
ಭಾಪುರೇ ಬಂದಲ್ಲಿ ಗೆಲಲರಿಯದಖಿಳಸಿದ್ಧರ್ ಮಡಿದರೇನೆಂಬೆನು ೩೪

ಅತಿವೇಗದಿಂ ಸಿಂಹ ಶಾರ್ದೂಲ ಭಲ್ಲೂಕ
ತತಿ ಖಡ್ಗ ವೃಕ ಸೈರಿಭಂಗಳಂ ಪಿಡಿತಂದು
ಮಿತಿಯಿಲ್ಲದಾಟವನ್ನಾಡಿಸು[1]ತ್ತಾತ್ಮ[1]ಬಾಲಕರಾಟಕವನೀವುತ
ಸತತ ಸಿದ್ಧರ್ ನಟಿಸುತಿರೆಯಂವರ ಸತಿಯರಾ
ಪ್ರತಿಯಿಲ್ಲದಾ ಮೃಗಿಗಳಂ ಕಟ್ಟಿ ಕರೆದಧಿಕ
ಕ್ಷಿತಿಯ ಜನರಿಂಗೆ ಪಾಲ್ಗಿಣ್ಣುಬೆಣ್ಣೆಯನೀವುತಿದ್ದರದನೇವೇಳ್ವೆನು ೩೫

---

1 ತ್ರತ್ರತ್ರ (ಗ)

ಇಂತಖಿಳ ವಿಸ್ಮಯಂಗಂಡು ಶಿವಸಿದ್ಧಯತಿ
ಯಂತರಿಕ್ಷವನು ಕಳಿದಾ ಸಿದ್ಧರಿರ್ಪ ಭವ
ನಾಂತರದ ಕೇರಿಯಂ ಪೊಗುತಾಗ ಕೌಳ ಯಾಮಳತಂತ್ರದಲಿ ವಾಮವೆ
ಮುಂತಾದ ಕಾಪಟ್ಯಶಾಸ್ತ್ರ ವಿದ್ಯಾಸಿದ್ಧ
ರಂ ತ[1]ವೆ[1]ಯದೀಕ್ಷಿಸುತೆ ಗರ್ಜಿಸುತ್ತಾಲುತ್ತೆ
ಯಂತಧಿಕ ಹಾಸ್ಯದಿಂದೇಡಿಸುತೆ ನಿಂದಿಸುತೆ ಖಂಡಿಸುತೆ ಕಳಲಿಸುತೆ ೩೬

ಎಲೆ ಕುಟಿಲಸಿದ್ಧರುಗಳಿರ ನಿಮ್ಮ ಕುಲವೆಲ್ಲ
ಜಲಜಸಖಿಸಂಭವನ ಬಾಧೆಗೊಳಗೈ ನೀವು
ಸಲೆ ಮುದಿಯ ಗೂಕಸಿದ್ಧಿಯಂ ಪಡೆವಿರಲ್ಲದೇ ಘನಮೋಕ್ಷಸಿದ್ಧಿಯುಂಟೆ
ಬಲವಂತ ನವನಾಥಸಿದ್ಧರೇನಾದರೈ
ನೆಲೆಯ ಬಲ್ಲರೆ ನೀಚರೆನಲವರ್ ಕೋಪವಿ
ಹ್ವಲರಾ[2]ಗಿ[2] ಮಾರಣವ ಮೋಹನವನುಚ್ಚಾಟನವನು ದೇವಸ್ತಂಭಮಂ ೩೭

ಅಧಿಕಜಿಹ್ವಾಸ್ತಂಭಮಂ ಗತಿಸ್ತಂಭಮಂ
ವಿದಿತ ನಯನಸ್ತಂಭಮಂ ಕರಸ್ತಂಭಮಂ
ಮುದದಿ ಮಾನಸ್ತಂಭಮಂತ್ರಗಳ ಜಪಿಸುತ್ತೆ ಭೂತವೇತಾಳಗಳನು
ಒದರುವ ಪಿಶಾಚಂಗಳಂ ಬಿಡಲ್ಕವು ಮರಳಿ
ಸದೆಬಡಿದು ಭಂಗಿಸಲ್ಕವರನವರೊಳ್ ಕೆಲರು
ಬೆದರಿ ಕಡುಮೂರ್ಛೆಯೊಂದಲ್ ನೋಡಿ ನಗುತ ನಡೆದಂ ಸಿದ್ಧಯತಿವರ್ಯನು ೩೮

ಪುರಜನಂ ಪರಿಜನಂ ವಿಸ್ಮಯಂಬಡುತೆರಗೆ
ಯುರಗೇಂದ್ರ ಮತ್ಸ್ಯೇಂದ್ರ ಚತುರಂಗಿ ಕೋರಂಟಿ
ಸುರನಾಥ ನಿರುಪಾಧಿನಾಥ ಲಾಕುಳನಾಥ ವಟುನಾಥ ಭೂತನಾಥ
ತರತರದ ಘನಸಿದ್ಧರಿಹರೆಲ್ಲರೀಕ್ಷಿಸಿಯೆ
ಭರದೆ ಬಂದೆರಗಿ ನುತಿಸಲ್ಕವರ ರಸನಗಳ್
ಚರಣಂಗಳೇಳದಿರೆ ನೋಡುತ್ತ ಕಂಡನಾ ಗೋರಕ್ಷನಾಶ್ರಮುವನು ೩೯

ಆತನಾಲಯದೇಳುಕಡೆಯ ಬಾಗಿಲುಗಳೊಳ್
ಭೂತೌಘ ಭುಜಗಕುಲ ಬ್ರಹ್ಮರಾಕ್ಷಸ ಮಹಾ
ವೇತಾಳ ಸಿಂಹ ಶಾರ್ದೂಲ ಭೈರವಗಣಂ ಕ್ರಮದೆ ಕಾಯ್ದಿರ್ಪವಲ್ಲಿ

---

1 ದೆ (ಗ) 2 ಗ (ಗ)

ನೂತನದ ಚೌಷಷ್ಟಿಯೋಗಿಣೀಗಣಮಹಾ
ಪ್ರೀತಿಯಿಂದಾರಾಧಿಸಲ್ಪಡುತ್ತಿರಲವರ
ಭೂತಗಣದಿಂದ ಸಂಪಾದಿಸಿದ ನಾನಾವಿಧದ ಭೋಗಮಿರಂತಿರ್ಪುದು ೪೦

ಸುರಲೋಕಗಣಿಕೆ[1][ಯರ್ ನ][1]ಚ್ಚಣಿಯರ್ಕೈ ಗಾನ
[2]ಗ[2]ರುವರೇ ಗಂಧರ್ವನಾಯಕರ್ ವಿದ್ಯಾಧ
ರರೆ ಮಾ[3]ಗಧ[3]ರು ಚಾರಣರೆ ನಟ್ಟುವರು ಸಕಲದೇಶವಾಳುವ ರಾಯರೆ
ಪರಿಚಾರಕರ್ ಸಕಲಸಿದ್ಧತತಿಭಟರಾಗಿ
ಪರಮಸಂಪತ್ತಿನಿಂ ಮೆರೆವ ಗೋರಕ್ಷನಿ
ರ್ಪರಮನೆಯ ಪೊಕ್ಕವನ ಮತ್ತೆ ಭಿಕ್ಷಾಂದೇಹಿ ಎಂದನಾ ಗುರುಶೇಖರಂ ೪೧

ಎನಲಿದೇನದ್ಭುತಮಿದಾವ ಮಾಯದಿ ಬಂದ
ನನವರತ ಯೇಳಗಸೆ ಕಾವಲೇನಾಯ್ತು ತಾ
ಘನಮಾರ್ಗದಿಂ ಬಂದನೋಲಣೆಪುಯಿಂದಲೆಯ್ದಿದನೊ ಶಿವನಾರೆನುತ್ತೆ
ಮನದೊಳೆಣಿಸಲ್ ಘೋರಮೂಢಬುದ್ಧಿಯೊಳವಂ
ಚಿನುಮಯಾತ್ಮನ ಕಾಣದಳಲಿಯಿ ತಾಣದೊಳ್
ಮನವೊಸೆದು ಭಿ[4]ಕ್ಷವಂ[4] ಕೊಂಡು ಪೋಗಲ್ಬಂದನೋ ಸಿದ್ಧಯೆನುತ ಸತಿಯ ೪೨

ಕರೆದೊಡಲ ಡೋರುಗೊರೆವಾ ಸುರಗಿಯಂ ತಂದಂ
ಭರದಿ ನೀಡೀತನಂ ಪರಿಕಿಸಲ್ಬೇಹುದೆನೆ
ತರುಣಿಯುರಿವಾ ಶಸ್ತ್ರಮಂ ನೀಡೆ ಕರದೊಳಾಂತಖಿಲಜೀವಗಣಕಂಕ್ಷಿ
ಚಿರಮಹಿಮ ಶಿವಸಿದ್ಧಮನುರಾಜ[5]ನಂ[5] ಸ್ಮರಿಸು
ಶಿರದೆ ಸೇವಿಸಲಮೃತವಾಯ್ತುಲಾ ಗುರುಂವಿಂಗೆ
ಮರಳಿಯಾ ನಿಂದಕನ ಯೆದೆ ಮೊದಲ ತಾಣತಾಣದೊಳಲಗು ಮೂಡಿತಾಗ ೪೩

ಭೇದಿಸುತ ಸಾಸಿರಲಗಿಂದಿರಿದ ಪಾಂಗಿನಿಂ
ವೇದನೆಯ ತೋರಿ ಮೈಯುಂಡು ಕೊಡಹುತ ಬಿಡದೆ
ಮೋದಗೆಡಿಸುತವುರಿವುತಂ ಕೊರೆವುತಂ ಹೊಳಚುತಂ ಘುಳುಘುಳುಧ್ವಾನದಿಂ
[6]ಖೇ[6]ದಗೊಳಿಸುತೆ ಚುಚ್ಚುತಂ ಕೊಚ್ಚುತಂ ಬಿಡದೆ
ವಾದಿಯಂ ಬಾಧಿಸುತ್ತಿರೆಯೇವನೇವನೋ
ಮಾದೇವರಾಣ್ಮ ಸಲಹೆನುತ ಕೆಟ್ಟೆನು ಕೆಟ್ಟೆನೆನುತ ಬಾಯ್ಬಿಡುತ ಮರುಗೆ ೪೪

---

1 ಯನೆರೆವ (ಕ) ಯನೆರೆನ (ಗ) 2 ಗು (ಗ) 3 ನವ (ಕ) 4 ಕ್ಷಿಯಂ (ಗ) 5 ಮಂ (ಗ) 6 ಭೇ (ಕ)

ವಿಷವ ನೀಡಿದೊಡಮೃತವೆಂದು ಭಾವಿಸಿಕೊಳಲ್
ಸಸಿನೆಯಾ ಗರಳಮೇ ಪೀಯೂಷಮಪ್ಪುದಾ
ವಿಷಮು ಪಾಪಿಗೆ ಸತ್ಯಮೆಮೃತಮಯಮಾಗಿರುವ ದಸಿಯಾಗಿ ಕೊಲ್ವುದೆಂಬ
ಅಸಮದೃಷ್ಟಾಂತಮಂ ತೋರುವೆನೆನುತ್ತೆ ಗುರು
ವೊಸೆದು ಭಿಕ್ಷಾಯೆನಲ್ ನೀಡಿದಲಗವನೆದೆಯ
ದಸಿಯಾಗಿ ಮೂಡಿ ಪೀಡಿಸೆ ಪೊರಳಿಪೊರಳಿ ಮಳ್ಗುತಂಗಲಾಚುತ್ತಿರ್ದನು ೪೫

ಆತನರಸಿಯರಾದ ಹಿರಿಕಿರಿಯ ಲಕ್ಕಿಯರ್
ಭೀತಿಯಿಂ ಬಾಯ್ಬಿಡುತೆ ತಲೆಗೆದರಿ ಜೋಲುತಿಹ
ಮಾತನದ ನಿರಿಗುರುಳ ಕಟ್ಟಲರಿಯದೆ ತಮ್ಮ ಗೆಳತಿ ಮಾಯೆಗೆ ಪೇಳಲು
ಕೇತನಾಂತಸ್ಥರಹ ಯೋಗಿಣಿಯರೊಡಗೊಂಡು
ಸಾತಿಶಯಂ ಸಿದ್ಧ ವಿತತಿಗಳಡ್ಡ ಬಿಳ್ದು ನಿ
ರ್ಭೀತನೇಯಿಾ ಸತಿಯರಂ ಸಲಹಬೇಹಂದಾ ಪಾಪಾಂಧನಂ ನೋಡದೆ ೪೬

ಗುರುವೆ ಬಿನ್ನಪಯಾಜ್ಞೆಯಾಯ್ತು ಅಪರಾಧಿ[1]ಗಂ[1]
ತುರೆ ಸುರಾಸುರ ಮುನೀಶ್ವರರಧಮಗುಣಗಳಂ
ನಿರೀಕ್ಷಿಸದೆ [ಸಲೆ] ತಾಂ ಕಾಯ್ದುವೊಲ್ ಕ್ಷಮಿಂಸಿ ಕೃಪೆಮಾಡಲ್ ಸಮರ್ಥರೊಳರೆ
ಧರೆಯೊಳಗೆ ನೀವಲ್ಲದೆನೆ ಮುಗುಳ್ನಗೆವೆರಸಿ
ವರದೃಷ್ಟಿಯಿಂ ನೋಡಲಾಕ್ಷಣಂ ಬಾಯೊಳತಿ
ತ್ವರಿತದಿಂ ತಳೆದು ಬಿಳ್ದುದು ಸಿದ್ಧನಾತ್ಮದೋಷದ ಪುಂಜವೆಂಬ ಪಾಂಗಿಂ ೪೭

ಅಣಿಮಾದಿಸಿದ್ಧಿ ಸಂಭ್ರಮದ ಹಂತೆಯೊಳಾರ
ಯೆಣಿಕೆಗೊಳ್ಳದೆ ಮಹಿಮರಿರವರಿಯದಾಂ ನೊಂದೆ
ತ್ರಿಣಯನನೆ ಸುರಸಿದ್ಧಗಂಧರ್ವಯಕ್ಷಬ್ರಹ್ಮೇಂದ್ರಾದಿ ವಂದ್ಯಪದನೆ
ಅಣಿಯರದೊಳಿನ್ನ ದುರ್ಗುಣವ ನೋಡದೆ ಕಾಯ್ದೆ
ಪ್ರಣತಜನರೋಗಾದಿ ಹರಹರಯೆನುತ್ತಾಗ
ತಣಿವಿಲ್ಲದೊಂದಿಸುತೆ ನುತಿಸುತ್ತೆ ಸೈಗೆಡೆದು ಪೊರಳಿದಂ ಧಾರಿಣಿಯೊಳು ೪೮

ಎಲೆಲೆ ಗೋರಕ್ಷ ನೀನೆನಗೊಡರ್ಚಿದ ತಪ್ಪ
ಸಲೆ ಕ್ಷಮಿಸಿ ಪಾಲಿಸಿದೆನೇಳು ನಿನ್ನಿಷ್ಟಮಂ
ನೆಲೆಯಾಗಿ ಪೇಳೆನಲ್ ಕೇಳಿ ಶಿವಧರ್ಮಪದ್ಧತಿಯ ನಿರವಿಸುವುದೆಂದ

1 ಕಂ (ಗ)

ಒಲವಿನಿಂ ಕೇಳಂ ನೀಂ ಸತ್ಯ ಸದ್ಧರ್ಮದೊಳ್
ಚಲಿಸದಿರು ತಥ್ಯ ಮಿಥ್ಯಗಳ ಮಾಡದೆಯಾರ
ನಳಿಸಿ ಬಳಲಿಸಬೇಡ ಪರರ ನಿಂದಿಸುತೆಯಾತ್ಮಸ್ತುತಿಯು ಮಾಡಬೇಡ ೪೯

ಪರರ ಪೆಣ್ಗಳ ಪೊಂದ ಚಾರುಧನದಾಸೆಯಂ
ಮರೆಯಖಿಳಜನರ ಬಾಧಿಸುವ ಪ್ರಾಣಿಗಳ ನೀಂ
ನಿರಸನಂ ಮಾಡಿ ವಧಿಸಲ್ಬೇಡ ಪರರ ದುರ್ಗುಣಗಳಂ ಮರಸುತವರ
ಪರಮಾಣುವನಿತು ಗುಣವಿರಲು ಪರ್ವತಮಿದೆಂ
ಬರಿಕೆಯಿಂ ಚಿತ್ತನಿರ್ಮಲತೆಯಿಂದಿರು ಶಾಂತಿ
ವರನೆನಿಸು ಸದ್ಗುಣಿಗಳೊಡನಾಡು ದುರ್ಗುಣಿಗಳೊಡೆತನಂ ಬಿಡು ಕುಮಾರ ೫೦

ಹರನೆ ಕರ್ತನಂ ಹರಿಸುರಜ್ಯೇಷ್ಠಶಕ್ರಾದಿ
ಸುರರೆಲ್ಲ ದಾಸರೆಂದರಿದು ಭಕ್ತಿಯೊಳಿರಗು
ಗುರುವಿಂಗೆ ಚತುರ್ವಿಧದ ಸೇವೆಯಂ ಮಾಡು ಶಿವಭಕ್ತರ್ಗೆ ವಂದಿಸು ಗಡ
ಹರನಿಂದೆ ಗುರನಿಂದ್ಯಗಳ ಕೇಳದಿರು ಸತ್ಯ
ಚರಲಿಂಗಪಾದಾಂಬುವಂ ಪಡೆ ಸದಾಚಾರ
ಪರನಾಗಿ ಲಿಂಗಜಂಗಮಯೇಕಭಾವನೆಯೊಳಿರುತಸಹ್ಯಂಬಡದಿರು ೫೧

ಆದರದೆ ಭಸ್ಮರುದ್ರಾ[1]ಕ್ಷಿಯಂ[1] ಧರಿಸುತಾ
ಸ್ವಾದಿಸೈ ರಸನೆಯೊಳಗಮೃತವನುವೊಮ್ಮನದಿ
ಮಾದೇವನಂ ನೆನೆಯನನ್ಯಶಾಂತಿಯನೆಸಗು ಕ್ಷುಧೆಯಡಸಿದಖಿಳಜನಕೆ
ಓದನವನೆಡೆಮಾಡು ದುಃಖಿಗಳೊಳಂ ಹಿತವ
ನಾದರಿಸು ಸುಖಿಗಳೊಳ್ ಸಂತೋಷವೆಸಗು ಪು
ಣ್ಯೋದಯದೊಳಭಿಮಾನಮಂ ಮಾಡು ಯತಿಜನದೊಳೆಂದನಾ ಗುರುಪುಂಗವಂ ೫೨

ಇದುವೆ ಗೋರಕ್ಷಶಿವಸದ್ಧರ್ಮಪಂಥಾನ
ಮಿದರೊಳತಿಯಚ್ಚರದೊಳಿರೆ ನಿನಗೆ ಮೋಕ್ಷಮೆಂ
ದೊದವಿ ಬೋಧಿಸಿಯವಂ ಕೊಲ್ಲಾಪುರದ ಮಾಯೆಯೆನಿಪ ರವೆ ಮೊದಲಾಗಿಹ
ಬುಧರಡ್ಡಬೀಳಲವಗಿಪ್ಪವೀವುತೆ ಮತ್ತೆ
ಮುದದಿ ಬಹೆವೆಂದು ಕಳುಹಿಸಿಕೊಳುತ್ತಾಕಾಶ
ಪಥದೊಳೈದುತ್ತೇಳುದ್ವೀಪಾಬ್ಧಿ ಸೀಮಾ ನಗಂಗಳೊಳ್ ಸಂಚರಿಸಿದಂ ೫೩

---

1 ಕ್ಷಮಂ (ಗ)

ಅತಿವೇಗದಿಂದ ಬಾ[1]ನ್ನ[1]ಟ್ಟೆಯೊಳಗೈದಿಬರೆ
ಪ್ರತಿಯಿಲ್ಲದಾ ಶಿಲಾದಾತ್ಮಜಂ ಭಕ್ತಿಯು
ನ್ನತತಪೋಸಿದ್ಧಿಯಿಂ ಪರ್ವತಾಕಾರದಿಂದಿಪ್ಪ ಶ್ರೀಶೈಲನಗವಂ
ಸ್ತುತಿಸಿದ್ಧ ರೇವಣಾಸಿದ್ಧಯತಿ ಕಂಡು ತಾ
ನತಿಶಯ ಗಿರೀಂದ್ರಮಿದು ಯಿ.ದರಮಹಿಮೆಯನಾವ
ಸತತ ಕೇಳ್ವನು ನಾಡೆ ಸಂಪದದಿ ಬಾಳಿ ಸ್ವರ್ಗವ ಪಡೆವನಭಿಮತವುಹ ೫೪

ಧರೆಯೊಳಗೆ ಯಿಾಧರೆಯೆ ಹಿರಿದು ಶೈಲಂಗಳೊಳ
ಗರಿದಹ ಗಿರೀಂದ್ರಮಿದು ವೃಕ್ಷಂಗಳೊಳಗೆಯಿಾ
ತರುಗಳೇ ಮಿಗಿಲು ಕಾಂತಾರದೊಳ್ ನೋಡಲೀ ಕಾಂತಾರಮತಿಶಯವಲ
ಚರಿಪ ವಾರಿಗಳೊಳೀ ವಾರಿಯಧಿಕಂ ಬಹಳ
ಧರೆಯ ತೀರ್ಥಂಗಳಿಂಗೀ ತೀರ್ಥಮರಿದು ಮಂ
ತ್ರರರೆ ಕಣೆಗಳೊಳಿಲ್ಲಿ ಕಣೆಯಧಿಕ ದೊಣೆಗ[2]ಳೊಳ್[2]ದೊಣೆ ವಿಶೇಷಂ ಭಾವಿಸೆ ೫೫

ಇಲ್ಲಿ[3]ರ್ಪ[3] ಗಿರಿ ಹೇಮಗಿರಿ ಕನಕರತ್ನಮಯ
ಸಲ್ಲಲಿತ ಶೈಲಗಳ್ ಪರಳುಗಳ್ ಗುಡ್ಡಗಳ್
ಭಿಲ್ಲರಹ [4]ಚುಂ[4]ಚರೇ ಸುರರಿಲ್ಲಿ ನೀರಾಂತ [5]ದೊ[5]ಣೆಗಳೇಯಮೃತರಸವು
ಚೆಲ್ಲೆಗಂಗಳ ಚೆನ್ನೆಯರ್ ಸುರಸ್ತ್ರೀಯರು
ತ್ಫುಲ್ಲಕುಸುಮದ್ರುಮಂಗಳೆ ಮರುಜವಣೆಯು ಗಿಡು
ವಲ್ಲಲ್ಲಿ ನೆಲಸಿರ್ಪ ಮೃಗಕುಲಂ ಪುರುಷಾಮೃಗದ ಗಣಂ ಕಣ್ಗೆಸೆದುದು ೫೬

ತಂಡುಲವನಧಿಕತರ ಗುಂಡಿನಗ್ರದೊಳಿರ್ಪ
ಗುಂಡಿವರಲೊಳ್ ಪೊಯ್ದು ಗುಂಡಿನೊಳ್ ತಿರುಹುತುರೆ
ಚಂಡಿಕಾಪತಿಯ ಶಿಖರವ ನೋಡೆ ಭವವಳಿವುದೆನಿಪಮಳ ಶ್ರೀಶೈಲದ
ಖಂಡದೊಳಗತ್ಯಗ್ರ ಶುಕ್ಲಪರ್ವತಮಲ್ಲಿ
ಮುಂಡಿಸಿಹ ಶಿಖರೇಶ್ವರನ ನೋಡುತಭವವೇ
ತಂಡಕಂಠೀರವಂ ತಾರಾಚಲಂಗಂಡು ಪೊಕ್ಕನಾನಂದದಿಂದ ೫೭

ಅಲ್ಲಿರ್ಪ ಮುನಿನಿಕರ ಬಂದೆರಗಲವರ್ಗೆ ತಾಂ
ಫುಲ್ಲಕೋಮಲ ಪದ್ಮಮುಖರೇವಣಾಸಿದ್ಧ
ಸಲ್ಲಲಿತ ಬೋಧೆಯಂ ಪೇಳುತ್ತ ಮುಂದೆಯ್ದೆ ಕಂಡನಾ ಬಿಲ್ವವನಮಂ

---

1 ಳ್ನ (ಕ) 2 ಳೊಳಿಕ (ಕ) ಳೊಳೀ (ಗ) 3 ಪ್ಪ (ಕ) 4 ಚಂ (ಕ) 5 ಡೊ(ಕ)

ಸಲ್ಲೀಲೆಯಿಂದಲ್ಲಿ ಯಿಷ್ಟಲಿಂಗವ ಕರದೊ
ಳುಲ್ಲಾಸದಿಂದಾಂತು ಜಪಿಪ ಶಿವಭಕ್ತಿಮತಿ
ವಲ್ಲರಿಯಲತೆ ಪೆರ್ಚೆ ಸಚ್ಚಿದಾನಂದಗುರುವಿಂಗೆರಗಿದಳ್ ನಲಿವುತ ೩೮

ಎಲೆ ಜಗನ್ಮಾತೆ ಕೇಳ್ ನಿನ್ನಿಷ್ಟಲಿಂಗಮಂ
ಲಲಿತಕರಕಂಜದೊಳಗಾಂತೇಕೆ ನಿಂತಿರ್ಪೆ
ಯೊಲವಿನಿಂ ಪೇಳೆನಲ್ ಲಾಲಿಸೈ ಯಾವನದೊಳಗೆ ವೀರಶೈವಮತದ
ಛಲವಾಂತ ಸತ್ತಪೋನಿಷ್ಠರಲ್ಲದೆ ಮಿಕ್ಕ
ಮಲದೇಹಿ ಭವಿಜಡಾತ್ಮರ್ ಪೊರ್ದಬಾರದೆಂ
ಬಲಘುಮಹಿಮೆಯ ಕುರುಹ ತೋರಲಲ್ಲದೆ ವೀರಶೈವಳಾಂ ಸತ್ಯಸತ್ಯಂ ೩೯

ಈ ವನದ ಗುಹೆ ಗಂಡಶೈಲಪ್ರಪಾತ ಕಟ
ಕಾವಳಿ ಶಿಲೋಚ್ಚಯಾಧಿತ್ವತಾನಿರ್ಝರಾ
ಭೂವಿಷಯವಟಕೋಟರಲತಾನಿಕುಂಜ ನಾನಾಗುಲ್ಮರಾಗಿಯಿರ್ಪ
ಠಾವಿನೊಳ್ ಶಾಂಡಿಲ್ಯಕುಜದ ಪಂಕ್ತಿಯ ನೆಳಲೊ
ಳಾ ವಿವಿಧಸೈಕತದ ಪುಂಜ ಪುಂಜಂಗಳೊಳ್
ತೀವಿ ಕುಳ್ಳಿರ್ದು ಜಪತಪಗಳಂ ಮಾಳ್ಪರೆಲ್ಲಂ ವೀರಶೈವರಲ್ತೆ ೪೦

ಎಲೆ ರೇಣುಕಾಧೀಶ ಯಿಾಬಿಲ್ವವನರುಹದೊ
ಳಲಘುಶಿವನೋಲಗಕೆ ನಿಚ್ಚನಿಚ್ಚಂ ಪೋಗಿ
ಸಲೆ ಬರುವ ಮರಗಳುಂಟೆಲ್ಲೈ ನೇಮದಿಂ ಸೋಮವಾರವೈದುತ ಮರಳುವ
ಫಲವಾದ ಕುಜಗಳಿಹವ್ಯೆ ಗುರುವೆ ಪೌರ್ಣಮಿಯೊ
ಳೊಲವಿನಿಂದಮವಾಸ್ಯೆಯೊಳ್ ಪೊಕ್ಕು ಪೊರಮಡು
ತ್ತಳಿಕಾಕ್ಷ ರಾತ್ರಿಯೊಳ್ ಗಮಿಸಿ ಶಿವನಂ ಭಜಿಸಿ ಬರ್ಪ ತರುವುಂಟಘಹರ ೪೧

ತರುಗಿರಿಯು ಗುಲ್ಮಲತೆ ವರಶಿಲೆಯು ಖಗಮೃಗಗ
ಳರರೆ ತೃಣಕಾಷ್ಠ ವನವಾಸಿ ಕೀಟಂ ನಳಿಯು
ನೆರೆ ತರಂಗಿಣಿಮುಖ್ಯ ಸಚರಾಚರಂಗಳೀ ಬಿಲ್ವವನದೊಳಗಜಸ್ರಂ
ಹರಹರಯೆನುತ್ತಪರೆ ಮಧ್ಯಮೆಂ ಸುವಾಕ್ಕಿನೊಳ
ಗಿರದೆ ಪಶ್ಯಂತಿಯಿಂ ಕೀರ್ತಿಸುತ ಮಾನಸದ
ಮರವೆಯೆ ಧ್ಯಾನಪರವಶಮಾಗೆ ವರ್ತಿಸುವೆದೀ ವನದ ಮಹಿಮೆಯೆಂತೊ ೪೨

ಪಸುವೆಲೆಯು ಪಸುರೇರಿದೆಲೆಯು ಪಸುರಿಳಿದೆಲೆಯು
ಪಸುರೇರುವೆಲೆಯು ಪೂಗಳ ರಾಜಿಯಿಂ ಬಿಲ್ವ
ವಸತಿ ತತ್ಪುರುಷನಂದದೊಳಗೀಶಾನನಂದದಲಿ ಸದ್ಯೋಜಾತನ
ಹಸದಂತಘೋರಮೂರ್ತಿಯ ವಾಮದೇವನು
ಲ್ಲಸಿತ ರೂಪದಲಿ ತೋರಂತ್ತಿರ್ಪುದಿಲ್ಲಿಯೆ ತ
ಪಸಿಗಳ್ ನಿಜಾಭೀಷ್ಟಮಂ ಪಡೆಯಲಾಚರಿಪರಭವನಂಘ್ರಿಧ್ಯಾನಮಂ ೬೩

ಸಿತವರ್ಣವಾದ ನಂದ್ಯಾವರ್ತಮುಖಕುಸುಮ
ತತಿಯಿಂದ ಗೌರವಾಗಿಹ ಕರ್ಣಿಕಾರಾದಿ
ವಿತತಪುಷ್ಪಂಗಳಿಂ ಪಚ್ಚೆವಣ್ಣದ ಸೊಬಗನಾಂತ ಪಚ್ಚೆಯ ತೆನೆಗಳಿಂ
ಅತಿರಾಗಮಾಗಿಹಜಪಾಸೂನರಾಜಿಯಿಂ
ದತುಲನೀಲಚ್ಛವಿಯನಾಂತಕ್ಷುಮಾದಿಯಿಂ
ಮಿತಿಯಿಲ್ಲದಿಷ್ಟಮಂ ಪಡೆಯಲರ್ಚಿಪರಲ್ಲಿ ನೀಲಕಂಠನ ಮುನಿಗಳು - ೬೪

ಮೆರವೇಕಬಿಲ್ವಪತ್ರಂ ತ್ರಿಪತ್ರಂ ಪಂಚ
ಪರಮಷಡ್ದಳ ಸಪ್ತಪತ್ರಾಷ್ಟದಳಚಯಂ
ಸ್ಥಿರವಾದ ನವದಳಂ ದಶದಳಂ ಏಕಾದಶಾದಿ ಸಾಹಸ್ರಪತ್ರಂ
ಪರಶಿವ ಮಹೇಶ್ವರ ಸದಾಶಿವರ್ ಷಣ್ಮುಖಂ
ಭರದಿಂದನಂತಭೈರವಬ್ರಹ್ಮಹರಿರುದ್ರ
ರಿರದೆ ಸಾಸಿರದೆಲೆಯನೊಳಕೊಂಡ ಮರಗಳಿನೆ ಮೆರೆದುದಾ ಬಿಲ್ವಾಟವಿ ೬೫

ತಣ್ಗದಿರ್ಗಲ್ದೊಣೆಯು ಜಲದಿ ಮಲಯಜಕುಜದ
ತಣ್ಪನಾ ಶ್ರೀಖಂಡವಂಶಜ ಸುಮೌಕ್ತಿಕದ
ಮಣ್ಪನಕ್ಷತೆಯಿನವನೀಸ್ಥಲದ ಕಲ್ಹಾರಮುಖ್ಯ ಪುಷ್ಪಾಳಿಯಿಂದ
ಗಂಪಿನೊಳ್ ಸುಳಿವ ಪವಮಾನ ಸದ್ವಾಸನೆಯ
ಬೆಣ್ಪನಾ ದಾವಾಗ್ನಿರೂಪದಿಂದಲ್ಲಲ್ಲಿ
ಪಣ್ಫಲದ ನೈವೇದ್ಯದಿಂ ಶಿವನ ಯಜಿಪನಂತಾ ವನಂ ಕಣ್ಗೆಸೆದುದು ೬೬

ಒಂದು ಗುಹೆಯಂ ಪೊಗಲು ಸಪ್ತಪಾತಾಳವಂ
ಛಂದದಿಂ ಕಾಣಿಸುಗುಂ ಮತ್ತೊಂದು ಗುಹೆ ನೋಡ
ಲ್ಚಂದಮಾ ಪಾಟಲೇಶ್ವರ ಭುವನಮುಖ್ಯರುದ್ರರ ಭುವನಗಳ್ ತೋರಿಕುಂ

ಸಂದಣಿಸಿ ಬಿಲ[1]ವೊಂ[1]ದ ನೋಡೆ ದ್ವೀಪಾದ್ವೀಪ
ವೃಂದಸಾಗರಗಿರಿಗಳಲ್ಲಿರುವ ಹರಿಸುರರ
ಗೊಂದಣದ ಲೋಕಶ್ರೀಕೈಲಾಸ ಮುಂತೋರ್ಕುಗೀ ವನಂ ಮುನಿಪಾವನಂ ೬೭

ಈವನದೊಳೊಂದು ಬಿಲ್ವದ ಮರದ ನಾಲ್ದೆಸೆಯೊ
ಳಾವ ಶಾಖೆ[2][ಯಾ][2] ನೆರೆಯಿಂದ್ರಾದಿ ದಿಗ್ರಮಣ
ರಾ ವಿವಿಧಪಟ್ಟಣಂ ಕುಲನಗಂ ಸೀಮಾನಗಂಗಳಗ್ರದೊಳು ಚೆಲ್ವ
ತೀವಿರ್ಪ ಗರುಡ ಗಂಧರ್ವ ಕಿನ್ನರರ ನಗ
ರಾವಳಿಯುಂ [3]ಕಂಗೆ[3]ಸೆಗುಗೂರ್ಧ್ವಶಾಖೆ[4][ಯಾ][4] ನೆರೆ
ಭಾವಜಾಂತಕನ ಶಾಂಭವಲೋಕ ಗೋಚರಿಪುದೀ ಮಹಿಮೆಯತಿಕೌತುಕಂ ೬೮

ಸುರನರೋರಗರಖಿಳರಿಷ್ಟಕಾಮ್ಯಾರ್ಥಮಂ
ಭರದೆ ಪಡೆವುದರಿಂದಲಿಷ್ಟಕಾಮೇಶ್ವರಿಯ
[5]ಕರ[5]ದೊಳಿಪ್ಪವ ಭಜಿಪ ದೆಸೆಯಿಂದಲಿಷ್ಟಕಾಮೇಶ್ವರಿಯದಂತಲ್ಲದೆ
ವರಮನಃಕಾಮ್ಯಫಲವಂ ಕೊಡುವ ಯಿಶನೊಳ್
ಬೆರೆದೀಕೆ ಯಿಷ್ಟಕಾಮೇಶ್ವರಿಯೆನಿಪ್ಪಳೀ
ಪರಮಶಕ್ತಿಯೆ ತಾನೆ ಬಿಲ್ವವನಮಹಿಮಯಂ ಪೇಳ್ವೆ ಕೇಳಂತ್ತ ನಲಿದು ೬೯

ಆ ವನದೊಳಿಹ ವೀರಶೈವ ಶರಣರ್ಗೆ ತಾಂ
ರೇವಣೇಶಂ ನಮಿಸೆ ಬೀಳ್ಕೊಳಲ್ಕವರೊಳತಿ
ಭಾವಜಾಂತಕನಮಳಮೂರ್ತಿಲಿಂಗೇಂದ್ರಿಯಂ ಲಿಂಗಮಾನಸವಿಲೀಢಂ
ಕೋವಿದಂ ಶಿವತತ್ತ್ವಸಾರಲೌಕಿಕಧರ್ಮ
ವ್ಯಾವಹಾರಿಕ[6]ವ[6] ವಿಾರಿರ್ದ ಸಂಗಮದೇವ
ದೇವ ನಿಮ್ಮೊಡನೆ ನಾವ್ ಬಹೆವೆನಲು ನಸುನಗುತ ರೇಣುಕನಂಸೂರ್ದನಾಗ ೭೦

ಎಲೆ ಸಂಗಮೇಶ ನಂದೀಶನೇ ಮರ್ತ್ಯದೊಳ್
ಸಲೆ ವೀರಶೈವ ಶಿವಮತವನುದ್ಧರಿಸಲ್ಕೆ
ಬಲವಂತ ಬಸವಾಭಿಧಾನವಂ ವಹಿಸಿ ಪ್ರಮಥರ ಕೂಡುತಾನಂದದಿಂ
ನೆಲೆಯಾಗಿ ಮುಂದೆ ಕಲ್ಯಾಣದೊಳ್ ನೆಲಸುವಂ
ಒಲವಿನಿಂದಾ ಸಮಯಕೈದುವದೆನುತ್ತವರ
ತಲೆದಡಹಿ ನಿಲಿಸಿ ಮುಂದಕೆ ಬರಲ್ ಪಾತಾಳಗಂಗೆಯಂ ಕಂಡು ನಲಿದಂ ೭೧

---

1 ನೊಂ (ಕ) 2 ಯ (ಕಗ) 3 ಕಣ್ಗೆ (ಗ) 4 ಯ (ಕಗ) 5 ತಟ (ಗ) ? 6 ನ (ಕ)

ಅಂಗಜಾಂಗವಿಭೂತಿಯಿಂದೊಪ್ಪೆ ವಸ್ತುಕವಿ
ಪಿಂಗಳ ಜಟಾಪಟಲದಿಂದೆಸೆದು ಮತ್ತಮಾ
ಗಂಗೆಯಂ ಮಲ್ಲಿಕಾಮಾಲೆಯೆಂದಲ್ಲಿ ತಾಳಿದ ವಿಶ್ವನಾಥದೇವಂ
ಪಿಂಗದೇಳೇಳುಲೋಕದೆ ದೋಷಮಂ ತೊಳೆಯ
ಲಂಗೀಕರಿಸಿ ಲಿಂಗತೆಯ ಸಪ್ತವಾಹಿನೀ
ಸಂಗಮದೊಳಿಹನಾಗಿ ಪಾತಾಲಗಂಗೆಯಂ ಬಣ್ಣಿಸುವನಾವನೆನುತ — ೭೨

ಶಂಭುಪೂಜೆಯನವಂಳಗಂಗೆಯೊಳಗೆಸಗುತ್ತ
ಲಂಬರಕ್ಕಡರಿಬರೆ ಮಲ್ಲೇಶನಾಲಯಂ
ಪೊಂಬೆಟ್ಟದೊಲ್ ರತ್ನಕಲಶದೆ ಚಿದಂಬರೋದ್ಧರಣಾದಿ ರಚನೆಯಿಂದಂ
ಇಂಬುವಡೆದಿರೆ ನೋಡುತ್ತೈದೆ ಜಗದಂಬಿಕೆಯ
ಸಂಬಂಜಾಂಬಕ ಮುಖ್ಯವಂದ್ಯಪಾದಾಂಬುಜೆಯ
ಕಂಬುಕಂಧರೆಯಭವನರಸಿ ಭ್ರಮರಾಂಬಿಕೆಯ ಕಂಡು ಕುಂಭಜ ಗುರುವರಂ — ೭೩

ಕಂಡು ಮನದೊಳ್ ನಲಿವುತು ಬರಲ್ ಮುದವಲರಿ
ಚಂಡಿಕಾಧವ ಮಲ್ಲಿಕಾರ್ಜುನಂ ಪಂಚಮುಖ
ಮಂಡನದಿ ದಶಪಂಚನೇತ್ರ ಶುದ್ಧಸ್ಫಟಿಕಸಂಕಾಶದಿಂ ಪೊಳೆಯುವ
ಖಂಡಶಶಿತನು ಶೂಲ ಪರಶು ಖಡ್ಗಂ ವಜ್ರ
ದಂಡಮಭಯಂ ನಾಗಪಾಶಾಂಕುಶಂ ಘಂಟೆ
ಚಂಡವರಕರದಿ ಸರ್ವಾಭರಣಭೂಷಣದೊಳೀಶಂ ಪ್ರಸನ್ನನಾದಂ — ೭೪

ಸಲೆ ನೋಡಿ ನಲಿದು ವಂದಿಸಿ ಕಂಗಳೊಳು ಹರುಷ
ಜಲಕಣಂ ಥಳಥಳನೆಯಿಳಿಯೆ ದೇಹಂಬಳೆಯೆ
ಮೊಳೆಯೆ ಪುಳಕಾಂಕುರಂ ಘರ್ಮಾಂಬು ಸುರಿಯೆ ಸೈಗರೆಯೆ ಮನವಾನಂದದಿಂ
ಚಲಿಸೆ ಕಂಪನದಿ ತನು ಗದ್ಗದ ಸುಕಂಠದಿಂ
ದುಲಿದು ಪೇಳಿದ ಸಾಂಬ ಶಾಂತಮಲ್ಲೇಶ್ವರನೆ
ಲಲಿತಶಾಂಭವಲೋಕಕಾಂ ಬಹೆನೆನಲ್ಕೆ ನೆಸುನಗುತಪ್ಪಿ ಮುಂಡಾಡುತೆ — ೭೫

ಮುಂದಚಲಮಾಹಾತ್ಮ್ಯಪದದ ಮಹಿಮೆಯು ನಿನ್ನ
ಕಂದನಿಂದಾಗಬೇಹುದು ಸಪ್ತಶತವರ್ಷ
ಸಂದುದತಿ ಪ್ರಚ್ಛನ್ನವೇಷದಿಂದಿನ್ನು ನಿಜದಿಂ ಸಿಂಹಮುನ್ನಡರುತೆ

ಬಂಧುರತರಾಷ್ಟಶಿಖಿಯಷ್ಟಸಿದ್ಧಿಯನೀವ
ಕುಂದದಕ್ಷಯಪಾತ್ರ ಬಲಮುರಿಯಶಂಖ ಪೊಸ
ಕುಂದಣದ ಕುಂಡಲಾದ್ಯಖಿಳಮುದ್ರೆಯನಾಂತ ಯತಿರಾಜನಾಗಿ ನೀನು ೭೬

ಶತಪತ್ರಮಿತ್ರನುದಯಪ್ರಕಾಶಾತ್ಮತನಂ
ಯುತನಾಗಿ ಬೆಳಗುತುನ್ನತಮಹಿಮೆಯಿಂ ಬಹುಳ
ನುತ ಚೋಳ ಲಾಳ ಮಲೆಯಾಳ ಕುಂತಳ ಮಗಧ ಮಾಳವ ಮಹಾರಾಷ್ಟ್ರದ
ಅತಿಶಯೆಂದ ಪಾಂಚಾಳ ಜಾಳಾಂಧ್ರ ಕುಂತಲಾಂ
ಚಿತ ಕಳಿಂಗಾಂಗ ವಂಗಾಂಕಸಹದೇಶಾದಿ
ಕ್ಷಿತಿಪರಾತ್ಮಜೆಯರಹ ಬಾಲಕನ್ನಿಕೆಯರಹ ನೀಲಕುಂತಳೆಯರಾದ ೭೭

ಉತ್ಪಲಸುನೇತ್ರೆಯರ ವುರುಕಾಂತಿಗಾತ್ರೆಯರ
ಸತ್ಕುಲಪ್ರಸೂತೆಯರ ಸದ್ಗುಣವಿನೀತೆಯರ
ತತ್ತದ್ವಿಷಯದ ನೃಪರೀಯೆ ಪಾಣಿಗ್ರಹಣಮಾಚರಿಸಿ ರಕ್ತಿಯಿಂದ
ಚಿತ್ಕಳಾಮೂರ್ತಿ ರೇವಣಸಿದ್ಧ ಮತ್ಪುತ್ರ
ಸತ್ಪದವನೀವ ಘನವೀರಶೈವವನು ಭಾ
ಸ್ವತ್ಕಾಂತಿಯಿಂ ಧರೆಗೆ ಪಸರಿಸುತ ಚಾರುಮಂಗಲವಾಡದೊಳಗೆ ನೆಲಸು ೭೮

ಅಲ್ಲಿ ಮಂಗಳವಾಗೆ ಸಕಲಸಂಪದಸಿದ್ಧಿ
ಯಲ್ಲಿಯೇ ದೊರಕುವದು ಕಲ್ಪಭೂಮಿರುಹವು
ಬಲ್ಲಿತಹ ಸುರಮಣಿಯು ಸುರರುಣಿಸು ಪರುಷದರೆ ಸುರಧೇನುಗಳು ನಿನ್ನಯ
ಮೆಲ್ಲಿತಹ ಪದಕಂಜದೋಲಗದೊಳಿಹರೆನುತೆ
ತಲ್ಲೀನವಾದನಾ ಲಿಂಗದೊಳಗತಿಶಾಂತ
ಮಲ್ಲಿಕಾರ್ಜುನನತುಳಗಂಗೋತ್ತಮಾಂಗ ಪಿಂಗಳಜಟಾಶಶಿಜೂಟನು ೭೯

ಅಧಿಕಶ್ರೀಗುರುಶಾಂತಮಲ್ಲಿಕಾರ್ಜುನಲಿಂಗ
ಮುದದಿಂದ ಪೇಳ್ದ ಕಜ್ಜಂ ಮಾಡಬೇಹುದೆಂ
ದುದಿತ ತಾರಾಚಲದೊಳಿಳಿದು ಶ್ರೀಗಿರಿಯನುಳಿದವಿಮುಕ್ತಕ್ಷೇತ್ರಕೈದಿ
ವಿಧಿಕೃತಾಂಡದಲಿ ಪುಟ್ಟಿದ ಜೀವರಾಶಿಯಾ
ವುದರೊಳಸುವಳಿಯೆ ಮತ್ತಂ ಜನನದುಃಖಮಿಾ
ಯದ ಮಹಾದೇವನಹ ವಿಶ್ವೇಶ್ವರನ ಕಂಡು ಮುಕ್ತಿಮಂಟಪದಿ ನೆಲಸಿ ೮೦

ವಿಮಳಮಣಿಮಂಟಪದೊಳಾ ರೇವಣೇಶ ತಾಂ
ಶಮೆ ದಮೆ ಸಮಾಧಿ ಷಟ್ಕಂಗಳಿಂ ರಾಜಿಸುವ
ಯಮಿನಿವಹಕ್ಕೈದೆ ಶೋಧಿಸಿ ತತ್ತ್ವಮಸಿ ಮಹಾವಾಕ್ಯದರ್ಥವನುಸುರುತೆ
ಯಮುನೆ ಗಂಗೆಯುಂ ಸರಸ್ವತಿಯ ಕೂಟದಿ ಲಿಂಗ
ದಮಳಪೂಜೆಯನೆಸಗಿ ಸಂಚರಿಸುತಲ್ಲಿಂದ
ಹಿಮವಂತನಂ ನೋಡಿ ತಿರುಗಿದಂ ಪರಮಮಂಗಳವಾಡ ಪಟ್ಟಣಕ್ಕೆ ೮೧

# ಐದನೆಯ ಸಂಧಿ

ಸೂಚನೆ :

ಭಂಗಿಸುತೆ ಖರ್ಪರನ ಮಾಯಿದೇವಿಯ ಕನ್ಯೆ
ಲಿಂಗಾಗಿ ರೇವಾಂಬಮುಖಬಾಲೆಯರ ವಧೆಯ
ಪಿಂಗಿಸಿ ಸುಲಕ್ಷಣೆಯ ಪರಿಣಯಂಬಡೆದು ಮಂಗಳಮಹೋತ್ಸವದೊಳಿರ್ದಂ

ಶ್ರೀಗಿರಿಸುತಾರಮಣ ಶೀತಭಾಸ್ವಾಭರಣ
ನಾಗಚರ್ಮ ಸುವಸನನೈಗವಾಯಿತರಸನ
ಭೋಗಿಭೂಷಿತ ಕಾಯ ಭುಕ್ತಿಮುಕ್ತಿನಿಕಾಯ ಲೀಲಾಕ್ಷಭವಭಯ ಜಯಂ
ಭೋಗಿಗಾನಾನಂದ ಭುವನಗಣ್ಯ ಸನಂದ
ಯೋಗಿಜನಹೃದ್ಗೇಹಯುಕ್ತ ಶರಣವಿದೇಹ
ಯೋಗಭೋಗಾಂ[1][ಗ][1]ಭಾಗದೇಹ ವಿನಿತ ಚೆನ್ನಮಲ್ಲಿಕಾರ್ಜುನ ನಮಸ್ತೇ ೧

ಮಂಗಳೋತ್ಸವದೊಳಗನಂಗರಿಪು ನೋಡೆ ತಾಂ
ಜಂಗಮಾಂಗಕ್ಕಂಗಜೆಯ ಮುಡಿಯ ಬೇ
ಕಂಗಾಂಗಿಯಿದೆ ರಾಯ ಕೊಡು ನಮ್ಮ ಮುಂದಲೆಯ ಸಿಂಗಾರಕೆನೆ ನಗುತ್ತೆ
ಮಂಗಳದ ಹಸೆಯಮೇಲಣ ಮಗಳ ಮೆಲ್ನುಡಿಯ
[2]ಪಿಂಗದರಿ[2]ದೀಯಲದ ಲಿಂಗಪಾನುತ ಮಂಚ್ಚಿ
ಸಾಂಗದಿಂ ತಾರಾಚಲಕ್ಕೊಯ್ಯೆ ರಾಜಿಸುವ ಮಾನಕಂಜರಿಗೆ ಶರಣು ೨

ಸನ್ನುತಮೆನಲ್ ಸಕಲಗಂಧರ್ವಸಿದ್ಧರತಿ
ಕಿನ್ನರರು ಕಿಂಪುರುಷರಿಂ ಪೂಜೆಗೊಳುತ ಸಂ
ಪನ್ನ ರೇವಣಸಿದ್ಧ ಹಿಮವಂತನಡಿಬರಲ್ಕಿ[3]ತ್ತಲೀ[3] ಮಾಯಿದೇವಿ
ಆನ್ನಾಂಬರಾಂದೋಳಿಕಾಛತ್ರಚಾಮರ ಸ
ಮುನ್ನತದ ರತ್ನಕನಕಾಭರಣಮಾಲ್ಯಂಗ
ಳಂ [4]ನೀಡಿ[4] ಮಾಡುತ್ತ ಜಂಗಮಕೆ ಶಿವಪೂಜೆಯಿಂದ ರಾಜಿಸುತಿರ್ದಳು ೩

---

1 ಗತ (ಕ) ಸಗತ (ಗ) 2 ಪಿಂಗರಿ (ಗ) 3 ತ್ತ (ಗ) 4 ನಿಜ (ಕ)

ಪರಿಪರಿಯ ದಾನಧರ್ಮಂಗಳಿಂ ಖ್ಯಾತಿವಡೆ
ದಿರುತ ಮನದೊಳ್ ರೇವಣೇಶ್ವರನ ಪಾದಪಂ
ಕರುಹಮಂ ಧ್ಯಾನಿಸುತ ನಂದನಾವಾಂಛೆಯೊತ್ತರಿಸಿರುತ್ತಿರಲಮೃತದ
ಶರಧಿಯೊಳು ಸಿರಿಮಾನಸದ ಸರೋವರದೊಳಾ
ವರಮರಾಳಿಯುಂ ಜನಿಸಿದಂತೆ ಮಾಯಾಗರ್ಭ
ದಿರವಿನೊಳ್ ಸಂತೆ ರೇವಣಾಸಿದ್ಧನರಸಿ ಪುಟ್ಟಿದಳು ಜಗವಾನಂದಿಸೆ ೪

ಗೋದಾನ ಭೂದಾನ ಸ್ವರ್ಣದಾನಂಗಳಂ
ಮೋದದಿಂ ಶಿವಭಕ್ತಜನಕಿತ್ತು ನಮಿಸೆಯವ
ರಾದರಣೆಯಿಂ ಪರಕೆಯಿಾಯಲಾ ನಂದನಾಮಣಿ ದಿನದಿನಕ್ಕೆ ನೋಡೆ
ಶೋಧಿಸಿದಯಪರಂಜಿಪುತ್ತಳಿಯ ತೆರದಿ ಬಳೆ
ದಾ ದಿವ್ಯಕನ್ಯೆ ಕಲಿತಳ್ ಕುಶಲವಿದ್ಯಂಗ
ಳೀ ಧರೆಯೊಳೀಕೆಗೆಣೆಗಾಣೆವೆಂದಖಿಳಬುಧರಾನಂದದಿಂ ಪೊಗಳಲು ೫

ಇಂತು ದಶವರ್ಷವಾಗಲ್ಕೀಕೆ ಗೌರಿಯೆಂ
ದಂತಕನೆ ಪತಿಯಿವಳಿಗೆನುತ್ತಂ[ದು] ಮನದೊಳ್
ಚಿಂತಿಸುತೆ ಗುರುಪದವ ಜಾನಿಸುತ್ತಿರಲಂ ಬಳಸದ ಭಾಗ್ಯದಂತೆ ಭೃಂಗಂ
ಮುಂತ ಸವಿಯದ ಪೂವಿನೊಳ್ ಕೀರಗಳ್ ಕದ್ರುಕ
ದಂತೊಪ್ಪುವಿನಿಯಮಾಂಬಣ್ಣೆನಂದದಿ ಮಾಸ
ಲಂ ತವೆಯದಮೃತದಂತಿರ್ದಳಾ ಸಿದ್ಧರಸ ಸರಸಸೌಂದರ್ಯವೆರಸಿ ೬

ಈ ತೆರದೆ ಪೆಣ್ಣು ಕಟ್ಟಾಣಿಮುತ್ತಿನ ಮಣಿಯು
ಸಾತಿಶಯದಿಂದಿರ್ಪ ಸಮಯದೊಳ್ ಭೂನಾಥ
ನಾಥನಹ ವೀರಬಿಜ್ಜಳರಾಯನಾಸ್ಥಾನಕಾ ಮಾಸನೂರೊಳಿರ್ಪ
ನೂತನಾಚಾರಿಯೆಯ್ತಂದರಸ ನೀಂ ಕೇಳು
ಭೂತನಾಥಂ ರೇವಣೇಶನಾ ಹೃದದೊಳತಿ
ಪ್ರೀತಿಯಿಂ ಕೈದನಿರಿಸುತ ಪೋದನದು ಸಿದ್ಧಿಸಲ್ಕಖಿಳಸಿದ್ಧಿಯಹವು ೭

ಎಲೆ ನರಾಧಿಪ ಸುರಗಿಯೆರಡರೊಳಗೊಂದು ಭೂ
ಲಲನಾಧಿಪತಿ ವಿಕ್ರಮಾದಿತ್ಯಗೀಯೆ ಗುರು
ವೊಲವಿನಿಂದಖಿಳಸಂಪದ ವೀರವಿತರಣ ಸುಕೀರ್ತಿಯಿಂ ಧರೆಯನಾಳ್ದಂ

ಸಲೆ ಕೇಳೆನಲ್ಕಾಗ ಮಂತ್ರಿ ಮನ್ನೆಯ ರಾಜ
ಕುಲ ಮಹಾಚತುರಂಗಬಲಸಹಿತ ಮಾಸನೂ
ರಲಘು ಜಲಹ್ರದದೊತ್ತಿನೊಳ್ ಬಂದು ನಿಂದನಾ ವೀರಬಿಜ್ಜಳನೃಪಾಲ ೮

ಪ್ರಾಣಾಪ್ತಮಂತ್ರಿಪ್ರಧಾನರಂ ಕರಸಿ ಸ
ಪ್ರಾಣಸುರಗಿಯನಾವವಿಧದಿಂದ ಬರಿಸಿಯಾಂ
ಪಾಣಿಯೊಳ್ ಪಿಡಿದು ಪ್ರಖ್ಯಾತಿವಡೆಯಲ್ಬಹುದೆನಲು ಸಾಸಿರಸಂಖ್ಯೆಯ
ಡೋಣಿ ನಾವೆಯು ದೊಡ್ಡಹರಿಗೋಲು ತೆಪ್ಪಗಳ
ಮಾಣದೇ ಕೈಕೊಂಡುಯುಂಬಿಗರೊಳಗೆ ಕೆಲರು
ಕೇಣದಿಂದಲಿ ನೋಳ್ಪೆವೆಂದು ಪೋಗಲ್ಕೆ ಶತಕೋಟಿಯೊಲ್ ಘುಡಿಘುಡಿಸಲು ೯

ದಡಬಡನೆ ಮಡುವಿನೊಳ್ ಕೆಡೆದು ಮಡಿಯಲ್ ರಾಯ
ನಡಿಗೆರಗಿ ಮಂತ್ರಿಗಳ್ ಪೇಳಿದರು ಮಂತ್ರಗಳ
ಬೆಡಗರಿದ ಮಂತ್ರಜ್ಞರಿಂ ನೋಳ್ಪುದೆನಲಖಿಳರಂ ಕರಸಿ ಧನಕನಕಮಂ
ಸಡಗರದೊಳೀಯಲವರ್ಕೈತಂದು ಬಹುವಿಧಿಯೊ
ಳೆಡೆವಿಡದೆ ನೋಡಿಯುಗ್ಗಡಮಾಗೆ ನಿಷ್ಪನಂ
ಪೊಡವಿಗಧಿಪಂ ಪೊನ್ನರಾಸಿಗಳ ಮೇಳವಿಸಿ ಸುರಿದು ಚರರಂ ಕರಸುತೆ ೧೦

ಜಾಳಿಜಾಳಿಗೆಯ ಪೊಂಗಳ ದುಕೂಲಂಗಳಂ
ಮೇಳದಿಂದೀವುತೈವತ್ತಾರುದೇಶಂಗ
ಳೋಳಿಯೊಳ್ ಡಂಗುರಂ ಪೊಯ್ಸಿ ನೋಡಲ್ ಕಠಾರಿಯ ತೆಗೆವೆನೆಂಬಾತಗೆ
ಬಾಳಭಾಷೆಯನಿತ್ತು ಕರತಹುದೆನುತ್ತವರ
ನಾಳೋಕಿಸುತ್ತೆ ಕಳುಹಲ್ ದೇಶಗಳ ತಿರುಗಿ
ಪೇಳಲೇನಖಿಳ ಕುಟಿಲದ ಪುಂಜವೆಂಬ ಮಲಯಾಳ ಮಧ್ಯಮನ್ನೆಯ್ದಿ ೧೧

ಅಲ್ಲಿ ಸಾರುತ್ತ ಪೋಗಲ್ಕಂಡು ಖರ್ಪರಂ
ಗೆಲ್ಲಮಂ ವಂಚಿಸದೆ ಪೇಳಲಾ ಕಲಿ ಜೋಗಿ
ಯುಲ್ಲಾಸವೊಂದಿ ಕೊಂಕಣದೇಶದಿಂದೆಯಭಿಮುಖವಾಗಲಾಂದೋಳಮಂ
ಬಲ್ಲಿತಹ ಭೂತಗಳ್ ವಹಿಸಿ ನಿಲೆಯದನುಳಿವು
ತಲ್ಲಧಿಕ ಸಿಂಹಮಂ ಯೇರಿ [1]ಕು[1]ಕಪಾಲಮುತ
ಸಲ್ಲಲಿತ ಮೋಹದಿಂ ಪೊಗಳೆ ಭೂತಪ್ರೇತ ಪೈಶಾಚಗಣ ಸೇವಿಸೆ ೧೨

---

1 ತು (ಗ)

ನೆರೆದಂ ಕಾಪಾಲ ಜೋಗಿಗಳು ಸಾಸಿರಸಂಖ್ಯೆ
ಭರದಿಂದಲಿಕ್ಕೆಲದೊಳೋಲೈಸೆ ಶಾಕಿನಿಯ
ರರರೆ ಡಾಕಿನಿಯರುಂ ಯೋಗಿಣಿಯರಖಿಳ ಜಯಜಯರವದಿಯಾಡಿಪಾಡಿ
ಪೊರೆಯೆ ಬಹುಕುಟಿಲವಿದ್ಯದ ಸೋನೆ ಸೈಗರೆಯೆ
ಶರಶಸ್ತ್ರಕೊತ ಜಲ ವಹ್ನಿವಾಸ್ತಂಭನದೆ
ಯರಿದೆನಿಪ ಜೋಗಿ ಬರೆಯಮಿತ ಸಂಭ್ರಮದಿಂದಲಿತ್ತುವುಡುಗೊರೆವುಚಿತವಂ ೧೩

ಕರೆಸಿದಂ ರಾಯನುಚಿತಾಸನದೊಳವನ ಕು
ಳ್ಳಿರಿಸಿದಂ ಧನಕನಕ ವಸ್ತು ವಾಹನಗಳಂ
ತರಿಸಿದಂ ಖರ್ಪರನ ಮನದಣಿಯಲಿತ್ತು ಸತ್ಕರಿಸಿದಂ ಬಹುವಿಧದೊಳು
ವರಿಸಿದಂ ವೀರಲಕ್ಷ್ಮಿಯ ತೆಗೆವುದೆಂದು ಬಿ
ತ್ತರಿಸಿದಂ ವಿನಯವಚನಗಳಿಂ ಕಠಾರಿಯುಂ
ಬರಿಸೆಮಗೆ ಕೊಡುವುದೆಂದಾ ವೀರಬಿಜ್ಜಳಂ ಹರುಷದಿಂದುಸುರ್ದನಾಗ ೧೪

ಎನೆ ಕುಟಿಲಕೌಶಲ್ಯ ವಿದ್ಯಾಂಬುನಿಧಿಚಂದ್ರ
ಮನದೊಳಗಸಾಧ್ಯಮೆಂದರಿದು ವಚನದೊಳವಂ
ಘನಕಾರ್ಯ ಕೇಳರಸ ಪನ್ನೆರಳ್ಸಾಸಿಗಂ ಕನ್ನೆವೆಣ್ಗಳ ತರಿಸು. ನೀಂ
ಅನುವಿನಿಂ ಕುರಿಕೋಣಗಳ ಮೂರುಲಕ್ಷವಂ
ಕನಲಿ ತಾಂ ಬಲಿಗೊಟ್ಟಡಾಯುಧಂ ತಾನಾಗಿ
ಮನವೊಲ್ದು ನಿನ್ನ ಕೈಸಾರ್ವುದೆನೆ ಕೇಳೀ ತತ್ಕ್ರಿಯೆಯೊಳಂದ್ಯುಕ್ತನಾದಂ ೧೫

ಕಳುಹಿದಂ ಲಕ್ಷಸಂಖ್ಯೆಯ ಚರರನೀಕ್ಷಣಂ
ತಳುವದೇ ತನ್ನ ಪನ್ನೆರಡುಸಾವಿರ ಚೆಲ್ವ
ಯೆಳೆವೆಣ್ಗಳೆಂದು ನಿಯಮವನೀಯೆ ಪೊಡವಿಯಲಿ ಪಿಡಿತಂದು ಸೆರೆಯಿಡಲ್ಕೆ
ಘಳಿಲನೈತಂದು ಮಾತಾಪಿತರ್ ಬಂಧುಜನ
ರಳುತೆದೆಯೊಣಗುತೆ ಬಾಯ್ಬಿಟ್ಟು ಗೋಳಿಡಲದಕೆ
ಮುಳಿದು ಘೂರ್ಣಿಸುತೆ ನೂಂಕಿಸಿದ ಮನ ಮರುಗದಾ ಪಾಪಿ ಪಾಪಕ್ಕಲಸದೆ ೧೬

ನೆಲೆಯಾದ ನಿರಯದೋಕುಳಿಗಧರ್ಮಕ್ಕಳ್ಕ
ದಲೆವ ಲೋಕಾಪವಾದಕೆ ನಾಣ್ಚದಪಕೀರ್ತಿ
ಗೊಲೆದಲೆಯೊಳಾಂತ ಕೌಟಿಲ್ಯಕಾಪಾಲಿಕನ ದೆಸೆಯಿಂದಲೆನುತ ಬುಧರು

ಉಲಿವುತಿರೆ ಪೆಣ್ಮಣಿಗಳಂ ಗಣನೆಗೊಳಲೊರ್ವ
ಲಲನೆ ಪನ್ನೆರಡುಸಾಸಿರ ಸಂಖ್ಯೆಗೆಯ್ದುದಿರೆ
ಚೆಲುವ ರೇವಣಸಿದ್ಧದೇವಿಯುಂ ಚರರು ಪಿಡಿದೊಯ್ವುತಿರೆ ಮಾಯಿದೇವಿ ೧೭

ಇದೆ ಕೆಟ್ಟೆ ಕೆಟ್ಟೆನಯ್ಯಯ್ಯೊ ಹಾಹಾ ಗುರುವೆ
ಸದಮಳನೆನುತ್ತುದರದುರಿಯಿಂದಲುರಿದುರಿದು
ಮುದವಳಿದು ಕಂಬನಿಯ ಕಡಲೊಳಾಳ್ದಳ್ ಮೂರ್ಛೆಯಿಂ ಬಿಳ್ದಳುತ್ತ ಪೊರಳಿ
ಪದುಳದಿಂ ಕಾಯಿ ಕಲ್ಪಾಂತದೂರನೆ ನಿತ್ಯ
ನಿಧಿ ಸಚ್ಚಿದಾನಂದ ಸರ್ವಜ್ಞ ಶಂಭುವೆಂ
ದೊದರಿ ಬಾಯ್ವಿಡೆ ಮೊರೆಯ ಕೇಳ್ದಂ ಹಿಮಾಚಲದೊಳಿರ್ದ ಸಿದ್ಧೇಶನಾಗ ೧೮

ಧ್ಯಾನಪ್ರಸನ್ನನಹ ಜ್ಞಾನನಿಧಿಚಂದಿರಂ
ತಾ ನವ್ಯಭಜಕಚಿಂತಾರತ್ನ ಗುರುವರಂ
ಮಾನಿನಿಗೆ ನೆನಹುಮಾತ್ರದೊಳೊಲಿದು ಪ್ರತ್ಯಕ್ಷವಾಗುತ್ತ [ನಿಂದು] ನೀನಂ
ಏನು ಚಿಂತಿಸಬೇಡವೆನುತ ಕಂಬನಿದೊಡೆದ
ನೂನನಂದನೆಯನೀಕ್ಷಣ ಗೃಹಕೆ [1][ತ][1]ಹೆವೆಂದು
ಭೂನಾಥನಿದ್ದೆಡೆಗೆಯಲರ್ವಟ್ಟೆಯೊಳಗೆಯ್ದಿ ಬರುವದಂ ಕಂಡು ಭೂಪಂ ೧೯

ವರ ಮಕುಟವರ್ಧನರು ಮಂಡಲಾಧಿಪರು ಸಹ
ಭರದಿಂದಲಿಳಿದುಭಯ ಕರಗಳಂ ಶಿರದೊಳಾಂ
ತಿ[ರ]ವಿನಿಂದಭಿವಂದಿಸುತ್ತ ನವರತ್ನಸಿಂಹಾಸನದೊಳಿರಿಸಿ ರಾಯ
ಚರಣಮಂ ತೊಳೆದಧಿಕ ಪೂಜೆಯಂ ಮಾಡಿ ಮ
ದ್ಗುರುವೆ ಮನ್ನಾಥ ಬಿಜಯಂಗೈದ ಕಜ್ಜಮಂ
ಪೊರೆವುದೆಂದಡ್ಡಬಿಳ್ದಂ ವಿನಯಪರನಾಗಿ ಗುರುವಿನಡಿದಾವರೆಯೊಳು ೨೦

ಎಲೆ ರಾಯ ಮರುಳ್ಗೊಂಡೆ ಮರುಳಖರ್ಪರನ ನುಡಿ
ಯೊಲವಿನಿಂ ಕೇಳ್ದು ಪನ್ನೆರಡುಸಾಸಿರದ ಪೆ
ಣ್ಗೊಲೆಗೊಡಂಬಡಬಹುದೆ ದಶಗೋದ ಶದ್ವಿಜರ ನೆರೆ ಕೊಲ್ವ ಪಾಪಕಿಂದ
ಬಲವಂತವೊಂದು ಸ್ತ್ರೀಹತ್ಯೆಯೆನುತಂ ಸ್ಮೃತಿಯು
ವೊಳಗುತಿರೆ ನಿನಗೆ ಪಾಪಂ ಲಭಿಪುದೆಂದು ಮನ
ವೊಲಿದು ಬಂದೆವು ಬಿಡುಬಿಡಾ ಸ್ತ್ರೀಯರನಿಬರೆನೆ ಬಿಡಿಸಿಯಾ ಕನ್ನೆಯರ್ಗೆ ೨೧

1 ಶ (ಕಗ)

ಅರಸಿಯಹ ರೇವಣಾಸಿದ್ಧ ಸತಿಮುಖ್ಯೆರ್ಗೆ
ವರ ವಸನಗಳನಿತ್ತು ತಂತಮ್ಮ ಮಂದಿರಕೆ
ಭರದಿ ಕಳುಹಿಸಿದನಾ ರೇವಣಾಸಿದ್ಧೇಶನಾ ಸತ್ಯವಚನದಿಂದೆ
ಮರಳಿ ಬಿನ್ನೈಸಿದಂ ಗುರುವೆಯಾ ಶಸ್ತ್ರಮಂ
ಕರುಣದಿಂ ಬರಿಸುತೆನ್ನಯ ಕರಕ್ಕಿತ್ತೊಡಾಂ
ಪರಮಸಂಪದದಿ ಪ್ರಖ್ಯಾತಿಯಿಂ ಬಾಳ್ವೆ ಚರಣದ ಕರುಣದಿಂದೆಂದನು · ೨೨

ಲೇಸು ಲೇಸೈ ಸುರಗಿಯಂ ತೆಗೆದುಕೊಡುವೆವು
ಲ್ಲಾಸದಿಂ ಪಿಡಿವ ಪಟುಭಟನಾವ ಜಗದೊಳಿಂ
ದಾ ಸಕಲಸುರವಂದ್ಯ ಶಿವಸಿದ್ಧತಿಲಕನರಸಂ ಕರೆದು ವುಡುಪಂಗಳಂ
ಸಾಸಿರಂ ತರಿಸದರ ಮೇಲಖಿಳ ಭಟರ ಪರಿ
ತೋಷದಿಂ ನಿಲಿಸು ಪ್ರಾಣಾಪ್ತರಂ ಕೂಡಿ ನೀಂ
ಲೇಸಾಗಿ ಬಹುದೆನುತ್ತಾಣತಿಯನಿಟ್ಟು ಮಡುವಿನೊಳು ಥಳಥಳನೆ ನಡೆದಂ ೨೩

ನೀರಮೇಲತಿತೀವ್ರದಿಂ ನಡೆದು ನಿಂದು ಗುರು
ಸಾರೆ ರಾಯನ ಸಮಿಾಪಕೆ ಕರೆದು ನೋಡೆಂದು
ಘೋರೆನುತ್ತಾರ್ಭಡಿಸಿ ಘುಡುಘುಡುಯೆನುತ್ತ ಭೀಕರವಾದ ನಾದದಿಂದ
ತೋರುತಿಹ ಸುರಗಿಯಂ ತೆಗೆದು ಪಿಡಿ ನೀನೆನು
ತ್ತಾ ರಾಜಗಾ ಹೇತಿಯಂ ಕೊಡಲ್ಕತಿವಿಷಮ
ಕ್ರೂರಕಾಳಾಹಿ ಶಿರದೊಳ್ ಭುಸ್ಸೆನಲ್ಕೆ ನೃಪನಳ್ಕಿ ಹಿಂದಕ್ಕೋಡಿದಂ ೨೪

ಯತಿತತಿಗಳರಸ ನಾನೊಲ್ಲೆಯಿಾಯಾಯುಧವ
ಜತನಮಂ ಮಾಡಿ ಜಲದೊಳ್ ಮಡಗಬೇಹುದೆನ
ಲತಿದಯಾವೃತಚಿತ್ತದಿಂ ನಿರೀಕ್ಷಿಸಲಾಗ ಕೈದಿನಾಕಾರಮುಳಿದು
ಸತತಮಿಹ ನಿಜರೂಪಮಂ ತಳೆದು ವಂದಿಸುತೆ
ನುತಿಸಲವನಂ ಕಳುಹೆ ಪೋಗಿಯ[1]ಕ್ಷಿ[1]ಣಿಯೊಳಭಿ
ರತಿಯೊಳಿರಲಿತ್ತರಸನಂ ಕರೆದು ಮನ್ನಿಸುತೆ ನೀಂ ಪೊಳಲ್ಗೆಯ್ದು ಮುದದಿ ೨೫

ಎನಲು ಸಿದ್ಧೇಂದ್ರ ದಯದಿಂದಲೆನ್ನಂ ಪೊರೆಯ
ಲೆನುತ ಬಿಜಯಂಗೆಯ್ದು ಪಾಪೌಘಪಂಕಮಂ
ಜನಿತಶೋಷಣೆಯನೆಸಗಿದಿರಿ ಕರುಣದೊಳೈದಿ ನಿಮ್ಮ ಮಂದಿರವ ಪೊಕ್ಕು

1 ಮೇ (ಕ)

ಘನಕೃಪಾಪಾಂಗದಿಂ ಸಲಹಬೇಕೆನಲವನ
ವಿನಯೋಕ್ತಿಗೊಲಿಯೆ ಮಾವುತರ ಕರಸುತ ರಾಜ
ನೆನುವಿನಿಂದಾ ಗಜೇಂದ್ರನ ಸಕಲಸಂಭ್ರಮದಿ ಸಿಂಗರಿಸಿ ತಹುದೆಂದೆನೆ ೨೬

ಪದೆದು ಮುತ್ತಿನ ಬಲೆಯಂ ತಲೆಯೊಳ್ ಲಲಾಟದ
ಲ್ಲೊದವಿಸುತೆ ಕನಕದ ತಗಡನಮಲ ವಜ್ರಗಳ
ವಿದಿತಮಾದರಳೆಲೆಯನಳವಡಿಸಿ ಚೂಳಿಕೆಯೊಳಾಗ ಮುತ್ತಿನ ಗುದಿಗಳಂ
ವಿಧುವಿನೊಳ್ ಸೂಸಕಂ ನೀಲಗಂಕಣಕತ್ತಿ
ಸದಮಳವಿಷಾಣದೊಳ್ ನವರತ್ನಗಳ ಕೀಲ
ಕದ ಹಾರಮಂ ನಿಲಿಸಿ ಗಂಧಮಾಲ್ಯಂಗಳಿಂದೊಡನಲಂಕರಿಸಿ ಗಜಮಂ ೨೭

ತಂದು ರಾಯನ ಮುಂದೆ ನಿಲಿಸಿ ಬಿನ್ನೈಸಲಾ
ಗಂಧಸಿಂಧುರಮಂ ಬಿಡದಡರ್ವುದೆಂದರಸ
ವಂದಿಸಲ್ಕಾ ಗಜಾರೋಹಣವನಾಚರಿಸೆ ಮಡ್ಡು ಡಿಂಡಿಮ ಜರ್ಝರ
ದುಂದುಭಿಯು ಡಕ್ಕೆ ಡಮರುಗ ಕಹಳೆ ಮೊದಲಾದ
ಚಂದಚಂದದ ಪಲತೆರದ ವಾದ್ಯದತಿರವಂ
ಧಂ ಧಣಂ ಧಣರೆನಲ್ಕಖಿಳ ದಿಕ್ಕುಗಳು ಗುಮ್ಮಿಡೆ ನಡೆದುದಾ ಬಲನಿಧಿ ೨೮

ಮಂಡಲಾಧೀಶ ದಂಡಾಧಿಪರ್ ಶುದ್ಧಮಾ
ರ್ತಾಂಡಕುಲದರಸುಗಳ್ ಮಂಡಳೀಕರ್ ಬಹಳ
ತಂಡತಂಡದಿ ದಂಡಧರರಾಗಿ ಸಿದ್ಧೇಂದ್ರನಭಿಮುಖದಿ ಸಂದಣಿಸುತ
ಮಂಡನದ ಬೀದಿಯಂ ಬಿಡಿಸುತ್ತ ನಡೆಯೆ ವೇ
ತಂಡಘಟೆ ಸಾವಿರಾರುಗಳೀಕಡೆಯಲಿಯು
ದ್ದಂಡಧರತತಿ ಘನ[1]ಪ[1]ರಾತಿಬಲ ಸಕಲಸಂಪರ್ಕದೊಳರಮನೆಗೆ ತಂದಂ ೨೯

ಉರುಸಿಂಹಪೀಠಾಗ್ರದೊಳ್ ಮೂರ್ತಿಗೊಳಿಸಿ ಬಂ
ಧುರದಷ್ಟಷೋಡಶಾರ್ಚನೆಗಳಿಂ ಭಜಿಸಿ ಭಾ
ಸುರದ ದೇವಾನ್ನ ದಿವ್ಯಾನ್ನವಮೃತಾನ್ನಂಗಳೆಡೆಮಾಡೆ ಸಿದ್ಧೇಶ್ವರಂ
ಭರದಿಯಾಲೋಕಿಸಲ್ಕಖಿಳಲಿಂಗಾರ್ಪಣಂ
ವೆರಸಿ ಬಯಲಾಗಲಚ್ಚರಿವಟ್ಟು ರಾಜ ತಾಂ
ಸರಸದಿಂದಡ್ಡಬೀಳಲ್ ಮನ್ನಿಸುತ್ತಾಗ ಪೋಗಿ ಬಹವೆನೆ ಮರುಗುತಂ ೩೦

---

1 ಜ (ಕ)

ಬಡವಂಗೆ ಕಡವರಂ ತೋರಿ ಬಯಲಾದವೊಲ್
ಕಿಡಿಗಣ್ಣ ನೀಂ ಪೋಪೆನೆಂಬುದಲ್ಲಲ್ಲೆನ್ನ
ಲೊಡನೆ ಕರುಣಾಮೃತಾಂಬಕದೆ ನಿಟ್ಟಿಸೆ ಸೊನ್ನೆ ರನ್ನ ಮುತ್ತಿನ ರಾಶಿಯ
ಅಡಿಯಡಿಗೆ ಮಂದಿರದೊಳಂಗಣದೊಳಂ ತೀವಿ
ಯೆಡೆವರಿಯದಿರಲದಂ ನೋಡಿಯಾಂ ನಿಮ್ಮ ಪದ
ಜಡಜಮಂ ಪಿಡಿದು ಭಜಿಸುವ ಭಾಗ್ಯವಿತ್ತಜಸ್ರಂ ಕರುಣದಿಂ ಪೊರೆಯಲು ೩೧

ಮುನ್ನೊಡರ್ಚಿದ ಸುಕೃತದಿಂ ನಿಮ್ಮಡಿಯ ಕಂಡೆ
ಯೆನ್ನ ಸಿರಿಗೆಣೆಯೆ ಶ್ರೀದನ ಶಚೀಶನ ಲಕುಮಿ
ನನ್ನಿಯೆನುತಾ ನರೇಂದ್ರಂ ಸತಿಯನೊಡಗೊಂಡು ಬಿನ್ನಣದಿ ಪೊಡಮಡುತ್ತೆ
ಕನ್ನೆಯಹ ಕಂಬುಕಂಧರೆ ಸುಲಕ್ಷಣೆಯನಿ
ನ್ನನ್ನನುದ್ಧರಿಪ ಕರುಣದೊಳು ಪರಿಣಯಮಾಗಿ
ಮನ್ನಿಸಲ್ಬೇಹುದೆನಲೊಡಬಟ್ಟನಾ ಶಿವನಿರೂಪಣಮಲಂಘ್ಯಯೆನುತೆ ೩೨

ಶಿವಸತ್ಕಥಾಲಾಪೆ ಶೃಂಗಾರರಸಕೂಪೆ
ಸುವಿಶಾಲಗುಣಮಾಲೆ ಶೋಭನಕಳಾಶೀಲೆ
ನವರಸಾಲಂಕಾರೆ ನಾನಾಕಳಾಕಾರೆ ಕವಿಜನನಂತಾವತಾರೆ
ನವಲಿಂಗಸಂಗಿ ನೂತ್ನಾಂಗಿ ಹೆಂಗಳ ರನ್ನೆ
ಭುವಿಯೊಳೀ ರೇವಣೇಶಂಗಿವಳೆ ಯೆಣೆಯೆನುತ
ಸವಿಶೇಷದಿಂ ಸುಲಕ್ಷಣೆಯ ಕೊಂಡಾಡಿದರ್ ಸರ್ವರಾನಂದಮುದಿಸೆ ೩೩

ಇಂತು ಕೊಂಡಾಡೆ ನವಯೌವನದ ಲಜ್ಜೆಯಂ
ತಾಂ ತಳೆದು ಮಂದಗತಿ ಮಂದಹಾಸಮ ನೋಟ
ಮಂತಾದ ಲಾಂಛನದೊಳಿರೆ ನೋಡಿ ರಾಜಂ ಪ್ರಧಾನರಂ ಕರೆಸಿ ಪೇಳ್ದಂ
ಕಂತುಹರನವತಾರ ಶ್ರೀಸಿದ್ಧ ಶಿವಲಿಂಗ
ನಿಂತೀ ತಳೋದರಿಯ ಪರಿಣಯ[ಂ]ಮಾಳ್ಕುಂ[1][ಸ
ಮಂ][1]ತಖಿಳ ಸನ್ನಹಂ ಮಂಗಲ ಸುಮಂಟಪವನನುಗೈವುದೆನೆ ನಲಿವುತ ೩೪

ಕರೆಸುತೀ ದೇಶಾಧಿಪತಿಗಳನವರ್ಗೆ ಬಿ
ತ್ತರಿಸಿದಂ ಮಿಗೆ ನಿಂದುವೊಂದೊಂದರದ್ದುಕದೊ
ಳರೆಮರೆಗಳಿಲ್ಲದಿಹುದೆಂದು ನೇಮಿಸುತೆಯುಡುಗೊರೆಯನೀವುತೆ ಶಿಲ್ಪಿಯಂ

---

1 ಗು।ಸಂತ (ಕ) ಗು।ಸಮ್ಮತ (ಗ)

ಭರದಿಂದೊಡರ್ಚಿ ಮಂಟಪವನೆನಲಾಗ ಸಿಂ
ಗರಿಸಿದಂ ಜಗಕೆ ಪ್ರಖ್ಯಾತವಾಗಲ್ಕಾಂತಿ
ಸುರಪಥವನಳ್ಕಿರಿವುತಿರೆ ನೋಡಿ ಸಬ್ಬರಾನಂದಿಸಿದರೇವೇಳ್ವೆನು ೩೫

ಹರಿಮಣಿಯ ನೆಲಗಟ್ಟು ವಿದ್ರುಮದ ವೇದಿಕೆಯು
ಪರಿಮಿತದ ಭಿತ್ತಿ ಚಂದ್ರೋಪಲದ ಬಜ್ಜರದೊ
ಳುರಿವ ಕಂಭವು ಬೋದಿಗೆಯು ನೀಲಮುಕ್ತಾಕವಾಟ ಸ್ವರ್ಣದ ಲೋವೆಯು
ತರತರದ ರನ್ನದರಳೆಲೆ ಘಂಟೆ ನವರತ್ನ
ಮಿರದೆ ತೆತ್ತಿಸಿದ ಕಳಶಗಳ ಮಂಡಲಮಿವರ
ಕಿರಣ ಶೋಭಿಸೆ ಮಹಾಪರಿಣಯದ ಮಂಟಪಂ ನೋಳ್ಪರ್ಗೆ ರಮ್ಯಮಾಯ್ತು ೩೬

ಬಳಸಿದೈನೂರು ಪಚ್ಚೆಗಳ ಕಂಭಂಗಳೊಳ
ಗಳವಡಿಸಿದೆಳೆಸೊನ್ನೆ ಸಾವಿರಗಳಗ್ರದೊಳ್
ಪೊಳೆವ ರತ್ನಾಂಬರವಿಚಿತ್ರಾಂಬರ ಸ್ವರ್ಣಚೇಲದ ವಿತಾನದಿಂದ
ಲಲಿತಚತುರಸ್ರಕೊಂದೊಂದು ಪರಿಯಿಂ ರಚಿಸಿ
ಸುಳಿದು ಸುತ್ತಿದ ಪಚ್ಚೆಯಿಂದ ಝಲ್ಲಿಗಳಿಂದ
ತಳುಕಿಡುವ ಮುತ್ತಿನುರುಮಾಲೆಗಳ ಗುಚ್ಛಿನಿಂ ಪರಿಶೋಭಿಸಿತು ಚಪ್ಪರಂ ೩೭

ವಿದ್ರುಮದ ವೇದಿಕೆಯ ಮೇಲೆ ಮುತ್ತಿನ ಹಸೆಯ
ಸದ್ರುಮಾಕಾರದೆಳವೆಣ್ಗಳತಿನೂತ್ನದಿಂ
ತದ್ರುಚನಮಂಗೈವುತಾ ಮಂಗಳಸ್ನಾನಮಂ ರಚಿಸುತಾನಂದದಿ
ವಿದ್ರುಮದ ಲತೆಯಂತೆಸೆವ ವರಸುತೆಗೆ ವೀರ
ಮುದ್ರಿಕಾದ್ಯಾಭರಣಮಂ ತೊಡಿಸಿ ಪಸದನಂ
ಸದ್ರುಚಿರಮಪ್ಪವೋಲೆಸಗೆ ರಾಯಗೆ ಪೇಳೆ ನೋಡಿಯಾನಂದಿಸುತ್ತೆ ೩೮

ಆ ರಾಜನಧಿಕಭಕ್ತಿಯೊಳು ಭಕ್ತರ್ಗೊಡು
ತಾ ರಾಜಶೇಖರನ ಮೂರ್ತಿಗೆ ವಿಳಾಸಮಂ
ತಾ ರಜನಿವೆರೆದ ನವಗಂಧತೈಲವನಷ್ಟಶಿಖೆಗಳಂ ಪ್ರತ್ಯೇಕಿಸೆ
ಗೌರವಾಭ್ಯಂಗನಂಗೈವುತಿರೆ ವಾದ್ಯರವ
ಭೋರಿಡಲ್ ಸೀಮಂತಿನೀಜನಂ ಸಿಂಗರಿಸಿ
ಯಾರಾಧ್ಯಗಭಿಷೇಚನಂಗೈದರಾಗ ಪರಿಮಳಮಿಳಿತಜಳದಿಂದಲು ೩೯

ಮಂಗಳಶಿರೋಮಧ್ಯ ರಂಗತ್ತರಂಗ ಚಿ
ದ್ಗಂಗೆ ಜಾಂಬೂನದದ ಘಟದೊಳತಿವೇಗದಿಂ
ಗಂಗೆಯಂ ತಂದು ಶರಣಸತಿಯರು ಮಜ್ಜನಂಗೈಸಿ[ದರು] ಪರಮೇಶನ
ಪಿಂಗಳಜಟಾಮೂಲಕಭಿಷೇಕಮಂ ಮಾಳ್ಪ
ಪಾಂಗಿನಿಂ ಶಿವಸಿದ್ಧಲಿಂಗಂಗೆ ಯತಿಜನೋ
ತ್ತುಂಗಂಗೆ ಮಂಗಲಾಂಗಿಯರು ಮಡಿಪಾವುಡದೊಳೊತ್ತಿ ಧೂಪೈಸಲಾಗ ೪೦

ಕೊರಳಿನಲಿ ಪೊಸತಾದ ಕಸ್ತೂರಿ ಜವಾದಿಯಂ
ಮೆರೆವ ಕರ್ಣದೊಳು ಪುನುಗಂ ಪೂಸಿ ಮಲಯಜದ
ಪರಗಂಧಮಂ ಲೇಪಿಸುತ್ತೆ ಪೊಂಬಟ್ಟೆಯಂ ಪೊದಿಸಿ ನವರತ್ನಖಚಿತ
ವರ ಕಿರೀಟವ ಧರಿಸಿ ರತ್ನಕುಂಡಲಕಟಕ
ಚಿರಹಾರ ಪದಕ ಮಂಜೀರ ಮುದ್ರಿಕೆಗಳಂ
ಪರಿಪರಿಯ ವೀರಬಿಜ್ಜಳನಲಂಕರಿಸಿದಂ ಶಿವಸಿದ್ಧಯತಿತಿಲಕನಂ ೪೧

ಚೀನಿ ಚೀನಾಂಬರವನುಡಿಸಿ ಪೊಸಮುತ್ತಿನ ವಿ
ತಾನದಿಂ ಮೆರೆವ ಭೂಷಣಗಳಂ ತೊಡಿಸಿ ಜನ
ರಾನಂದಿಸಲು ಸಕಲದಿಕ್ಕುಗಳ ಮಘಮಘಿಪ ಸಿರಿಗಂಧಮಂ ಲೇಪಿಸಿ
ಸ್ನಾನದಿಂ ಪರಿಶುದ್ಧಳಾದಾ ಸುಲಕ್ಷಣೆಯ
ಮಾನಿನಿಯರೊಡನೆ ಮಂಗಳವೇದಿಕೆಗೆ ತಂದು
ಸಾನುರಾಗದಲಿ ಮಂಗಲಪೀಠದಲ್ಲಿ ರೇವಣಗುರುವಿನೆಡದೊಳಿರಿಸಿ ೪೨

ಪಾಡಿದರ್ ನಿಟ್ಟೈರೆಯರ್ ಸುಶೋಭನಗಳೊಡ
ನಾಡಿದರ್ ನಚ್ಚಣಿಯರಭಿನಮಿಸಿ ವಾದ್ಯರವ
ಮಾಡಿದವು ದೆಶೆದೆಶೆಗಳಲ್ಲಿ ಮಿಗೆ ಶಿವಭಕ್ತರುಘೆಯುಘೆ ಎನುತ್ತ ನಲಿದಂ
ಹಾಡಿದರ್ ಗಾಯಕರ್ ಮಾಗಧರ್ ಬಿಡದೆ ಕೊಂ
ಡಾಡಿದರು ರೇವಣೇಶನ ಮಹಿಮೆಯಂ ನೃಪರು
ನೋಡುತಿರೆ ಮುದದಿಂದ ರನ್ನಮಣೆಯಗ್ರದೊಳ್ ನಿಲಿಸಿದರು ಶಿವಮೂರ್ತಿಯಂ ೪೩

ಮಂಗಳಗೆ ಶುಭವಾರಮೇ ಗುರುಕೃಪಾದೃಷ್ಟಿ
ಲಿಂಗದರ್ಶನವೆ ಶುಭನಕ್ಷತ್ರ ಚಂದ್ರಬಲ
ಜಂಗಮದ ಸುಜ್ಞಾನಬೋಧೋಪಶಾಂತಿ ಶೇಷೋಪಯೋಗಮೆ ಯೋಗವು

ತುಂಗಚಿತ್ಪಾದಾಂಬುದೀಕ್ಷಾಜಲಂ ಕರಣ
ಪಿಂಗದಿಹ ಪಂಚಾಂಗ ಗಣಪರ್ವ ಹವನಮಂ
ದಂಗವಿಸಿ ಶೇಷೆಯಿಡುತಧಿಕ ಕಲ್ಯಾಣಮೆಸಗುತೆ ಸುತೆಯನಿತ್ತು ನಮಿಸಿ ೪೪

ನುತವಾದ ಮೆರವಣಿಗೆ ನಾಗವಲ್ಲಿಯಂ ಮತ್ತ
ಮಿತವಾದ ಕ್ರಿಯೆಗಳಂ ಸಂಪೂರ್ಣಮಂ ಮಾಡು
ತತಿಶಯದ ರಾಜಮಂದಿರಕೆ ಮುಮ್ಮಡಿ ನವೀನಾವಾಸಮಿತ್ತು ಧರೆಯ
ಸುತೆಯರ ಶಿರೋರತ್ನಮೆನಿಪ ಮಂಗಳಂ ಜಗ
ನ್ನುತ ಸಿದ್ಧದೇಶಿಕನೆನಿಪ್ಪ ಜಾಮಾತನಂ
ದತಿಶಯದೆಯೊಡಗೊಂಡು ಪೋಗಿ ಸ್ಥಾಪಿಸುತೆ ಬಳುವಳಿಯುಪಾಯನವನಿತ್ತು ೪೫

ದಶಲಕ್ಷದೇಶಮಂ ಸಾವಿರಕುದುರೆಗಳಂ
ದಶದಶಸುಕರಿಗಳಂ ದಶಹೇಮರಥಗಳಂ
ದಶದಶಸಹಸ್ರ ಸುಪದಾತಿಯಂ ಪಂಚದಶಶತಕನ್ಯಕಾಬೃಂದಮಂ
ದಶರತ್ನಪೆಟ್ಟಿಯಂ ಚತುರಂತಯಾನಮಂ
ದಶಹೇಮಮಂಚಮಂ ರತ್ನಚಾಮರಗಳಂ
ದಶಾಧಿಕದಿವ್ಯಹೇಮಮಯ ಮುಕುರಾದಿ ಸದನೋಪಕರ[1][ಣಂಗಳಿ][1]ತ್ತಂ ೪೬

ರಾಜ ಖಗರಾಜೇಂದ್ರ ರಾಜ ಪಂಚಾಸ್ಯ ನೀ
ನೀ ಜಗದೊಳಲಘುತರರಿಪುರಾಜರಂ ಜಯಿಸಿ
ಯಾಜಿಯೊಳ್ ಸ್ಮೃತಿಶಾಸ್ತ್ರನೀತಿಯಂ ತಪ್ಪದೇ ದೇವಸ್ವ ಬ್ರಹ್ಮಸ್ವಮಂ
ಮಾಜದೇ ದೇಶಧರ್ಮದ ಬಳ್ಳಿಯಂ ಬಳಸಿ
ನೈಜದಿಂ ಸಲಹೆನುತ್ತಾದ್ಯಂತರಹಿತನಾ
ಮೂಜಗದ ಗುರು ಪರಸಿ ಕಳುಹಲ್ಕೆ ರಾಜ ರಾಜಾಲಯಂ ತಾಂ ಪೊಕ್ಕನು ೪೭

ನುತಕೀರ್ತಿಯುಹ ರೇವಣಾಚಾರ್ಯ ನಿಜಶಿಷ್ಯ
ವಿತತಿ ಭೂಪಾಲಪುಂಗವ ಬುಧರ ಬೃಂದದಿಂ
ಸತತ ಶಿವಶಾಸ್ತ್ರಲೀಲಾಗೋಷ್ಠಿಯಿಂದ ಬಿಜ್ಜಳರಾಯನಣುಗಿಯಿಂದ
ಸತತ ಶಿವಪೂಜೆಯಿಂದಮರರಿಂಗಧಿಕ ಸುಖ
ತತಿಯುನನುಭವಿಸುತ್ತ ಸಕಲಶರಣರ್ಕಳಂ
ಸುತರಂತೆ ಕಂಡು ಪೋಷಿಸುತ [2]ಭು[2]ಕ್ತಿಯ ಮುಕ್ತಿಯಂ ಕೊಡುತೊಪ್ಪಿರ್ದನು ೪೮

---

1 ಣಮಿ (ಕಗ) 2 ಭ (ಗ)

# ಆರನೆಯ ಸಂಧಿ

ಸೂಚನೆ :

ಚಂದ್ರಿಕಾಕೀರ್ತಿಯಹ ರೇವಣೇಶ್ವರನು ರಾ
ಜೇಂದ್ರಮುಖಿ ರಾಜಸುತೆಯರ ಮದುವೆಯಾಗಿ ಶೈ
ವೇಂದ್ರನಹ ರುದ್ರಮುನಿಯೆನಿಪ ಪುತ್ರನ ಪಡೆದು ಸೈಪಿನಿಂದೆಸೆದಿರ್ದನು

ಚಿತ್ಕಾಂತಿಶೀಲ ಕಾಮಕ್ರೋಧರಹಿತ ಮುನಿ
ಹೃತ್ಕಂಜಲೋ[1]ಭ[1]ಭ್ರಮದ್ಭ್ರಮರ ತುಹಿನಭೂ
ಭೃತ್ಕನ್ಯಕಾ ರಸಾಪಾಂಗಪೀಯೂಷ ಸರಸೀವಿಹಾರಕ ಮರಾಳ
ಉತ್ಪಲಾಹಿತ ನಿಶಾಕರಧ[2]ವಂ[2] ಜಯನ[3]ಯ[3]ನ
ಸತ್ಪ್ರಣಸ ಪಣಿತ ನಿಜವೀರ್ಯವೀರ್ಯಂ ಶಿ[4]ವ[4]ಸ
ಮುತ್ಪಾದಿತಸ್ಕಂದರಕ್ಷಿತಾಮರಲೋಕ ಮಾಂ ಪಾಹಿ ಚನ್ನಮಲ್ಲ ೧

ಪನ್ನಗಾಭರಣಸಾ ಗಣಪತಿಯ ಭವನಕ್ಕೆ
ಕನ್ನವಿಕ್ಕುತ ಲಕ್ಷಕನಕ ಮೌಕ್ತಿಕರನ್ನ
ದುನ್ನತದ ನಗಗಳಂ ಕದ್ದು ನಮ್ಮನು ಸಲಹಬೇಕೆಂದು ಮರೆಯೊಗಲ್ಕೆ
ಸನ್ನಿಯಿಂ ಪಿಡಿಯೆ ಕಳ್ಳರನೀಯೆದಿರೆ ರಾಯ
ಮನ್ನಿಸದೆ ಶೂಲವೇರುವದೆನಲೊಡಂಬಟ್ಟು
ಕನ್ನಗಳ್ಳರನುಳುಹಿ ಶೂಲವೇರಿದ ಗುಂಡಬ್ರಹ್ಮಯ್ಯಗಳಿಗೆರಗುವೆಂ ೨

ಇಂತು ಕತಿಪಯದಿನ ಸುಲಕ್ಷಣಾದೇವಿಯೊಡ
ನಂತವಿಲ್ಲದ ವಿಷಯಭೋಗಂಗಳನುಭವಿಸು
ತಂ ತರುಣರೂಪದಿಂ ನೃತ್ಯ ಗೀತಾದಿ ನಾನಾರಸವಿನೋದದಿಂದ
ಯಂತಕಾಂತಕಮೂರ್ತಿಯಿಪ್ಪ ತೆರನಂ ಕೇಳಿ
ತಿಂತಿಣಿಪ ವಿನಿಯೋಗವೆರಸಿಯೊಡ್ಡೋಲಗದೊ
ಳಂತು ರಾಜಿಸಂತಖಿಳಸಾಮ್ರಾಜ್ಯಸಂಪದದೊಳಿರಲಿತ್ತ ಚೋಳಭೂಪಂ ೩

ಮಂಗಳಾತ್ಮಕನು ಶ್ರೀಗುರು ಪದಾಂಬುಜಯುಗ್ಮ
ಭೃಂಗಮದಕೋಲಶೂಲಂ ಜಂಗಮಾಸಕ್ತ
ತುಂಗಭಕ್ತನಂ ಲಿಂಗಮಾನಸೈಕ್ಯಂ ಪರಸ್ತ್ರೀಜನಾಲಿಂಗರಹಿತಂ

---

1 ಧ (ಕ) 2 ನಂ (ಕ) 3 ಮ (ಕ) 4 ಕ (ಕ)

ಭಂಗವಿಲ್ಲದ ಧವಳಕೀರ್ತಿ ಧವಳಿತದಿಶಂ
ಪಿಂಗದನವರತ ರಿಪುರಾಜಗಿರಿವಜ್ರಭೂ
ಲಿಂಗ ಕುಲತಿಲಕ ರಾಜೇಂದ್ರಚೋಳಾಧೀಶನೊಪ್ಪಿರ್ದನಾನಂದ[1][ದಿಂ][1] ೪

ಇಂತು ರಾಜೇಂದ್ರನೆಂಬಭಿಧಾನ ತನಗೆ ಮು
ನ್ನಿಂತು ಲಭಿಸಿತ್ತೆನಲ್ ಪಾಂಡ್ಯ ಚೇರಮ ಚೋಳ
ರಂತು ತಂಜಾನಗರಿ ಮಧುರಾ ಮಹೋದಧಿ ಪುರತ್ರಯಂದೊಳಿರುತ ಮುಂದದಿಂ
ಕಂತುಹರನಿಷ್ಠೆಯಂ ಖೇಚರತ್ವಮನಾಂತ
ನಂತಭುವನಂಗಳಂ ಪೊಗಂತ ಮನ್ನಣೆಬಡೆದು
ಮುಂತೆ ಪೊನ್ನಾಂಬಲಂ ಕೈಲಾಸಮೆಂದು ಪ್ರತಿದಿನಮೆಯ್ದಿ ಭಜಿಸುತವರು ೫

ಒಂದುದಿನ ಬಿನದದಿಂ ಪಾಂಡ್ಯ ಚೇರಮಂ ಚೋಳ
ರಂದವಹ ಹಂಸ ಗರುಡಾಶ್ವಜವಕಧಿಕತರ
ಗಂಧರ್ವಗಳನೇರಿಯಮರಪುರಕೈದಿ ಮಘವಂತಂಗೆ ಕೈಮುಗಿಯದೆ
ಸಂದಣಿಸಿ ಸಿಂಹವಿಷ್ಟರದಲ್ಲಿ ಸಮಭಾವ
ಮೊಂದಿ ಕುಳಿತವರು ಚದುರಂಗದಾಟವನಾಡು
ತಂದವರುಗೇ ಪುರಕೆ ಖತಿಗೊಂಡನಾ ಪುರಂದರನಧಿಕ ಮೂಢತ್ವದಿಂ ೬

ಮನುಜಲೋಕದ ರಾಜನೆಮಗೆ ತುಳಿಲ್ಗೆಯ್ಯದೇ
ಘನ ಗರ್ವದಿಂ ತಿರುಗಿ ಪೋದರಾ ಗಬ್ಬಕ್ಕೆ
ಯನುವಿದೆಂದೆನುತೆ ತನ್ನುರುರತ್ನಗೋಪುರದ ಮೇಲೆ ಪಾವುಗೆ ಕಟ್ಟಿಸೆ
ವಿನಯದಿಂದವರಿಲ್ಲಿ ಬರಲದೇ ಶರಣೆನಂತ
ಕನಸಿಲ್ಲದವರೆರೆಯನಿರೆಯವರ ತೇಜಿಗಳ
ಘನಮಾರ್ಗದಿಂದದರ ಮೇಲೆ ನೆಗೆಸುತ ಬರ್ಪ ಚತುರತೆಯನೇವೇಳ್ವೆನು ೭

ಚಲುವ ಕುದುರೆಗಳನಾ ವೇಳೆಯೊಳ್ ವಿಷ್ಟಂಭ
ಲಲಿತ ಚತುರಂಗಗತಿ ಗಮಕದಿಂ ಕೈವಿಡಿವು
ತಲಘು ಸಂಪರಿಭ್ರಮಣಗತಿ ವಲ್ಗಿತಂ ಪುಲಾಯಿತಮೆಂದೆನಿಸುವ ಪಂಚ
ಲಲಿತಗತಿಗಳನಲರ್ವಟ್ಟೆಯೊಳ್ ತೋರುತ್ತ
ಅಳಿಕಾಕ್ಷಭಕ್ತರಾಸ್ಥಾನಕ್ಕೆ ಬರಲಿಂದ್ರ
ಮುಳಿವುತುಚಿತೋಕ್ತಿಗಳನವರ ಕಳುಪುತೆ ಖೇದವ್ಯೈದಿದಂ ವೃದ್ಧಶ್ರವಂ ೮

---

1 ದಿಂದಂ (ಕಗ)

ಕರೆದು ಸಂವರ್ತಕಮುಂಖಾಶೇಷ ಜೀಮೂತ
ವರರ ಕರೆಯಿಸಿ ನೀವು ಕೇಳಿ ಮೂರರಸುಗಳ
ಭರಿತ ಕೇರಳ ಪಾಂಡ್ಯ ಚೋಳದೇಶಕ್ಕೆ ಮಳೆಗರೆಯಬೇಡೆನುತ ಪೇಳೆ
ಸುರಪನಾಣತಿಯಿನ[1]ಷ್ಮೀಶ[1]ಯಂ ಜಲಧಾರೆ
ಗರೆಯದಿರೆ ರಾಜರತಿವೇಗದಿಂ ದಂಡೆತ್ತಿ
ಭರದಿ ಸ್ವರ್ಗಕೆ ಪೋಗಿ ನಕ್ಷತ್ರಗಳ ತಂದು ಸೆರೆಯಿಡಲ್ ಶಚಿವಲ್ಲಭಂ ೯

ಕಳಲಿ ಘುಡುಘುಡಿಸಿ ಚೌದಂತನನಡರ್ದು ಮ
ತ್ತಲಘುತರ ವಜ್ರಾಯುಧಂಗೊಂಡು ದೇವತಾ
ಬಲಜಲಧಿಯಂ ಕೂಡಿ ಭೂಲೋಕಕಿಳಿದು ಫಣಿರಾಟ್ ಶಿರಂ ಕಂಪಿಪಂತೆ
ಒಲವಿನಿಂ ದಂಡಿಳಿಯೆ ಕೇಳಿ ರಾಯರು ನಲಿದು
ಘುಳಿಲನೇ ಸೈನ್ಯದೊಡಗೂಡಿ ಬರಲೆರಡುಪಡೆ
ಸಲೆ ಕೂಡಿ ತುಮುಲಯುದ್ಧಮದಾಗೆ ಸುರಸೇನೆ ಮುರಿಯಿತದನೇವೇಳ್ವೆನು ೧೦

ಭಂಗವಾದುದು ಸದಾಲಜ್ಜೆ ಪಿಂಗದುಯೆನ[2]ಗೆ
ಎಂದಂ[2]ಗಜಾರಿಯ ಪದಾಬ್ಜಮಂ ಸಂಸ್ಮರಿಸು
ತಾಂಗಿರಸನಂಗೈಸಿ ಕರೆದು ಸಂಧಿಯನೆಸಗಬೇಹುದಲ್ಲದೊಡೆ ಸ್ವರ್ಗಂ
ಸಂಗಮದು ಸುಡುಸುಡು ಗುರುವೆ ಕೇಳೆನಲ್ ನಗುತ
ಲಿಂಗಶರಣರ ಯುದ್ಧ ಬೇಡವೆನಲೆಲೆ ಸುರಪ
ಅಂಗವಿಸಿಯಿಂತಹರೆ ನಡೆಯೆನುತ್ತಾಗ ಶರಣೆನಿಸಿದಂ ಶಿಷ್ಯನಿಂದೆ ೧೧

ಅರಿಲುಗಳ ಸೆರೆವಿಡಿಸಿಯುಡುಗೊರೆಯನಾಂತತುಳ
ಸರಸ ಸಂಭಾಷಣೆಯನೆಸಗಿ ಜೀವಂ ಸಹಿತೆ
ಸುರಪುರಿಯ ಪೊಕ್ಕು ಸುಖಮಿರುತೆ ಕೆಲದಿನದಮೇಲತಿ ಕುಟಿಲದಿಂದಿಂದ್ರನು
ಭರದಿ ಸಾರಥಿಯಾದ ಮಾತಳಿಯ ಕರೆದು ನೀಂ
ನರಲೋಕಕ್ಕೈದಿ ಚೇರಮ ಚೋಳ ಪಾಂಡ್ಯರ
ಗ್ರಿರದೆ ಸೈಗೆಡೆದು ಕರತಹುದೆಂದು ಕಳುಹಿ ಬರಲವನ ಮನ್ನಿಸುತಲಟ್ಟಿ ೧೨

[3]ವ[3]ಲ್ಗಿ ತಕುರಂಗಗಳ ಪಿಡಿದಿಡುವ ತೀಡುತತಿ
ಬಲ್ಗಂಪ ವಹಿಸಿದ ಪವನನ ಪರಿಭವಿಸುವ ಬಿ
ಸಿಲ್ಗುದುರೆಗಳ ಜವವ ಹಿಳಿವ ಸಪ್ತಾಶ್ವನ ರಥಾಶ್ವಗತಿಗಳ ನಿಲಿಸುವ

---

1 ಟ್ಟಿತ್ರ (ಕ) 2 ಗಂ।ದಂ (ಕಗ) 3 ತ (ಗ)

ಬಲ್ಗಮಕ ಗಾಢತುರಗಗಳೇರಿಬರದೆಲ್ಲಿಯು
ತಲ್ಗಣಂಗೊಳುತಿರೆ ಸುರಾಧಿಪನಲಂಕರಿಸು
ಪಲ್ಗಿದಿರ್ವಂದಂ ಶರಣೆಂದು ತಳ್ಕೈಸಿ ಕುಳ್ಳಿರಿಸುತ್ತ ವಿಷ್ಟರದೊಳು ೧೩

ಮತ್ತೊರ್ವ ನರಸುರರ್ ಧರಿಸಲಳವಲ್ಲದಾ
ಉತ್ತಮೋತ್ತಮಂ ಹೀರಹಾರಮಂ ಸ್ವರ್ಗೇಂದ್ರ
ನತ್ಯಧಿಕ ಚೋಳಾದಿಗಳ್ಗೆ ಧರಿಸಲ್ಕವರ ಕಂಠದೊಳ್ ಝಗಝಗಿಸಂತೆ
ಬಿತ್ತರದಿ ಕಾಂತಿ ವಿಸಟಂಬರಿವ ಹಾರಗಳ
ಮೊತ್ತದಿಂ ತನ್ನ ಸಂಪದವ ಪಳಿವವರ ಸಿರಿ
ಸುತ್ತಿರಲ್ ಕಂಡು ಭಯದಿಂ ತನ್ನ ಮನದ ಕಾಪಟ್ಯಮಂ ವಿವರಿಸಿದನು ೧೪

ಮೇಲೆ ಸುರಶ್ರೇಷ್ಠ ಕೇಳ್ಕೆಯೇಕರುದ್ರನೆಂ
ದುಲಿಯೆ ಹರನ[1]ಲ್ಲಿ ಧ[1]ನ್ಯರ್ಗೆರಗೆ ಪನ್ನ ಸುರ
ಕುಲದಿಂದ ಮಿಕ್ಕಪ್ರಸಾದ ನಿರ್ಮಾಲ್ಯ ಸುಮಗಂಧ ತಾಂಬೂಲವಸ್ತ್ರಂ
ಲಲಿತರೂಪಾಭರಣಗಳ ಮುಟ್ಟೆವೀ ಸ್ಥಿತಿಯ
ನಳಿಕಾಕ್ಷ ಬಲ್ಲನೆಂದಾ ರಾಜರವಿವಂಶ
ಕುಲತಿಲಕ ರಾಜರಾಜಿತ ಮಕುಟಮಾಣಿಕ್ಯ ನವಚೋಳ ಪೇ[2]ಳೆ ನ[2]ಲಿದು ೧೫

ಶತಮನ್ಯುಪತಿನೂತ್ನಮೆಂದು ವಿನಯೋಕ್ತಿಯಿಂ
ನುತಿಸಿದಂ ದೇವತತಿಯಲ್ಲಿ ದಿವಿಜೇಂದ್ರತ್ವ
ಕಿತರಮೇನಿಲ್ಲದಂದದಲಿ ರಾಜರೊಳು ರಾಜೇಂದ್ರತ್ವ ನಿನಗಲ್ಲದೆ
ಕ್ಷಿತಿಯೊಳಿನ್ನಿಲ್ಲವೆಂದಮರಕುಜ ಸುರಧೇನು
ತತಿ ದೇವರತ್ನ ಹರಿಹಯನಾಗ ಮೊದಲಾಗಿ
ಅತಿಶಯದ ವಸ್ತುಗಳ ಭಕ್ತಿಯಿಂದಿತ್ತು ಬೀಳ್ಕೊಟ್ಟನತಿಸಂಭ್ರಮದೊಳು ೧೬

ಆಕಾಶದೊಳ್ ಸುರಪನಾಚಾರ್ಯನಹ ಸತ್ಕ
ಲಾಕಮಲ ಬೃಂದರವಿಯಾದ ವಿದ್ಯಾಂಬುನಿಧಿ
ರಾಕೇಂದುವಾದ ವಾಚಸ್ಪತಿಯನಾನಂದದಿಂ ಕರೆದು ಗುರುವೆ ನಮ್ಮ
ಲೋಕಕ್ಕೆಯ್ದುವದೆಂದು ಬೇಡಿದರೊಡಂಬಡದೆ
ಜೋಕೆಯಿಂ ತಂತಮ್ಮ ಪುರಗಳಂ ಪೊಗುತಲಾ
ನೇಕ ಸೊಗಸಿಂದೆ ಚಾರಮ ಪಾಂಡ್ಯ ರಾಜೇಂದ್ರಚೋಳರೊಪ್ಪುತ್ತಿರ್ದರು ೧೭

---

1 ಳಿದ (ಕ) 2 ಳುವೊ (ಗ)

ವಿಕ್ರಮ ಸುಚೋಳರಾಯನ ಸೊಸೆಯು ಶಿವಧರ್ಮ
ವಿಕ್ರಯಂಗೊಂಡ ರಾಜೇಂದ್ರಸತಿ ವಿಮಲ ಭೂ.
ಚಕ್ರದೊಳ್ ಸತಿಯರ್ಗೆ ತಲೆವಣಿಯೆನಿಪ್ಪ ಕುಲಶೇಖರೀದೇವಿ ಹರನ
ವಿಕ್ರಮದ ಸೇವೆಯೊಲವಾಂತು ಮಗಳಂ ಪಡೆದು
ವಕ್ರವಿಲ್ಲದೆ ಕನಕ ದಾನಾದಿ ದಾನಗಳು
ಪಕ್ರಮಿಸಿ ಸುತೆಗೆ ಸೌಂದರಿಯೆಂಬ ನಾಮಕರಣವನೆಸಗಿದರ್ ಮುದದೊಳು ೧೮

ಎಳಮಿಂಚು ಬೆಳೆದಂ ಥಳಥಳಿಪಂತೆ ಕಲ್ಪಕುಜ
ನಳನಳಿಸಿ ಬೆಳೆವಂತೆ ಗೀರ್ವಾಣಲತೆ ಗುಡಿಯು
ಕಳೆಯೇರಿ ವರ್ಧಿಪೊಲ್ ಮರಿಯಂಚೆ ಮಾನಸಸರೋವರದೊಳತಿವರ್ಧನಂ
ತಳೆವ ಪಾಂಗಿಂ ಸುಧಾಬ್ಧಿಡ್ಧರನ ನಿತ್ಯವಹ
ಕಳೆ ಪೆರ್ಚುವಂತೆ ಕುಲಶೇಖರಿಯು ಸುಕೃತಲತೆ
ವೊಲವಿನಿಂ ದಳವೇರಿ ಪರಿವಂತೆ ಶೈಶವಂಗಳೆದು ಬಳೆವುತ್ತಿರ್ದಳು ೧೯

ಆ ಕಾಲದೊಳ್ ಬೃಹಸ್ಪತಿ ತನ್ನ ಶಿಷ್ಯನಹ
ನಾಕೇಶನಿಂದ ಬೀಳ್ಕೊಂಡು ಮರ್ತ್ಯಕ್ಕೈದಿ
ಲೋಕದೊಳಗತಿಶಯವೆನಿಪುರು ತಂಜಾವೂರನೈದೆ ರಾಜೇಂದ್ರ ಮುನ್ನ
ನಾಕದೊಳ್ ಬರವೇಳ್ಪುದಂ ನೆನೆದು ನಾಲ್ಕಾದ
ಏಕವೊಡಗೊಂಡಿದಿರ್ವಂದು ಕರೆದೊಯ್ದಧಿಕ
ಜೋಕೆಯಿಂ ವಿಷ್ಟರದೊಳಿರಿಸಿಯರ್ಘ್ಯಾಚಮನವನೀವುತ್ತುಪ[1]ಚ[1]ರಿಸುತೆ ೨೦

ರಸಮಧುರ ಸಾರಮಮೃತಾನ್ನ ದೇವಾನ್ನಮಂ
ಪೊಸತಾದಪೂಪವಸ್ತುಗಳನೆಡೆಮಾಡೆ ಸಂ
ತಸದಿಂದ ದೇವಗುರು ಸ್ವೀಕರಿಸಿ ತಲೆದೂಗುತಯ್ಯಯ್ಯೊಯೆಂದು ಮುದದಿಂ
ಹಸನಾದ ಸುರರುಣಿಸಿದಕ್ಕೆಣೆಯೆನಿಸದೆಂದು
ವೊಸಗೆಯಿಂ ಕೊಂಡಾಡುತಂ ತಣಿಯೆ ಸ್ರಗ್ಗಂಧ
ಮಿಸುಪ ವಸ್ತ್ರಾಭರಣವಾಹನಂಗಳನು ಯಿತ್ತತಿ ಹರುಷಮಂ ಪೆರ್ಚಿಸಿ ೨೧

ಕನಕ ಮೌಕ್ತಿಕ ರತ್ನ ವಜ್ರವೈಡೂರ್ಯಮಯ
ಘನಹರ್ಮ್ಯ ಸಾಹಸ್ರಯುತ ರಾಜಭವನಮಂ
ವಿನಯದಿಂ ಕರವಿಡಿದು ತೋರಿಸುತ್ತವರಲೊಂದೆಡೆಯ ಮಣಿವಿಷ್ಟರದೊಳು

---

1 ಕ (ಗ)

ಮಿಂನುಗುತಿಹ ಕಾಮಿನಿಯರಿಂ ಸೇವ್ಯಮಾನದಿಂ
ಬಿನದಿಸುವ ಸೌಂದರಿಯ ನೋಡುತೆಲೆರಾಯ ಯಿಾ
ವನಜಾಯತಾಕ್ಷಿ ಯಾರೆನಲೆನ್ನಕುವರಿಯೆನೆ ನಗುತಾಗ ಗುರುವೇಳ್ದನು ೨೨

ನಿನ್ನ ಸುತೆ ಸತ್ಯವಾಗಿಯೆ ಮುನ್ನ ಪರಶಿವನ
ಚನ್ನ ಸುಕುಮಾರನೆನಿಸುವ ರೇಣುಕೇಶ್ವರನ
ಸನ್ನುತಾರ್ಧಾಂಗಿ ಚಿನ್ಮಾತೆಯೆನೆ ಕೇಳಿಯಾನಂದಶರಧಿಯೊಳಾಳುತ
ಬಿನ್ನಣದೆಯರಮನೆ ಪುರೋಪವನಮಂ ತೋರಿ
ಪನ್ನಗಾಭರಣ ಬೃಹದೀಶ್ವರನ ದರ್ಶನವ
ನನ್ನಿಯಿಂ ಮಾಡಿಸಲ್ ಪೊಡಮಟ್ಟು ನಿಂದು ನುತಿಸಿದನಧಿಕಭಕ್ತಿಯಿಂದ ೨೩

ರವ್ಯಂಬರನೀಲಸಮುದ್ರ ಕಾಂಚೀಸಲಿಲ
ಹವ್ಯಭುಗ್ಯಜಮಾನ ಶಶಿಸಂಜ್ಞಿಕಾಷ್ಟತನು
ಸೇವ್ಯ ದಿವ್ಯಾಕಾರ ದಿವ್ಯತೇಜಃಪುಂಜ ತಿಗ್ಮಾಯುಧ [1]ತ್ರಿ[1]ನೇತ್ರ
ಕ್ರವ್ಯಾದವೈರಿ ನೇತ್ರಾಂಬುಜಾರ್ಚಿತ ಪಾದ
ಕಾವ್ಯಸಂಗಿಲನ ಪಟುವದನ ಲಿಂಗೋತ್ಸೃಷ್ಟ
ಕಾವ್ಯಸ್ವಭಾವ ಬೃಹದೀಶ ರಕ್ಷಿ[2][ಸೆಂದೆನುತ][2]ಮರಗುರು ಪೊಡಮಟ್ಟನು ೨೪

ನಿಂದು ವಂದಿಸಿಯಾಂಗಿರಸನಂದು ಚೋಳನಿಂ
ಸಂದಣಿಸಿ ಬೀಳ್ಕೊಂಡು ಸ್ವರ್ಗಕೈದಲ್ ಮುದದೆ
ಬಂಧುರದ ರಾಜಭವನವ ಪೊಕ್ಕು ಸೌಂದರಿಯ ನೋಡಿ ಕೊಂಡಾಡಿ ಪಾಡಿ
ಇಂದುಧರನವತಾರಮೂರ್ತಿ ರೇವಣಸಿದ್ಧ
ಗಂಧವಡೆದರಸಿಯೇ ಸತ್ಯಮೆನುತಾಗ ಸಂ
ಕ್ರಂದನನ ಗುರು ಪೇಳ್ದುದಂ ಮನೋರಮೆಗೆಯಾನಂದದಿಂದೊರೆದನರಸಂ ೨೫

ಮನುಕುಲಾಂಬುಧಿಚಂದ್ರ ರಾಜೇಂದ್ರಚೋಳನಹ
ವನಿಪಾಲಕುಲಶೇಖರೀದೇವಿಯೊಡನೆಯಿಾ
ವನಜಮುಖಿ ಸೌಂದರಿಯ ತಳುವದೇ ಲೋಕಗುರುವಿಂಗೀಯಬೇಹುದಬಲೆ
ಎನುತ ಪೇಳಲ್ ಕೇಳು ರಾಜ ಚಿಲುಪಾಲೊಳತಿ
ಇನಿದು ತವರಾಜಪೊಕ್ಕಂತಾಯ್ತು ಸಾಂಪ್ರತಂ
ಮನವೊಸೆದುಯಿತ್ತೊಡೆಮ್ಮಯ ವಂಶ ಪಾವನಮೆನುತ್ತ ನುಡಿದಳ್ ಪತಿಯೊಳು ೨೬

---

1 ದ್ರಿ (ಕ) 2 ಸುತ್ತ (ಕಗ)

ಎನ್ನ ತಪ ವ್ರತ ನಿಯಮ ಸಫಲವಾದುದು ಸತ್ಯ
ನನ್ನಿಯಿಂ ಪ್ರಾಣೇಶಯೆನಲು ನಲಿವುತ ರಾಯ
ಉನ್ನತದ ಮಂತ್ರಿಮನ್ನೆಯರ ಕರೆಸುತ ಪೇಳಲವರು ಸಂತೋಷಿಸುತ್ತ
ಇನ್ನಿದಕ್ಕೆಣೆಯ ಕಜ್ಜಮದಾವುದೆನುತಾಗ
ಬಿನ್ನವತ್ತಳೆಯ ಬರಸುತ ನಿಯೋಗಿಗಳಖಿಳ
ಪೊನ್ನಂದಣವ ತುರಗಕರಿರಥಪದಾತಿಸಹ ಬೀಳ್ಕೊಟ್ಟನಾ ಸಚಿವರಂ ೨೭

ಚತುರಂಗಬಲವೆರಸಿ ಮತಿವಂತಮಂತ್ರಿಗಳ್
ಶತಮನ್ಯುಪುರಕೆ ಪ್ರತಿಯೆನಿಪ ಮಂಗಳವಾಡ
ಕತಿಹರುಷದಿಂ ಬರಲ್ ತತವಿತತಘನಸುಷಿರವಾದ್ಯನೃತ್ಯಂಗಳಿಂದ
ಮಿತವಿಲ್ಲದಪರಮಿತಸೇನೆ ಸಹಯಿದಿರುವಂ
ದತಿನೂತ್ನತರದಮಾತ್ಯರುಗಳಾಗೊಡಗೊಂಡು
ಸಿತಕೀರ್ತಿವಂತ ಜಗದೇಕಗುರುರೇವಣೇಶ್ವರ ಸಭೆಗೆ ನಡೆತಂದರು ೨೮

ನೋಡಿ ಬಿಜ್ಜಳರಾಯನರಮನೆ ಸಭಾಸ್ಥಾನ
ದಾಡಂಬರಕ್ಕೆ ಮುಮ್ಮಡಿಮಿಗಿಲೆನಿಪ ಚಂದ್ರ
ಚೂಡನಪರಾವತಾರನ ರೇವಣಾಚಾರ್ಯನಾಸ್ಥಾನವಂ ನೋಡುತೆ
ಕೂಡಿಯಷ್ಟಾಂಗದಿಂ ವಂದಿಸುತೆಯುಡುಗೊರೆಯ
ರೂಢಿಯುಹ ಬಿನ್ನವತ್ತಳೆಯನೊಪ್ಪಿಸಿಯವರ್
ಜೋಡಿಲ್ಲದಂತೆ ನುತಿಸುತ್ತಲೆಮ್ಮರಸಂಗೆ ದರ್ಶನವನಿತ್ತು ಮುಂದದಿಂ ೨೯

ಪೊರೆವುದೆನಲವರ್ಗುಚಿತ ಮನ್ನಣೆಯ ಮಾಡಿಸುತ
ಧರೆಯಲತಿಶಯಮಾದ ಬಿಡದಿಯಂ ಕೊಡಿಸಿಯಾ
ದರದಿಂದ ಕಳುಹಿಸುತ್ತವರನಾ ಕಾಲದೊಳ್ ಬರವೇಳಿ ಜೈನನೃಪನಂ
ಚರರ ಕಳುಹಲ್ ರಾಯ ಬರಲವನ ಮನ್ನಿಸುತೆ
ಸರಿಯಿಲ್ಲದಿರ್ಪ ವಿಜ್ಞಾಪನದ ಪತ್ರಿಕೆಯ
ತ್ವರಿತದಿಂ ಕರಕಿತ್ತೊಡದ ನೋಡಿ ವೀರಬಿಜ್ಜಳನಾಗ ನೊಂದಂ ಸುಯ್ದಂ ೩೦

ಎಲೆ ರಾಯ ಸಂತಾಪವೇಕೆ ಚಿಂತಿಸಬೇಡ
ನಲವಿನಿಂದಿರು ನಿನ್ನ ಪಟ್ಟಣದೊಳೆಮಗೆ ಹರ
ನೊಲವಿನಿಂ ನಿರವಿಸಿದ ಕಜ್ಜಮುಂಟದು ನಿಮಿತ್ತಂ ಚೋಳಭೂರಮಣನ

ಕುಲಶೇಖರೀದೇವಿ ಮುಗಳ ಪರಿಣಯವಾಗಿ
ಘಳಿಲನೇ ಬಂದಪವೆಸುತ್ತ ಸಂತೈಸಿ ಗುರು
ಕುಲತಿಲಕ ಸಚಿವರ್ಗೆ ಪೇಳಲ್ ಪ್ರಯಾಣಭೇರೀರವಂಯಾರ್ಭಟಿಸಿತು ೩೧

ದೆಶೆಗಳೆಣ್ ಘುಮ್ಮಿಡುತಿರಲು ಧಂ ಧಣ ರಾವ
ಪಸರಿಸಲ್ ಮದಗಜದೆ ಘಟ ಕೋಟಿ ಪಟುಭಟರ
ಪ್ರಸರಮಂಗಣಿತಮಶ್ವರಥವಿತತಿ ಭೂಮಿಂ ಬೆಸಲಾದಂತೆ ತೇರೈಸಲು
ಮಿಸುಪ ಕಾನಕರತ್ನದಂದಣದ ಸಾಲುಸಾ
ಲೆಸೆಯೆ ಮೌಕ್ತಿಕಛತ್ರಚಾಮರ ವ್ಯಜನಘನ
ವೃಷಭಕೇತನ ಮುಖ್ಯನರ್ತಕಿಯರಾಡೆ ತೂರ್ಯತ್ರಯಂ ಮೊಳಗೆ ಮುಂದದಿಂ ೩೨

ಆಸಮಯದಲ್ಲಿ ಸೇನಾಧಿಪರ್ ಬಂದಭವ
ಲೇಸಾಗಿ ಬಲಜಲಧಿ ನಿಂದು ಸಂಭ್ರಮಿಪುದೆನೆ
ಮೋಸವಿಲ್ಲದೆ ಬಹಳಸಿಂಗರಂಬಡೆವ ಸಾರಂಗಮನಡರ್ದು ನೋಡೆ
ಸಾಸಿರಂ ಮಗಧರುಗ್ಗಡಿಸಿದರ್ ಮನವೊಲ್ದು
ಭೂಸುರರ ಊರ್ಧ್ವಬಾಹುಗಳಿಂದ ವೇದವಾ
ರಾಸಿ ಘೋಷಿಸೆ ಸಕಲಭಕ್ತಾಳಿವೃಷೆ ಚಾಂಗು ಭಲರೆ ಭಾಪೆನುತಿರ್ದರು ೩೩

ಎಯ್ದಿದಂ ಚರಚಕ್ರವರ್ತಿ ಪಾವನಮೂರ್ತಿ
ಯೆಯ್ದಿದಂ ಘನಲಿಂಗದೀಶ ಪಾವನಕೋಶ
ನೈದಿದಂ ವೀರಶೈವಾಚಾರ್ಯವರ್ಯ ದೀಕ್ಷಾಚಾರ್ಯ ಸುಜನವರ್ಯ
ಎಯ್ದಿದಂ ನಿಗಮಾಂತರಂಗ ಚಿಲ್ಲಿಂಗಾಂಗ
ನೈದಿದಂ ದುಷ್ಟಮತಕಷ್ಟಖಂಡನ ನಿಷ್ಠ
ನೈದಿದಂ ರೇವಣಪ್ರಭುವೆಂದು ಬಿರಿದಿನಗ್ಗದಕಹಳೆ ಧ್ವನಿದೋರಲು ೩೪

ಯತಿ ರೇವಣಾಸಿದ್ಧಲಿಂಗನತಿಶಯವಾದ
ಚತುರಂಗಬಲ ನಡೆಯೆ ಪೊಡವಿ ನಡನಡುಗೆಯು
ನ್ನತ ಪೆಡೆಗಳುಳ್ಳ ಫಣಿರಾಟ್ಕಂಪಿಸಲ್ಕಷ್ಟದಿಗ್ಗಜಂ ಕುಸಿದವರರೆ
ಕ್ಷಿತಿಧರಾವಳಿಗಳತಿಜರ್ಝರಿತವಾಗೆ ಪದ
ಹತಿಯ ಕೆಂಧೂಳಿ ಸಾಸಿರಗ್ಮೈಯನೊಂದೆ ಸಂ
ಗತವಾದ ನಾನಾವಿಧದ ಕೊಡೆಯ ನೆಳಲಿನಿಂದಿಳೆಗೆ ಕತ್ತಲೆಗವಿಯಲು ೩೫

ಇದೆ ಬಂದ ಶಿವಮತೋದ್ಧರಣಮಾಯಾಪಹರಣ
ನಿದೆ ಬಂದ ವೀರಶೈವರ ಪುಣ್ಯಕಾರುಣ್ಯ
ನಿದೆ ಬಂದ ಕಾಲಕಾಮರಗಂಡ ಹೃತ್ಪುಂಡರೀಕಹಿತ ಶಂಭುಲಿಂಗ
ಇದೆ ಬಂದ ಮಾವರನನಿರಿಸಿದತಿಸಾಹಸಂ
ಯಿದೆ ಬಂದ ಮೋಕ್ಷಕಾಂತೈಕವಲ್ಲಭನೆಂದು
ಮುಂದದಿ ಮುನ್ನೆಯ್ದಿ ರಾಜೇಂದ್ರಂಗೆ ಪೇಳೆ ಪೊನ್ನುಡುಗೊರೆಯನಿತ್ತು ನಲಿದಂ ೩೬

ಆವೇಳೆಯೊಳ್ ವಿಶ್ವಕರ್ಮಮಯಂ ಮೂಂಡವ್ಯ
ದೇವಶಿಲ್ಪಿಗಳ ಪೋಲ್ಪತಿ ಚತುರಶಿಲ್ಪಿಯಂ
ಭೂವರಂ ಕರೆಸಿ ವಸ್ತ್ರಾಭರಣ ವೀಳ್ಯವೀವುತೆ ಸುತೆಯ ಕಲ್ಯಾಣಕೆ
ಭೂಮಿಯೊಳಗರಿದೆನಿಪ ಮಂಟಪವಗೈವುದೆಂ
ದೋವಿ ಪೇಳುತ್ತ ಸಚಿವರ್ಗೊರೆದ ಪರರಚನೆ
ಮಾವರಾದ್ಯರನಗರಕತಿಚಿತ್ರಮಾಗಲೆಂದಾಣತಿಯನಿಟ್ಟು ಚೋಳಂ ೩೭

ಪುರರಚನೆ ಮಂಟಪಾಲಂಕಾರವಾಗಲ್ಕೆ
ಸಂರರು ದುಂದುಭಿಪಟಹವಾದ್ಯರವ ದನಿದೋರೆ
ಸುರಗುರುವಸಿಷ್ಠಾದ್ಯ ಋಷಿಜನಂ ಪರಸೆ ಚೌದಂತಮನಡರ್ದಿಂದ್ರನು
ಬರೆ ಸುರರು ಪೋಲ್ಪೈಸಿ ಹರಿ ಚಂದನೋದ್ಗಮದ
ಸರಿಗರೆಯೆ ರಂಭಾದಿಗಳ್ ನಟಿಸಿ ದೇವೇಂದ್ರ
ಪಿರಿಯೊಡೆಯರಿಹ ಪತ್ತನಕ್ಕೆ ನಡೆತಂದನಾನಂದಿಸಲ್ ರಾಜೇಂದ್ರನು ೩೮

ತಗರು ಜಕ್ಕಂದೊಳಲಿ ಯೋಗದಿನೆರಳೆ ಮೊಸಳೆ
ಮಿಗೆ ಕಬ್ಬಿನದ ತೇರು ಮನುಪುಂ[1]ಗ[ವಂ][1]ಗಳಂ
ಜಗವರಿಯಲೇರಿ ಶುಚಿ ಯಮ ಶಕ್ರ ವಾಯುಪಾಶ್ಯ ಸುರಪತಿ ಯಕ್ಷೇಶರು
ಬಗೆಬಗೆಯ ಸೈನ್ಯ ಡಿಂಡಿಮ ವಾದ್ಯನಾದದಿಂ
ಸೊಗಸುವೈವತ್ತಾರುದೇಶದ ಮಹಾರಾಯ
ರಗಣಿತ ತುರಂಗಗಜಮುಖ್ಯಕಾಣ್ಕೆಗಳಾಂತು ಬಂದರಾನಂದದಿಂದ ೩೯

ರಾಜರಾಜೇಂದ್ರರಲಿ ಮುಖ್ಯರಾಜಗೆ ನಾಕ
ರಾಜ ದೇವೇಂದ್ರಮುಖದಿಗ್ರಮಣ ನಿರ್ಜರ ಸ
ಮಾಜ[2]ದೊ[2]ಡಗೂಡಿದಿರ್ವರಲು ಜಗದೊಡೆಯ ಪೊನ್ನಂದಣಮನೇರಿ ದೆಶೆಯಂ

1 ವ (ಕಗ) 2 ರೊ (ಗ)

ಭ್ರಾಜಿಸಲ್ಕಖಿಳವಾದ್ಯಂ ಕನಕಚಾಮರ ವಿ
ರಾಜಿಸಲ್ ಮುತ್ತುಗೊಡೆವಿಡಿಯೆ ಪಡೆ ನಡೆದುಬರೆ
ವೇಜಮೈದುತ್ತೆ ಚೋಳೇಂದ್ರಾದಿಗಳ್ ವಾಹನಂಗಳಿಳಿಯುತ ನಡೆದರು ೪೦

ಅತಿಹರುಷದಿಂ ಕ್ಷಿತೀಂದ್ರೇಂದ್ರನುನ್ನತರಾಜ
ತತಿ ದಿಶಾಧೀಶರುಂ ಸಾಷ್ಟಾಂಗವೊಂದಿಯಾ
ನತರಾಗಿ ನಿಂದು ಹರಿಚಂದನೋದ್ಗಮದ ಮಳೆಗರೆದು ಸ್ತುತಿಸಲ್ಕವರನಂ
ಯತಿರಾಜರಾಜರಾಶೀರ್ವಚನದಿಂ ಪರಸಿ
ತತವಿವಿಧ ದೇವದುಂದುಂಭಿ ಮೊಳಗೆ ಕಂಚುಕಿಗ
ಳತಿಶಯದೊಳುಗ್ಗಡಿಸೆ ರಂಭಾದಿಗಳ್ ನಡಿಸೆ ಕಳಶಕನ್ನಡಿಯರ್ಮೈದೆ ೪೧

ಎಳೆಯ ಪೊಂಬಾಳೆದೊಡೆ ದಡದಡಿಸೆ ಚಂಪಕದ
ನಿಳುಮಾಲೆ ನಳಿತೋಳು ನಿಮಿರೆ ಸುಕ್ಕುಂಗುರುಳ್
ಚಳಿಸಲೆಳೆವೆಣ್ಗಳುರೆ ದಿಟ್ಟಿನಾರತಿ ಮುತ್ತಿನಾರತಿಯನೆತ್ತಿ ವಿಬುಧ
ಕುಲ ಜಯಜಯಧ್ವಾನದಿಂ ಪಾಡೆ ಭಕ್ತಾಳಿ
ಯಳಿಕಾಕ್ಷ ಚಾಂಗು ಭಲ ಭಾಪೆನಲ್ ಪರಸಮಂಯ
ತಲೆಗುತ್ತುತಿರೆ ಮಂಗಳೋತ್ಸವದ ಮಂಟಪಕ್ಕೈದಿಸಿಗರಾ ಗಣಪನಂ ೪೨

ಆದರೊತ್ತಿನೊಳ್ ವಿರಾಜಿಪ ಹಜಾರದ ಮುಂದೆ
ಪದುಳದಿಂ ರನ್ನಪಾವುಗೆವಿಡಿಯೆ ರಾಜೇಂದ್ರ
ನೊದಗಿ ಪುರಪಂ ತನ್ನ ಕೈಲಾಗನೀಯಲಾಂದೋಳಿಕಾರೋಹನಾಗಿ
ಮುದದಿಂದುಪೇಂದ್ರಾದ್ಯಮರಹೃದಯಪೀಠದೊಳ್
ಪದುಳದಿಂ ದೀಪಿಸುವ ವಸ್ತುಯಿದೆಯೆಂಬವೊಲ್
ವಿದಿತಸಿದ್ಧೇಂದ್ರ ನವರತ್ನಮಯಮೃಗರಾಜವಿಷ್ಟರದೊಳೊಪ್ಪಿರ್ದನು ೪೩

ಇದೆ ಬಂದುದಯ್ಯ ರಾಜೇಂದ್ರ ಮದುವೆಯ ಮುಹೂ
ರ್ತದ ಬಲಂ ಶಶಿತಾರೆ ರಾಶಿಕರಣಂ ಯೋಗ
ಮಧಿಕಲಗ್ನಂ ಎಂದು ಸುರರಾರ್ಯ ಬೆಸಸೆ ಧರಣಿಪ ಕರೆಸುತಂ ಸಖಿಯರಂ
ಒದವಿ ಪರಶಕ್ತಿಸೌಂದರಿಯ ಕರತಹುದೆನಲ್
ಸದಮಳಸುಗಂಧತೈಲವ ಧರಿಸಿ ತಿಗುರಿಟ್ಟು
ಪದುಳದಿಂ ಪರಿಮಳೋದಕದಿಂದ ಮಂಗಳಸ್ನಾನಮಂ ಕೈಗೊಳಿಸುತೆ ೪೪

ಕುರಳ್ಗಳಾರಿಸುತೆ ಜಡೆಯಂ ರಚಿಸಿ ಮಲ್ಲಿಗೆಯ
ಯುರಳ್ಗಳುರುಮಾಲೆಯಂ ಸುತ್ತುತ್ತೆ ಬಿಡದೆ ನುಂ
ಗುರುಳ್ಗಳೊಳ್ ಪರಿಮಳಿಪ ಪೂಗಳಂ ತುರುಬಿ ಸೀಮಂತರೇಖೆಯೊಳು ರನ್ನ
ಪರಳ್ಗಳಿಂ ನೇಲ್ವ ಬೊಟ್ಟಿಟ್ಟು ಸೌಂದರದ ಪೆ
ರ್ದಿರುಳ್ಗೆಯರಿಸಿನ ಪೂಸಿ ಯಕ್ಷಕರ್ದಮವನಾ
ಪರಲ್ಮೊಲೆಗೆ ಲೇಪಿಸಿ ಸುವಸ್ತ್ರಭೂಷಣಂಗಳಿಂ ಬೆಡಗನೊಡರಿಸಿದರಾಗ ೪೫

ಶಿವನನಾಶ್ರೈಸಿ ದೋಷಾಕರ ಕಳಂಕಿ ಕರ
[1][ಗು][1]ವ ಮೆಯ್ಯ ರಾತ್ರಿಚರನೆಂಬ ನಿಂದೆಯು ಕಳೆಯೆ
ಸವಿಶೇಷಸಿದ್ಧೇಂದ್ರನರಸಿ ಸೌಂದರಿಯ ಲಪನವ ಪೊಂದಿ ತನ್ನಿಂದೆಯಂ
ತವೆ ಕಳಿವೆನೆಂದು ರಾಕೇಂದು ನೆಲೆಗೊಂಡವೊಲ್
ಪ್ರವಿಮಲಂ ವಿಕರಿಸದೆ ರಾಜಿಸುತ್ತಿರ್ದುದೈ
ಭುವಿಯಾಣ್ಮ ರಾಜೇಂದ್ರಚೋಳನ ತನೂಭವೆಯ ಮುದ್ದುಮೊಗವತಿಚೆಲ್ವಿನಿಂ ೪೬

ಮೊಗದಂತೆ ಕದಪು ಕದಪಿನ ಕಾಂತಿಯಂತೆ ನಸು
ನಗೆನಗೆಯ ಪಾಂಗಿನಿಂ ರದನ ರದನದ ಜೊತೆಯ
ಬಗೆಯಂತೆ ಬಡಬಾಸೆ ಬಡಬಾಸೆಯಂತೆ ನಡು ನಡುವಿನೊಳ್ ಕೊರಳ ಭಾವಂ
ಬಿಗಿದ ಮೊಲೆ ಬೆದರಂಗಣ್ ಬೆಚ್ಚದ ಮನಂ ಪರೆದು
ಚಿಗಿಯದಲಕಂ ನಳನಳಿಪ ತೋಳು ತೊಡೆ ಪಾದ
ಯುಗಳ ಕರತಳದಿಂದ ರಾಜಿಸಿದಳಾ ರಾಯಗುವರಿ ಪೊಸಸಿರಿಯಂದದಿ ೪೭

ಮುನ್ನ ಸೌಂದರದೇವಿಯಾಕೆಯಾಕಾರಮು
ತ್ಯುನ್ನತದ ಭೂಷಣಮೆನಲ್ ಸತಿಯರೊಳ್ ಪ್ರೌಢೆ
ಚನ್ನೆಯುಹ ನಾಯಕಿಯರೊರ್ವಳೆಯ್ತಂದು ನುಡಿದಳ್ ಮಂಗಳಾರ್ಥವಾಗಿ
ನನ್ನಿಯಿಂದೊಡವೆಯನಲಂಕರಿಸಬೇಹುದೆನೆ
ಬಿನ್ನಣದ ಸಖಿಯರಾಪಾದಮಸ್ತಕದ[2][ನ][2]ಘ
ಹೊನ್ನ ರನ್ನದ ತೊಡಿಗೆಯಿಡೆ ಶಚಿಯರುಂಧತಿಯರ್ಸೈದೆ ಸೇಸೆಯನಿಟ್ಟರು ೪೮

ಕೆಳದಿಯರ್ ನಡೆತಂದುಯಿಳೆಯೆರೆಯನಾದ ಮನು
ಕುಲಶರಧಿರಾಕೇಂದು ರಾಜೇಂದ್ರಚೋಳನೊಳ್
ವೊಲವಿನಿಂ ಸೌಂದರಿಯನತಿವಿಭವದಿಂದ ಶೃಂಗರಿಸಿದೆವು ಜೀಯಯೆನಲು

1 ಗು । ತಿ (ಕಗ) 2 ಘ (ಕಗ)

ಪೊಳೆವ ನವರತ್ನಪಲ್ಲಕ್ಕಿಯೊಳಗಿರಿಸಿಯಾ
ಲಲನೆಯರ್ ಧವಳ ಶೋಭನಗಳಂ ಪಾಡಂತ್ತ
ಕೆಲಬಲಂ ಪಿಂತೆ ಮುಂತೆಲ್ಲವೋಲೈಸಿಯಾದರದಿಂದ ನಡೆತಂದರು ೪೯

ಎರಡು ನಾಲ್ಕಾರು ಮೂರೀರಾರುಯಿಪ್ಪತ್ತು
ಯಿರದೆ ಮೂವತ್ತುಭಯುವಿಂಶತಿಯುಯೈವತ್ತು
ಪರಿವಿಡಿಯೊಳೊಂದುತಿಹ ಮೊಳೆಜವ್ವನೆಳೆಜವ್ವನಂ ಪೊಳಪ ನೆರೆಜವ್ವನಂ
ಹರವರಿಯ ತುಂಬುಜವ್ವನ ಮಿಂಟುಜವ್ವನಂ
ನೆರೆದ ಕಡುಜವ್ವನಂ ಬಿಡುಂಜವ್ವನದ ಗೌರಿ
ಯರು ಕನ್ನೆ ಬಾಲೆ ಮುಗ್ಧೆ ವಿದಗ್ಧೆ ಪ್ರೌಢೆ ಪ್ರಗಲ್ಭೆಯರು ನಡೆತಂದರು ೫೦

ನಡೆವ ಕಾಂತೆಯರ ನಗೆಗಣ್ಬೆಳರ್ಗಣ್ಬೆಳಗು
ಬಿಡದೆ ಕಲಧೌತಾಂಬರದ ತಳ್ಳಿಯಂತೆಸೆಯೆ
ಬಿಡದಂಗಕಾಂತಿ ಕನಕದ ಭೂಷಣದ ಹ[1][ಜ್ಜೆ][1]ಕೂಡೆ ಪೊಂಬಟ್ಟೆ ಚಲುವ
ನಡೆಮುಡಿಯೆ ಪಚ್ಚಡಿಸಿದಂತಾಗೆ ಸಿಂಗರಂ
ಬಡೆದ ಪರಿಮಳಪುಷ್ಪರಜಮಿಳಿತ ಗಂಧವಿಡಿ
ಯೆಡವಿಡದೆ ಪರಪಿದೊಲ್ಮಿೀವೆ ಸೌಂದರಿಯೊಡನೆ ನಡೆದರಾ ಸತಿಯರೊಡನೆ ೫೧

ಮೇಲುದಂ ಜಾರೆ ನಸುದೋರ್ಪ ಬಲ್ಮೊಲೆ ಕನಕ
ಲೋಲ ರನ್ನದ ಪಿಡಿಗಳುಳ್ಳ ಚಾಮರಗಳಂ
ಥಾಳಿಸಲ್ ಕಂಕಣಝಣತ್ಕಾರರವಮುಣ್ಮೆ ನಡೆಯೆ ನೂಪುರದಿಂಚರ
ಮೇಲೆ ಝಣಝಣರೆನಲ್ ಕತ್ತಿನೇಕಾವಳಿಯು
ಜಾಲವೋಲಾಡೆ ವ್ಯಜನಗಳ ಬೀಸುತ್ತಖಿಳ
ಬಾಲೆಯರ್ ಬಂದರಾ ಚೋಳಭೂಪತಿಯ ಸಲ್ಲೀಲೆಯ ಕುಮಾರಿಯೊಡನೆ ೫೨

ಪೊನ್ನೋಲೆ ರನ್ನದಳಿಕಿನ ಕೊಪ್ಪು ಚಿನ್ನಪೂ
ಚೆನ್ನಯಂ[2][ಟೆಯು][2] ಬುಗುಂಡಿ ಪುಡಿಯ[3][ಕಾಂಚೀದಾಮ][3]
ಬಿನ್ನಣದ ಸೂಸಕಂ ಹರಳೋಲೆ ಹಸ್ತಕಟಕಂ ಬಾಹುಪೂರಹಾರ
ಕನ್ನೆಯರು ಕನಕಮೌಕ್ತಿಕದ ಸಂಬ[4]ಳಿ[4] ಹಡಪ
ಪನ್ನೀರ ಗಿಂಡಿ ಸಗ್ಗಳಿಯಖಿಳ ವಿನಿಯೋಗ
ವನ್ನೈದಿ ವೋಲೈಸಿಬಂದರಾ ಸೌಂದರಿಯ ಕೆಲಬಲದೊಳಾನಂದದಿಂ ೫೩

---

1 ಬೆ (ಕಗ) 2 ಟೆ (ಕಗ) 3 ದಾಮ (ಕಗ) 4 ಲ (ಗ)

ಪೊಂಗಳಶ ಕುಚದ ಮೇಲಿಟ್ಟ ಕೆಂಬವಳಸರ
ರಂಗುದುಟಿಯಲ್ಲಿ ಪೊಗರೊಗುವ ಮೂಗುತಿಯ ಮಣಿ
ಪಿಂಗದವು ಕನಕಮಣಿ ರನ್ನವಣಿಯಿಂದುಯಿಕ್ಕೆಲದ ಬೀದಿಯೊಳೊಪ್ಪುವ
ಅಂಗನೆಯರತಿಮುಗ್ಧಭಾವದಿಂ ನೋಡುತಿರೆ
ಪೊಂಗಳಶದಲ್ಲಿ ಪಿಂಗಾರಗಳನಿಡುತಖಿಳ
ಮಂಗಳಾಂಗಿಯರಾದ ನಿಟ್ಟೈದೆಯರ್ ನಡೆದರಂದಣದ ಮುಂದೆಸೆಯೊಳು ೫೪

ಕೆಂಜೊಡರ ಪುಂಜ ಪಗಲ್ಬತ್ತಿಯ ಬೆಳಂಗು ತಾಂ
ರಂಜಿಸಲ್ ಸಾಲುಮುತ್ತಿನ ಛತ್ರ ಸೀಗುರಿಯುಂ
ಮಂಜುಳಂ ಚಿತ್ರಕಂಚುಕಿಗಳುಲಿಯುಲು ಹೇಮವೇತ್ರಂಗಳಿಂದೆ ಜನರ
ಭಂಜಿಸಲ್ ಸಂದಳಿಯುಂ ಮನುಕುಲೋದ್ಭವನ ಸುತೆ
ಕಂಜಮುಖಿ ಸೌಂದರಿ ಸುಪಲ್ಲಕಿಯನೇರಿ ತಾಂ
ಕಂಜಾರಿವದನೆಯರ್ಗೂಡಿ ಬಂದಿಳಿದಳಾ ಪರಿಣಯದ ಮಂಟಪದೊಳು ೫೫

ಕನ್ನೆಯಂ ಸಕಲಸಂಪನ್ನೆಯಹ ಸೌಂದರಿಯ
ಮುನ್ನಿನಾಗಮಂವಿಧಿಯು ತಪ್ಪದೊಲ್ ಮದುವೆಯಂ
ಬಿನ್ನಣದೊಳೆಸಗಿ ರೇವಣಪ್ರಭುವಿನಡಿಗೆರಗಿ ಕುಲಶೇಖರೀದೇವಿಯು
ಪೊನ್ನಂದಣಾಭರಣ ವಸನ ವಾಹನ ರಾಜ್ಯ
ಕನ್ನೆಯರ ತಾಂಬೂಲಮುಖ್ಯ ಸಪ್ತಾಂಗಮಂ
ಬಿನ್ನೈಸಿ ಬಳುವಲಿಯನಿತ್ತು ರಾಜೇಂದ್ರನತಿ ನುತಿಸುತಿರ್ದಂ ಭಕ್ತಿಯಿಂ ೫೬

ವಾಕ್ಪತಿ ಹವಿರ್ಭುಗ್ಯಮಾ ಸುರವರುಣ ವಾಯು
ರುಕ್ಷೇಶ ರುದ್ರಶಶಿಸೂರ್ಯಾದಿಗಳ್ ತಮ್ಮ
ವಾಕ್ಪುಷ್ಪದಿಂದಲರ್ಚಿಸಿ ದಿವ್ಯಲೋಕದ ಮಹಾವಸ್ತುಗಳನರ್ಪಿಸಿ
ವಾಕ್ಪತೀಶ್ವರ ರೇವಣೇಶನನಲಂಕರಿಸಿ
ರುಕ್ಪಟುವಿಮಾನಗಳನೇರಿ ಸುರರಂ ಬೆರಸಿ
ದಿಕ್ಪಾಲರೈದಿದರ್ ತಂತಮ್ಮ ಪಟ್ಟಣಕ್ಕೇನೆಂಬೆನತಿಮುದದೊಳು ೫೭

ರಾಜಕುಲಶೇಖರೀದೇವಿಗೋಸುಗ ಲೋಕ
ರಾಜಗುರು ಕೆಲವುದಿನಮಿರ್ದು ಮನ್ನಿಸಿ ಚೋಳ
ರಾಜನಂ ಬೀಳ್ಕೊಳಂತ್ತಖಿಳದೇಶದ ರಾಜಸುತೆಯರಂ ಮದುವೆಯಾಗಿ

ಸೋಜಿಗದ ಮುನ್ನೂರು ಬಾಲೆಯರ್ಗೂಡಿ ಪ್ರಭು
ವಾಜಿ ಗಜ ರಥ ಪದಾತಿಯು ಸಚಿವರೊಡಗೊಂಡು
ಮೂಜಗನ್ನುತ ಬರಲ್ಕಿದಿರ್ವಂದು ಬಿಜ್ಜಳನರೇಂದ್ರನರಮನೆಗೆ ಕಳುಹಿ ೫೮

ಇರುತ ಸುಖದಿಂ ಸಂಲಕ್ಷಣೆ ಸುಸೌಂದರಿಯರಿಂ
ನಿರುತದಿಂ ನಗರೋಪಕಂಠದಂಪವನದೊಳಿಹ
ಸರಸಿಯೊಳ್ ಜಲಕೇಳಿಯಂ ರಚಿಸಿ ತ್ರಿಪುರಾಂತಕೇಶ್ವರನ ವಾಸಕೈದಿ
ಪರಮಸಿದ್ಧೇಂದ್ರ ಮೂರ್ತಿಗೊಳಿಸಿ ವಿದ್ವಾಂಸ
ರರುಕವೀಶ್ವರರು ಭಟ್ಟರು ಮಹಾಭಯಂಕಾರ
ಪರಿಹಾಸಕ ಪುರಾಣವಿಧದಿಂದ ಕೂಡಿ ಸಭೆಯೊಳು ರೇವಣೇಶನೆಸೆದಂ ೫೯

ಉರುತರಬ್ರಹ್ಮಾಂಡಭಾಂಡಗರ್ಭಂ ತಾನು
ಚರಚಕ್ರವರ್ತಿ ಹೃತ್ಸಿದ್ಧಸಿದ್ಧೇಶ್ವರಂ
ಮೆರೆವ ಕ್ಷೇತ್ರದೊಳು ನದಿಯಿಲ್ಲದೊಡೆ ಸಜ್ಜೀವನಂ ನಾಸ್ತಿಯೆಂದು ಮುದದಿ
ಶರಣರಭವಂ ಮುಂದಕೆಂದರಿದು ಬಹುಜೀವ
ವಿರಲಿಂಗೆಯಾಪ್ತತ್ವಮಂ ಚಿಂತಿಸುತ್ತೆಯಾ
ಪುರಕೆ ಜೀವನಮಿದೆಂದರಿದಹ ತಟಾಕಮಂ ನಿರ್ಮಿಸಲುಪಕ್ರಮಿಸಿದಂ ೬೦

ತಳುವದಾಕ್ಷಣ ಭಂಡಿ ವಡ್ಡರಂ ಬಹುಜನಾ
ವಳಿಯ ಕರೆಸುತೆ ಪೊನ್ನರನ್ನರಾಸಿಯನಿತ್ತು
ಘಳಿಲನೇ ಕೆರೆಯೇರಿಯಂ ಕಟ್ಟೆನುತ್ತಲಪ್ಪಣೆಯಿಟ್ಟು ಹೃದಯದಲ್ಲಿ
ತಿಳಿದನಾಗತ ಧರ್ಮಮಂ ಯಿಲ್ಲಿ ಶರಣತತಿ
ಸಲೆ ಶಿವಾರ್ಚನೆಯನೆಸಗಲ್ಬೇಹುದೆನುತ ನಿಜ
ಲಲನೆಯರ್ ಕರಸಿ ನಿಯಮಿಸಿದ ಮೊದಲಲ್ಲಿ ಕಟ್ಟೆಗೆ ಮಣ್ಣ ಹೊರುವುದೆಂದಂ ೬೧

ನಿಷ್ಠಾಸ್ವರೂಪಕಂದ್ದಾಲಮದನಿಶ್ಚಯಾ
ಭೀಷ್ಟ ಹಸ್ತದೆ ಪಿಡಿದು ಗೇದಂಗಭೂಮಿಯೊಳ್
ಶ್ರೇಷ್ಠವಾದಾನಂದಜಲವ ಕಾಣುತಲಗಿಯೆಲವರ ಸತಿಯರು ಮುದದೊಳು
ಇಷ್ಟದರುವೆಯ ಸಿಂಬೆಯಂ ತಲೆಯ ಮೇಲಿಟ್ಟು
ಜ್ಯೇಷ್ಠ ಶಿವಭಕ್ತಿಯೆಂಬಮಲ ಮಂಕರಿಯಿಂದ
ನಿಷ್ಟಪಂಚಕಮುಖ್ಯಕರ್ಮದುರೆ ಮಣ್ಣಡಕುವೊಲಡಕಂತಿರ್ದರಮಮ ೬೨

ಎಲ್ಲ ರಾಯರ ಕನ್ನೆಯರ್ ಸರಸದಿಂದೆ ಬಿಡ
ದೊಲ್ಲನೇ ಮಣ್ಣಡಕಃವಲ್ಲಿ ರಾಜೇಂದ್ರ ಸುತೆ
ಚಲ್ಲಗಣ್ಣಬಲೆ ದಣ್ಣನೆ ದಣಿದು ಸೊಲ್ಲಣೆಗೆಯುಳಿದು ಬೇಸರದಿ ನಿಲಲಂ
ಸಲ್ಲೀಲೆಯಿಂದೆ ಸೌಂದರದೇವಿ ನಿಂದಂದ
ಮೆಲ್ಲನೇ ಪೇಳಿನಲ್ ಗರ್ಭಸೀಮಂತೆ ನಿಜ
ವಲ್ಲಭನೆ ನಿಮ್ಮ ಪದಮಂ ಸೇರಿ ಕರ್ಮದ ಗದಂ ಬಿಡದೆ ನನಗೆನಲ್ಕೆ ೬೩

ಎರಗಿದಳ್ ತ್ರೈಮಾಸದುರುಗರ್ಭವೊಂದಂ ಸಖಿ
ಯರು ಪೇಳೆ ನೀ[1][ನಾರು][1]ಪೋಗಂ ನಮ್ಮಯ ಸೊಮ್ಮ
ಭರದಿಂದ ಕೊಟ್ಟಬಲೆಯೆನಲುಸಿಕನಿರಲು ಚಿದ್ಗರ್ಭದರ್ಭಕನ ತಡಹೆ
ಗುರುಹಸ್ತಕುರುಲಿಂಗ ಬಂದವೊಲ್ ಚಿದ್ಬಿಂಬ
ವರ ರೇವಣಾಪ್ರಭುವಿನಂಗೈಗೆ ಬರಲಾಗ
ಪರಮ ಚಿದ್ಭಸ್ಮಮಯ ತೊಟ್ಟಿಲೊಳ್ ಮಡಗಿ ಪಂಚಾಕ್ಷರಿಯ ಜಪಿಸುತಿರ್ದಂ ೬೪

ಕಿಡಿಗಣ್ಣಸಿದ್ಧ ಭೂವನಿತೆಯಂ ಕರೆದು ನಿ
ನ್ನೊಡೆಯನಹ ಪ್ರಾಣೇಶಲಿಂಗಮಂ ಕೊಂಡು ಬೈ
ಚಿಡುಯೆನುತ್ತಪ್ಪಣೆಯನಿತ್ತು ಕೆರೆಯೇರಿಯೊಳ್ ತೊಟ್ಟಿಲಂ ಮಡಗೆ ತಾಯ
ಪೊಡೆಯಿಂದ ದಶ ಶತ ಗುಣಾಧಿಕದಿ ಪೊರೆಯಲದು
ಪೊಡವಿಯೊಳು ಹೇಮಗಳ ರೇಣುಗಣವಿಂಪ್ಪಂತೆ
ಜಡಧಿಯೊಳ್ ರನ್ನ ಪೆಚ್ಚುವ ಮಾಳ್ಕೆಯಿಂದ ಮೋಕ್ಷದ ಪುಂಜ ಬೆಳವುತಿಹಂದು ೬೫

ರಾಜೇಂದ್ರನಂದನಾಮಣಿ ಮಹದ್ಭಯದಿ ಯತಿ
ರಾಜನಡಿದಾವರೆಗೆ ನಮಿಸಿ ಕ್ಷಮಿಸೈಯೆನ್ನೆ
ವಾಜೆಯಂ ನೋಡಲೇಂ ಸರ್ವಾಪರಾಧೆಯೆಂಬನಿತರೊಳ್ ಶಿವಲೋಕದಿಂ
ಸೋಜಿಗದ ಪುಷ್ಪಕಂಗಳು ರುದ್ರಕನ್ಯಾ ಸ
ಮಾಜಬರೆ ಪಿಂತಾವು ಬಹೆವು ಪೋಗೆಂದಟ್ಟಿ
ಮೂಜಗನ್ನುತ ರೇವಣೇಶನುಳಿದರಸಿಯರ ಮೇಳದಿಂ ಸುಖದೊಳಿರ್ದಂ ೬೬

ಮೆರೆವುತಿರಲಖಿಳಮಹಿಮಾಂಬುನಿಧಿ ರಾಕೇಂದು
ಗುರುವರೇಣ್ಯಂ ಮಾಸಷಟ್ಕಸಂಪೂರ್ಣಮಾ
ಗರಿದು ಪುತ್ರೋತ್ಸವದ ಬಯಕೆಯುಂಕುರಿಸೆ ಬಿಜ್ಜಳ ನರೇಂದ್ರನ ಕರಸುತೆ

---

1 ನಾಂ (ಕಗ)

ಪರಮ ಪುಣ್ಯದ ಪುಂಜದುರುಳಿ ಶಿಶುವಂ ನೋಡಿ
ತ್ವರಬೇಹಂದೆನಲುಂ ಬದ್ಧಾಂಜಲಿಗಳಿಂ ನಮಿಸಿ
ದೊರೆ ತೆರಳೆ ಭೇರೀರವಂ ಧಣಂ ಧಣರೆನಲ್ ಚತುರಂಗಬಲ ನಡೆದುದು ೭೭

ಭೂರಮಣನರಸಿಯರು ರೇವಣೇಶನ ಬಹಳ
ಚಾರುತರ ರಾಣಿವಾಸಂ ಕೂಡಿ ಬರಲು ಶೃಂ
ಗಾರೋತ್ತರಂಗದಿಂ ನಟಿಪ ಮೋಹನದ ಗಂಭೀರಾಬ್ಧಿ ತಾಂ ನಡೆದುದೊ
ತೋರುತಿರೆ ನಿರಿಗುರುಳ ತೋರದುರುಬಿನ ರತ್ನ
ಹಾರಯೇಕಾವಳಿಯ [ನೇ]ಣೆನುಡಿದಾರದುರೆ
ನೀರೆಯರ್ ಕೆಲಬಲದೊಳೋಲೈಸಿ ಬರುತಿರ್ದರೇವೇಳ್ವೆನವರ ಸೊಗಸಂ ೭೮

ಅಡಿಗಡಿಗೆ ಪೊಡೆವ ಮಂಗಳವಾದ್ಯರವ ಚಲ್ವ
ಕಂಡಿತೆಗಂಗಳ ಚಲ್ವ ಬಟ್ಟವೊಲೆಯ್ದೆಯರುಂ
ಸಡಗರದ ಧವಳಾರ ಶೋಭನಂಗಳ ಪಾಡಂತೆಳೆವೆಣ್ಗಳತಿ ಮುದದೊಳುಂ
ತೊಡುತ ಭೂಷಣಗಳಂ ಕಳಶ ಕನ್ನಡಿವಿಡಿದು
ನಡೆತರುತೆ ವಾರನಾರಿಯರು ನರ್ತಿಸಲು ಜಗ
ದೊಡೆಯಂಗೆ ನಮಿಸಿ ನಿಲೆಯುಂಜನಾಸಿದ್ಧ ದ್ರವ್ಯವ ತೆಗದ ಪಾಂಗಿನಿಂದೆ ೭೯

ವಾರಿಧಿಯ ತಲೆವಣಿಯಂ ತೆಗೆವವೊಲ್ ನಾಗೇಂದ್ರ
ದಾ ರಮ್ಯರತ್ನಮಂ ಕಳೆದುಕೊಂಬಂತೆ ಯತಿ
ಧಾರುಣಿಯ ಪೊಡೆಯೊಳಿಹ ಚಿದ್ಭಸ್ಮದೊಟ್ಟಿಲಂಗೊಂಡಂ ಶಿವಭಕ್ತಿಕಾಂತೆ
ಚಾರುವಂ[1]ಕ್ತಿಯ[1] ಶಿಶುವನೆತ್ತಿ ಮುದ್ದಿ[2]ಪ[2]ವೊಲ್ ಕಂ
ಮಾರಕನ ತೆಗೆದಪ್ಪಿ ಮುಂಡಾಡಿ ಹರುಷದಿಂ
ಭೂರಮಣ ನಲಿನಲಿದು ನಮಿಸಿ ಪೊಗಳುತ ರನ್ನರಾಶಿಯ ನಿವಾಳಿಸಿದನು ೮೦

ಇಂಗಡಲೊಳೊಗೆದ ತಿಂಗಳಶಿಶುವೊ ಶಿವನ ಬಲ
ಗಂಗೊನೆಯೊಳೊಂದಿದೆಳೆಯರುಣನೋ ಪೀಯೂಷ
ದಂಗದಿಂ ಬೆಳೆದ ಸಂಜೀವನದ ಬಳ್ಳಿಯೋ ಶಿವಶರಣರಲ್ಲಿರುತಿಪ
ತುಂಗಭಕ್ತಿಯ ಕುಜದ ಕುಸುಮವೋ ಪೇಳೆನೆ ಚಿ
ದಂಗನಿಂದುದಿಸಿ ಚಿನ್ಮಯನಾಗಿ ವಿಷಯವಿಷ
ಭಂಗನಿರುಪಮ ನಿತ್ಯಲಿಂಗಚಿಲ್ಲಿಂಗ ನಹ ಶಿಶುವ ನೋಡಿದ ಗುರುವರಂ ೮೧

---

1 ತ್ತಿನ (ಗ) 2 ಸು (ಗ)

ಚಿರಭಸ್ಮಪಟ್ಟ ರುದ್ರಾಕ್ಷಿ ಶಿವಲಿಂಗವಂ
ಧರಿಸಿ ಚಾತುರ್ವೇದಪದಪೂರ್ವಕಂ ಬಿಡದೆ
ಬರೆದಂ ಮಂತ್ರವನಲ್ಲಿ ಪಾದಾಂಬುವಂ ಪ್ರಸಾದವನಿತ್ತು ಚರಲಿಂಗದ
ಶರಣರ್ಗೆ ಪರಿಪರಿಯ ವಸನ ನವ್ಯಾಭರಣ
ಪರಿಮಳದ ಗಂಧ ಕರ್ಪೂರ ವೀಟಿಕೆ ಮಾಲ್ಯ
ಸರಸ ಧನಧಾನ್ಯಪುರಗಳ ಕೊಡುತೆ ಪುತ್ರನಂ ಜಂಗಮಕ್ಕೆರಗಿಸಿದನು ೬೨

ಕತ್ತುರಿಯ ತಿಲಕ ಬಜ್ಜರ ರನ್ನ ಹರಿಮಣಿಯ
ತೆತ್ತಿಸಿದ ಅರಳೆಲೆಯು ಮಾಗಾಯ್ಯಿಡುತೆ ಕೊಡೆ
ಬಿತ್ತರದ ನೀಲರತ್ನದ ಪದಕ ಪುಲಿಯುಗುರು ಕನಕಕಟಿಸೂತ್ರ ಚೆಲ್ವ
ಮುತ್ತಿನೇಕಾವಳಿಯು ಪವಳ ಚಿನ್ನದ ಗುಂಡು
ಕೆತ್ತನೆಯ ಹಾಲಮಣಿ ಮುಂಖ್ಯವಸ್ತುಗಳಿಂದೆ
ಚತ್ತೀಶತತ್ವದಿಂ ಮೀರಿದ ಶಿಶೂತ್ತಮನ ಸಿಂಗರ ಬೆಡಂಗಾದುದು ೬೩

ಬಂಗಾರದೊಟ್ಟಿಲೊಳಗಿಂಬಿಟ್ಟು ಶಿಶುವರನ
ರಂಗುದುಟಿ ಪಿಡಿದಂ ಲಲ್ಲೈಸಿ ಪಟ್ಟದ ಮಹೋ
ತ್ತುಂಗ ಮತ್ತೇಭಮಂ ಪರಿಪರಿಯ ವಸ್ತುವಿಂ ಸಿಂಗರಿಸಿ ಮಾಲ್ಯಂಗಳಿಂ
ಮಂಗಳಾರ್ಥಕ್ಕಿಟ್ಟು ಕುಂದಣದ ಹೌದದಿ ಬೆ
ಡಂಗಿನಿಂದಖಿಲಜನ ದುಃಖಾಪಹಾರಿಯುನ
ನಂಗಮದಹರ ರುದ್ರಮುನಿದೇವನಂ ಸಕಲ ಸಂಭ್ರಮಂದಿ ಕೊಂಡೊಯ್ದರು ೬೪

# ಏಳನೆಯ ಸಂಧಿ

ಸೂಚನೆ :

ಚರಲಿಂಗಸೃಷ್ಟಿಯಂ ಪೇಳೆ ಚರಲಿಂಗತಲ
ದಿರವ ಬೋಧಿಸಿ ರೇವಣೇಶ್ವರಂ ತನ್ನಣುಗ
ಗರಿದೆನಿಪ ರುದ್ರಮುನಿದೇವಂಗೆ ಚರಲಿಂಗಪಟ್ಟವಂ ಕಟ್ಟಿ ಮೆರೆದಂ

ಭವನೆ ಭಾಳಾಂಬಕನೆ ಭಕ್ತರ ಶಿವಂಕರನೆ
ಭುವನಪಾಲಕಚರಣಭೂತಾಧಿನಾಯಕನೆ
ಸವಿಶೇಷಭೇಷಜನೆ ನತವೃಜಿನ ಭೈರವಾಕಾರನೆ ಸದಾಸೌಖ್ಯನೆ
ಅವಿರಳಾತ್ಮನೆ ಭೋಗಿಮಂಡನನೆ ಭೌಮಾದಿ
ನವನಭಸ್ಕರಪಾಪಭಂಗನೆ ನಭಃಕೇಶ
ನವಿಗತನೆಯಮರವಂದ್ಯನೆ ಚನ್ನಮಲ್ಲಿಕಾರ್ಜುನ ಗುರುವೆ ಕೊಡುವುದೆವಂಗಿಷ್ಟವಂ ೧

ಭೀಮಣ್ಣಪಂಡಿತಂಗೊಲಿದುದಿಸಿ ಶಿವನಿಳಯಂ
ಸೀಮಂನಂ ವಿಸ್ತಂಭಕಾಗಿ ಬೌದ್ಧನ ಕೊಂದು
ರೇಮಯ್ಯ ದೇವಯ್ಯಗಳ್ ಶರಧಿಯಂ ಪೊಕ್ಕು ಪೋಗೆಯೆಂಲೆನಾಡಚೋಳಂ
ತಾಮಸದೆ ಕಂದೆಗಸೆ ಪೊಕ್ಕು ದ್ರಾಕ್ಷಾರಾಮ
ಧಾಮಂವನ್ನೂರ್ಧ್ವಲೋಚನವಾಂತುಯಲಿಗೊಂಡ
ದಾ ಮಂಹಾದೇವನಡಿಬಡೆದು ಮಹಿಮೆಯ ಮೆರೆದ ಪಂಡಿತೇಶಂಗೆರಗುವೆಂ ೨

ಭಕ್ತಭವ ಘೋರಾಬ್ಧಿ ಬಾಡಬಂ ಮದರಹಿತ
ಭಕ್ತಜ್ಞಾನಾನಂದ ವಾರಾಶಿರಾಕೇಂದು
ಭಕ್ತನನುಪಮ ನಿತ್ಯ ನಿರ್ದೇಹಿ ನಿಸ್ಸೀಮ ನಿರಘ ನಿಶ್ಚಿಂತ ನೋಡೆ
ಭಕ್ತಮಾಯಾವನಧಿಭೈತ್ರ ಸಚ್ಚಿತ್ಸುಖಂ
ಭಕ್ತತ್ರೈಮಲದೂರ ನಿರ್ಮಲಂ ಶಿವಮಯಂ
ಭಕ್ತನಂರುಮಹಿಮೆ ವೇದಕ್ಕಸಾಧ್ಯಂ ರುದ್ರಮುನಿಯೆ ನೀಂ ತಿಳಿಯೆಂದನು ೩

ಮಾನನಿಧಿ ಸೌಂದರಿಯೆ ಕೇಳೆನುತ ಶಿವ ಮುನ್ನ
ಮೇನಕಾತ್ಮಜೆಯೊಡನೆ ಭಕ್ತನುರುಮಹಿಮೆಯಂ
ನಾನು ಬಲ್ಲೆಂ ದೇವಿ ನೀಂ ಬಲ್ಲೆ ಶೈಲಾದಿಬಲ್ಲನರುವೊಗದನೆಂತೊ
ಜಾನಿಸಲ್ಕೋವಿ ಜಾನಾಂತ್ರಿತತ್ತ್ವವನೆನು
ತ್ತಾ ನಿರುಪಮಾಗಮಂ ಉಲಿಯಲದರಿಂದಧಿಕ
ಸ್ವಾನುಭವಶ್ರುತಿ ಸಿದ್ಧ ಶರಣರೇ ತಿಳಿದಿಹರನಾದಿಭಕ್ತನ ಮಹಿಮೆಂಯಂ ೪

ಕನಕಪಂಕಜಗರ್ಭಮುಖ್ಯಕೋಟಿಗೆ ಮೂಲ
ನನುಪಮಸುಕಾರಣಂ ಸರ್ವತತ್ತ್ವಕ್ಕಧಿಕ
ಘನಗೂಢನಿಜಭಾವರೂಪ ನಿತ್ಯಾಶ್ರಯಾನಂದ ನಿಜಮುಕ್ತಿದಾತಂ
ತನುಕರಣಯಿಂದ್ರಿಯಾದ್ಯಖಿಳವಿಷಯಾತೀತ
ಮನಂಮುನಿಗಳರಿಯಬಾರದ ಪರಮಪದದೊಳಗೆ
ಯನವರತಮಾನಂದಿಪಂ ನಿತ್ಯಸತ್ಯಚಿನ್ಮಯಂಚಿತ್ಪ್ರಕಾಶನೆಂದು ೫

ಅಲಘುತರ ಪರಿಪೂರ್ಣ ನಿತ್ಯ ಗುರುತತ್ತ್ವ ತಾಂ
ಸಲೆ ಜಗಜ್ಜನನಗತಿಲೀನದಾರ್ತಂ ಲಿಂಗ
ಚಲನಮಿಲ್ಲದ ಸ್ವಯಂಕಾಶ ಸಚ್ಚಿದ್ರೂಪವೇ ಪರಮಚರಲಿಂಗವ್ವೈ
ಲಲಿತಲಕ್ಷೈಲ್ಯಕಗುಣಕಧಿಕ ಶಿವಸು[1][ಖ][1]ರೂಪ
ಮಿಲದಶೇಷಂ ಚತುರ್ವಿಧದ ನಿನದಾಕಾರ
ಲಲಿತಚಿದ್ವಿವಿಧಬಿಂಬಪದಾಂಬುತದ್ರೂಪನೇ ಭಕ್ತನ್ವೈ ಕುಮಾರ ೬

ಮದ್ಭಕ್ತನೊಳಹೊರಗೆ ಸಂತತಂ ನೆಲಸಿಹೆಂ
ತದ್ಭಕ್ತನೆನ್ನ ಬಾಹ್ಯಾಂತರದೆ ರಾಜಿಪಂ
ಸದ್ಭಕ್ತನಮಲಚೈತನ್ಯವೇ ನಾಂ ನನ್ನ ಚೇತನನನಾದಿಭಕ್ತಂ
ಸದ್ವಿಧಾನರೊಳಾತನಂಗಲಿಂಗಂ ಪ್ರಾಣ
ಚಿದ್ಭೇಧಮಿಲ್ಲದಿಹ ಚರಲಿಂಗವಂ ತಾಗಿ
ತದ್ವಯದಯೇಕರೂಪಾತ್ಮನನಂಪಮಭಕ್ತನಾತನೇ ಘನಕೆ ಘನವು ೭

*[2]ಒ[2]ಲವಿನಿಂ ಜಗವ ಸೃಜಿಸುವವನಂ ನಳಿನಭವ
ನಳಿನಮೇಹದಿನಾಭಿಯಾ ಹರಿಯೆ ಶರಧಿಯೊಳ್
ವಂಲಗಿಹಂ ಮುನ್ನೀರು ತಾಂ ಮುನಿಯೆ ಕಳಶಸಂಭವಂ

---

1 ಖಂ (ಕಗ) 2 ಸ (ಕ) ಗ ಪ್ರತಿಯಲ್ಲಿ ೮ ನೆಯಪದ್ಯವಾದ ಮೇಲೆ ಈ ಮುಂದಿನ ಪದ್ಯಭಾಗವಿದೆ : ವಿರಚಿಸುವ ಜಗವನೀ ಬ್ರಹ್ಮನಾತನ ಜನನ । ಹರಿಯಲ್ಲಿ ಯಾತನಬ್ಧಿಯಲಬ್ಧಿ ಕಲಶಜನ । ಕರದೊಳ ಫನಿಳಿಯೊಳಿಳಿಶೇಷ ಶಿರದೊಳಗವಂ ಬೆರಳುಂಗುರಂಗಿರಿಜೆಯ॥

ಕಳಶಭವನಲ್ಲಿ ಭುವಿ ಫಣಿಶಿರದೆಯಾ ಫಣಿಯೆ
ಸಲೆ ಗಿರಿಜೆ ಮೆರಲೊಳಿಹುದಗಿರಿಜೆ ಹರನರ್ಧಾಂಗ
ದೊಳಗೆ ನೆಲಸಿಹಳು ಶಂಕರನವಂ ತನ್ನ ಭಕ್ತನ ಹೃದಯಕಮಲಕೋಟರದೊಳ[1][ಗೆ][1] ೮

ಇಂತನಾದಿಯಭಕ್ತನಮಲ ಹೃತ್ಪಂಕಜದ
ಅಂತರಾಳದ ಪ್ರಣವಂಪೀಠದೊಳ್ ಥಳಥಳಿಸಂ
ವಂತಜ್ಯೋತಿಯೆ ತಾನನಾದಿಜಂಗಮುವಂೂರ್ತಿಯಾಕಾರಮಂ ತಳೆಯಲು
ವಯಂತೆಸೆವ ರುದ್ರಾದಿತತ್ತ್ವಮೂರ್ತಿಗಳಖಿಳ
ಕಂತುಗುರು ಬ್ರಹ್ಮೇಂದ್ರಮುಖರು ಜಂಗಮಚರಣ
ಮಾಂತು ಭಜಿಪರ್ ಬಿಡದೆ ಜಂಗಮದ ನಿರ್ದೇಶವಂ ಕೇಳ್ ಕುಮಾರವರ್ಯ ೯

ಪದಪಿನಿಂದೆಸೆದು ತೋರಂತ್ತಿಹ ಪರಬ್ರಹ್ಮ
ಮದು ನಿರಂಜನಮೆನುತ್ತುಪನಿಷತ್ತುಲಿಯಲಧಿ
ಕದಪದಕ್ಕಧಿಕಜಂಗಮಲಿಂಗವೆಂದು ಪೇಳಲ್ಕೆ ಪೌರಾಣಂಗಳು
ಸದಮಳಾಗಮು ಯೋಗಿಜನ ಮುನೀಶ್ವರರೆಲ್ಲ
ಮುದದಿಂದಲಡಗಿಹರು ಮತ್ತೆ ಗರ್ಭದೊಳಗೀ
ಪದಿನಾಲ್ಕುಭುವನ ಬ್ರಹ್ಮಾಂಡಕೋಟಿಯ ಚರಾಚರಗಳೊಟ್ಟಾಗಿರ್ಪವು ೧೦

ಮತ್ತೆಯುತ್ತರ ವಾತುಲಾಖ್ಯತಂತ್ರಂ ಕೇಳು
ಸತ್ಯಾಂತರಂಗ ಬಹಿರಂಗತತ್ತ್ವ ಸುಮೂರ್ತಿ
ತತ್ಯಮಕ್ಷರತಃಪರಾಖ್ಯ ಪುರುಷಂ ಪರಂಜ್ಯೋತಿಯಾತ್ಮಾದಿಶಕ್ತಿ
ನಿತ್ಯಸಂಘಟಿತಮದು ಮನದಿಂದ ಧ್ಯಾನಿಸುವೊ
ಡತ್ಯಧಿಕವಸ್ತುವೇ ಚರಲಿಂಗವೆಂದು ಶರ
ಣೋತ್ತಮರ್ ಪೇಳ್ವರೆಂದಾ ರುದ್ರಮುನಿಪತಿಗೆ ರೇವಣೇಶಂ ಪೇಳ್ದನು ೧೧

[2][ಆದಿ][2]ಜಂಗಮದ ಮಕುಟವೆ ಮಹಾಗಗನಮಂಘ್ರಿ
ಪಾದಪಂಕಜವೆ ಪಾತಾಳ ರವಿ ಶಶಿ ಸೀತ
ಭೇದಿ ನೇತ್ರಂಗಳ್ ದಿಶಾಳಿ ಭುಜಶೂನ್ಯಲಿಂಗಂ ಕರಸ್ಥಲಜಡೆಗಳೆ
ವೇದ ಮೇಘಂಗಳ್ ಮಹಾಭಸ್ಮ ಶಶಿಜೊನ್ನ
ವೇದಂಗಳೆ ಕ್ರಿಯಾಮಯವೃಕ್ಷ ಕುಸುಮಚಯ
ಭೂಧರಂಗಳೆ ವಿಮಳರುದ್ರಾಕ್ಷಿ ಜಲನಿಧಿಯೆ ಪಾತ್ರ ಕಂಥೆಯೆ ದಿಗ್ಗಜಂ ೧೨

---

1 ಡಗಿಹನಾಗಿ ತಿಳಿದುನೋಡಲ್ಕೆ ಭಕ್ತನೆ ಸರ್ವಲೋಕಕ್ಕೆ ಘನಂ (ಕಗ) 2 ಆ (ಕಗ)

• ೮ ನೆಯ ಪದ್ಯದಲ್ಲಿ ಛಂದೋಭಂಗವಾಗಿದೆ.

ಜಗವೆ ಸಿಂಹಾಸನಂ ಭೂವ್ಯೋಮಹೋರಾತ್ರಿಗಳ್
ನೆಗಳ್ದ ಗುಹೆಮಂಟಪಜ್ಞಾನ ಕಾಲಪಟ್ಟಂ ರುತುಗ
ಳಗಲದೇ ನಿರವಯವೆ ದೇಹ ಮೇಖಲೆ ಮಹಾಶೇಷ ವಿಜ್ಞಾನಮಂದ್ರ
ಸೊಗಯಿಸುವ ಸೌಖ್ಯವೇ ಮೇರುದಂಡ ಗುಣತ್ರ
ಯಗಳೆ ಸೂತ್ರಂ ಶಿವಕುಲವೆ ಕುಲಂ ಕೇಶತರಂ
ಮೃಗಧರಾಭರಣನಾಭರಣ ಜಂಗಮಂವೆಂದು ನಯಸಿದ್ಧ ಕೇಳ್ ಕುಮಾರ ೧೩

ವೀರತಂತ್ರಂ ಉಲಿವುದೈ ಸರ್ವಶೂನ್ಯಮಾ
ದಾರಮ್ಯ ನಿರುಪಮ ನಿರಂಜನವೆ ಜಂಗಮಂ
ಭೂರಿ ಶಿವಲೀಲೆಯೊಳನಾದಿಮೂರುತಿ ಭುವನ ಸೃಷ್ಟಿ ಸ್ಥಿತಿಸಂಹರಕ್ಕೆ
ಕಾರಣಮೆನಿಪ್ಪ ಜಂಗಮಮಂಕುಟದಿಂ ಶೂನ್ಯ
ಸಾರ ಶೂನ್ಯಂ ಬ್ರಹ್ಮದಿಂದವೆ ಚಿದಂಬರಂ
ಮೀರಿದ ಚಿದಂಬರವೆ ಚಿಚ್ಛಕ್ತಿಯಾದಳಾ ಚಿಚ್ಛಕ್ತಿಯಿಂದ ಮುಂದೆ ೧೪

[1]ಪ[1]ರಶಕ್ತಿಯಾದಳವಳಿಂದಾದಿಶಕ್ತಿಯಾ
ವರ ಶಕ್ತಿಯಿಂದಿಚ್ಛೆ ಜನಿಸಿದಳ್ ಯಿಚ್ಛೆಯಿಂ
ದಾದ ಕ್ರಿಯಾಶಕ್ತಿಯುದಯವಾದಳು ಕ್ರಿಯಾಶಕ್ತಿಯ ಸಹಸ್ರಾಂಶದೆ
ಇರದುದಿಸಿದಳ್ ಜ್ಞಾನಶಕ್ತಿಯಾ ಶಕ್ತಿಯಾ
ದರದ ಸಾಸಿರದಂಶದಿಂದವೇ ನೀಂ ಕೇಳು
ಭರದಿಂದ ನಾದ ಕೋಟ್ಯುದ್ಭವಮೆನುತ್ತಧಿಕ ವೀರಾಗಮಂ ಪೇಳ್ವುದು ೧೫

ಆವರವರ ಸಾಸಿರಾಂಶಗಳಿಂದ ಸಾದಾಖ್ಯ
ಭವಿಸಿದವು ಪಂಚಸಾದಾಖ್ಯಂಗಳಿಂ ನೋಡೆ
ಯಿವರ ಸಾಸಿರದಂಶದಿಂದ ಮಾಹೇಶ್ವರಾವಿರ್ಭವಿಸಿದಂ ಮತ್ತೆಯು
ಅವನ ಸಾಸಿರದಂಶದಿಂದ ವಿಂಶತಿ ಪಂಚ
ಸುವಿಲಾಸ ವಿಗ್ರಹಂಗಳಂ ಜನನಮವರಂಶ
ದವಿರತಂ ರುದ್ರನುದಿಸಿದನವನ ಸಾಹಸ್ರದಂಶದಿಂ ಕೃಷ್ಣನುದಯಂ ೧೬

ಆ ಜನಾರ್ದನನ ಸಾವಿರದಂಶದಿಂದಲಾ
ಮೂಜಗಂಗಳು ಕನಕನಾದ ಪದ್ಮೋದ್ಭವನ
ಸಾಜದಿಂದುದಯಮವನಲ್ಲಿ ಸ್ಥಾವರ ಜಂಗಮಾತ್ಮಮಯ ಜಗದುದಯವು

ನೈಜದಿಂದವನ ನೇತ್ರದೊಳು ಶಶಿರವಿಯುದಯ
ಮೂಜಗದ ವಲ್ಲಭನ ಮುಖದಲ್ಲಿ ಬ್ರಾಹ್ಮಣಂ
ಭೂಜನರ ಪಾಲಿಸುವ ಕ್ಷತ್ರಿಯಂ ಭುಜದೊಳೂರುವಿನಲ್ಲಿ ವೈಶ್ಯ ಜನನಂ ೧೭

ಸರಸಿಜಾಸನನ ಪಾದದಿ ಶೂದ್ರ ಪುಟ್ಟಿದಂ
ವರ ರೋಮರಾಜಿಯೊಳ್ ಗಂಧರ್ವರುದಯಂ ಮಾನ
ವರ[ನ]ಖಿಳ ಜಂತು ರಾಕ್ಷಸ ಯಕ್ಷ ಭೂತಗಣ ಕಾಲತ್ರಯಂಗಳುದಯಂ
ಪರಮ ವೇದಂಗಳ್ ಮಹಾಮಂತ್ರಯಾಗಂಗ
ಳುರು ಪೈತೃಕಂ ಜ್ಞಾನ ಯಜನ ಯಾಜನ ಮತ್ತೆ
ಚಿರತರಾಧ್ಯಯನದಧ್ಯಾಪನಂ ದಾನಂ ಗ್ರಹಣಮಿವೇ ಷಟ್ಕರ್ಮವು ೧೮

ನ್ಯಾಯ ವೈಶೇಷಿಕಂ ಪೂರ್ವಮೀಮಾಂಸಮುಂ
ಬಾಯ್ದುಗ್ಗಿಟ್ಟುವಧಿಕ ವೇದಾಂತಮತವುಂ ನೋಡ
ಲಾಯಸದ ಸಾಂಖ್ಯ ಪಾತಂಜಲಂ ಷಟ್ಸಮಯದುದುದಯಮುಂ ಕೇಳ್ ಕುಮಾರ
ಮಾಯಾ ರಜಸ್ಸಾತ್ವಿಕಂ ತಮೋಗುಣ ಮೂರ
ರಾಯುವಹ ಸ್ತ್ರೀ ಪುಂ ನಪುಂಸಕಂ ತ್ರೈಲಿಂಗ
ಕಾಯದುತ್ಪತ್ತಿ ಸ್ಥಿತಿ ಪ್ರಳಯ ಸಸ್ಯಾಳಿ ಫಲತರುತತಿಗಳಂದಯ ನೋಡ ೧೯

ಅಂಡಜ ಸ್ವೇದಜ ಜರಾಯುಜೋದ್ಭಿಜಮೆಂಬ
ತಂಡತಂಡದ ಜೀವ ಪಿತೃಮಾತೃ ಬಂಧಂಗಳ್
ಮಂಡನದ ಸತಿಸುತರ್ ಮಿಶ್ರಾಷ್ಟಭೋಗ ಧನ ಧಾನ್ಯಾದಿ ಸಂಪತ್ತಿಯುಂ
ಖಂಡಿತದ ಜಾತಿ ವರ್ಣಾಶ್ರಮಂ ಕುಲಗೋತ್ರ
ಚಂಡಾಂಶು ಕಾಮ ಷಡ್ಭ್ರಮೆಯುಂ ಸಚರಾಚರಂ
ಪುಂಡರೀಕಾಕ್ಷನಂದನನ ಚಾತುರ್ಯದಿಂದುದಿಸಿದವು ಕೇಳ್ ಕುಮಾರ ೨೦

ಇಂತುದಯವಾದಖಿಳ ಸಚರಾಚರಂ ಬ್ರಹ್ಮ
ಕಂತುಪಿತರುದ್ರನು ಮಹೇಶ್ವರ ಸದಾಶಿವಂ
ಸಂತತಂ ಸವಿಶೇಷತತ್ತ್ವಂಗಳೆಲ್ಲ ಕೇಳಿಂತಲ್ಲವೀ ಪರಿಯುನಂ
ಅಂತಕಾಂತಕನಮರ ಮಾಯಾಂಧ್ಯಶೂರನ
ತ್ಯಂತ ನಿರುಪಮ ನಿರಂಜನಬ್ರಹ್ಮ ಜಂಗಮಂ
ಯೆಂತು ನೆನೆಯಲ್ಕಾದವೆಲೆ ರುದ್ರಮುನಿಪತಿಯೆ ಕೇಳೆಂದನಾ ಗುರುವರಂ ೨೧

ಇದುವೆ ಜಂಗಮಮೂರ್ತಿಯಿಂದಾದ ಸೃಷ್ಟಿ ಕೇ
ಳಿದು ಗ್ರಂಥಬಾಹುಳ್ಯಮಪ್ಪುದೆಂದಂಜಿಯಾಂ
ಸದವಂಲಾತ್ಮನೆ ನಿನಗೆ ಸಂಕ್ಷೇಪಮಾತ್ರದಿಂದರುಹಿದೆವು ಮುಂದೆ ಮುದದಿಂ
ವಿದಿತನಾದಿಯ ಜಂಗಮೋದ್ಧರಣ ಶೂನ್ಯಮಾಂ
ತದು ಮೂರ್ತಿಯಾಗಲಾ ಮೂರ್ತಿ ಜಂಗಮಂ ತಾನೆ
ಪದುಳದಿಂ ತ್ರಿವಿಧಮಾಯ್ತುದರ ವಿಸ್ತಾರಮಂ ಲಾಲಿಸೈ ಸುಕುಮಾರನೆ ೨೨

ಜಂಗಮಂ ಜಗದೀಶ ಜಂಗಮಂ ಹತಪಾಶ
ಜಂಗಮಂ ಮದನಾರಿ ಜಂಗಮಂ ಪುರವೈರಿ
ಜಂಗಮಂ ಮುನಿಶೀಲ ಜಂಗಮಂ ಘನಲೋಲ ಜಂಗಮಂ ಜನನ ದೂರ
ಜಂಗಮಂ ಸ್ಥಿತಿರಹಿತ ಜಂಗಮಂ ಮೃತಿರಹಿತ
ಜಂಗಮಂ ಸೃಷ್ಟಿಪಾಲನಹರಣಕಾರಣಂ
ಜಂಗಮಂ ವಿಧಿವಿಷ್ಣುರುದ್ರರಂ ನಿರ್ಮಿಸಿದನಾದಿಜಂಗಮ ಪರಶಿವಂ ೨೩

ಎಲೆ ಕುವರ ಜಂ ಎಂಬ ವರ್ಣ ಚಿನ್ನಾದ ಮ
ತ್ತಲಘು ಗಾಯೆಂಬ ಬೀಜಂ ಕೇಳು ಚಿದ್ಬಿಂದು
ವೊಲವಿನಿಂ ಮಾಯೆಂಬ ಲಿಂಗ ಚಿತ್ಕಳೆಯು ಬೀಜಂ ವಿಚಾರಿಸಿನೋಡಲಂ
ಸಲೆ ಜಂಗಮಂ ತ್ರಿವಿಧ ವರ್ಣ ಪರನಾದವುಂ
ಲಲಿತಪದಬಿಂದು ಪರಕಳೆಯು ವರ ಮೇಳದಿಂ
ಫಲಿತಮಾದೋಂಕಾರಮದುವೆ ಸಾಕಲ್ಯಪ್ರಣವಂ ಸದಾಶಿವನೆಂದರಿ ೨೪

•ಆ ಸದಾಶಿವಮಯಂ ಸಕಳ ನಿಷ್ಕಳ ಚರಂ
ತಾ ಕಲಾಲೀಲೆಗೋಸುಗ ಮಹೇಶ್ವರನಾದ
ಸಾಕಲ್ಯ ಭಾಸುರ ಮಹೇಶ್ವರನೆ ಜಂಗಮಾಕಾರಮಂ ತಳೆದು ಬಳಿಕಂ
ಶಾಶ್ವತಂ ಗುರುಚರ ಪರಂಗಳೆನಿಸುತ್ತಧಿಕ
ನಾಶವಿಲ್ಲದೆ ಪರಾಪರವಸ್ತುರೂಪನಾಂ
ತೀ ಸಮಸ್ತರ ಕಿಲ್ಬಿಷಂ ಕಳೆದು ಪಾವನಂ ಮಾಡಲೆಂದಾಚರಿಪವು ೨೫

ಗುರುವೆ ಜನನಕ್ಕೆ ಕಾರಣಮಾದ ಜಾಕ್ಷರಂ
ಚರವೆ ರಕ್ಷಣಕೆ ಕಾರಣಮಾದ ಗಾಕ್ಷರಂ
ಪರವೆ ತಾಂ ಪರತತ್ವಲಯಕೆ ಕಾರಣಮಾದ ಮಾಕ್ಷರಂ ತ್ರಿವಿಧಲಿಂಗಂ

• ಈ ಪದ್ಯದಲ್ಲಿ ಪ್ರಾಸಭಂಗವಾಗಿದೆ.

ಮರಳಿ ಸ್ವಯಂ ಚರಪರಂ ತ್ರಿತಯಜಂಗಮಲಿಂಗ
••ತರಳನೇ ತ್ರೈಲಿಂಗ ತ್ರೈಗುರುವು ತ್ರೈಶೇಷ
ಮರಿದು ತ್ರಿಪಾದಾಂಬು ಜಂಗಮಂ ತ್ರೈವರ್ಣಮಂಗಲಿಂಗಾಸಂಗವ್ರಂ•• ೨೬

ಈ ವರ್ಣಮೊಂದೆರಡು ಮೂರಾರು ಪದಿನೆಂಟು
ಮೂವತ್ತುಆರು ನೋಡಲ್ಕೆ ನೂರೊಂದುಸ್ಥಲ
ಕೋವಿದನೆ ಸಕಲಸರ್ವಾಚಾರ•• ಸಂಪತ್ತು ಸ್ಥಳಕುಳಗಳೆಂದರಿವುದು
ಭಾವಿಸಲ್ ತ್ರೈತತ್ವವೇ ತ್ರಿಮೂರ್ತಿಗಳಾಗಿ
ಈ ವಿಶ್ವಸಚರಾಚರ ಪ್ರಪಂಚೆಲ್ಲವುಂ••
ಪಾವನಾತ್ಮಕದ ಜಂಗಮಮೆಂಬ ಮೂರಕ್ಕರದಲು[1][ದಿಪುದಂ][1]ದರಿವುದು ೨೭

ವಿನಯಂದಿಂ ಕೇಳು ಸ್ವಯಜಂಗಮಂ ಯೇಕಾಂತ••
ದನು ಶಿಥಿಲದಿಂ ದೃಢವ್ರತದಿಂದಹಿಂಸೆಯಿಂ
ದಿನಿತು ಪಂಚೇಂದ್ರಿಯದ ಪ್ರೀತಿಯ ನಿವೃತ್ತಿಯಿಂ ಪರಮಾತ್ಮಯೋಗದಲ್ಲಿ••
ನೆನಹು ಸಂಗತಿಯಾದ ಮನದಿಂದಲಾತಂಗೆ
ಘನಮೋಕ್ಷವಹುದು ನಿಚ್ಚಯಂಮಮಂ ಮನುಜರಂ
ಮನದೊಳೆಣಿ••ಸದೆ ಮಹಾಕಾಂತಾರಮಂ ಸೇರಿ ಲಿಂಗದಲಿ ಪರಿಣಮಿಸುವಂ•• ೨೮

••ಆವನಾಂತರದಲ್ಲಿ ಮಯಿಲ್ತುಗಂ ತೇಗದೆಲೆ
ತೀವಿದುಟಜ••ವನಾದೊಡಂ ಕಂಜದ ಕೋಟರಂ
ದೇವತೆಗಳಿಂ ಮನಂಜರಿಂ ಸವೆದ ಗುಹೆಗಳಲ್ಲಿಯ ಬಿಲಾಂತರದಿ ಬಳಿಕ
ನೋವು••ಳಿದ ಶಿಲೆಯ ಪೊಟ್ಟೆಯೊಳು ಮರದಡಿಯೊಳಂ
ಸಾವಧಾನದೊಳಂ ನೆಲೆಗೊಂಡು ದೃಢಮಾನಸದೊ
ಳಾವಗಂ•• ಪರಚಿಂತೆಯಳಿದು ಶಿವಚಿಂತೆಯೊಳ್ ನಿಂದವನೆ ಸ್ವಯಜಂಗಮಂ ೨೯

ಜೆಡೆಯಾಂತು ವಲ್ಕಲಮನಾಚ್ಛಾದಿಸು•ತ್ತಲಂ
ತಡಿಗೆ ಪಾಸುತ್ತ ಪುಲಿಸಮ್ಮಯೆರಲೆಯದೊವಲ
ನಡಿಯಡಿಗೆ ಭಸ್ಮಮಂ ಪೂಸುತ್ತ ಮೈಗೆ ಮಂತ್ರವ ಜಪಿ•ಸುತಾವಾಗಲುಂ
ಸಡಗರದಿ ಕಾಣಿಸುವ ಸಕಲವಸ್ತುಗಳ ತಾಂ
ಮೃಡಭಾವದಿಂ ನಿರೀಕ್ಷಿಸು•ವ ಸ್ವಯಜಂಗಮದ
ಬೆಡಗಿನ ಕ್ರಿಯಾಜಾಲವೆಲ್ಲ ಸುಜ್ಞಾನಮಯಮೆಂದನಾ ದೇಶಿಕೇಂದ್ರಂ• ೩೦

---

1 ದ (ಗ) : ಕ ಪ್ರತಿಯಲ್ಲಿ ಈ ಭಾಗ ಗ್ರಂಥಪಾತವಾಗಿದೆ.

•ಶಿವಲಿಂಗ•ಮಂಖದೊಳ್ಳೈದುವ ಪ್ರತಿಪದಾರ್ಥಮಂ
ಶಿವಲಿಂಗಕಿತ್ತುಕೊಳ್ವುದು ಮತ್ತಮಲ್ಲಿರುವ
ಸವಿಶೇಷಕಂ• ದ್ರುಮಮೂಲಂಗಳಂ ಚಿಗುರೆಲೆಯ ಪಣ್ಗಳಂ ಸ್ವೀಕರಿಸುತ
ಅವಿರತಂ ನೆಲಸಿಹದು ಬಡಮನಂ ಮಾಡಿ ತಾ•
ನ್ನವಿರಳಾಚರಣೆಯಂ ಬಿಟ್ಟು ಪುಂಗ್ರಾಮಕ್ಕೆ
ತವೆಯದೊಂದಡಿಯಿಡಲ್ ಭಾಷೆ ತಪ್ಪುಗು ಮಗನೆ ಕೇಳೆಂದ•ನಾ ಗುರುವರಂ• ೩೧

ಅರಸನೋಲೈಪ ಚರರೆಲ್ಲಂದು ಊಳಿಗವ
ತ್ವರಿತದಿಂ ಮಾಡಿದೊಡೆ ನೆಲದೊಡೆತ[ನಂ ತನಗೆ]
•ಸರುಸವಲ್ಲದೆ ತಾನೆಯಪರವರ• ತಾಣಕ್ಕೆ ಪೋಗಿ ಸೇವೆಯ ಕೊಂಬುದು
ಅರಸಿಂಗೆ ಅರಸುತನವಹುದೆ ತಾಂ• ಭಕ್ತರಿಹ
ವರಗೃಹಾಂತರದೆಡೆಗೆ ಪೋಗಿ ನೀಂ ಭಕ್ತಿಯಂ
ಭರದಿಮಾಡೆನಲೆನ್ನ ಕರ್ತೃತ್ವ ಹಾನಿಯೆಂದಿರುವವನೆ ಸ್ವಯಜಂಗಮಂ• ೩೨

ಮುಡಿಗಟ್ಟಿ ಬಿಡಿಗುರುಳಂ ನಖರೋಮಮಂ ತ್ಯಜಿಸ
ದೆಡೆಯರಿದಂ ಮೌಂಜಿ ಮೇಖಲೆಯ ಶಿವ•ಸೂತ್ರಮಂ
ಸಡಗರದಿ ಧರಿಸುತಂ ದಾರುಶಿವಭಸ್ಮಘುಟಿಕೆ ಸ್ಫಟಿಕಜಲಪಾತ್ರೆಯಂ
ಪಿಡಿದು ಶಿವಲಿಂಗಮಂ ತ್ರೈಕಾಲ•ದಿಂ ಭಜಿಸು
ತೊಡನೆ ಮೃಡಭಕ್ತರತಿವಿನಯದಿಂ ಮಾಡೆ ಕೈ
ವಿಡಿವುದೌದಾಸೀನ್ಯದಿಂ ಬರಲ್ ಮುಟ್ಟದಾ ಪರಮನೆ ಸ್ವಯಜಂಗಮಂ ೩೩

•ಹಮ್ಮಳಿದ ಸೊಮ್ಮಾಂತು ನೆಮ್ಮಿ ನಿಜತತ್ವಮಂ
ಚಿಮ್ಮಿತಾಪೇಕ್ಷೆಯಂ ಮನನಕೀಲದಿ ನಿಂದು•
ಕಮ್ಮಿಲ್ಲದತಿಶಾಂತಿಯಿಂದ ನಿರ್ವೈರದಿಂ ಸುಖ ದುಃಖ ನಿಂದೆ ಸ್ತುತಿಯಂ
ಒಮ್ಮನದೆ• ಸಮಗಂಡು ನಿರ್ಮಲತ್ವವ ತಳೆದು
ಸಮ್ಮ ಸೊಕ ಪಿಂಗಿ ದುಮ್ಮಾನದುಮ್ಮಳಿ ಪಳಿಯೆ
ಬೊಮ್ಮದುರುನೆಲೆಯುನರಿದು•ಮ್ಮಹದ ಸೈಪಿನಿಂದೆಸೆವನೈ ಸ್ವಯಜಂಗಮ ೩೪

ಪರಮಶಿವಜಂಗಮದ ನಿರ್ವೈರ ನಿಬ್ಬೆರಗಿ
ನುರಂಶಾಂತಿ ದಾಂತಿಯಿಂದಾ ವಿಪಿನದೊಳ್ ಚರಿಪ
ಎರಲೆ ಸಾರಂಗ ಪುಲಿ ಕರಡಿ ಪಶು ವಾನರಂ ಕೋಕಿಲಂ ಕೇಕಿ ಹಂಸ•

---

1 ನಂ (ಗ) • ಈ ಭಾಗಕೆ ಪ್ರತಿಯಲ್ಲಿ ಗ್ರಂಥಪಾತವಾಗಿದೆ

ಹರಿ ಹಸ್ತಿ ಭೇಕೋರಗಂ ಮತ್ಸರಂ ಬಿಟ್ಟು
ವರಲೀಲೆಯಿಂ ಸರಸವಾಡಿಯೊಂದೇತಾಣ
ದಿರುಬಿನೊಳ್ ಕೂಡಿ•ಯಾಹಾರ ಜಲಗಳ ಕೊಂಡು ನಿದ್ರಿಸುತ್ತಿಹವದ್ಭುತಂ ೩೫

ಶಿವಶಾಸ್ತ್ರ ಶಿವಪುರಾಣಾಗಮದ ನಿಗಮಮಂ
ಶಿವತತ್ತ್ವ ಶಿವ•ಸೂಕ್ತ ಲಿಂಗಸೂಕ್ತಂ ನಮಕ
ಮಂವಿರತಂ ಪಠಿಸುತ್ತ ಶಿವನೆ ಮನದೊಳ್ ನೆಲಸೆ ಶಿವಚಿಂತೆ ಶಿವಪೂಜೆಯಂ
ತವೆ•ಯದೇ ಮಾಡುತ್ತ ಬ್ರಹ್ಮಾದಿಪದಗಳಂ
ಸವಿಲಾಸಮುಳಿದು ನಿತ್ಯಾನಂದಸಿದ್ಧಿಕರ
ಮಂವಿರಳ ಪರಬ್ರಹ್ಮನಾಗಿಹಂ ತಾನೆ•ಸ್ವಯಜಂಗಮಂ ಕೇಳ್ ಕುಮಾರ ೩೬

ಮಂತ್ತೆ ಕೇಳ್ ಋಗ್ವೇದಯಿಾಶ್ವರೋತಿಥಿಯೆನ
ಲ್ಯುತ್ತಮದ ರೂಪಾಂತು ಚರಿಸುತಂ •ಪರಶಿವಂ
ಅತ್ಯಧಿಕ ವೀರಾಗಮಂ ಸರ್ವಲೋಕೋಪಕಾರಾಯ ಎನುತಿರ್ಪುದು
ಉತ್ತರಾರ್ಥವನೆ ಪೇಳ್ವುದು ಪುರಾಣಂ ಬಳಿಕ•
ಮರ್ತ್ಯದೊಳ್ ಶಿವಪೂಜೆಯಂ ಮಾಡುವಂ ರುದ್ರ
ಣತ್ತಣಿಂ ಕಳುಹಿಸಲ್ಪಟ್ಟು ಶಿವಲೋಕದಿಂದಿಲ್ಲಿಹನೆನುತ್ತಲೊಡನೆ ೩೭

•ಚರಿಸುವಂ ಚರಲಿಂಗರೂಪಮಂ ವಹಿಸುತ್ತ
ಲರರೆ ಸಚರಾಚರಾತ್ಮಕ ಜನದೊಳತಿಶಯದ
ಪರಮ ಚೈನ್ಯಮಯ ಪರಿ•ಪೂರ್ಣ ಪರತತ್ವ ಪರಬೊಮ್ಮ ಪರಮಾತ್ಮನೆ
ಪರಮಂಜಂಗಮವಾಗಿ ಪಾಪಪಂಕವನು ತಾಂ
ಭರದಿಂದ ತೊಳೆದು ಭಕ್ತರ ಪೊರೆವುತಂ ದಯದಿ
ಮೆರೆವ ಚರಲಿಂಗಮೂರ್ತಿಯೆ ಮಹಾಘನವೆನುತ್ತೊರೆದನಾ ರೇವಣೇಶಂ ೩೮

ಕಂಥೆಯಂ ಕರ•ಪಾತ್ರೆದಂಡಮುಂ ಮೇಖಲೆಯು
ಸುತತದ ಭಸ್ಮಭಸ್ತ್ರಿಕೆ ಪಂಚಮುದ್ರೆಯಂ
ಕಂತುರಿಪು ಜಂಗಮಂ• ಧರಿಸಿ ಧರೆಯೊಳ್ ಚರಿಸುತಂ ಜಗತ್ಪಾವನಾರ್ಥಂ
ಮುಂತೆಯಾಚಾರ ಸುವಿಚಾರಮಂ ವಿವರಿಸು
ತ್ತಂತು ಕುಲಶೀಲವ್ರತಗಳ• ನಿಯಾಮಿಸುತಲೋ
ರಂತೆ ಪತಿತರ ವಿಸರ್ಜಿಸುತ ಶಿವದೀಕ್ಷಿತರ ಪಿಡಿವುದೇ ಚರಲಿಂಗವು ೩೯

---

• ಈ ಭಾಗ ಕ ಪ್ರತಿಯಲ್ಲಿ ಗ್ರಂಥಪಾತವಾಗಿದೆ.

••ತುರುಬು ಜಡೆ ಬಿಡಿಗುರುಳು ಕಾಷಾಯದಂಶುಕಂ
ಶಿರವೇಷ್ಟನಂ ಚಿನ್ನರನ್ನಮೌಕ್ತಿಕ ತಾಮ್ರ
ದುರುತರದ•• ರುದ್ರಾಕ್ಷಿ ಕರ್ಣಕುಂಡಲ ಕಂಕಣಂ ಭಂಜದ ಕಟಕಂಗಳುಂ
ತರಳಮುಕ್ತಾಹಾರ ರುದ್ರಾಕ್ಷಿಸರ ಮೇಲು
••ಬೆರಲುಂಗುರಂ ಬಹಿರ್ವಾಸ ಧೋತ್ರಂ ಕೌಪು
ಮುರಕಟಿಯು ಸೂತ್ರಮಿವನಾಂತು ಮನಬಂದಲ್ಲಿ ಚರಿಸುವನೆ ಚರಜಂಗಮಂ•• ೪೦

•ಮಲಮೂರರಾಶಿಯಂ ಕುರಿತು ಚಲಿಸದೆ ಭಕ್ತ
ನಲವಿನಿಂ ಭಕ್ತಿಭಿಕ್ಷವ ನೀಡೆನಂತ್ತ ಮುದ
ವಲರಿಸುತ ಚರಲಿಂಗ ನಾಮವನ್ನಾಂತು ಕಾಮಾದಿ ರಿಪುಷಟ್ಕಮಂ
ಗೆಲುತಾಂತರಂಗದಿಂದ್ರಿಯ ಬಾಹ್ಯದ••ಕ್ಷಮಂ
ಛಲದಿ ಜಯಶೀಲನಾಗುಂತ್ತ ತನ್ನನುಭವದೊ
ಳೊಲವಿನಿಂ ಚರಿಸುವನೆ ಯತಿಶಯದ ಚರಲಿಂಗ••ಯತಿಕುಲತಿಲಕನೆ••ಕೇಳು ೪೧

ಗುರುಮುಖದಿ ಬಂದುದಂ ಕೈಕೊಳುತ ಲಿಂಗದಿರ
ವರಿದೇ ಶಿವಾರ್ಪಣಂಗೈಯುತ್ತಮಲ್ಲಲ್ಲಿ••
ಶರಣರೊಡನೊಂದಾಗಿ ಚರಿಸುತ್ತಲಪರಾಜ್ಞೆಯಂ ಮೀರದಾತನಾಗಿ
ಭರದಿ ಚರಿಸಂತ್ತ ಕ್ಷೇತ್ರಗಳ ಪಾವನಗೈ••ವು
ತರಿದಾದ ಋತುಕಾಲ ತಿಥಿಗಳಂ ಮನ್ನಿಸುತೆ
ವರಸಮತೆ ಕಂಥೆ ಸುಜ್ಞಾನ ಕೋಟರದಿಂದ ಚರಿಸುವನೆ ಚರಲಿಂಗವು•• ೪೨

ತದನಂತರಂ ಕೇಳು ಶಿವನೊರೆದ ಗಿರಿಜೆಯೊಳ್
ವಿದಿತಮಹಾಗಿಂತೆಂದು ಮಲ್ಲಾಂಛನಂ ವಹಿಸಿ
••ಪದಪಿನಿಂ ಚರಿಸುವಡೆ ಶುಭಜಂಗಮಕ್ಕೆ ನೆನ್ನಯ ಮುದ್ರೆಯಾಯಾವನೆ
ಪದ[1][ದಿಯಾ][1]ವುಗೆಯಪಸ್ಮಾರಂ ಜಲಂಧರನ••
ವಿದಳಿತ ಶಿರಂ ಕಿಂಕಿಣಿಯು ಶೇಷನೇ ಸೂತ್ರ
ಭದನವದಕಾಗಿ ರಾಜಿಪನು ಗಣನಾಯಕಂ ಕೇಳೆಯ್ಯ ರುದ್ರಮುನಿಯೆ ೪೩

ಶ್ಲೋಕ ॥

ಅಥಾತಃ ಸಮ್ಪ್ರವಕ್ಷ್ಯಾಮಿ ಮಮ ಲಾಂಛನಮುತ್ತಮಂ
ಯದ್ವೃತ್ಯಾಚರತಾಂ ಲೋಕೇ ಶುಭಂ ದೇವಿ ನ ಸಂಶಯಃ ೧

1 ದಿಂದಾ (ಗ) ೪೧ ನೆಯ ಪದ್ಯದಲ್ಲಿ ಛಂದೋಭಂಗವಾಗಿದೆ.

: ಈ ಭಾಗ ಕ ಪ್ರತಿಯಲ್ಲಿ ಗ್ರಂಥಪಾತವಾಗಿದೆ.

ಅಪಸ್ಮಾರಃ ಪಾದುಕಾಭೂಜ್ಜಲನ್ಧರ ಶಿರಸ್ಪದಂ
ಕಿಂಕಿಣೆ [1]ಸ್ಯಾ[1]ದ್ಗುಣಶ್ಶೇಷಃ ಪತ್ರೋಽಯಂ ಗಣನಾಯಕಃ ೨

ಉಡಿನೂಲೆ ಗೋವಿಂದ ವ್ಯಾಳಾಸುರನೆ ಕೌಪು
ವುಡಿಯುಡಿಗೆಯೆ ವ್ಯಾಘ್ರ ದೈತ್ಯ ಚರ್ಮವು ಮೇಲ
ಣುಡಿಗೆಯೇ ಲಾಲಾಸುರನ ಸಮ್ಮ ಯಾಜ್ಞನಾರಾಯಣವೆಂದುತ್ತರೀಯಂ
ಕಡಿದಾಸೆ ಭಸ್ಮಗುಂಡಿಕೆ ಭಸ್ಮವೇ ಕಾಮ
ತೊಡರ್ದ ರುದ್ರಾಕ್ಷಿಯೆ ಸುರಾಸುರ ಶಿರೋಮಾಲೆ
ಯೊಡೆದ ಬೊಮ್ಮನ ತಲೆಯೊಳೂರ್ಧ್ವಭಾಗವೆ ಶಂಖ ಕೀಳ್ಗಡೆಯೆ ಕಪ್ಪರವದಂ ೪೪

ಜನಿವಾರವೇ ವಿಧಿಯ ನವಿರು ಕರದಂಡ ವಾ
ಮನನ ನಟ್ಟೆಲುವು ವಿಷ್ವಕ್ಸೇನ ಕೇಶವೇ
ಘನವಾದ ಚಾಮರಂ ಚಾಮರಾವರಣವೇ ವೈನತೇಯನ ಪಕ್ಷವು
ಗುಣವೆ ದಂಡದ ಮಹಾಮಲ್ಲಾಸುರನ ನಾಡಿ
ಯನುವಾದ ಘಂಟೆಯೆ ಗುಹಾಸುರನ ವಕ್ತ್ರ ಕೂ
ರ್ಮನ ಪ್ರತೀಕವೆ ಕಮಂಡಲು ನೃಹರಿ ಚರ್ಮವೇ ಪೊರವಳಯದಂಶುಕವಲ ೪೫

ಕರಿಚರ್ಮವೇ ಕಂಥೆ ಶೂರಪದ್ಮಾಸುರನ
ವರ ಚರ್ಮವೇ ಜೋಳಿಗೆಯು ಕಕ್ಷಪಾಲವೇ
ಕರಿವೈರಿ ವಕ್ರಾಸುರನ ಚರ್ಮ ಖಟ್ವಾಂಗವೆಂದೆನಿಪುದದರ ಭೇದಂ
ಒರೆಗೆ ಸುತ್ತುವ ಯೋಗವಟ್ಟಿಕೆಯೆ ನನಗೆ ಕೇಳ್
ಗಿರಿಜಾತೆ ಪಂಚಮೇಢ್ರಾಸುರನ ಸಮ್ಮ ಖ
ರ್ಪರವೆ ಕೂರ್ಮನ ಬೆನ್ನೆಲುವಿನ ಸೆಜ್ಜೆ ಗೃಹಂ ವಜ್ರದಂದದಿ ಥಾಳಿಪ ೪೬

ಕಾವಿಯೇ ರಕ್ತಬೀಜಾಸುರನ ರಕ್ತ ನಸು
ಗಾವಿಯ[2][ಹ][2] ಜೆಡೆಯ ಕಟ್ಟಿನ ದಾರವೇ ರಾಹು
ತೀವಿದುಡ್ಯಾಣವೇ ವಾರಾಹ [3]ಮ[3]ತ್ಸ್ಯವೆ [4]ಲ[4]ಲಾಟವಾಗಿರುತಿರ್ಪುದು
ಹಾವಿನಿಂಗಳದ ಪೆಸರುಳ್ಳ ದೈತ್ಯರ ಎಲುಗ
ಳೇ ವಿಮಲ ಡಮರುಗಂ ಜ್ವಾಲಾಸುರನ ಸಮ್ಮ
ವೇ ವಸನವಾಗಿಹುದು ಕಾವಿಯದ್ದಿದ ಚಂದಿರನ ಪೆರೆಯೆ ಸಿಕ್ಕುಗೋಲು ೪೭

---

1 ಸ್ಥ (ಗ) 2 ಗಾಹ (ಕಗ) 3 ಮಾ (ಗ) 4 ತ (ಗ)

ಹರಿಯೆ ವಾಹನ ವೃಷಭವಿಾ ಕಂಬಳಾಶ್ವತರ
ಹರಿಗಳೇ ಕರ್ಣಕುಂಡಲ ಶಿಷ್ಯರೇ ಸ್ಕಂದ
ರುರುಭೈರವಗಣೇಶ ವೀರಭದ್ರಾದಿಗಳು ಪಂಚಾಕ್ಷರಿಯೆ ಮಂತ್ರವು
ಪರಮಾನುಭವ ಭಿಕ್ಷೆ ಸಮಬುದ್ಧಿಯೇ ಮುದ್ರೆ
ಪರಶಿವನೆ ಪ್ರಾಣಲಿಂಗಂ ತೋರು[1] ವೀ ಚರಾ
ಚ[1]ರಗಳೆನ್ನಯ ಕುಟುಂಬಂ ಸತ್ಯಮಿವರಿಂದಲಾಂ ಶಿವೆ ಗೃಹಸ್ಥನೆನಿಪೆಂ ೪೮

ಗ್ರಂಥ:

ಗೋವಿನ್ದಸ್ಸೂದರಾವಾರ ಕಟಿಸೂತ್ರಂ ಮಮಪ್ರಿಯೇ
ಕೌಪೀನಂ ವ್ಯಾಳದೈತ್ಯೆ ಸೌಪ್ಯಾಘ್ರ ಚರ್ಮಾಧರಾಮ್ಬರಮ್ ೧

ಲಾಲಾಸುರ ಸ್ಯೈಲವ[2]ಕ್ರು[2]ರೂರ್ಧ್ವಾಮ್ಬರಮಿತೀರ್ಯತೇ
ಯಜ್ಞನಾರಾಯಣಸ್ಯೈವ ತ್ವ ಚಮೈವೋತ್ತರೀಯಕಮ್ ೨

ಭಸ್ಮಧಾರಃ ಪಕ್ವರಾಗಃ ಕಾಮೋಭಸ್ಮಮಹೇಶ್ವರೀ
ಸುರಾಸಂರ ಶಿರಶ್ಚೈವ ರುದ್ರಾಕ್ಷೇತಿ ಪ್ರಕೀರ್ತಿತಮ್ ೩

ಅಧೋಭಾಗಃ ಖರ್ಪರೋಭೂದ್ಬ್ರಹಣಶ್ಚ ಶಿರಃಪದೇ
ಊರ್ಧ್ವಭಾಗ[3]ಸ್ತು[3] ಶಂಖೋಯಂ ಸರ್ಪಾಸ್ತತ್ರ ಶಿರೋರುಹಾಃ ೪

ಯಜ್ಞೋಪವೀತಂ ಕಂಕಾಳಂ ವಾಮನಸ್ಯೈವದಂಡಕಂ
ವಿಷ್ವಕ್ಸೇನ ಶಿರಸ್ತಸ್ಯ ಚಾಮರಂ ಪರಿಪಠ್ಯತೇ ೫

ಚಾಮರಾವರಣಂ ದೇವಿ ಖಗಪಚ್ಛದನಂ ಸ್ಮೃತಾ
ಮಲ್ಲಸ್ಯನಾಡಿ ದಣ್ಡಸ್ಯ ಪಾಶೋಯಂ ಶೃಣು ಪಾರ್ವತೀ ೬

ಗುಹಾಸುರ ಮುಖಂ ಘಂಟಾಕೂರ್ಮಾಂಗಂಚ ಕಮಂಡಲು
ನೃಹರೆಸ್ತ್ವಗ್ಬಹಿರ್ವಾಸೊ ಗಜಚರ್ಮೈವ ಕನ್ಥಕಾ ೭

ಚೋಟಿಕಾಮುಖಬನ್ಧಶ್ಚ ಶೂರಪದ್ಮಸ್ಯ ಚರ್ಮಚ
ಕಕ್ಷಪಾಲಃ ಸಿಂಹವಕ್ತ್ರಾಜಿನಂ ಖಟ್ವಾಂಗಮುಚ್ಯತೇ ೮

ಪಂಚಮೇಢ್ರಾಸುರ ತ್ವಕ್ಚ ಯೋಗವಟ್ಟಮುದಾಹೃತಂ
ಸಜ್ಜಾಗೃಹಂಚ ಕೂ[4]ರ್ಮಾಸ್ಥಿ[4] ಖರ್ಪರಂ ಪರಮೇಶ್ವರಿ ೯

ಜ್ವಾಲಾಸುರಸ್ಯ ತ್ವಗ್ವಸ್ತ್ರಂ ಕಾಷಾಯೋರಕ್ತಬೀಜಕಂ
ಲಿಂಗಂ ಪರಶಿವೋಜ್ಞೇಯಮಾತ್ರಂ ಪಂಚಾಕ್ಷರೀ ಶಿವೇ ೧೦

---

1 ವಿ:ಚಾ (ಕಗ) 2 ಕೃತ್ತಿ (ಗ) 3 ಚಸ್ತು (ಗ) 4 ರ್ಮಸ್ಥ (ಕ)

ಪರಮಾನುಭವೋ ಭಿಕ್ಷಾಮುದ್ರಾ ನಿಸ್ಪಾದ ಸ್ತುತಿ ಕ್ಷಯಃ
ರಾಹಂರ್ಜಟಾಬಂಧಪಾಶಃ ಶಶಾಂಕಃ ಪೋತಕಾಷ್ಟಾಕಮ್ ೧೧

ಕಮ್ಬುಳಾಶ್ವತರೌ ಕರ್ಣಕುಣ್ಡಲೆ ಮಮಶಂಕರಿ
ಕಿಂಕಿಣಿಕ್ಕಿಟಶಲ್ಯಂಚ ಮಾತ್ಸ್ಯನಾಗಾನಲಃ ಶಿವೇ ೧೨

ಲಲಾಟಂ ಚರ್ಮಪೃಷ್ಠಾಸ್ಥಿ ವೃಷಭೋಲಾರಿರುಚ್ಯತೆ
ಶಿಷ್ಯಾಶ್ಚ ಗಿರಿಜೆ ಸ್ಕನ್ದ ವೀರಾದ್ಯಾ ಗಣನಾಯಕಾಃ ೧೩

ಇದಂ ಚರಸ್ಥಲದ ನಿರ್ದೇಶಲಕ್ಷಣದಿರವ
ಮುದದಿಂದ ಪೇಳ್ದೆವಿನ್ನಧಿಕವಹ ಪರಜಂಗ
ಮದ ನೆಲೆಯು ನಿನಗೊರೆವೆನದುವೆ ತಾಂ ಸೋಮಸಮ್ಯಗ್ಗಂಥಮತಿಶಿಲನಿಲಯಮಂ
ವಿದಿತವ್ರತಗಳ ಮಿೀರಿ ಬೇಡುತಾನಂದದಿಂ
ಸದಮಲಬ್ರಹ್ಮ ಭಾವನೆಯಿಂದ ಸರ್ವಮಂ
ಪದಪಿನಿಂ ನೋಡುವನೆ ಪರತತ್ವರೂಪನಹ ಪರಜಂಗಮಂ ಲಾಲಿಸೈ ೪೯

ಭಂಗವಹ ಮಮತೆಯುರೆ ಪಿಂಗಿದುದೆ ಕೌಪು ಸ್ತ್ರೀ
ಸಂಗರಹಿತಂ ಕಟೀಸೂತ್ರ ಶಾಂತಿಯೆ ದಾರ
ತುಂಗದಯುಯೇ ನೋಡೆ ಭಸ್ಮಭಸ್ತ್ರಿಕೆಯಂ ಪಂಚೇಂದ್ರಿಯದ ವ್ಯಾಪಾರಮಂ
ಭಂಗಿಪುದೆ ದಂಡವಿಜ್ಞಾನಮುದ್ರೆಗಳೈದು
ಮಂಗದೊಳ್ ತಳೆದು ತ್ರೈಕರಣಶುದ್ಧತ್ವಮುಮ
ನಂಗದುರ ಹಂತೆಯುಳಿಯಲ್ ಜಂಗಮಕ್ಕಧಿಕಪರಲಿಂಗತಲ ಕುಮಾರ ೫೦

ಯತಿರಾಜನಾದ ಶರಣಗೆ ರಮಣಿಯೇ ವಿದ್ಯೆ
ಪಿತನೆ ಯಾಚಾರ ಜನನಿಯೆ ಭಕ್ತಿ ಸಂತೋಷ
ಸಂತನು ಸತ್ಯಂ ಪೌತ್ರ ಕ್ಷಮೆಯು ಪರಿಚಾರಕಿಯು ಶಾಂತಿಯೇ ಸಂಗತಿಗಳಂ
ನುತ ವಿರಾಗಂ ನೆಂಟ ದಮೆಯೆ ಭಟ್ಟಾರಕಂ
ನತ ಶ್ರದ್ಧೆಯೇ ತಂಗಿ ತೊರೆದಹಿಂಸೆಯೆ ಸೊಸೆಯಂ
ರತಿಯಿಲ್ಲದಿಹುದೆ ಭಂಟಂ ಸ್ನೇಹಕರಣಗಳ್ ತನಯರ್ರೈ ಕೇಳ್ ಕುಮಾರ ೫೧

ತನಗೆ ವಾಹನವೆ ಧರ್ಮಂ ದೇಹ ಸಂಜ್ಞಾನ
ವಿನಂತ ಸುವಿಚಾರಮೇ ಸುಕ್ಷೇತ್ರ ಸದ್ಗಮನ
ವಿನಯಮೋಕ್ಷಾಂಗ ಬಹುಳ ರಾಜ್ಯಸೂನೃತದುರ್ಗಶೀಲಮೇ ಪ್ರಕಾರವು
ಅನವರತ ಶಮೆಯೆಂಬ ಶಸ್ತ್ರಮಂ ಪಿಡಿದನಘ
ಘನರಾಜ ಸಂಸಾರಿಯುಹ ಶರಣನಂ ಜಗದ
ಜನರಾಗ ಮೂರ್ಖರೇಗೈವರ್ರೈ ಮಾಗನೆ ಮನವೊಲ್ದು ನೀಂ ಲಾಲಿಸಯ್ಯ ೫೨

ಶಮೆಯೆಂಬ ಸತ್ಕಂಥೆಯಂ ಸಂಬುದ್ಧಿಯುಯೆಂಬ
ವಿಮಲ ಟೊಪ್ಪರಗಳಂ ಧರಿಸಿಯತಿವಿಷಯಗಳ
ಮಮತೆಯಿಂ ಹಾವುಗೆಯ ಮೆಟ್ಟಿ ತಮವೆಂಬ ಕುಳಿಯೊಳ್ ಬೀಳದೇ ರಾಗದ
ಅಮಮ ಕೊರಡಂ ಎಡಹದಧಿಕ ಮದವೆಂಬ ಚೇ
ಳಮುರಿ ಮೆಟ್ಟದೆ ಮೋಹಮುಳ್ಳದುಳಿಯದೆ ಲೋಭ
ದಮಿತಮಪ್ಪಾ ಪೊದರ ಪೊಗದೆ ಚರಿಸುವನೆ ತಾಂ ಪರಮಚರಲಿಂಗಮಹಿಮಂ ೫೩

ಕ್ಷುಧೆಯಿಲ್ಲದಿಹುದೆಯಾಚರಣೆ ಶಿವಶಾಸನದೊ
ಳೊದವಿಬಂದುದನು ಸ್ವೀಕರಿಪುದೇ ಸಮ್ಯಂಧ
ಪದರಿ ಪರರಂ ಬೇಡದಿಹುದೆ ವೈರಾಗ್ಯ ಆತ್ಮೋಪಾಧಿಯಳಿದು ಬೇಡೆ
ವಿದಿತವಹ ಜ್ಞಾನಗಮನೋಪಾಧಿಯಿಲ್ಲದಿರ
ಲದು ವಿರಾಗಂ ಕೇಳು ನಿರ್ಗಮನಿಯಾಗಿ ತಾಂ
ಪದಪಿನಿಂದಿರಬಲ್ಲಡದುವೆಯೆಂರಿಪುಂ ಮಗನೆ ಪರಮಂಚರಲಿಂಗಚರಿತಂ ೫೪

ಸತ್ಯಮೆನಿಸುವ ಸ್ವಾನುಭವವೆ ಶಿವದಾರ ಮೇ
ಣತ್ಯಧಿಕ ದರವೆಂಬ ಕಪ್ಪಡಂ ಶಾಂತಿಯೆಂ
ಬುತ್ತಮದ ಭಸಿತ ದಮೆಯೆಂಬಮಳರುದ್ರಾಕ್ಷೆ ಶುಭಪಂಚಲಕ್ಷಣಗಳಿಂ
ಬಿತ್ತರದ ಪಂಚಾಕ್ಷರಂ ಹೃದಯಸೆಜ್ಜೆಯಾ
ನಿತ್ಯಚೈತನ್ಯಲಿಂಗಮನಂಗವಸ್ತ್ರದೊಳ
ಗಾತ್ಮ್ಯಾತ್ಮನಂತರಾಳದ ಪಸನದಲಿ ಧರಿಸಿ ಚರಿಸುವನೆ ಪರಜಂಗಮಂ ೫೫

ಪರತತ್ವ ಪರನಾದ ಪರಮಾರ್ಥನೇ ಪರಾ
ಪರನು ವಾಕ್ಕಿಗತೀತ ಶಬ್ದಗಂಭೀರನುರು
ತರನು ರೂಪಾತೀತನುನ್ನತ ಶಿವಜ್ಞಾನಪ್ರಭೆಯೊಳೆಡೆವಿಡದೆ ಸುಳಿವ
ಪರಮಮಹಿಮಂಗೆ ಸಮ್ಯಜ್ಞಾನಶೃಂಗಾರ
ಪಿರಿದಹ ಮಹಾಬೆಳಗೆ ಭೂತಿ ಪಂಚಬ್ರಹ್ಮ
ದಿರವೆ ದರ್ಶನ ಗಗನಭಾಗವೇ ಕಂಥೆಯಂಬರವೆ ಟೊಪ್ಪರ ಲಾಲಿಸು ೫೬

ತಿಳಿಯಲ್ಕಜಾಂಡಮೇ ಕರ್ಣಕುಂಡಲವಾಗೆ
ಸಲೆ ಮಹಾಲಿಂಗಶಕ್ತಿಯೆಂ ಕಕ್ಷಪಾಳ ಮ
ತ್ತಳವಟ್ಟ ನಿತ್ಯತ್ವವುಡ್ಯಾಣಮದ್ವೈತಯೋಗವಟ್ಟಿಗೆ ಯೋಗವೆ

ಚಲಿಪ ಪಾವುಗೆ ಲಿಂಗವೆ ಪ್ರಮಾಣಾತೀತ
ಮಳಿವಿಲ್ಲದಾ ಲಾಕುಲಂ ತಾನೆ ಕಲ್ಪನೆಯ
ನಳಿದುದಂ ಮನೋವಾಂಛೆಗೊಂಡುದೇ ಗಮನ ನಿಂದಿರವೆ ಕೇಳ್ ನಿಜನಿವಾಸಂ ೫೭

ಚರಿಸದಿಹ ಮನವೆಂಬ ಮಠದಲ್ಲಿ ಶಾಂತಿಯಿಂ
ಸ್ಥಿರಬುದ್ಧಿಯೆಂಬ ಸಿಂಹಾಸನದಿ ಚಿತ್ತೆಂಬ
ಸರದ ವಿಮಲೋದಕವನೆರೆದು ನಿಜಲಿಂಗಕ್ಕೆ ಬಿಂದುವಂಯಗಂಧಮಿಕ್ಕಿ
ಪಿರಿಯು ಬಾನೆಂಬಕ್ಷತೆಯು ಪರಾಪರಮೆನಿ
ಪ್ಪರಳನೊಂದಿಸಿ ನಿರಂಜನಮೆಂಬ ಧೂಪಮಂ
ಪರಮಪ್ರಕಾಶಮೆಂತೆಂಬ ದೀಪವನೆತ್ತಿ ತೃಪ್ತಿನೈವೇದ್ಯಮಾಡಿ ೫೮

ವಿರತಿಯೆಂಬುದೆ ಕ್ರಮುಕ ಪರಿಶುದ್ಧತೆಯೆ ಸುಣ್ಣ
ಕರಿದಾದ ಪಾಪಮುಳಿದುದೆ ನಾಗವಲ್ಲಿಯೇ
ಪರಮಾತ್ಮಲಿಂಗಕಿವನಿತ್ತುತ್ತರಾಚಾರಮೆಂಬ ಹಸ್ತೋದಕವನಂ
ಭರದಿಂದೊಡರ್ಚಿ ಪಂಚೇಂದ್ರಿಯದ ಪಂಚಮುಖ
ಕರಣಮುಳ್ಳಾರ[1][ಯ್ಯ ವಾ][1]ರತಿಯ ದೀಪದಂ
ಕುರಗಳಿಂದೆತ್ತುವನೆಯೆರಡಿಲ್ಲದರಿವಿನಿಂ ಚರಲಿಂಗಮೂರ್ತಿಯೆನಿಪಂ ೫೯

ವರಮಹಾಲಿಂಗಪರಿಣಾಮಂದೇ ಶೇಷ ತಾಂ
ಪರಮ ಸಮ್ಯಜ್ಞಾನಸಂತೋಷಮಾಗೆಯು
ತ್ಯುರುತರ ನಿರಾಭಾರಿಗಣಮೇಳದಿಂದ ನಿಸ್ಸೀಮಂ [2]ವಿ[2]ಭ್ರಾಂತನಚಳ
ಚಿರಸಂಗದೊಳ್ ನಿರಾಶಾಪದವೆ ತನ್ನ ಮಠ
ಮೆರೆವ ನಿಶ್ಶಬ್ದದನುಭಾವಮನುಪಮಶೂನ್ಯ
ದಿರವೆ [3]ವಿ[3]ಶ್ರಮನಿರಾಕಾರಮೇ ಗಮನ ಪಾತಾಳದಿಂದೂರ್ಧ್ವಪವನಂ ೬೦

ಒಡಮೆರೆದ ಶಿವಯೋಗದಿಂದ ತ್ರಿಭುವನಗಿರಿಯ
ನಡರಿ ಕಾಯದ ಕದಳಿಯಂ ಪೊಕ್ಕು ಸುಳಿವ ಸುಖ
ದೃಢತರದ ಮಹಿಮಂಗೆಯಿಹಲೋಕ ಪರಲೋಕದೊಳಗಾವುದಧಿಕಮುಂಟೆ
ಸಡಗರದ ಗಮ್ಯಂ ನಿರಾಳಪರಮಜ್ಞಾನ
ಯೆಡೆವಿಡದ ಸಿದ್ಧಿ ಮಹಲಿಂಗದವಿರಳ ಬೆಳಗು
ಬೆಡಗರಿದು ಪರಮಜಂಗಮಂಕೆ ಶರಣಾತನನುಪಮ ನಿತ್ಯ ಕೇಳ್ ಕುಮಾರ ೬೧

---

1 ಯವಾ (ಕ) ಯ್ಯನಾ (ಗ) 2 ನಿ (ಗ) 3 ಪವಿ (ಗ)

ವರರುದ್ರಮುನಿಯೇಯೆನಾದಿಜಂಗಮದಿಂದ
ಉರುತರದ ಮೂರುತೆರಕಾದ ಜಂಗಮದಿಂದ
ಪರಿವಿಡಿಯ ಸೃಷ್ಟಿಯಂ ಪೇಳಿ ಸ್ವಯಚರಪರಸ್ಥಲತ್ರಿವಿಧಲಕ್ಷಣಗಳಂ
ನಿರವಿಸಿದೆವೈಸಿನ್ನು ಧರೆಗುದಿಸುವಂದು ಭಾ
ಸುರಗಣಾಗ್ರಣಿಗಳಹ ಪ್ರಮಥೇಶರಿಳೆಯಲ್ಲಿ
ಭರದಿಂದಲವತರಿಸಿ ಧರೆಯೊಳ್ ವಿರಾಜಿಸುವ ಕಥೆಯ ಪೇಳ್ವೆಂ ಕುಮಾರ ೬೨

ಮುನ್ನ ಸುರಮಯ ವಿಭಾಂಡುಕನಾಗ ತನ್ನ ಸತಿ
ಸನ್ನುತದ ನಂದಿಯೇ ಸುತನಾಗಬೇಕೆಂದಂ
ಬಿನ್ನಣದ ಕಂದಮೂಲಾತ್ಯಲ್ಪ ಪತ್ರ ಜಲ ಶಿಲೆಗಳಂ ಸೇವಿಸುತ್ತ
ಯುನ್ನತದ ವುಗ್ರತಪವಂ ವೊಡರ್ಚುತ್ತಿರಲ್
ಪನ್ನಗಾಭರ[1]ಣಂ[1] ಪ್ರಸನ್ನನಾಗುತೆ ಕೇಳೆ
ನನ್ನಿಯಿಂ ತನ್ನಿಷ್ಟಫಲವ ಬೇಡಲ್ ಶಿವಂ ನಿರವಿಸಿದನಾನಂದದಿಂ ೬೩

ದನುಜತ್ವಮಂ ನೀವು ನೀಗಿ ಭೂಮಿಯೊಳ್ ಪೋಗಿ
ಘನರಜತನಗಕೆ ದಕ್ಷಿಣಭಾಗದೊಳ್ ಮೆರೆವ
ವಿ[2][ನುತ][2]ಭಾರತಖಂಡಮುಂಟದರ ನಿರುತಿದೆಶೆಯಲ್ಲಿರ್ಪ ದೇಶದೊಳಗೆ
ಜನಿಸಿ ಭೂಸುರವಂಶದೊಳ್ ನರಾಕೃತಿಯಿಂದೆ
ಯನವರತ ಪುತ್ರಮೋಹದೊಳು ನೋಂಪಿಗಳುಂಟು
ವನಿತುಮಾಚರಿಸಲೇನಿಲ್ಲ ನಂದಿವ್ರತದೊಳಹದು ಮಾನಸದಿಷ್ಟವು ೬೪

ಸೃಷ್ಟಿಯೊಳ್ ಶಿವಮತೋದ್ಧರಣಕಾರಣ ನಿಮ್ಮ
ಭೀಷ್ಟಕೋಸುಗ ನಮ್ಮ ಕಟ್ಟಳೆಯೊಳುದಿಸಿ ನಿವಂ
ಗಿಷ್ಟಮಂ ಕೊಡುತಲುಪನಯನಮಂ ಜರೆದು ವರವೀರಶೈವಾಚಾರದ
ನಿಷ್ಠೆಯಂ ಪೊಂದಿ ಮಂಗಳಪುರಿಗೆ ಪೋಗಿಯು
ತ್ಕೃಷ್ಟಶಿವಮಹಿಮೆಯಂ ದೃಷ್ಟಿಗೋಚರವೆನಿಸಿ
ಕಷ್ಟಬಿಜ್ಜಳಗರುಹಿ ನಮ್ಮೊಳೊಂದುವನೆಂದುಯಂತರ್ಧಿಯಂ ಪೊರ್ದಿದಂ ೬೫

ಇಂದುಜೂಟಂ ಬಯಲನೆಯ್ದುತ್ತೆ ಕೈಲಾಸ
ಮಂದಿರಕೆ ಪೋಗಿಯಿಾ ವಾರ್ತೆಯಂ ರುದ್ರಗಣ
ವೃಂದದೊಡನರುಹೆಯುವರಾನಂದದಿಂ ಧರಾಮಂಡಲಕೆ ಪೋಪೆವೆನಲು

---

1 ಣಾ (ಕ) 2 ನು (ಕಗ)

ಮಂದಹಾಸದೊಳು ಬಾಂದೊರೆದಲೆಯಂ ನುಡಿದ ನೀ
ವಿಂದು ಮುನ್ನವೆ ಗಮಿಂಪ ವ್ಯಾಜವೆಂತೆನೆ ದೇವ
ಸಂದೆಮ್ಮ ರುದ್ರಗಣನಾಯಕರೊಳಗೆ ಮುಖ್ಯ ರುದ್ರೇಶ್ವರಂ ಮುನ್ನವೆ ೬೭

ಉನ್ನತದ ರೇಣುಕೇಶ್ವರನರಸಿ ಜಯೆಯುದರ
ಮನ್ನೈದಿ ಚ್ಯುತವಾಗಿ ಬಳಿಕ ಭಸ್ಮವ ತೊಟ್ಟಿ
ಲನ್ನಿರಂತರ ಸಾರಿ ಭೂವನಿತೆಯುದರವಂ ಪೊಕ್ಕು ಬಳೆಯಂ ಪಡೆವನು
ಸನ್ನುತದೊಳದುಕಾರಣಂ ಪೋಗಬೇಕೆನಲ್
ಪನ್ನಗಾಭರಣನಾ ಕಾಲದೊಳ್ ರುದ್ರಗಣ
ದುನ್ನತಿಯ ಕರೆದುವುವರಗ್ರದೊಳ್ ಗೋಕರ್ಣಹವನವಂ ನಿರ್ಮಿಸುತ್ತೆ ೬೭

ಉತ್ತಮದ ಗೋಕರ್ಣ ಯಜ್ಞಕುಂಡದ ಪಥದೊ
ಳತ್ಯಧಿಕರುದ್ರಗಣನಾಗ ಪೋಗುತ ಮರ್ತ್ಯ
ದತ್ತ ಪೋಗಲ್ಬೇಡಬಹುದಲ್ಲದೊಡೆ ಗಮಿಸದಿರಿಯೆನಲ್ಕಾಗ ಕೆಲರು
ಉತ್ತರೋತ್ತರಯಿಷ್ಟಲಿಂಗವಂ ಪಾಣಿಯೊಳ್
ಬಿತ್ತರದೆ ಪಿಡಿದು ನಿಟ್ಟಿಸುತೆ ಶಿವಮಂತ್ರವಂ
ಚಿತ್ತದೊಳ್ ಜಪಿಸುತ್ತವಗ್ನಿಯೊಳ್ ಪಾಯ್ದೇಕವಿಂಶತಿಸಹಸ್ರ ಮುದದಿಂ ೬೮

ಭೂಲೋಕಕವರುಮುವತರಿಸಿ ತತ್ಕಾಲದೊಳು
ನೀಲಲೋಹಿತನ ಶಾಸನದಿಂದ ನಿಮ್ಮೊಡನೆ
ಯಾಳೋಚನಂಗೆಯ್ಯುತವಂಳಲಿಂಗಾನುಭಾವದೊಳಾಳ್ದು ಸಂಖವಿರುತ್ತೆ
ಈ ಲೋಕದೊಳಗೆ ಯಿಪ್ಪತ್ತೊಂದುಸಾಸಿರಂ
ಆಲೋಕಿಸಲ್ಕದೆ ಮಹಾಮಹತ್ತೆನಿಸುತ್ತ
ಲೀಲೆಯಿಂದಿಹರೆಂದು ಲಲಿತಾಗವಂದ ನಿಗಮಂ ಪೇಳ್ವುದೆಂದಂ ರೇಣುಕಂ ೬೯

ಎಲೆ ರುದ್ರಮುನಿಯೆ ಭಕ್ತಿಜ್ಞಾನವೈರಾಗ್ಯ
ಮಲಘುವಾದಾಚರಣೆಗಳನಾಂತು ರುದ್ರಗಣ
ಮೊಲವಿನಿಂ ಪನ್ನೆರಡುಸಾಸಿರರುಸಾಯಿರಂ ಮೂಚ್ಚಾಸಿರಂ ಭಾವಿಸೆ
ನೆಲೆಯಹಾದಂದಿಂತು ಯಿಪ್ಪತ್ತೊಂದಂ ಸಾವಿರದ
ನಿಲವನರುಹಿದೆವು ನಿನ್ನೊಡನಿಪ್ಪ ಗಣರೆನು
ತ್ರುಳಿಕಾಕ್ಷ ರೇವಣಾಸಿದ್ಧ ನಿರವಿಸಿದನಾ ರುದ್ರನಾಮಕ ಕುವರಗೆ ೭೦

ಕಂದ ಕೇಳೈಯಿನ್ನು ಮುಂದಕ್ಕೆ ಬಸವೇಶ
ನಂದದಾ ಚನ್ನಬಸವೇಶ ಮಯಂತಾದ ಗಣ
ವೃಂದಮಿಾ ಪಟ್ಟಣಕೆ ಬಂದು ನೀ ನಿಲೆಯನಂಭವದ ಮಂಟಪದ ಮೇರುವೆ
ಳಯಂದವಡೆದಿರಲಲ್ಲಿ ಪನ್ನೆರ್ಡ್ಸಾಸಿರಂ
ಸಂದ ಷಟ್ಸ್ಥಲಬ್ರಹ್ಮಿಗಳ್ ನೋಡಿ ನೆಲಸಿರುವ
ಕುಂದದೆ ವಿಚಾರಮಂಟಪದೊಳಗೆ ವೀರಮಾಹೇಶ್ವರರ್ ನೆಲೆಗೊಂಡರು ೭೧

ಅವರೆಣಿಸೆ ಲಕ್ಷತೊಂಬತ್ತಾರು ಸಾವಿರಂ
ಸವಿಶೇಷಮಾಯಾಮದೇಭ ಕಂಠೀರವರ್
ಸುವಿಶಾಲಮಂಟಪದಿ ಸುರನದೀವಾಲುಕಾರುದ್ರರ ಸಮಾನರೊಲಿದಂ
ಅವಿರತಂ ನೆಲಸುವರು ಗವಿಯ ಸಿಂಹಾಸನದೊ
ಳವಿಗಳಿತ ಲಕ್ಷತ್ತೊಂಬತ್ತಾರು ಸಾವಿರಂ
ಸಂವಿಚಾರ ಚರಲಿಂಗಸ್ವಾಮಿಗಳ್ ಎಡೆಗೊಂಬರೆಂದುಸುರ್ದನಾನಂದದಿಂ ೭೨

ನಾವು ರಚಿಸಿರ್ದ ತ್ರಿಪುರಾಂತಕ ತಟಾಕದುರೆ
ಠಾವಿನೊಳು ಪಶ್ಚಿಮದ ಕಡೆಯಲ್ಲಿ ರಾಜಿಸಿಹ
ಆ ವಿಮಳ ಚೆಂಗಲ್ಲಮಂಟಪದೊಳಧಿಕ ಚರಲಿಂಗಮೂರ್ತಿಗಳು ಕೆಲರು
ಸಾವಧಾನದೊಳು ಯಿಪ್ಪತ್ತೊಂದು ಸಾವಿರಂ
ಭಾವಜಾಂತಕನ ಶರಣರ್ ಮಹಾಮಹಿಮೆಯಿಂ
ತೀವಿಕೊಂಡಲ್ಲಿ ನೆಲಸುವಿರಿ ಬಸವಣ್ಣನುರೆ ದಾಸೋಹಕನುರಾಗದಿಂ ೭೩

ಎಲೆ ರುದ್ರಮುನಿವರ್ಯ ಲಾಲಿಸೈ ಮನವೊಲ್ದು
ಬಲುಮಹಿಮರಹ ಜಂಗಮಂ ನೋಡೆ ತಂತಮ್ಮ
ವೊಲವಿನಿಂ ಚಿತ್ತಾನುಸಾರಕ್ಕೆ ಯೋಗ್ಯಮಹ ಸ್ಥಲಗಳೊಳ್ ನೆಲೆಗೊಂಬರು
ನಲವಿನಿಂ ಬಸವೇಶ್ವರಂ ಕಂಡು ನಲಿನಲಿದು
ಚಲುಂವ ಜಂಗಮಕೆ ತಾಂ ಶತಮುಖ ಸಹಸ್ರಮುಖ
ಲಲಿತಲಕ್ಷೈಕಮುಖಮಾಗಿಯವರ್ಯೈಚ್ಛಿಕ ದ್ರವ್ಯಂಗಳಂ ಸಲಿಸುಮಂ ೭೪

ಆ ಕಾಲದೊಳ್ ಪಲವು ಕಂಥೆಗಳ ಧರಿಸಂತಾ
ನೇಕ ವಿಧಮಾದ ಅನ್ವರ್ಥನಾಮಂದಳೆವು
ತೀ ಕಥೆಯ ನೀಂ ಕೇಳ್ವುದೆಂದು ರೇವಣಸಿದ್ಧನಣುಗಂಗೆಯಣುಗಿನಿಂದ

ಜೋಕೆಯಿಂ ನಿರವಿಸುತ್ತಿರ್ದ ಬಸವಣ್ಣ ಬಿಡ
ದೇಕಮನದಿಂದ ಜಂಗಮವ ಪೂಜಿಸುತಿರಲ್
ಲೋಕಪ್ರಸಿದ್ಧವೆಂಬ ಪನ್ನೆರಳ್ಛಾಸಿರಂ ನೆಲಸಿಹುದು ವಿಟಜಂಗಮಂ ೭೫

ಅವರೊಳೊರ್ವಂ ವಿಂಡಮಲ್ಲಿನಾಥನೆನಿಪ್ಪ
ಸವಿಶೇಷ ವಿಟಜಂಗಮಂ ಬಂದು ಬಸವೇಶ
ಭುವಿಯಾಣ್ಮ ಬಿಜ್ಜಳನ ಅಂತಃಪುರವ ನೋಡಬೇಹುದೆನೆ ಬಸವ ನಗುತ
ತವೆಯದಾಕ್ಷಣಯೊರ್ವ ಚರರ ಕೂಡಿಸುತಾಗ
ಲವಿರಳಾತ್ಮಕನ ಕಳುಹಲ್ಕಾಗ ಮನವೊಲ್ದು
ನವರತ್ನಖಚಿತವಹ ರಾಯನರಮನೆಯ ನಿಟ್ಟಿಸುವನಾನಂದದಿಂದ ೭೬

ಭರದಿಂದ ಬಿಜ್ಜಳನ ಬೊಕ್ಕಸಂ ಭಂಡಾರ
ವರರತ್ನಹೊನ್ನು ಮೌಕ್ತಿಕವು ಸೆಜ್ಜಾಗೃಹಂ
ನೆರೆದ ತೊಟ್ಟಿಗಳುವರುವತ್ತು ಮೂವತ್ತೆರಡುಯುಪ್ಪರಿಗೆ ಯತಿಚೆಲ್ವಿನ
ನೆರೆವಮುಳ ಭದ್ರಮಂಟಪಗಳಿಪ್ಪತ್ತಾರು
ಸರಿಯಿಲ್ಲದಿರ್ಪ ಬಂಗಾರ ಬೆಳ್ಳಿಯೊ ಬಣ್ಣ
ದುರಿವ ಚಾವಡಿಯು ದ್ವಾದಶದ್ವಾದಶಂ ಗರುಡಿ ಮನೆ ನೋಡಲಾರಂಮೂರು ೭೭

ಶೃಂಗಾರಮಂಟಪಂ ಪದಿನೇಳುಮಲ್ಲಲ್ಲಿ
ಕಂಗೊಳಿಪ ಸಿಂಗಾರತೋಟದುಟೆ ಕಾಸಾರ
ಕಂಗಳತಿ ಶಿಳಿನೀರ್ಕೊಳಗಳು ಮೂವತ್ತಾರು ನೋಡೆ ಪರಿಗಣನೆಯಿಂದ
ಪಿಂಗದಾ ಮಿಹಣದ ಮನೆ ಹತ್ತು ಹತ್ತು ನೃಪ
ನಂಗನೆಯರಿಹ ರಾಣಿವಾಸ ನೂರಿಪ್ಪತ್ತು
ಸಂಗೀತದರಮನೆಗಳೆಂಟುಂ ಬೇರಿರೆಯುವಂ ನೋಡುತ್ತ ಬರುವ ವಿಟನಂ ೭೮

ಆ ರಾಣಿವಾಸದೊಳ್ ಜಾಲಾಂಧ್ರದೇಶಪತಿ
ಭೂರಮಣನಾಗ ಜಾಲಂಧರನ ಕುವರಿ ಮಿಗೆ
ನೀರೆಯಹ ಲೋಹಿತಾಂಬರೆಯು ಸಖಿಯುಳು ಶುಕನಪಿಡಿವೆವೆಂದಾಗ ಹೊಂದಿ
ಮಿರಿಬರುತಾ ವಿಟನ ಸೊಬಗ ಕಾಣುತ್ತ ತಾಂ
ಹಾರೈಸಿಯೆವೆಯಿಕ್ಕೆ ಮದನಚಕ್ರೇಶ್ವರಂ
ತಾ ರತಿಯನುಳಿದಲ್ಲಿಗೈದಿದನಿದೇಂ ಚಿತ್ರ ನೋಡೆಂದು ಪೇಳ್ದಳಾಗ ೭೯

ಎಂದ ಮಾತಂ ಕೇಳಿ ಬಾಗಿಲೊಳ್ ನಿಂದರಸಿ
ಚಂದದೆಳೆಜವ್ವನದ ಲಾವಣ್ಯಮಂ ಕಾಣು
ತಂದು ಸತಿಯರ ಕಳುಹಿ ವಿನಯೋಪಚಾರದಿಂದೊಳಯಿಂಕೆ ಕರತರಿಸಂತೆ
ಮಂದಹಾಸದೊಳು ಸಕಲಾಭರಣಸಂಮಮಾಲೆ
ಗಂಧ ಕಸ್ತುರಿಜವಾದಿಯ ತಂದು ಮುಂದಿಡುತೆ
ಬಂಧುರದ ಭಕ್ತಿಯಿಂ ಧರಿಸಿ ಲೇಪಿಸುತೆ ಸಾನಂದರಸಮುಣ್ಮಲಾಗ ೮೦

ಪರಿಮಳದ ಪೂಸರವ ಕೊರಳೊಳಿಟ್ಟಧಿಕತರ
ಯಿರವಂತಿಗೆಯ ಕೇಶದೊಳ್ ತುರುಬಿ ಶಿಖಿಯನಾ
ದರದಿಂದ ಸಿಂಗರಿಸಿ ರತ್ನಬಿಜ್ಜಣಿಗೆ ಕನಕದ ಚಮರವಂ ಢಾಳಿಸಿ
ಮೆರೆವ ಸಂಗೀತಮಂ ಕೇಳಿಸುತ ಸ್ತ್ರೀಜನದ
ನೆರವಿಯಂ ಸಂಜ್ಞೆಯಿಂ ಪರಿಹರಿಸಿ ಕಾಮಕಲೆ
ಯಿರವ ಬೀರುತೆ ವಿಟನ ರತಿಗೆಳಸಲೊಲ್ಲದಿರೆ [1]ಖೋ[1] ಎನಂತ್ಯಾತುರ್ದುರ್ಮ ಮುಳಿದು ೮೧

ತನ್ನ ಕಂಠದ ಮಾಲೆಯಂ ಪರಿದು ನುಂಗುರುಳ
ಗನ್ನದಿಂ ಕೆದರಿ ಚೆಳ್ಳುಗುರ್ಗಳಿಂ ಸ್ಥೂಲಕುಚ
ಕುನ್ನತದ ಹತಿಗಳಂ ಮಾಡುತ್ತ ತಾಂ ವೇಲು[2][ದನಮು][2]ರ್ಚಿಕೊಳ್ವನಿತಕೆ
ಚೆನ್ನೆಯಂಹ ಲೋಹಿತಾಂಬರೆಯ ಧ್ವನಿಯೆನುತರಸ
ನನ್ನಿಯಿಂ ಬಂದು ಕಾಣುತಲಿರ್ವರಂ ಕಡಿದು
ವುನ್ನತದ ಭಾವಿಗೆಳೆಸುತ ಹಜಾರಕ್ಕೈದಿ ಬಸವೇಶನಂ ಕರೆಸಂತೆ ೮೨

•ಧರೆಯಾಣ್ಮ ಬಿಜ್ಜಳಂ ಘುಡಿಘುಡಿಸುತೆಲೆ ಬಸವ
ವರವೀರಬಿಜ್ಜಳಂ ಯಿಮ್ಮಡಿಯ ಮುಮ್ಮಡಿಯಂ
ಪಿರಿದೆನಿಸುವಪಕೀರ್ತಿಯಂನ್ಮಂಟುಮಾಡೆ ನೀಂ
ಭರದಿಂದ ಮಿಂಡಜಂಗಮು ನಮ್ಮರಮನೆಯೊ
ಳಿರದೆ ಕಳುಹಿದೆಯೊಯೆನಲಾತಂಗೆ ಬಸವಣ್ಣ ಪೇಳ್ದನತಿವಿನಯದಿಂದ (?) ೮೩

ಎಲೆ ರಾಯ ಅರಸಿಂಗೆ ಆರುಬಾಯೆಂಬುದಂ
ನೆಲೆಯಾಯ್ತು ನಾಣ್ನುಡಿಯು ನಮ್ಮ ಜಂಗಮು ನಿಮ್ಮ
ಲಲಿತಭವನವ ನೋಡಬಂದನಲ್ಲದೆ ಪಾಪಕೃತ್ಯಕೆಳೆಸುವನಲ್ಲವೈ

---

1 ಭೋ (ಕ) 2 ದಂಸ (ಕ) ದಂಲ (ಗ) • ೮೩ ನೆಯ ಪದ್ಯದಲ್ಲಿ ಛಂದೋಭಂಗವಾಗಿದೆ

ಲಲನೆಯರ್ಗನೃತಮಸ್ಥಿರಬುದ್ಧಿ ಕಡುಮಾಯೆಂ
ಸಲೆ ಮೂರ್ಖವತಿಮುಹಾಕಾಮುಕತೆಯಪವಿತ್ರ
ಮಿಳಿತ ನಿರ್ದಯಮೆಂಬ ಗುಣಗಳಿವು ಸಹಜ ನೀಂ ತಿಳಿಯೆದುಸುರುವರೆ ಭೂಪ ೮೪

ಎನಲು ಒಸವಣ್ಣ ನೀನೀಕ್ಷಿಸೈಯೆನಂತಲರ
ಮನೆಯೊಳಿಹ ಕೂಪದೊಳಗಿರ್ವರಂ ತೋರೆ ತಾ
ನನುನಯಂದಿ ಎಲೆದೇವ ಬಿಜ್ಜಳೇಂದ್ರನ ನವೀನಾಲಯವ ನೋಡಲ್ಕೈದಿ
ಘನಕೂಪಮಂ ನೋಡುತಿಹ ನೋಟ ಸಾಕು ಸಾ
ಕನಘ ಚಿತ್ತೈಸುವದು ಶರಣುಶರಣಾರ್ತಿಯೆನೆ
ಚಿನುಮಯಂ ಮಿಂಡಮಲ್ಲೇಶ ಕ್ಷತರಕ್ತಮಿಲ್ಲದೆ ಬರಲ್ಕೊಂದಿಸಿದನಂ ೮೫

ಆ ವೇಳೆಯೊಳ್ ಬಸವ ಭಾವಪರುಷದಿ ನೋಡಿ
ಭಾವೆ ನೀನಾರೆನುತ್ತಾಹ್ವಾನಿಸಲ್ ನಿಲುವು
ತಾ ವಿಶೇಷದ ಸತಿಯ ಘಾಯದಿಂ ಸ್ತ್ರೀಜನದ ಪಾಂಗಿನಿಂದೊಗೆದು ಬಂದು
ಮಾವರಾದ್ಯರ್ಗಸಾಧ್ಯದ ಮುಕ್ತಿವಧುಂವೆನುತ
ಸಾವಧಾನದೊಳು ನಮಿಸುತೆ ಬಸವರಾಜಂಗೆ
ಯೇವೇಳ್ವೆ ನವರತ್ನವ್ಯೋಮಯಾನವನಡರಿ ಗಮಿಸಿದಳ್ ಕೈಲಾಸಕೆ ೮೬

ಅಕ್ಕಟಕಟಾ ಸುಕೃತಲೋಹಿತಾಂಬರೆಯೆನ್ನ
ಮಿಕ್ಕು ಪೋದಳ್ ಪೋದಳೆನುತಳುಕಿ ಬಿಜ್ಜಳಂ
ನಕ್ಕು ಬಸವೇಶನಂ ನಯಭಕ್ತಿಯಿಂ ನಿನ್ನ ವೀರಜಯಲಕ್ಷ್ಮಿಯಿರವ
ಅಕ್ಕರಿಂ ನೋಡಿ ಜಂಗಮದಿಂದ ಮುಕ್ತಿಯಂ
ಚಕ್ಕನೈದಿದಳು ಕೈವಲ್ಯಸತಿ ನಿನ್ನರಸಿ
ಹಕ್ಕಿಯೊಳ್ ನೋಡೆನುತ ಕೈವಿಡಿದು ತೋರಲ್ಕೆ ಬೆಕ್ಕಸಂಬೆರಗಾದನಂ ೮೭

ಆ ಕಾಲದೊಳಹಿಂಸೆಯೇ ಪರಮಧರ್ಮಮೆಂ
ದೇಕವಾಕ್ಯದೊಳೆಮ್ಮ ಮತವೆಂದು ನಡನಡುಗಿ
ಭೀಕರಂಗೊಂಡು ಸ್ತ್ರೀಹತ್ಯ ಜಂಗಮದ್ರೋಹದಿಂದಧಿಕಮಾವುದೆಂದು
ಜೋಕೆಯಿಂದಧಿಕ ಪ್ರಾಯಶ್ಚಿತ್ತವಾವುದೈ
ಲೋಕನಾಥನೆ ಬಸವ ಪೇಳೆನಲ್ ರಾಯಂಗೆ
ಬೇಕಾದ ವಿಧಿಯನಂಸುರಿದನು ಬಸವೇಶ್ವರಂ ರಂಧ್ರಮುನಿವರ್ಯ ಕೇಳೈ ೮೮

ಲಲಿತಶ್ರುತಿಸಿದ್ಧ ಜಂಗಮಮೂರ್ತಿಗಳ್ಗೆ ನೀ
ನಲಸದೊಂದಿಸಿ ಭಕ್ತಿಯಿಂ ತೃಪ್ತಿಪಡಿಸಿಯಾ
ಸಲೆ ಮಿಂಡಮಲ್ಲಿನಾಥಯ್ಯನುರುಕಂಥೆಯಂ ಕಡಿದುದಕೆ ಬಹುವಿಧವಹ
ಚೆಲುವ ಕಂಥೆಗಳ ಸಾಸಿರಸಂಖ್ಯೆಯಂ ಕೊಟ್ಟು
ವೊಲವಿನಿಂ ಪೂಜಿಸುವದೆನುತ ಪೇಳಲ್ ಬಸವ
ನಲಿದು ಬಿಜ್ಜಳರಾಯ ಕಂಥೆಗಳ ಮಾಡಿಸುವ ಬಲ್ಲವುದ್ಯೋಗಸ್ಥರಿಂ ೮೯

ಕನಕ ಕಂಥೆಯು ರನ್ನಕಂಥೆ ಬಜ್ಜರಕಂಥೆ
ಮಿನುಪ ಬೆಳ್ಳಿಯ ಕಂಥೆ ಹರಿಮಣಿಯ ಕಂಥೆ ಚೆ
ನ್ನನು ಪಡೆದ ಪಂಚವರ್ಣದ ಪಟ್ಟುಕಂಥೆ ಕಬ್ಬುನಕಂಥೆ ನಾರಕಂಥೆ
ಘನಮಾದ ಹಂಚುಕಂಥೆಯು ತಾಂಬ್ರಕಂಥೆಯು
ತ್ಯನಘ ಪುಲಿಸಮ್ಮ ಕಂಥೆಯು ಕರಿಯ ಹತ್ತಿಯಿಂ
ದನುವಾದ ಕಂಥೆ ಮೊದಲಾದವಂ ಮಾಡಿಸುತೆ ಜಂಗಮಕೆ ಕೊಡುವನಣುಗ ೯೦

ಮಗನೆ ಕೇಳಾಯಾ ಸುಕಂಥೆಗಳ ಜಂಗಮಂ
ಸೊಗಸಿನಿಂ ಧರಿಸುವರು ಅವರವರ ವಂಶದಿಂ
ದೊಗೆದ ಶಿಷ್ಯಪ್ರಶಿಷ್ಯಪ್ರತತಿಗಳ್ ನೋಡಲಾ ಕಂಥೆಗಳ ನಾಮಮಂ
ಜಗದೊಳಗೆ ಪ್ರಖ್ಯಾತಮಾಗಿ ಕಂಥೆಗಳ ಬಗೆ
ಮಿಗೆ ಮಿಗೆಯೆನುತ್ತ ಪೇಳ್ವರ್ ಮುಂದೆ ಚರದೇವ
ರಗಣಿತದ [ಬಗೆ] ಬಗೆಗಳಹರು ಕಲಿಯುಗದೊಳಗೆ ಎಂದನಾ ರೇವಣೇಶಂ ೯೧

ಸಲ್ಲಲಿತ ರುದ್ರಮುನಿದೇವ ನಿಮ್ಮಯ ವರ್ಗ
ದಲ್ಲಲ್ಲಿ ಬಹುಪವಾಡಗಳಾನುತದರಿಂದ
ನಿಲ್ಲದೇ ಬಗೆಬಗೆಯ ತೆರದ ನಾಮವನಾಂತು ಮೆರೆವರ್ಯೆ ನಿಮ್ಮ ಕುಲದ
ಮಲ್ಲಿಕಾರ್ಜುನನೆಂಬ ಶಿವಯೋಗಿ ಜಗದೊಳತಿ
ಖುಲ್ಲ ತುರಂಕರ ಗುರು ಕಬೀರನಂ ಜೈಸವನ
ಬಲ್ಲಿತಹ ರೂಪುಗಳ ಸೆಳಕೊಳುತ ಜಂಗಮಕೆ ಕೊಡುವನಾನಂದದಿಂದ ೯೨

ಹೇಳಲೇನಯ್ಯ ಏಳ್ನೂರ್ ಕಲಂಧರರ ಸ
ಮ್ಮೇಳದಿಂ ಶಿಷ್ಯರಂ ಮಾಡಿ ಮಕ್ಕೆಗೆ ಪೋಗಿ
ಬಾಳ ಮಹಿಮೆಯ ಮೆರೆದು ತುರುಕಾಣ್ಯದೊಳ್ ಮಳೆಯು ಹಾಳಾಗಿ ಕರೆಯದಿರಲು

ಏಳುದಿನಪರ್ಯಂತ ವರ್ಷವಂ ಸುರಿಸಿ ಸುರ
ತಾಳನಿಂ ಬಹುಪೂಜೆಗೊಳ್ವನದರಿಂದಧಿಕ
ಭಾಳಲೋಚನಮೂರ್ತಿ ಮಳೆಯ ಮಲ್ಲೇಶನೆಂದೀ ಧರೆಯೊಳೆಸೆವನಣುಗ ೯೩

ಇಂತೆಂದು ಜಂಗಮಸ್ಥಳಕುಳದ ನೆಲೆಯನಾ
ದ್ಯಂತವಂ ತಿಳುಪಿ ರಾಜೇಂದ್ರಚೋಳನನು ಭೂ
ಕಾಂತನಹ ವೀರಬಿಜ್ಜಳನಂ ಮಹಾಮಹೇಶ್ವರ ಭಕ್ತರಂ ಕರಸುತೆ
ತಿಂತಿಣೆಸಿ ವಾದ್ಯರವ ಮೊಳಗಲೆಣ್ದೆಸೆಯಲ್ಲಿ
ನಿಂತು ಜಯಜಯವೆಂದು ವಿಬುಧಜನ ಪೊಗಳಲ್ಕ
ನಂತ ಸಂಭ್ರಮದಿಂದ ರುದ್ರಮುನಿದೇವಂಗೆ ಗುರುಪಟ್ಟಮಂ ಕಟ್ಟುತೆ ೯೪

ವರ ರುದ್ರಮುನಿದೇವನೊಡಗೊಂಡು ದೇಶದೊಳ್
ಚರಿಸಿ ಹಾವಿನಹಾಳ ಪರಮಕಲ್ಲಯ್ಯಂಗೆ
ಹರದೀಕ್ಷೆಯಂ ಕೊಡಿಸಿ ಸೊನ್ನಲಾಪುರಿಗೆ ತಾಂ ಭರದಿಂದ ಬಂದು ಮುದದಿ
ಗರುವೆ ಚಾಮಲದೇವಿಯೊಳ್ ಸಿದ್ಧರಾಮಯ್ಯ
ನಿರದುದಿಸುವಂದಮಂ ಪೇಳಿ ಮಂಗಳವಾಡ
ಪುರಕೈದಿಯರಮನೆಯು ಪೊಕ್ಕು ಸುಖದಿಂದೆ ಸುಕುಮಾರ ಸಹಿತಿರುತಿರ್ದನಂ ೯೫

ಇದು ಚತುರ್ಯುಗದೊಳಾಚಾರ್ಯ ರೂಪಂ ತಾಳಿ
ಯೊದವಿ ಶಾಂಭವಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀ ಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರ್ಗಿಷ್ಟಾರ್ಥವಹುದು ಸತ್ಯಂ ೧

ಸತತೋಜ್ವಲಾನಂದಸಂದೋಹ ರೂಪ ಸ
ನ್ನುತ ವೇದ ಪೌರಾಣಿಕಾಗಮಾದ್ಯಖಿಳ ವರ
ಮತ ಶಾಸ್ತ್ರಮಂಜುಳ ಸುಪುಂಜರಂಜಿತ ಪುರಾತನವಚನಸಮ್ಮತವಹ
ಅತಿಶಯ ಮಹಾಲಿಂಗ ಪದಪದ್ಮ ಷಟ್ಪದೋ
ದಿತರೂಪರಹ ಚತುರ್ಗುರು ಚರಿತದೊಳ್ ದ್ವಿತಿಯ
ದತಿನೂತ್ನವಹ ಕಾಂಡದೊಳ್ ನೋಡಲೇಳನೆಯಂಸಂಧಿ ಸಂಪೂರ್ಣವಾಯ್ತು ೨

ಶ್ರೀ ಪರಮಕೈಲಾಸವಾಸಂ ಸ್ವಯಂಜ್ಯೋತಿ
ರೂಪನಭಿನವ ಪರಬ್ರಹ್ಮ ಸಂಪಾದನಾ
ದೀಪಿತ ಮಹಾಚೆನ್ನಮಲ್ಲಿಕಾರ್ಜುನ ತನ್ನ ಪದಪದ್ಮಭೃಂಗನೆನಿಪ
ಶ್ರೀಪರ್ವತಾರ್ಯನಿಂಗೊರೆದ ಗುರುಚಕ್ರೇಶ
ರೀ ಪೇಳ್ದ ಸತ್ಕಥಾಚಾರಿತ್ರದೊಳ್ ತಿಳಿಯ
ಲೇ ಪೇಳ್ವನಿಲ್ಲಿ ಮುಗಿಯಿತ್ತೆರಡುಕಾಂಡ ಸುಜ್ಞಾನಮೌಕ್ತಿಕಕರಂಡ ೩

## ಒಂದನೆಯ ಸಂಧಿ

ಸೂಚನೆ :

ತರುಣಾರ್ಕನಂತೆ ಢಾಳಿಪ ಮರುಳಸಿದ್ಧೇಶ
ನುರುಮಹಿಮೆಯಂ ಸೂಕ್ಷ್ಮದಿಂದೊರವೆ ಶೈಲೇಶ
ಭರದಿಂದ ಕೊಲ್ಲಾಪುರಕ್ಕೈದಿ ಮಾಯೆಯಂ ಹರಿಸಿ ಮೆರೆದುದನುಸುರ್ವೆಂ

ಉಚ್ಚನೀಚ ಪ್ರಕೃತಿಗಳನೈದದಿಹನಾದ
ದಚ್ಚತರದರ್ಥದಿಂ ಪೇಳಲ್ಪಡುವ ನಿಜವೆ
ಮತ್ಸ್ಯಾದಿ ಕಲ್ಕ್ಯಂತ ಕೃಷ್ಣಾವತಾರ ಪೂಜಿತಚರಣಸರಸಿರುಹನೆ
ಸಚ್ಚಿನ್ಮಯಾಕಾರ ಸಕಲದುರ್ಜನದೂರ
ದುಶ್ಚರಮಹಾಪಾಪವಿಧ್ವಂಸ ಶಶಿಜೂಟ
ದಂಶ್ಚವನಮುಖ ಸುಪರ್ವಾವನತ ಚನ್ನಮಲ್ಲೇಶ ಪೊರೆ ಸುಜನಜನರಂ ೧

ಶಿರಿಯಾಳ ಶಿವಲಿಂಗ ಪ್ರಾಣೆಯಂ ಕೊಲಬಹುದೆ
ಹರನೆಂತು ಭುಂಜಿಸಲ್ಬಹುದೆನುತ್ತಾರ್ದುರಿದು
ಪೊರೆಗೆನುತ್ತಿರ್ವರಂ ಕಳೆದಿಂ ಡಂಗುರ ಪೊಯ್ಕಲದ ಕೇಳ್ದು ಶಿವ ನಡುಗಲು
ಗಿರಿಜಾತೆ ಚೆಂಗಳೆಯರೆಯ್ದಿ ಪಾಡಲ್ ಮೆಚ್ಚಿ
ಹರಂಪದೊಳ್ ನಾದಮಿಳುಹುತ್ತ ಶಿವಭಕ್ತರಂ
ಪೊರೆದ ಗುರುವೇ ಹಲಾಯುಧನೆ ನೀನೆನ್ನ ಹೃದಯದ ಸಿರಿಯ ಸಲಹು ಸತತಂ ೨

ಉನ್ನತದ ಶಿವಲಿಂಗಗರ್ಭದಿಂದುದಿಸಿ ನಿಜ
ಸನ್ನುತದ ಮಹಿಮೆಯಂ ಮೆರೆವುತ್ತಲತಿಶಯದ
ಸೊನ್ನಲಾಪುರಕೈದಿ ಸಕಲ ಶಿವಭಕ್ತರಿಂ ಪೂಜೆಗೊಳುತಾನಂದದಿಂ
ಬಿನ್ನಣದ ದಳವಾಡೆ ಸಿದ್ಧನೆನಿಸುತ ಮುಂದದಿ
ತನ್ನ ಘನಲೀಲೆಯಿಂದಿರೆ ಮರುಳಸಿದ್ಧೇಶ
ಚೆನ್ನೆಯಹ ಲಕುಮಿ ಕೊಲ್ಲಾಪುರದ ಮಾಯೆಯೆಂದೆನಿಸಿ ನಾಮವನಾನಂತೆ ೩

ಉಲ್ಲಾಸದಿಂದಖಿಳ ದೇವ ದಾನವ ಮನುಜ
ರೆಲ್ಲ ಮನುಮುನಿನಿಕರದಿಂ ಸೇವ್ಯಳೆನಿಸಿ ತಾಂ
ಸಲ್ಲೀಲೆಯಿಂದಿರಲ್ ನವನಾಥಸಿದ್ಧರಾ ನವಕೋಟಿಸಿದ್ಧವಿತತಿ
ಬಲ್ಲಿದರು ತಾವು ಕೊಲ್ಲಾಪುರದ ಮಾಯೆಯಂ
ನಿಲ್ಲದೇ ಸೋಲಿಸುವೆವೆಂದು ಬರಲನಿಬರಂ
ಖುಲ್ಲರಂ ಮಾಡಿ ಮೂಗಿಗೆ ಕವಡೆಗಳ ಕಟ್ಟಿ ನೀರ ಪೊರಿಸುತ್ತೆ ಮತ್ತೆ ೪

ಕೆಲಬರಿಂದಂಗಣದ ರಜಗಳಂ ತೆಗೆಸುತ್ತ
ಕೆಲಬರಿಂ ಕೊಟ್ಟಿಗೆಯ ಕಸ ಸಗಣೆಗಳ ತೆಗೆಸಿ
ಕೆಲಬರಿಂ ಕಾವಡಿಯ ಪೊರಿಸಿ ಬಗೆಬಗೆಯ ಊಳಿಗಗಳಂ ಮಾಡಿಸುತ್ತೆ
ನಲವಿನಿಂದಿರುತಿರಲ್ಕೀ ವಾರ್ತೆಯೇ ಲೋಕ
ದೊಳಗೆ ಸಲೆ ಪಸರಿಸಲ್ ಮರುಳುಸಿದ್ಧಂ ಕೇಳಿ
ಎಲೆ ಮಾಯೆ ನೀಂ ಕೆಟ್ಟೆ ಕೆಟ್ಟೆಯೆನುತಂ ಕೋಪ ವಿಹ್ವಳಿಸಿ ಘುಡುಘುಡಿಸುತೆ ೫

ತ್ರಿಣಯನನ ರೂಪವಹ ಮರುಳುಸಿದ್ಧೇಶ್ವರಂ
ಗುಣದೇಹವಾದ ತ್ರಿಶೂಲವಮಂ ತಾಳ್ದುತುಳ
ಗಣದಿ ಬೊಮ್ಮನ ತಲೆಯ ಕರ್ಪರವನಾನುತ ಸುರಾಸುರರ ಶಿರಮಾಲೆಯಂ
ಭಣಿತೆಯಿಂ ಧರಿಸಿ ನರಸಿಂಹಶಿರ ಕೀರ್ತಿಮುಖ
ಮಣಿಯುರದೊಳವನಜಿನವಮಯ ಬಹಿರ್ವಾಸಮಂ
ಪಣೆಗಣ್ಣಿನಭವ ವಿಷ್ವಕ್ಸೇನ ಶಿರದ ಚಾಮರವ ತಳೆವುತ ಮುದದೊಳು ೬

ಮೆರೆವಪಸ್ಮಾರವಮಂ ಪಾವುಗೆಗಳಂ ಮಾಡಿ
ಚರಣದೊಳ್ ಮೆಟ್ಟಿ ವ್ಯಾಘ್ರಾಸುರನ ಸಮ್ಮವಮಂ
ಭರದೆ ಚಲ್ಲಣದೊಟ್ಟು ಲಾಲಾಸುರನ ತೊವಲ ಕಾಸೆಯನ್ನುಟ್ಟು ಶಶಿಯಂ
ವರ ತುರಾಯಂ ಮಾಡಿ ರತ್ನಕೋಟೀರದೊಳ್
ಧರಿಸಿ ರವಿಗಳ ದರ್ಪಣಂಗಳಂ ವರಿಸಿಯಿಾ
ಪರಿಯ ಸಿಂಗರದ ಸೊಬಗಾಂತು ಶಿಷ್ಯರಾ ಸಮ್ಮೇಳದಿಂ ನಡೆಗೊಂಡನು ೭

ಕಿಂಕಿಣಿಯ ದನಿಯು ಝೇಂಕರಿಸೆ ಹೂಂಕರಿಸುತಂ
ಮುಂಕೊಂಡು ಭೂತಗಳ್ ಕುಣಿಯೆ ಸಿದ್ಧರ್ ಮಣಿಯೆ
ಶಂಕೆಯಿಲ್ಲದೆ ಜನರ್ ನೆರೆಯೆ ಭೀಕರವಾಗಿ ಮೊರೆಯೆ ಪದ್ಮಜನ ತಲೆಯು

ಶಂಖಿಗಳ್ ಬೊಬ್ಬಿಡಲ್ ದಿಕ್ಕುಗಳ್ ಘುಂಮ್ಮಿಟ್ಟ
ವಂಕೆಯಿಂ ಭುಸ್ಸು ಭುಸ್ಸೆಂದವಂಗದ ಪಾವು
ಶಂಕರನ ಮೂರ್ತಿ ಬಿರುದಂಕ ನಡೆದಂ ಮರುಳುಸಿದ್ಧ ವೇದಾಂತವೃದ್ಧಂ ೮

ಭರಿತಾಗಮದ ಪುರುಳು ಭಕ್ತಿಪದ್ಮಿನಿಯರಳು
ಪರಗತಿಕುಜದ ತಿರುಳು ಪಾಪಮೃಗಗಳಿಗುರುಳು
ಸರಸದಿಂ ವೀರಶೈವಾಚಾರಕಾಮಿನಿಯ ಮುಂದಲೆಯ ಕೊಂಕುಗುರುಳು
ಪರಮಂತಾಂಬುಜಕಿರುಳು ಪಾತಕದ ಮಂದಂರುಳು
ತಿರುವ ಕಾಮಂದ ಸರಳು ಕೊರೆವ ಕೋಟಲೆ ಮರಳು
ತಿರಲು ಬೋಧಿಸುತಿರುವ ಮರುಳಂಸಿದ್ಧೇಶ್ವರಂ ಕೊಲ್ಲಾಪುರಕೆ ಬಂದನು ೯

ಇದೆ ಬಂದ ಮಾಯಾಂಧಕಾರಸೂರಂ ಧೀರ
ನಿದೆ ಬಂದ ಮಾಯಾದಿವಾಂಧಕ್ಕೆ ದಿವಸೇಂದ್ರ
ನಿದೆ ಬಂದ ಮಾಯಾಘನಗಭೇದಿ ಶತಕೋಟಿರೂಪ ನಿರ್ಲೇಪ ನಿತ್ಯಂ
ಇದೆ ಬಂದ ಮಾಯಾಬ್ಜನೇತ್ರಕೈರವಮಿತ್ರ
ನಿದೆ ಬಂದ ಮಾಯಾಕುಮುದಷಂಡಚಂಡರವಿ
ಯಿದೆ ಬಂದ ಮಾಯಾರಿ ಮರುಳಂಸಿದ್ಧೇಶನೆಂದೊದರಿದವು ಕಹಳೆ ಮುಂದದಿಂ ೧೦

ಕರದ ಶೂಲದ ಒರೆಯು ಕಳಚುತಂ ಹಳಚುತಂ
ವರ ಕರ್ಪರದ ಮುಸುಕ ತೆಗೆವುತಂ ಬಗೆವುತಂ
ಕರಣಕುಂಡಲಸರ್ಪ ಮೊರೆವುತಂ ಹರಿವುತಂ ಪೊರೆವುತಂ ವಂದಿವಿತತಿ
ಬರಬರಲ್ ಮುಂಬಾಗಿಲಲ್ಲಿರ್ದ ರಕ್ಕಸ
ಗೆರೆಯನಹ ಕರಟಾಸುರಂ ಬಂದುಯಿದಿರಿಸಲ್
ಭರದಿಂದಲಾರ್ದಿರಿದಂ ಕೊಂದವನ ಚರ್ಮಮಂ ಜರ್ಜರವ ಮಾಡಿಸುತ್ತ ೧೧

ಮುಂದೆ ಕರಡಿಯ ವಾದ್ಯ ಕರ ದಿಂಗುದಿಕ್ಕೆನಂತೆ
ಸಂದಣಿಸೆ ವಾದ್ಯನಾದಂಗೇಳುತಾ ದನುಜ
ಸಂದೋಹ ದಿಕ್ಕುದಿಕ್ಕಿಗೆ ಪಲಾಯನವಾಗೆ ನವಕೋಟಿಸಿದ್ಧರೆಲ್ಲ
ಅಂದು ಬಂದಾ ಮರುಳುಸಿದ್ಧೇಶ ಗುರುವಿಂಗೆ
ಕುಂದದುತ್ಸವದಿಂದೆ ಬಿಡದೈದಿ ಸಾಷ್ಟಾಂಗ
ಮೊಂದಿ ಪ್ರಣಾಮಮಂ ಮಾಡಿ ಬದ್ಧಾಂಜಲಿ[1][ಯ][1] ನಿಂದಂ ನುತಿಸಿದರು ಮುದದಿಂ ೧೨

---

1 ಯೊಳ್ (ಕಗ)

ಜಯಜಯತು ನಿಟಿಲಾಕ್ಷ ನಿಖಿಳಸುರಸಂರಕ್ಷ
ಜಯಜಯತು ಶರಣಾರ್ಥಿ ಜನಕರಣಮನುವರಣ
ಜಯಜಯತು ನಿಗಮನುತ ನೀಲಕಂಧರ ನಿತ್ಯ ಸತ್ಯ ಭೂತಾಂತರಾತ್ಮ
ಜಯಜಯಂತು ಸುರವಂದ್ಯ ಜಿತಜನಿಮಂರಣನಿಂದ್ಯ
ಜಯಜಯಂತು ಸತ್ಸಿದ್ಧ ಕನದಮಂಲಗುರುಸಿದ್ಧ
ಜಯಜಯತು ಜಯತೆಂದು ನವಕೋಟಿಸಿದ್ಧರಾನಂದದಿಂ ನುತಿಸಿ ಪರಸಿ ೧೩

ಎಲೆ ಗುರುವೆಯಾಳಿನವಮಾನವಾಳ್ದಂಗೆಂಬ
ಚಲದ ಭಾಷೆಯು ನಿಮಗೆ ಸಂದುದ್ಯೆ ಗುರುವರ್ಯ
ಸಲೆ ಪತಿವಿಯೋಗದ ಲಲನೆಯಂದದರಸಿಲ್ಲದಾ ರಾಷ್ಟ್ರದೊಲ್ ಮಾತೆಯ
ನೆಲೆಗಾಣದಾ ಶಿಶುವಿನಂತೊಡೆಯನಿಲ್ಲದಿಹ
ಕಲಿ ಬಲದ ಪಾಂಗಿನಿಂ ಮೊರೆಯಿಡುವ ಸಿದ್ಧರಂ
ಸಲಹಲೆಂದ್ಯೆದಿದಿರಿಯಿಾ ಕ್ಷಣದೊಳಿವಳ ಸಂಹರಿಸೆಂದು ಪೊಡಮಡಲ್ಕೆ ೧೪

ಬೆದರದಿರಿ ನೀವೆನುತ್ತಭಯವಿತ್ತವರ್ಗೆ ತಾಂ
ಪದೆದು ಮಂದಕೆ ಪೋಗೆ ಭೂತತಂಡಂ ಕಾಣು
ತೆದೆಗುಂದಿ ತಮ್ಮೊಡೆಯನಹ ಭೂತಗಂ ಪೇಳೆ ಕೇಳಿ ಹರುಷಮನಂಳಿವುತೆ
ಮುದದಿಂದ ತಲೆವಾಗಿ ನೆಲನ ಹೊತ್ತಿಹ ಭೂತ
ಹೆದರಿ ಪುಲ್ಪುಟ್ಟದೊಲ್ ಬಿಟ್ಟೋಡಿ ಕಂಗೆಟ್ಟು
ಸದರವಲ್ಲೌ ತಾಯೆಂಯಿನ್ನು ಕೆಟ್ಟೆವು ಕೆಟ್ಟೆವೆನುತ ಸುದ್ದಿಯನುಸುರಲು ೧೫

ಇಂತೇಕೆ ಹೃದಯದಲ್ಲಣವೆಂದು ಸಂತೈಪ
ಕಂತುಮಾತೆಯು ಮಾಯೆಂ ಸೊಬಗಿಯಹ ಸುಂದರಿಯ
ನಂತಶೃಂಗಾರಿಯಂಗಣದಲ್ಲಿ ನಿಂದಿರುವನಿತ್ತರೊಳ್ ಸಿದ್ಧೇಂದ್ರನು
ಸಂತಸದೊಳರಮನೆಯಗಸೆಗಳಂ ದಾಂಟುತ್ತ
ಮಂತೆಬಂದಾ ಚಲುವೆ ಮುಂದೆ ಭಿಕ್ಷಾ ಎನಲ್
ಚಿಂತಿಸುತೆ ಭ್ರಾಂತಿಯಿಂ ಮುಖವ ನೋಡುತ್ತ ಖತಿಯಿಂ ನುಡಿದಳೇನೆಂಬೆನು ೧೬

ಪತಿಗಳಿಲ್ಲದ ಮನೆಗೆ ಯತಿಯೊರ್ವ ಬರಬಹುದೆ
ಕ್ಷಿತಿಯೊಳೀದೇಶದೊಳಗಾವದೇಶವು ನೀನು
ಮಂತಿವಂತನಾವಕಡೆಯಿಂ ಬಂದೆ ಸಿದ್ಧನೋ ಭಿಕ್ಷಾರ್ಥಿಯೋ ಕುಟಿಲದ

ಯತಿಯೋಗಿಯೆಲ್ಲಿದ್ದೆ ಯಾವ ಭುವನವ ಬಲ್ಲೆ
ಯತಿಶಯದ ವಿದ್ಯಗಳ ತೋರಿಯೆನ್ನಲಿ ಬಳಿಕ
ಜತನದಿಂ ಪೋಗು ಮುಂದಕೆ ಸಾಗು ಮೂಗನೇ ಎಂದಳಾ ಮಾಯೆ ನಗುತ ೧೭

ಎನಲು ಸಿದ್ಧೇಶ್ವರಂ ಕೇಳ್ದು ನೀನೆನ್ನ್ನುಮಂ
ಮುನಿದು ಬಹುವಿದ್ಯಗಳ ಕೇಳೆ ನಾನೇಂಬಲ್ಲೆ
ಸನುಮಾನದಿಂ ಬೇಗ ಭಿಕ್ಷಮಂ ನೀಡಿಸಲ್ಲದೊಡೆನಗೆ ಭಸ್ಮವಹಂದು
ಕನಲದಿರಿ ನೀವರಸುಗಳಂ ನಾನಂ ಪರಧೇಶಿ
ಯೆಂನೆ ಮಾಯೆ ಗಹಗಹಿಸಿ ನಗುತ ಲಲಿತಾಂಗಿಯರ
ವಿನಯದಿಂ ಕರೆದು ವಿಷಭಿಕ್ಷಮಂ ನೀಡಿಯಿಾತನ ನೋಳ್ಪೆನೆನುತಲ್ಲಿಗೆ ೧೮

ಕಷ್ಟಕಾಳೋರಗನ ತಲೆಯು ಹಿಳಿವುತ ಹಿಂಡಿ
ಕಷ್ಟವಹ ವತ್ಸನಾಭಿಯುಮೊದಲುಗೊಂಡಾಗ
ದುಷ್ಟಜಂತುಗಳ ವಿಷದೊಳ್ ಬೆರಸಿ ಪಿರಿದಪ್ಪ ಸಟ್ಟುಗದಿ ತಂಬಿತರಲು
ಭ್ರಷ್ಟರಾಳ್ದವನೆ ಭಿಕ್ಷವ ಕೊಳ್ಳೊ ಮರುಳಯೆನೆ
ಭಿಷ್ಟನಹ ಸಿದ್ಧೇಶ ಕುಳಿತಂಬರಕ್ಕೆ ಬಾಯ್
ಬಿಟ್ಟು ನೀಡೆನೆ ನೀಡಲದನುಗಳಂನುಂಗುವೊಲ್ ನುಂಗಿ ಗುಟುಕಿಸುತ ಮಗುಳ್ದು ೧೯

ನೀಡು ನೀಡಿಸು ಮಾಯೆ ಹೊಟ್ಟೆತುಂಬುವತನಕ
ನೀಡಿಸದೆಯಣುಮಾತ್ರವಿಷದೊಳೇನಾಯ್ತೆನಲ್
ಗಾಡಿಯಿಂ ಶಾಕಿನಿಯು ಡಾಕಿನಿಯುಂ ಮುಖ್ಯಭೂತಂಗಳಂ ಕರೆದು ವಿಷದ
ಜೋಡಿಲ್ಲದಿಪ್ಪ ಗರಳದ ಕೊಡನ ಮೊಗತನ್ನಿ
ಕೊಡೆ ನೀವೆಂದು ನಿಯಮಿಸೆ ಘಟಸಹಸ್ರದಿಂ
ದಾಡುತ್ತ ತಂದೆರೆಯಲೇಕಮುಖದೊಳ್ ಕೊಳುತ ಪೀರ್ದನದನೇವೇಳ್ವೆನು ೨೦

ತರತರದಿ ತಂದೆರೆಯೆ ಭರಭರದಿ ಕೊಳುತಿರು
ತ್ತಿರದೆ ಬೇಗದಿ ನೀಡೆ ನಗುನಗುತ ಗುಟಿಕಿಪಂ
ತರರೆ ಕೆಲಬಲದೊಳಿಲ್ಲರ್ ತಂದು ನೀಡಲೊಲದೊಲದುಕೊಳ್ವಂ ನಲಿವುತೆ
ಮರುಳನಂ ನೋಡಿ ತಾಂ ತಗ್ಗುತಂ ಕುಗ್ಗುತಂ
ಬೆರಗುಂಗೊಂಡಿರೆ ಮಾಯೆಯಾಕೆಯಂ ಸಿದ್ಧೇಶ
ನಿರದಾಗ ತೃಪ್ತಿಯುಂಬಡಿಸು ನಿನ್ನಯ ಕುಟಿಲಮಹಿಮೆಯಂ ತೋರೆನಲ್ಕೆ ೨೧

ಮೊದಲ ನವನಾಥಸಿದ್ಧರ ಪಾಂಗಿನಿಂದೀತ
ಸದರವಲ್ಲಿವ ಕೆಟ್ಟ ಸಿದ್ಧನೆಂದಂಜಿ ನಿಜ
ಮದವಳಿದು ಬೆದರುಪುಲ್ಲೆಯ ತೆರದೊಳವಳು ಕೆಟ್ಟೋಡಿ ನಡುಗಂತ್ತ ಗುಡಿಯ
ಕದಗಳಂ ಗಳಗಳನೆ ಮುಚ್ಚಿಯಗುಳಿಯ ಜಡಿಯೆ
ಯೆದೆಗುಂದಿ ಭೂತಂಗಳೋಡೆ ಸಿದ್ಧರ್ ನೋಡೆ
ಬದಗು ಹೊಲೆಮಾಯೆ ನೀನೊಳಪೊಗಲ್ ಬಿಡುವೆನೇ ಭಲರೆಯೆಂದಾರ್ದನೊಲಿದಂ ೨೨

ಕಡೆಯ ಕಾಲದ ಸಿಡಿಲ ದನಿಯ ಪಾಂಗಿಂ ಸಿದ್ಧ
ನೆಡೆವಿಡದೆ ಕೋಪಮುಮ್ಮಳಿಸಿ ಘುಡುಘುಡಿಸುತಂ
ಗಡಗಡನೆ ನಡೆದುವಡಿಯಿಂದೆ ರುಚಾಡಿಸಿ ಕದಗಳೊದೆಯಲಾಗವರಗುಳಿಯು
ಭಡಭಡವೆನುತ್ತ ಬೀಳಲ್ ಮರುಳ ಕುಲಿಲಿಯೆಂ
ದಡಿಗಡಿಗೆಯೊರ್ಭಟಿಸಿ ರಕ್ಕಸಿಯ ಮುಡಿಜಡೆಯ
ಪಿಡಿದು ಜಡಿದೆಳೆಯೆ ಕೆಡೆದಳ್ ಮಾಯೆ ರಂಗದಾ ಕುರಿಯ ತೆರದಿಂದೊರಲುತೆ ೨೩

ನವಕೋಟಿನವನಾಥಸಿದ್ಧರೆಲ್ಲರ್ ನಮಿಸಿ
ಸವಿಶೇಷ ಸಕಲಜಗದಾಧಾರಸಿದ್ಧೇಂದ್ರ
ಸುವಿಕಲೇಂದ್ರಿಯದೂರಯತಿವಿರುದ್ಧಾಚಾರಿಯಹ ಪಾಪಿಯಿವಳ ಬಿಡದೆ
ಜವದಿಂದ ಸಂಹರಿಸಲಹುದೆಂದು ಬಿನ್ನೈಸೆ
ಯವಿರಳಾತ್ಮಂ ತನ್ನ ವುಡಿಯ ಕ್ಷುರಿಕಾಸ್ತ್ರದಿಂ
ದವಳ ಮೊಲೆ ಮೂಗು ಕರಗಳ ಕೊಯ್ದು ಪಲ್ಗಳನುದುರ್ಗಟ್ಟಿ ಭಂಗಿಸಲ್ಕೆ ೨೪

ಇಂತಾಗಲಾ ಮಾಯೆ ತನ್ನ ಮುನ್ನಿನ ದೇಹ
ವಾಂತತುಳಭಕ್ತಿಯಿಂದೆರಗಿ ಸ್ತುತಿಸಲ್ ಗುರುವ
ನಂತದಯದಿಂದವಳ ಕೆಯ್ಯ ದಂಡಿಯ ಮಾಡಿ ಮೊಲೆಯ ಕಾಯಂ ರಚಿಸುತೆ
ಮುಂತುರುಳ್ದ ಪಲ್ಲಂ ಪದಿನಾರುಚಾರಿಗಳಾಗೆ
ತಂತಿಯಂ ಕಿರುನರವ ಹೂಡಿ ಬೈಸಿಕೆ ಮೂಗ
ನಿಂತಿಟ್ಟು ಚರ್ಮಪ್ರವೇಶಕಂದೊಡಿಸಿ ಮುಡಿ ಚವರಮಂ ಕಟ್ಟಿ ಮಂದದಿಂ ೨೫

ಉರದ ಮೇಲಿಟ್ಟದಂ ಭರದಿಂದ ಬಾಜಿಸುತ
ತರತರದ ಚಾರಿಗಳ ಮುಟ್ಟುತ್ತ ಪರಿಪರಿಯ
ಯಿರವಿನತಿಗುಂಭ ಕಾಂಭೋಜಿ ಗುಂಡಕ್ರಿಯಾ ಕಲ್ಯಾಣಿ ಭೈರವಿಗಳಿಂ
ಅರರೆ ದೇಸಿಯು ಮುಖ್ಯಸ್ತ್ರೀಪುರುಷರಾಗದಿರ
ವರಿದರಿದು ಕಾಲಭೇದಂಗಳಿಂ ಗಾನಮಂ
ಮರುಳಸಿದ್ಧಂ ಪಾಡುತಾಡುತಂ ಭಿಕ್ಷಮಂ ಬೇಡುತಂ ನಡೆದನಾಗ ೨೬

# ಎರಡನೆಯ ಸಂಧಿ

ಸೂಚನೆ :

ಶಿವಸಿದ್ಧಮರುಳೇಶ್ವರಂ ಭುವನದೊಳಗೆ ತಾ
ನವಿರಳದ ಮಹಿಮೆಯಂ ಮೆರೆವುತ್ತ ಮುನಿಗಳೊಳ್
ಚ್ಯವನಾತ್ಮಭವ ದಧೀಚಿಗೆ ಶಿವನ ಲೀಲೆಯಂ ಪೇಳ್ದನಾನಂದದಿಂದೆ

ಶೂಲಿಯಂ ಶಶಿಕಲಾಮೌಲಿಯಂ ನಿಖಿಳಸುರ
ಮೌಲಿಯಂ ಪಾವನಜ್ವಾಲಿಯಂ ದಾನಗುಣ
ಶಾಲಿಯಂ ದೇವತಾಪಾಲಿಯಂ ಭಕ್ತಜನಶೀಲಿಯಂ ವಿಶ್ವವಿಭವ
ಲೀಲಿಯಂ ಸದ್ಗುಣವಿಶಾಲಿಯಂ ನಾಗೇಂದ್ರ
ವಾಲಿಯಂ ವಿಧಿಶಿರಕಪಾಲಿಯಂ [ನಿಗಮಾನು
ಲೋಲಿಯಂ] ಚೆನ್ನಮಲ್ಲೇಶನೆನಿಪಾತ್ಮಾ[1]ನಂ[1]ಕೂಲಿಯಂ ಬಲಗೊಂಬೆನು  ೧

ನಿತ್ಯಕೃತ್ಯದ ನೇಮಮಂ ಪೊತ್ತು ಸಮಯದುರೆ
ಸತ್ಯಶೇಷವನು ಸಮಯಾಚಾರ ಜಂಗಮು
ಕ್ಕಿತ್ತುಕೊಳುತೊಂದುದಿನ ಹಿರಿಯಭಕ್ತರ ಪ್ರಸಾದವ ಕೊಂಡಂಬರಂಮನಿತಕೆ
ಮಿಥ್ಯದಿಂ ಪಾರ್ಬರೆಲ್ಲರ್ ಕೂಡಿ ತಗುಳಲ್ಕೆ
ಬಿತ್ತರದ ಶೇಷದಿಂ ಪುರವ ದಹಿಸಲ್ಕೆರಗ
ಲರ್ತಿಯಿಂ ಪೊರೆದು ಮಹಿಮೆಯ ಮೆರೆದ ಬಿಬ್ಬಿಬಾಚಾರ್ಯರ್ಗಳ್ಗಾನೆರಗುವೆಂ  ೨

ಎಲೆ ಮೌಳಿಕುಲತಿಲಕ ಲಾಲಿಸೈ ಜಗದೇಕ
ವಿಲಯ ಸ್ಥಿತಿ ಸೃಷ್ಟಿಕಾರಣನಾದ ಪರಮೇಶ
ನೊಲವಿನಿಂ ಗಣಚಯಕೆ ಪಾರ್ವತೀಯಂಗೆ ಶಿವತತ್ವದ ಮಹಾಲೀಲೆಯಂ
ಸಲೆ ಪೇಳ್ದುದಂ ನಿನಗೆ ನಿಗಮ ಪೌರಾಣ ಸಂ
ಕಲಿತ ಮಂಜುಳತಂತ್ರ ಸಮ್ಮತಿಯೊಳೊರೆವೆನೆಂ
ದಲಘು ಮರುಳೇಂದ್ರನುಪದೇಶಿಸಿದ ಬೋಧೆಯಂ ಪೇಳ್ವೆನಾನಂದಮಂದಿಸೆ  ೩

---

1 ನನು (ಗ)

ಮೊದಲೊಳಾ ಶಿವತತ್ವವೈ ಮನಕಗೋಚರಂ
ವಿದಿತನಿರ್ಮಳ ನಿತ್ಯ ನಿಷ್ಕಳಂ ನಿರ್ಭೇದ್ಯ
ಮುಂದಿತ ನಿರುಪಾಧಿಕ ಚಿದದ್ವೈತಮಾನಂದಮಕ್ಷೀಣಮಸದೃಶಮಹ
ಸದಮಳಾದ್ಯಂತಶೂನ್ಯಂ ಶೂನ್ಯ ಪರತತ್ವ
ಮೊದವಿ ಸ್ವೇಚ್ಛೆಯೊಳಂ ಜಗದುತ್ಪತ್ತಿಬೀಜವಹ
ಪದದ ತತ್ವಂಗಳಂ ಸೃಜಿಸಲೋಸುಗ ಶಕ್ತಿಯೋಗಮಂ ಚಿಂತಿಸಿದನು ೪

ಯೋಗಷಟ್ಸಾಹಸ್ರಿಕೆಯೆನಿಪ್ಪ ಗ್ರಂಥದೊಳ್
ರಾಗದಿಂ ತದ್ಗುರೋರಾಗ್ನಯೈವೋಕ್ತಮೆಂ
ದಾಗಲಾ ನಾದಬಿಂದುವು ಕಳೆಗಳಂದಿಸೆಯಂವರೈಕ್ಯದಿಂದೋಂಕಾರವು
ಬೇಗುದಿಸಿತದಂ ಸ್ವಯಂಭುಂಕಯೆಂದು ಪೇಳ್ದುದಂ
ತಾಗದೆ ಮಹಾಲಿಂಗಮದನೆಯತ್ಯಧಿಕಮೆಂ
ಬಾಗಮಾಮ್ನಾಯಗಳ್ ಪೇಳೆ ಸಾದಾಖ್ಯಮೆನುತಾ ವಾತುಳಂ ಪೇಳ್ವುದಂ ೫

ಲಾಲಿಸೈ ನಾದಮೆಂಬಾ ಪೆಸರನುಳ್ಳಧಿಕ
ಮೂಲ ಶಿವಬೀಜವೇ ಸರ್ವಭೂತಂಗಳೊಳೆ
ಲೋಲಮಾಗಿಹುದದಂ ಶುದ್ಧಪ್ರಸಾದಯೆಂದರಿದು ಗುರುಗಳ್ ಶಿಷ್ಯರಂ
ಲೀಲೆಯಿಂದುಪದೇಶಿಸುತ್ತವರ ಭವಪಾಶ
ಜಾಲಮಂ ಪರಿದರೈಯಿಾ ಹಕಾರವನೆ ತಾಂ
ಕೀಲಿಸಿದ ಶಿವತತ್ವಬೀಜಮೆನುತಿಹರಂ ಬಹಂತಂತ್ರಪ್ರಮಾಣಂಗಳಿಂ ೬

ವೇದಂಗಳೊಳಗದಂ ಓಂಕಾರಮೆಂದುಸಿರ್ವ
ರಾದರದೆ ವೇದಾದಿಮೂಲವೆಂದಾ ಸ್ವರಗ
ಳಾದಿಯೆಂದಖಿಳ ರವ ಬೀಜಂಗಳೊಳ್ ತ್ರಯೋದಶಸ್ಥಲಂ ಪ್ರಣಯವು
ಆದಿತ್ಯ ಶೀತಾಂಶು ವಹ್ನಿ ಬೀಜಗಳುಳ್ಳ
ನಾದಮಯ ಮಂಡಲಾಕಾರದಿಂ ಸುಪ್ತಿಯೊಳ್
ತೀದ ಸರ್ಪನ ಪಾಂಗಿನಿಂ ತ್ರಿತತ್ವಂಗಳಿಗೆ ಮೂಲಪ್ರಣವಮಿರ್ಪುದು ೭

ಮತ್ತೆ ನೀಂ ಕೇಳು ವಾಗ್ಜಪ್ರಣಮದಿಂದಲಾ
ಬಿತ್ತರದ ಓಂಕಾರಮದರಿಂದ ತಾರೆ ತಾ
ನತ್ಯಧಿಕನಾದದಿಂದಾ ಉಕಾರಂ ಜನನಮದರೊಳ್ ಮಕಾರಮುದಯಂ

ಸತ್ಯದಿಂದಪರ ನಾದಾದಿ ಪಂಚಪ್ರಣವ
ತಥ್ಯ ಪ್ರವೃತ್ತಿಮಾರ್ಗದೊಳು ಜನಿಸಿರ್ದವಾ
ಗುತ್ತಮಂ ಸಕಲನಿಷ್ಕಳದೇವ ನಿಖಿಳಮನುವೃತ್ತಿ ಕಳೆಯಂ ಸೃಜಿಸಿದಂ ೮

ತನ್ನಾದ ಜನ್ಮಿಸಿದ ಓಂಕಾರಮೂರ್ಧದೊಳ
ಗುನ್ನತದ ಪರಶಿವಂ ನೆಲೆಗೊಳುತ್ತಿರಲಿಕಾ
ಸನ್ನುತದ ವರ್ಣವ್ಯಾಪಕವಾಗಿ ತನ್ನೊಳೊಂದಿರಂಪ ತ್ರಿರೇಖೆಯಿಂದ
ಬಿನ್ನಣದ ಪರನಾದ ಬಿಂದು ಕಳೆ ನಿರ್ಮಿಸ
ಲ್ಕುನ್ನತೋನ್ನತವಾದ ಬೀಜತ್ರಯವೆ ತಾನ
ಭಿನ್ನ ವಿದ್ಯಾಪ್ರತಿಷ್ಠಾನಿವೃತ್ತಿಗಳೆಂಬ ಕಲೆಗಳೆನಿಸಿಹವು ಮುನಿಪ ೯

ಎಲೆ ಮುನೀಂದ್ರನೆ ಕೇಳು ತ್ರೈಕಳಾತ್ಮಕವಾದ
ಲಲಿತರವ ಬಿಂದುಕಲೆಗಳನೈದಿದೋಂಕಾರ
ಕಲಿತಪರಕಳೆ ಶೂನ್ಯವಾಗಿ ಕೂಡಲ್ಕೆ ಷಟ್ಕೃತಿಗಳಿಂ ಪೂರ್ಣವಾದ
ನೆಲೆಯಾದವೋಂಕಾರವುದಿಸಿತದು ಚಿಜ್ಜ್ಯೋತಿ
ಸಲೆಯುದಾತ್ತಾದಿ ಸ್ವರವೇದಂಗಳದರಿನಿಂ
ದಲಘು ತ್ರೈಲೋಕ್ಯ ಸಚರಾಚರಂಗಳ ಜನನವುಹವು ಓಂಕಾರದಿಂದ ೧೦

ಸಕಳ ವ್ಯಾಪಕವಾದ ಓಂಕಾರದಿಂ ಮಂತ್ರ
ಯಂಕುತಿಸಲ್ ಮತ್ತೊಂದು ಸ್ಥಲದಲ್ಲಿ ಶೋಭಿಸಲು
ಯಕುತಿಗಾಶ್ರಯವಹಾದ ಪರಬೊಮ್ಮನೇ ಪ್ರಣವುಮುಹುದದೇ ಪರವುಪದವು
ಭಕುತಿಯಿಂ ಕೇಳಂ ಬಹುದೇವತಾಮಯಪ್ರಣವು
ಸಕಲ ಶಿವತತ್ವಮುಖಮಂತ್ರ ಚೈತನ್ಯಮೆಂ
ದಕಳಂಕವೋಂಕಾರವೆಂದು ಋಷಿಯೊಡನೆ ಪ್ರಣವದ ನಿಜವನುಸುರುತಿರ್ದಂ ೧೧

ಆ ವರ್ಣವೋ ತಾರೆಯಂತೆ ದಂಡದ ತೆರದಿ
ಭಾವಿಸಲ್ ಕುಂಡಲದಹಾಗರ್ಧಚಂದ್ರನ ವೊ
ಲಾ ವಿಮಲದರ್ಪಣಾಕೃತಿ ಜ್ಯೋತಿರಾಕೃತಿಗಳೆಂಬಾರುರೂಪದಿಂದ
ತಾವುಂಟೆನಿಸಿ ಮೆರೆಯಲದರ ತ್ರಿಮಾತ್ರೆಯೊಳ್
ಭಾವಮಂ ಪಡೆದವು ಹಳಕ್ಷ ವರ್ಣಂಗಳಿವ
ಕೋವಿದನೆ ಕೇಳಾ ಸ್ವರಾಕ್ಷರಂಗಳು ಯಕಾರದೊಳೊಗೆದವೆಂದುಸುರ್ದನಂ ೧೨

ಎಲೆ ಮುನಿಪ ಕಾದಿಠಾಂತೋರ್ಣಗಳ್ ಪಾಕ್ಷರದಿ
ಬಳಸಿಹವು ಡಾದಿಪಾಂತಗಳ್ ಶಿಕಾರದೊಳ್
ನೆಲಸಿಹವು ಭವೇಮಾಕ್ಷರದೊಳ್ ನಕಾರದೊಳ್ ರಾದಿಸಾಂತಾಕ್ಷರಗಳಂ
ತಿಳಿವುದೋಂಕಾರವೃಕ್ಷಕೆ ಮೂಲವೇ ನಾದ
ಮಲಘು ಬಿಂದಂವೆ ನಟ್ಟನಡುವಣಂಗಂ ಕೊನೆಯೆ
ಕಲೆಯು ತಾನಾಗಿರ್ಪುದಿದರ ಫಲಮಮೃತಮೆಂದಳಿಕಾಕ್ಷಸಿದ್ಧ ಪೇಳ್ದಂ ೧೩

ಒಂದೆ ಪೇಳ್ದಕ್ಷರಂ ಪುಂ ನಪುಂ ಸ್ತ್ರೀರೂಪ
ದಂದಮಂ ಧರಿಸಿಹವು ಬಳಿಕಖಿಳವರ್ಣಗಳ್
ಬಂಧುರದ ಬಹುದೇವತಾರೂಪವಾಂತು ನಿಂದಿಹವು ಪ್ರತ್ಯೇಕವಾಗಿ
ಸಂದ ಸ್ವರದೊಳ್ ಪ್ರಕೃತಿ ವಿಕೃತಿಯೆಂದಿತ್ತೆರಂ
ಪೊಂದಿದಾ ಪ್ರಕೃತಿಗಳೆಯೇಳು ನವವಿಕೃತಿಗಳ್
ಕಂದ ಕೇಳ್ ಪ್ರಕೃತಿಯೆ ಹ್ರಸ್ವ ವಿಕೃತಿಯೆ ದೀರ್ಘಮೆಂದರುಪುತಿರ್ದನಾರ್ಯಂ ೧೪

ಏಳುಪ್ರಕೃತಿಗಳಾದ ಹ್ರಸ್ವಂಗಳಿಂದಲಾ
ಯೇಳು ದೀರ್ಘಂಗಳಹ ವಿಕೃತಿಗಳ್ ಜನಿಸಲಂ
ತೇಳು ಅಂ ಅಃ ಎಂಬೆರಡುಸಹಿತಮುಭಯಷೋಡಶಸ್ವರಗಳವರ ಪೆಸರು
ಪೇಳುವೆ ಕಲಾಸ್ವರಾ[1]ಚಾ[1]ದಿ ಮಂತ್ರಾಪ್ರಕೃತಿ
ಮೇಲೆ ದೇಹ್ಯ ಸುವಿಕೃತಿಜೀವನೆಂತೆಂಬ ಗುಣ
ಶೀಲದಶನಾಮ ವಿನತಿಗೆ ಲೋಕದಲಿ ವೇದದಲಿ ಸಿದ್ಧಂಗಳಿಹವು ೧೫

ಮುಂತೆ ಪೇಳ್ವೆಂ ಕಕಾರಾದಿ ಕ್ಷಕಾರಾಂತ
ಸಂತಸದಮುಪ್ಪತ್ತುಲೈದಕ್ಷರಂ ನೋಡ
ಲಂತು ವಿಕಲಾಕ್ಷರಂಗಳು ಮೇಣಿವಕ್ಕೆ ನವನಾಮಮನಂವಾಗಿರುವದು
ಕಂತುಹರತನುಶರೀರಂ ವ್ಯಂಜನೋಪಾದಿ
ಸಂತತಾಧಾರ ದೇಹಕ್ಷೇತ್ರಬಿಂದು ಶ
ಕ್ತ್ಯಂತಕ ವಿದೂರ ಕೇಳಿಂತೆಂದು ಕುಂಡಲಿನಿಯೆನಿಸುವಳಿವಕ್ಕೆ ಮಾತೆ ೧೬

ವಿಕಲಾಕ್ಷರಂಗಳೆಡೆಯೊಳಗಿಹ ಕಲಾಕ್ಷರಂ
ಪ್ರಕಟದೇಹಿಗಳುಭಯಯೋಗದಿಂ ಸಕಲಜಗ
ದ ಕುಟಿಲಾಚಾರಮುಂಟಾಯ್ತಲಾ ಮತ್ತೆ ವರ್ಗಪ್ರಥಮವರ್ಣ ಶಕ್ಷಂ

---

1 ಜಾ (ಗ)

ಮುಕುತಿಯನ್ನೀವವೀ ಪನ್ನೆರಡು ಪುಲ್ಲಿಂಗ
ಯುಕುತಿಯಿಂದಾ ವರ್ಗದೆರಡನೆಯ ಬೀಜಂಗ
ಳಕಳಂಕ ಶಷಯುತ ದ್ವಾದಶಂ ಸತಿಯರುಳಿದೊರ್ಣಂ ನಪುಂಸಕವೆಲ್ಲೈ ೧೭

ಮೂರುಂತೆರದಕ್ಷರದ ಮಾತೆಯುಪ್ಪೋಂಕಾರ
ಸಾರನಾದಾತ್ಮಬಿಂದುಸ್ವರೂಪಂ ವಿಶ್ವ
ಭೂರಿವ್ಯಾಪಕವು ಗೋಪ್ಯಾನನಂ ತಾನಾದ ಓಂಕಾರಪ್ರಣವುದಿರವು
ಚಾರುಪಂಚಾಕ್ಷರಂ ಪಂಚಾನನಂ ಕೇಳ್ವು
ದಾ ರವ್ಯಶಿವನ ಷಡ್ವಕ್ತ್ರ ಷಟ್ಪ್ರಣವಂಕ್ಕೆ
ಆರಯ್ಯೆ ಸಾಕಲ್ಯನಾಮುವಿದಕೆಂಟುಮೂವತ್ತು ಕಲೆಗಳ ಯೋಗದಿಂ ೧೮

ಈಶಾನ ತತ್ಪುರುಷಾಘೋರನಾಮುವುಂ
ಭಾಸುರದ ವಾಮುಸದ್ಯೋಜಾತನಾಮುವುಂ
ಲೇಸಾಗಿ ಮೇಲಿಟ್ಟ ಬ್ರಹ್ಮಂಗಳೇ ಲೋಕದೊಳಗೆ ಪಂಚಬ್ರಹ್ಮವು
ಈಶಾನದಿಂದೈದು ತತ್ಪುರುಷದಿಂ ನಾಲ್ಕು
ಲೇಸಾದಘೋರದಿಂದೆಂಟು ಪದಿಮೂರುವಾ
ಮಾಸ್ಯದಿಂದೆಂಟು ಸದ್ಯೋಜಾತನಿಂದರಿವುದಷ್ಟತ್ರಿಂಶತ್ಕಲೆಗಳಂ ೧೯

ಪೂರ್ವೋಕ್ತ ಕಲೆಗಳಾವಾವೆನಲ್ ಪ್ರಥಮಕಲೆ
ಸರ್ವವಿದ್ಯಂಗಳಿಗೆ ಕರ್ತನೆಂದುಂ ಬಳಿಕ
ಸರ್ವಭೂತಂಗಳ್ಗೆಯೊಡೆಯನೆಂದೆರಡನೆಯ ಮಂತ್ರ ಬ್ರಹ್ಮಾಧಿಪತಿಯುಂ
ನಿರ್ವಿಕಲ್ಪಂ ಬ್ರಹ್ಮಣಾಧಿಪತಿ ಬ್ರಹ್ಮಯೆಂ
ದುರ್ವಿಯೊಳ್ ಮೂರನೆಯಂದೈ ಶಿವೋವಂಸ್ತೆಂದು
ಪರ್ವಿರುವ ನಾಲ್ಕನೆಯಕೈದನೆಯದೆ ಸದಾಶಿವಮುಸ್ತುವೋಂ ಎಂಬುದು ೨೦

ಪರಮತತ್ಪುರುಷಾಯವಿದ್ಮಹೇ ಎಂಬುದೊಂ
ದುರೆ ಮಹಾದೇವಾಯ ಧೀಮಹೀ ಎಂಬುದಾ
ಗೆರಡು ತನ್ನೋರುದ್ರಯೆಂಬುದೇ ಮೂರು ಪ್ರಚೋದಯಾತ್ತೆನೆ ನಾಲ್ಕದುಂ
ಪಿರಿದು ಘೋರೇಭ್ಯಯೆಂದೊಡನೆ ಘೋರೇಭ್ಯಯೆಂ
ದಿರದಲ್ಲಿ ಘೋರಘೋರತರೇಭ್ಯಯೆಂದಂ ಮಿಗೆ
ಚಿರತರೇಭ್ಯಯೆನುತ್ತ ಸರ್ವೇಭ್ಯಯೆನಲೊಂದೆರಳ್ಮೂರಂನಾಲ್ಕವೈದು ೨೧

ಸರ್ವೇಭ್ಯಯೆಂದು ಸರ್ವತರೇಭ್ಯಯೆಂದು ಗತ
ಗರ್ವನೇ ರುದ್ರರೂಪೇಭ್ಯಯೆಂದುಸಂರ್ವಲ್ಲಿ
ಪರ್ವಿತಾಗಾರೇಳುಯೆಂಟುಕಲೆಗಳಘೋರಮುಖದಿಂದ ಶುದ್ಧವಾಗಿ
ಉರ್ವಿಯೊಳ್ ವಾಮದೇವಾಯ ಜ್ಯೇಷ್ಠಾಯಹತ
ದುರ್ವಿಷಯ ರುಂದ್ರಾಯ ಸಕಲಾಯ ರುಂದ್ರಾಯ
ನಿರ್ವಿಕಾರಿಯೆಂ ವಿಕರಣಾಯ ಚ ಬಲಾಯ ಬಲವಿಕರಣಾಯಾ ನಮೋಸ್ತು ೨೨

ಕಲವಿಕರಣಾಯ ಚ ಬಲಪ್ರಮಥನಾಯ ನಿ
ರ್ಮಲ ಸರ್ವಭೂತ ದಮನಾಯ ಸುಮಂನಾಯ ಪೇ
ಶಲಭೂಷಣೋನ್ಮನಾಯಯೆನಿಪ್ಪ ಪದಿಮೂರುಕಲೆ ವಾಮದೇವನಿಂದ
ಫಲಿಸಿದುದು ನೋಡೆ ಸದ್ಯೋಜಾತನಂ ಚಿತ್ತ
ದೊಲವಿಂ ಪ್ರಪ್ರದ್ಯಾಮಿಯೆಂತೆಂಬುದೊಂದುಕಲೆ
ಬಲಗೊಂಬುದೀಗ ಸದ್ಯೋಜಾತನಿಗೆಯೆಂಬುದೆರಡನೆಯ ಕಲೆಯೆನಿಪುದು ೨೩

ಬಿಡಬೇ ಭವೇ ಭವೇಯೆಂಬುದದು ಮೂರಂ ಮೇ
ಣೊಡನೆ ಭಜಮಾನಂ ಏನುವದು ನಾಲ್ಕು ಭಜಸ್ವ
ಮೃಡನೆಯೆಂತೆಂಬುದೈದೀಗಮಾಂ ಎಂಬುದಾರು ಭವ ಎಂತೆಂಬುದೇಳು
ಕಡಿದು ಬಿಸುಡುದ್ಭವ ಲಯಂಗಳಂ ಎಂಬುದೆಂ
ಟಡಕದಿಂದೊಗೆದು ಸದ್ಯೋಜಾತಮುಖದಲ್ಲಿ
ಬಿಡದೆ ಕಲೆಗಳು ತೋರ್ದವಿಂತು ಮೂವತ್ತೆಂಟು ಕ್ರಮದಿ ಪಂಚಬ್ರಹ್ಮದಿ ೨೪

ಈವಿಧದ ಸಕಲಕಲೆಗಳ ಭಾವಮೊಳಕೊಂಡ
ಪಾವನಮಹಾಲಿಂಗದ ಸ್ಮರಣಮಾತ್ರದಲಿ
ಕೋವಿದನೆ ಸ್ವಸ್ವರೂಪಸ್ಥಿತಿಯು ದೊರಕುಂವದು ಮೇಣೆದರ ತೊಡಕಿಲ್ಲದೆ
ತೀವಿದಾ ನಿಷ್ಕಳವಂಗೋಚರಮೆನಿಸುತಿಹುದು
ಭಾವಗೋಚರಮೆನಿಸುತಿಹುದು ಸಕಳಂ ನೋಡ
ಲೀ ವಿವರಮಂ ತಿಳಿದಂಕೋ ಎಂದು ಚ್ಯವನಾತ್ಮಜಂಗೆ ನಿರವಿಸುತಿರ್ದನು ೨೫

ಆದಡೆಲೆ ಮುನಿಯೆ ತಾನಿದು ಸಕನಿಳಷ್ಕಳಂ
ಭೇದವಿಲ್ಲದ ಸದಾಶಿವತತ್ತ್ವವೈಯದರ
ಸಾದಾಖ್ಯ ಪಂಚಕಮನೊರೆವೆ ನಿಷ್ಕಳಶಕ್ತಿಯೆನಿಪಾದಿಶಕ್ತಿ ತಾನೆ

ಯಾದಧಿಕ ಶಾಂತಿಕಲೆಯಾದಿಶಕ್ತಿಯ ದಶಾಂ
ಶೋದರದೊಳಗಮೂರ್ತಿಸಾದಾಖ್ಯಮುದಯಮಂ
ತಾದಮೂರ್ತಂ ಕಲಾರಹಿತರೂಪಂ ಲಿಂಗಸೂರ್ಯಕೋಟಿಪ್ರಕಾಶಂ ೨೬

ಪಿಂಗದೇ ಸಜ್ಯೋತಿಸುಸ್ತಂಭದೊಲ್ ಮೆರೆವ
ಲಿಂಗದೊಳ್ ವಿಮಲಸಂಮೂರ್ತಿಯಿರ್ಪುದು ಶಾತ
ಕುಂಭದೊಳಗಾ ಬಣ್ಣವೆಂತನಿತೆಯದು ತತ್ವದಿಂದಾದ ಮೂರ್ತಿಯೆಂಬ
ಸಾಂಗನೇತ್ರಾದಿಕೇಂದ್ರಿಯ ಭಜನೆಯಂ ವಿಾರಿ
ದಂಗಮನಂಪಮಮಗೋಚರ ಯಶೋರಾಶಿಯಂ
ತ್ತುಂಗಲಿಂಗವೆ ಪಂಚಸಾದಾಖ್ಯದಿರವು ಮೂಲಾಕಾರವೈ ಮುನಿವರ ೨೭

ಸ್ವಚ್ಛಮೂಲಸ್ತಂಭಲಿಂಗದೊಳ್ ವಿಶ್ವಮಯ
ದಚ್ಚರಿಯ ಪ್ರಾಪಂಚಜನನಸಂಹಾರವೈ
ಉಚ್ಚವಹ ಮೂರ್ತಿಸಾದಾಖ್ಯದಿರವಿದ ಮುಂದೆ ಶಿವನ ನಿಷ್ಕಲೆಯಿಂಚ್ಛೆಯೆ
ಆಚ್ಚುತಂ ವಿದ್ಯಾಕಲೆಯ ದಶಾಂಶದೊಳಗ
ತ್ತುಚ್ಚಮಾದಾ ಮೂರ್ತಿಸಾದಾಖ್ಯದುದಯ ತಾಂ
ಬಚ್ಚಬರಿವಿದ್ಯೆಯೇ ಕೂಡಿಯುರಿವಂಗದೊಳ್ ದಿವ್ಯಲಿಂಗಂ ಜನಿಸಿತು ೨೮

ಆ ದಿವ್ಯಲಿಂಗ ಚತುರಾಂಶದೊಳ್ ಮೊಗವೊಂದು
ಭೇದನೇತ್ರತ್ರಯದ ಬೆಳಗು ವಿಸಟಂಬರಿಯೆಂ
ಪಾದಾದಿಯವಯವದೆ ಸಕಲಭೂಷಣಗಳಿಂ ದಿವ್ಯಲಿಂಗಂ ರಾಜಿಕುಂ
ಮೋದದಿಂ ಮುಂದೆ ನಿಷ್ಕಲಜ್ಞಾನಶಕ್ತಿ ತಾ
ನಾದುದೆ ಪ್ರತಿಷ್ಠೆಯೆನಿಪಾ ಕಲೆಯು ಮಗನೆ ಕೇ
ಳಾ ದಿವ್ಯಜ್ಞಾನಶಕ್ತಿಯ ದಶಾಂಶಂಗಳೊಳ್ ಕರ್ತೃಸಾದಾಖ್ಯದುದಯಂ ೨೯

ವರಜ್ಞಾನಶಕ್ತಿ ವಿಶ್ವವ ಸೃಜಿಪುದೇ ತನಗೆ
ಯರರೆ ಕಾರಣಮಾಗೆ ಕರ್ತೃಸಾದಾಖ್ಯಮೆಂ
ಬುರುನಾಮಮಂ ಧರಿಸಿತದುವೆ ಶುದ್ಧಸ್ಫಟಿಕಸಂಕಾಶದಿಂದೊಪ್ಪುವ
ಇರೆಯುದರಿನಿಂ ಧವಳಮಯುಮಹಾಲಿಂಗ ತಾ
ನಿರದೆಯಾ ಲಿಂಗದೊಳಗೀಶ್ವರಂ ಶಿರವೈದು
ಚಿರವದನವೇ ನಾಲ್ಕು ಪನ್ನೆರಳ್ಕಣ್ಣು ಮೊಗವಣ್ಣನಾಲ್ಕಾಗೊಪ್ಪಿದಂ ೩೦

ಕಿವಿಗಳೆಣ್‌ಭುಜಮಷ್ಟಮುಷ್ಟಕರ ಪದಮೆರಡು
ವಿವರಿಸಲ್ ಸಕಳಲಕ್ಷಣದಿ ಸಂಪೂರ್ಣಮಹ
ಸವಿಶೇಷಮಭಯಶೂಲಂ ಪರಶುಖಡ್ಗವಾಂತಮಳ ದಕ್ಷಿಣಕರಗಳಿಂ
ಭುವಿಯೊಳೆಸೆವಾ ನಾಗಪಾಶ ಘಂಟಾವರದ
ದವಿವಿಕ್ತಕರಚತುಷ್ಟಯದಿಂದ ದೇಹಮಂ
ವಿವರಿಸುವ ಭೂಷಣದೊಳೀಶ್ವರಂ ಕರ್ತೃಸಾದಾಖ್ಯನಾಮದೆ ರಾಜಿಕುಂ ೩೦

ಏನೆಂಬೆ ನಿಷ್ಕಲಕ್ರಿಯಾಶಕ್ತಿನಿರ್ವೃತ್ತಿ
ತಾ ನವ್ಯಕಲೆ ಕ್ರಿಯಾಶಕ್ತಿಯ ದಶಾಂಶದೊಳ್
ಭೂನುತದ ಕರ್ಮಸಾದಾಖ್ಯಮೊಗೆಯಲ್ಕದುವೆ ಕರ್ಮಾಭಿಧಾನಲಿಂಗಂ
ತಾನಾಯ್ತು ಜ್ಞಾನಮಂತ್ರಾರ್ಥಗ ವಿಧಾನದಿಂ
ಸೂನುವೇಯಿಂವು ಪಂಚಸಾದಾಖ್ಯ ಮುಖಲಿಂಗ
ತಾನಧಿಕತತ್ತ್ವಜನ್ಮಸ್ಥಲಮೆ ಪೀಠಪ್ರಕಾಶಮೇ ನಾದಲಿಂಗಂ ೩೧

ಇಂತು ಸಾದಾಖ್ಯಪಂಚಕ ಪಂಚಲಿಂಗದಿಂ
ದಂತೈದಂಮಸ್ತಕದಿ ಪಂಚವಕ್ತ್ರಗಳಿಂ ಸ
ಮಂತು ಸರ್ವಾಭರಣಭೂಷಣದೊಳಖಿಳ ಸಲ್ಲಕ್ಷಣದೊಳೆಸೆದು ತೋರ್ಪ
ಅಂತು ಸಾವಯವ ನಿರವಯವೆರಡು ಕೂಡಿ ತಾ
ನಂತಕಾಂತಕನಾದನಾ ಪರ[1][ಮ][1]ನಿಜದಿರವ
ನೀಂ ತಿಳಿಯೆನುತ್ತ ಪೇಳ್ದಾನಂದಶರನಿಧಿಯ ವೀಚಿಗೆ ದಧೀಚಿಮುನಿಗೆ ೩೨

ಆವನಾನೊರ್ವ ಪರಮೇಶ್ವರಂ ವೇದಗಳಿ
ಗಾವಾಸಮಾದ ಓಂಕಾರಪದಮಾತ್ರರೂ
ಪಾವನೋಡಲ್ಉಪನಿಷತ್ಸುವಾಕ್ಯಂಗಳೊಳ್ ಸುಪ್ರತಿಷ್ಠಿತನಾಗಿಹಂ
ಆವ ದೇವನ ಮಾಯೆಯಿಂ ಜನನಮೃತಿಯೆಸೆವ
ವಾವ ದೇವೋತ್ತಮಂ ಪರಕೆ ಪರವಾದಜಂ
ಮಾವರಾದ್ಯರ್ಚಿತಪದಾಂಭೋಜನಾವನವ ಪರಮಹೇಶ್ವರಮೂರ್ತಿಯೈ ೩೪

ಪರಕೆ ಪರವಹ ವಸ್ತುವೆರಡುತೆರನದಂವೆ ತಾ
ನುರುತರಂ ಸ್ಥೂಲಸೂಕ್ಷ್ಮಂಗಳೆಂದೆರಡುವಿಧ
ಸರಸಿಜಭವಾದಿ ಘನನಿರ್ಜರರ ದೃಷ್ಟಿಗೋಚರಸ್ಥೂಲತತ್ತ್ವಂ ಕಣಾ

---

1 ಮಶಿವ (ಕಗ)

ಪರಮಂಯೋಗೀಶ್ವರರ ದೃಕ್ಕಿಂಗೆ ಸಾಧ್ಯಮಾ
ಗಿರುವದೇ ಸೂಕ್ಷ್ಮಮದು ಪರಮಂತ್ರಜ್ಞಾನಿಗಳ
ವರಧ್ಯಾನಪೂಜಾರ್ಥಮಾಗಿ ನಿಷ್ಕಳಮೆ ಸಕಳಂ ಕೇಳು ಮೌನಿತಿಲಕ ೩೫

ಆವುದಾನೊಂದೆನಿಪ ಸಾಕಾರತತ್ವದಿಂ
ದಾ ವಿಶೇಷಂ ನಿಷ್ಕಳಬ್ರಹ್ಮ ನಿತ್ಯಮುಂ
ತೀವಿರ್ದ ಜ್ಞಾನಮಯಮಾನಂದಮವ್ಯಯಂ ತದ್ಬ್ರಹ್ಮನಿ[1]ಷ್ಠೆ[1]ಯುಳ್ಳ
ಓವಿಯಾ ಪರತತ್ವತಾತ್ಪರ್ಯದ ವ್ರತಂ
ಭಾವದೊಳ್ ಬಲಿದ ಷಟ್ಸ್ಥಲದ ಬ್ರಹ್ಮಿಗಳಿಂದ
ಲಾ ವಿಮಲಶಿವತತ್ತ್ವಮೀಕ್ಷಿಸಲ್ ತಕ್ಕುದೆಲೆ ಮೌನೀಂದ್ರ ಕೇಳೆಂದನು ೩೬

ಆ ತತ್ತ್ವವೇ ತ್ರಿವಿಧಭೇದವೆಂದರಿಯಬೇ
ಕಾ ತತ್ತ್ವಭೇದಮಂ ಕೇಳು ಮುನಿಶಾರ್ದೂಲ
ಭೂತೇಶ ಶಿವತತ್ತ್ವಮಾ ಸದಾಶಿವಮಹೇಶ್ವರತತ್ವಮೇ ತ್ರಿವಿಧವು
ಜಾತಶಿವತತ್ತ್ವನಿಷ್ಕಳಸದಾಶಿವತತ್ತ್ವ
ಮಾ ತೆರದೆ ಸಕಲನಿಷ್ಕಳಮಹೇಶ್ವರನವುಳ
ನೋತಂ ಸಾವಯವನಹ ಗಾಂಗೇಯ ಲಾಲಿಸೆಂದಾ ಶಿವಂ ನಿರವಿಸಿದನು ೩೭

ಮೂದೆರದ ತತ್ತ್ವದೊಳ್ ಶಿವತತ್ತ್ವಮೊಂದು ತಾ
ನಾದಂದು ಮಹಾಸದಾಶಿವತತ್ತ್ವಪಂಚಕಂ
ಮೋದದೆ ಪರಾತ್ಪರಮಹೇಶ್ವರಂ ತನ್ನ ವೈಭವದ ಲೀಲಾಮಾತ್ರದಿಂ
ಶೋಧಿಸಿದ ಚಂದ್ರಧರಲೀಲೆಯೇ ಮೊದಲುಗೊಂ
ಡಾದರದ ದಿವ್ಯಲಿಂಗೋದ್ಭವದ ಲೀಲೆ ಕಡೆ
ಯಾದಯಿಪ್ಪತ್ತೈದುಂ ವರಲೀಲೆಯೂಂತುದ್ದೈ ಮುನಿವರನೆ ಕೇಳೆಂದನು ೩೮

ಪೊಂಗಳಶಕಾಂತಿಮಯ ದೇಹದಿಂದ ಮುಳ್ತರ
ಪಿಂಗಳಜಟಾಮುಕುಟವದನ ತ್ರಿಣೇತ್ರದಿಂ
ದಂಗಪ್ರತ್ಯಂಗಪ್ರದೇಶಂಗಳೊಳಗಿಟ್ಟು ಪೊಳೆವ ಸರ್ವಾಭರಣದಿಂ
ಅಂಗಜನ ಮಂತ್ರಾಧಿದೇವತೆಯೆನಿಪ ಸರ್ವ
ಮಂಗಳೆಯ ತೊಡೆಯ ಮೇಲಿಟ್ಟು ರಾಜಿಸುವ ಶಿವ
ಲಿಂಗನಿರುತಿರ್ಪನಾತನ ಪಂಚವಿಂಶತಿಯ ಲೀಲೆಯಂ ಮುಂದುಸುರ್ವೆಂ ೩೯

---

1 ಟ್ಟೆ (ಕ)

ಬಿತ್ತರಿಪೆನಮಳಮಹ ಚಿತ್ಕಳೆಗಳಾಂತಧಿಕ
ಸತ್ಕೌಮುದೀ ಪ್ರಭಾಪೂರ್ಣರಾಕಾಚಂದ್ರ
ಹೃತ್ಕಮಲದೊಳಗೊಗೆಯಲತ್ಯಧಿಕಪ್ರೀತಿಯಿಂ ನೆತ್ತಿಯೊಳ್ ತಳೆವುತನಿಶಂ
ಉತ್ಕರ್ಷದಿಂ ಮೆರೆವ ವೃತ್ತಿಯಿಂದಿರ್ಪ ಶಿವ
ಗುತ್ತಮೋತ್ತಮ ಚಂದ್ರಧರಲೀಲೆಯೇ ಮೊದಲೊ
ಳೊತ್ತರಿಸಿತೆಂದು ತಿಳಿಯೈಯೆನುತ್ತಾ ಮುನಿಗೆ ಮರುಳಸಿದ್ಧೇಂದ್ರನುಸುರ್ದಂ ೪೦

ಹರಿವಿಧಿಗಳಾ ಮಹೇಶ್ವರ ವಾಮದಕ್ಷಿಣ
ಸ್ಥಿರಭುಜದೊಳುದಿಸಿದರು ರುದ್ರ ತಾನೇ ತನ್ನ
ವರವದನದೊಳಗೊಗೆಯಲಾ ಮಹೇಶಂ ವಿಧಿಯೆ ಸೃಜಿಸುವಾ ಶಕ್ತಿ ನಿನಗೆ
ವರವಿತ್ತನೆನೆ ರುದ್ರರಾಜಿಯಂ ನಿರ್ಮಿಸಲ್
ಭರದೆ ಜನರ್ಲೋಕಕ್ಕೈದಿದರಧೋಕೃತ್ಯಮಂ
ಪರಿಹರಿಸುತಾಗ ಬಹುಚಿಂತೆಯಿಂ ಬ್ರಹ್ಮ ತಪಮಂ ಮಾಡೆ ಶಿವನೊಲಿವುತೆ ೪೧

ಎಲೆಯಜನೆ ಮನದಿಷ್ಟವಾವುದೆನೆ ದೇವ ನಿ
ನ್ನೊಲವಿನಿಂ ಪೇಳ್ದ ಸನಕಾದಿಗಳ್ ಬಯಲಾದ
ರಳಿಕಾಕ್ಷ ಸೃಷ್ಟಿಯೆನ್ನೊರ್ವನಿಂದಾಗದೆನ್ನಯ ಕಾಯದೊಳಗೆ ನೀವು
ಸಲೆ ಪ್ರಸನ್ನತ್ವಮಾಗಲ್ಕಹಂದುಯೆನೆ ಶಿವಂ
ನಲಿವುತೆಲೆ ನಿನ್ನಳಿವ ನೀನೆ ಚಿಂತಿಸದೆ ನೀ
ನಲಘುಧ್ಯಾನವ ಮಾಡೆನಲ್ಕಾಗ ಧ್ಯಾನಿಸಲ್ಕಲ್ಲಿ ತನ್ನಯ ರೂಪಮಂ ೪೨

ತೋರಬೇಕೆಂದಜನ ಪುಬ್ಬೆರಡರಂತರವ
ಮೀರಿರುವ ಮಧ್ಯದೊಳ್ ಛಟಛಟಛಟತ್ತೆಂಬ
ಭೂರಿತರವಾದ ಪೊಸತಾದ ನಾದದ ಮಹಾರ್ಭಟೆ ಮುಸುಕಲೆಣ್ದೆಸೆಯೊಳು
ಚಾರುತರುಣಾರ್ಕಕೋಟಿಪ್ರಭಾಮಯಮೂರ್ತಿ
ಗೌರಿಯೇ ಕಾಳಿಯಾಗುತ ಭಯಂಕರವ ತಾ
ಳ್ದಾ ರೂಪದಿಂದಾಗಲುದಿಸಲಾ ಬ್ರಹ್ಮನಿರ್ಪೋಳಾಗಿ ಕೆಡದನಮಮ ೪೩

ಆ ಪತಿಯೆಯಿಂತಪ್ಪ ಕಾರ್ಯಮಂ ನೀಕರಿಸ
ದಾ ಪರಮ ದರಹಸನವದನನಾಗುತ ಮುಂದದಿ
ಯೋಪಳಂ ಬಹುಕಾಲ ರಮಿಸಲ್ಕೆ ನೀಲಲೋಹಿತಮುಖ್ಯ ರುದ್ರರ್ಕಳುಂ

ಚಾಪಳದಿ ಬಲವಿಕರಣಿಯಂ ಬಲಪ್ರಮಥಿನಿಯ
ಲೋಪಮಿಲ್ಲದ ಶಕ್ತಿಯರ ಸೃಜಿಸಿ ಕಾಳಿಯಿಂ
ದೀಪಿಸುವ ತೊಡೆಯ ಮೇಲಾಂತಜನ ಇರ್ಪೊಳ ಸಂಧಿಸುತ ಜೀವವಿಹಾಯೆ ೪೪

ಅಜನೆದ್ದು ಅಡ್ಡಬಿದ್ದೊಡನೆ ವಂದಿಸಿ ಮುಂದೆ
ತ್ರಿಜಗತ್ಸ್ವ ನಿರ್ಮ್ಮಾರ್ಪರಂ ನೋಡಲೆನ್ನೆರ್ದೆಯು
ನಿಜಮಾಗಿ ದಿಗಿಲೆನುತ್ತಿದೆ ಹೇಡಿಯಾದೆ ನೀನರ್ಧನಾರೀಶತ್ವಮಂ
ರುಜುವಾಗಿ ತಾಳ್ದೊಡಾಂ ಬರ್ದುಕವೆನೆನಲ್ ಬೊಮ್ಮ
ರಜನಿಪತಿ ಭೃಣ್ಮೌಲಿಯರ್ಧಾಂಗದೊಳ್ ಶಿವೆಯ
ನಜ ಭಾಪೆನಲ್ ಧರಿಸಿ ಮೆರೆಯೆ ಕಂಡಾಕ್ಷಣಂ ಸ್ತುತಿಸಿದಂ ಲೋಕೇಶನಂ ೪೫

ನೀಲಾಳಕದ ಜಡೆಯ ಕುಮುದಕಮಲದ ಕಣ್ಗ
ಳಾ ಲಲಿತರನ್ನದೋಲೆಯ ಸರ್ಪಕುಂಡಲದ
ಲೋಲಮಂದಾರಮಾಲೆಯ ಶಿರೋಮಾಲೆಯ ದಿಗಂಬರ ಶುಭಾಂಬರಗಳ
ಲಾಲಿತ್ಯಕನಕಮಯವಲಯಾಹಿಕಂಕಣದ
ಸ್ಥೂಲಚಂದನಲೇಪ ಭಸಿತಲೇಪದ ರತ್ನ
ಜಾಲಹಂಸಕ ಶಿರೋನೂಪುರ ಪದಕದರ್ಧನಾರೀಶ್ವರಂಗೆರಗುವೆಂ ೪೬

ಕೇಳುತಾ ರುದ್ರರ್ಗೆ ಬಲವಿತರಣೆಯ ಮುಖ್ಯ
ಬಾಲೆಯರ್ಗಾಗ ಮದುವೆಯ ಮಾಡುತಲೆ ವಿಧಿಯೆ
ಲಾಲಿಸೀ ಪರಿಯ ಜನನವ ಮಾಳ್ಪುದೆನೆ ನಿರೂಪಂ ಕೇಳಿ ಸತಿಪುರುಷರಂ
ಮೇಳದತಿಸೃಷ್ಟಿಯಂ ಮಾಡವೇಳ್ಕೆನುತಜಂ
ಲೋಲಶಾರದೆಯ ಕೂಡಲ್ ನವಬ್ರಹ್ಮರಾ
ವೇಳೆಯೊಳ್ ಜ[1]ನಿ[1]ಸಿ ನವಬ್ರಹ್ಮಿಯರ್ ಮತ್ತೆ ವಾಗ್ದೇವಿಯೊಳಗುದಿಸಿದರಲ್ಲೆ ೪೭

ನಿಮ್ಮನಾ ಬ್ರಹ್ಮಂಗೆ ಸೃಷ್ಟಿಯಂ ಮಾಳ್ಪುದೆನು
ತುಮ್ಮಳದಿ ಪೇಳಿ ನಲಿವುತ ಸುರಾಸುರರ ತಾ
ನಮ್ಮಮ್ಮ ನಾಗ ನರ ಮನು ಮುನೀಶ್ವರ ಯಕ್ಷ ಗರುಡ ಗಾಂಧರ್ವರ್ಕಳಂ
ಸುಮ್ಮಾನದಿಂ ಸಕಳಲೋಕ ಸಚರಾಚರವ
ತಮ್ಮಯ ಸ್ವೇಚ್ಛೆಯಿಂ ಸೃಜಿಸೆ ದಕ್ಷಂ ಜಗ
ಕ್ಕಮ್ಮನಪ ದೇವಿಯಂ ಪೆಣ್ಮಣಿಯ ನೀವಿಯಂ ಪಡೆದಾಗ ಶಿವಗಿತ್ತನು ೪೮

---

1 ಪಿ (ಕ)

ಅವರೊಳಶ್ವಿನ್ಯಾದಿ ಸಪ್ತವಿಂಶತಿ ತಾರೆ
ಯವಿಶೇಷದಿಂ ಚಂದ್ರಗೀಯಲವ ರೋಹಿಣಿಯಂ
ನವಿರಳದ ಮೋಹದಿಂದಿರೆ ದಕ್ಷ ಶಾಪಮೀಯಲ್ಕವಂ ಶಿವನನೊಲಿಸೆ
ತವೆಯದೇನಿಷ್ಟ ಪೇಳೆನೆಯಮೃತಮುಖಕಳೆಯಂ
ಸವೆದವವ ಪಾಲಿಸುವುದೆನೆ ಶುಕ್ಲಪಕ್ಷದೊ
ಳವಿರತಂ ಪೆರ್ಚುಗಾ ದರ್ಶಪರ್ಯಂತ ಲಯಮೆಂದು ಚಂದ್ರನ ಧರಿಸಿದಂ ೪೯

ಇದು ಮೊದಲಚಂದ್ರಧರಲೀಲೆ ಕೇಳ್ವೈ ಶಿವನ
ಸದಮಳದುಮಾಮಹೇಶ್ವರಲೀಲೆಯೆಂತೆನ
ಲ್ಕದು ದೀರ್ಘಮೋಂಕಾರಮದರ ಪ್ರಥಮ ದ್ವಿತೀಯಕ ತೃತೀಯಾಂಶಮೆನಿಪ
ವಿದಿತ ಮಾತ್ರಾತ್ರಯದಿ ಮೊದಲುಕಾರವನಿಟ್ಟ
ತದನಂತರದಿ ಮಕಾರವನಕಾರವನಿಡ
ಲ್ಕದು ತಾನುಮಾ ನಾಮಮಪ್ಪುದಾಯುಮೆಯೆಂದುಮಾಮಹೇಶ್ವರನಾಗಿಯುಂ ೫೦

ಉರುತರದ ವೋಂಕಾರಮಯವುಮಾಶಕ್ತಿ ಕೇ
ಳಿರದೆ ಬೈಂದವಕ್ರಿಯಾಶಕ್ತಿಯ ದಶಾಂಶದೊಳ
ಗರಿದಾದಂಮಾಶಕ್ತಿಯಾದಳಾ ಶಿವಶಕ್ತಿಯೋಗದಿಂದೋಂಕಾರಮ
ಅರರೆ ತಾನಾದ ತೆರದಿಂ ಮಹೇಶ್ವರನು ತಾ
ನುರುವುಮಾಶಕ್ತಿ ಸಂಯೋಗದಿಂ ಸೋಮನೆಂ
ದಿರದಾಯ್ತುಮದು ನಿಖಿಳಸೃಷ್ಟಿಕಾರಣಮಾದಂದಾ ಮಹೇಶ್ವರತತ್ವದ ೫೧

ವಿದಿತ ಕೋಟ್ಯಂಶದೊಳಗಜ ಹರಿಗಳುದಿಸಿದರು
ಮುದದ ರವಿಶಶಿಯಗ್ನಿನೇತ್ರದಿ ಮಹೇಶನ
ತ್ಯಧಿಕ ನಾಸಿಕದಲ್ಲಿ ವಾಯು ವಿಘ್ನೇಶ ಷಣ್ಮುಖರುಗಳ್ ಹೃದಯದಲ್ಲಿ
ಯುದಿಸಿದರ್ ದೇವತೆಗಳಿಗೆ ಪೊರ್ಕುಳೊಳ್ ಜನನ
ವಿಧಿ ಹರಿ ಸುರೇಶರಂತಕ ವಾಯು ರವಿಯನಲ
ವಿಧು ಧರಣಿಗಳ್ ಮುಖ್ಯಜಗಕೆ ಶಿವ ತಂದೆಯೆನಲದು ಸೋಮಧರಲೀಲೆಯೈ ೫೨

ಹರ ತನ್ನ ಸ್ವೇಚ್ಛೆಯಿಂ ಲೋಕದುದಯಮನುಳಿದು
ಹರಿಸುತಂತಖಿಳಮಂ ಕಲ್ಪ ಕಲ್ಪಂಗಳೊಳ್
ಭರದಿ ಸರ್ವರ ತ್ಯಜಿಸಿ ಸ್ವಾತಂತ್ರ್ಯಮಂ ನೆನೆವುತೊರ್ವನೇ ಕುಣಿದಾಡಲು

ಇರದೆ ಚೌಷಷ್ಠಿಕಲೆಗಾಶ್ರಯವೆನಿಸಿ ಲೋಕ
ಕರರೆ ಸಾಕ್ಷಿಣ್ಯಾದಿವಿದ್ಯೆಯೆ ಉಮಾದೇವಿ
ಯರಿದು ತಾಂ ಕೇಡಿಲ್ಲದಿಹ ಶಕ್ತಿಯೊಳ್ ವೇದಮಂತ್ರರೂಪಿಣಿಯಾಗಿಯೆ ೫೩

ಇರಲಾ ಚತುರ್ವಿಧದ ಶಕ್ತಿಯೊಳ್ ಕಾಳಿಯೆಂ
ಬುರುಸಂಹರದ ಶಕ್ತಿಯಂ ಪೊಂದಿದಾ ಶಿವಂ
ಭರದೊಳಾ ವಿಶ್ವಮಂ ಹರಿಸಿಯೊರ್ವನೆ ನಿತ್ಯಮಂ ನಟಿಪ ಕಾಲದಲ್ಲಿ
ಹರಿಯಜೇಂದ್ರಾದ್ಯಮರ ನರ ನಾಗ ಯಕ್ಷ ಕಿ
ನ್ನರ ಖಚರ ರವಿ ನಿಶಾಕರ ಮುಖ್ಯಜಂತುಗಳಿ
ಗಿರವಿಲ್ಲ ಜಗವೆಲ್ಲ ಕೆಟ್ಟಿತೆಂದಾರ್ಯೆದಂ ಮನದಿ ಧರ್ಮಂ ಚಿಂತಿಸಿ ೫೪

ಶಿವನ ತನುವೆನಿಪ ಸದ್ಧರ್ಮ ಸಚರಾಚರದ
ಸವಿಶೇಷಣಾನಿಯಂ ಕಂಡು ಭಯಮುಚ್ಚಳಿಸೆ
ಶಿವಶಿವಾ ನಾನಳಿಯಲಾರೆನೆಂದಾ ಹರನ ಸೇರಿತ್ತು ವೃಷಭರೂಪಂ
ಅವಯವವೆ ಶಿಕ್ಷಾದಿಷಟ್ಕಮಾ ವೃಷಭಕ್ಕೆ
ಕಿವಿಮೊದಲುಗೊಂಡ ಶಿರವೆ ಪ್ರಣವು ನಾಲ್ಕುವೇ
ದವೆ ನಾಲ್ಕುಪದ ಬಿಂದುವೇ ಶೃಂಗ ಪಂಚಾಕ್ಷರಿಯೆ ನೋಡಲವಂಲಾನನಂ ೫೫

ರಸನೆ ವರುಣಂ ಕಣ್ಣುಗಳ್ ರವಿ ನಿಶಾಕರರು
ರಸಿಕನೆ ಧನುರ್ವೇದ ಗಂಧರ್ವ ವೇದಂಗ
ಳೆಸೆವ ನಿಜಕರ್ಣಗಳ್ ಸಪ್ತಕೋಟ್ಯಂಕ ಮಂತ್ರಂಗಳೆ ರೋಮಗಳು ಸ್ಮೃತಿಯೆ
ಸಸಿನ ಸುಳಿ ನಿಖಿಳತೀರ್ಥಂ ವಾಲದಂಡಮಾ
ಪಸರಿಸಿದ ವೀರಶೈವಾಗಮಂ ಪ್ರಾಣವಾ
ದಸಮವೃಷಭನ ನೆನೆಯೆ ಜನಿಸಿ ನಿಲುತಾಗ ನಂತಿಸಲ್ ನೋಡಿ ನಲಿದಾಡುತ ೫೬

ಆರರೆಯಿಾ ಬಸವನಳಿವಿಲ್ಲದೇ ನಿತ್ಯನಾ
ಗಿರಬೇಹುದೆಂದು ನಿಯಮಿಸುತ ವೃಷಭನಂ
ಹರ ತನಗೆ ವಾಹನಂ ಮಾಡಿಕೊಂಡೆಲೆ ಬಸವ ಸ್ಥಿರ ನಾವು ನೀ ನಿತ್ಯನೈ
ಎರವಿಲ್ಲ ನಾವೀರ್ವರತಿನಿತ್ಯರೇ ನಿನಗೆ
ಭರವಸಂ ಭಯಂಬೇಡ ಪೂತಭಾವದೊಳೆಮ್ಮ
ನಿರದೆ ತಳೆ ನಿನ್ನನಾವತಿಪಾವನತ್ವದಿಂ ವಹಿಸುವೆನೆನುತ್ತ ಪೇಳ್ದಂ ೫೭

ಸಾರತರವೃಷಭಗಂ ಪರಮೇಶ್ವರಂಗೆ ತಾ
ನಾರೈದು ನೋಡೆ ಚಿನ್ನದಿ ಬಣ್ಣಮಿರ್ಪಂತೆ
ಭೂರಿಕುಸುಮದಿ ಗಂಧಮಿರ್ಪಂತೆ ದೀಪದಿ ಪ್ರಕಾಶಮಿರ್ಪಂತೆ ಭೇದ
ಸೇರದೈ ಪೂರ್ವಕಲ್ಪದೊಳು ಚಕ್ರಂಬಡೆದಂ
ನಾರಾಯಣಂ ಗರ್ವದಿಂದಿರಲ್ಕಾದಂ ಪೊಗೆ
ವೀರೇಶನಾ ಶಿವನ ಭಜಿಸಿ ಚಕ್ರಮನೈದೆ ಬೇಡಿದಂ ಭಕ್ತಿಯಿಂದ ೫೮

ಎಲೆ ದೇವಯೆನಗೆ ಮೊದಲಂತೆ ಗರ್ವಂ ಬಾರ
ದೊಲು ಸಲಹಿಯೆಂದು ನುತಿಸಲ್ ಹರಿಯೆ ಕೇಳಂ ನೀ
ನಲಘುವೃಷರೂಪಿನಿಂದಜಪುತ್ರತೆಯನೆಯ್ದಿ ಶಿವಧರ್ಮನಾಗಿ ನೀನು
ಒಲವಿನಿಂ ದಾಸ್ಯತ್ವಮಂ ತಳೆದು ನಮಗಾಗ
ಸಲುವ ವಾಹನವಾಗಿ ಧ್ವಜದೊಳಗೆ ಚೆಲ್ವಿನಿಂ
ನೆಲಸೆ ವೇದಾಗಮಂಗಳ್ ಪೊಗಳ್ವವೈ ವೃಷಭಕೇತು ವೃಷವಾಹನೆಂದು ೫೯

ಮತ್ತೊಂದು ಕಲ್ಪದೊಳ್ ತ್ರಿಪುರಮಂ ದಹಿಸುವಾ
ಗತ್ಯಧಿಕ ರಥವ ನಿರ್ಮಿಸಿ ದೇವತೆಗಳೀಯೆ
ಚಿತ್ತಜಾರಾತಿ ಪಾದವನಿಡಲ್ಕಾ ಭೂಮಿಂ ರಥ ಮುರಿದು ಕೆಳಗಿಳಿಯೆ
ಅರ್ತಿಯಿಂದಾಗ ವೃಷರೂಪಿಂದ ಪಾತಾಳ
ದತ್ತಣಿಂ ರಥವ ಚಿಮ್ಮುತೆ ನಿಂದ ವೃಷಹರಿಯ
ಬಿತ್ತರದೆ ಯೇರಿ ನಟಿಸಿದ ವೃಷಭರಥಲೀಲೆ [ಕಲ್ಪ]ಕಲ್ಪದೊಳುಂಟಲೈ ೬೦

ಮುಂದೆ ತಾಂಡವಲೀಲೆಯುಂದವೆಂ ತನೆ ಶಿವನೆ
ಚಂದದಾನಂದನಟನವಿನೋದ ಜನಿಸಲ್ಕೆ
ಮುಂದಲೋಕಂಗಳಂ ಕಣ್ಣೆವೆಗಳಿಂ ದಹಿಸಿ ಪ್ರಮಥಗಣ ಸಹ ನಟಿಸುವಂ
ಕಂದರ್ಪನನ್ನು ಸುಟ್ಟಂದು ಕುಣಿದನಂವಲ್ಲ
ದಂದವಹ ಕರದಗ್ನಿಯುರಿ ಲೋಕದಾಕಾರ
ದಂದವುಂ ಕೆಡಿಸುತಾಕಲ್ಪದೊಳ್ ಬ್ರಹ್ಮಾಂಡಭಾಂಡಕೋಟಿಗಳ ನೋಡಿ ೬೧

ಕಟ್ಟುಗ್ರದಟ್ಟಹಾಸದಿ ಶಿವಂ ಗಹಗಹಿಸೆ
ನೆಟ್ಟನೆ ದ್ರುಹಿಣಾಂಡಗಳ್ ಛಟಛಟಾ ಎಂದು
ಬಟ್ಟಬಯಲಾದವಾಕ್ಷಣದೊಳೈ ಏರಂಡಫಲದವೊಲ್ ಸಿಡಿದವಾಗ

ಬಿಟ್ಟ ಜಡೆಗಳ ಪೊಯಿಲ್ಗಳವು ಛಟಛಟಯೆನಂತೆ
ಯಟ್ಟಿಯಾಡುತ ಪೊಡೆಯೆ ಗ್ರಹಗಣಂ ತಾರಾಳಿ
ದಿಟ್ಟಿಸಲ್ ಬಾನ್ವಟ್ಟೆ ಪಟ್ಟಣಗಳಾಗ ಬಳಬಳನುದುರ್ದವಾ ನಟಣದಿಂ ೬೨

ಪದದ ಘಟ್ಟನದ ಹತಿಯಿಂ ಧರಾತಳವೆಯ್ದೆ
ಗದಗದನೆ ನಡನಡಗಿಯೆಂ ಟೀಲವೆಂಬಹಣ
ವೊದವಿತ್ತು ಕುಲಗಿರಿಗಳೆಲ್ಲ ಜರ್ಝರವಾಗೆ ಬಡಬಡಯೆನುತ್ತ ಬೀಳೆ
ಯೊದವಿದೈರಾವತಾದ್ಯಖಿಲ ದಿಗ್ದಂತಿಗಳ್
ಯೆದೆಗುಂದಿ ದೊಪ್ಪದೊಪ್ಪನೆ ಬೀಳೆ ಫಣಿಪಗಳ್
ಬೆದರಿ ಸರಸರನೋಡೆ ನಟಿಸುತಿರ್ದಂ ದೇವಪ್ರಮಥರುಘೆಯುಂಘೆ ಎನಲ್ಕೆ ೬೩

ಡಮರುರವ ದಂ ಡಮೃಡ ದಂ ಡಮೃಡ ಮರುಢಣ
ಡಮರು ಢಣಢಣ ಢಣಢಣಂ ಢಿಮುರು ಢಿಮುರೆನುತ
ಕ್ರಮದೆ ಘಂಟಾನಾದ ಘಣಘಣಘಣಾಯೆನುತಲುಣ್ಮೆ ಬ್ರಹ್ಮಾಂಡಭಿತ್ತಿ
ಒಡೆದು ಸಾಸಿರಭಾಗದಿಂ ಚಿಪ್ಪುಚೀರಾಗೆ
ಜಡಧಿಗಳ್ ಬತ್ತಿದವು ಬಡಬಾಗ್ನಿ ಸತ್ತಿತ್ತು
ಮೃಡನಿಂತು ತಾಂಡವಮನಾಡುತಿರ್ದಂ ಕೇಳ್ ದಧೀಚಿಗಣರತ್ನರೋಚಿ ೬೪

ಬಳಿಕ ಕಲ್ಪಾಂತರದೊಳಾನೆ ರಕ್ಕಸದಲೆಯ
ಬಲುತಿಸುಳದಿಂ ತಿಸುಳಿಯಿರಿದಪನ ಸಮ್ಮವಂ
ಸುಲಿದು ಸರ್ರನೆ ತೆಗೆದು ಪೊದೆದು ನಾಟ್ಯವನಾಡಿದಂ ಮತ್ತೆ ಕೇಳಂ ಮುನಿಪ
ನಿಲಲೀಯದಖಿಳ ಗೀರ್ವಾಣರಂ ಬಾಧಿಸುತೆ
ಮಲೆತಂಧಕಾಸುರನನಂಗಾತ ಕೆಡಹಿ ತಾ
ನಲಘುಶೂಲದೊಳೆರ್ದೆಯನಿರಿದೆತ್ತಿ ಕಂಬಿಬಿರಿದು ಭೋಯೆನಂತ್ಯಾರ್ಧಭವನು ೬೫

ದೇವದುಂದುಭಿಯೊದರೆ ರಕ್ಕಸರ ಪಡೆ ಬೆದರೆ
ತೀವಿ ಪೂಮಳೆಗರೆಯೆ ಸುಖರಸಂ ಸೈಗರೆಯೆ
ದೇವತತಿಗಾನಂದಮುದಿಸೆ ಹರುಷಂ ಪೊದಿಸೆ ನುತಿಸೆ ಗೀಷ್ಪತಿಮುಖ್ಯರು
ದೇವಗಂಧರ್ವ ಯಕ್ಷರು ಕೂಡೆ ಕುಣಿದಾಡೆ
ಮಾವರಾದ್ಯರು ನಲಿಯೆ ಸಿದ್ಧಚಾರಣರುಲಿಯೆ
ಕೋವಿದ ಪ್ರಮಥಾಳಿ ಮೆಚ್ಚೆ ಪಾರ್ವತಿ ಪೆರ್ಚೆ ತಾಂಡವವನಾಡುತಿರ್ದಂ ೬೬

ಅತಿವಿನೋದದಿ ನೆಲಕೆ ಪಾಯ್ಕಿಯೆದೆಯೊಳ್ ನಿಂದು
ಮತಿವೆತ್ತ ಸಪ್ತತಾಳದ ಗತಿಗೆ ನಟಿಸಲ
ಪ್ರತಿಮ ನಂದೀಶ ವಂದ್ದಳೆಯಜಂ ತಾಳಮಂ ನಾರಾಯಣಂ ಮುರಜಮಂ
ಸತಿಯು ಬೊಮ್ಮನ ವೀಣೆಯಂ ವೇಣುವಂ ಶತ
ಕ್ರತು ಕಡಲಕುವರಿ ಗಾನಮನೊಡರ್ಚಲ್ ಸಾಧು
ಗತಿಯಿಂದ ನಾಟ್ಯಮನುಪಕ್ರಮಿಂಸಿದಂ ಶೀತಭಾನುರೇಖಾವತಂಸಂ ೬೭

ಕರದ ಕಂಕಣ ನಾಗತತಿ ಭುಸ್ಸುಭುಸ್ಸೆನ
ಲ್ಕರರೆ ಕಲ್ಪಾನಲನಜ್ವಾಲೆ ದಳದಳರೆನಲ್
ಕರದ ಡಮರುಗದ ವಕ್ತ್ರದ್ವಯಂ ಢಣಢಣಢಣಂ ಢಣಂ ಢಣರೆನುತಿರೆ
ಶಿರದ ಮಂದಾಕಿನೀಸಲಿಲ ಝಳಝಳಯೆನಲ್
ಶಿರದ ಮಾಲೆಗಳು ಕುಬಿಬಿರಿ ಕುಬಿಬಿರಿಯೆನುತಲೆ
ಮೊರೆಯೆಯುಡಿನೂಲ ಕಿರುಘಂಟೆಗಳ್ ಝಣಝಣಝಣತ್ಕಾರಮಂ ಮಾಡಲು ೬೮

ಇಂತು ನಟಿಸುತ್ತಿರಲ್ಕಾತನಂಧಾಸುರಂ
ಚಿಂತಿಸುತ ಗಹಗಹಿಸಲೇನಧಮಯೆನೆ ನಿಮ್ಮ
ನಂತಪದವ್ಮೃದುಳವೆನಗಿಂತು ನೋವಿಲ್ಲ ಕಂಡೆಂ ದೇವ ಚೋದ್ಯವೊಂದಂ
ಭ್ರಾಂತಿಯಿಂ ಹರಿವಿಧಿಗಸಾಧ್ಯವಾದಡಿಮುಡಿಯ
ನಿಂತೀಗ ಕಂಡೆ ಪುಣ್ಯೋದಯಮಿದೆನೆ ಮೆಚ್ಚಿ
ಕಂತುಮರ್ದನನಿಂತು ನಟಿಸಿದಾ ಲೀಲೆ ಮುನಿಕಲ್ಪಕಲ್ಪದೊಳುಂಟಲ್ಲೆ ೬೯

ಇನ್ನೊರೆವನೈ ಮುನಿಯೆ ನೀಂ ಬಲ್ಲೆ ದಕ್ಷಗ
ತ್ಯುನ್ನತದ ಮಗಳಾಗಿರಲ್ ದೇವಿಯುಂ ಶಿವಂ
ನನ್ನಿಯಿಂ ಮದುವೆಯಾಗುತ್ತೊಯ್ಯೆ ಮೇಲೆ ದಕ್ಷಂ ಯಾಗವಂ ರಚಿಸಲು
ಮುನ್ನ ನಾರದನರುಪೆ ಶಿವಗೊರೆದು ಶಿವೆ ಬಂದು
ತನ್ನ ತಂದೆಗೆ ಪೇಳೆ ದೂಷಣೆಯ ಕೇಳ್ದಧಿಕ
ಖಿನ್ನತ್ವದಿಂದುಳಿದು ದಕ್ಷನಂ ತಾನೇ ಚಿದಗ್ನಿಯೊಳ್ ಬಯಲಾದಳು ೭೦

ಬಂದು ತಾ ನಯದೆ ತಪಮಂ ಮಾಳ್ಪಮ[1][ನಲ್ಕಾ][1]
ನಂದದಿಂ ಪ್ರಿಯದಿಷ್ಟವಂ ಕೊಡಲ್ಕಾಗಲೇ
ನಂದನಾಕೃತಿಯ ತಾಳಿರೆ ದೇವಿಯೋಷಧಿಪ್ರಸ್ಥಪುರವಂ ಬೇಗದಿ

1 ನೆಗಾ (ಕಗ)

ಒಂದಿಸಿ ಮಹಾಪ್ರೀತಿಯಿಂದ ಗಿರಿರಾಜನೊಡ
ನೊಂದಿ ರಾಜೋಪಚಾರದಲಿ ಸಲಹುತ್ತಿರ
ಲ್ಕಿಂದುವಿನ ರೇಖೆಯಂದದಲಿ ದಿನದಿನಕೆ ಬಳೆವುತ್ತಿರ್ದಳೀಶನರಸಿ ೭೧

ಬಾಲಲೀಲೆಯನಂಳಿದು ಗೌರಿಯಾವಸ್ಥೆಯಂ
ತಾಳಿರಲ್ಕಾಗಲಾ ನಾರದಂ ಬರೆಯದ್ರಿ
ಮೂಲದರಸಿದಿರ್ವಂದು ನಮಿಸಿ ಸಿಂಹಾಸನದ ಮೇಲಿರಿಸೆ ರುದ್ರಾಣಿಯಂ
ಲೀಲೆಯಿಂದದ ಕಂಡು ಮುನಿರಾಜನಿದಿರೆದ್ದು
ಶೀಲಮಂನದಿಂದಡ್ಡಬೀಳಲಾ ಕಲ್ಲೆರೆಯ
ನಾಲೋಕಿಸುತ್ತೆನ್ನ ಸುತೆಗಿಂದು ಸಾಷ್ಟಾಂಗವಂದನೆಯನಾಚರಿಸಿದೆಂ ೭೨

ಗುಡ್ಡವಾಗಲ್ಕೆ ನೀ ನುಡಿದ ಜಡ್ಡಿನ ನುಡಿಯಂ
ಹೆಡ್ಡತನ ಬಿಡಂ ಮೂಕಮಹಿಷಾಸುರಾದಿಯಹ
ದೊಡ್ಡಗಕ್ಕಸರ ಕೊಂದಖಿಳ ಲೋಕದ ಮಾತೆ ಶಿತಿಕಂಠನರ್ಧಾಂಗಿಯು
ಮಡ್ಡಮಾತಂ ಬಿಟ್ಟು ತಪಿಪ ಶಿವಸನ್ನಿಧಿಯೊ
ಳಡ್ಡಬೀಳುತ ಶಿವೆಯ ಮಡಗೆನಲ್ ರಾಯನುರೆ
ಪಡ್ಡೆಯಹ ಮಗಳೊಡನೆ ಜಯವಿಜಯರೊಡನಿಟ್ಟು ಹರನೆಡೆಗೆ ಕಳುಹಿಬಂದಂ ೭೩

ಇತ್ತಲೀಶ್ವರಿಯಿಾಶನಂ ಭಜಿಸೆ ಪರಿಪರಿಯೊ
ಳತ್ತ ತಾರಕನಾಜಿಯಿಂ ಜಡಿದಮರರ ವಿಧಿ
ಚಿತ್ತಜನ ತಂದೆ ಮುಂತಾದರೆಲ್ಲರನಿರಲ್ಕಿದಕಾಗಿ ಕಾಮರಾಜಂ
ಬಿತ್ತರದಿ ತನ್ನ ಸೈನ್ಯಂಗೂಡಿ ಬರೆ ನಂದಿ
ಯತ್ಯಧಿಕ ಕೋಪದಿಂದಂರುಹೆ ಬಲಮಂ ಕಾಮ
ಕುತ್ತುಕೊಳುತಗಜೆಯೊಳ್ ಪೇಳೆ ತನ್ನೊಡಗೊಂಡಂ ಹರನ ಸನ್ನಿಧಿಗೊಯ್ದಳು ೭೪

ಕಂಡು ಕಾಮಂ ಕುಸುಮವಿಶಿಖಂಗಳಿಡೆ ನೋಡು
ತಂಡಾಧಿಪತಿಯುಗ್ನಿ ನಾಗಫಣಿಗಣ್ಗೆಚ್ಚಿ
ನಂಡಲೆಯವುರಿ ಭುಗಿಭುಗಿಲ್ ಛಿಣಿಛಿಣಿಲ್ ರವದೆ ನಿಮಿಷಮಾತ್ರದೊಳು ದಹಿಸಿ
ಭಂಡನಂ ತಂಳಿದು ನಟಿಸುತೆ ಶಿವೆಯ ನೋಡದತಿ
ಚಂಡಕೋಪದೊಳು ಬಯಲಾಗೆ ರತಿಯುಂ ಸಲಹಿ
ಚಂಡಿಕೆಯಂಡರ್ಚಿದಾ ತಪಕೊಲಿದು ಬಾರೆನಲ್ ರತಿಗಿಷ್ಟಮಂ ಕೊಡಿಸುತೆ ೭೫

ಎಲೆ ದೇವ ನಿಮ್ಮ ವಲ್ಲಭೆಯಲ್ತಿವರ್ಗೆಯಾಂ
ವೊಲಿದಿರಲಿವರ್ಗರುಪದೇ ಬರಲ್ ಹಾಸ್ಯಮಿದ
ನಂಳಿದು ಶಿಷ್ಟಾಚಾರ ಮಾರ್ಗದೊಳ್ ನಡೆಯೆ ಮೇಲಿಂದು [1]ನೀವಿಟ್ಟಾ[1]ಜ್ಞೆಯು
ಸಲುವುದೈ ಪೋಗಿ ನೀವಲಘು ಮುನಿಗಳ ಕಳುಹಂ
ತೊಲಿದಚಲಪತಿಗೆ ಪೇಳಿಸಿ ಮಂಗಳವನೆಸಗಿ
ಸಲೆ ನೀತಿಧರ್ಮದಿಂದೊಲಿಸಿ ಬರಬೇಹುದೆನಲಾಂ ಬಹೆನೆನಲ್ ನಗಂತ್ತೆ ೭೬

ಪುರಕ್ಕೈದೆನುತ್ತೆ ರಮಣಿಯ ಕಳುಹಿ ಕೈಲಾಸ
ಪುರದೆ ಮುನಿಗಳ್ ಕಳುಹಿಯೊಡಬಡಿಸಿಯವರೂರ್ಗೆ
ಯಿರದಜನುಮಮರೇಂದ್ರ ಗೋವಿಂದ ಚಂದ್ರ ಶಿವಗಣಮುಖಿಳಸಚರಾಚರಂ
ಭರದಿಂದ ಬಂದು ಶಿವಶಿವೆಯ ಮದುವೆಯ ಮಾಡಿ
ಗಿರಿರಾಜಮೇನೆಯರ್ಸಹ ಶಂಭುಲೋಕಕಂ
ತರಿಸದೆಯ್ದುತ ಕಳುಹಲದು ಗಿರಿಜೆ ಮದುವೆ ಕೇಳ್ ಕಲ್ಪಕಲ್ಪದೊಳುಂಟಲ್ಲೈ ೭೭

1 ನಿವಿಷ್ಟಾ (ಕ)

# ನೂರನೆಯ ಸಂಧಿ

ಸೂಚನೆ : *

ಪಿಂದೆ ಪೇಳಲ್ಪಟ್ಟುದೈದರಿಂದೆಣಿಕೆಯಂ
ಪೊಂದಿದೀಶ್ವರನ ಲೀಲಾವಿಲಾಸಗಳಿದರ
ಮುಂದೆ ಭಿಕ್ಷಾಟಣದ ಲೀಲೆಯ ವಿಚಾರಮಂ ವಿಸ್ತರಿಪೆನವಧರಿಪುದು

ನಮಿತಜನಮಂದಾರ ನಾಗಪುಂಗವ ಹಾರ
ರಮಣೀಯ ನಿಗಮಘೋಟಕ ಮೇರುಗಿರಿಕಟಕ
ಪ್ರಮುಖಾವಸಥ ಸುರಾವಳಿರತ್ನಕೋಟೀರ ನೀರಾಜಿತಾಂಘ್ರಿಯುಗಳ
ಕಮಲನಿಭ ನೈರ್ಮಲ್ಯ ಕಾಯಕಾಯಜತಾತ
ರಮಣೀದಶಾಪನ್ನ ರಮಣ ಲೀಲಾಕಂತುಕ
ಯಮಿಹೃದಾನಂದನಹ ಪಾಲಿಸೈ ಮಲ್ಲಿಕಾರ್ಜುನಗುರುವೆ ಮುಕ್ತಿವರವೆ ೧

ಜಂಬೂರೊಳಗೆ ಪತಿಯ ಪೊಂದದೇ ಯಕ್ಷೇಶ
ನಂ ಬಿಡದೆ ಭಾವಿಸುತ್ತಿರಲಿವಳ ಭಾವಮಂ
ಕೊಂಬೆನೆಂದಭವ ಧರೆಗಿಳಿದು ಯತಿವೇಷದಿಂದಡಿಗೆಯಾಗುವ ಕಾಲದಿಂ
ತ್ರ್ಯಂಬಕಂ ಬಂದು ಭಿಕ್ಷಾಯೆನಲ್ಕಂಬಲಿಯಂ
ನಂ ಬೇಗನಿಡೆ ಹತ್ತುವಡದ ಹರಿಹರಿಯೆನಲ್
ಕಂಬಿಯಿಂ ಬಡಿದು ಶಿವನಂ ಮೆಚ್ಚಿಸಿದ ಧೀರೆ ಸತ್ಯಕ್ಕಗಾನೆರಗುವೆಂ ೨

ಶರ್ವಾಣಿಧವನಾಜ್ಞೆಯಿಂದಖಿಳಲೋಕಮಂ
ಸರ್ವರಂ ಸೃಜಿಸಿ ವಿಧಿ ವಿಶ್ವದೈಶ್ವರ್ಯಮದು
ಪರ್ವಿರಲ್ ನೋಡಿ ನಾನಿಖಿಳ ಭುವನಶ್ರೇಣಿಗೊಡೆಯನೆನು[1]ತ[1]ಜ್ಞಾನದಿಂ
ಗರ್ವಿಸಿರುತೊಂದುದಿನ ಮೇರುಗಿರಿಯಗ್ರದೊಳ್
ಶರ್ವನಿಂ ಪಡೆದು ರನ್ನದ ಕೋಡಿನಲಿ ಬೆಳಕ
ಡರ್ವ ನವರತ್ನಮಯ ಸಿಂಹವಿಷ್ಟರದಲ್ಲಿ ಮಂಡಿಸಿರೆಯಾ ಬ್ರಹ್ಮನಂ ೩

---

1 ವ (ಕ) * ಭಿಕ್ಷಾಟನ ಲೀಲೆ (ಗ)

ಓಲೈಸಲೆಂದವನ ಪುತ್ರರು ನವಬ್ರಹ್ಮ
ರಾಲೋಕದವರು ಮನುಗಳು ಸಿದ್ಧಸಾಧ್ಯ ದಿ
ಕ್ಪಾಲರಸುರರು ಖಚರ ಕಿನ್ನರರು ಗರುಡಗಂಧರ್ವರೊಟ್ಟಾಗಿ ಬಂದು
ಓಲಗದ ಶಾಲೆಯಂ ತುಂಬಲಾ ವೈಭವವ
ನಾಲೋಕಿಸುತಲಾತ ಹೆಚ್ಚಿ ಹೆಕ್ಕಳದೊಳಿರೆ
ಮೂಲಪರತತ್ತ್ವಗಳ ನೆಲೆಯ ಪೇಳೆಂದು ಪೊಡಮಡೆ ನವಬ್ರಹ್ಮಮುಖರುಂ ೪

ಈಕ್ಷಿಸುತ್ತಾಕ್ಷಣಂ ಕಮಲಾಸನಂ ನುಡಿದ
ನಕ್ಷಯಂ ನಾನೆ ನೀವರಿಯಿರೇಯಿಾವರಿಗಂ
ಅಕ್ಷಿಹೀನರ್ಕಳಾದಧಮರೇಂ ಬಲ್ಲರೇ ಬೇರೊಂದಂ ತತ್ತ್ವವುಂಟೆ
ಪಕ್ಷದಿಂ ನೋಡಿ ಪುಟ್ಟಿಸುವಾತ ಜಗವನುರೆ
ರಕ್ಷಿಸುವ ಕರ್ತನುಂ ಸಂಹರಿಪೊಡೆಯ ನಾನೆ
ಯಕ್ಷಿತ್ರಯಂ ನಾನೆ ಪಕ್ಷಿವಾಹನ ನಾನೆ ಬೇರೊರ್ವರಿಲ್ಲ ಮತ್ತೆ ೫

ಮುನಿನಿಕರವೆಂಯ್ದೆ ಹೃನ್ನಿಲಯದೊಳ್ ಜಾನಿಸುವ
ಚಿನುಮಯಬ್ರಹ್ಮನಾನೇಯವರ ಧ್ಯಾನಕ್ಕೆ
ಯನುವಿನಿಂ ಪ್ರತ್ಯಕ್ಷನಾಗಿಯವರವರಿಷ್ಟಮಂ ಕೊಡುವ ಕರ್ತೃ ನಾನೆ
ಘನಮಾರ್ಗಿಗಳ್ ಮಾಳ್ಪ ಯಜ್ಞಕೊಡೆಯಂ ನಾನೆ
ಮನವೊಲ್ದು ನರಸುರರ್ ಪೂಜಿಸುವ ದೈವ ನಾ
ನೆನಗೊಂದು ಮೇಲಾದ ಪರತತ್ವಮಿಲ್ಲ ತಾನೇ ಜಗಕ್ಕಾದಿಮೂಲ ೬

ಈಶನಖಿಳಕ್ಕೊಡೆಯನೆಂಬ ಶ್ರುತಿಯಂ ಮರೆದು
ತಾ ಸಕಲಕಧಿನಾಥನೆಂದಜಂ ನುಡಿಯಲಾ
ಕಾಶ ಧರಣಿಗಳಲ್ಲಿ ಪಾಪಕರ್ಮಂ ತುಂಬಿತಾ ವಿಧಿಯ ಮೋಹದಿಂದ
ನಾಶವಾದುದು ಸೃಷ್ಟಿ ಜಡಧಿಗಳ್ ಪೆರ್ಚುತಖಿ
ಳಾಸೆಗಳ್ ಜಲಮಯಗಳಾಗೆ ಹರಿ ಕಾಣಂತೆ
ಮೋಸವೆಂದಕ್ಕಜಂಬಡುತ ನಾ ಸ್ಥಿತಿಕರ್ತ ನೀ ಜಲಪ್ರಳಯಮಿಾಗ ೭

ಏನುಕಾರಣಮೆನುತ್ತತಿವೇಗದಿಂ ರತ್ನ
ಸಾನ್ವಗ್ರದಲ್ಲಿರ್ಪ ವಿಧಿಯ ಮುಂದಕೆ ಬರಲ್
ತಾನಧಿಕಮದದಿಂ ದುರಾತ್ಮನಿವನಾದನುನ್ಮದದೊಳಿಮ್ಮಡಿಗೆರಗದೆ

ಹೀನನಾಗಿರಬೇಡ ತಂದೆಯಾನಲ್ಲವೇ
ಏ ನಳಿನನಯನನೆಂದೆನಲು ಗಹಗಹಿಸಿ ಹರಿ
ತಾ ನುಡಿದನೆಲೆ ಹರಿಯೆ ಗರ್ವಮಂ ಬಿಡು ನೀನು ಕೆಡುವುದಲ್ತಲ್ತೆನುತೆ ೮

ಎಲೆ ನಿನಗೆ ನಾನೊಡೆಯು ನರ ನಾಗ ಸುರರಸುರ
ರೊಲವಿನಿಂ ಸಲಹುವಂ ಗಡ ನಿನಗೆ ತಂದೆಯಾ
ಸಲೆ ನಿನಗೆ ಎನಗಖಿಳಲೋಕಕ್ಕೆ ನೀಲಗಳನೇ ಕರ್ತ ಭರ್ತನೆನಲು
ತಲೆಯೆತ್ತಿ ನಗುತಜನಧೋಕ್ಷಜನೆಯೆನಗೆ ನೀ
ನಲಘುಮತಿಯಂ ಪೇಳಬಂದೆ ಪೋಪೋಯೆನು
ತ್ತಳುಕದೇ ನೋಡಿ ನೀನಾರಂ ನೀಲಗ್ರೀವನಾರು ಬಲ್ಲವರಾರೆಲೊ ೯

ಅಜನ ದುರ್ಬುದ್ಧಿಯಂ ತಿಳಿದು ನಾನಲ್ಲ ನೀ
ನಿಜವಾದ ವೇದಮಂ ಕೇಳೆನೆ ಯಜುರ್ವೇದ
ರುಜುವಾಗಿ ಪೇಳ್ವುದೆಲೆ ಶಿವನಧಿಕವೆಂದದರೊಳಾಗ ಋಗ್ವೇದ ಬಂದು
ತ್ರಿಜಗ[1] [ಕೇಳಾ ಈಶ್ವರ][1]ನೆ ಸ್ವತಂತ್ರಂ ನಿನಗೆ
ಗಜಬಜವಿದೇಕೆ ನಾನಾಜಂತುಗಳ ಹೃದಯ
ನಿಜಕುಹರ ಮಧ್ಯದೊಳ್ ತೊಳಪ ದೇವನೆ ಶಂಭುವಾಕಾಶಮಧ್ಯಗನಲ್ತೆ ೧೦

ತಿಳಿಯಲಾವಾತನ ನಿಯಾಮದೊಳಗಿರ್ದಂ ಸಂ
ಚರಿಸುತಿಹೆವಾಗಿ ಶಿವನೇಯಧಿಕನೆಂತೆಂದ
ಮಲ ಯಜುಸ್ಸಾಮಗಳ್ ಕೈಯೆತ್ತಿ ಮೊರುಸೂಳ್ ಸಾರುತಿರಲಾಗ ಬೊಮ್ಮಂ
ಎಲೆ ವೇದರಾಶಿಯೆನ್ನಯ ಜಿಹ್ವೆಯೊಳ್ ಪೊರಟು
ವುಲಿಯದಿರಿಯೆನ್ನೆಂಜಲಲ್ಲ[ಲ್ಲ] ನೀವೆನಾ
ತ್ತಳಿಕಾಕ್ಷನಂ ಪಳಿಯತೊಡಗಿದಂ ಪಾಪಿ ಮುನ್ನಿನ ಪಾಪಿ ಬೆನ್ನ ಬಿಡದೆ ೧೧

ಸುಡುಗಾಡ ಕಾಯ್ದಿರುವನೆಂತುಂ ಜಗವಂ ಕಾಯ್ವ
ಮಡದಿ ತೊಡೆಯೊಳಗಿರಲಿ ಕಂತುರಿಪು ತಾನೆಂತು
ಜಡಧರಂ ತಾನು ನಿರ್ಜಡನೆಂತು ಭಿಕ್ಷುಕಂ ಲೋಕವಂ ಪೊರೆವನೆಂತು
ಬಿಡದೆ ಗಜಚರ್ಮಧರನೆಂತುಂ ದಿಗ್ವಸನ ತಾ
ನೆಡೆವಿಡದೆ ಮರುಳ್ಗಳೊಡೆತನವೆಂತುಂ ಸುರರಿಂದ
ಸಡಗರದ ಪೂಜ್ಯನೆಂತೆಂದು ವಿಧಿ ಶಂಭುವಂ ಜರೆದು ನಿಂದಿಸುತಿರ್ದನು ೧೨

---

1 ಕೇಳೀಶ್ವರ (ಕ) ಕೇಳ್ ಶರ್ವ (ಗ)

ಜರೆವಜನ ವಚನವಂ ಕೇಳಂತ್ತ ಸತ್ತ್ವಣಮ
ಮರರೆ ರೂಪಾಂತೆಲವೊ ಬೊಮ್ಮ ಶಿವಮಹಿಮೆಯಂ
ತರವರಿಯದಂಸುರಂವರೆ ಶಿವನವುನ್ನಿಷ ನಿಮಿಷನಿಮಿಷಮಾತ್ರದೊಳು ನೋಡಲಾಗಿ
ಹರವಿಧಿಸುರಾಸುರರ ಕೋಟಿಯಂತ್ಪತ್ತಿ ಲಯ
ಮರುಳುರಾಜಸದಿಂದ ಬೆರೆಯದಿರು ಬೆರೆಯದಿರಂ
ಬೆರೆಯದಿರು ಕೇಡುಬಹುದೀಗ ಬದುಕಲ್ಕೆ ಶಿವನೇ ದೈವವೆಂದಂ ತಿಳಿಯ ೧೩

ಈ ತೆರದೊಳುಪನಿಷತ್ಪೌರಾಣಗಳ್ ಬಂದು
ಭೂತೇಶನೇ ದೈವವೆಂದುಲಿಯೆ ನಗುತಜಂ
ಯೇತಕ್ಕೆ ಪೇಳ್ವರೆನ್ನಿಂ ಜನನ ನಿಮಗೆ ನಾನೇ ದೈವ ಬೇರುಂಟೆನೆ
ತಾತನೇ ಕೆಡಬೇಡವೆಂದು ಬ್ರಹ್ಮರು ಪೇಳ
ಲಾತನತಿಗರ್ವದಿಂದಿರಲವನ ಪಾಪ ಮಲ
ತಾ ತಮಸ್ಸಾಗಿ ಗಗನವ ತೀವಲಲ್ಲಿ ಚಂಚಲದಂತೆ ಶಿವನ ತೇಜಂ ೧೪

ಜನಿಸಿತ್ತು ರವಿಕೋಟಿಕಳೆಯಂತೆಯದರೊಳಾ
ಬಿನದದಿಂದೀಶ್ವರನುಮಾಶಕ್ತಿಯೊಡಗೂಡ
ಲನಿತಕ್ಕೆ ರೂಪಾಂತು ನುಡಿದನಜ್ಞಾನವೇನೆನಲಜಂ ತಾನರಿವುತೆ
ಘನಗರ್ವದಿಂ ಮೇಲೆ ನೋಡದಲ್ಲೊಂದಂ ಮೊಗ
ಮನುವಿನಿಂ ಸೃಜಿಸಿ ದೂರದಿ ನೋಡಲಾಗ ಶಿವ
ವಿನಯದಿಂದೆಂದ ನಮ್ಮಿಂ ಪುಟ್ಟಿ ಬ್ರಹ್ಮಪದಮಂ ಪಡೆದುದಂ ಮರೆದೆಯೊ ೧೫

ಇಂತೆಂದು ಪೇಳಲೊಡೆಯಂನನರಿಯದಾ ಬೊಮ್ಮ
ಭ್ರಾಂತಿಯಿಂ ಗಳಹುತಿರಲಾಗ ಗಡಬಡಿಸುತ್ತ
ಆಂತು ಘೂರ್ಣಿಸಿ ಘರ್ಜಿಸೆಂದನಂತರವರಿಯದವನೆ ನೀಂ ಮುಂದರಿಯದೆ
ಕಂತುರಿಪುಯೆನ್ನಿದಿರೆ ನುಡಿವುದಲ್ಲಲ್ಲು ನೀಂ
ಪಿಂತೆನ್ನ ಕೂರ್ಚದೊಳ್ ಜನಿಸಲಿಲ್ಲವೆ ತಂದೆ
ಯಂತದಲದೇಕೆ ನಿಂದಿಹೆ ಸುಮ್ಮನಿದುಚಿತವೆಯೆಂದನವ ಕೆಡುವುದಕ್ಕೆ ೧೬

ಅವನ ದುರ್ವಚನವಮಂ ಕೇಳಿಯಳಿಕಾಂಬಕದ
ಯುವೆಯು ನಸುಂದೆರೆಯೆ ಭುಗಿಭುಗಿಲೆಂದು ಕೋಪ ಸಂ
ಭವಿಸಲಾ ವಹ್ನಿಯೊಳ್ ಕಾಲಭೈರವವಿಗ್ರಹಂ ಜನಿಸಿ ಘುಡುಘುಡಿಸುತೆ

ಯವನ ತಲೆಯುಗುರ್ಗೊನೆಯಿನರಿದಿಡಲ್ ಗಣವರರ್
ಸವಿಶೇಷನುತಿಗಳಿಂ ಪಾಡುತಿರೆ ಪ್ರಳಯಜಲ
ಮವನಿತಳಮೈದೆ ಮುಸುಗಲ್ ಪಲವು ದಿವಸಕ್ಕೆ ಬೊಮ್ಮಗನ ಮುಂಡದಿಂದೆ ೧೭

ಪೊರಮಡುತ್ತಾ ರಕ್ತಧಾರೆ ಜಲದೊಳು ಪೆರ್ಚು
ತಿರದೆ ಲೋಕಂಗಳಂ ಪ್ರಳಯಮೈಸುತಿರಲ್ಕ
ರರೇ ಯಾಹಾ ಕೆಟ್ಟೆವೆಂದು ಘೋಳಿಡೆ ಸರ್ವರಾ ಕಾಲದೊಳ್ ಮಹೇಶಂ
ಉರಿಗಣ್ಣಿನಿಂದೊಂದಕಿಡಿಯನಂಗುಳಲ್ಕದಂ
ಭರದಿ ನಿಮಿಷಾರ್ಧಮಾತ್ರಕೆ ಪೀರೆ ಬಹುಲೋಕ
ಮರಿದೆಂದು ಕೊಂಡಾಡಲಜನ ತಲೆಯಾಗ ಪೊರಳಂತ್ತಿರ್ದುದೇಳ್ವೆನು ೧೮

ಅದು ಸಕಲ ಸಚರಾಚರವನು ನೆಗ್ಗುತ ಬರಲ್
ಬೆದರಿಯಾಲೋಕ ಶಿವಶಿವಯೆಂದು ಮೊರೆಯಿಡಲ್
ಮದನಾರಿ ತನ್ನ ಕಣ್ಗಡೆಯು ಕೋಟ್ಯಂಶದೊಳಗೊಂದಂಶಮಂ ನಿಯಮಿಂಸೆ
ಪದುಳದಿಂ ತಲೆಯ ಮಿದುಳಂ ಮಾಂಸರಕ್ತಮಂ
ಕೆದರಲ್ಕೆ ತಲೆಬುರುಂಡೆಯಾಗಿ ಬೀಳಲ್ಕಾಗ
ಸದಮಳ ಶಿವಂ ಭೈರವನಮೂರ್ತಿಯಲ್ಲುಮೆಯ ಸಹಿತ ನಿಟ್ಟಿಸಿ ಬ್ರಹ್ಮನಂ ೧೯

ಅತಿನಿದ್ರೆಯಿಂದಲೆಳ್ಚತ್ತೆದ್ದು ಮನುಜನೋ
ಲತಿಹರ್ಷದಿಂ ನಿಂದು ಈಶನಂ ಈಶ್ವರಿಯ
ಸ್ತುತಿಸಿ ಸೋಮಾಷ್ಟಕದೆ ನಮಕಮಂತ್ರವ ಜಪಿಸುತಾಗಲಜ ತನ್ನ ಶಿರಮಂ
ಖತಿಯಿಂದ ಕೊಯ್ದರ್ಪಿಸುತ್ತಭವನಂ ನುತಿಸ
ಲತಿಶಯದ ಕರುಣದಿಂ ಭಯಮಂುಳಿಯೆನುತ್ತ ನಿಜ
ಮತಿವಂತ ಬೊಮ್ಮ ನಮ್ಮಯ ಜ್ಯೇಷ್ಠಪುತ್ರನಂದಾ ರುದ್ರಗಂ ತೋರುತೆ ೨೦

ಈತನಂ ವಧಿಸಬೇಡಜ್ಞತ್ವದಿಂದೆಮ್ಮೊ
ಳೋತಹಂಕರಿಸಿದಾಸುರದ ಹರಿಯುಂ ಬಿಡದೆ
ಯೇತೆರದೊಳಾಮೊಡಪಹರಿಸುವರ್ ಗರ್ವನೆಂದು ಭೈರವಗೆ ನೇಮಿಸುತ್ತೆ
ಪ್ರೀತಿಯಪ್ಪುದು ಬ್ರಹ್ಮ ನಿನಗೆಂದು ಕೇಳಲ್ಕ
ಜಾತಂಗೆ ನಮಿಸಿ ಬಿನ್ನವಿಸಿದಂ ಎಲೆ ದೇವ
ತಾತನಂ ಜರೆದ ಬಾಯೊಳ್ ರಕ್ತಮಂ ಪೊಯಿಸು ಭಿಕ್ಷಮಂ ಬೇಡುತೆಂದಂ ೨೧

ಬಳಿಕ ಲಾಲಿಸು ದೇವ ಹರಿ ನಿಗಮಪ್ರಣವಂಗಳ್
ತಿಳಿವಂತೆ ಪೇಳೆ ಗರ್ವದೊಳು ಕೇಳದೆ ಮತ್ತೆ
ಬಳಲಿ ನವಬ್ರಹ್ಮರಂ ಸೃಷ್ಟಿಸಲ್ ಜಗವನಾ ಸೃಜಿಸಿದೆನೆನುತ್ತೆ ಬಿಡದೆ
ಗಳಹಿದಜ್ಞಾನಿಯಾಂ ಎನುತ ತಲೆಯೋಡ ಬಿಡ
ದಲಘುಕರದೊಳ್ ಪಿಡಿವುದ್ಯೆ ಮುಂದೆ ಕೊಬ್ಬದೋ
ಲಳಿಕಾಕ್ಷ ನಾಲ್ಮೊಗದೊಳಿಹೆ ನಾನೆನುತ್ತೆ ವಿಜ್ಞಾಪಿಸಲ್ ಶಿವ ನಲಿವುತೆ ೨೨

ಎಲೆ ಬ್ರಹ್ಮ ಲೇಸು ಲೇಸೈಯೆಂದು ಕೋಪದು
ಜ್ವಲವಹ್ನಿಜಾತರುದ್ರನ ಕರೆದು ಪೇಳ್ದನೀ
ನಲವಿನಿಂದಾ ಕಪಾಲವನಾಂತು ಭೀಕರದ ಭಿಕ್ಷಾಟಣವನು ಬಿಡದೆ
ಘಳಿಲನೆಸುಗೆನುತಲಳಿಕಾಕ್ಷನುಮೆಯೊಡನೆ ತಾ
ನುಳಿದಾಕ್ಷಣಂ ರಜತಗಿರಿಗೆಯ್ದೆ ಭೈರವಂ
ತಳೆದ ತಲೆಯೋಡು ಘುಂಡಂಘುಡುಂಯೆನಲ್ ಗಣನಿವಹಸಹ ನಡೆದ ಧರೆ ನಡುಗಲು ೨೩

ಸನ್ನುತಾಮಳಪ್ರಮಥಕೋಟಿ ರುದ್ರಕೋಟಿ
ಯುನ್ನತದ ಭೂತಗಣದಿಂ ಸುರಾಸುರ ಗರ್ವ
ವನ್ನಿವಾರಿಸಂತ ಕಾಲಾಗ್ನಿಕೋಟಿಪ್ರಭಾವಂಜಳಂ ನೀಲಗಳನಂ
ನನ್ನಿಯಿಂ ದಂಷ್ಟ್ರಾಕರಾಳಾಸ್ಯನುಂ ಮಹ
ತ್ಪನ್ನಗಾಭರಣನಂಬರಕೇಶ ಕೃತ್ತಿವಸ
ನನ್ನಿಖಿಳಲೋಕೇಶರಕ್ಷಭಿಕ್ಷಾಟಣಕೆ ನಡೆದನಾನಂದದಿಂದೆ ೨೪

ಶೂಲ ಪರಶಂವು ಖಡ್ಗ ಪರಿಘ ವಜ್ರವು ಗದಾ
ಜ್ವಾಲಾಯುಧದ ಕೋಟ್ಯಲಂಕೃತಸುಬಾಹು ನೆರೆ
ಕೀಲಿಸಿದ ರತ್ನಕೋಟೀರದಿಂ ಸುಂದರದಿ ಕೋಟಿಕಾಮರ ಪಳಿವುತ
ನೀಲಮೇಘದ ನಿನದದಿಂ ಡಮರುನಾದದಿಂ
ದಾ ಲೋಕಪತಿಯುಂಡತತಿಯೊಡೆವ್ವುಠಿರಲುಂ ದಿ
ಕ್ಪಾಲರ್ ನಡುಗೆ ನಡೆದನಾ ರುದ್ರನುಗ್ರತೆಯಂ ಪೊಗಳೆ ನಾಲ್ಮೊಗನಿಗಳವೆ ೨೫

ಬಿಡದೆಯುಗ್ಗಡಿಪ ವಂದಿಗಳಿಂದ ಭೋರ್ಗರೆವ
ಬೆಡಗಿನ ಮಹಾಕಹಳೆ ನಿಸ್ಸಾಳ ಕೋಟಿಯಿಂ
ದಡಿಗಡಿಗೆ ಥಾಳಿಸುವ ಕನಕಚಾಮರ ಮುತ್ತಿನಾತಪತ್ರಾಳಿಯಿಂದ

ಸಡಗರದ ವೃಷಭದಿಂ ಕೀರ್ತಿಸುವ ಮುನಿಗಳಿಂ
ದಡರಿದತಿ ಜಯನಿನದ ಗಣಗಳಿಂ ವೈಕುಂಠ
ದೆಡೆಗೈದಿದಂ ಮಹಾಕಾಲಭೈರವರುದ್ರವೈರಿಭೀಕರಸಮುದ್ರ ೨೬

ಮರವ ಪೊಗುತಾ ಹರಿಯ ಅರಮನೆಗೆ ಬರೆ ಮುಂದೆ
ಯರಿಯದವನಂಶ ವಿಷ್ವಕ್ಸೇನ ತಡೆಯಲವ
ನಿರದೆ ಶೂಲದೊಳು ತಿವಿದೆತ್ತಿ ಮೇಲಕೆ ಕಾಲಭೈರವಂ ಒಳಪೊಗುತ್ತೆ
ಭರದಿ ಭಿಕ್ಷಾಯೆನ್ನುವಷ್ಟರೊಳ್ ವೈಕುಂಠ
ನಿರದೆ ರಮೆಯಿಂ ಬರುತ್ತೆನ್ನ ಮೇಲಣ ಕೃಪಾ
ವರದೃಷ್ಟಿಯಿಂದೀಶನೈದಿದನೆನುತೆ ಚಕ್ರದಿಂ ಪಣೆಯ ಸೆರಗ ಪೊಯ್ದಂ ೨೭

ಅಲ್ಲುದಿಸಿದಾ ರಕ್ತಧಾರೆ ಜಲನಿಧಿಯವೊಲ್
ನಿಲ್ಲದೇ ದಡದಡಯೆನುತ್ತಾ ಕಪಾಲಕ್ಕೆ
ಸಲ್ಲೀಲೆಯಿಂದೆ ದಿವ್ಯಾಬ್ದಸಾಹಸ್ರಪರ್ಯಂತ ಸುರಿಯಲ್ ಭರದಲಿ
ಬಲ್ಲಹನೆ ಒಂದುಹನಿ ನಿಲ್ಲದಂತದು ಪೀರೆ
ತಲ್ಲಣಿಸುತಾ ವಿಷ್ಣು ಡೆಂಡಣಿಸಿ ಬೀಳೆ ಸುರ
ವಲ್ಲಭನಮೃತದೃಷ್ಟಿಯಿಂ ನೋಡೆ ನಗುತೇಳುತಷ್ಟಾಂಗದಿಂ ನಮಿಸಿದಂ ೨೮

ಎಲೆ ದೇವ ಭಿಕ್ಷಾಟಣದ ಲೀಲೆಯೇ ಕಜ್ಜ
ನಲವಿನಿಂ ಪೇಳಭವ ಜೀಯಯೆನೆ ಶಿವ ನಗುತ
ಬಲವಂತವಹ ಬ್ರಹ್ಮ ತಾನೆಂದು ವಿಧಿ ಗರ್ವಿಸಲ್ ನೀನು ನಿಗಮಂಗಳು
ಸಲೆ ಬೋಧಿಸಲ್ ಕೇಳದವ ಗಳಹಲೆಮ್ಮನುರೆ
ಮಲೆತು ಗರ್ಜಿಸಿ ತಲೆಯನರಿದು ಭಿಕ್ಷಕೆ ಬಂದೆ
ವಲಘುಮಹಿಮೆಯ ತಿಳಿಯಲಿಲ್ಲವೇ ಎನುತವನ ಸಲಹಿ ಸ್ವರ್ಗಕೆ ಬಂದನು ೨೯

ಆದನರಿದು ದೇವೇಂದ್ರನತಿಭಕ್ತಿಯಿಂದ ತಾಂ
ಮದನಾರಿಯೆನ್ನ ಮೇಲಣ ಕೃಪಾಮೃತಚಿತ್ತ
ಮೊದವಲ್ಕೆ ನಡೆತಂದ ಪುಣ್ಯಕೆಣೆಗಾಣೆ ನಾನೆಂದು ತನ್ನಯ ಪುರವನು
ಪದುಳದಿಂ ನಗರರಚನೆಯ ಮಾಳ್ಪುದೆಂದಾಗ
ತ್ರಿದಶೇಶ ನಿಯಮಿಸುತ್ತಧಿಕ ಸಂಭ್ರಮದಿಂದ
ಲುದಿರ್ದಂದು ಸಪ್ತಋಷಿಯರ ಕೂಡೆ ದೇವದುಂದುಭಿನಿಕರ ಭೋರ್ಗರೆಯಲು ೩೦

ದೇವಾಧಿದೇವೇಶನಗ್ರದೊಳ್ ಬಹುದೇವ
ತಾವಲ್ಲಭಂ ಮುಖ್ಯರಡ್ಡಬೀಳಲ್ ಶಿವಂ
ತಾ ವಿವಿಧಸೂದ್ಯಾನರಚನೆ ಪತ್ತನದ ಸಿರಿ ಬಗೆಬಗೆಯ ಸಿಂಗರಗಳು
ಭಾವೆಯರ ಹಾವಭಾವಂ ವಿಲಾಸಂ ನಟನ
ಮಾ ವಿಧದ ಸೊಬಗುಗಳ ನೋಡುತಾನಂದದಿಂ
ದಾ ವಿಶಾಲಾಕ್ಷೀಸಮೇತನೊಡನಾಗಲರಮನೆಯೊಗಲ್ ಶಚಿ ನಲಿವುತೆ ೩೧

ಸುರಕನ್ನೆಯರ ಕೂಡೆ ಬಂದು ಮೌಕ್ತಿಕ ರತ್ನ
ದರಳಿನಾರತಿಗಳಂ ಬೆಳಗಿ ಸಪ್ತಾಂಗದಿಂ
ದೆರಗಿ ವಂದನೆಗೆಯ್ದು ನಿಮ್ಮ ಕೈಮುಗಿದಿರಲ್ಕಿಂದ್ರಾಣಿಯಾಯಿಂದ್ರ ತಾಂ
ಭರದಿಂದ ನೋಡುತ್ತಲೆಲೆ ಪುಲೋಮಜೆ ನಿನ್ನ
ಮರೆದರಿವಿನಿಂದಾದ ಪಾಪಕೋಟಿಗಳಳಿದ
ವರವಿಂದಭವ ಹರಿಗಳರಿಯದಿಹ ಘನಪಾದಸರಸಿಜಂಗಂಡನಿತಕೆ ೩೨

ಎಲೆ ಕುಶೇಶಯಮದನೆ ಈಶನಡೆಯಾಟದೊಳ್
ನಳಿನಭವನಳಿ[1]ಕಾ[1]ಕ್ಷ ಕೋಟಿಬ್ರಹ್ಮಾಂಡತತಿ
ವಿಲಯಂಸೃಷ್ಟಿಗಳಹವುಯಿಾ ಮಹಿಮನಣುವಿಗಣು ಸುಮಹತ್ತಿಗೆ ಮಹತ್ತನು
ವಿಲಸದಮಲಬ್ರಹ್ಮಜ್ಯೋತಿರ್ಮಯಂ ನಮ್ಮ
ಕುಲಕೋಟಿಗಳನ್ನೈದೆ ಪಾವನವ ಮಾಡಲೆಂ
ದೊಲವಿನಿಂದೈತಂದರೆಂದು ಶಚಿಯೊಡನೆ ಪೇಳುತ್ತಿರ್ದನೆಲೆ ಮುನಿವರ ೩೩

ಎನ್ನ ವಿಜ್ಞಾಪನಂ ದೇವ ನೀಂ ಕರದೊಳ
ತ್ಯುನ್ನತದ ತಲೆಯೋಡ ಪಿಡಿದು ಭಿಕ್ಷಾಟಣಕೆ
ನನ್ನಿಯಿಂ ನಡೆದ ಕಾರಣವೇನೆನುತ್ತಿರ್ದ ಬೆಸಗೊಳಲ್ ಗಹಗಹಿಸುತೆ
ಪನ್ನಗಾಭರಣನುಸಿಕನೆಯಿರಲ್ ಭೃಂಗಿಮುಖ
ರುನ್ನತದ ಕೋಪದಿಂ ಬೆಸಗೊಳಲ್ ದಕ್ಷನೇ
ಯೆನ್ನಲದ ಕೇಳಿ ನಡನಡುಗಿ ಶಚಿಯಿಂ ಭಿಕ್ಷಮಂ ನೀಡಲಭವ ನಲಿದು ೩೪

ಅವನಿಷ್ಟಮಂ ಸಲಿಸಿಯಮರಗಣಪ್ರಮಥಗಣ
ನಿವಹದೊಡಗೂಡಿ ಶಿವಕೋಟಿಕಂದರ್ಪರೂ
ಪವನಾಂತು ದಿವಿಯ ವೀಧಿಯೊಳು ಭಿಕ್ಷವ ಬೇಡುತಾಗ ಬರಲಲ್ಲಿ ಮೆರೆವ

---

1 ನಾ (ಕ)

ಸವಿಶೇಷ ಸಂರರ ಸತಿಯರು ಕನಕಮಂದಿರದಿ
ವಿವಿಧಚಿಂತಾರತ್ನ ಸಜ್ಜಾಗೃಹಂಗಳಲಿ
ಪ್ರವಿಭಕ್ತ ಪಾರಿಜಾತದ ವನಗಳಿಂದ ಪೊರಮಡುತಲತಿಸಂಭ್ರಮಂದೊಳಂ ೩೫

ಕಾಣುತಂ ಏಣಾಂಕಧರನ ಸೌಂದರ್ಯಮಂ
ಏಣಲೋಚನೆಯರಂಗಜನ ನಳನಳಿಪರಳ
ಬಾಣಕ್ಕೆ ಮನವಿತ್ತು ಕಡುನೊಂದು ಬೆಂದು ಕಕ್ಕನೆ ಕಂದಿ ಬಸವಳಿವುತೆ
ಮಾಣದೀ ಪೆಣ್ಬಾಳ್ಮೆ ಸುಡುಸುಡುಯೆನುತ್ತಲಿಪ
ಕೇಣದಿಂದಾಸತ್ತು ಬೇಸತ್ತು ವಿರಹದುರಿ
ಯೆಣ್ದೆಸೆಯ ಮುಸುಕೆ ಕಣ್ಗಾಣದಾ ಕಿಚ್ಚಿನೊಳಗೇನೆಂಬೆ ಸುಡುತಿರ್ದರು ೩೬

ಕೆಲರು ರನ್ನದ ಗಿಂಡಿ ತಟ್ಟೆ ಬಟ್ಟಲನಾಂತು
ಕೆಲರರ್ಘ್ಯಪಾದ್ಯಂಗಳಂ ಕೊಳ್ಳೆನುತ್ತೆ ಕೆಲ
ಕೆಲರು ಮಂದಾರ ಸುಮಮಾಲೆಗಳ ಧರಿಸೆನುತೆ ಕೆಲರು ಮೃಗಮದತಿಲಕಮಂ
ಕೆಲರಿಡುವೆವೆಂದು ಕರ್ಪೂರ ವೀಟಿಕೆಯನ್ನು
ಕೆಲರು ಕೊಳ್ಳೆಂದಾಗಳನ್ನದಂಗಡಿವಿಡಿದು
ಕೆಲರು ನಿಂದಿರೆ ಕೆಲರ್ ಭಿಕ್ಷಮಂ ತಂದೀಶನಂ ಬಳಸಿ ನಿಂದೆಸೆದರು ೩೭

ಕಾವನೆಂಬಾತನೀ ಕಾವ ನಮ್ಮೂರಂಗಳ
ತೀವಿ ಕಾವಗೆ ಕಾವನೇ ಕಾವದೇವನೆಂ
ದೋವಿಯಾನಂದಿಸುವೊಡೀ ದೇವನೇದೇವನಮೃತಮೇ ರುಚಿ ವಿಬುಧರು
ನಾವಾಗಲೇನುಂಟು ಕಲ್ಲಮುಗಳೀತನಂ
ಸೇವಿಸಿಯೆ ಸರ್ವಮಂ ಕೊಂಡಲಾಕೆಗಿಂ[1][ದಾ
ವಾ][1]ವ ಪೆಣ್ಗಳ್ ಭಾಗ್ಯವಂತೆಯರೊ ಕಟಕಟಾ ಎಂದೊರ್ವಳಳಪಳಿದಳು ೩೮

ನಿರಿ ಸಡಿಲಿ ನಸುನಾಣ್ಬದೋರಲರಿಯದೆ ಮುಡಿಯ
ಬಿರುಬಳಿಯೆ ಕೆದರ್ದುದಂ ಕಾಣದಾ ಕುಂಭಕುಚ
ದರರೆ ಮೇಲುದ ಜಾರ್ದುದಂ ಮರೆದು ತಾರಹಾರಂ ಪರಿದುಮೇಕಾವಳಿ
ಸರ ಪೋದುದಂ ಸದಕುಗೊಳ್ಳದೆ ಸತೀಜನಂ
ಸ್ಮರತಾಪದಿಂ ಲಜ್ಜೆಗೆಟ್ಟು ಚರಣವ ಪಿಡಿದು
ಹರಣದೊಡೆಯನೆ ಚೆಲ್ವರಸ ಕಾಯಿ ನಮ್ಮಯ್ಯ ಕಾಯಿ ದಮ್ಮಯ್ಯ ಕಾಯೊ ೩೯

---

1 ದಾ (ಕಗ)

ಏಕೆಮ್ಮ ನಿಟ್ಟಿಸೆಲೆ ನಲ್ಲ ನಮ್ಮಂ ಸೋಂಕ
ಲಾಕೆವಾಳರಂ ನಿನ್ನ ಜರೆದಪರೆ ಮುನ್ನ ನೀ
ನಾ ಕಮಲನೇತ್ರೆಯಹ ನಾರಾಯಣಿಯ ಬಿಡದೆ ರಮಿಸಲಪವಾದವೇನು
ಏಕೋಭುಜಂಗ ನಾನೆಂಬುದಂ ಮರೆದು ನೀ
ನೇಕೆ ಚುಂಬಿಸಿ ನೆರೆದು ಸಲಹೆ ವಿಟರೆರೆಯನೆಂ
ದಾ ಕಲಾಕುಶಲರಪ್ಪಂಗನೆಯರೆಯ್ದೆ ಬಿಣ್ಣವಿಸಲ್ಕೆ ನಗುತ ನಡೆದಂ ೪೦

ಲೆಕ್ಕಿಸದೆ ಪ್ರಮಥಗಣಮುನಿಕದಂಬಂಗೂಡಿ
ಮಿಕ್ಕು ಪೊಗಲಲ್ ವಿರಹದಬಲಾಜನಂ ನೋಡು
ತಕ್ಕಟಕ್ಕಟ ವಾಮನಂ ಪ್ರಾಂಶುಮತ್ತರುಫಲಕ್ಕೆ ಬಾಯ್ಬಿಡುವೊಲಾಯ್ತು
ದಕ್ಕದೇ ಪೋದ ಮುಕ್ಕಣ್ಣನಹ ನಲ್ಲನೆಂ
ದಕ್ಕಜಂಬಡುತಲೆದೆಗುಂದಿ ಕಾಮಾಗ್ನಿಯೊಳ್
ಪೊಕ್ಕು ಕುದಿವಂಬುಜಾಸ್ಯರ ನೋಡಿ ಕುಶಲನಾರಿಯರು ಪೇಳುತ್ತಿರ್ದರು ೪೧

ನಿರ್ವಿಕಾರಂ ವಿಕಾರದ ಜಂತುಗಳ ವಶಮೆ
ಕೊರ್ವಿದಾಮ್ನಾಯ ಶ್ರುತಿಗಳ್ ಜಾಯಿಲಂಗಳಾ
ಗುರ್ವಿನಿಂದರಸಲತಿಶಯದೆ ಕಾಣಿಸದ ಭವಕೋಟಿಮನ್ಮಥರ ಸೊಬಗಂ
ಸರ್ವೇಶನಾಂತಧಿಕ ವಿಟನಾಗಿ ಬರಲಿವರ್
ಪರ್ವಿದಜ್ಞಾನದಿಂದೆಳಸಲೀತನ ಭೃಂಗ
ಮೌರ್ವಿಯಂದುಗಿದಂಬು ತಗಲುವದೆಯೆಂದು ಕೆಲರಾಡುತಿರ್ದರ್ ತಮ್ಮೊಳು ೪೨

ಇವರ ಕಣ್ಗಳ ಸಮಿತ್ತಿಂದ ಕಾಮಾಗ್ನಿಯ
ನ್ನಿವರ ಹೃತ್ಕುಂಡದೊಳಗಿಟ್ಟವರ ಬಲಮೆಂಬ
ಸವೆಯದಾಜ್ಯವ ಕೂಡಿ ಹರನಂಗಸಂಗಮೆಂಬಮರಲೋಕವ ಪಡೆಯಲು
ಸವಿಶೇಷದಿರಬಯಸಿ ಸರ್ವಶೃಂಗಾರಗಾ
ನವ ಕಾಮತಂತ್ರದಿಂದುಲಿದು ಪಾಡುತ ಮನಃ
ಪ್ರವರನೆಂತೆಂಬ ಯಾಜಕನೊಡರ್ಚಿದ ಮೋಹಯಾಗಮಂ ತಲ್ಲೋಕದಿ ೪೩

ಆ ವಿರಹದಂಗನೆಯರುದ್ಯಾನವಮಂ ಪೊಗಲ್
ಕಾವನುರೆ ಬೆನ್ನಟ್ಟಿ ಬರಲಂಜಂತಂ ಕೊಳದೊ
ಳಾ ವನಿತೆಯರ್ ಬೀಳೆಯಲರಂಬಿನಿಂದೆಸೆಯಲವರಾಗ ಶರಭಯಂದೊಳು

ಭಾವೆಯರ್ ಕೆಟ್ಟೋಡಿ ತಳಿರ್ವಾಸಿನೊಳ್ ಬೀಳೆ
ಹಾವಾಗಿ ಹರಿದವವು ಹರಮಹಾದೇವಯಿಮಾ
ಭಾವಕಿಯರಂ ಸಲಹದೇ ಪೋಗಬಹುದೆನುತೆ ಸಖಿಯರುಲಿವುತ್ತಿರ್ದರಂ ೪೪

ಇಂತು ನಾನಾವಿಕಾರದಿ ಬಳಲ್ವ ಸತಿಯರಂ
ಕಂತುರಿಪು ನಿಟ್ಟಿಸದೆ ಸಕಲವೈಭವದಿಂದ
ಲಂತಕನಗರಿಯತ್ತ ನಡೆಯಲಜಹರಿಸುರೇಂದ್ರರ್ಕಳತಿಶಯದಿ ಪೊಗಳೆ
ಸಂತಸದೊಳಾ ಭರ್ಗಗಂ ಶ್ವೇತಕೇತು ಬ
ಲ್ಪಿಂತು ಚಾಮರಗಳಂ ಸೀಗುರಿಗಳಾಂತುಬರ
ಲಂತೆ ಶತಮಂಜರೀವಮೌಕ್ತಿಕದ ಛತ್ರದಿ ವಿಧೂಮಂಗಣನೆಯ್ತಂದನಂ ೪೫

ಎತ್ತಿದ ವೃಷಧ್ವಜಂ ದೇವದುಂದುಭಿ ಮೊಳಗ
ಲತ್ಯಧಿಕ ರಂಭಾದಿಗಳ್ ನಟಿಸೆ ಬರೆ ಶಿವಂ
ಮುತ್ತಿನುಪ್ಪರಿಗೆ ರನ್ನದ ಕೋಟೆ ಹೊನ್ನಗೋಪುರಗಳಂ ಕೊಳಗಳಿಂದ
ಎತ್ತೆತ್ತಲುಂ ಮೆರೆವ ಉಪವನಗಳಿಂ ಚೆಲ್ವ
ಚಿತ್ತಜನ ಮಂದದಾನೆಯೊಲ್ ತೋರ್ಪ ಗಣಿಕೆಯರ
ಮೊತ್ತದಿಂದತಿಚಿತ್ರತರಮಾದ ಸಂಯಮಿನಿಯಂ ಸಾರಿದಂ ಮುದದೊಳಂ ೪೬

ಬರಲು ಯಮರಾಜ ನಿಜಗಣಕರಿಂ ಸಂಭ್ರಮಂ
ಬೆರಸಿದಿರ್ವಂದಡ್ಡಬಿಳ್ದು ನಂತಿಸಿದ ದೇವ
ಸುರವಂದ್ಯಚರಣಾಂಬುರುಹಚಂದ್ರಿಕಾಮಂದಹಾಸ ರಜತಾದ್ರಿವಾಸ
ಪುರವೈರಿಯೆನ್ನಾಣ್ಮನೆನ್ನಪೊರೆವೆರೆಯ ನೀಂ
ಕರುಣದಿಂದೆಯ್ತರಲ್ ತಾಂ ಕೃತಾರ್ಥಂ ಪುಣ್ಯ
ಕರದೊಳೆಣೆಗಾಣೆ ನನಗೆಂದಾಗ ಭಿಕ್ಷಮಂ ನೀಡಿ ನಿಡುಪೊಡಮಟ್ಟನು ೪೭

ಉಘೆಯೆನಲ್ ಗಣಕದಂಬಂ ಪಾದಪದ್ಮಮಂ
ಖಗರಾಟ್‌ಧ್ವಜಾಜರಮರೇಂದ್ರರೋಲೈಸಿಬರೆ
ನಿಗಮತತಿ ನುತಿಪಾತ್ರ ಮೃತ್ಯುವಿನ ಮನೆಯತ್ತ ನಡೆಯಲಾಕ್ಷಣ ಧರ್ಮನಂ
ನಗುತ ತ್ವಷ್ಟೃಗೆ ಪೇಳೆ ನಿಮಿಷಮಾತ್ರಕೆ ಪಥದೊ
ಳಗಣಿತದ ಗೋಪುರಗಳಿಂ ವೀಧಿಯಂ ಪೊರೆಯ
ಲಗುರಂ ಗುಗ್ಗುಳದ ಹೊಗೆ ನೆಗೆಯಲಮರಾಂಗನೆಯರಾಗ ಪೂಮಳೆಗರೆಯಲು ೪೮

ಗಣನಿವಹದಿಂದಲುಂಬಲೆಯು ಸದನಕೆ ಶಿವಂ
ಬಣಿತೆಯಿಂದೆಯ್ತರಲ್ ಕಾಣುತ್ತಲುಂಬಲೆಯುಂ
ಅಣಿಯರದೆ ಯೋಚಿಸುತೆ ಸರ್ವೇಶ್ವರಂಗೆ ಸಾಕ್ಷಾತ್ಪರಂಜ್ಯೋತಿಗಖಿಳ
ಗಣನೆಯಿಲ್ಲದ ನಿತ್ಯಗೇನ ನೀಡುವೆನಂ ತಾಂ
ಭಣಗೆನುತ ಪೊರಮಡುತ್ತಷ್ಟಾಂಗದಿಂ ನಮಿಸಿ
ಪ್ರಣುತರೋಗಾರ್ತಿಹರಯಿದೆ ಭಿಕ್ಷೆ ಕೈಕೊಳೆನುತಂಬಲೆಯುಂ ನಮಿಸಿ ನಟಿಸೆ ೪೯

ಅವಳ ನೃತ್ಯದಿ ಬೀದಿಯಲಿ ಮಹಾತೃಪ್ತಿವಡು
ತವಿರಳಾತ್ಮಕನಪ್ಪಿ ಮುಂಡಾಡುತೆಲೆ ಮಗಳೆ
ಸವಿಶೇಷಭಕ್ತಿಗೆಣೆಯಿಲ್ಲೆನಲ್ಕಿವಳ ಪುಣ್ಯಕ್ಕೆ ಪಡಿಗಾಣೆವೆಂದು
ತವೆಯದಾ ಸಂರಮ್ಭದ ನುತಿಸಲ್ಕಲುಂಬಲೆಯು
ಭವಮಹಾದೇವ ಸರ್ವೇಶ ಸರ್ವಾಧೀಶ
ದಿವಿಜವಂದಿತಪಾದ ಭಿಕ್ಷಕ್ಕೆ ಬಂದಾ ಪರಿಯ ನಿರವಿಸುವದೆಂದಳು ೫೦

ಅತಿಕರುಣದಿಂ ಮಗಳೆ ವಿಧಿ ಗರ್ವಿಸಲ್ಕವನ
ವಿತತಪಂಚಮ ಶಿರವನರಿದ ಕಾರಣದಿಯುಂ
ನ್ನತದ ಭಿಕ್ಷಾಟಣಕೆ ಬಂದೆನೆನುತತಿಚತುರ ಕೈತವಂ ನುಡಿಯೆ ನಗುತ
ಮತಿವಂತೆಯೆಂದಳೆಲೆ ದೇವ ಸರಸವೆಯೆನ್ನೊ
ಳತಿದಯದಿ ಲಾಲಿಸುವುದಯ್ಯ ನಿನ್ನಾಜ್ಞೆಯಂ
ಚ[1][ತು][1]ರಾನನರ ಶತಸಹಸ್ರಶಂಕೆಯನೊಂದೆ ದಿನದಿ ಸಂಭವಿಸಲಭವ ೫೧

ಮುನ್ನಜ[2]ನ[2] ಕೊಂದಸ್ಥಿಗಳ್ ಸಪ್ತಕುಲಗಿರಿಗೆ
ಯುನ್ನತೋನ್ನತ ಶೋಣಿತಂ ಸಪ್ತಸಾಗರಮ
ದನ್ನಿರೀಕ್ಷಿಸದೆ ನಾಂ ಕೊಲೆ ನಿನ್ನ ತೊಳ್ತೆನಗೆ ಬ್ರಹ್ಮಹತ್ಯಗಳಂಟದ
ಸನ್ನುತನೆ ಬ್ರಹ್ಮ ನೀಂ ಬ್ರಹ್ಮನಿಂ ಬೇರುಂಟೆ
ನಿನ್ನಯೆವೆಯಾಟದಿಂ ಕೋಟಿಬ್ರಹ್ಮರ ಲಯಂ
ನಿನ್ನ ಬಳಿಗೆಲ್ಲಿಯದಂ ಬ್ರಹ್ಮಹತ್ಯೆಯ ಕಾಟ ಬಂದು ಕಾಡುವದಂ ಶಿವನೆ ೫೨

ಎಲೆ ದೇವ ಲೋಕದೊಳ್ ಪಂಚಪಾತಕಗಳಂ
ಸಲೆ ಶತಸಹಸ್ರ ಪಾಪಂಗಳಂ ಮಾಡಿದಾ
ಬಲವಂತರಾದ ವಿಧಿ ಸುರಪದಿಗ್ವರರು ನಿಮ್ಮಯ ಚರಣಪೂಜೆಯಿಂದ

---

1 ಮ (ಕಗ) 2 ರ (ಗ)

ಕಳಿದು ಪಾಪೌಘಮಂ ಶುದ್ಧರಪ್ಪರು ಸರ್ವ
ವಿಲಯಕಾಲದೊಳಜಂ ಎಲ್ಲಿರ್ದ ದ್ರೋಹಮಿದ
ನಳಿಕಾಕ್ಷಗಿಲ್ಲವೆಂದಿಕ್ಕುವೆನು ಮುಂಡಿಗೆಯನೆಂದು ಮೃತ್ಯುವು ಕುಣಿಯಲು ೫೩

ಶಿವ ನಗುತಲುಂಬಲೆಯ ತಲೆಯೊಳಾ ಪಾತ್ರೆಯಂ
ತವೆಯದತಿಕರುಣದಿಂದಿಟ್ಟು ನಡೆಯೆನೆ ಮುಂದೆ
ಶಿವಗಣಂ ಮುನಿನಿಕರ ಸುರರು ವಿಸ್ಮಯಬಟ್ಟರೆಲೆ ಮೃತ್ಯುದೇವಿ ನೀನು
ಭವನ ಕರುಣವನಾಂತೆ ಭಲರೆ ಎಣೆಗಾಣೆವೀ
ಭುವನದೊಳಗೆನಲು ಘನವೃಭವದೊಳಾ ಶಂಭು
ಸವಿಶೇಷದಿಂ ಪಾಸಿಯಿಹ ಶುದ್ಧವತಿಯತ್ತ ನಡೆದನಾನಂದದಿಂದೆ ೫೪

ವರುಣನೀ ಒಸಗೆಯಂ ಕೇಳಿ ಹರುಷಂದಾಳಿ
ಭರದಿ ಪುರರಚನೆಯಂ ಮಾಡೆಂದು ಮನದಂದು
ನಿರುತದಿಂದೆನ್ನಾಣ್ಮ ಬಂದಪಂ ನಾ ಪೋಪೆ ತರುಣಿ ನೀಂ ಬಾರೆ ಸಾರೆ
ಹರಹರ ಕೃತಾರ್ಥತೆಯ ಹೊಂದಿದೆಂ ಚಂದದಿಂ
ದರರೆ ಪಾವನಮೂರ್ತಿ ಪಾದದೊಳ್ ವೋದದೊಳ್
ತರತರದೊಳಾಗಡ್ಡಬಿಳ್ದು ಸೊಗಮಂ ತಾಳ್ದು ಮನೆಗೊಯ್ದು ಸ್ತುತಿಸುತಿರ್ದಂ ೫೫

ಗೋರಾಡ್‌ಶಿರೋಪಾತ್ರ ಗೋರಾಡ್ ಶಿಶುಕಲತ್ರ
ಗೋರಾಡ್ ತನೂಜ ಸು[1]ತ[1]ಮಾತುಲ ಸ್ತುತಿಪಾತ್ರ
ಗೋರಾಡ್ಗು ಘನಲಿಂಗ ಗೋರಾಣ್ಮಹಾಗಮನ ಗೋರಾಡ್ಜಮಸ್ತಕಾಬ್ಜ
ಗೋರಾಡ್ಗುರುಸ್ತುತ್ಯ ಗೋರಾಣ್ಣಮಸ್ಕೃತ್ಯ
ಗೋರಾಣ್ಮಯಾಭಾಸ ಗೋಧಾರಹರಿಭೂಷ
ಗೋರಾಡ್ಭವಾಧಾರ ಗೋರಾಜರಾಜಧರನೆಂದು ನುತಿಸಿದ ವರುಣನು ೫೬

ಶರಣು ಸರ್ವಜ್ಞ ಸರ್ವೇಶ್ವರ ಸ್ವತಂತ್ರಾತ್ಮ
ಪರಿಪೂರ್ಣ ಪರಬ್ರಹ್ಮ ನಿತ್ಯ ನಿರ್ಮಲ ನಿರಾ
ವರಣ ನಿಮ್ಮಯ ಸೇವೆಯಿಂದೆನಗೆ ದೊರೆಕೊಂಡಿತೆಂದು ಬಹುವಿಧದಿ ನುತಿಸಿ
ಹರನಿಗೆ ಯಥಾಶಕ್ತಿ ಭಿಕ್ಷೆಯಂ ನೀಡಿ ಬಂ
ಧುರಮೆನಿಪ ಶಿವನ ಶ್ರುತಿಪಾತ್ರೆಯೊಳಗಾಗ ತಂ
ದರರೆ ಗಾನಾನಂದ ಫಲರಸವನೆರೆಯೆ ಹೃಜ್ಜಿಹ್ವೆಯಿಂ ಸಲಿಸುತಭವಂ ೫೭

---

1 ಮ (ಕ)

ತಲೆದೂಗುತಯ್ಯಯ್ಯ ಸೈಪದೆಂತೆಂದವಳ
ಸಲೆ ನೋಡುತಾ ಪ್ರಚೇತಸನರಸಿ ಗಾನಮಂ
ನಿಲಿಸಿ ಪಾರ್ವತಿಗೆ ಸಖಿಯಾದ ಧನದನ ಕುಲಕೆ ಕಟ್ಯಾಣಿಮಂತ್ತೆನಿಸುವ
ಸುಲಲಿತೆ ಸುಮಾಲಿನಿಯೆ ಗಾನಮಂ ರಚಿಸೆನಲ್
ನಲವಿನಿಂ ವೀಣೆಯಂ ಕೊಂಡು ರಾಗವ ಪಾಡೆ
ಸಲೆಯವಳ್ ನಾಣ್ಚೆ ಸರ್ವಜ್ಞನಿರ್ವರ ಕೂಡಿ ಸಮನಾಗಿ ಪಾಡಿಸುತ್ತ ೫೮

ಕರುಣದಿಂದವರ ರಕ್ಷಿಸುತಖಿಳವಿನಿಯೋಗ
ವೆರಸಿ ಧನದನ ನಗರದತ್ತ ನಡೆಯಲ್ಕಾ ನ
ಗರ ವರತರಂಗಿಣಿಗಳಿಂದ ಪೀಯೂಷವಿಾ ಜಲವಲ್ಲದಿಲ್ಲವೆನಿಪ
ಸರಸೀಕುಲಗಳಿಂದ ಚೈತ್ರರಥವನದೆ ಸಿಂ
ಗರದ ಚಿನ್ನದ ಕೋಟೆ ಮೌಕ್ತಿಕದ ತೆನೆಗಳಿಂ
ಹರಿಮಣಿಯ ಸೆಜ್ಜೆವನೆ ರತ್ನಗೋಪುರದೆಯುಳಕಾಪುರಂ ರೈಯ ಮೆರೆಯೆ ೫೯

ಆ ಪತ್ತನಂ ನೋಡುತಿದಕೊ ಕೈಲಾಸಮಂ
ದಾ ಪರಮರುದ್ರಗಣ ಮುನಿ ನಿರ್ಜರರ್ಕಳನು
ಲಾಪದಿಂ ಕೀರ್ತಿಸುತ್ತಿರಲುವ ನಾಪತಿ ಸಕಲಸಂಭ್ರಮಚೊಳೆಯ್ತುರುತಿರೆ
ದೀಪಿಸುವನೆನ್ನಾಣ್ಮನೆನ್ನೊಡೆಯನೆನ್ನ ಮೇ
ಲೇಪೇಳ್ವೆನತಿಕರುಣವೆಂದೈಕಪಿಂಗನುರೆ
ತಾ ಪುರಂ ಪೊರಮಟ್ಟು ಬಂದು ಸಾಷ್ಟಾಂಗ ಪ್ರಣಾಮಮಂ ಮಾಡಿ ಮುದದಿಂ ೬೦

ಬಾರಯ್ಯ ಸಖನೆನುತ್ತಾ ಹರಂ ತಳ್ಕೈಸ
ಲಾ ರಮೇಶಾದ್ಯಮರಗಣ ಪ್ರಮಥಸಂದೋಹ
ಮಾ ರಮ್ಯಗುಣವ ನಿಟ್ಟಿಸುತಲಿಂತಹ ಕರುಣಮಂ ಪಡೆವರಾರೆನುತ್ತೆ
ಸಾರಿ ಕೀರ್ತಿಸೆ ಹರನ ಮುಂಡೆಯೊಳಗಾ ಪುರದ
ಸಾರಸೌಂದರ್ಯನಾರಿಯರು ಪರಿಮಳಮಿಶ್ರ
ವಾರಿಯಂ ಮುತ್ತಿನಕ್ಷತೆಯು ತಳಿವುತ ಮೃಗದ ಪರಿಮಳವ ಲೇಪಿಸಿದರು ೬೧

ಸಾರಭಕ್ತಿಯೊಳವರ್ ವೀಣಾದಿಗಳ ನುಡಿಸು
[1]ತೋ[1]ರಂತೆ ಗಾನರಸದಿಂ ದಣಿಸಿ ಶಿವನಿದಿರೊ
ಳಾ ರಮ್ಯ ನಟಣಮಂ ನಟಿಸುತ್ತಲಾನಂದರಸಮುಣ್ಮಲವರ ಹೃದಯ

---

1 ಥೋ (ಕ)

ನೀರೇಜದೊಳ್ ಪ್ರಸನ್ನತೆಯಶಾಂತಯೊಪ್ಪೆ ಮದ
ನಾರಿ ಪದಪಂಕಜಧ್ಯಾನಮಂ ಮರೆಯದಿಹ
ನೀರೆಯರ ಸಹ ಕಿನ್ನರೇಶನರಮನೆಯ ಪೇರೋಲಗದಿ ರಂಜಿಸೆ ಹರಂ ೬೨

ದೇವ ದೇವನ ಚರಣಮಂ ಸರ್ವಸುರಗಣಂ
ತಾವೈದೆ ಪೂಜಿಸುತ್ತಿರೆ ಸ್ವರ್ಣಘಟದಲ್ಲಿ
ತೀವಿತಂದಂಬುವಿಂ ಯಕ್ಷೇಂದ್ರನೀಶನಡಿದೊಳೆದು ತೀರ್ಥವ ಶಿರದೊಳು
ಸಾವಧಾನದೊಳು ಸಂಪ್ರೋಕ್ಷಿಸಲ್ ಸಂರರೆಲ್ಲ
ಓವಿ ತಂತಮ್ಮ ಮಂಡೆಯ ಮೇಲೆ ತಳಿಯೆ ನಿಜ
ಭಾವೆಯಂಗಾಗ್ರದೊಳ್ ಪ್ರೋಕ್ಷಿಸಲ್ಕಿದು ಸಲ್ಲದೆಂದು ಸತಿಯಂ ರಭಿಂಕಿಸಿ ೬೩

ತಾನೈದೆ ಪೊಡಮಡುತ್ತಾ ನವ್ಯಪದತಳಮ
ನೂನ ಭಕ್ತಿಯೊಳು ತೊಳೆವುತ ಹೆಂಗಳರಸಿ ಮುಂದ
ಮಾನುತಾ ತೀರ್ಥಮಂ ಬಗಸೆಯಿಂ ಕೊಂಡು ಮಂಡೆಯ ಮೇಲೆ ತಳಿವುತಮರೋ
ದ್ಯಾನ ಮಂದಾರಮಾಲೆಯ ಮಸ್ತಕಾದ್ಯಖಿಳ
ಸ್ಥಾನಂಗಳೊಳ್ ಧರಿಸಿ ನಿಜಶಕ್ತಿಭಿಕ್ಷೆಯಿಂ
ಮಾನನಿಧಿಗರ್ಪಿಸುತ್ತಾ ಯಕ್ಷಪತಿಸತಿಗಳೀರ್ವರುಂ ಪೊಡಮಟ್ಟರು ೬೪

ಆ ಪುರಂ ಪೊರಮಡುತ್ತಖಿಳ ಸುರಸದ್ಮದೊಳ
ಗಾ ಪರಮ ಭಿಕ್ಷೆಯಂ ಕೊಂಡು ಸುರಪ್ರಮಥಗಣ
ರೇ ಪೇಳ್ದನವರವರ ವಾಸಕ್ಕೆ ಕಳುಪಿ ಭಿಕ್ಷಾಟಣಮನುಳಿದು ತನ್ನ
ಓಪಳೊಡನಂತರ್ಧಿಯಂ ಪೊಂದಿದಂ ಮುನಿಯೆ
ದೀಪಿಸುವ ಶಿವನ ಭಿಕ್ಷಾಟಣದ ಲೀಲೆಯಿದಂ
ಲೋಪಮಿಲ್ಲದೆ ಕಲ್ಪಕಲ್ಪದೊಳಗಂಟೆಂದು ಮರುಳಸಿದ್ಧೇಶನುಸುರ್ದಂ ೬೫

# ನಾಲ್ಕನೆಯ ಸಂಧಿ

ಸೂಚನೆ :

ಅಂದು ತಾರಕನಾರ್ತಿಗಾರದಚ್ಯುತ ಸುರರ
ವೃಂದ ಕಾಮನ ಕಳುಹಲವನೀಶನೊಡನೊಳಗೆ
ಬಂದೀಶನೆಸೆಯೆ ಫಣೆಗಣ್ಗಿಚ್ಚಿನಿಂ ಸುಡುವ ಮೆರೆದನಂದಾ ಮಹೇಶಂ

ಷಟ್ತ್ರಿಣಮಮಯ ಶಿರೋಜನಕ ಗೋರಾಡ್ವಿಶ್ವ
ಸೃಷ್ಟಿಮುಖ ಘಸಕಪಾಲಾಂಕಿತೋರಸ್ಕ ಸುರ
ರಾಟ್ತ್ರಿಣುತಪಾದಾಬ್ಜ ಪರಮ ಕಲ್ಯಾಣಾದ್ರಿಚಾಪ ಗೋವಿಂದ ವಿಶಿಖ
ರಂಟ್ಪತಿ ತನೂಭವಹೃದಯಭೇದಿ ಚರಣಜಲ
ರುಟ್ಪರಾಗಾಯಿತರಜಃ ಶಾಂತನಪ್ರಸುಜ
ನೆಟ್ಪ್ರಪಜಾಲ ಕರುಣಾವರಣನಿಲಯ ಗುರು ಚೆನ್ನಮಲ್ಲೇಶ ಜಯತು ೧

ಪೋರಂಡವೂರೊಳತಿಶಿವಭಕ್ತಿನಿಷ್ಠೆಯಿಂ
ಸೂರಸಾನಾಂಬೆಯಿರೆ ದೃಢವ ನೋಡುವೆನೆಂದು
ಮಾರಾರಿ ಶೈವಲಾಂಛನವ ಮಿಣಿ ಕೆರಹ ಕರುಗೋಲನಾಂತೂರ್ಗೆ ಬರಲು
ಸಾರಭಕ್ತಿಯೊಳೆರಗೆ ಪಾರ್ಬರೆಲ್ಲರ್ ಜರೆಯೆ
ಮಿಾರಿ ಪೂಜಿಸೆ ಮನೆಯ ಮತ್ತೆ ಶಿವಲಿಂಗದೊಳ್
[1]ರಾ[1]ರಾಜಿಸಲ್ಕವರ್ಗೆ ತೋರಿ ಪೊಡಮಡಿಸಿಕೊಂಡಾ ಶರಣಸತಿಗೆರಗುವೆಂ ೨

ಎಲೆ ದಧೀಚಿಯೆ ಕೇಳು ದಾಕ್ಷಾಯಣಿಯ ರೂಪ
ಮುಳಿದು ಶಿವೆ ಗಿರಿರಾಜನಲ್ಲಿ ಪಾರ್ವತಿಯೆನಿಸಿ
ಮಲಹರನ ಭಜಿಸುತಿರೆ ಪಂಪೆಯೊಳಗಿತ್ತ ತಾರಕನಾಜಿಯೊಳ್ ದೇವತಾ
ಕುಲಮೆಯ್ದೆ ಮುರಿದು ಮೇರುವಿನ ತಪ್ಪಲಿಗೆಯ್ದಿ
ಸಲೆ ಯೋಚಿಸುತ್ತ ಹರಿಮುಖರಾಗ ಗೀಷ್ಪತಿಯ
ನಲವಿನಿಂ ಕಳುಹಲಂಗಜನವೋಲಗದಬಳಿಯರಲಿ ಸಿಂಗರವ ನೋಡಿ ೩

ಕಣ್ಣೆನುರೆ ಭ್ರಾಂತಿಯಿಮ್ಮಡಿಗೆಯ್ದೆ ಮರುಳಾಗಿ
ದಣ್ಣನೇ ದಣಿದುಬರುತಿರೆ ಕಾವನಿದಿರ್ವಂದು
ಬಣ್ಣಿಸುತ ಸತ್ಕರಿಸಿ ಬಂದಿರೇನೆನೆಯಸುರನಿಂ ಭಂಗಮುಡರ್ದಸುರರಿಂ

---

1 ತಾ (ಗ)

ಬಣ್ಣಗುಂದುತ ನಿನ್ನ ಬರವೇಳ್ದರೆನೆ ಹರಿಯ
ಚಿಣ್ಣನೆಯ್ತಂದು ಚೆಲ್ವಬಲೆಯಂಗೆರ್ಗಿ ಬಿಡು
ಗಣ್ಣಿಗೆ ಶರಣೆಂದು ನೀವು ಕರುಣಿಸಿದ ಕಜ್ಜವ ಪೇಳ್ವುದೆನಲೆಲ್ಲರು ೪

ಸ್ಮರನೆ ಸಕಲರ ಗೆಲ್ವ ಸುಭಟ ನೀನೆಂದರಿದು
ಸುರಕಾರ್ಯಕಾಗಿ ಕರೆಸಿದೆವೆಂಬ ಮಾತಿನಿಂ
[1][ದರಲಂ][1]ಬ ನುಡಿದನೆನ್ನಯ ಬಾಣದುಪಹತಿಗೆ ನಿಲುವರಾರ್ ತ್ರಿಭುವನದೊಳು
ಅರರೆ ಜಗದೇಕವೀರಂ ನಿನ್ನ ಜಯಿಸಲಾರ್
ಸರಿಯೆ ಶಿವತಪವ ಭಂಗಿಸಿ ಶಿವೆಯೊಳಾತನಂ
ಯೆರವಿಲ್ಲದೊಡಗೂಡಿಸಲ್ ಕುಮಾರಂ ಪುಟ್ಟಿ ತಾರಕನ ಪರಿಹರಿಸುವಂ ೫

ಎನಲು ನಿಜಜನಕ ಹರಿವಿಧಿಮುಖರ್ ಕೇಳಿಸೆಂ
ದೆನುತ ಕಾಮಂ ಪೇಳ್ದನೀಶನರ್ವಕ್ಕೊಡೆಯ
ನನಘ ನಿಶ್ಚಿಂತ ನಿರ್ಮಲನೂರ್ಧ್ವರೇತಸಾತನ ಜಯಿಸಲಾಂ ದಕ್ಷನೆ
ಇನನೆಡೆಗೆ ಕಳ್ತಲೆಯ ಕಾಂತೆಯಂ ದಗದಗಿಸು
ವನಲನಲ್ಲಿಗೆ ಅರಗುಬೊಮ್ಮೆಯಂ ಪೆರ್ಬುಲಿಯ
ಮನೆಗೆ ಹುಲ್ಲೆಗೆ ಕಳುಹುವೋಲಾಂ ಬರ್ದುಂಕುವನೆಯೆನೆ ಹರಿಯುಸುರ್ದನೊಲವಿಂ ೬

ಆರಿಗಾರಿಲ್ಲೆಂಬ ನೀತಿಯೊಳುಪಾಯದಿಂ
ದಾ ರಮಾಸುತ ಮದನ ನೀನೊರ್ವನಳಿದಾದೊ
ಡೀ ರಮ್ಯಸುರನರರ ಸಲಹು ನಿನ್ನಳಿವ ನೋಳ್ಪೆವೆ ಮಗನೆ ನಾವೆಲ್ಲರು
ನೀರೇಜನೇತ್ರನಿಂತೆಂದು ನಂಡಿಯಂಲ್ಮಿಕ್ಕಬ್ಬಿ
ಸಾರಶಿವನೆನ್ನದಟಿಗಾಪ್ಪನೇ ಕೇಳಯ್ಯ
ಪಾರುಮಾಡುವೆ ರಸವನಂಜದಿರಿ ನೀವೆನುತ ಮಾಧವನ ಬರವೇಳ್ದನು ೭

ಬರಲಖಿಳ ಚತುರಂಗ ಬಲವನೀಕ್ಷಣದೊಳಂ
ತರಿಸಿದಲ್ಲಿಗೆ ಬರಲ್ವೇಳ್ಕುಗೆನೆ ನಲಿವುತವ
ಭರದೆ ಬೆಂಬಲದಳಿಗೆ ಪೇಳೆ ಸನ್ನಾಹಭೇರೀನಾದಮೊಣ್ದೆಸೆಯೊಳು
ಸರಿಸದಿಂ ಧಾಂ ಧಣಂ ಧಣಮೆನಲ್ಕಾಗಲಂ
ಬರಧರಣಿತಳಮೆಲ್ಲ ತುಂಬಿಬರೆ ಚೈತ್ರನುರೆ
ಸ್ಮರಗೆ ಪೇಳಿದ ತನ್ನ ಬಲದ ವೈಭವದ ಮೋಡಾಮೋಡಿಯಂ ಗಾಡಿಯಂ ೮

---

1 ಲ್ಶರ್ಗ್ಗಂ (ಕಗ)

ಇದೆ ಕಾಮಚಕ್ರೇಶ ನವನಾರಿ ಕುಂಜರಮು
ಮಿದೆ ಚತುರ್ಲಲನಾತ್ಮಿಕಾಂದೋಳಿಕೆಯು ಪಂಚ
ಸುದ ತುರಂಗಮಿದೆ ಪೂರ್ಣಚಂದಿರನ ಬೆಳ್ಗೊಡೆಯು ಸಹಕಾರ ಕುಜದ
ಮದಗಜದ ಘಟೆಗಳಿವೆ ಗಿಳಿಗುದುರೆ ಪೌಜಿವೆಕೊ
ಸದಮಳ ರಥಾಂಗರಥಮಿವೆ ಸಕಲ ಜೀವರಂ
ತೆದೆಗೆಡಿಪ ಪೆಂಗಳ ಮಹಾಪದಾತಿಯು ಬಂದು ನಿಂದಿದೆ ಪರಾಕೆಂದನು ೯

ಮದನಸಖ ಸಕಲ ಪೆರ್ಬಲವೊದವಿಬಂದಂ ನಿ
ಮ್ಮಧಿಕಸಮಯವ ಕಾಯ್ದು ನಿಂದಿದೆ ರತೀಶನೆಂ
ದೊದವಿ ಪೇಳಲ್ಕೇಳಿ ಸಿಂಗರಂಬಡೆದು ಕರ್ವಿಲ್ಲೊಪ್ಪಿಗತಿಮುದದೊಳು
ಪದದೇರಿಸುತ್ತ ತಾವರೆಯ ನೂಲ್ದಿರುವನಂ
ತದಕರಲಿನಂಬುಗಳನಾಂತಂ ನವನಾರಿಯೆಂ
ಬದಟು ಮದ್ದಾನೆಯಂ ತಾನಡರಿ ಸೇನಾಧಿಪನ ಮುಖವ ನೋಡಿ ಮುಂದದಿಂ ೧೦

ಆ ವಸಂತೋತ್ಸವದೊಳಖಿಳಜಲಜದ ಕಂಪ
ನಾವಹಿಸಿ ಬೀಸುತಿಹ ಮೃದುಮರುತಘಾತದಿಂ
ತಾಪೆದ್ದು ಪೊಡಮಡಲ್ ಭ್ರಮರದುರೆ ನಿಸ್ಸಾಣದಾ ರವಂ ಝೇಂಕರಿಸಲು
ತೀವಿ ಭಾರದ್ವಾಜವೆಂಬ ತಂಬಟಮುಲಿಯ
ಲಾ ವಿವಿಧಪರಭೃತಗಳೆಂಬ ಹೆಗ್ಗಾಳೆಗಳ್
ಭಾವಜನ ಬಿರಿದೆತ್ತಿ ಭೋರ್ಗರೆಯಲಖಿಳ ಬಲ ನಡೆದುವದನೇಪೇಳ್ವೆನು ೧೧

ಸ್ಮರರಾಜ ಬಂದನೆದೆಗೊರೆವರಲಸರ ಬಂದ
ನರಿದೆನಿಪ ಯತಿಕಮಂಲಕೈರವಾಪ್ತಂ ಬಂದ
ರರೆ ಸನ್ಮುನಿಬೃಂದವೆಂಬ ನೀಲೋತ್ಪಲಕೆ ಚಂಡಮಾರ್ತಾಂಡ ಬಂದ
ಮುರವೈರಿಸುತನ ಬಿರಿದಿನ ಕಹಳೆಗಳ್ ಮೆರೆಯ
ಲಿರದಿಂತೆನುತ್ತ ಮುಂಚೂಣಿಯೊಳಗೆ ವಸಂತ
ಬರುತಿರಲ್ ಪೆಣ್ಪಡೆಯನಾಗ ಪಂಪಾಕ್ಷೇತ್ರಮಂ ದೂರದಿಂ ಕಂಡನು ೧೨

ಅಲ್ಲಿರ್ಪ ವರತಪೋಧನರೆಯ್ದೆ ನೋಡಿಯಾ
ಫುಲ್ಲಶರನಂತಗ್ನಿಮಯಂದಸ್ತ್ರನಂ ಮಾರಿ
ಗೆಲ್ವ ಫಣಿಪತಿ ಸಿಂಜಿನಿಯನೆಂತು ತಾವರೆಯನೊಲ್ದಿರುವ ಜಯಿಪನೆಂತು

ಕಲ್ಲೆರ್ದೆಯನಳಿಯನಳಿಯೆರ್ದೆಯ ಸೋಲಿಪನೆ ಬಿಡು
ತಲ್ಲಣಿಪಯರಲೆಗಣ್ಣಬಳಾಬಳಂ ತಾನು
ನಿಲ್ಲಂವನೆ ಪ್ರಮಥಬಲನೊಡನೆ ಮದ್ದಾನೆಗಾಡಿಗೆ ಪೊಣರೆನುತ್ತಿರ್ದರಂ ೧೩

ಇಂತುಸುರ್ವುದಂ ಕೇಳಿ ತಾಂ ಮೆರೆವ ಮಾತಂಗ
ಮಂತಡರಿ ಚತುರಂಗಬಲವ ಕೈಬೀಸೆ ಮಂದ
ವಾಂತಖಿಳ ಸೇನೆಯನು ಖೋಯೆಂದಂ ಹೇಮಂಕೂಟವ ಮುತ್ತೆ ನಂದೀಶ್ವರಂ
ತಾಂ ತಿಳಿದು ಪೋಟಕಾವನ ಬಲಂ ಬಂದುದಿದ
ನಂತರಾತ್ಮನ ತಪಕೆ ವಿಘ್ನಮೆಂದುರಿಯ ಕ
ಣ್ಣಂತು ತೆರೆಯಲ್ ಸೈನ್ಯ ಮರುಮರೀಚಿಕೆಯಂತೆ ಬಯಲಾದುದೇವೇಳ್ವೆನು ೧೪

ಆನೆಗಳ್ ಕಾನನಕೆ ಪೋಗವಶ್ವಗಳೆಲ್ಲ
ಜಾನಿನತ್ತೈದಿದವು ಬಿಲ್ಲಂಬು ಹೆದೆಗಳುಂ
ತಾನ್ಬೈದೆಬಿಳ್ದವಾ ತೋಟ ಕೆರೆ ನೀರ್ಮೊರದ ಕೋಟರಂಗಳೊಳು ಸಚಿವಂ
ಏನೆಂಬೆ ಕಾಲ್ನಡೆಯೊಳೋಡಿಪೋದಂ ರಥಂ
ಹೀನದಬಳೆಯರೆದೆಯ ಸೇರಿದುದು ನಿರ್ಭಾಗ್ಯ
ಭೂನಾಥನಂತೊರ್ವನೇ ನಿಂದು ಕಂತು ಚಿಂತಿಸುತಿರಲ್ ಜಗದಂಬೆಯಂ ೧೫

ಅನಿತಕ್ಕೆ ಬರೆಕಂಡು ರೋಗದಿಂ ಬಳಲುತಿಹ
ಮನುಜಂಗೆ ಘನವೈದ್ಯಬಂದಂತೆಯೆನ್ನ ಬಿಡ
ದನುವಿನಿಂ ಪೊರೆವಮಳಮಾತೆಯೈತಂದಳೆಂದಾಗ ಸೈಗೆಡೆದು ನಿಂದಂ
ವಿನಯದಿಂ ನುಡಿದು ಅಂಗಜ ನೀನಂ ಬಂದ ಹದ
ನನುಮಾನವಿಲ್ಲದುಸುರೆಂದೆನಲು ಶರ್ವಾಣಿ
ಮನುಮಥಂ ಪೂರ್ವವೃತ್ತಾಂತಮಂ ಪೇಳಿ ತಪಮಳಿಸಲೆಯ್ದಿದೆನೆನಲ್ಕೆ ೧೬

ಎಲೆ ಕಾಮ ಲೇಸುಲೇಸೆಂದು ಸಂತಸವಟ್ಟು
ಒಲವಿನಿಂ ನಾಂ ಮುನ್ನ ತಪವ ಬಿಡಿಸುತ ಪತಿಯ
ನಲವಿನಿಂ ರಮಿಸಲಿಚ್ಛೈಸಿ ಪೂಜಿಸುವ ಸಮಯಂಕೆ ಬಂದೆ ಮನ್ಮಾನಸ
ನಳಿನಮನ್ನಲರಿಸಿದೆಯೆಲೆ ಕಂದ ಬಾರೆನ್ನ
ಅಲಘು ಪುಷ್ಪಕದ ಮರೆಗೊಂಡೆನುತ ಗಿರಿಜಾತೆ
ಸಲೆ ಪೇಳೆ ಕೇಳಿ ಬಂದಾ ಶಿವತಪೋವನವ ಪೊಕ್ಕು ಶಂಭುವ ಕಾಣುತೆ ೧೭

ಶೂಲಿಯಗ್ರದೊಳಾಗ ವೀರಮಂಡಿಯ ಪೂಡು
ತಾಲೋಚನಂಗಳಿವೆ ಹೊಯ್ಯ ದಿಟ್ಟಿಸಿ ಧನುವ
ಮೂಲದೊರೆಯನ ಷಷ್ಠಿಸಾಹಸ್ರವರುಷಪರಿಯಂತ ಬಿಡದತಿವೇಗದಿಂ
ಮೇಲೆ ಕರ್ವಿಲ್ಲ ಬಾಗೊತ್ತಿ ತಿರುವೇರಿಸು
ತ್ತಾ ಲಲಿತ ತುಂಬಿ ಪಿಳುಕನಮರ್ಚಿಸಿಯೆ ಮುಂದದೊ
ಳಾಲಿಸುತ ಮನದಿಂದ ಮದನಬಾಣವ ಬಿಡಲ್ಕಳ್ಕಿ ತಿರುಗಿತ್ತು ಬೇಗಂ ೧೮

ಮತ್ತೆ ಮದನಂ ಮಸೆದ ಮದನಾಸ್ತ್ರಮಂ ತೊಡಲ್
ಹತ್ತಿರಕ್ಕದುಂ ಪೊಂದುತಾಗ ನಲಿವುತ ಬರಲ್
ಮತ್ತೆ ಮೋಹನವಿಶಿಖಮಂ ಕಳುಹಲದು ನೋಡಿ ಪೊಡೆಮಡೆ ವಶೀಕರಣಮಂ
ಕೃತ್ತಿವಾಸನ ಮೇಲೆ ಬಿಡೆ ಬಾಹ್ಯತನು ಸೋಂಕಿ
ಮಂತ್ತೆ ಒರೆ ಸಂತಾಪಮಾರ್ಗಣವನಿಡೆ ಹೃದಯ
ದತ್ತ ತಾಗದೆ ತಾಗಿ ತಿರುಗಲವ ಚಿಂತಾಂಬುನಿಧಿಯೊಳಾಳುತ್ತೇಳುತೆ ೧೯

ಮರಳಿ ಹೃದಯಂ ಮೊಲೆಯು ನಯನ ಮಸ್ತಕ ಗುಹ್ಯ
ಮುರುಪಂಚದೇಶಂಗಳಂ ಕುರಿತುಯೆಸೆಯೆ ತಾ
ನರವಿಂದಮಸುಗೆಯುಂ ಚೂತವಿಚಿಕಿಲಕುಮುದಗಳು ಭಂಗಮಾಗೆ ಕಾಮಂ
ಗರಹೊಡೆದೊಲಾಗಲಾ ಕಲಹಾಶನಂ ಗಗನ
ದಂರುಮಾರ್ಗದೊಳಗಟ್ಟಹಾಸಮೆಸಗುತಲಧಮ
ಪರಮನಂ ಜಯಸುವಡೆ ಸಾಧ್ಯಮೇ ತೆಗೆತೆಗೆ ದುರಾತ್ಮಯೆನುತಂ ಪುರಂಡಿಸೆ ೨೦

ಆ ನುಡಿಯ ಕೇಳಧಿಕ ಸಿಗ್ಗಿನಿಂ ಕೆಲಬಲವ
ತಾನೀಕ್ಷಿಸಲ್ಕೆ ಪಿಂಭಾಗದೊಳ್ ನಿಂದಿರ್ದ
ಮೇನಕಾತ್ಮಜೆಯ ತನುಗಂಪನಲರಂಬಿನಲಗಿಗೆ ಪೂಸೆ ಮಘಮಘಿಸಲು
ಏನೆಂಬೆನೇಕವಾರಂ ತೊಟ್ಟು ಕುಬುಬಿರಿದು
ಸೂನಶರನೆಸೆಯೆ ನಾಸಾಂತರಾನಿಲನೊಡನೆ
ಮಾನಸಂಪತ್ತಿಸಂಕಲ್ಪಮಂ ಪುಟ್ಟಿಸಲ್ಕೇನಿದಂದಾರ್ರೈಯುತ ೨೧

ಸ್ಫಟಿಕಪ್ರಕಾಶನುತ್ಕಟ ಕೋಪದಿಂದ ಛಟ
ಛಟಮೆಂಬ ವಹ್ನಿನೇತ್ರವ ಬಿಡಲ್ಕೆದ್ದು ದಿ
ಕ್ತಟವ ಮುಸುಗುತ್ತ ಛಿಣಿಛಿಟಿಲ್ ಭುಗಿಭುಗಿಲೆನುತಲಾರ್ಭಡಿಸುತವನನೆಯ್ದೆ

ಪಟುವೇಗದಿಂದಲರೆಯಂಟ್ಟಿ ಸುತ್ತುತ ಬಿಡದೆ
ಕಟಕಟಯೆನುತ್ತೊರಲುತಿರೆ ಧಗಧಗನೆ ಸುಡಲ್
ತಟತಟನೆ ತುಳಿದಂಗಭಸ್ಮಮಂ ತನ್ನ ಸರ್ವಾಂಗದೊಳು ಲೇಪಿಸಿ ಹರಂ ೨೨

ಪಾರ್ವತಿಯು ದುರಳಕಾಮಂಗಾಪ್ತಳೆಂದು ಶಿವ
ನೊರ್ವನಂತರ್ಧಿಯಂ ಪೊಂದೆ ಯಮಿಗಳ್ ಕೇಳಿ
ನಿರ್ವಾಣದಿಂದೆಲ್ಲ ಜಿನವ ಮೇಲಕ್ಕಿಡುತ್ತಾಗ ಜೆಡೆಗಳ ಕೆದರುತೆ
ಸಾರ್ವಭೌಮನೆ ಸಕಲದೇವತಾವಲ್ಲಭನೆ
ಗೀರ್ವಾಣಪತಿನುತನೆಯೆಮ್ಮ ಪೊರೆದೈಯೆನುತ
ಗರ್ವದಿಂ ಗಹಗಹಿಸಿ ಕುಣಿದಾಡಿದರ್ ಕೈಗಳಂ ಪೊಯ್ವುತೇವೇಳ್ವೆನು ೨೩

ಈ ವಾರ್ತೆಯಂ ಕೇಳಿ ರತಿಮೂರ್ಛೆಯೊಳಗಾಳಿ
ಭಾವಜನ ಸುಟ್ಟೆಡೆಗೆ ಬಂದು ತೊಟ್ಟನೆ ನಿಂದು
ದೇವ ಕೆಟ್ಟೆನು ಕೆಟ್ಟೆ ಕಾವ ಬಟ್ಟೆಯು ಬಟ್ಟೆ ಬಯಲಾಯ್ತು ಮುಟ್ಟುವೆನೆನೆ
ತೀವಿ ನಿನ್ನಯ ರೂಪ ಕಾಣೆ ಮೋಹಂ ಮಾಣೆ
ನೇವೇಳ್ವೆನತಿ ಚೆಲ್ವನೇಕೆ ಮರೆಯಾದನೋ
ಸಾವಧಾನದೊಳು ಮೊಗದೊಳ್ ಮೊಗವನಿಡುವೆನೆನೆ ಮೊಗಗಾಣೆನಯ್ಯೊ ರಮಣ ೨೪

ಹರಣದೊಡೆಯನೆ ಕೆಟ್ಟೆ ಕೆಟ್ಟ ಪ್ರದ್ಯುಮ್ನಸೌಂ
ದರದ ನಿನ್ನರಮನೆಗೆ ಬೇಗೆ ಹಬ್ಬಿತೆ ಸೇರ
ದರಿಗೆ ಸಂತಸಮಾಯ್ತೆ ಮಾರಮಾರಮಣರಿನ್ನಾರ ನೋಡುವರು ನಲಿದು
ವರತಪೋಧನ ಮುನಿಗಳೆದೆವಳ್ಳಿ ಚಿಗುರ್ತುದೆ
ಹರಿ ಮೊರೆಯೊ ಕೆಟ್ಟೆನೆಂದಾ ಬೂದಿಯೊಳ್ ಪೊರಳಿ
ಮರಳಿ ಮರಳೆಳ್ದು ಬಿಳ್ದಳುವಳಂ ನೋಡುತ ಚರಾಚರಂ ಶೋಕಿಸಿದುದು ೨೫

ಇಂತು ನಾನಾವಿಧದೊಳಳುವ ರತಿ ದುಃಖಾಬ್ಧಿ
ಗಂತಾಗ ಪರಮ ಚಂದಿರನುದಿಸಿದಂತೆ ಹಿಮ
ವಂತನಂದನೆ ಬಂದು ಕೈವಿಡಿದು ತಲೆದಡವಿ ಕಂಬನಿಯ ತೊಡೆದು ದಯದಿ
ಚಿಂತೆ ಬೇಡಾ ಮಗಳೆ ನಾಂ ತಪಿಸಿ ನಿನ್ನರಸ
ನಂತಕಾಂತಕನ ಕೈಯಿಂದ ಕೊಡಿಸುವೆನು ನಿಜ
ಮಿಂತು ನಂಬುವುದೆನ್ನನೆಂದಾ ಜಗನ್ಮಾತೆ ಭಾಷೆಯಂ ಕೊಟ್ಟಳಾಗ ೨೬

ಆದಡೇನಾ ಮದನನಿಂದೆನ್ನ ಮೇಲೆ ಹರ
ಸಾಧಿಸುತೆ ತಪ್ಪ ಬಯಲಾದನೆನ್ನೆಡೆಗೆ ಮನ
ದಾದರಣೆಯಿಂ ಬರಿಪೆನೆಂದು ತಪವೊಡರ್ಚೆ ಶಂಭುವನೊಲಿಸುಂತಿಷ್ಟರಾಂತಂ
ಮಾಧವತನೂಭವಂಗಂಗಮಂ ಕೊಡಿಸಿ ರತಿ
ಗಾ ದಯಾಮೃತೆ ಮಾತೆಯರಮನೆಗೆ ಪೋಗೆ ಶಿವ
ಮೋದದಿಂದೆಯ್ತಂದು ಸರ್ವಸಂಭ್ರಮದಿಂದ ಮದುವೆಯಾದಂ ಮುನಿವರ ೨೭

ಕೇಳಿದ್ಯೆಯೇಳನೆಯ ಲೀಲೆಯಂ ಚ್ಯವನಭವ
ಪೇಳಿದೆವು ನಿನ್ನ ಮೇಲತಿಕರುಣದಿಂದಿದುಂವೆ
ಯಾಳೋಕಿಸಲ್ ಕಾಮದಹನಲೀಲಾಕಥನಕಲ್ಪಕಲ್ಪಾಂತರದೊಳು
ಫಾಲನೇತ್ರಂ ನಟಿಪನೆಂದು ಗುರುನಾಥ ಕರು
ಣಾಳು ದೇವರ ದೇವನುಸುರ್ದನಹಹಾ ಮುಂ[1]ತೆ[1]
ಕಾಲದಹನದ ಲೀಲೆಯೆಂತೆನಲ್ಕಾನಂದಮುದಿಸಂವೊಲ್ ಪೇಳ್ದನನಘಂ ೨೮

---

1 ಛೇ (ಕ)

# ಐದನೆಯ ಸಂಧಿ

ಸೂಚನೆ : *

ಕಾಲದಹನದ ಲೀಲೆಯುಸುರ್ವೆಂ ದಧೀಚಿ ಸುವಿ
ಶಾಲಮತಿ ಮೌನೀಂದ್ರ ಕೇಳೆಂದು ಭಕ್ತಜನ
ಲೋಲ ಮರುಳೇಂದ್ರ ನಿರವಿಸಿದ ಬೋಧೆಯ ನಿನಗೆ ಪೇಳ್ವೆನೆಂದಾರ್ಯವರ್ಯಂ

ಉತ್ಕಟ ಸುಕೈವಲ್ಯ ಕಾಂತಾಧಿಪತಿಮೌನಿ
ಹೃತ್ಕಟಕವಾಸರಾಜಿತ ಸಕಲಗುಣನಿಲಯ
ಸತ್ಕಟಾಕ್ಷವಿಲೋಕಮಾತ್ರನಿರ್ಮಿತ ಸಕಲ ವಿವಿಧ ಸೌಭಾಗ್ಯೋದಯ
ಪತ್ಕಟಕಭಂಜಗ ಸಂಭೂ[1][ತ][1] ನಾನಾಶಾಬ್ದಿ
ಕೋತ್ಕಂಠಪಾತ್ರ ಶಾಸ್ತ್ರೋತ್ಕರ ವಿವೇಕಯೋ
ಪಿತ್ಕಂಠಸೂತ್ರ ಗುರುಚನ್ನಮಲ್ಲೇಶ ಮುದಮಿತ್ತು ಪೊರಗೆಮ್ಮ ಸತತಂ　　೧

ಗುರುದಹನಧೂಮದಿಂದೇಳ್ನೂರು ಭೂತಂಗ
ಳಿರದೆ ಕೈವಲ್ಯಕ್ಕೆ ಪೋಗಲುಳಿದೊಂದು ಭೂ
ತರರೆ ಶೋಕಿಸೆ ವಟದೊಳದ ಕೇಳ್ದು ಸತಿಸುತಾದ್ಯಖಿಳಜನರೆದ್ದುವುಳಿದ
ಗುರುವಿನಸ್ತ್ರಿಯನೊಂದನಂರುಹೆ ಹೊಗೆಯಿಂದ ಶಿವ
ಪುರಕೈದಿ ಭೂತಾದಿ ಪರಿವಾರಸಹಿತೆ ನಿಜ
ಗುರುವಿನಂಘ್ರಿಯ ಕಂಡು ಗಣಪದದಿ ಮೆರೆವಮಳ ಭೋಜನಡಿಗಳ್ಗೆರಗುವೆಂ　　೨

ಎಲೆ ಪರ್ವತೇಶ ಕೇಳ್ಕೆ ಪಿಂದೆ ಪೇಳ್ದವೋ
ಲಲಘು ಕಡೆಯುಂ ಪೇಳ್ವೆ ಮುನ್ನಪುರ್ವೀಶನಹ
ಚಲುವರಾಯಂ ಶ್ವೇತರಾಜನತ್ಯಂತ ಧಾರ್ಮಿಕ ದಾನಗುಣಶೀಲನು
ಕಲಿರಾಜ ಶಿವಶಾಸ್ತ್ರಕೋವಿದನು ಚಿತ್ತನಿ
ರ್ಮಲನಿಪುಣ ನೀತಿ ಸನ್ಮಾರ್ಗಿ ಸತ್ಕೀರ್ತಿಯುಂ
ಜ್ವಲಪರಾಕ್ರಮಿ ಮಹದ್ಭಾಗ್ಯಸಂಪನ್ನ ಶಿವಲಿಂಗನಿಷ್ಠಾಗರಿಷ್ಠಂ　　೩

---

1 ತಶಾಬ್ಧಿ (ಕಗ)　* ಜಲಂಧರ ಶಿರಚ್ಛೇದನ (ಗ)

ವೀರನಿರಹಂಕಾರಿ ನಿರ್ವೈರಿ ಶಾಂತಜನ
ತಾರತಮ್ಯವ ಬಲ್ಲವನು ಜಿತಾಕ್ಷನು ವಿಪುಲ
ಸಾರಶಕ್ತಿತ್ರಯಗಳುಳ್ಳ ರಾಯನಂ ಕವಿ ಗಮಕಿ ವಾದಿ ಘನವಾಗ್ಮಿಯು
ಚಾರಗಂಭೀರನೌಚಿತ್ಯಜ್ಞನೊಂದುದಿನ
ಮಾರಹರನರ್ಚನೆ ರಹಸ್ಯದೊಳಗೆಸಗುತಿರ
ಲಾ ರಥದ ದಾಯ ತಾ ಮುಕ್ತವಾಯ್ತೆಂದಿವಂಗಂಬರದಿ ನಡೆತರುತ್ತೆ ೪

ಅತಿಭಯಂಕರ ರೂಪನಾಂತುಲುಂಬಲೆ ಮುಖ್ಯ
ವಿಂತಮಿಲ್ಲದಿರ್ಪ ಬಲಗೂಡಿ ಯಮ ಮದದೆಯು
ನ್ನತಪಾಶಮಂ ಕಂಠದೊಳ್ ಪಾಯಿಸಲೆಯೆ ಶಿವನಿಷ್ಠನೆಂದಂ ಯಮನೊಳು
ಶ್ರುತಿಶಾಸ್ತ್ರನೀತಿಯಂ ಮರೆದು ನೀ[1][ನೆ][1]ಳೆಯಬೇ
ಡತಿಶಯ ಶಿವಾರ್ಚನಾಸಮಯವಿಂದು ಕಾಲ ಕೇಳ್
ಶತಕ್ರತುಫಲಕ್ಕಧಿಕಮಿಾ ಕಾಲ ನಾಂ ಶಂಕರಾರ್ಚನೆಯ ಬಿಡುವನಲ್ಲೈ ೫

ವರಜೀವಚ್ಯುತಮಾದೊಡಂ ಶಿರಶ್ಛೇದನವು
ನಿರದೆ ಮಾಡುತ್ತಿರಲ್ ಶಿವಪೂಜೆಯುಳಿದು ನಾಂ
ಪೊರೆಯೆನೀ ಘಟವನ್ನಪಾನಗಳ ಕೊಂಡು ಜೀವಿಸೆ ಸಕಲಭೋಗಂಗಳಂ
ಹರಗೀಯದಂಗರಚನೆಯ ಮಾಡೆ ಶಿವ ಬಲ್ಲ
ಮರೆತರಿವುಬಳೆ ಕೇಡಿಗೊಡೆಯ ಶಿವನದರಿಂದೆ
ಪರಮನರ್ಚನೆಯ ಮಾಡುವೆ ಬಿಡಲ್ಲದೊಡೆ ಹರ ಹರಿಸುಮಂ ನಿನ್ನುಮಂದಮಂ ೬

ಎನಲದಂ ಕೇಳಿ ಯಮರಾಟ್ ಕನಲಿ ಗಹಗಹಿಸಿ
ಘನಗರ್ವದಿಂ ನುಡಿದನಧಮ ನೀಂ ಯೌವನದಿ
ಮನಬಂದ ಮಾಳ್ಕೆಯಿಂ ಗಮಿಪಾಗ ಶಿವಪೂಜೆಯೆಸಗದತಿ ವೃದ್ಧನಾಗಿ
ವಿನಯದಿಂ ಶಿವಲಿಂಗಭಜನೆಯಿಂದುಳಿವೆನೆನೆ
ಸನಯದಿಂ ಬಿಡುವನಲ್ಲೆಲೆ ಭೂಪ ಪಿಂದೆ ನೀಂ
ವಿನುತ ರಾಜ್ಯೈಶ್ವರ್ಯದಿಂದ ಸಪ್ತವ್ಯಸನಿಯಾಗಿ ಶಿವನರ್ಚಿಸಿದೆಯ ೭

ಮರೆದೆ ನಿನಗೆಲ್ಲಿಯದು ಶಿವಪೂಜೆ ವಾರ್ಧಿಕ್ಯ
ದಿರವಮಂಗಲಮಯಂ ನಾರ್ವಾಯಿ ಸೋರ್ವ ಜ
ಲ್ಲರಿವು ಮರೆತಾಕಳಿಕೆ ತೂಕಡಿಕೆ ಕಣ್ಣಾಣದೆಲೆ ಕಿವುಡು ಸ್ತುತಿಮಂತ್ರಮಂ

1 ನೆಯಿ (ಕಗ)

ಅರಿದು ವಚಿಸಲ್ಬಾರದಾ ರಸನೆ ಕಂಪನದೆ
ತರತರಿಪ ಕೈಕಾಲ್ಪೊದಳ್ವುಗಳು ಶ್ಲೇಷ್ಮದಾ
ತೊರಟೆ ಸಿಂಬುಳ್ಳುಮೊಸರ್ವ ಮೂತ್ರ ದ್ವಾದಶಮಲದ ಮುಪ್ಪಿನೊಳ್ ಶಿವಪೂಜೆಯೆ ೮

ಎಂಬ ಮಾತಂ ಕೇಳಿ ಕುಂಭಿನೀಶಂ ನುಡಿದ
ಡಂಬಕದೆ ದೇಹಷಡ್ಭಾವ ವೈಕಾರಿಕದ
ಬೆಂಬಳಿಯೊಳಿಹ ತನುವದೆಂತಾದೊಡೇನು ಮಾನಸಚಲನಮನ್ನುಳಿವ್ರತೆ
ತ್ರ್ಯಂಬಕನ ಪಾದಾರವಿಂದದೊಳ್ ಚಿತ್ತಲೋ
ಲಂಬಂಬಿಡದೆ ನೆಲೆಗೊಳಲ್ಕದುವೆ ಮೋಕ್ಷ ಕೇ
ಳಂಬುಜಾಸನ ಮುಖ್ಯರಾ ಮನದ ದೆಶೆಯಿಂದ ಭಂಗಕೊಳಗಹರು ಕಾಲ ೯

ಏ ಕಾಲ ಕೇಳ್ ಹರಂ ಮುಳಿಯೆ ಗುರುರಕ್ಷಿಪಂ
ಸಲೆ ಗುರುವೆ ಕೋಪಿಸಲ್ ಹರ ಸಲಹಲಾರ ಕೇಳ್
ಮಲಹರನ ಭಕ್ತರಂ ಕೊಲಲು ಕಾಯಲ್ಕೆಯಾಚಾರ್ಯನೇ ಕರ್ತನಲ್ತೆ
ನೆಲದಾಣ್ಮನಣುಗನಂ ನೀ ರಕ್ಷಿಸಲ್ಕಳವೆ
ಯಳಿಕಾಕ್ಷಭಕ್ತರಂ ಮುಟ್ಟಲಾರಳವಲ್ಲ
ನೆಲೆಯಿದಂ ಮರೆದುಂ ಕೊಲಲೆಣಿಸಿದಡೆ ನಿನಗೆ ಕೊಲೆ ತಪ್ಪದೀ ವಚನ ಸತ್ಯಂ ೧೦

ಎಂದ ಮಾತಂ ಕೇಳುತಾಗ ಪಿತೃಪತಿ ನುಡಿದ
ನಂದದಿಂ[ದಾ]ಸುರ ದನುಜರಾಜ ಕೋಟಿ ಮರ
ಣಂ ದಾಟಲಾರರೆನ್ನಿಂದಸುವನುಳಿದು ತನುವಂ ಬಿಸುಟು ಪೋಗುತಿಹರು
ಮಂದಬುದ್ಧಿಯೆ ಕೇಳು ನಾನೆ ಸ್ವತಂತ್ರನೈ
ಸಂದೇಹಮಿಲ್ಲ ನಿನ್ನಂ ಕೊಲಲು ಕಾಯಲೆ
ನ್ನಿಂದಹುದು ನಿನಗೊರ್ವರುಂಟೆ ನಾನೇ ಕರ್ತನೆಂದು ಘರ್ಜಿಸುತೆ ಕಾಲಂ ೧೧

ಧ್ಯಾನದಿಂದಿಹ ಮಹೀಶನ ಕೊರಲ್ಗೆ ಪಾಶಮಂ
ತಾನಮರ್ಚಿಸೆ ಎಳೆವುತೆಲೆಲೆ ಬಾರೈಯೆನುತ
ಹೀನನೆಂತಾಗ ಘುಡಿಘುಡಿಸೆಳೆಯೆ ಮತ್ತೆ ಶಿವಲಿಂಗಮಧ್ಯದಿ ಮಹೇಶಂ
ತಾನುದಿಸಿದಂ ವಿಧಿ ಕಪಾಲತ್ರಿಶೂಲ ಕ
ಲ್ಪಾನಲ ಮಹೋರಗಾಂಕಿತ ಕರಚತುಷ್ಟಯದಿ
ಭಾನುಶತಕೋಟಿಪ್ರಕಾಶದಿಂ ಬೊಬ್ಬಿಡುವ ಪಂದಲೆಯ ಮಾಲೆಯಿಂದ ೧೨

ಉದಿಸಿದಾಕ್ಷಣವೆ ನಸುದೆರೆದ ನಡುಗಣ್ಣಿವೆಯಂ
ಕದಗಳಂ ನೂಕಿ ಮುಂಬರಿವ ಮುಂಗಿಡಿಯ ಬಿಸಿ
ಯದರಿನಿಂ ಸುಟ್ಟುಪೋದುದಂ ಕಾಲದೇಹ ಶುಷ್ಕಾಕಾರ್ಜನಂ ಭುವನದೊಳಗೆ
ಉದಿಸಿರ್ದನೋ ಇಲ್ಲವೋ ಯಮನೆನುತ ಲೋ
ಕದ ಜನ[ಂ] ಸಂದೆಗಂಗೊಳುತಿರಲ್ಕೈಲಾಸ
ಪದಕೆ ಬಳಿಕಾ ಶ್ವೇತರಾಜನಂ ಕರೆದೊಯ್ದನಿಂದುರೇಖಾವತಂಸಂ ೧೩

ಎಲೆ ಶಿಷ್ಯ ಕೇಳಿಂತು ಪದ್ಮಕಲ್ಪದಲಿ ಶಿವ
ನೊಲಿದು ಮಾರ್ಕಂಡೇಯನಂ ಸಲಹಿದುದು ವಿಪ್ರ
ಕುಲಶಿರೋಮಣಿ ಮೃಕಂಡುಮುನೀಶ್ವರಂ ಬಹಳಕಾಲತಪಮಾಚರಿಸುತ
ನಲವಿನಿಂ ಕನ್ನಡಿಯ ನೋಡಲಾನನದೊಳಗೆ
ಫಲಿತರೋಮಾಂಕುರವ ಕಂಡು ಚಿಂತೆಯ ಚಿತ್ತ
ದಲಿ ತಾಳಿ ತನ್ನ ಸತಿಯಾದ ಗುಣವತಿಯೊಡನೆ ಪೇಳ್ದನಿಂತೆಂದು ಮುನಿಪಂ ೧೪

ಶಶಿವದನೆ ಕೇಳಪುತ್ರರ್ಗೆ ಗತಿಯಿಲ್ಲವೆಂ
ದುಸುರುತಿರೆ ಸಕಲಶಾಸ್ತ್ರಂಗಳದ ಕೇಳಿಯುಂ
ಹಸನಾದ ಪುತ್ರನಂ ಪಡೆಯಲಿಲ್ಲಿರ್ವರುಂ ಶ್ವೇತನಂ ಮುನ್ನ ಪೊರೆದು
ಪೆಸರಾಂತನೀಶ್ವರಂ ಶ್ವೇತಾಟವೀಶನೆಂ
ದೊಸೆದು ಕಾವೇರಿಯಂಬುಧಿಸಂಗಮಸ್ಥಲದೊ
ಳೆಸಗಿ ನಾವಲ್ಲಿ ತಪಮಂ ಪುತ್ರನಂ ಪಡೆಯಬೇಹುದೆಂದಲ್ಲಿಗೈದಿ ೧೫

ಮುದದಿ ಶ್ವೇತಾರಣ್ಯಭಾಗಕ್ಕೆ ದಕ್ಷಿಣದೊ
ಳುದಿತ ಯೋಜನದಳತೆಯೊಳ್ ಬಿಲ್ವವನಮಿರ್ಪು
ದದರ ಕಡೆ ಕನಕಕಾವೇರಿಯಿಂಹುದಾ ನದೀಜಲದೊಳಗೆ ಸ್ನಾನಮೆಸಗೆ
ವಿದಿತ ಮೋಕ್ಷಂ ಏಕವಾರ ಸ್ನಾನಂಗೆಯ್ಯ
ಲದರಿನಿಂ ಲಕ್ಷಗೋದಾನ ಫಲ ತಪ್ಪದೆಂ
ದೊದವಿ ದಂಪತಿಗಳೈತಂದಜಸ್ರಂ ಮಿಂದಂ ಶಿವಮಂತ್ರಮಂ ಸ್ಮರಿಸುತೆ ೧೬

ನಡೆತಂದು ಶಿವಲಿಂಗಪೂಜೆಯಂ ದೃಢದಿಂದ
ಲೆಡೆವಿಡದೆ ಮಾಡುತಿರೆ ಮೃಡನೈದಿ ಮೆಚ್ಚಿದೆಂ
ತಡೆಯುದಿತ್ತಪೆ ವರವ ಕೇಳ್ವುದೆನಲವರು ಸೈಗೆಡದಂ ಸತ್ಪುತ್ರಫಲಮಂ

ಒಡೆಯನೇ ಪಾಲಿಸುತ್ತೆಮ್ಮ ಭವತೃಷ್ಣೆಯಂ
ಕೆಡಿಸವೇಳ್ಕೆನೆ ಶಿವಂ ಶಿವೆಯು ನೋಡುತ ಮಂನಿಪ
ಕಡುಪಾಪದೀರ್ಘಾಯುವಾಂತ ಸಾಸಿರಮಂಕ್ಕಳಿಚ್ಛೆಯೋ ಮತ್ತಲ್ಲದೆ ೧೭

ಸುಗುಣೆ ಪೂತಾತ್ಮ ಸುಜ್ಞಾನಿಯಲ್ಪಾಯುವು
ಳ್ಳ ಗುಣಿತಮಪುತ್ರಕಾಂಕ್ಷೆಯೊ ಪೇಳಿ ನೀವೆನ
ಲ್ಕಗಲದಿರ್ವರು ನಮಿಸಿ ಸತ್ಪುತ್ರನೊರ್ವನೇ ಬೇಹುದೆನೆ ಪರಮನೊಲಿದಂ
ಆಗಲದೆಂಟೆರಡುವರ್ಷದ ಮ[1]ಗನ[1]ನಿತ್ತೆವೆಂ
ದಗಜಾತೆಪತಿ ಲಿಂಗದೊಳ್ ಪೊಕ್ಕು ಬಯಲಾಗೆ
ನಗುತವರ್ ತಿರುಗಿ ತವಮ್ಮಾಶ್ರಮಕೆ ಬಂದು ಪುತ್ರನ ಪಡೆದು ಸುಖಮಿರುತ್ತೆ ೧೮

ಬಾಲಲೀಲೆಯ ಕಳಿವುತಖಿಳಶಾಸ್ತ್ರವ ಕಲಿತು
ಮೇಲಾದ ಕುಶಲಮಂತಿಯಿಂ ನೀತಿನಯವಿನಯ
ಲೋಲಸಜ್ಜನನು ಸದ್ಭಾವ ಶಿವಭಕ್ತಿನಿಷ್ಠನಂಮೆನಿಸಿ ರಾಜಿಸುತಿರೆ
ಆಲೋಕಿಸುತ್ತವನ ಸೌಕಂಮಾರ್ಯಪ್ರಮುಖ
ಲೀಲೆಯಿಂ ನೆನೆದೈದುಮೂರುವರ್ಷಾಯ್ತಿನ್ನು
ಕಾಲತುಂಬುವದೊಂದುವರುಷಕೆಂದಾ ಮೃಕಂಡುಮುನೀಶ ಸುಗುಣವತಿಯುಂ ೧೯

ಹರಹರ ಮಂಹಾದೇವ ಕೆಟ್ಟೆನೆಂದತಿನೊಂದು
ಮರುಗುತಿರೆ ಮಂಗ ಕಂಡಿದೇನೆನ್ನ ನೋಡಿ ನೀ
ವರರೆ ದುಃಖಿಂಗೊಳ್ವ ಕಜ್ಜವೇನೆನ್ನಾಣೆ ಪೇಳ್ವುದೆನೆ ನಡುನಡುಗುತ
ವರಕುವರ ಪದಿನೈದುವರುಷವಾದುದು ನಿನಗೆ
ಸರಿಯೊಂದುವರಂಷ ನಿನಗೆಂದು ದುಂಖಿಪೆವಣುಗ
ನಿರತವೆನೆ ನಗುತ ನೀ ವಾಗೀಶನೇಕಾಬ್ದಮಿರೆ ಶೋಕ ಸಲ್ಲದೆನುತೆ ೨೦

ನಿಚ್ಚ ಶಿವಪೂಜೆ ಶಿವಗಾನ ಶಿವಗೋಷ್ಠಿಯೊಳ್
ಮಚ್ಚಿಯಾನಂದಲೀಲೆಯೊಳಿರಲ್ ದಂಪತಿಗ
ಳಚ್ಚಮಗಗಾರುತಿಂಗಳು ಮೂರಂತಿಂಗಳಿನ್ನೊಂದು ತಿಂಗಳು ಪಕ್ಷವು
ಆಚ್ಚರಿಯಯೇಳುಮಂಊರೆರಡು ದಿವಸಂ ಪೇಳೆ
ಮಂಚ್ಚದಾ ಮಾತಿಗಂತೊಂದುದಿನವೆನಲಿರುಳು
ಸಚ್ಚಿನ್ಮಯಾಕಾರನರ್ಚನೆಯ ಮಾಡುತ್ತ ಪಾಡತೊಡಗಿದನಲ್ಲಿಯಿಂ ೨೧

---

1 ಗುವ (ಕ)

ಗರಳಕಂಧರನ ಗಾನಾನಂದನನಮಲನಂ
ಗಿರಿಶನಂ ವಿಧಿಶಿರೋಹನನ ಗುಣವೀರನಂ
ವರಗೂಢನಂ ಸುರಾಜಿತ ಶೈಲಗೇಹನಂ ಪತ್ರಭೂತವೃಷೇಶನಂ
ಪರಮಗೌರೀವದನಕೈರವಕಳಾಧರನ
ಸರಸಿಜಪ್ರಸವ ಶರಮದನಮದಘಸ್ಮರನ
ಹರನನಂತೈದೆ ಶರಣಂಬೊಕ್ಕೊಡಾ ಮೃತ್ಯುಯೇಗೈವುದೆನುತಲಾಗ ೨೨

ಇರಲಂ ನಾನಾವಿಧಾನದ ಸ್ತುತಿಯ ಶಿವ ತನ್ನ
ವರ ಕರ್ಣದಿಂ ಕೇಳುತಿರಲನಿತರೊಳ್ ಕಾಲ
ನಿರದೆ ಕಾಲಂ ತಿರ್ದುದದನರಿಯದಾ ದುರಾತ್ಮಂ ಪಾಶಮಂ ಬಿಗಿಯಲು
ಹರಹರ ಮಹಾದೇವ ಪೊರೆಯೆನಲ್ ಶಿವನೊಲ್ದು
ಭರದಿಂದಲೊದೆಯೆ ಬಿಳ್ದತಿದೂರದೊಳಗಳಿಯೆ
ಸುರರು ಜಯಜಯ ಯೆಂದರಲ್ಮಳೆಯ ಸುರಿಯೆ ದುಂದುಂಭಿರವಂ ಘುಮ್ಮಿಡುತಿರೆ ೨೩

ಅಜಹರಿಸುರೇಶರಭವನ ಮೃತ್ಯು ಮೃತ್ಯುವಾ
ದ ಜರಾಮೃತಿ ಪ್ರಕೃತಿಯಂ ಚಾರುಭಕ್ತಿಯಿಂ
ಭಜಿಸೆ ಸ್ತೋತ್ರಂಗಳಂ ಮಾಡೆ ತಾಂ ಕೋಪಮಂ ಕ್ಷಮಿಸಿ ಶಿವನೊಲ್ದು ಪೇಳ್ದಂ
ನಿಜಭಕ್ತಿಹರಿಮುಖಾದ್ಯರು ಕೇಳಿಯೆನ್ನನೇ
ಯಜಿಪ ಭಕ್ತರಿಗೆಯಪಕಾರವೆಳ್ಳನಿತೆಸಗೆ
ರುಜುವಾಗಿ ನಿಮ್ಮನಾದೊಡೆ ಬಿಡದೆ ಕೊಲ್ವೆನೆಂದೀಶನುಸುರುತ್ತಿರ್ದನು ೨೪

ತಡೆಯದೆನಗಪರಾಧಕೋಟಿಯೆಸಗಲ್ಬಿಡುವೆ
ಜಡಜಲೋಚನ ಎನ್ನಭಕ್ತರ್ಗೆ ದ್ರೋಹಿಯಂ
ಮಡುಪಿದಲ್ಲದೆ ಮಾಣೆ ಸತ್ಯವೆನ್ನಯ ಭಕ್ತನೆನ್ನಿಂದ ಕೋಟಿಮಿಗಿಲು
ಸಡಗರದಿ ಕೇಳಿ ನೀವೆನಲು ಕಂಪಿಸುತೆ ನಿ
ಮ್ಮಡಿವಿಡದೆ ಶಿವಭಕ್ತಮಹಿಮೆಯಂ ತಿಳಿದೆವಿ
ನ್ನಡಿಗಡಿಗೆ ಶರಣರಡಿಗೆರಗಿ ನುತಿಸುವೆವೆಂದು ಬಿನ್ನೈಸುತಿರ್ದರಾಗ ೨೫

ಮತ್ತೆ ಸುರರೀ ಯಮನಸುವ ಪಾಲಿಸುವುದೆನ
ಲ್ಕಿತ್ತವನ ಕಳುಹಿ ಮುನಿತಿಲಕ ಮಾರ್ಕಂಡೇಯ
ನತ್ಯಧಿಕಪ್ರೀತಿಯಿಂ ಮುಂಡಾಡಿ ನಿತ್ಯತ್ವಮಂ ಘನಮಹಲ್ರೋಕವಂ

ಇತ್ತು ಬಳಿಕವನ ಮಾತಾಪಿತರ ಕೈಲಾಸ
ದತ್ತ ಕಳುಪುತ್ತಲಂತರ್ಧಿಯಂ ಪೊರ್ದಿ ದೇ
ವೋತ್ತಮಂ ರಾಜಿಸಿದನೀ ಪರಿಯ ಲೀಲೆಯಿದು ಕಲ್ಪಕಲ್ಪದೊಳುಂಟಲೈ ೨೬

ಮುಂದೆ ಕೇಳೈ ವಿಟ ಶ್ವೇತನಂ ಸ್ವರ್ಗದೊಳು
ನಿಂದಿರುವ ವಾರನಾರಿಯರ ಮಧ್ಯದೊಳಗತಿ
ಸುಂದರಿಯೆನಿಪ್ಪ ರಂಭೆಯ ರತಿಗೆ ಕಳುಹಲಾ ಕಾಮಾಂಧನಂ ನೋಡುತಾ
ನಂದದಿಂ ಗಹಗಹಿಸಿ ವಿಸ್ಮಯಂಗೊಂಡು ವಿಟ
ಗೆಂದಳೇ ನಕ್ಕ ಪರಿಯಂ ಪೇಳಬಲೆಯೆನ
ಲ್ಕಂದು ಬೋಧಿಸಿದಳೆಲೆಯವಿವೇಕಿಯಜ್ಞಾನಿ ದುರ್ಮಾರ್ಗಿ ದುಶ್ಚೇಷ್ಟನೆ ೨೭

ದುರಿತಾತ್ಮ ದುಶ್ಶೀಲ ದುರ್ಗುಣಿ ದುರಾಲಾಪಿ
ಪರಿಪರಿಯ ಪಾಪಗಳ ಗೂಡು ನೀ ಗುರುಲಿಂಗ
ಚರತೀರ್ಥಶೇಷಚಿದ್ಭಸಿತರುದ್ರಾಕ್ಷಿಗಳ ಕಂಡರಿಯೆ ಕನಸಿನಲ್ಲಿ
ಹರಜಪಾರ್ಚನೆ ಸುಗುಣಸಂಗಮರಿಯಂದಲೆ ನೀ
ನಿರುಳೊಂದು ಪೂದೋಟಕೈದರಲ್ಗಳ ಕೊಯ್ದು
ಭರದಿಂದ ನಿನ್ನ ಸೂಳೆಯ ಮುಡಿಗೆ ತರುತಿರಲ್ಕಪವಿತ್ರಭೂಮಿಯಲ್ಲಿ ೨೮

ಆರಲು ಸೂಸಲ್ಕದನು ವಾರವಧುವಿನ ಕುರುಳ್ಗೆ
ತರವಲ್ಲವೆಂದು ಚಿಂತಿಸಿಯದಂ ಶಿವಗೆಂದ
ಪರಿಯಿಂದ ಮರ್ತ್ಯದೊಳಗಿರಂತ ನೀನಳಿಯಲ್ಕೆ ಯಮಂ ನಿನ್ನ ಕರ್ಮಂಗಳಂ
ಒರೆದೊರೆದು ಚಿತ್ರಗುಪ್ತರ ಕೇಳಲೊಂದರಳ
ಹರಗಿತ್ತ ಪುಣ್ಯದಿಂದಿಂದ್ರಪದವಪ್ಪುದೆಂ
ದಿರುಳೆಂದರಿದ ಕಳೆಯೆ ನಿನ್ನಂ ಭಯಂಕರ ನರಕದೊಳಗೆ ಪಾಯ್ಕುವರಲೈ ೨೯

ಎಲೆ ಪಾಪಿಯಿಂದಿನಿರುಳಂಳಿದೆನ್ನ ಸಂಗಮಂ
ಮಲಹರನ ಪೂಜಿಸೆನಲವನೆಂದೆನೆಲೆ ರಂಭೆ
ಯೊಲವಿನಿಂ ನಿನ್ನ ತಳ್ಕೆಯು ನಿಮಿಷನಿಮಿಷಾರ್ಧ ಸಾಲದೇ ಕಲ್ಪಗಳಿಗೆ
ಸಲೆ ನರಕಬಾಧೆಯೇನಳ್ತೆನಾ ನಿನ್ನಧರ
ಲಲಿತಚುಂಬನವ ಬಯಸಿಹುದೆನ್ನ ಮನವೆನ
ಲ್ಕಳುಕಿಯವಳಿವನಧಮನೆಂದರಿದು ವಿಧಿಯ ಬಾಧೆಯನಬಲೆಯರುಹಲ್ ಯಮಂ ೩೦

ವಿವರಿಸಂತಲಜ್ಞಾನಿಗಹುದೆಂಬ ವಠಾಳ್ಕೆಯಿಂ
ದವಳೆಂದಳೆನ್ನ ಸುಖವೊಂದುಘಳಿಗೆಯು ನಿನಗೆ
ತ್ರವೆಯದೊಂದೇ ನಿಮಿಷಪೂಜಿಸೈ ನೀನುಮಾಧವನ ಕಡೆಯುಳಿದಸುಖದಿಂ
ದಿವಿಯೊಳಗೆ ಬಾಳುವೈ ಎನ್ನ ಶೃಂಗಾರದಿಂ
ಸವಿಶೇಷಕೋಟಿಮಡಿ ಸಿಂಗರದ ಸೊಬಗಿಯರ್
ಕವಿದು ನಿನ್ನಂ ಬಿಡದೆ ವೋಲೈಸಿ ರಮಿಪಂದಮಂ ಮಾಡಿಕೊಡುವೆ ಸತ್ಯಂ ೩೧

ಇಂತು ನಾನಾವಿಧದಿ ತಿಳುಹಿ ಹರನಾಲಯಂ
ಕ್ಕಂತೆಯ್ದು ಶಿವನ ಮಂದಿರದ ರಜವಂ ಗುಡಿಸು
ತಿಂತಿದಕೆ ಸರಿಯಾದ ಸುಕೃತವಿಲ್ಲೈ ಶ್ವೇತ ಕಥೆಯಿದಕ್ಕೊಂದುಂಟೆನೆ
ಕಾಂತೆ ಪೇಳೆನೆ ಸ್ವಯಂಭುವಿನ ಮನ್ವಂತರದೊ
ಳಂತಧಿಕ ನರಪ ನರವರ್ಮರಾಜಂ ಬಹಳ
ಸಂತಸದೊಳಿರಲವನ ಪನ್ನೆರಳ್ಸಾಸಿರಂಗನೆಯರ್ಗೆ ವಿಂಗಿಲೆನಿಸುವ ೩೨

ವಸುದೇವಿಯಖಿಳ ಪರಿಚರಿಯರಂ ಕರಸಿ ಕೇ
ಳಸಮನೇತ್ರಾಲಯಂಗಳೊಳಾರ ಮಂದಿರದೆ
ಪಸರಿಸಿದ ರಜವಿರ್ಪುದಂತದಾರರಿಯದೊಲ್ ನೋಡಿ ನಡೆತಪ್ಪುದೆನಲು
ವಸುಧೇಶನಖಿಳಶಿವಸ್ಥಾನಂಗಳಂ ಮಹಾ
ಕುಶಲವಂ ಮಾಡಿಸಿರೆ ನೋಡೆರಡುಗಾನ್ರುದದ
ರಸೆಯೊಳಿಹುದೆನಲದಂ ಪೇಳದಾ ಶಿವಭಜನೆಗೆಂದು ಗಂಡಂಗುಸುರಂತೆ ೩೩

ಪನ್ನೆರಳ್ಸಾಸಿರದ ಸತಿಯರೋಲೈಸೆ ಬಹು
ಮನ್ನೆಯರ ಮಡದಿಯರ ಪೊನ್ನಂದಣಂ ಮೆರೆಯೆ
ತನ್ನ ಪಲ್ಲಕ್ಕಿಯೊಳ್ ಕೆಸಕಿಲಂ ಬೈಚಿಟ್ಟು ಬರುತಖಿಳಸಂಭ್ರಮದೊಳು
ಪನ್ನಗಾಭರಣನಾಲಯದಿ ಮುಸುಕಿರ್ದ ಕಸ
ಮುನ್ನತೋನ್ನತಭಕ್ತಿಯಿಂ ಗುಡಿಸಲವರ್ ನಡುಗಿ
ಬಿನ್ನವಿಸಿದರು ತಾಯೆ ತೊಳ್ತಿರಾವಿರ್ದಂತೆ ನೀವು ರಜವಂ ಗುಡಿಪರೆ ೩೪

ಎನಲರಸಿ ನುಡಿದಳೆಲ್ಲರು ಕೇಳಿಯೆನ್ನ ಮೊದ
ಲನುಪಮದ ಪುಣ್ಯಫಲವಂ ಬಯಸಿ ಬೇಡೆ ನಿಮ
ಗೆನಿತಾದೊಡಂ ಕೊಡೆಂ ಸುಮ್ಮನಿರಿ [ಯೆ]ನುತ ರಜವುಡುಗಿದಾ ಕರವ ತನ್ನ

ವಿನಯದಿಂ ಮಂಡೆಯೊಳ್ ಪೂಸುತ್ತ ವಸುದೇವಿ
ಘನಭಕ್ತಿಯಿಂದೆ ಪೂಜಿಸಿಬರಲು ನೃಪಗೆ ಪೆ
ಣ್ಣಿನರುಸುರ್ದರೆಮ್ಮೊಡತಿ ಶಿವಸದನರಜಮನುಡುಗಿದಳು ನಿಜಕರದೊಳಿನಲು ೩೩

ಕೋಪಿಸುತ್ತೆಲೆ ಪಟ್ಟದರಸಿಯಾಗಿರ್ದು ನೀ
ನೀ ಪರಿಯೊಳಧಮಸೇವೆಯ ಮಾಳ್ಪರೇ ಎನಲ್
ಭೂಪ ಕೇಳ್ಳೈ ನಿನಗೆ ಜಾತಿಸ್ಮರತ್ವವಿಲ್ಲಾ ಪೂರ್ವಕಥೆಯು ಕೇಳು
ದೀಪಿಪ ಶಿವಾಲಯದ ಪುಲ್ಲ ಪೊಲವೊಂದು ಮೇಲು
ತಾ ಪರಿಯೊಳಿರೆ ಮೇಘಚಾರಣವೆನಿಪ ಖಗಂ
ತಾ ಪರಮಬಲಿಪೀಠದನ್ನಕಿರಗುತ ರೆಕ್ಕೆಗಳ ಕೊಡಹೆ ರಜ ಪೋದುದು ೩೬

ಇಂತು ಕತಿಪಯಕಾಲ ಶಿವನಿಳಯದಗ್ರದೊಳ
ಗಂತು ಶುಚಿಯಾಗಿರಲ್ಕಾ ಪಕ್ಕಿ ಪೊಲಮಳಿಯ
ಲಂತಕನ ಮುಂದಿವರ ಪುಣ್ಯಪಾಪಂ ಕೇಳಿ ಶಂಕರಾಲಯದ ಕಸಮಂ
ತಿಂತಿನಿಸಿ ತೆಗೆದೆವಾ ಫಲದಿ ಚಕ್ರೇಶನಾ
ಗಂತಖಿಳ ಸುಖದಿಂದ ರಾಜ್ಯಮಾಳಲಿಯೆನು
ತ್ತಿಂತು ಕಳಂಪಿದ ಶಶಕ ನೀಂ ಪಕ್ಷಿ[1]ಯಾಂ[1] ನರೇಂದ್ರನೆ ನೋಡು ಚಿದೃಕ್ಕಿನಿಂ ೩೭

ಎಂದು ಪೇಳಲ್ಕವಗೆ ಜಾತಿಸ್ಮರಣಮುದಿಸ
ಲಂದದಿಂದವರಾಗ ಶಿವನ ಭವನಕ್ಕೆ ನಡೆ
ತಂದು ಕಸಗಳನುಡುಗಿ ಕೈವಲ್ಯಪದವಾಂತರೆಲೆ ಶ್ವೇತ ನೀಂ ರಜಗಳಂ
ಛಂದದಿಂದಪಹರಿಸು ಭಸಿತರುದ್ರಾಕ್ಷಿಗಳ
ನಂದದಿಂ ಧರಿಸು ತಸ್ಕರ ಶುನಕ ಕಿಟಿ ವ್ಯಾಧ
ರಂದಂ ಪಡೆದರ್ ಗತಿಯ ಭಸ್ಮರುದ್ರಾಕ್ಷಿಯಿಂ ಮಂತ್ರಮಂ ಸ್ಮರಿಸೆಂದಳು ೩೮

ಎನಲವಳ ಬೋಧೆಯಂ ಕೇಳ್ದಖಿಳವಿಧಿಯ ತಾ
ನನುಗೊಳಿಸಿಯರ್ಚನೆಯ ಮಾಡುತ್ತಲಿರುತಿರಲ್
ಮನದಂದುಗಂ ಪೋಗೆ ಬೆಳಗಾಗೆಯಾ ದೂತರವನೆಯ್ದಿಬಂದಂ ಕರೆಯೆ
ಮನೆಯೊಳಿಲ್ಲದೆ ಶಿವಾಲಯದೊಳಿಹನೆನೆ ರಂಭೆ
ಕನಲುತ್ತೈತಂದು ನೋಡಲ್ ಶಿವನ ಚಿಹ್ನಂಗ
ಳನುವಿನಿಂದಿರೆ ಕಂಡು ಭೀಕರಂಗೊಂಡು ನಡನಡುಗಿ ಪಿತೃಪತಿಗುಸುರ್ದರು ೩೯

---

1 ಯಾ (ಗ)

ಕೆರಳಿ ಘುಡುಘುಡಿಸಿ ಘೂರ್ಮಿಸುತ ವಿಾಸೆಯ ತಿರಂಪು
ತುರಿದೆಳ್ದು ಬಂದವನ ಕೊರಲ್ಗೆ ಪಾಶವ ಬೀರು
ತುರುಬಿ ಸೆಳೆಯಲ್ ಶ್ವೇತ ಶಿವಮಂತ್ರಮಂ ನೆನೆಯಲಾಕ್ಷಣಂ ಭುಗಿಲೆನುತ್ತೆ
ಹರಮೂರ್ತಿ ಶೂಲವಾಂತಿಡೆ ಯಮನಯೆದೆ ಡೋರು
ಗೊರೆಯೆ ಕಾಲಂ ಬಿಳ್ದನಾ ಶ್ವೇತನಂ ಶಿವಂ
ಯಿರದೆ ಗಣಪದವಿತ್ತು ಕಾಲಂಗೆ ಬುದ್ಧಿಯಂ ಪೇಳಿ ಕಳುಹಿವ ಮೌನಿಪ ೪೦

ಮತ್ತೆ ಚ್ಯವನಾತ್ಮಜನೆ ಕೇಳೆಂದು ಮರುಳೇಂದ್ರ
ಬಿತ್ತರಿಸಿದಂ ವಿದಳನೆಂಬವಂ ತ್ರೇತೆಯೊಳ
ಗತ್ಯಧಿಕನಹ ಪಿತಂ ಮೃತವಾಗೆ ವಿದಳಂಗೆ ಪಟ್ಟಮಂ ಕಟ್ಟಲವನು
ಹೆತ್ತ ತಾಯಂ ಹಿರಿಯರನು ಲೆಕ್ಕಿಸದೆ ನಾಡಿ
ನುತ್ತಮರನೆಲ್ಲ ಹೊರಡಿಸಿ ಕಾಕಪೋಕರಿಗೆ
ವೃತ್ತಿಯಂ ಕೊಟ್ಟು ಕಾಪಾಡಿ ದುಶ್ಚೇಷ್ಟಿತರ ಕುಹಕರಂ ಸುತ್ತ ನೆರಹಿ ೪೧

ಬಂಡುಗೆಲೆದಾಡುತ್ತ ದಾಸಿವೇಸಿಯರಲ್ಲಿ
ಮಿಂಡಿಯರೊಳತಿಲೋಲನಾಗಿ ಮಧುಪಾನದಿಂ
ದಿಂಡುಗೆಡೆವುತ್ತಲುರೆ ಪೋಕತನದಿಂದ ಧನಕನಕವಾಹನವಸ್ತುವಂ
ತಂಡತಂಡ[ದ]ಬಲವ ನೀಗಿರಲ್ಕರಿನೃಪರ್
ದಂಡೆತ್ತಿ ಬರಲೋಡಿಯಟವಿಯಂ ಪೊಕ್ಕು ತಾಂ
ಭಂಡತನದಿಂ ಕೆಲವುನೀಚವೃತ್ತಿಯಲಿ ತನ್ನವರೊಡನೆ ಚೋರತ್ವದಿಂ ೪೨

ಇರುತ ಮಾರ್ಗವ ಕಟ್ಟುತಖಿಳರಂ ಕೊಂದವರ
ಸರಕುಧನಧಾನ್ಯಮಂ ತಂದು ತಿನುತಂ ದೇಶ
ಪುರಪಟ್ಟಣಂಗಳೊಳಗಿರ್ಪ ಸುಂದರಿಯರಂ ಪಿಡಿತಂದು ರಮಿಸುತನಿಶಂ
ಪರಿಪರಿಯ ಬಾಧೆಯಿಂ ವಧಿಸುತವರಂ ತನ್ನು
ದರವ ಪೊರೆಯಲ್ಕೆ ಗೋ ವಾಜಿ ಶುನಕಾದಿಗಳ
ನಿರದೆ ತಿನ್ನುತ್ತಲೀ ತೆರದಿ ಸಾಸಿರವರ್ಷ ಮುದುಕನಾಗಿರ್ದು ರುಜೆಯಿಂ ೪೩

ನೊಂದು ಬಳಲುತ್ತಿರಲ್ಕವನಾಪ್ತಮಂತ್ರಿಗಳ್
ಬಂದು ನಮಗೇಂ ಬಾಳೆನಲ್ ವಿದಳ ನಿಮಗಧಿಕ
ತುಂದಕಾಹರಸಂಹರಪ್ರಹರಯೆಂಬುದೆಂಬನಿತರೊಳ್ ಪ್ರಾಣವಂಳಿಯೆ
ಮಂದಾನುಜನ ದೂತರವನ ನಿಜಪಾಶದಿ
ದಂದಂ ಬಿಗಿಯಲ್ ಪಟಪಟನೆ ಪರಿಯೆ ಘನಶಸ್ತ್ರ
ವೃಂದದಿಂ ಕಡಿದು ಬಡಿದಿರಿಯೆನಲ್ಕಾಯುಧಂ ಮುರಿದವೇಂ ಹರಮಹಿಮೆಯೊ ೪೪

ಸರ್ವದೂತರ್ ಬಡಿವುತಿರಲು ಇತಿಹಾಸವಯಂ
ಟುರ್ವಿಗತಿ ವೀರಭದ್ರೇಶ್ವರನ ಶಿಷ್ಯ ತಾಂ
ಶರ್ವನಂ ಭಜಿಪ ಕಾಲದೊಳು ಕೋಪಾಗ್ನಿಯಿಂ ಭರಿತನಾಗರ್ಚಿಸಂತಿರೆ
ಶರ್ವಾಣಿಧವನೊಲಿವುತ್ತೈದೆ ಪೇಳ್ದಂ ರುದ್ರ
ಪೂರ್ವಮುಖಿಮಗ್ನಿಯಂತುರಿಯಲೀ ದೇಹಪ್ರಭೆ
ಪರ್ವಿ ರವಿ ಮೊದ[1]ಲಂ[1]ತೆ ನಿನಗೆ ಜ್ವಾಲಾಮುಖಿಗಣೇಶನಾಮಂ ಸಲ್ವುದೈ ೪೫

ಎಂಬ ನಾಮವನಿಡುತ ನೀನಿಂದುಮೊದಲೆಮ್ಮ
ಬೆಂಬಳಿಯ ಭಕ್ತರಂ ಪಾಪಗಳ ನೆರೆಮಾಳ್ಪ
ರಂ ಬಿಡದೆ ಶಿಕ್ಷಿಸೈ ಮತ್ತೆ ಯಮನಿದಿರಾಗಿ ಬರಲವನ ಭಂಗಿಸೆಂಬ
ತ್ರ್ಯಂಬಕನ ನಿಯಮದಿಂ ವಿದಳನಂ ಬಿಡಿಪೆನೆಂ
ತೆಂಬಂದದಿಂ ಬರಲ್ಕಾತಗಾ ಯಮಂಭಟರು
ತುಂಬಿದಿರಿಸಲ್ಕವರ ಸದೆದು ಪೆಡಗೈಗಳಂ ಕಟ್ಟಿ ಭಂಗಿಸುತ ಬಿಡದೆ ೪೬

ಎಲೆ ಮೃತ್ಯು ಕೆಡಬೇಡಿವನ ಪಾತಕಂ ಪೋದು
ದಲಘು ಹರಹರಯೆಂಬ ನಾಮದುಚ್ಚರಣೆಯಿಂ
ದಲಿ ಕೇಳದೆಂತೆನಲ್ ಧರೆಗಗನದೊಳ್ ಪೂರ್ಣಕಾಷ್ಠಮಗ್ನಿಯ ಕಿಡಿಗಳಂ
ಸಲೆ ದಗ್ಧಮಪ್ಪವೋಲೆನೆ ಕೇಳಿಯಾ ಮೃತ್ಯು
ಮಲತಿದಿರಿಸಲ್ಕೆ ಇರಿದೆತ್ತಿ ಶೂಲದೊಳಗಾಂ
ತಳಿಕಾಕ್ಷನೆಡೆಗೊಯ್ದು ನವರತ್ನಪುಷ್ಪಕದೊಳಾ ವಿದಲನಂ ನಿಲಿಸಲು ೪೭

*ವೀರಭದ್ರೇಶಗೊಪ್ಪಿಸಲ್ಕಾ ವೀರಭಾವಜಾಂ
ತಕನ ಸನ್ನಿಧಿಗೊಯ್ದು ದೂತರಂತಾ ವಿದಳನಂ ಮೃತ್ಯುವಂ
ತೋರಿ ಬಿನ್ನವಿಸೆ ನೋಡಿ ಶಿವ ಗಹಗಹಿಸುತೆ
ಆವಕಾರಣ ನಗುತ ಕುಣಿವೆ ಶೂಲಾಗ್ರದೊಳ
ಗಾ ವಿವರಮಂ ವಚಿಸು ಮೃತ್ಯುಯೆನೆ ಶೂಲದೊಳ್
ತಾ ಬಂದುದೊಂದಿಲ್ಲಿ ನಿಮ್ಮಡಿಯ ಕಂಡುದೊಂದೇನೆಂಬೆನೆನ್ನ ಫಲವಂ ೪೮

---

1 ಲಿಂ (ಗ) * ೪೮ ನೆಯ ಪದ್ಯದಲ್ಲಿ ಛಂದೋಭಂಗವಾಗಿದೆ. ವೀರಶೈವಾಮೃತ ಮಹಾ ಪುರಾಣದಲ್ಲಿ ಈ ಪದ್ಯ ಇಂತಿದೆ : ಆ ರುದ್ರನೀ ವಿದಳನಂ ಮೃತ್ಯುದೂತರಂ । ವೀರಭದ್ರಂ ಗೊಪ್ಪಿಸುತ್ತ ಶರಣೆನಲಾತ ।ನೋರಂತೆ ಶಿವನೋಲಗಕ್ಕವರನೊಯ್ದು ಬಿನ್ನವಿಸಲೀಕ್ಷಿಸಲೀಶನು ॥ ಮಾರಹರನಂ ಕಂಡು ಶೂಲಾಗ್ರದೊಳ್ ಮೃತ್ಯು।ಸಾರಹರುಷದೊಳು ಕುಣಿಯಲು ಹರಂ ಕಂಡಿದೇಂ। ಕಾರಣಂ ನರ್ತಿಸುವೆಯೆನೆ ಶಂಕರಂಗೆ ಬಿನ್ನವಿಸಿತ್ತು ಸಂತಸದೊಳು॥ ೨–೬–೪೬ ॥

ಕೇಳಿ ಹರುಷದೊಳಾಗ ಬಿಡಿಸಿ ಮೃತ್ಯುವ ದೂತ
ರಾಲೋಕಿಸಿಂದಂಮೊದಲಾಗಿ ಶಿವಭಕ್ತರಂ
ಗಾಳಿಯಂ ಪೊಂದದಿರಿ ಲೋಕದೊಳ್ ಭವಿಗಳನೆ ಶಿಕ್ಷಿಸೆಂದವರ ಕಳುಹಿ
ಫಾಳನೇತ್ರಂ ಕೊಟ್ಟ ಗಣಪದವ ವಿದಳಂಗೆ
ಪೇಳಲೇನುಂಟಸಾಧ್ಯಂ ಶಿವನ ನಾಮಕ್ಕೆ
ಲೀಲೆಯೆಂಟನೆಯದಿನ್ನೊಂದು ಕಲ್ಪದೊಳುಂ ಕೇಳ್ ಶಿವದರ್ಶನದ ಫಲವನು ೪೯

ಸುಕುಮಾರನೆಂಬವಂ ಮುನ್ನ ಶಿವದರ್ಶನಾ
ಧಿಕದಿಂದ ಗತಿವಡೆದನೆಂತೆನೆ ದಧೀಚಿ ಕೇ
ಳಕಳಂಕ ಶಿವಲಿಂಗದರ್ಶನೋದಯಕಾಲದೊಳಗೆ ಸಂಘಟಿಸಲವನಂ
ಮುಂಕಂತಿಲೋಕಕ್ಕೈದಿದಂ ಹರನದರ್ಶನಂ
ಪ್ರಕಟಿಸಲ್ ಮಧ್ಯಾಹ್ನಕಾಲದೊಳ್ ಕ್ರತುಫಲಂ
ಸುಕೃತವೊಂದುಂವುದೆಣಿಕೆಗಳವಡದ ಶಿವನದರ್ಶನದಿಂ ಪ್ರದೋಷದಲ್ಲಿ ೫೦

ಪರಿವವ್ಯೆ ಪಾಪರಾಶಿಗಳಿದರ ಕಥೆಗೇಳು
ವರವಿಂಧ್ಯಪರ್ವತಕ್ಕುತ್ತರದೊಳಧಿಕ ಕೋ
ಟರವೆನಿಪ ದೇಶಮುಂಟಲ್ಲಿ ಐರಾವತಿಯೆನಿಪ ನದಿಯೆ ರಾಜಿಸುತ್ತ
ಇರ[1]ಲ[1]ದರೊಳಾ ವಶಿಷ್ಠಂ ಪುತ್ರಶೋಕದಿಂ
ದಿರದಳಿವೆನೆಂದು ಕಲ್ಗಟ್ಟಿಕೊಂಡುಂ ಬೀಳ
ಲಿರದೆ ಶತಭಾಗವಾಯ್ತಾ ಶತದ್ರುವೆ ವಶಿಷ್ಠನ ಕೊರಳ ನೇಣನರಿದು ೫೧

ತಾನೆಯ್ದುತಾ ವಿಪಾಟ್ಟೆಂಬ ಹ್ರಾದಿನಿಗೂಡು
ತಾ ನಿಧಿಯೆ ಸಿಂಧುವೆಂದೆನಿಸಿ ಮೆರೆಯಲ್ಕದರ
ತಾ ನವ್ಯತೀರದೊಳಗಬ್ಜಕಮೆನಿಪ್ಪ ಪತ್ತನಮಿರಲ್ಕಲ್ಲಿ ಮುನಿಪ
ಏನೆಂಬೆ ಪರಪುರಂಜಯನೆಂಬ ರಾಯ[ನ]
ನ್ನ್ಯೂನಸಂಪತ್ತಿಯಿಂದಿರಲವನ ಸಚಿವರೊಳ್
ಜ್ಞಾನಿ ಸದ್ಬ್ರಾಹ್ಮಣಪ್ರಧಾನನೊಳ್ ಸುಕುಮಾರನೆಂಬವಂ ಜನಿಸಿ ತಾನು ೫೨

ನವರೂಪಸಂಪತ್ತಿ ಯೌವನೋತ್ಕರದಿಂದ
ಲವನೆ ಬ್ರಾಹ್ಮಣಕರ್ಮಗಳನುಳಿದು ಕಾಮಶಾ
ಸ್ತ್ರವ ಕಲಿತು ಪಟ್ಟಣದೊಳಖಿಳ ನಾರಿಯರನಭಿಚಾರದಿಂ ರಮಿಸಿ ಬಿಡದೆ

---

1 ಲ (ಗ)

ಯವಿಚಾರಿ ವಂನೆವಂನೆಗಳಂ ಪೊಕ್ಕು ಪತಿಗಳಿಹ
ಸವಿಲಾಸಸತಿಯರಂ ಕ್ರೀಡಿಸಲ್ ತಂತಮ್ಮ
ಸವಿಗಲೆಯ ಸತಿಯರಂ ಕೊಲಲಾರದಳ್ಕುತವನಂ ವಧಿಸದಲ್ಲಿ ಜನರು ೫೩

ಅರಸಿನೆಡೆಗೆಯ್ತರುತ್ತಲೆ ರಾಜ ಸುಕುಮಾರ
ದುರುಳದುಷ್ಟಾತ್ಮನೀ ಪುರದ ನಾನಾವರ್ಣ
ವರನಾರಿಯರ ನೆರೆದು ಕೆಡಿಸುತ್ತೈದಾನೆ ನಮ್ಮೆಲ್ಲರಂ ಕುರಿತಿವನನು
ಪೊರಡಿಸೈ ರಾಷ್ಟ್ರವೆಂಸಗಿದ ಪಾಪ ರಾಜೇಂದ್ರ
ಗಿರಿದಪ್ಪುದೆಂಬ ಶ್ರುತಿಯುದರಿಂದೆ ರಾಯಂಗೆ
ನಿರಯುವೆಂದತಿನೊಂದು ಪೊಡವಡುತ ಗೋಳಿಡಲ್ ಭೂಪ ಕೇಳುತ್ತ ಕನಲಿ ೫೪

ಪಿಡಿತರಿಸಿ ಪೊಯ್ಸಿ ಜಂಕಿಸಿ ನೂಂಕಿಸಲ್ಕವಂ
ನಡೆತಂದು ಕೀರದೇಶವ ಪೋಗುತಲ್ಲಿರ್ದ
ಮಡದಿಯುರ ರವಿಸೆ ಬಡಿದಲ್ಲಿಂದ ತಗುಳಲ್ಕೆ ಹೂಣಮಂಡಲವ ಪೊಗುತ
ಕಡುಂಪಾಪಿ ಇರುತೊಂದಂಬನದೊಳಿಹ ಸರಸಿಯೊಳ್
ಜಡಕೇಳಿಯಾಡುತಿರೆಯಲ್ಲಿಗತಿ ಚೆಲ್ವೆಯಹ
ಕಡುಬೆಡಗಿ ಪಾಣ್ಬೆಯುತಿ ಚಪಳೆ ಚಾಂಡಾಲಸತಿ ಸೂತಕಂ ಕಂಡುಬರಲು ೫೫

ಕಂಡೀರ್ವರನ್ಯೋನ್ಯ ಸ್ನೇಹದಿಂ ಮಾರನಂ
ದ್ದಂಡದಿಂ ಸಕಲಕಲೆಯರಿತು ಕೂಡಲ್ ದಣಿದಂ
ಮಿಂಡನಂ ಬೋಳೈಸಿ ನೀನೆ ಮನ್ಮಥಚಕ್ರವರ್ತಿ ನಿನ್ನಿಂದಲಧಿಕ
ಗಂಡರುಂಟೇ ನೀನೆ ಪತಿಯಾಂ ಸತಿಯುಳೆಂಬ
ಮಿಂಡತಿಯ ನುಡಿಗೊಡಂಬಟ್ಟಿರುತ ಕಳ್ಳತನ
ದಂಡಲೆಯುನತಿಹಿಂಸೆಗಳ ಮಾಡುತವಳೊಡನೆ ಸುರೆಮಾಂಸಗಳ ಭುಂಜಿಸಿ ೫೬

ಕುರಿಕೋಳಿ ಹಂದಿ ನಾಯ್ಮಾಗೆ ಮೊದಲಾಗಿರುವ
ನರವುಬಿಖ್ಯ ಪಲಲಂಗಳಂ ತಿಂದು ಬಿಡದೆ ಭೂ
ಸುರರ ಸಾಲ್ಕೊರಲ್ಗಳಂ ಕೊಯ್ದು ಕಪಿಲಾದಿ ಗೋವುಗಳ ಶತಸಾಹಸ್ರಮಂ
ಭರದಿಂದ ತಿಂದಸಂಖ್ಯಾತ ಕರ್ಮಂಗಳಂ
ತಿರದೆ ಮಾಡುತ್ತಿರಲ್ಕವಗೈದು ಮಂದಿ ತನು
ಜರು ಕಣಾ ಮತ್ತೆರಳ್ ಪೆಣ್ಗಳುದಿಸಿದರು ಸುಕುಮಾರಗಾ ಪೊಲತಿಗಾಗ ೫೭

ಇಂತಖಿಳ ಪಾತಕಂಗಳನೆಸಗುತಿರಲವಂ
ಗಂತು ಎಪ್ಪತ್ತುವರ್ಷಂ ತುಂಬಲಾಕೆ ಸ
ತ್ತಂತಕನ ಬಾಧೆಗೆಯ್ದಲ್ಕೆ ತನಗೊಗೆದ ಪೆಣ್ಮಕ್ಕಳತಿ ಸೌಂದರ್ಯದಿಂ
ನಿಂತಿರಲ್ಕವರೊಲಿಸಿ ಸುಕುಮಾರ ಮೋಹದಿಂ
ಕಂತುಕೇಳಿಯೊಳು ತೇಂಕಾಡುತೀ ನೆಲದೊಳಗೆ
ಯಂತಕಾಂತಕ ಬಲ್ಲನಿವ ಮಾಳ್ಪ ಪಾಪಕಾಸಾರೆನೆಂದವನಿ ನಡುಗೆ ೫೮

ಹೂಣಮಂಡಲದರಸು ವೇದಶಾಸ್ತ್ರಾದಿ ಪೌ
ರಾಣಾಗಮಾರ್ಥಗಳ ಬಲ್ಲ ಸದ್ಬ್ರಾಹ್ಮರಿಗೆ
ಮಾಣದೇ ಧನಕನಕವಸ್ತುವಾಹನ ದಾನಮಂ ಕೊಟ್ಟು ಕಳುಹಲವರಂ
ಕೇಣದಿಂ ತನ್ನ ಮಕ್ಕಳುಗಳನ್ನೊಡಗೂಡು
ತಾಣತಿಯೊಳವರಡ್ಡಗಟ್ಟಿ ಕೊರಲ್ಗಳ ಕೊಯ್ದು
ತಾಣಕ್ಕೆ ಧನಕನಕವಸ್ತುಗಳನೊಯ್ದು ಸುಕುಮಾರನಿರೆಯುರಸು ಕೇಳಿ ೫೯

ಕೆಲವು ಬಲವಂ ಕಳುಪಲವರರಸುತಂ ಬರ್ಪ
ನೆಲೆಯನರಿದೊಂದಚಲದಗ್ರದೊಳಗಿರ್ದವಂ
ಖಲಪಾಪಿ ಯೋಚಿಸಿದನೆಲೆ ಮುನಿಯೆ ಈವಾರ್ತೆಯರುಪೆ ಪಾಳೆಯದ ಜನರು
ಕೆಲಬಲಕೆ ಪೋಗೆ ಗಲಗಾಗಲಾ ರಾಜಬಲ
ಮುಲಿವುತೆಯ್ತಂದು ತಲೆಗಳ ಪೊಡೆವರಿದಕೆನ್ನ
ತಲೆಯಳಿಯಲೇಕಿವರೆ ಸಾಯಲೆಂದಾಗ ಕಿರಿವೆಂಡತಿಯ ಕೊಂಡೋಡುತೆ ೬೦

ಪೋಗೆಯಲ್ಲಿರ್ದಖಿಳರಂ ತಲೆಗಳಂ ಕಡಿಯ
ಲಾಗಿ ನೀಂ ತನುಜೆಯುಹ ಪೊಲತಿ ಸತಿಯಳ ಕೊಂಡು
ಬೇಗ ಪೋಗುತ್ತ ಕೈರಾತದೇಶದೊಳೊಂದು ಪೆಕ್ಕಣವ ಸಾರಲಲ್ಲಿ
ಭೋಗಗಳು ಸಂಪತ್ತಿನಿಂ ವಣಿಕ್ಪಥಪುರಂ
ರಾಗದಿಂದಿರಲಲ್ಲಿ ಜನರು ನಾಗೇಶ್ವರ ಶು
ಭಾಗಾರ ಪುಷ್ಪವಾಟಿಯೊಳು ಶಿವರಾತ್ರೆ ಜಾಗರಣವಿಂರೆಯಾ ಪಾತಕಂ ೬೧

ಸುರೆವಾಂಸಗಳ ಕೊಂಡು ತಲೆಗೇರಿ ಪೊಂತಿಯಾ
ತುರದಿ ಮದನಂ ಬಾಧಿಸಲ್ ಶಿವಾಲಯದೊತ್ತಿ
ಗಿರದೈದಿಯಿದಿರೊಳಿರೆ ಶಿವಲಿಂಗಕಮಳತರದಾರತಿಗಳಂವೆಳಗಲು

ವರಪ್ರಭೆಯೊಳಾ ರತ್ನಕೋಟೀರ ಮೌಕ್ತಿಕಾ
ದ್ಯುರುತರಾಭರಣ ಪುಷ್ಪಾನುಲೇಪನ ಗಂಧ
ವರವಸನದಿಂದಲಂಕರಿಸಿರಲ್ ಕಂಡು ಮನವೊಲ್ದು ಸಂಭ್ರಮಿಸುತವನು ೬೨

ಶಿವಲಿಂಗಮೂರ್ತಿಯೊಳ್ ಮನ ನಿಂದು ಸಂಕುಮಾರ
ನವಿಕಲತೆಯಿಂ ನೋಡುತಿರೆ ಜನರ್ ಭರದಿಂ ಚ
ಲವನೈದಂತಿರಲೊಂದು ಪಳ್ಳದೊಳ್ ಬೀಳಲವನಸುಪೋಗೆ ಯಮನ ಭಟರು
ಕವಿಯಲಾಕ್ಷಣಮೈದಿ ಕೊಲ್ಲು ಕಡಿ ಬಡಿ ಸುಲಿದು
ಸವಿವ ಬಾಯಿರಿ ಕರುಳ್ತೆಗೆ ಕೊರಲನರಿಯೆನುತ
ಜವನ ದೂತರ್ ಮುತ್ತಿ ಹೆಡಗೈಯ ಕಟ್ಟಿ ಒಡಿವುತ್ತ ಕಂಬುಬಿರಿದು ನಡೆಯೆ ೬೩

ಅನಿತರೊಳ್ ಪಳುಕಿನಂದದಿ ಪೊಳೆವ ತನುಕಾಂತಿ
ತನತನಗೆ ಮುಂದುವರಿಯಲ್ ಗದಾಶೂಲಖಿಂ
ಡನದಕ್ಷ ಪರಶುಖಡ್ಗಗಳಾಂತ ಕರಚತುಷ್ಟಯದಿಂದ ಮೈಯೊಳಿಟ್ಟ
ಫಣಿಪತಿಗಳುಸುಗಕಾರ್ಬೊಗೆಯಿಂದ ಯಮನವರ
ಮುನಿದು ಸೀಕರಿಯಗೊಳಿಸುತ ಗಣೇಶ್ವರರೈದಿ
ಕನಕಪುಷ್ಪಕದೊಳೀತನ ಕಟ್ಟಿ ಬಿಡುವುದೆನಲವರಿದೇನೆನಲವರ್ಗೆ ೬೪

ಈತ ಲಿಂಗದಲಿ ನಿಷ್ಠನು ಶಿವಂಗತಿಪ್ರೀತ
ನೀತನೆಸಗಿದ ಪಾಪ ತೂಲಾಗ್ನಿಯಂದದಿಂ
ದಾ ತತುಕ್ಷಣದೊಳಳಿದುದು ಲಿಂಗದರ್ಶನದೊಳಿಲೆ ಯಮನ ದೂತರ್ಕಳಿ
ಭೀತಿಯಿಂದಿವನ ಗೊಡವೆಯವೋಗದಿರಿ ಯಜ್ಞ
ವ್ರಾತಫಲಕಧಿಕಾರಿಯೆಂದು ಪೇಳಲ್ ಯಮನ
ದೂತರೀ ಪಾಪಾತ್ಮನಿವನಬಿಡೆವೈಯವನ ಮೊಗವ ನೋಡುವರೆ ನೀವು ೬೫

ಶಿವದೂತರೀ ಪಾಪಿಯಂ ಪಿಡಿಯಲೆಂತೆನಂತ
ಕವಿಯಲವರಂ ಘಾತಿಸಲ್ಕೆ ಗಣವರರಂ ಮೇ
ಣವರೆಯ್ದಿ ಯಮನಿಗುಸುರಲ್ ಮಹಾಕೋಪದಿಂದಖಿಳ ಸೈನಿಕವ ಕೂಡಿ
ಜವ ನಿಟ್ಟಿಸುತ್ತಲುಂಬಲೆ ಮುಖ್ಯ ಸಚಿವರ್ಗೆ
ವಿವರಿಸುತಲಪಮೃತ್ಯುಕಾಲಮೃತಿಸೇನೆಗಳ
ನಿವಹದೊಡನೈದಿ ಶಿವಕಿಂಕರರ ಸದೆದವನ ತಹುದೆಂದು ಕಳುಹಲಾಗ ೬೬

ಕೇಳಯ್ಯ ಮುನಿರಾಜ ತೃಣರಾಶಿಗಳ ನೆರಹಿ
ಕಾಲಾನಲಂಗಿದಿರಿಸುತ್ತ ಜಯಿಸೆಂಬವೊಲ್
ಕಾಲಮೇಘದ ಚಂಡವಾಯುವಂ ಗೆಲುವುವೆಂದಾಜ್ಞಾಪಿಸುವ ಪಾಂಗಿನಿಂ
ಕಾಲನವರಡ್ಡಲಾಗಲು ಶಿವಗಣಂಗಳಿಗೆ
ಶೂಲದಿಂದಿರಿದಿರಿದು ಚಿಮ್ಮೆ ಲೋಕಾಲೋಕ
ಶೈಲಪ್ರದೇಶದೊಳ್ ತರಗೆಲೆಗಳಂತೆ ಬೀಳಲ್ಕಾಗ ಶಿವದೂತರು ೬೭

ನಿಟ್ಟಿಸುತ ಯಮಭಟರು ಸಾವವಂಜಭಾಪೆನು
ತ್ತಟ್ಟಹಾಸಮನೆಸಗಿ ಕಟ್ಟಿರ್ದ ಪಾಶಮಂ
ತೊಟ್ಟನೇಕೊಯ್ದು ವಸ್ತ್ರಾಭರಣಮಂ ಕೊಟ್ಟು ನವರತ್ನಪುಷ್ಪಕದೊಳು
ಇಟ್ಟು ಸುಕುಮಾರನಗ್ರದೊಳು ಪೂವಳೆಯ ಬಾ
ನ್ವಟ್ಟೆಗರು ಸುರಿಯೆ ದುಂದುಭಿ ಮೊರೆಯೆ ಮುನಿನಿಕರ
ನೆಟ್ಟನೆಯಂಘೇಯಂಘೇ ಎನಲು ರಜತದ ಬೆಟ್ಟದೆಡೆಗೊಯ್ದು ನಂದೀಶನ ೬೮

ಮುಂದಿಳುಹಲವನಡ್ಡಬೀಳಲವನಂ ಸಲಹು
ತಂ ದಯಾನಿಧಿ ಮಹಾದೇವನಾಸ್ಥಾನಕಾನಂದದಿಂ
ನಂದೀಶ್ವರಂ ಕರೆದುಕೊಂಡೊಯ್ದುಮಾಮಹೇಶ್ವರರ್ಗೆ ತೋರೆ
ಇಂದುಶೇಖರನೊಲ್ದು ಗಣಪದವ ಕೊಡೆ ಯಮಂ
ಬಂದು ಮುದ್ರೆಯನೊಪ್ಪಿಸುತ್ತ ನುತಿಸಲ್ ಶಿವನ
ಸಂದರ್ಶನದ ಫಲವ ಪೇಳಿ ಕಳುಹಲ್ಕವಂ ಸಂಯಮಿಗೆ ಪೋದ ಮುನಿಪ ೬೯

ಎಲೆ ಮುನಿಯೆ ಶಿವಲಿಂಗಮಹಿಮೆಯಿಂ ಗಣಪದ
ಕ್ಕೊಲಿದು ಬಂದರ್ ಮರಳರ್ಐ ಹೀನಜನ್ಮದೊಳ್
ವೊಲಿದುಯಜ್ಞನದಿಸತ್ಕೃತ್ಯದಿಂ ಸ್ವರ್ಗಾದಿಪದಗಳಂ ಪಡೆದ ದ್ವಿಜರು
ಇಳಿವರ್ಐ ಮರಳಿ ಭೂಲೋಕಕ್ಕೆ ಜನ್ಮಮಂ
ತಳೆದ ಮೇಲಾವನಾಗಲಿ ಶಂಭುಲಿಂಗಮಂ
ಬಲಗೊಂಡು ಭವಶರಧಿಯಂ ದಾಂಟಿದವನುತ್ತಮೋತ್ತಮ ದಧೀಚಿಮುನಿಯೆ ೭೦

## ಆರನೆಯ ಸಂಧಿ

ಸೂಚನೆ: •

ಸುರರು ಮುಪ್ಪುರದಸುರರಿಂ ನೊಂದು ನಂದೀಶ
ಮೊರೆಯೆನಲ್ ಹರಗರುಪಲಾ ನಂದಿ ಶಿವನ ನಿಜ
ವರದೊಳಾ ತ್ವಷ್ಟೃವಿಂ ರಥವ ನಿರ್ಮಿಸಲೇರಿ ತ್ರಿಪುರವಂ ಗೆಲ್ದನಭವಂ

ಜನನಾದಿದೂರ ಭವಯಜ್ಞೌಘ ಕಾಲಭಂ
ಜನ ನಿತ್ಯ ನಿರ್ಮಲ ನಿರಾವರಣ ನಿರ್ಭೇದ್ಯ
ಮನಸಿಜಾಂತಕ ಮಾವರಾದ್ಯಖಿಳ ಗೀರ್ವಾಣವಂದ್ಯಪದವನಜ ವಹ್ನಿ
ದಿನಪ ಶಶಿನೇತ್ರವನಜಾಂಬಕ ವರಕಳತ್ರ
ಧನದಸಖ ಧರಣಿಜಲಶುಚಿಪವನ ಗಗನಾತ್ಮ
ವನಜಾಪ್ತ ಶೀತಭಾನ್ವಷ್ಟತನುಮೂರ್ತಿ ಜಯ ಜಯಂತು ಗುರು ಚೆನ್ನಮಲ್ಲ ೧

ಶಿತಿಕಂಠ ಶರಣರೋಹಿಲನ ಕತನದೆ ಚೆಲ್ವ
ಸತಿಯ ಸಂವಾದದಿಂ ತನ್ನ ದೇಶದ ಜನರ
ನತಿತ್ವರಿತದಿಂದ ಡಂಗುರದಿಂದ ಬರಿಸಿ ಮಂಗಳಪುರಿಯ ತುಂಬಿಸುತ್ತೆ
ನುತಿವೆತ್ತ ಚತುರಂಗಬಲ ಚರಾಚರಗಣ
ಪ್ರತತಿಯೆಂ ಶಿವನುತಿಯೊಳೊಯ್ದು ಕೈಲಾಸದೊಳ್
ಸತತ ಸೇರಿಸಿದುದ್ಭಟಯ್ಯನೀಗೆನ್ನ ಮತಿಲತೆಯ ಪೆರ್ಚಿಸುಗೆ ಮುದದಿಂ ೨

ಸಾರಶಿವನಿಷ್ಠನೆ ದಧೀಚಿಮುನಿ ಕೇಳೆನು
ತ್ತಾರಾಧ್ಯ ಮರುಳಸಿದ್ಧೇಶ್ವರಂ ಪೇಳ್ದುದಂ
ಧೀರಶ್ರೈಲೇಯ ಯತಿ ಲಾಲಿಸೈ ಕರ್ಮಹರ ತ್ರಿಪುರಹರಲೀಲೆಯುನಂವ
ತಾರಕಾಸುರನಳಿಯಲವನಾತ್ಮಜರು ಗಿರಿಯ
ಸೇರಿ ಗುಹೆಯೊಳ್ ಬಹಳಕಾಲವಂ ಕಳಿದಧಿಕ
ನೀರೇಜಭವನ ಕುರಿತತಿಶಯದ ತಪಗಳಂ ಮಾಡಲಾ ಶಿವನಾಜ್ಞೆಯಿಂ ೩

---

• ತ್ರಿಪುರದಹನ ಲೀಲೆ (ಗ)

ಬಂದು ತಾವರೆಗಂದ ಮುಂದೆ ನಿಲೆ ಕಮಲಾಕ್ಷ
ನಂದು ವಿದ್ಯುನ್ಮಾಲಿ ತಾರಕಾಕ್ಷರ್ ಮನದೊ
ಳೊಂದೆ ಹರ್ಷಂಗಳಂ ನಮಿಸುತ್ತೆ ತ್ರಾಹಿ ಲೋಕೇಶ ಜಗದೇಕಬಂಧು
ತಂದೆ ಸಚರಾಚರದ ಎಮ್ಮ ಸಲಹಲ್ ಬಂದೆ
ಯೆಂದೆನುತ ಕೀರ್ತಿಸಲ್ ಬ್ರಹ್ಮ ನಲಿವುತೆ ನೀವು
ನಿಂದುಗ್ರತಪವನೊಡರ್ಚುವದೇನು ಎಮ್ಮ ಕಂರಿತೆಂದನಾ ಕಮಲಾತ್ಮಜಂ ೪

ಎಲೆ ದೇವ ನಿಮ್ಮ ವಂಶಜರಾವು ನಮ್ಮ ಪಿತ
ಬಲವೈರಿಯಳಿಯನಿಂದಳಿದ ನಮಗಾರ್ ದಿಕ್ಕು
ನೆಲೆಯಾಗಿ ಮಾತಾಪಿತರ್ ನೀವು ನಮಗೆ ಬಾನ್ವಟ್ಟೆಯೊಳಗುಜ್ವಲಿಸುವ
ಸಲೆ ಹೇಮ ರೌಪ್ಯ ಕಾರ್ಬೊನ್ನುಗಳ ರೂಪದಿಂ
ದಲಘು ಮುಪ್ಪುರಗಳವ ಕೊಂದಚಲ ಕೀಲದಿಂ
ದಲಿ ಸದಾಕಾಲದೊಳ್ ತಿರ್‍ರನೇ ತಿರುಗುಂತಿಹ ಬೇಹುದೆಂದಸುರರಂಸುರೆ ೫

ಕಮಲಭವ ನಮಗಮೃತಸರಸಿ ಮುಖ್ಯಾದ್ಯಖಿಳ
ಸುಮನಸರ ವಸ್ತುಗಳ ಕೃಪೆಮಾಳ್ಪುದಾ ಸುರರ್
ಕ್ರಮದೆಮ್ಮವೂಳಿಗದೊಳಿಹುದ ನಾನಾಭುವನವಾಸಿಗಳ್ ನಮ್ಮಾಜ್ಞೆಯಂ
ನಿಮಿಷಮಿಾರಲ್ಬಾರದಳಿವಿಲ್ಲದೋಲೆಮ್ಮ
ಮಮತೆಯಿಂ ಸಲಹೆನಲ್ ನಗುಂತಜಂ ನಿಮ್ಮ ಪುರ
ಭ್ರಮಣಗತಮಾಗಲೊಂದಂಬಿನಿಂ ಕೇಡಲ್ಲದೊಡೆ ನಿತ್ಯಮೆನುತ ತಿರುಗಿ ೬

ಬರುಂತಿರಲ್ಕವನ ಕಾರಾಗೃಹದೊಳಿಡಲಜಂ
ತ್ವರಿತದಿಂ ಬ್ರಹ್ಮಾಸ್ತ್ರಮಿತ್ತವರ ಕುಸ್ತರಿಸಿ
ಬರುತ ನೀಚರ್ಗೆಯುಂಪಕಾರಮೆಸಗಲ್ಕೆಯಪಕಾರವಹುದೆಂಬ ವಾಕ್ಯಂ
ನಿರುತಮೆಂದಾಗ ನುಡಿವುತಲಖಿಳ ಲೋಕವರ
ಸುರರೆಲ್ಲ ಕೆಟ್ಟರಾಹಾ ಶಿವಶಿವಾ ಎನಂತ
ಭರದಿಂದ ಬ್ರಹ್ಮಲೋಕಕ್ಕೈದಿ ಚಿಂತಿಸುತ್ತಿರಲಿತ್ತ ಖಳರು ನಲಿದಂ ೭

ಎಲೆ ತ್ವಷ್ಟ್ರುಯಲರ್ವಟ್ಟೆಯೊಳ್ ಪುರತ್ರಯಗಳಂ
ವೊಲವಿನಂ ರಚಿಸೆನೆ ಹಸಾದಮೆನುತಾ ಮಯಂ
ನವಿಲನಿಂ ಕಾರ್ಬೊನ್ನು ರೌಪ್ಯ ಸ್ವರ್ಣಗಳಿಂದ ಮೂರುಪುರಗಳ ನಿರ್ಮಿಸಿ

ನಲವಿನಿಂದೊಂದೊಂದುಸಾವಿರದ ಯೋಜನದ
ನೆಲೆಗಳಿಂ ಮೆರೆಯಲಾ ಪುರಗಳಂತರದಲ್ಲಿ
ಲಲಿತಗೋಪುರ ಹರ್ಮ್ಯವೀಧಿಗಳನತಿವಿಚಿತ್ರಮುಮಾಗಿ ನಿರ್ಮಿಸುತ್ತೆ ೮

ಭವದಂಕ್ತಿಯಿಂದಲೆಮ್ಮಾ ಪುರತ್ರಯಗಳಂ
ಯೆಮೆಯಿಕ್ಕದೀಕ್ಷಿಸಲ್ ಬೇಹುದೆನೆ ನೋಡಿ ಮು
ತ್ತವರು ನಲಿವುತ ಮುಚಿತಮುಡುಗೊರೆಗಳಿತ್ತು ಪ್ರಮುದಾಪುರಂ ಕುಮುದಾಪುರಂ
ಸವೆಯದಾ ದಕ್ಷಾಪುರಾಭಿಧಾನಮನಿತ್ತು
ಸವಿನಯದಿ ಧೀರವಿದ್ಯುನ್ಮಾಲಿ ಕಮಲಾಕ್ಷ
ರವರಲ್ಲಿ ತಾರಕಾಕ್ಷಂ ನೋಡಲೊಂದೊಂದು ಪೊಳಲನಾಶ್ರೈಸಿ ನಿಲುತೆ ೯

ಆ ಪುರತ್ರಯದ ಮಹದೈಶ್ವರ್ಯಮಂ ನೋಡ
ಲಾ ಪಿತಾಮಹನಿಗಳಮಲ್ಲದಿರೆ ಮುನ್ನ ಕೆ
ಟ್ಟಾ ಪಾಪಿರಕ್ಕಸರ್ ಗಿರಿಗುಹಾಂತರ ಬಿಲದ್ವಾರ ಕಾಂತಾರಂಗಳಂ
ದೀಪಿಸಂಮ ಪಾತಾಳಲೋಕದೊಳ್ ಸೇರಿರು
ತ್ತೀ ಪರಿಯೆ ತಾರಕಾತ್ಮಜವಾರ್ತೆಯಂ ಕೇಳು
ತಾ ಪರಮಹರ್ಷದಿಂ ಕುಣಿದು ಕುಬುಬಿರಿವುತ್ತಲೆಯ್ದಿದರ್ ದಶದಿಕ್ಕಿನಿಂ ೧೦

ಕಂಡಾಗ ರಾಕ್ಷಸೇಶ್ವರರಿದಿರ್ವಂದು ಮುಂ
ಕೊಂಡು ತಳ್ಕೈಸುತ್ತಲುಚಿತವಚನಮ ನುಡಿದು
ಕಂಡೆಯೂ ಕಮಲಾಕ್ಷ ಧೂಮ್ರಾಕ್ಷ ನೀಳ ನಳ ಶುಂಭ ಚಂಡ ನಿಶುಂಭನ
ಅಂಡಮಾಪೋಶನಂಗೊಂಬ ಮೇಘಾಸುರನ
ದಂಡಧರ ಶಿಂಶುಮಾರನ ಮೂಕರಾಕ್ಷಸನ
ಗಂಡುಗಲಿಯಮ್ಮೆ ಮಾತಾಪಿತರ ಬಳಗದಿಂ ತಂಡತಂಡಂ ನೋಡಿದ್ಯೆ ೧೧

ಇಂತಖಿಳ ದಾನವರ್ ಭೂಮಿ ಬೆಸಲಾದವೊಲ
ನಂತ ಪಡೆಗೂಡಲತಿಗರ್ವದಿಂ ನುಡಿದರೆಲೆ
ಯಂತ್ಯಕಾಲದಿ ತೋರ್ಪ ಜಂಝೂನಿಲಾರ್ಭಟೆಗೆ ಮಶಕಂಗಳೇನಿರ್ಪವೆ
ಮುಂತೆಮಗೆಯಿದಿರಾರೆನುತ್ತ ಬಲವೆರಸಿ ಧರೆ
ಯಂತರಾಳಕ್ಕಿಳಿಯೆ ಭೂಕಾಂತೆ ನಡನಡುಗ
ಲಂತು ಭೂಲೋಕಮಂ ಸೆರೆಸೂರೆಗೊಳುತಿರ್ದರೇನೆಂಬೆನಾ ಹಾನಿಯಂ ೧೨

ಏಕಾತಪತ್ರಾಂಕಮುಂಖ್ಯರಾಜರ ಪೈಕ
ಪೈಕಮಂ ಸದೆಬಡಿವುತವರ ಸತಿಯರ ಪಿಡಿದು
ಕಾಕತನದಿಂ ಭಂಗಿಸುತ್ತ ನರಲೋಕಮಂ ಸುಟ್ಟು ಧೂಳಿಯು ಮಾಡುತೆ
ಭೀಕರಾಕಾರದಿಂದೆಯ್ದಿ ದಿಕ್ಪಾಲಕರ
ನೀಕಗಳ ಸಂಹರಿಸಿಯವರ ಬಲುಬೊಬ್ಬಿಡು
ತ್ತಾಕಾಶಗಂಗೆಯಂ ದಾಂಟುತ್ತ ನಾಕಲೋಕಕ್ಕೈದಿದರ್ ದೈತ್ಯರು ೧೩

ಮರುಗುತ್ತ ಕೆಟ್ಟೋಡಿದರೆ ಸಾರೆಯುಪಕೀರ್ತಿ
ಪಿರಿದಪ್ಪುದೆಂದಾಗ ಸಕಲಸೈನ್ಯಂವೆರಸಿ
ಪೊರಮಡಂತ್ತಾ ಕರಿ ಕರಿಗೆ ಹರಿ ಹರಿಗೆ ರಥ ರಥಕೆ ಪದ ಪದಕ್ಕೆ ಹಳಚಿ
ಇರೆ ಪಿರಿಯ ಪೆಣಗೂಳರ ಮಹಾಬಲಂ ಬರು
ತ್ತಿರರೆ ಕಡಿಕಡಿಯುರಿದು ಚಿಮ್ಮೆನುತ್ತೊದಗೆ ಸುರ
ರೆರೆಯು ಮುರಿದೋಡೆ ಕರಿ ಹಯಗಳಂ ಪಿಡಿದು ಪುರವನಿತೆಯರ ಸೆರೆಗೊಳುತ್ತೆ ೧೪

ಸುರಪುರಿಯ ವನಗಳಂ ಕಡಿವುತಂ ಬಡಿವುತಂ
ಮೆರೆವುಪ್ಪರಿಗೆಗಳಂ ಕೆಡಹುತಂ ತಡಹುತಂ
ಪಿರಿಯ ಚಿನ್ನದ ಕೊಂಪೆಗೊಳ್ಳುತಂ ತಳ್ಳುತಂ ಗಜವಾಜಿ ವಸ್ತುತತಿಯಂ
ತರತರದೆ ಮುಪ್ಪುರಿಗೆಯೆಡಕುತಂ ತುಡುಕುತಂ
ಭರದೆ ಕೆಲರಿದಿರಿಸಲ್ ಹರಿವುತಂ ತರಿವುತಂ
ಸುರರಿಪುಗಳಿಂತು ಜಯಲಕ್ಷ್ಮಿಯಂ ಕೈವಿಡಿದು ಪೋಗಲಿತ್ತಾ ಸುರಪನು ೧೫

ಸೇರುತ ಶಿವಾಲಯುವ ಕೆಲದಿವಸ ಪೋಗೆ ಬಾ
ಯಾರುತ ಸುರರ್ ಬಂದು ನೋಡೆ ಗಲ್ಲದೊಳಂ ಕೈ
ಯೂರಿ ಮೊಗಬಾಡಿ ತಲೆಗುತ್ತಿ ಬಣಗಂ ಸುರಿವುತಮಿತಬಡತನಗೊಂಡಿಹ
ಭೂರಿದೇವರ್ಕಳೊಡೆಯುನ ಕಾಣುತತಿನೊಂದು
ಮಿಾರಿದ ಮಹಾಪಾಪಫಲದೊಳಿಮಗಿಂತಾಯಿ
ತಾ ರಮಾಧವನೆಡೆಗೆ ಪೋಪವೇಳೇಳೆನಲ್ ಸ್ವರ್ಪತಿಯು ನಡೆತರಲ್ಕೆ ೧೬

ನೋಡಿ ವೃದ್ಧಶ್ರವಃಪ್ರಮುಖಾಮರರ ಮೊಗದಿ
ಮೂಡಿರ್ಪ ದುಗುಡಮಂ ಕಂಡಸುರವೈರಿ ಎಲೆ
ಬಾಡಿಪ್ಪ ಮುಖಗಳೇನಾರಿಂದಲಾಯ್ತುಸುರಿ ದೇವರ್ಕಳೇ ಎನಲ್ಕೆ

ಕೊಡಿಯಚ್ಯುತಗೆ ವಂದಿಸಿ ಕರಗಳಂ ಮುಗಿದು
ಮೊಢತಾರಕತನೂಜರ್ಗೆಯಜಪದಗಳಂ
ಕೊಡೆಕೊಡಲಾ ದುರಾತ್ಮರ್ ಬಂದು ರೋಡಾಡುತಂದು ಸತಿಯರ ತೊಳ್ತಿರಂ ೧೭

ಮಾಡಿಕೊಳುತಶಿಚೇಷ್ಟೆಯಂ ಬಾಧಿಸಂತ್ತ ಮುನಿ
ಯಾಡಂಬರಂಗಳಂ ಚಲ್ಲಬಡಿಯುತ್ತವರ
ರೂಢಿಯಾಶ್ರಮಗಳಂ ಕೆಡಿಸಖಿಳಲೋಕಗಳ ಪಾಳ್ಮಾಡಿದರ್ ಮುರಾರಿ
ಗಾಡಿಯಿಂದೆಮ್ಮೆಲ್ಲರಂ ಸಲಹಬೇಕೆನಲ್
ನೋಡುತೆನ್ನಿಂದಾಗದಾ ಸದಾಶಿವನೆಡೆಗೆ
ಕೂಡೆಲ್ಲ ಪೋಗಬೇಕೆಂದೈದಿದಂ ಮಹಾದೇವನೊಡ್ಡೋಲಗಕ್ಕೆ ೧೮

ಆ ಶಿವಂ ನೋಡಲಷ್ಟಾಂಗದಿಂ ವಂದಿಸುತೆ
ಲೇಸಾಗಿ ಮುಕುಳಿತಕರಂಗಳಿಂ ನಿಂದು ಹರ
ಭಾಸುರಗಜಾಸುರಾಜಿನಚೇಲ ಖಟ್ವಾಂಗಧರ ಶೂಲಮೃಗಹಸ್ತನೆ
ಮಾಸಹೋದರಖಂಡಮಂಡನ ಸುರಾಸುರವಿ
ಲಾಸ ರುಂಡಾಭರಣ ಧೃತವಿಧಿಶಿರಪ್ಪುತ್ರ
ನಾಶವಿಲ್ಲದನೆಮ್ಮ ಕಾಯ್ದುದೆಂದಾಗ ಸ್ತುತಿಸುತ್ತ ಮೊರೆಯಿಟ್ಟರಲ್ಲಿ ೧೯

ಎಲೆಯಜನೆಯುವರಿರವನರಿಯದಿಷ್ಟವನಿತ್ತೆ
ಸಲೆ ಕಜ್ಜವೇನೆಂದು ಬೃಂದಾರಕರ್ ಕೂಡೆ
ನಲಿದು ಮಾತಾಡುತಿರೆ ಗಿರಿಜೆಯೆನ್ನುದರದೊಳ್ ಸುತರಂ ಬೇಡೆಂದಧಮಂರು
ಫಲವನುಣಲಿಂತಾಗ ಲಕ್ಷಿಸದೆ ಕೂಡೆ ಮನ
ವೊಲಿದು ಕುನರಗೆ ತೋರಿ ಪರಿಪರಿಯೊಳಾಡಿಸ
ಲ್ಕಲಘುಪುತ್ರನ ಮೋಹಮುದಿಸಲ್ಕೆಯಂತವುರಕೊಯ್ದಳಂಬಿಕೆಯಿತ್ತಲಂ ೨೦

ಬಹುಕಾಲ ಬಾಗಿಲಂ ಕಾಯದ್ದು ಬೊಬ್ಬಿಡಲಲ್ಲಿ
ವಿಹಿತದಿಂ ಕಾಯ್ವ ಕುಂಭೋದರಂ ಕೋಪದಿಂ
ದಹಿಶಯನಮುಖ್ಯರಂ ಸದೆದಟ್ಟಲತಿನೊಂದಂ ನಂದೀಶಗೈದಿ ಪೇಳೆ
ಆಹಹ ಕುಂಭೋದರಂ ನೋಯಿಸಿದನಿವರನಾಂ
ವಹಿಲದಿಂ ಬರ್ಪೆನೆಂದೊಳಪೊಕ್ಕು ಬಿನ್ನೈಸೆ
ಮಿಹಿರಪ್ರಕಾಶ ಶಿವನೆಲೆ ನಂದಿ ಮಯನಿಂದೆ ರಥವ ನಿರ್ಮಿಸು ಎಂದನಂ ೨೧

ಆವಾತ ಕೇಳಿ ಪೊರಮಟ್ಟು ನಂದೀಶ್ವರಂ
ಪ್ರೇಮದಿಂ ದೇವರ್ಕಳಂ ಸಂತವಿಟ್ಟು ಮಯಂ
ನೇ ಮಹಾಸ್ಯಂದನವ ನಿರ್ಮಿಸೆನೆ ಜಗದೇಕಬಂಧು ಚಿತ್ತೈಸೆಂದೆನೆ
ಭೂಮಿಯಂ ತೇರ ಮಾಡುತ ಸೋಮಸೂರ್ಯರಂ
ನೇಮಿಸುತ್ತೆಡಬಲದ ಚಕ್ರಗಳ ನಾಟುತ್ತ
ಯಾ ಮಹಾಪನ್ನರಳ್ಪದಿನಾರುಕಳೆಗಳಂ ಮೊಳೆಗಳಂ ಬೇಗಮಾಡಿ ೨೨

ಷಡುಋತುಗಳೇ ನೇಮಿಪತ್ರಿಗೆಗಳಾ ಚಕ್ರ
ದೊಡಲಿನಂತರವೆ ಗಗನಂ ಚಕ್ರಗಳ ಮುಂದು
ಗಡೆಯ ಮಂತ್ರಂ ಹಿಂದುಗಡೆಯು ಮರ್ಯಾದಾಪ್ರದೇಶದಲ್ಲಿಯು ಕಂಭವೆ
ಸಡಗರದವುದಯಾಸ್ತಗಿರಿಗಳವರಂತಮಾಂ
ತೊಡನಿರುವ ಕುರುಗಣೆಗಳ್ಳೆ ಹೇಮಗಿರಿಯುನಂ
ತೆಡೆಬಿಡದೆ ಸುತ್ತಿರ್ದ ಕೇಸರಾಚಲಮಧಿಷ್ಠಾನ ಲೋಕಾಲೋಕವು ೨೩

ಅದರ ಬಳಸುತ್ತರಾಯಣ ದಕ್ಷಿಣಾಯನಂ
ತದಕೆ ಗಮನಂ ನಾಭಿಗಳ್ ಮುಂಹೂರ್ತಂಗಳ್ಳೆ
ಪೊದಗಿದತಿಕಲೆಗಳೆನಿಪಾ ಕಾಲಪ್ರಾಸಂಗಕಾಷ್ಠ ಮುಂದೆಸೆಯ ಮೂಕು
ಪದಪಿನಿಂ ಕ್ಷಣಗಳಚ್ಚುಗಳು ನಿಮಿಷವೆ ಕೇಳು
ಮದರಧೋಮಣಿಯಾಶ್ರಯಾಕಾಶ ಮೇಲ್ಭಾಗ
ಮಧಿಕಧ್ವಜಗಳ್ ಸ್ವರ್ಗ ಮೋಕ್ಷಮಂತವರ ದಂಡಂಗಳೇ ಧರ್ಮಂಗಳು ೨೪

ಮತ್ತೆಯಗ್ನಿತ್ರಯಂಗಳ ಕಳೆಗಳವು ರಥದ
ಬಿತ್ತರದ ಬಾಹ್ಯಸಂಧಿಗಳಂ ಮೈವೆತ್ತಾದ
ವತ್ಯಧಿಕ ನೊಗದ ಹುಗಿಲಾದವ್ಮೆ ಕಾಮ್ಯಾರ್ಥಮೆರಡುಮವ್ಯಕ್ತಪ್ರಕೃತಿ
ಸತ್ಯಮಚ್ಚಿನ ಮರಂ ಗತಿವಚನಗಳ್ ತೇರಿ
ನುತ್ತರೋತ್ತರದ ಸಂಸ್ಥಾನ ಕೋಣೆಗಳವ
ಕ್ಕುತ್ತಮನೆ ಪಂಚೇಂದ್ರಿಯಂ ಪಂಚಭೂತಂಗಳುಂ ರಥಕೆ ಭೂಷಣಪದಂ ೨೫

ಸವಿಶೇಷವಾಗಿರುವ ವಾಜಿಗಳ್ ವೇದಂಗ
ಳವಕೆ ಭೂಷಣಗಳು ಷಡಂಗಮುಪಭೂಷಣಂ
ಶವಪುರಾಣಂ ನ್ಯಾಯಮೀಮಾಂಸೆ ಧರ್ಮಶಾಸ್ತ್ರಂಗಳವರವರ ಬಳಿಯಂ

ವಿವಿಧಪಟಗಳ್ ನೋಡೆ ಪಾತಕ್ರಮಂಗಳವು
ಕುವರನೇ ಛಂದಸ್ಸು ಘಂಟೆಗಳ್ ಫಣಿಪಂಗ
ಳವು ಮಿಳಿಗಳಾದವಾ ಸರ್ಪಗಳ್ ಬಂಧದುರೆಪಾಶಂಗಳಾದವಾಗ ೨೬

ದಿಶೆ ಪ್ರತಿದಿಶಂ ರಥಕೆ ಪಾದಗಳ್ ಮೇಘಾಳಿ
ಮಿಸುಪ ನವರತ್ನಮಯದ ವಿತಾನಗಳ್ ನಾಲ್ಕು
ದೆಶೆಯಂಬುನಿಧಿ ಕಂಬಳಂಗಳಾಗಲ್ಕಪ್ಸರೆಯರೇ ಸೀಗುರಿವೆಣ್ಗಳು
ಹಸನಾಗಿರುವ ಯಮಾದಿಗಳಂ ಸೋಪಾನಂಗ
ಳಸಮಸಾರಥಿ ಬ್ರಹ್ಮಪ್ರಣಮವೇ ಚಂದುಟಿಗೆ
ಯೆಸೆವ ಹಿಡಿಯದಕೆ ಸಪ್ತವ್ಯಾಹೃತಿಗಳಂ ಪೊಸತಾಗಿ ರಂಜಿಸುತಿರುವವು ೨೭

ಸ್ಯಂದನದ ಸರ್ವಸಂಸ್ಥಾನಂಗಳಿಗೆ ನೋಡ
ಲಂದವಹ ಬೆಳ್ಗೊಡೆಯೆ ಗಗನತಳ ಕುಲಗಿರಿಗ
ಳೊಂದಿರುವ ತೇರ ಬೊಂಬೆಗಳು ಮಂದರಪರ್ವತವೆ ಡಿಂಡಿಮಂ ಮೇರುವೆ
ಸಂದ ಬಿಲ್ ಶೇಷ ಸಿಂಜಿನಿ ಕಾಳರಾತ್ರಿಯಂದ
ರಂದದತಿ ಸಮ್ಮೇಳ ಸರಸ್ವತಿಯೆ ಘಂಟೆಯಂ ಮು
ಕುಂದನೇ ಬಾಣ ಮುಮ್ಮೊನೆಯೆಂ ಕಾಲಾಗ್ನಿ ಪವಮಾನನೇ ಗರಿಗಳಾಗೆ ೨೮

ಇಂತು ನಾನಾವಿಧದಿ ರಥ ಧನುರ್ಬಾಣಗಳ
ನಂತಪರಿಯಿಂ ರಚಿಯಿಸಂತೆ ನಂದೀಶ್ವರಂ
ಕಂತುರಿಪುಗರುಪಲಾ ಶಿವನೆಯ್ದೆ ಸಿಂಗರಿಸಿ ಸಿಂಹಾಸನಕ್ಕೆ ಬರಲು
ವಱಂತೆ ಬ್ರಹ್ಮೇಂದ್ರಾದ್ಯರೆಲ್ಲ [1]ಪ[1]ಶುಗಳೀ[2]ತ ಸ[2]
ಮಂತು ಪತಿಯೆಂದು ಪಶುಪತಿಪಟ್ಟಮಂ ಕಟ್ಟಿ
ಲಂತಗಜೆ ಭಂಜಸೇಸೆಯಿಟ್ಟು ವಣಿಮಂಗಳಾರತಿಯ ಮಿಗೆ ಬೆಳಗಿ ನಲಿದು ೨೯

ಬಿಡದೆ ಪ್ರಮಂಥಾಳಿ ಬಂದೆಡಬಲದೊಳೋಲೈಸೆ
ಬೆಡಗಿನಿಂ ಚಂಡಕೀರ್ತಿಗಳು ಉಗ್ಘಡಿಸಲಂ
ತೆಡವಿಡದೆ ವಾದ್ಯರವ ಮೊಳಗೆ ಹರಿಯಜರುಂ ಜಯ ಜೀಯ ಎನೆ ವೃಷವನೇರಿ
ಸಡಗರದಿ ಬರುತಿರಲ್ ತೇರ ತಂದಾಕ್ಷಣಂ
ಮೃಡಪರಾಕೆನೆ ಗೊಂದೆಯನ್ನಿಳಿದು ಮಾದೇವ
ಬೆಡಗಿನಿಂದಡಿಯಿಡಲ್ ಗಂಧರ್ವಚಕ್ರಸಹ ರಥವು ಪಾತಾಳಕಿಳಿಯೆ ೩೦

---

1 ವರ್ಷರ (ಗ) 2 ಕಂಪ (ಕ)

ಆ ಸಮಯದೊಳ್ ವಿಷ್ಣು ತಪದಿಂದೆ ಹರಲಿಸುನೊ
ತಾ ಸಮಸ್ಸರ ಪೊರೆವ ನಂದಿಯಂ ನೆನೆದಧಿಕ
ಭಾಸುರದ ವೃಕ್ಷರೂಪನಾಂತೆತ್ತಲಾ ತೇರನೇರಿ ಶಿವ ಕಮಲಗರ್ಭಂ
ಮೋಸವಾಗದೊಲು ಹಯಗಳನಿರಿಸಿ ವಾಘೆಯಂ
ಲೇಸಾಗಿ ಪಿಡಿದು ಕೈಚಮ್ಮಟಿಕೆಯಂ ವಾಜಿ
ರಾಶಿಯಂ ಹಾಯೆಂದು ಮುಟ್ಟಿಸಲ್ ತೇರು ನಡೆದುದು ತ್ರಿಪುರದುಪಕಂಠಕೆ ೩೧

ಬಿಡದೆ ರಥದೊತ್ತಿನೊಳಗಮರಗಣ ಭೂತಗಣ
ಮೃಡಗಣ ವಿರಿಂಚಿಗಣ ವಿಷ್ಣುಗಣ ಶಕ್ರಗಣ
ಜಡಪಗಣ ಯಕ್ಷಗಣ ಕಾಲಗಣ ವೇತಾಳಗಣ ದನುಜಗಣಗಳೆಸೆಯೆ
ಬೆಡಗಿನಿಂ ತಂತಮ್ಮ ವಾಹನಂಗಳನೇರಿ
ಯೆಡಬಲಂ ಹಿಂದುಮುಂದೆಲ್ಲ ವೋಲೈಸುತಿರೆ
ಬಿಡದೆ ನಂದೀಶನಾಣತಿಯಿಂದಲಾ ದಂಡು ನಡೆತಂದುದಾನಂದದಿಂ ೩೨

ಲೀಲೆಯಿಂ ಶಿವ ತನ್ನೊಳಂಶಮಾದತುಳ ಬಲ
ಕಾಲಭೈರವಗೆ ಪಾಳಯದ ಕಾವಲನೀವು
ತಾಲೇಖವರ್ಗೇಶನಳಿಯಂಗೆ ಸೇನಾಧಿಪತ್ಯಮಂ ವಹಿಸುತನಿಶಂ
ಮೇಲೆ ಪಾಳಯದ ಭರಭಾರದ ವಿಚಾರಮಾ
ಕಾಳಿಯರಸಂಗೆ ನಿಯಮಿಸುತ ದೈತ್ಯರ ಪುರವ
ಫಾಲಾಕ್ಷದಿಂ ಸುಟ್ಟು ಬೂದಿಯಂ ಮಾಳ್ಪೆನೆಂದಾ ಹರಂ ದಂಡಿಳಿದನು ೩೩

ಭರದಿಂದಲಾ ತಾರಕಾಕ್ಷ ವಿಷ್ಟರವೇರೆ
ಮುರ ಪಂಚಜನ ಕೇತುಮಾಲಿ ಪ್ರಲಂಬ ಗಜ
ಶಿರ ಜರ್ಜರನು ಜಂಭ ಹಯಕಂಠ ವಾಮನ ವಿರೂಪಾಕ್ಷ ವಿಕ್ಷೋಭಣ
ತುರಗಾಸ್ಯ ಶಂಭುವಿದ್ರಾವಣ ನಿಕುಂಭ ದು
ಷ್ಕರಲೋಕವಿಜಯ ವಿಪ್ರಹ ವಜ್ರನಾಭಿ ಭೀ
ಕರನು ವಿದ್ಯುನ್ಮಾಲಿ ಕಮಲಾಕ್ಷ ಪಿಂಗಳಪ್ರಮುಖರುರೆ ಓಲೈಸಲು ೩೪

ಎಲೆಯಾತ್ಮಬಂಧುಗಳ್ ಬನ್ನಿ ಸಮ್ಮುಖಕೆ ನೀ
ವೊಲವಿನಿಂದೆನುತೆ ಶುಕ್ರನ ಮೊಗಂ ನೋಡಿ ತಾಂ
ಲಲಿತ ಮೃದುವಚನದಿಂ ಗುರುತಿಲಕ ಚಿತ್ತೈಸಂ ಸುರ[1]ರೆಮ್ಮ ಯು[1]ದ್ಧಕಲಸಿ

---

1 ರೆಂತುಮು (ಕ)

ಮಲಹರಂಗೆರಗೆಮ್ಮ ಸಂಹರಿಸಲೆಂದಖಿಳ
ಬಲವೆರಸಿ ಒಂದರೀ ಕಜ್ಜಕನುವೇನೆನ
ಲ್ಕಳಿಕಾಕ್ಷನೊಡನೆ ದಂಡೋಪಾಯವಂಲ್ತು ಶರಣಂಬೊಗಲ್ ಸುಖಮಹುದೆನೆ ೩೫

ನುಡಿಗೇಳ್ದು ಘುಡಿಘುಡಿಸಿ ವೀರವಿದ್ಯುನ್ಮಾಲಿ
ವೊಡೆಯ ಚಿತ್ತೈಸು ಮೃಡನೇಗೈವನೀಕ್ಷಣಂ
ಕುಡಿವೆವಮರರ ಬಲದ ಜಲಧಿಯಂ ಹರಿಯಜೇಂದ್ರಾದಿಗಳ ಕೊಲುತಲವರ
ಮಡದಿಯರ ಸೆರೆವಿಡಿವೆವಖಿಳಬ್ರಹ್ಮಾಂಡಂಗ
ಳೊಡವೆವಜಹರಿಲೋಕಗಳ ಧೂಳಿಯಂ ಮಾಡಿ
ಕಡಲೇಳರಂಬುವಂ ಕುಡಿವೆವೆಂದೆನಂತ ಗಡಬಡಿಸಿ ನುಡಿಯಲು ದೈತ್ಯರು ೩೬

ಇಂತಖಿಳ ರಾಕ್ಷಸರ್ ನಾನಾಪ್ರತಾಪಂಗ
ಳಂತುಸುರೆ ತಾರಕಾಕ್ಷಂಗೇಳ್ದು ನಲವಿನಿಂ
ತಿಂತಿಣಿಪ ಬಹುವಾದ್ಯನಿನದದಿಂ ಪೊಗಳ್ವ ಭಟ್ಟಾಳಿಯಿಂ ಪೊರವಂಡುತ್ತೆ
ಸಂತಸದೆ ಸುರರ ಪಾಳೆಯವ ನೋಡಂವೆನೆನು
ತ್ತಂತಧಿಕ ಸಾಲದ ದ್ವಾರಗೋಪುರವಡರಿ
ನಿಂತು ನೋಡಲ್ ವಿಶ್ವಕರ್ಮನಿರ್ಮಿತವಾದ ಪಾಳೆಯಂ ಕಂಗೆಸೆದುದು ೩೭

ಕೈಲಾಸ ವೈಕುಂಠ ಸತ್ಯಲೋಕಂಗಳಂ ವಿ
ಶಾಲ ವಿಬುಧೇಶ್ವರ ಮಹಾನಿವಿಂಷಜನ ವಕ್ತ್ರ
ಕಾಲರಕ್ಷೋ ವರುಣ ವಾಯು ಧನಪತಿ ರುದ್ರರೆಣಿಕೆಗೊಪ್ಪಿಹ ಸುರರ್ಗಳಂ
ಕಾಲಚಕ್ರದ ಬೀಡಿನೊಳ್ ತಿರುಗುತಿರುವ ರವಿ
ಪ್ರಾಲೇಯಕರ ಕುಜ ಗುರಜ್ಞ ಭಾರ್ಗವ ಮಂದ
ರಾಲಂಬ ಮಂಡಲಂಗಳ ಫಣಿಪನ ನಗರಂಗಳೆನ್ನಲ್ಲಿಯೆ ಕಂಡನು ೩೮

ಭೂಮಿ ಬೆಸಲಾದವೊಲ್ ಮೆರೆವ ಪಾಳೆಯಗಾಣು
ತಾ ಮಂಹಾರಕ್ಕಸರ್ ಹೃದಯಕಂಪನಗೊಳು
ತ್ತೀ ಮುಪ್ಪುರಕ್ಕೆ ಕಡೆಯೆನಲಲ್ಲಿ ಸತಿಯರತಿನೊಂದು ಗುಜುಗುಜುಗುಟ್ಟುತ್ತೆ
ಸೋಮಶೇಖರ ಕೆಟ್ಟೆವಯ್ಯಯ್ಯೊ ಎನಲು ಮಂ
ತ್ತಾ ಮಾಳ್ಕೆಯಿಂದ ಶುಭಚಿಹ್ನಂಗಳುದಿಸುತಿರ
ಲಾ ಮಹೇಶಂಗಾರು ನವಿಂಸಿ ದಿಕ್ಪಾಲಕರು ಕಜ್ಜವೇನೆಂದು ಕೇಳೆ ೩೯

ಹರನೈದೆ ಸುರಪಾದ್ಯ ದಿಕ್ಪಾಲಕರ್ಗೆ ತಾಂ
ವರ ಭೂಷಣಾದಿವುಡುಗೊರೆ ವೀಳಯಂಗೊಟ್ಟು
ಭರದಿಂದ ತ್ರಿಪುರಕ್ಕೆ ಲಗ್ಗೆಯಂ ಮಾಡೆನಲ್ ದಿಗಧೀಶರತಿಮೋದದಿಂ
ಶರಣೆಂದು ರತ್ನಮಣಿಕನಕವಮೌಕ್ತಿಕ ಮಹಾ
ಭರಣಂಗಳಿಂದೆಸೆವ ವಾಹನಂಗಳನೇರಿ
ತರತರಂಗೊಂಡುಲಿವ ಛತ್ರಚಾಮರ ಸಿಂಧ ಸೀಗುರಿ ಪತಾಕಾಳಿಯಿಂ ೪೦

ಪೊಡೆವ ಭೇರಿಯಂ ಮಡ್ಡು ಡೌಡೆ ದುಂದುಭಿ ಢಕ್ಕೆ
ಯೆಡೆವಿಡದೆಯೊದರ್ವ ನಿಸ್ಸಾಳ ದಿಕ್ಕುಗಳು ಗು
ಮ್ಮೆಡುತಿರಲ್ ಪಾಠಕರ ತಂಡ ಬಲಭೇದಿ ಜಂಭಧ್ವಂಸಿಯೆಂದು ಪೊಗಳೆ
ನಡೆಸುತಾನೆಯನಾಗ ತ್ರಿಪುರಮಂ ನೋಡಲ್ಕೆ
ಯೆಡೆವಿಡದೆ ತನ್ನಸುರಸೇನೆ ಧಳಧಳನೆ ಬರ
ಲೊಡನೊಡನೆ ಕಾಣಿಸಿತು ತ್ರಿಪುರವತಿ ಚಿತ್ರದಿಂ ಕಂಗೆ ಕೌತುಕವ ಬೀರಿ ೪೧

ಏನೆಂಬೆನಷ್ಟದಿಕ್ಪಾಲಕರ್ ತಂತಮ್ಮ
ಸ್ಥಾನಂಗಳಿಗೆ ತೆರಳ್ದು ನಡೆಯೆ ಚತುರಂಗಬಲ
ಸಾನುರಾಗದೆ ಭಟ್ಟಕೋಟಿಯಾ ಶಿವನ ಬಿರಿದಾವಳಿಯನೆತ್ತಿ ಪೊಗಳೆ
ಮಾನದಿಂ ಗರುಡಗಂಧರ್ವ ಯಕ್ಷೋರಗರ್
ನಾನಾ ಪಿಶಾಚ ಗುಂಹ್ಯಕ ಸಿದ್ಧ ಕಿಂಪುರುಷ
ರಾ ನಗರಗೋಪುರಕೆ ಖೋಯೆಂದು ದಿಕ್ಕುದಿಕ್ಕಿಗೆ ಲಗ್ಗೆವರಿಯಲಾಗಿ ೪೨

ಜೀರ್ಗುಡಿಸಿದವು ಕಹಳೆ ಹೆಗ್ಗಾಳೆಗಳ್ ಬಹಳ
ಭೋರ್ಗರೆದವರರೆ ದುಂದುಭಿಭೇರಿ ಪಟಹಾಳಿ
ನೀರ್ಗಳಂ ಲಂಘಿಸುತ್ತಗಳ ಗಗ್ಗರಿ ದಾಂಟಿ ಕೋಟೆಯಂ ತವೆ ಸೇರುತೆ
ಆರ್ಗಾಗದೆಂಬ ಬಿರುದಂ ಪೊಗಳಿಸಿಕೊಳುತ್ತ
ಕೂರ್ಗಣೆಗಳಿಂದ ತಲೆಯೆತ್ತಲೀಸದೆಯಿಡುತ
ಕಾರ್ಗಾಲದಲ್ಲಿ ಮೋಹರಿಸಿದಂಬಂದದ ಸಿಡಿಲಂತೆ ಘುಡುಘುಡಿಸಿಯೇರಿ ೪೩

ಪೊರಕೋಂಟೆಯಂ ಕೊಂಡು ಸೆನೆಸೂರೆಯಂ ಮಾಡಂ
ತಿರಿದಿರಿದು ತರಿತರಿದು ಜರೆದು ಬೊಬ್ಬಿರಿದುಬಹ
ಸುರಬಲವ ಕಂಡಾಗ ದೊಡ್ಡರಕ್ಕಸರು ಪೆರ್ಗುಂಡು ಕಲ್ಲುಗಳ ಪಿಡಿದು

ಮರಗಳಂ ಕಿಳ್ತಾರ್ದಿಡುತ ಬಡಿವುತಂ ತರುಬೆ
ಭರದಿಂದ ಪುರಜನಂ ಕಲ್ಗುಂಡು ಕವಣೆ ಕೈ
ಗೊರಡು ದಡಿ ಮುಂತಾದವಂ ಕೊಂಡು ಸುರಪತಿಯ ಸೇನೆಯಂ ಬಡಿದರಾಗ ೪೪

ಕೆಲರ ತಲೆಯೊಡೆದು ಕೆಲಕೆಲರಸ್ಥಿ ನುಗ್ಗಾಗೆ
ಕೆಲರಂ ಕೈಕಾಲ್ಮುರಿದು ಸಂದು ಸಂದುಂ ತೊಲಗಿ
ಕೆಲರಂ ರಕ್ತದಿ ನಾಂದು ಕಣ್ಗಾಣದಳಲಿ ಬಳಲುತ ಬರ್ಪ ಬಲವ ಕಂಡಂ
ಪಲಗಣ್ಣನಾನೆಯಂ ನಡಸುತ್ತಲಂಜದಿರಿ
ನೆಲೆ ನಿಲ್ಲಿ ಪೆರ್ಬಲವ ಮುಂದಕ್ಕೆ ನಡಸಿಯೆಂನೆ
ಬಲವಂತರೆಯ್ದಿ ಮಬ್ಬಿಗ ಸೇನೆಯಂ ಚುರ್ಚುತಂ ಕೊರ್ಚುತಂ ನಡೆಯಲು ೪೫

ಇದೆಬಂದನಿಂದ್ರನಿದೆ ಬಂದಗ್ನಿ ಜವಬಂದ
ನಿದೆಬಂದ ಮಾನವರಥಂ ವರುಣನಿದೆಬಂದ
ನಿದೆಬಂದ ವಾಯುವಿದೆಬಂದ ಯಕ್ಷೇಶನಿದೆಬಂದನೀಶಾನನೆಂದು
ಪಧೆದು ಪೂಣುತ್ತೇಣಿಗಳ ದಿಕ್ಕುದಿಕ್ಕಿನೊಳ್
ಕದುಬಿ ನಿಲಿಸುತ ಬೊಬ್ಬಿಡುತ್ತಾಲುತಾರ್ದುಮು
ತ್ತದಿದೆನ್ನ[ದ]ಖಿಳ ಬಲವಂ ಸಪರಲಾಗಸದಿ ಗರುಡ ಗಂಧರ್ವರುಲಿಯೆ ೪೬

ಅಲ್ಲಿಯಂ ನಿಶಾಚರರ ಚರಗತಿಭಯಂಗೊಂಡು
ತಲ್ಲಣಿಸುತೆದೆಗುಂದಿ ಬಾಯಾರಿ ಮೊಗಬಾಡಿ
ನಿಲ್ಲದೋಡಲ್ಕಂಡು ಕಾಲಮೇಘದ ತೆರದಿ ಘುಡುಘುಡಿಸಿ ತಾರಾ[1]ಕ್ಷನಂ[1]
ಬಲ್ಲಿದರ್ ಬಂದು ಪೊರಕೋಟೆಯಂ ತೆಗೆದುಕೊಂ
ಬಲ್ಲಿ ನಮಗೆಚ್ಚರಿನಿತಿಲ್ಲ ಗಡ ಪೌರುಷಮಿ
ದೆಲ್ಲಿಯಡಗಿದುದೊ ಹಾಯೆಂದು ಬಿಸುಸುಯ್ದು ಗಲ್ಲದಿ ಕರವನಿಡಲು ಕಂಡು ೪೭

ಪುರ್ಬುಗಂಟಿಕ್ಕುತ್ತ ಮರ್ಬಿಗರ ರಾಯರುರೆ
ಕೊರ್ಬಿನಿಂ ಪಲ್ಗಡಿವುತುರ್ಬಿ ಮೀಸೆಯ ತಿರ್ದು
ತೊರ್ಬರೊಬ್ಬರ್ ಕಣ್ಗಳೊಳಗೆ ಕೆಂಜುರಿಯುಗುಳ್ದಾರ್ಭಡಿಸುತಾಕ್ಷಣದ[2]ಲಿ[2]
ಜರ್ಬುತಂತಮರ ಸೇನಾಧಿಪರ ತತಿಯ ನಿ
ಮ್ಮುರ್ಬಿನಿಂ ಪೋಗವರ ಸರ್ಬರಂ ಸದೆಯಿರ್ಕೈ
ದುರ್ಬುದ್ಧಿಯಿಂ ಕೆಟ್ಟರಿನ್ನೇನೆನುತ್ತಾಗ ಗರ್ಬದಿಂ ನುಡಿದರವರು ೪೮

---

1 ರಾಕ್ಷಸಂ (ಕ) 2 ಳ್ಳಿ (ಗ)

ಪತ್ತಿ ಕತ್ತಿಗಳೆತ್ತಿವೊತ್ತೊತ್ತೆಯಿಂ ಸುರರ
ವೊತ್ತಮಂ ಕೆತ್ತೆತ್ತದತ್ತಿತ್ತ ವಿಸುಕದೊಲ್
ತತ್ತರಂದರಿವುತ್ತ ಸತ್ತಸತ್ತರನ್ನೆದೆಯೊತ್ತೊತ್ತೆ ರಾಶಿಗಳನು
ಬಿತ್ತದೇ ಮಾರ್ವಲಿಸು ಚಿತ್ತದಿಂ ಸುರಸೇನೆ
ಸುತ್ತಿ ಮತ್ತೊತ್ತರಿಸಿ ಸುತ್ತುವಳಯೆಂ ಪಾರು
ತುತ್ತಮಾಂಗವ ಕಡಿದು ಕುತ್ತುತ್ತ ಮಬ್ಬಿಗರ ಕೊಬ್ಬನೆಲ್ಲವ ಮುರಿದರು ೪೯

ಮುಪ್ಪುರಂಗಳನೆಯ್ದೆ ಪೊಕ್ಕು ಸುರಸೇನೆಯುಂ
ತಪ್ಪದೇ ಕಾಣುತ್ತ ಹರಹರಾ ಈ ತ್ರಿಪುರ
ಕಪ್ಪದೆ ಪ್ರಳಯವೆಂದಿರ್ದವಿಂತಾಯ್ತೆಯೆಂದು ಜನ ಗುಜಗುಜಂಗುಟ್ಟಲು
ಒಪ್ಪದಿಂ ವೀರವಿದ್ಯುನ್ಮಾಲಿ ಕಮಲಾಕ್ಷ
ರಪ್ಪ ರಾಕ್ಷಸಪತಿಗಳರಮನೆಯ ಪೊರಮಡುತ
ಕಪ್ಪುಗೊರಲನ ಕಾಣ್ಬೆವೆನುತ ಕರಿತುರಗರಥಕೋಟಿಕೋಟಿಯ ಮಿಾಟಿನ ೫೦

ಆಟೋಪದಿಂದೆ ವಿದ್ಯುನ್ಮಾಲಿ ಬರಲತಿ ಸ
ಘಾಟದೊ[1]ಳಗ[1]ವನೊಡನೆ ಮದಶಲಭಗ[2][ಜ][2] ಶುಂಭ
ಮಿಾಟಾದ ವಿರುಪಾಕ್ಷ ವಿದ್ರಾವಣಂ ಮಹಾನಾಭ ದಳಪತಿಗಳೊಪ್ಪೆ
ಸಾಟಿಯಿಲ್ಲದಲೆ ಗಗಣಾಂಗಣದೆ ನಡೆವಧಿಕ
ಕೊಟವೀ ಭಯತೇರ್ಗಳೆರಡೆರಡು ಪದ್ಮದಿಂ
ನೋಟಕಚ್ಚರಿಯಾದ ಸಾಸಿರದ ದಳಪತಿಗಳಿಂದ ಪದ್ಮಾಕ್ಷ ನಡೆದಂ ೫೧

ನರಸಿಂಹ ಶರಭ ಪದ್ಮಜ ಭೈರವಂ ಶಕ್ರ
ಗಿರಿವಜ್ರ ವನ್ನಂಬು ಯಮತಿಮಿರ ಭಾಸ್ಕರಂ
ನಿರುತ ಮದಗಜ ಸಿಂಹವೃಕೋರಗಂ ಯಕ್ಷಪತಿವನ ಸುದಾವಾನಳಂ
ಹರವಾರ್ಧಿ ಬಾಡಬರ್ ಬಂದರಿದೆ ಬಂದರೆಲೆ
ನರಸುರೋರಗರೆಲ್ಲ ಕೆಲಸಾರಿ ಸಾರೆನು
ತ್ತಿರದೆ ಕಹಳೆಗಳೊದರೆಯಖಿಳದಿಕ್ಕುಂ ಬೆದರೆ ದೇವತತಿಗಳ್ ಪದರಲು ೫೨

ಮುಂದೆ ಸಂದಣಿಸಿಯಾಳ್ವೇರಿ ಕೋಂಟೆಯನೇರ್ದ
ರಂದಂ ಶೂಲದೊಳಿರಿದು ಮುಸಲ ಮುದ್ಗರ ಖಡ್ಗ
ದಂದವಮಾದಾಯುಧದೆ ಬಡಿಬಡಿದು ಕಡಿಕಡಿದು ಬಿಳ್ದು ಪೆಣದೊಟ್ಟಿಲ್ಗಳಂ

---

1 ಳ್ಕ (ಕ) 2 ಜಶಿರ (ಕಗ)

ಮಂದೇಹರತಿ ಭೂತಪತಿಗಳ್ಗೆ ಬಲಿಗೊಡ
ಲ್ಕಿಂದರಂ ಬಲಪಲಾಯನವಮಾಗೆ ನಿಲ್ಲಿಸುತೆ
ಛಂದದಿಂದಸುರಸೇನೆಯ ಪೌಜು ನಿಂದುಭಯಂವ್ಯೂಹಮತಿ ಕರಿಯಾಗುತೆ ೫೩

ಏನಿರ್ಪೆಯಣ್ಣ ತಮ್ಮಂದಿರೆಂದತಿ ಕೋಪ
ದಾ ನುಡಿಯ ಬಿಡದೆ ನುಡಿವುತ ಸೆಣಸಿದರ್ ವಂದದೊ
ಳೇನೆಂಬೆ ಮುಸಲಾಮುಸಲಿ ಮುದ್ಗರಾಮುದ್ಗರಿಯಲಿ ಖಡ್ಗಾಖಡ್ಗಿಯಿಂ
ಹಾನಿಗೊಡದಾ ಹಣಾಹಣಿಯು ಮುಷ್ಟಾಮುಷ್ಟಿ
ಜೀನಾದ ಹಯಂ ಹಯಕೆ ಕರಿ ಕರಿಗೆ ರಥ ರಥಕೆ
ಮಾನದಿಂ ಕಾದಲಸುರರ ಬಲಂ [1]ಖೋ[1]ಯೆನಂತ್ತಾರ್ದಮರರಂ ಕಡಿಯಲು ೫೪

ಬಿಡದಿದಿರಿಸಲ್ಕಟ್ಟಿ ಕುಟ್ಟಿದರ್ ತಲೆಗಳಂ
ಕಡಿದು ರುಂಡಂ ಕೆಡೆದರರೆ ಮುಂಡಂ ನಡೆದ
ರಡಿಯಿಡುತ ಸುರಸೇನೆಯೋಡೆ ಹರುಷಂ ಮೂಡಿ ರಕ್ಕಸರ್ ನಲಿದಾಡಲಂ
ಫಡಫಡಾಯೆಂದಗ್ನಿ ಬಲಗೂಡಿಯಸುರರಂ
ತಡೆದು ಕಾದುತ್ತಿರಲ್ಕಾಕ್ಷಣ ಸಹಸ್ರಾಕ್ಷ
ನೊಡೆಗೊಡದೆ ರಕ್ಕಸಾ ಕುನ್ನಿ ಬಾಯೆನಲಾರ್ದು ಜಂಭನಂ ಬಂದೋಡುತೆ ೫೫

ಎಲೆ ಸುರಪ ಕೋಯೆನುತ ಶರವರ್ಷಮಂ ಸುರಿಯ
ಲೆಲೆ ನೋಡೆನುತ್ತಾಗ ಬಾಣಮಂ ಬಾಣದಿಂ
ದಲಿ ಪೊಣರ್ಚುತ್ತವನ ಧ್ವಜಮೇಕಶರದಿಂದುರುಳ್ಚೆ ಮೇಣವನೆ ತಿರುಗಿ
ಕಲಿಯಾಗಿ ನೀಂ ಜತ್ತುವೇ ಎನುತ್ತಾರ್ದು ವಂದ
ವಲರಿ ಖಗಗತಿಕಳಂಬದ ವೃಷ್ಟಿಯ ಸುರಿಯೆ ಜ
ಗಳದಲೀಯಖಿಳ ಸೇನಾಚಕ್ರದೊಳ್ ವಿಕ್ರಮದಿ ನಿಲಿಸಲವ ತೆರಳಂತೆ ೫೬

ಮರಳಿಯಾರೋಪರೋಪಂ ಕಾದೆಯಸುರಶರ
ಮಿರದೆ ಸುರರೆರೆಯನೊಡಲಂ ತಾಗಲತಿನೊಂದು
ಸುರಪ ವಿದ್ಯಾಧರನನ್ನೈದಂಬಿನಿಂದವನ ಸಾರಥಿಯ ಪದಿನಾಲ್ಕಹ
ಶರದಿಂದ ಸಂಹರಿಸೆ ಜಂಭನಳಿವಂ ಕಂಡು
ಭರದಿ ವಿದ್ಯುನ್ಮಾಲಿ ಸರಲ ಸುರಿವುತ ಸುರರ
ಜರಿವುತೆಲೆಯಿಂದ್ರ [1]ಖೋ[1]ಯೆನುತ ಖಗದೊಳಿಡಲ್ಕಾಗ ಕಡೆಗಾದನಿಂದ್ರಂ ೫೭

---

1 ಭೋ (ಕ)

•ಸಾರ್ವರಾರೆನ್ನಿದಿರೊಳೆಂದು ವಿದ್ಯುನ್ಮಾಲಿ
ಪಾರ್ವತೀಶನ ಮುಂದೆ ಬರೆವೊ (?)
ಪಾರ್ವತೀಯಂ ಸಿಂಜಿನಿಯ ಮಿಡಿಯಲಾ ರವಂ ಗುಮ್ಮಿಡಲ್ ಲೋಕಾಳಿಯಂ
ಭೋರ್ಗರೆದವರರೆ ಭವಹರಿಯಜರ ಸತಿಯರ್ಕ
ಳೋರೋರ್ವರತಿಭಯದಿ ಪಾಮಾಂಗಹ್ಯನ್ಮುಖವ
ಸಾರ್ದರಾ ತ್ರಿಪುರದರಸಿನ ಕಾಲುಮಂದಿಯುಂ ಹರಿಸದದನೇವೇಳ್ವೆನು ೫೮

ಸಿಂಜಿನೀರವಕಸುರ ಬೆರಗೊಂದಿರಲ್ಕೆ ಕಂ
ಡಂಜಲಿಯೊಳೆಲೆಯಧಮ ನಿಲ್ಲದೋಡೆಲೆ ನೀಂ ಥ
ನಂಜಯೋದ್ಭವನೊಳಿದಿರಿಸಲೀಗ ನಿನ್ನ ಪಣೆಯಂಕ್ಕರಂ ತೀರ್ದಪೆನಂತ
ಅಂಜದೇ ಮಾಗಧರು ಪೊಗಳಲ್ಕೆ ಕೇಳ್ದಸುರ
ನಂಜನುಗಂಳುತ್ತೆಂದು ವಿಸ್ತರಿಸಲದಕೊಂದು
ಬಿಂದುವಿಂಗೆರಡೆಂಟು ಪದಿನೆಂಟು ಬಿಂದುವಿಂದಾದ ಗಣನೆಗೆ ಬಂದುದೇನೆಂಬೆನು ೫೯

ಕೌತುಕಂಗೊಂಡುಭಯಂಬಲ ಕುಮಾರನ ಪೊಗಳ
ಲಾ ತೆರದ ವೀರವಿದ್ಯುನ್ಮಾಲಿಯಾ ಶರ
ವ್ರಾತಮಂ ಸೈಗರೆಯಲಮರತತಿ ಭೀಕರಂಗೊಂಡು ಗುಹನಂ ಸೇರುತ
ಏ ತಾತ ದನುಜಗೆಂತೀ ವಿದ್ಯ ಘಟಿಸಿತ್ತೆ
ಸಾತಿಶಯಮೆಂದಂ ಕೊಂಡಾಡೆ ಗುಹ ಖತಿಗೊಂಡಂ
ಶ್ವೇತಾದ್ರಿನಂದನೆಯ ಶರಗಳನಸುರ ತೊಡಲ್ ಸುರರು ವಿಸ್ಮಯಗೊಂಡರು ೬೦

ಈ ಪರಿಯೊಳಿಟ್ಟ ಸರಳಲ್ಲಲ್ಲಿ ಕೀಲಿಸ
ಲ್ಕೀ ಪರಮಶರಕಲಾಸಾರ್ವಭೌಮಂನು ಮೇರು
ಚಾಪನುರೆ ಕುವರ ನಿನಗೆಣೆಗಾಣೆಮೆಂದು ಪೊಗಳಲ್ಕೆ ವಿದ್ಯುನ್ಮಾಲಿ ತಾ
ನೇಪರಿಯೊಳವ ಮೂರ್ಛೆಯಿಂದೆದ್ದು ಗಳಹುತ್ತ
ಕೋಪದಿಂದಹಿಬಾಣಮಂ ಬಿಡಲ್ಮುಗ್ಗಿಹ ನಗುತೆ
ಭಾಪು ಕೊಳ್ಳೆಲೊ ಎಂದುತಾರ್ಕ್ಷ್ಯ ಬಾಣದೊಳಿಟ್ಟು ಖಂಡಿಸಲ್ ಗಹಗಹಿಸುತೆ ೬೧

ಗಿರಿಶರದೊಳವನಿಡಲ್ ಗುಹ ವಜ್ರಬಾಣದಿಂ
ದರರೆ ಕತ್ತರಿಸಲ್ಕೆ ವೀರವಿದ್ಯುನ್ಮಾಲಿ
ಯಿರದೆಯಭ್ರಾಸ್ತ್ರಮಂ ಕರೆಯಲ್ಕೆ ಶಿವಸುತಂ ಪವಮಾನಶರದೊಳರಿವಂ

• ೫೮ನೆಯ ಪದ್ಯದಲ್ಲಿ ಪ್ರಾಸ ಮತ್ತು ಛಂದಸ್ಸು ಕೆಟ್ಟಿದೆ.

ಭರದೆ ಮಬ್ಬಿಗ ಮಂಬ್ಬಿನುರುಬಾಣಮಂ ಬಿಡಲ್
ಹರಸೂನು ರವಿಯು ಬಾಣದಲಿ ಸಂಹರಿಸಿ ನಿ
ಶ್ಶರನಾದೆ ಪೆರಸಾರೆನಲ್ಕಾತನೀತನಂ ಶರಪೆಂಟರಿಂದಿಟ್ಟನು ೭೨

ಆಷ್ಟಮೂರ್ತಿಯಾ ಕುವರನಂತರದೊಳವ ತರಿದಂ
ಧೃಷ್ಟನಿನಗೆಲ್ಲಿಯದು ಕಾಳಗವುಯೆನಂತೆಯುಂ
ತೃಷ್ಟಶಕ್ತಿಯ ಬಿಡಲ್ಕಿದೆ ಡೋರುಗೊರೆದು ಗಂಗೆಯೊಳು ಮಾವುತೆ ಕುವರನ
ಇಷ್ಟ ತೂಣೀರವಂ ಸಾರೆ ಸೇನಾನಿ ನಿಲೆ
ನಷ್ಟವೈದಿಸಂತ ಕೇವಲಮಸುರಬಲಮಿಂದ್ರ
ತುಷ್ಟಿಯಿಂದಿರಲಿದಂ ಕಂಡು ಪದ್ಮಾಕ್ಷ ಗೋಳಿಟ್ಟನುಜ ಶವವ ಕಳುಹಿ ೭೩

ಪಟುಕೋಪದಿಂದೆ ಕಮಲಾಕ್ಷ ಬಲಮಂ ನೋಡೆ
ಘಟಕೋಟಿಕೋಟಿಯಿಂ ಮತ್ತದಂತಿಗಳ ತಾಂ
ಪಟಂಗಮನೆದಿಂ ತಿರಂಗಿ ಯುದ್ಧಕಭಿಮುಖವಾಗೆ ಭೇರಿಯಾರ್ಭಡಿಸಲವರ
ತಟಿನಿಬರ[1]ತು[1]ದು ದಿಕ್ತಟಂ ಕಿವುಡುಬೀಳೆ ಸುರ
ಪಟುಸೇನೆ ಕಾಲ್ಗೆಡಲ್ಕಸುರರಲಿ ದೊರೆವಿಂಡು
ಕಟಕಟಿಸಿ ತಟತಟನೆ ಪಟುಭಟರ್ ಸುರರ ಸಂಹರಿಸುತೆಚ್ಚಾಡಿದರಲ ೭೪

ಏನೆಂಬೆನಮರರಂ ಕೊರ್ಚುತಂತುರ್ಚುತಂ
ತಾ ನವ್ಯದಿಕ್ತಟಕ್ಕಿಡುಂತಲುಂ ತೊಡುತಲುಂ
ಭಾನುಮಂಡಲಕೈದಿ ಕಾದಂತಂ ಮೋದುತಂ ಬಹುವಿಧದ ಚಿತ್ರದಿಂದ
ದಾನವಖಳರ್ ಬಿಡದೆ ಕರ್ಚುತಂ ಪೆರ್ಚುತಂ
ಸಾನುಮತ್ಕುಲಗಳಂ ನುಗ್ಗುತಂ ನೆಗ್ಗುತಂ
ನಾನಾಪರಿಯನರಿದು ಕೊಲುತಿರಲ್ ಕೊಲೆಗಾರದಳಲಿ ಶಿವಧೋ ಎನುತ್ತೆ ೭೫

ಇಂಶಿವರ ಮೊರೆಗೇಳ್ದು ವೀರರೌದ್ರಂ ತಾಳ್ದ
ನಂತಬಲದೊಡಗೂಡಿ ಭೂತತತಿ ನಲಿದಾಡೆ
ಕಂತುರಿಪುಸುತ ನಡೆಯೆ ನುಡಿಯಲತಿಕಹಳೆಗಳಿದೇ ಬಂದ ಬಂದವೆನುತೆ
ಸಂತಸದೊಳಸುರರೆದೆಬಿರಿಯೆ ಬಿರಿದುಗಳಾಂತ
ನಂತಸುರ ದಾನವಶಿರೋಮಾಲಿ ಕೋದಂಡ
ನಂತಕಾಂತಕ ತೆರಳ್ದನೆಂದು ಮಾಗಧರುಲಿಯೆ ನಲಿದಖಿಲನಿಕರವಲೆಯೆ ೭೬

ತೆಗೆಯಿರ್ಪೆ ಸುರರೆನುತವುಗಿದೊರೆಯ ಸುರಗಿಯಿಂ
ಬಗೆಬಗೆಯ ಪೌಜುಂಗಳ ತರಿವುತಂ ಇರಿವುತಂ
ಪಗೆಯ ಬಂದೊಳಗೆ ಭಟರುಗಳೊಡ್ಡಿದೇ ಸಾರಿಯೆಂದು ಬಿರಿದಂ ಸಾರಿಸಿ
ಬಿಗಿಬಿಗಿದು ಪೊಟ್ಟೆಗಳ ಸುಗಿಸುಗಿದಂ ಸಮ್ಮಂಗ
ಟೊಗೆದೊಗೆದು ಕಾಲ್ದಿರುಪಿ ರಕ್ತಮಂ ಬಗಸೆಯಿಂ
ಮೊಗೆಮೊಗೆದು ಕುಡಿವುತಂ ಮಿದುಳ ನೆರೆಕಡಿವುತಂ ಭೂತತತಿಯಾಹವದೊಳು ೬೭

ಆಟ್ಟಿದಂ ಮೆಟ್ಟಿದಂ ಕೆಂಟ್ಟಿದಂ ಸುರಗಿಯಿಂ
ತಟ್ಟಿದಂದೊಟ್ಟಿದಂ ಕಟ್ಟಿದಂ ಪಾಶದಿಂ
ದಿಟ್ಟನತಿಬಲದೊಳಗೆ ಒಟ್ಟಿದಂ ಪೆಣಗಣಂ ಸುಟ್ಟನುರಿಗಣ್ಣೆನಿಂದ
[2]ಅ[2]ಟ್ಟಿಯಾಡುತೆ ಸರ್ವದೈತ್ಯರಂ ಸದೆಬಡಿದು
ತಟ್ಟುಗೆಡಹಲ್ಕಾಣುತೆಂದು ತಾವರೆಗಣ್ಣ
ನೆಟ್ಟನೆಲೆ ಜನ್ನಗೂಳರ್ ಕೊಂದು ಪೆಸರಾದೆಯಲ್ಲವೇ ಬಿಡೆ ನಿನ್ನನಂ ೬೮

ಗಂಡುಹೆಣ್ಣಾದ ನರಸಿಂಹಾದ್ಯರಂ ಕೊಂದು
ಗಂಡುಮೀರಿದ ನಿನ್ನ ಮುರಿವೆ ಬಿಡೆ ಮತ್ತಮಾ
ಖಂಡಲಾದ್ಯರ ತುಹಿನನಗದೊತ್ತಿನಲ್ಲಿರದೆ ಕೊಂದ ಮಾಳ್ಕೆಯೊಳೀಗಳೆ
ದಿಂಡುಗೆಡಹುವೆ ವೀರಭದ್ರನೇ ಎಂದಾರ್ದು
ದಂಡಮಂ ಪಿಡಿದು ಬಿಲ್ಲಿನ ಶರಗಳಿವೆ ಮಂಹೋ
ಮಂಡಲದಿ ನಿನ್ನ ತಲೆಯೆಂಬ ವಸ್ತುವಿಗೆ ಪಣವೆಂದು ಬೊಬ್ಬಿರಿದೆಸೆಯಲು ೬೯

ವೀರನಂತರದೊಳಾ ಶರಗಳಂ ಖಂಡಿಸು
ತ್ತಾರುಂತೆಲೆ ನಿನ್ನ ತಲೆಗೊಂದು ಪಣೆಗೈದು ಬಾ
ಯ್ಗಾರಂ ಕೊರಳೆರ್ದೆಗೆಂಟುಂ ಪೊಡೆಗೆ ನಾಲ್ಕೇಳು ತೇರಿಂಗೆ ಪತ್ತಶ್ವಕೆಂದು
ಮೂರಾರಿಸುತನಸವಂಶರಗಳಂ ಕೀಲಿಸಲ್
ಪಾರಾಗಿ ನೊಂದು ಮೂರ್ಛಿತನಾಗಿ ಮಗುಳೆದ್ದು
ತೇರಮಂತ್ತೊಂದೇರಿ ಪ್ರತ್ಯಸ್ತ್ರಗೊಂಡು ಘರ್ಜಿಸುತೆಂದನಾ ದನುಜನು ೭೦

ಎಲೆ ವೀರ ನೀಂ ಪೋಗದುಳಿದೆಯಾದೊಡೆ ನಿನ್ನ
ತಲೆಗೊಂಬೆ ನೆಲೆಯಾಗಿ ನಿನ್ನ ತಾಯ್‌ತಂದೆಗಳ್
ಪಲುಬುವರ್ ಗಡ ಕಡೆಯೊಳೆನಲಾ ಗಳಹದಿರಧಮ ಬಿಟ್ಟು ನೋಡೆನಲಾಲುತೆ

1 ಪು (ಕ) 2 ಕಿ (ಕ)

ಬಲುಶಕ್ತಿಮಾರ್ಗಣಂ ಬಿಡೆ ಬೆಟ್ಟಬೆಟ್ಟದೊಲ್
ಮಲೆತಾಸ್ಫುಲಿಂಗಗಳ್ ಶರಧಿಗಳ ಪೀರ್ದು ದಿ
ಗ್ವಲಯ ಲೋಕಾದಿ ಲೋಕಂಗಳಂ ಗೋಳುಗುಟ್ಟಿಸುತ ಸಿಡಿಲಿನ ರೀತಿಯಿಂ ೭೨

ಪಿರಿದಾಗಿ ಬಂದಧಿಕ ಸುರಸೈನ್ಯ ಚಕ್ರಮಂ
ತರುಬಿಯಾರ್ಭಡಿಸಿ ಪೆರ್ಗಿಡಿಗಳಂ ಛಟಛಟನೆ
ಯುರುಬಿ ದಹಿಸಲ್ ಮೊರೆಯೊ ಮೊರೆಯೆ ಸಾಲ್ಕೃದಂಬಿನಿಂದದಂ ಖಂಡಿಸುತ್ತೆ
ದುರುಳರಕ್ಕಸನೊಳಿಂತೆಷ್ಟುದಿನ ಯುದ್ಧವೆಂ
ದಿರದೊಂದು ಕಣೆ[1][ಯಿಂದಿ][1]ಡಲ್ಕೆರ್ದೆಯೊಳೇ ಮತ್ತೆ
ಪುರಕೊಯ್ದು ತಾರಕಾಕ್ಷನ ಮುಂದೆ ಶೋಣಾಂಬುವಂ ಸುರಿಸಿ ಪಾಯ್ಕಲವನ ೭೩

ಪೆಣನ ಕಾಣುತ್ತ ಕಣ್ಣೊಳ್ ಜಲಕಣಂಗಳವು
ಮಣಿಯೊಲುರುಳುತ್ತಿರಲ್ ಭಿಣಿಭಿಟಿಲ್ ಭುಗಿಲೆಂಬ
ಮುನಿಸಿನುರಿಯಿಂ ವೀರಭದ್ರಾದಿಗಳನೀಗ ಕಾಣುತ್ತ ಕೊಲ್ವೆನೆನಲು
ಮಣಿದಾಗ ತಾರಕಾಕ್ಷನ ಸತಿಯು ತಮ್ಮನಹ
ದನುಜಶೇಖರ ಶಿಂಶುಮಾರ ವಿಲಯಾಗ್ನಿಯಂ
ತೃಣಕೆಕೊಳ್ಳದೆ ಸರ್ವ ಸುರಸೈನ್ಯಮಂ ಸುಡುವೆ ಹರಿಹರಬ್ರಹ್ಮರಿರದೆ ೭೪

ಮಾರ್ಕೊಂಡು ಬಂದಡವರಸುವಿಂಗೆಯಾಂ ಬಿಡದೆ
ನೀಕೊಳ್ಳದಂತೆ ಮಾಡುವೆನುಪದ್ರವ[ವ]ನಾಂ
ತಾರ್ಕಣೆಯ ತೋರುವೆಂ ವೀಳ್ಯಮಂ ಪಾಲಿಸು ಸಂರಾಧೀಶನೆನೆ ನಲಿವುತೆ
ಯಾರ್ಕಾಣೆ ನಿನ್ನ ಪೋಲ್ವದಟರೀ ಬಲದೊಳೆಂ
ದಿಕ್ಕೈಗಳಿಂದ ವೀಯರ್ವ ಕೊಡಲ್ ಗೃಹಕೈದಿ
ಮಾರ್ಕಾಣೆಯಂ ನಿಲವುಗನ್ನಡಿಯ ಮಧ್ಯದೊಳ್ ನೋಡಿ ಸಿಂಗರಿಸಿ ನಡೆದಂ ೭೫

ಚತುರಂಗಬಲದೊಡನೆ ಬರಲವನ ದೇಹವಂದು
ವಿತತ ದಿಕ್ತಟಗಳಂ ಪಿರಿದಾಗಿ ಸೋಂಕುತು
ನ್ನತ ಸೂರ್ಯಮಂಡಲವನಂಡಲೆವುತಿರೆ ಮುಂದೆ ನಿಂದಿಹ ಸುರರ ಬಲವನು
ಮಿತವಿಲ್ಲದಾಗಳಿಸಿ ನುಂಗುತಂ ಪೊಂಗುತಂ
ಖತಿಯಿಂದ ಕೈಗಳಿಂ ತಿಕ್ಕುತಂ ಮುಕ್ಕುತಂ
ಜತನವೆಲೆಯೆಂದಶ್ವಗಜರಥಪದಾತಿಗಳನುಡುಹು[1]ತಂ ಮೊ[1]ರಹುತಿರದೆ ೭೬

1 ಯಿ (ಕಗ) 2 ತನ್ನೊ (ಕ)

ಪಾಪಿಯೊದಾ ಶಿಂಶುಮಾರನಂ ನೋಡಲ್ಕೆ
ಯಾಪೆವೇ ದೇವ ಸಿಂಹದ ಕನಸಗಂಡ ಗಜ
ಕೇಪರಿಯು ಮರಣವಂತಖಿಳ ನಿರ್ಜರರು ಮೂರ್ಛಿತರಾದರವನ ಗೆಲಲು
ಮಾಪಾದ್ಯವಂದ್ಯಪರಶಿವನಲ್ಲದುಳಿದರ್ಗೆ
ಲೋಪಮಾಗುವನಲ್ಲವೆಂದು ಮೊರೆಯಿಡೆ ಸುರರ್
ಕೋಪದಿಂ ನಂದೀಶನಾಹವಕೆ ಪೊರಮಡಲ್ ಭೇರಿ ದಂ ದಣ ದಣರೆನೆ ೭೭

ಶೃಂಗಗಳಿನಭುಜಾಂಡಭಿತ್ತಿಯಂ ತಿವಿತಿವಿವು
ತಂ ಗಮಿಸಿ ಕಾಲ್ಗಳಿಂ ನಗಗಳಂ ಕೆದಕೆದ
ರ್ದಂಗವಾಲಾಗ್ರದಿಂ ದಿಕ್ಪಾಲಲೋಕಗಳ ಬಡಿವುತುಚ್ಛ್ವಾಸದಿಂದ
ಪಿಂಗದಸುರರ ಬಲವ ಪಾರಿಸುತ್ತೇರಿಸಂತ
ಕಂಗಳಂ ಕೆಕ್ಕಳಿಸಿ ಕಿವಿಗಳಂ ಹೆಕ್ಕಳಿಸಿ
ಪುಂಗವೋತ್ತುಂಗನಾ ಪ್ರಳಯಕಾಲದ ಶರಧಿ ಮೇರೆದಪ್ಪಿದವೊಲೆಸೆದಂ ೭೮

ಚಾರಿವರಿವುತೆ ಕಿರಿದು ನಾಗಾಲ್ಗಳಿಂದೇಳ್ವ
ಭೂರಿಕೆಂಧೂಳಿಯಿಂದಾಗಸ ಧರಾತಳಂ
ತೋರದೋಲಾಯ್ತುಭಯಸೈನ್ಯವೆಲ್ಲಳಿದು ಬಹುರಜಮಯಂ ತಾನಾಗಲಂ
ತೋರರಕ್ಕಸರ ಬಾಯೆದೆಗಂಟಲೊಳ್ತುಂಬಿ
ನೀರಿಳಿಯದಂತಾಗಿ ವಂಡಿಯಲಾ ಮೇಲಿರಂವ
ಸೂರ್ಯೇಂದುಮಂಡಲಂ ಮರೆಯಾಗೆ ಹಗಲೆಗತ್ತಲೆ ಕವಿದುದೇನೆಂಬೆನು ೭೯

ಕೆಲರ ಲಾಲಾಜಲದೊಳಾಳಿಸುತ್ತೇಳಿಸುತ
ಕೆಲರ ಡ್ರೂಂಕಾರದಿಂ ಬೆರ್ಚಿಸುತ ಮೂರ್ಛಿಸುತ
ಕೆಲರ ಉಚ್ಛ್ವಾಸದಿಂದೂದುತಂ ಮೋದುತಂ ನಾದುತಂತರಿಬಲವನು
ಕೆಲರ ಕಣ್ಣುರಿಗಳಿಂ ಮುಚ್ಚುತಂ ಚುಚ್ಚುತಂ
ಕೆಲರನಾವಾಲದೊಳ್ ತೆಗೆವುತಂ ಬಿಗಿವುತಂ
ಕೆಲರ ಕೂಡ್ಗೋಡ್ಗಳಿಂದಿರಿವುತಂ ಮುರಿವುತಂ ಪರಿವುತಂ ಭರದೊಳೈದಿ ೮೦

ಈ ತೆರದ ಉಗ್ರವೃಷಭನ ಕಂ[1]ಡಸುರರ ಪಡೆ[1]
ಖಾತಿಯಿಂ ಸುತ್ತುತ್ತ ಮುತ್ತುತ್ತ ಗಿರಿವೃಕ್ಷ
ವ್ರಾತಂಗಳಿಂದ ಶರಶಸ್ತ್ರ ತೋಮರ ಪಿಂಡಿವಾಲ ಮುದ್ಗರ ಮುಸಲಮಂ ______

---

1 ಡುಸುರಪದೆ (ಗ)

ಖ್ಯಾತಿಯಹ ಪರಶು ಪಟ್ಟಸ ಪರಿಘ ಕುಂತಾದಿ
ಹೇತಿತತಿಯಂ ಪಿಡಿದು ಕಡಿದು ಮುಂದಿಹ ಸುರರ
ಜಾತಿಯಂ ನಿಂದಿರುವ ನಂದೀಶನಂ ನೋಡಿ ಕೊಬ್ಬಿನಿಂ ಬೊಬ್ಬಿಡುತ್ತೆ ೮೧

ಎತ್ತಿನೊಳ್ ಶರಶಸ್ತ್ರಯುದ್ಧಮೆತ್ತಣದೆನುಃ
ತ್ತಿತ್ತಲಾ ಶಿಂಶುಮಾರಂ ಗಿರಿಯ ಕಿತ್ತಿಡಲ್
ಬಿತ್ತರದ ಕೊಂಬಿನಿಂ ಚಿಮ್ಮಲಸುರರ ಸೇನೆ ಶತಕೋಟಿ ಮಡಿಯಲಾಗ
ಕುತ್ತುಗೊಳುತಸುರಬರೆ ಕುತ್ತಿ ಬಿಸುಡುವೆನೆನು
ತೊತ್ತಿ ನಂದೀಶ ನಿಲಲತ್ಯಧಿಕವಾಗುತವ
ತುತ್ತುಗೊಂಡೊಡನೆ ನುಂಗಲ್ಕೆ ಪೆರೆಗೆರೆದಲೆಯನೆತ್ತಕಾಣದೆಯುಮರರು ೮೨

ಕಟಕಟಾ ನಿಟಿಲನೇತ್ರಂಗೆಯಾಧಾರದು
ತ್ಕಟಪುಂಗವನ ತಿಂದ ನಮಗೆಯಿನ್ನಾರೆನುತೆ
ತಟತಟನೆ ಮರುಗಿ ಶಿವಧೋ ಎಂದಂ ಮೊರೆಯಿಡಲ್ ಹರನವರ್ಗಭಯವಿತ್ತು
ಚಿಟುಕನೆ ಕ್ಷಣಾರ್ಧದೊಳ್ ಪೊರಮಡುವೆನೆನಲು ಕರ
ಪುಟಗಳೆತ್ತದ ಮುನ್ನ ಬಳೆದು ವೃಷನಾ ದೈತ್ಯ
ಘಟವನಿರ್ಪೋಳಾಗಿ ಸೀಳಿಯೆಡಬಲದ ಕೊಂಬುಂಗಳಿಂದಿರಿದೆತ್ತಿಯೆಂ ೮೩

ಒಂದುಸೀಳಂ ಕಂಡಮರಗಣಂ ನಲಿವುತಾ
ನಂದಿಯಂ ಪೊಗಳ್ದು ಪೂವಳೆಗರೆಯಲಾಗ ಮು
ತ್ತೊಂದುಭಾಗವ ಪುರದೊಳಿಹ ತಾರಕಾಕ್ಷನಗ್ರದಿ ಕೆಡೆಯಲಸುರೇಶನು
ಹೊಂದಿ ಮೂರ್ಛೆಯೊಳು ಬಿಳ್ದೆಳ್ದು ಹಾಹಾಯೆನು
ತ್ತಿಂದು ಜಯಲಕುಮಿ ಪೋದಳೆ ನಮಗೆಯುಮರರೊಳ್
ವೊಂದಿದಳೆ ವೀರಲಕ್ಷ್ಮಿಯು ಭಾಗ್ಯಲಕ್ಷ್ಮಿಯೆಂದಾಗ ಮನದೊಳಗೆ ತಾನು ೮೪

ಎನುತ ದುಃಖವನುಳಿದು ತಳೆದು ಧೈರ್ಯವ ಯುದ್ಧ
ಕನುವಾದ ಮೂವತ್ತುಪದ್ಮವಾಹಿನಿಯಲ್ಲಿ
ಘನದೈತ್ಯಸೇನಾನಿಗಳ ಸಾಸಿರಂವೆರೆದ ಬಲದೊಡನೆ ಪೊರಮಡುತ್ತೆ
ಬಿನುಗುದೇವರ್ಕಳಸಿಯಿಂ ಚುರ್ಚಿ ಸಬಳದುರೆ
ಮೊನೆಗಳಿಂದಿರಿದಂ ಬಾಣದೊಳೆಚ್ಚು ಕೊಡಲಿಯಿಂ
ತನುಗಳಂ ತರಿದಂ ಚಕ್ರದೊಳಿಟ್ಟು ಕೆಡಪಿಯೆಂದಾರ್ದು ಬೊಬ್ಬಿಟ್ಟನಸುರಂ ೮೫

ಎಂಬ ಮಾತಂ ಕೇಳಿ ವೀರವಿದ್ಯುನ್ಮಾಲಿ
ಯಂಬುಜಾಂಬಕ ಜಂಬ ವಜ್ರನಾಭಾಸುರ ಕ
ದಂಬಾದಿ ರಾಕ್ಷಸರು ದಿಕ್ಕುದಿಕ್ಕಿನೊಳುರುಬಿ ತರುಬಿ ತರಿತರಿದಿರಿವುತ
ಬೆಂಬತ್ತಿಯೋಡಾಡೆ ಕಡಿಕಡಿಗು ವಂಡುಪುತ್ತ
ಮುಂಬರಿದು ಮುತ್ತಿ ಸುತ್ತುತ್ತ ಕುತ್ತುತ್ತ ಬರೆ
ಯಂಬಿಕಾಪತಿ ಕೆಟ್ಟೆಯೆಮಗೆ ದಿಕ್ಕಿಲ್ಲೆಂದು ದೆಸೆದೆಸೆಯೊಳರುಚುತೋಡೆ ೮೬

ಸುರಪತಿಯಿದನು ಕಾಣುತೀಶನಡಿಗೆರಗಿ ಭಾ
ಸುರದೇವ ದೇವೇಶ [1]ಲಾ[1]ಲಿಸೈ ಬಿನ್ನಪವ
ಮರಣವಾದಸುರರೆಲ್ಲಂದಮರರಂ ಬಡಿದು ಬಗ್ಗಿಸುತ್ತಿಹನೆಂದೆನೆ
ಹರಹರಿಯು ಕರೆದಂ ತ್ರಿಪುರಕೆ ಪೋಗಿಯಮೃತವಂ
ಹರಭಕ್ತಿಯಂ ಪತಿವ್ರತತೆಯಂ ಕೆಡಿಸೆನಲ್
ಕರವ ಮುಗಿದೆನಗೆ ಸಹಚರನಾರದೆನಲ್ಕೆ ನಾರದಮಹಾಋಷಿಯು ಕಳುಹೆ ೮೭

ಬಂದ ಬುದ್ಧಾಚಾರ್ಯನಾಗಿ ಹರಿ ನಾರದಂ
ನಿಂದನತಿವೃದ್ಧಸನ್ಯಾಸಿರೂಪವನಾನು
ತಂದಂ ಪುರಮಂ ಪೊಕ್ಕು ಪನ್ನೆರಡುಲಕ್ಷ ಕಾಪ[2]ಟ[2]ಗ್ರಂಥಗಳ ಪೇಳೆ
[ಸಂದ]ಸುದತೀವಚನೆ ಪಾತಿವ್ರತಮಳಿಸುತಾ
ನೊಂದು ಕರುವಾಗಮೃತಮಂ ಪೀರ್ದು ಮುದದೊಳೈ
ತಂದಂ ವಂದಿಸಿ ಬಿನ್ನಹಂಮಾಡೆ ಗಣನಾಯಕರ್ಗೆ ಶಲವೀಯಲೊಲಿದು ೮೮

ಹೇರಂಬ ವೀರಷಣ್ಮುಖ ನಂದಿ ಭೃಂಗೀಶ
ಭೈರವಂ ಹರಿಯಜೇಂದ್ರಾದಿಗಳ್ ತಂತಮ್ಮ
ತೇರುಗಳನೇರಿ ತಂತಮ್ಮ ಕೈದುಗಳಾಂತು ಘುಡುಘುಡಿಸಿತಸುರಾಬ್ಧಿಯಂ
ಪೀರಲುಜ್ಜುಗವಾಂತ ಬಡಬಾಗ್ನಿಯಂತೆ ತಾ
ವಾ ರಮಾಪತಿಮುಖ್ಯ ನಿರ್ಜರರು ಭೋರ್ಗರೆವ
ಭೇರೀನಿನಾದಮೆಣ್ದೆಸೆಯನಾವರಿಸುತಿರೆ ಕೋಲಾಹಲಂಗೆಯ್ದರು ೮೯

ನೀನೇಕೆ ಬಂದೇಕದಂತ ಹೊಟ್ಟೆಯ ಹೊರ
ಲ್ಕೇನು ಬಲವಿಹುದು ನೀನಾಗೆನಲ್ ನಗುತ ಹರ
ಸೂನು ಪಾಶವ ಬೀಸೆಎಳೆದು ಕೆಡಪುತ್ತ ಕಡಿಕಡಿದೊಟ್ಟೆ ಪರಶುವಿನೊಳು

---

1 ಪಾ (ಕ) 2 ಟಟ (ಕ)

ಏನೆಂಬೆ ಮಬ್ಬಿಗರ ತೇರ್ಗಳಂ ಕಡಿದಶ್ವ
ಸೇನೆಗಳನೀಡಾಡಿ ರಕ್ಕಸರ ಬಲುಹಿಂಡ
ತಾನೆಯ್ದಿ ತುಂಡು ತುಂಡಂ ಮಾಡಿ ರುಂಡಮುಂಡಗಳೆಂಟುದಿಕ್ಕಿನೊಳಿಡೆ ೬೦

ಇಂತು ಕೋಲಾಹಲಂಗೈವುತಿರೆ ಜಂಭನಮು
ನಂತ ಚರಪತಿಯು ವಿದ್ಯುನ್ಮಾಲಿಯುನ್ಮಾರ್ಗ
ಗಂ ತಾರಕಾಕ್ಷನಂ ಭೈರವಂ ಕಮಲಾಕ್ಷನಂ ವೀರಭದ್ರೇಶ್ವರಂ
ಸಂತಟ್ಟಿ ಮುಂಟ್ಟಿ ಸದೆಯಲ್ಕೆ ಕೋಟೆಯ ಪೊಗು
ತ್ತಂತವರು ಪೆಟಲುಗುಂಡುಗಳ ಬಿಲ್ಬಾಣದೊಳ
ನಂತಪರಿಯಿಂ ಕಾದಲವರ ಸಂಹರಿಸಿ ಪಿಡಿಸಿದನು ಧರ್ಮದ ಕಹಳೆಯಂ ೬೧

ತಿರುಗಿ ಹೇರಂಬಾದಿಗಣಚಯಂ ಹರಿಯಜರು
ಸರಿಯಿಲ್ಲವೆಂದು ರಣರಂಗದುತ್ಸವದೊಳತಿ
ಭರದೆ ಬರುತರಿಬಲವ ಕೊಂದೆನರಸುಗಳಲ್ಲಿ ಕೆಟ್ಟೋಡಿ ಪೋದರಭವ
ನಿರತ ಚಿತ್ತೈಸೆನಲ್ ಹರ ಪಾಶುಪತ ಶರವ
ಕರೆದಂ ಪೂಡುತ್ತಸುರ ತ್ರಿಪುರವಂನ್ನೀಕ್ಷಣಂ
ತರಿವುರಿಯ ಮಾಳ್ಪೆನೆಂದತಿರೌದ್ರದಿಂ ಪೊಳಲ್ಕೀಲ ನಿಟ್ಟಿಸಿದಳ್ಕಿಯಿಂ ೬೨

ಚಾರುಲೀಲೆಯೊಳು ನಿರ್ಜರಸಹಸ್ರಾಬ್ದವಿಹಾ
ಘೋರನೇತ್ರತ್ರಯಗಳಿಂದೀಕ್ಷಿಸಲ್ ತ್ರಿಪುರ
ಮೋರಂತೆಯೊಂದುಗೂಡಲ್ಕಾಗ ಉರಿಯೆಂಬ ಜೋಡಂಗೊಳಿಸೆಸೆಯಲರರೆ
ಭೂರಿವುರಿಯಿಂ ಪುರಂ ಭಗಭಗನೆ ಬೆಂದಸುರ
ವಾರ ಕರಿಕರಿಯಾಗೆಯಮರರುಘೆಯೆನುತ ವಿಮಂ
ದಾರ ಕುಸುಮದ ವರ್ಷಮಂ ಹರುಷದಿಂ ಶಿವನ ಮುಂಡೆಯಲಿ ಕರೆದರಾಗ ೬೩

ಮುದವೆತ್ತು ಮೌನಿಗಳ್ ಕೃಷ್ಣಾಜಿನಗಳನಾಂ
ತೊದಗಿ ಮೇಲಕ್ಕಿಡುತ ಕುಣಿಯೆ ಹರಿಯಜರು ಬಂ
ದೊದಗಿ ನುತಿಯಂ ಮಾಡೆ ಮೇರುಧನುವಿಂ ಶೇಷ ಸಿಂಜಿನಿಯನಿಳುಹಿ ಸುರರ
ಸದಯಾವಲೋಕನದಿ ನೋಡಿ ಮೇಣವರವರ
ಪದಕಪ್ಪಣೆಯ ಕೊಟ್ಟು ಕಳುಹಿ ಗಣನಾಥರನು
ಪದವೈದಲೊಡನೆ ಕೈಲಾಸಶಿಖರವನೈದಿ ಸುಖಮಿರ್ದನಗಜಾಧವಂ ೬೪

# ಏಳನೆಯ ಸಂಧಿ

ಸೂಚನೆ : •

ಪಡೆದು ವಿಧಿಯಿಂ ವರವ ವಿಧಿ ಪೇಳೆ ನಾಲ್ಗೈಯ್ಯ
ನಿಡುತಂಬರಕ್ಕೆ ಧಾಳಿಯನಿಡಲ್ ಶಿವಲೋಕ
ಕೊಡನೆ ಚಕ್ರದ ಜಲಂಧರನ ತಲೆಯರಿದಾಗ ಚಕ್ರಮಂ ಹರಿಗಿತ್ತನಂ

ಕುಳಿರ್ವೆಟ್ಟಿನಣುಗಿಯೊಡನಣುಗಿನಿಂ ಮುಳಿದು ಬಾಂ
ಬೊಳಿವೆಣ್ಣ ಕರೆಯಲಾಕ್ಷಣಮಾಕೆ ಸಿಂಗರಿಸೆ
ನಳಿನನಿಭಶುಭಚರಣಹಂಸಕಂ ಧ್ವನಿಯಾಗೆ ಕೇಳ್ವೀಳುತೆಳೆದೇರನಂ
ಗೆಳೆಯುಳಿಂದಾಕೆಯಂ ತಿವಿವೆನೆಂದಿರ್ತೋಳ
ಘಳಿಲನೆತ್ತಲ್ ಕುಚದ ಕಂಚುಕಂ ಪೈಸರಿಸೆ
ನಳಿತೋಳಮರ್ದಪ್ಪಿ ಬಿನದಿಸುವ ಗುರುಚೆನ್ನಮಲ್ಲಿಕಾರ್ಜುನ ಜಯ ಜಯ ೧

ತಿರುಕಪುರದಲ್ಲಿ ಚರಮೂರ್ತಿಯೇ ವೇಶಿಯಾ
ವಿರಹದಿಂದಳುತಿರಲ್ ಕಂಡುಯೇಕಾಳಿಯವ
ನರುಪತ್ನಿಯಾದಜ್ಞಗಾನಂದೆಯುಂ ಮರುಗಿ ದಿನಕಿರಳ್ಪೊರನೀವುತೆ
ಹರುಷದೊಳಗಿರೆ ಹರಂ ಕರಿಚರ್ಮಮಂ ತಂದು
ಭರದಿ ಮಡಿವಳ ಭಕತ ಬಿಳಿದುಮಾಡೆನೆ ಎದೆಯಿ
ನರುಣಾಂಬುವಿಂ ಬಿಳಿದುಮಾಡಿತ್ತು ಶಿವನನೊಲಿಸಿದೆ ಕಾಳಿಯರ್ಗೆರಗುವೆಂ ೨

ದೇವದೇವನೆ ಮರುಳಸಿದ್ಧೇಂದ್ರಯತಿತಿಲಕ
ಸಾವಧಾನದಿ ತ್ರಿಪುರದಹನಮಂ ಕೇಳ್ದನಿ
ನ್ನಾವುದೈ ಜೀಯ ಹತ್ತನೆಯಲೀಲೆಯದೆನುತ್ತೆರಗಿ ಬಿನ್ನೈಸೆ ಮುದದಿ
ಚ್ಯಾವನಿಮುನೀಶನೇ ಕೇಳ್ ಜಲಂಧರನೆನಿಸಂ
ವಾ ವಿಗಡದೈತ್ಯನುಂಟಾತನಿತಿಹಾಸಮಂ
ನಾವೊರವೆವಧಿಕತರ ಶಿವಪುರಾಣದ ಕಥೆಯನೆಂದನಾಚಾರ್ಯವರ್ಯಂ ೩

ಒಂದು ನೀರ್ವಾಯಸಂ ಗಂಗೆಯೊ[1][ಳಗಾ][1]ಳ್ದು ತಾಂ
ನಿಂದು ಕಲ್ಕಂಭದಗ್ರದೊಳಿರ್ದು ರೆಕ್ಕೆಯಂ
ಛಂದದಿಂದೊದರಲಲ್ಲಿಯ ಜಲಕಣಗಳು ಲಿಂಗದ ಮೂರ್ತಿಯಲ್ಲುದರಲು

---

1 ಳಾ (ಕಗ) • ಜಲಂಧರ ಶಿರಚ್ಛೇದನ (ಗ)

ಸ್ಕಂದಪಿತನಭಿಷೇಕವಮಾಗೆ ಸ್ವೀಕರಿಸೆಯದ
ರಿಂದ ಜವನದರ ಧರ್ಮಾಧರ್ಮವಂ ಕೇಳು
ತೆಂದನೀ ಫಲದೆಯಸುರೇಶನಾಗಲ್ವೇಳ್ಕೆನಲು ವೃತ್ರಸು[ತ]ನಾಗುತೆ ೪

ಇರಲು ವೃತ್ರಾಸುರನ ಗೃಹಕೆ ಭಾರ್ಗವನು ಬಂ
ದೊರೆದನೀ ಶಿಶು ಮಹಾಭುಜಬಲಪ್ರತಾಪದಿಂ
ದೊರೆಯಾಗಿ ಸುರರ ಸಂಹರಿಸುತವರಿಂ ಸೇವೆಗೊಂಬನಿವಗಿರದೆ ಪೂರ್ವಾ
ಪರದೆ ಸಂಸ್ಕಾರದೆ ಜಲಂಧರಾಖ್ಯವನಿತ್ತು
ಪರಮವಹ ಮಂತ್ರೋಪದೇಶವಮಂ ಮಾಡಿ ಕವಿ
ತಿರುಗಿ ತನ್ನಾಶ್ರಮಕೆ ಬರೆ ಬಳೆವುತಿರ್ದನೀಚಲಬುಡದ ಮುಳ್ಳಿನಂತೆ ೫

ಇತ್ತ ವೃತ್ರಾಸುರನ ಬಾಧೆಗಾರದೆ ಸುರರ
ಮೊತ್ತದಿಂ ದಂಡೆತ್ತಿಬಂದು ರಥ ರಥಕಧಿಕ
ಮತ್ತಗಜ ಗಜಕೆ ಹಯ ಹಯಕೆ ಪಾಯ್ದಳ ದಳಕೆ ಯುದ್ಧಮಾಗಲ್ ಸುರಪನು
ಒತ್ತಿಬಂದಿದಿರಾದ ರಾತ್ರಿಚರರಂ ಸದೆದು
ವೃತ್ರಾಸುರಾದಿ ಘನದನುಜಕುಲವಂ ಬಿಡದೆ
ತತ್ತರಂದರಿಯಲಾ ಕಾಲದಿ ಜಲಂಧರನು ಮಾಯವಾಗುತ್ತಳಿವುತೆ ೬

ಬೆಟ್ಟವಂ ಸುತ್ತಿಸಿದರಂ ಬಿಡದೆ ನಾನೊಂದಂ
ಬಟ್ಟನುರೆ ನೆಟ್ಟನೇ ಸುತ್ತಿಸದಿರಲ್ಕೆನಗೆ
ದಿಟ್ಟ ಜಲಧರನೆಂಬ ನಾಮಂ ಸಲುವುದೆ ಸಲ್ಲದೆನುತ ಘುಡುಘುಡುಂಗುಟ್ಟುತೆ
ತಿಟ್ಟನೇ ತಪೋವನಕೈದುಗ್ರತರತಪವ
ಮುಟ್ಟಿಮಾಡುತ್ತೆ ಶೃಂಗಾಗ್ರದೊಳ್ ಸೂಚಿಯಂ
ನೆಟ್ಟದರ ಮೇಲೆಯುಂಗುಟವೂರಿ ತೋಳೆರಡನೂರ್ಧ್ವಕೆತ್ತುತ ಹರಹರ ೭

ನಿಷ್ಠೆಯಿಂ ಗುರುಂ ಪೇಳ್ದ ಮನುವ ಜಪಿಸುತ್ತೊಲಿದು
ದೃಷ್ಟಿಯಂ ಮುಚ್ಚೊಂದು ಕಾಲಿನಿಂ ನಿಂದಧಿಕ
ಶ್ರೇಷ್ಠಮೂರ್ತಿಯ ಜಾನಿಸುತ್ತದರ ವಹ್ನಿಗುರೆ ಸುರರೆಂಬ ಕಾಷ್ಠಂಗಳಂ
ಮುಷ್ಟಿಯಿಂ ಪುಡಿಮಾಡಿಕೊಳುತ ಮುನಿಜನರೆಂಬ
ಘಟ್ಟಿಯುಕ್ಕಿನ ಹುಡಿಯ ತಿನುತ ಲೋಕಗಳೆನಿಪ
ನಿಟ್ಟೊಣಗಿನಿಂದು ಬೆಂಡಾಗಿರುವ ತರಗೆಲೆಯ ಕೊಳಂತ ತಪಮೆಸಗಲಾಗ ೮

ಆ ತಪೋಜ್ವಾಲೆ ವಯೊಲೋಕಮಂ ವ್ಯಾಪಿಸುತೆ
ಜಾತವೇದನ ಮಾಳ್ಕೆಯಿಂ ಘುಳುಘುಳುಧ್ವನಿಯಿ
ನಾ ತಪೋವನವೆಯ್ದಿ ಛಟಛಟನೆ ಸುಡುತ ಶರಧಿಗಳಿಂಗೆ ಕುಲನಗಾಳಿ
ಭೀತಿಯಿಂ ನಡುಗೆ ದಿಗ್ಗಜ ಕೆಡೆಯೆ ಶೇಷನಿರ
ದಾತು ತಾಂ ತಲೆಗೊಡಹೆ ಭೂಕಂಪನಂಗೊಳ
ಲ್ಕಾ ತಾರೆಯುದುರೆ ಎದೆ ಬಿರಿದವಮರರ ಜಲಂಧರನ ತಪದತ್ಯುಗ್ರದಿಂ ೯

ಇದನೈದೆ ಕಂಡಜಂ ನಗಜಾಧಿಪತಿಗೆ ತಾಂ
ಮುಂದದೆ ಬಿನ್ನೈಸಲಾ ಶಿವನೆಂದನೆಲೆ ಬ್ರಹ್ಮ
ಪದ್ಮಜದಿಂದಸುರ ಬೇಡಿದ ವರವನಿತ್ತುಬಾಯೆನೆ ನಮಿಸಿಯಿಾಶನಡಿಗೆ
ವಿಧಿ ಬರೆ ಜಲಂಧರಂ ಸಾಷ್ಟಾಂಗದೊಳಗೊಂದಿ
ಯಧಿಕಭಯಭಕ್ತಿಯಿಂ ಲೋಕೇಶ ಬ್ರಹ್ಮೇಶ
ಮದನಪಿತತಾತ ಶಾರದೆಯಾಣ್ಮ ಜಯಜಯ ತ್ರಾಹಿ ಎನಲಾ ಬ್ರಹ್ಮನಂ ೧೦

ಏನೈ ಜಲಂಧರಾ ನಿನ್ನ ಮನದಿಷ್ಟವಂ
ನ್ಯೂನವಿಲ್ಲದೆ ಕೇಳಿನಲ್ಕವಂ ಹರುಷದಿಂ
ಹೀನ ನಿಶ್ಚೈಸಿದನದೆಂತೆನಲ್ ವ್ಯಾಘ್ರನೇಕಾದಶಿಯ ವ್ರತವನಿರದೆ
ತಾನೆಯಾಚರಿಸಿ ಗೋವಿನ ಪಾರಣೆಯಂ ನಾಳೆ
ಭಾನುವುದಿಸುವ ವೇಳೆಗಾಗಬೇಕೆಂದದರ
ಮಾನಸಿಕಯತ್ನದಿಂದಿರುವಂತೆ ಘಳಿಗೆ ಘಳಿಗೆಗೆ ಮುಂದುವರಿವ ಖತಿಯಿಂ ೧೧

ನಾನಖಿಳಭುವನಂಗಳಂ ಭಂಗಿಸುತ್ತಲನು
ಮಾನವಿಲ್ಲದೆ ಸರ್ವರಂ ಕೆಡಿಸಿ ನಲಿದು ಮ
ತ್ತೇನೇನ ಗರ್ವದಿಂ ಮಬ್ಬಿಗರ ಕೂಡುತಾತ್ಮೇಚ್ಛೆಯೊಳ್ ನಡೆಯಲದಕೆ
ನ್ಯೂನತ್ವಮಿಲ್ಲದಿರುಹಣವಂನೀವುದೆ ಚಿತ್ರ
ಭಾನುಮುಖರಾದ ಸುರರಿಂದಲಾ ಶಿವನಕೈ
ಯ್ಯಾನರ್ಘ್ಯಪಾಶುಪತದೊಳ್ ಮರಣವಿಲ್ಲದೊಲ್ ನೀನು ಕೊಡುವರ್ತಿಯೊಳಜಾ ೧೨

ಎಂಬ ನುಡಿಗೇಳ್ದು ಶಿವಲೋಕಗಳ್ ಕೆಟ್ಟವೆಂ
ದುಂ ಬಳಿಕ್ಕ ಯೋಚಿಸಿಕೊಳು[1][ತ್ತಂ][1] ಮನದೊಳತಿ
ಬಂಬಲಿಸಿಯುಟ್ಟಧೋತ್ರವ ಮೇಲಕೆತ್ತಿ ಕಟ್ಟುತ್ತ ಕಚ್ಚೆಯ ಬಿಗಿವುತ

---

1 ತ (ಕಗ)

ನಂಬಿ ನಿಲಬಾರದೆಂದಾ ಶಿಖಿಯಂ ಗದ್ದಮು
ನಂಬುಜೋದ್ಭವ ಗಂಟುಗಳನಿಡುತ ಜನ್ನಿವಾ
ರಂ ಬಿಗಿದು ಕಾಲೊಂದ ಮುಂದಕಿಡುತೆದೆಯೊಳಗೆ ಡವಡವಯೆನುತ್ತಿರುತಿರೆ ೧೩

ಕೊಟ್ಟೆಂ ಜಲಂಧರಾ ವರನನೆನುತಾ ಪಾರ್ವ
ಕೆಟ್ಟೋಡುತವನ ಪಿಂದಕೆ ನೋಡುತಂ ಪುಲ್ಲು
ಪುಟ್ಟಿದವೊಲೋಡುತಿರೆ ಗಹಗಹಿಸುತಾ ಜಲಂಧರನೆಯ್ದಿಯಜನ ಓಂಪೆ
ಯಟ್ಟಿಬಂದೆಂ ಬಂದೆ ನಿಲ್ಲು ನಿಲ್ಲೆನುತ ಪೊಡ
ವಂಟ್ಟು ಕೈಕಾಲ್ ವಯಿಡುಗುತುಸುರ್ವೊಯ್ವುತಂ ನಿಲಲು
ದಿಟ್ಟ ಕೈವಿಡಿದೆನ್ನ ಕೂಡೆ ಕಾದೈ ಭುಜದ ತೀಂಟೆಯಡಗುವೊಲೆಂದನು ೧೪

ಬಿಡದೆಯಿಾಚಲಿಗೆರೆಯೆ ನೀರ ಜಾಲಿಯಂ ಬಿತ್ತ
ಲಡಿಗೆ ಮುಳ್ಳೊಡೆ ಕಾಲ್ಕೊಳಿವವೊಲ್ ಭುಜಗಂಗೆ
ತಡೆಯದಮೃತವನೆರೆಯಲಧಿಕ ಹಾಲಾಹಲಂ ಪೆರ್ಚುವೊಲ್ ನೀಚನವಗೆ
ಸಡಗರದ ಸಂಪದವನಿತ್ತೊಡೆನ್ನಂ ಪಿಡಿದಂ
ಜಡಿದೆಸಗು ಪೊಣರನೆಂದಳಂಪುತಿಹನೀ ಪಾಪಿ
ಯೊಡೆಯನಂ ಕಂಡು ಗಳಹುವ ಸುನಿಯೊಲಾಯ್ತಿದಕ್ಕೇನೆಂದು ಚಿಂತಿಸಿದನು ೧೫

ಏನೆಂಬೆ ಚತುರಾಸ್ಯ ಚತುರತ್ವಮಂ ನುಡಿದ
ಹೀನನುಡಿಯಾಯ್ತು ನಿನ್ನಯ ಪರಾಕ್ರಮಕೆನಲ
ದೇನೇನು ಬೆಸಸೆಂದಂ ನಸುನಗುತ ಕೇಳಲವನೇನಯ್ಯನಯ್ಯನೆಂಬ
ಮಾನವರ ಮಾತಿನಿಂದೇನುಪಾಧ್ಯಾಯನೊಳ್
ನೀನು ಕಾದಲ್ ನಗರೆ ನಿನಗೆ ಹಗೆಯುಂಟು ಕೇಳ್
ದಾನವಾಂತಕ ಮಹಾಭುಜನವನೊಡನೆ ಸೆಣಸಿ ಗೆದ್ದರೆ ಪರಾಕ್ರಮಿಯಹೆ ೧೬

ಎಂದ ಮಾತಂ ಕೇಳಿ ತಾವರೆಯ ಮಗನ ಬಿಡೆ
ಬಂದೆ ನಾಂ ಜಾಣ್ಮೆಯೊಳಗೀ ಪಾಪಿಯಂ ಜಯಿಸು
ತಿಂದು ಬದುಕ್ಕೆ ಜೀವನೇಯೆಂದಜಂ ಬ್ರಹ್ಮಲೋಕಕ್ಕೈದಲ್ ದನುಜನ
ಪಿಂದಣ ತಪೋಬಲದೆ ಸ್ವರ್ಗಾದಿಭೋಗಗಳ್
ಸಂದಣಿಸಿತೇನೆಂಬೆ ಸಂಜನಜನಗೋಕ್ಷೀರ
ಮಂದದಿಂ ಕೊಂಡು ಗೋವಂ ಪೊರೆವವೊಲ್ ವ್ಯಾಘ್ರಗಳ್ ಗೋವ ರಕ್ಷಿಸುವವೆ ೧೭

ಇಂತಖಿಳ ಸೌಭಾಗ್ಯದಿಂ ಜಲಂಧರನಿರುತ
ಲಂತುರೆ ಪ್ರಯಾಣಭೇರಿಯ ಪೊಯ್ಸಿ ಕಾನಕದ
ನಂತ ರಥ ಕರಿ ತುರಗ ಕಾಲಾಳ್ಗಳಂ ಕೂಡಿ ಸುರರೆಂಬ ಮೃಗಬೇಂಟೆಯಂ
ತಾಂ ತವಕದಿಂದ್ಯೆದಿ ದಿವಿಯ ಸೆರೆಸೂರೆಯಂ
ನೋಂತು ಮಾಡುತ್ತಗ್ನಿ ಯಮಮುಖರ ಪತ್ತನವ
ನಂತಪರಿಯಿಂ ಧಾಳಿಯಂ ಮಾಡುತಾ ಪುರಗಳಗ್ನಿಗೇ ಕರೆದೀವುತಂ ೧೮

ವರಮುನಿಗಳಾಶ್ರಮಂಗಳ ಕಾಲಧೂಳಿಯಂ
ನೆರೆಮಾಡಿ ವೈಕುಂಠಕಷ್ಟದಿಕ್ಕಿನೊಳಗಾ
ಲ್ದುರೆ ಲಗ್ಗೆ ಪಿಡಿಯಲಿದಿರಾದಮರ ವೈಷ್ಣವರ ಕಡಿಖಂಡಗೆಯ್ದು ಹರಿಯ
ಹಿರಿಯರಸಿ ಲಕುಮಿ ಕೈಸೆರೆ ಸಿಕ್ಕೆ ಹರಿ ಮತ್ತೆ
ಕೆರಳ್ದಧಮ ಬಿಡು ನಿಲ್ಲು ಕಾದು ಕಾದೆನೆಯಸುರ
ಭರದೆ ಬವರಕೆ ನಿಂದು ಖಣಿಖಟಿಲ್ ಛಿಣಿಛಿಟಿಲ್ ಧ್ವನಿಯ ಖಡ್ಗದಿ ಕಾದುತೆ ೧೯

ಬಿಲ್ಗೊಳಂತೈಚ್ಚಾಡಿ ಖಾತಿಯಿಂ ಕೊಚ್ಚಾಡಿ
ನಿಲ್ಲದೆದೆಯೊಳಗೊತ್ತಿ ಬಲ್ಲೆಹಗಳಿಂ ಕುತ್ತಿ
ಸಲ್ಲಲಿತ ಗದೆಗಳಿಂ ಬಡಿದು ಮುಸಲದೊಳಿಡಿದು ಹೊಡೆದು ಮುದ್ಗರದಿಂದಲಂ
ಬಲ್ಲಿದರ್ ಬಗೆ ಹಣಾಹಣಿಯಿಂದಲಣಿಯಿಂದ
ಚಲ್ಲವಾಡುತ್ತ ಕಾದಿದರು ಸಾಹಸ್ರಾಬ್ಧ
ಮಲ್ಲಿ ಸಮರದೆ ಬಳಿಕ ಹರಿಪಾಶದಿಂ ಹರಿಯ ಕಟ್ಟಿಡುತ್ತಾಗಸಕ್ಕೆ ೨೦

ತನ್ನ ಪುರಿಗೈದಸುರ ಸುಖಿಮಿರಲಂ ನಾರದಂ
ಖಿನ್ನತೆಯಸುರರೊಳಾಹವದ ಪರಿಯಂ ಕಂಡು
ಪನ್ನಗಾರಿಯ ರಥನ ನಾಗಪಾಶರ ಬಿಗಿಯನಾಕಾಶದೊಳಗೆ ನೋಡಿ
ಇನ್ನಿವನ ಕಪಟದಿಂ ಕೆಡಿಸಬೇಕೆಂದು ಮತಿ
ಯಿನ್ನೆನದಂ ಹರನೊಡನೆ ವೈರಮಂ ಗಂಟಿಕ್ಕಿ
ಚೆನ್ನಾಗಿ ಮೊದಲರೂಪವ ಮಾಜಿಕೊಂಡ ರೂಪಾಂತರವನ್ನೈದಿಬಂದು ೨೧

ವೃದ್ಧಮುನಿವೇಷದಿಂ ರುದ್ರವೀಣೆಯನಾಂತು
ಬುದ್ಧಿಶೂನ್ಯರ ಕೂಡಿ ನಿಖಿಲ ವಿನಿಯೋಗದಿಂ
ಗದ್ದುಗೆಯೊಳಿಹ ಜಲಂಧರನಿದಿರೆ ನಿಂದಾಯುರಾರೋಗ್ಯಮೈಶ್ವರ್ಯದ

ಸಿದ್ಧಿರಸ್ತೆಂದು ವೀಣೆಯಂ ಬಾಜಿಸುತ್ತ ಪರಿ
ಶಂದ್ಧಸಂಗೀತಸುಧೆ ಸೈಗರೆಯೆ ಕೇಳ್ದಧಿಕ
ಬುದ್ಧಿಯಿಂ ಬೆಸಗೊಂಡ ಸೀನಾರು ಮುನಿನಾಥ ಬಂದ ಕಜ್ಜವನರುಹೆ[1]ನೆ[1] ೨೨

ನಾರದ ಮುನೀಶ ನಾಂ ಧೀರಬಹುಭುಜಬಲಂ
ಸಾರ ವಿಕ್ರಮಶಾಲಿಯಸುರಚಕ್ರೇಶನೆಂ
ದಾ ರವೇಂಶಾದಿಗಳ ಜಯಿಸಿದುರುವಾರ್ತೆಯಂ ಕೇಳಿ ನೋಡಲ್ ಬಂದೆನು
ಭೂರಿಲೋಕೇಶ ಸಕಲರ ಸಲಹುವಂ ಗಡಾ
ಮೀರಿದರ ಪೊಕ್ಕಲಿಕ್ಕುವ ಸುರಾಸುರರೊಡೆಯಂ
ನೀರೇಜಭವಮುಖರ್ಸೇವಿಸುವರೆನ್ನನೀ ಪರಸಿ ನೋಡಲ್ ದಕ್ಷನೇ ೨೩

ಎಂದ ಮಾತಂ ಕೇಳಿ ಗಹಗಹಿಸಿ ನಾರದಂ
ಭಂದವಾಯ್ತೆಲೆಯಸುರ ನೀಂ ಲೋಕಕೊಡೆಯನೆ
ಸ್ಕಂದಪಿತನೇ ಜಗತ್ಕರ್ತ ಭರ್ತಂ ಹರ್ತನೆಂದು ಶ್ರುತಿಪೌರಾಣಮುಂ
ಛಂದಛಂದದಿ ಪೊಗಳ್ವವಾ ಶಿವನೆ ಜಗದೊಡೆಯಂ
ನೆಂದೆನಲು ಘುಡುಘುಡಿಸಿಯಲ್ಲಿಪ್ಪನವನಾವ
ಬಂಧುಗಳ್ ಸತಿಸುತಸಹಾಯಿಗಳ್ ಚತುರಂಗ ಬಲಮುಂಟೆಯುಂಟೆಂದನಂ ೨೪

ತಡೆಯದೀಕ್ಷಣಮೈದಿಯವನೊಡನೆ ಸೆಣಸಿ ಪಿಂ
ದಡಿಯಿಡದೆ ಜೈಸಿ ಕನಕದ ದುರ್ಗಮಂ ಕೊಳುತೆ
ತಡೆಗಡಿದು ಚತುರಂಗಸೇನೆಯುಂತವನ ಸತಿಸುತ ಗಣಾಳಿಯು ಪಿಡಿವುತೆ
ಇಡುವೆ ಕಾರಾಗೃಹದೊಳೆನಲಸುರ ಬರಿದೆ ನೀಂ
ಗಡಬಡಿಸದಿರು ತೃಣಪತಂಗ ಮಶಕಾದಿಗಳ್
ಬಡಬನೊಳು ಸೆಣಸಿ ಬಾಳುವವೆ ನೀನೇಕೆ ನಿನ್ನವರಿದಿರೊಳಿಂತಾಡುವೆ ೨೫

ಎಲೆ ವೃದ್ಧಮುನಿಯೆಂದುಂ ನಿನ್ನ ಬಿಟ್ಟೆಂ ಪೋಗು
ಪೊಲವಿನಿಂ ಪಯಣಭೇರಿಯು ಪೊಯ್ಸಿ ನವಗಜವ
ನಳಿಕಾಕ್ಷನಾದಿಪುರಕೈಲಾಸದತ್ತ ಪಾಯ್ಕಿಸಿಯಸುರ ಮನ್ನೆಯಗನು
ನಲವಿನಿಂ ತಂತಮ್ಮ ಬಲಗೂಡಿ ಬರಿಸೆನಲ್
ಕೆಲರೆದ್ದು ಕೈಬೆತ್ತದವರಾಗ ರಿಪುರಾಜ
ಕುಲಶರಭಭೇರುಂಡನಿದೆ ಬಂದರಿದೆ ಬಂದರೆಂದಂ ತೋರುತ್ತಿರ್ದರು ೨೬

---

1 ಲೆ (ಕ)

ಇದೆ ಬಂದಿತಂಧಕಾಸುರನ ಪೌತ್ರನ ಬಲಂ
ಯಿದೆ ಬಂದುದಿಭದಾನವನ ಪೌತ್ರರ ಪದಾತಿ
ಯಿದೆ ಬಂದರಸುರವಲ್ಲಭನೆ ಕೋಲಾಸುರನ ಪುತ್ರರತ್ಯುಗ್ರಶರರು
ಒದಗಿಬಂದತ್ತು ಮಲ್ಲಾಸುರನ ವಂಶಜರ್
ಕದಂಬಿಬಂದರು ನೋಡು ಮಹಿಷಾಸುರನ ಮಕ್ಕ
ಳೊದಗಿದರ್ ಪಂಚಮೇಢ್ರಾಸುರನ ಪುತ್ರರಿವರಾದಿ ದೊರೆಮಕ್ಕಳೆಲ್ಲಂ ೨೭

ಥರಥರಂಗೊಂಡುಬರುವಾನೆಗಳ ಸೇನೆಗಳ
ಭರಭರನೆ ದುವ್ವಳಿಪ ವಾಜಿಗಳ ಪೌಜುಗಳ
ಪರಿಪರಿದು ಚಕ್ರಗಳ ಧಾರೆಯಿಂ ಭೂಮಿಯಿಂ ನಡೆವ ತೇರುಗಳ ಮುಂದೆ
ಚರಿಸಿ ಮೇಲಾಳ್ಗಳಿಂ ಕೀಳಾಳ್ಗಳಿಂದಲುರೆ
ಮೊರೆವ ಭಟ್ಟರ ಸಾಲು ಸಾಲುಗೊಂಡೆಡಬಲದಿ
ಪರಿಪರಿಯ ವಿನಿಯೋಗಮಂ ಪಿಡಿದು ಬರುವೂಳಿಗದ ಜನದ ರಹಿ ಮೆರೆದುದು ೨೮

ಹೇಳಲೇನಸುರರಂರ್ಬಟೆಗಳಿಂ ಘಟೆಗಳಿಂ
ತಾಳಮಾನಕೆ ಕುಣಿವ ಹರಿಗಳಿಂ ಹರಿಗಳಿಂ
ಧೂಳಿಯೊಡನೆದ್ದದರ ಮುಸುಕಿನಿಂ ಮುಸುಕಿಟ್ಟ ವೈಜಯಂತಿಯ ಪಟಗಳ
ಮೇಳದಿಂದೆತ್ತಿದುರೆ ಸಿಂಧ ಸೀಗುರಿಗಳಿಂ
ದೇಳಿಸುವ ವೇಟುಪಾವಡೆಯಂ ಬಿಗುಹಿಂದಸುರ
ಪೌಳಿಯಾ ಶಿವಪುರಕೆ ಧಾಳಿಯಂ ಮಾಡೆ ಮುಂದಾಳುಗಳ ನಡೆಸಿ ನಡೆದಂ ೨೯

ನಂದಿ ಬಿನ್ನೈಸೆಯಾನಂದದಿಂ ಶಿವಯುದ್ಧ
ಕಂದು ತಾಂ ಸಕಲ ಸನ್ನಾಹದಿ ಚತುರ್ವೇದ
ಮುಂದೆ ಪೊಗಳಲ್ ನಂದಿಧ್ವಜವೆತ್ತೆ ಸ್ಕಂದವೀರೇಶ ವಿಘ್ನೇಶ ಗಣರಂ
ಛಂದದಿಂದೆಡಬಲದೊಳೈತರಲ್ ಹರಿಸುರಪ
ರಂದಜಾದ್ಯರ್ ತಮ್ಮ ಬಲಗೂಡಿಯೋಲೈಸೆ
ಧಂ ಧಣಂ ಧಣರೆಂಬ ಭೇರಿಯ ನಿನಾದ ಲೋಕದೊಳು ಘುಮ್ಮಿಡೆ ಮುದದೊಳು ೩೦

ತಂಡತಂಡದ ಬಲಂವೆರಸಿ ಕೈಲಾಸದಿಂ
ಮಂಡನದೊಳೈತರಲ್ ಶಿವನ ಮುಂದೆಸೆಯಲ್ಲಿ
ಚಂಡಕೀರ್ತಿಗಳು ಗಂಡರ ಗಂಡ ವೈರಿಯುದ್ದಂಡಗಿರಿವಜ್ರದಂಡ

ಭಂಡದೈತ್ಯರ ತಲೆಗಳಂ ಕೊಂಡಗಂಡನತಿ
ಚಂಡಮಾಯಾತಿಮಿರ ಮಾರ್ತಾಂಡ ಸರ್ಪಕುಲ
ಕುಂಡಲಾದ್ಯಾಭರಣಗಣ ಜಯಜಯಂ ತ್ರಾಹಿ ಎಂದು ಕೊಂಡಾಡುತಿರಲು ೩೧

ದಂಡು ನಡೆಯಲ್ ಸುರರ ತಲೆಗಳಂ ಚೆಂಡಾಡೆ
ಮುಂಡಗಳ್ ಬೀಳುತಾಖಂಡಲಂ ಮುರಿದೋಡೆ
ಖಂಡಪರಶುವಿಗಿದಿರೆ ನಡುಗತ್ತ ಬರೆ ಗಣರ ಸುರರಿಟ್ಟಿಸಿದಿರೊಡ್ಡಿನ
ತಂಡತಂಡದ ಬಲವ ಮುರಿಯಲ್ ಜಲಂಧರಂ
ಕಂಡು ಶಿವನಿದಿರಾಗಿ ಬಂದಜಕಪಾಲವಂ
ಕೊಂಡು ಭಿಕ್ಷಕೆ ಬಂದೆಯೋ ಪೇಳಿದಲ್ಲದೊಡೆ ರಣಕೆ ಸನ್ನದ್ಧನಾಗು ೩೨

ಎಂದ ಮಾತಿಂಗಭವ ನಸುನಗುತ ನಿನ್ನೊಳಾ
ನಂದದಿಂ ಸಮರಮೆಸಗಲ್ಬೇಹುದಾನರಿಯೆ
ನೆಂದಗ್ನಿನೇತ್ರದೊಳೊಂದು ಕಿಡಿಯುಗಳಲ್ ಶತಾಕ್ಷೋಣಿಯುಂತಾಗುತೆ
ಮುಂದೆ ದೈತ್ಯನ ಬಲವ ಧಗಧಗನೆ ಸುಡಲಾಜ
ಲಂಧರಂ ಗಹಗಹಿಸಿ ಭಿಕ್ಷುಕಾ ಸೈನ್ಯಮಂ
ಒಂದುಂ ಕಿಡಿಯಿಂದಲೆಯ್ದಿಸಿದೆ ಭಸ್ಮವನೆಂಬಹಂಕಾರಮಂ ಬಿಟ್ಟರು ೩೩

ರಣರಂಗಖಿಗಕೆಯಾಂ ಸಾಳುವಂ ಬಲವೆಂಬ
ತೃಣ ಬೆಂದೊಡೇಂ ಸಹಾಯುವ ಬಯಸುವೆನೆ ನಾನು
ತ್ರಿಣಯಂನನೆ ನೀನಣುಂಗಳಂ ಗಣಪ್ರಕರಮಂ ಸುರಪರಂ ಕೂಡಿಬಂದೆಂ
ಪೊಣರಿಚೇಳೇಳೆಂದುಂ ಮುಡುಹಕಟ್ಟುತ ತೊಡೆಯು
ಬಣೆತೆಯಿಂ ಚಪ್ಪರಿಸಿ ಪುರ್ಬುಗಳ ಗಂಟಿಕ್ಕು
ತೆಣಿಕೆಗೊಳ್ಳುತ ಮೀಸೆಯಂ ತಿರ್ದಿ ಕಣ್ಣ ಕೆಚ್ಚನೆಮಾಡಿ ಕುಬಿಬಿರಿಯಂಲು ೩೪

ಮಲಹರಂ ಮಾರ್ಮಲತು ನಿಂದ ದೈತ್ಯನ ಕಂಡು
ಭಲರೆ ನಿನ್ನಯ ಪರಾಕ್ರಮಂಕಾರು ಸರಿಯಿಲ್ಲ
ಮೊಲವಿನಿಂ ನನಗೆ ಕಪ್ಪವ ತೆತ್ತು ಬಹೆವು ನೀಂ ಪೋಗು ಬಲಸಹಿತಮೆಂನಲು
ನಲಿದುಂ ಹಾಸ್ಯದೊಳೆಂದ ನುಡಿಯರಿಯದಧಮನಿ
ನ್ನಲಗಾವವವನೆಯೊಪ್ಪಿಸಿ ಪೋಗೆನಲ್ಕೆ ಹರ
ಪಳೆಯಭಿಕ್ಷುಕ ನಾ ನಿರಾಯುಧಂ ಎನಗೊಂದು ಜಲಚಕ್ರಮಿದಕೊ ನೋಡು ೩೫

ಆವುದೈ ಕೊಡು ನಿನ್ನ ಚಕ್ರವೆನಲಂಬುಧಿಯೊ
ಳಾ ವಿಶೇಷದ ಚಕ್ರಮುಂಗುಟದ ತುದಿಯಿನಾ
ಭಾವಜಾಂತಕ ಬರೆದುಕೋ ಎನಲ್ಕಸುರ ಕರವೆರಡರಿಂದೆತ್ತಲದನು
ಠಾವ ಬಿಟ್ಟೊಂದುಗೇಣೇಳುತದರಿಂ ಮೇಲೆ
ನೇವೇಳ್ವ ಸರ್ವಶಕ್ತಿಯೊಳೆತ್ತಿ ದಣಿದು ನಿಲ
ಲಾವೇಳೆ ನಾರದನಿದೇನಧಮ ಎತ್ತುವಡೆ ಮೇಲಂಸುರನೇತಕಿಡುವೆ ೩೬

ಇದನೆತ್ತಲಾರದತಿಕೋಚಿ ಶಿವ ಶಿವಗಣರ
ಮುಂದದಿ ಸೆರೆವಿಡಿವೆನೆಂದೆನ್ನೊಳೊದರಿದೆ ನೀಚ
ಸದರವೇ ಎನೆ ನಾಣ್ಚಿ [1][ಗೋರದಾನಿಟ್ಟ][1]ಚಕ್ರಮೆತ್ತದೊಡೆಯಪಕೀರ್ತಿಯೆ
ಒದೆಲೆದೆನ್ನನುಗ್ರಹಕೆಯಾಂ ಪೋಗೆ ಸ್ತ್ರೀಜನದೊ
ಳದಿದೆನ್ನದೆಲ್ಲರುಂ ಕೈಯ್ವೊಯ್ದು ನಗುವರೆಂ
ದಿದ ಶಿರದೊಳೆತ್ತುವೆನೆನುತ್ತ ತಲೆಪಾಯ್ಕಲಾ ಚಕ್ರ ಘುರಿಘುರಿಲೆನುತ್ತ ೩೭

ತಲೆಯರಿಯೆ ನೆಲಕೆ ಬೀಳ್ವನಿತಕೆ ಶಶಾಂಕಧರ
ನಲಘುಪದಪದ್ಮವುಂ ಕಾಣುತ ಶಿರಂ ಸ್ತುತಿಸೆ
ಸುಲಭನಲ್ಲಾ ಶಂಕರಂ ಭಕ್ತವರ್ಗಕ್ಕೆ ವೇಣವರ ಕೇಡೆಣಿಪನೆ
ಒಲಿದೆಲೆ ಜಲಂಧರಾ ನಿನ್ನಿಷ್ಟವೇನೆನಲ್
ಕಲಿತ ಜಾತಿಸ್ಮರತ್ವದೊಳೆಂದ ಬಹುಭೋಗ
ಮೊಲಿದುಂಡೆ ಸಾಕದಂತಿರಲಿ ನಿನ್ನಯ ಚರಣಸರಸಿಜಮಜಸ್ರು ನೋಳ್ಪ ೩೮

ವರಸುಖಮಂದೊಂದೆ ಸಾಕಂಪ್ರಿಯೊಳ್ ದರಿಸೆನಲ್
ಹರನತಿಪ್ರೀತಿಯಿಂ ಜಂಘೆಯೊಳಜಂಗಿಸೊಲ್
ಧರಿಸಲಂದಿದು ಜಲಂಧರಲೀಲೆ ಬಳಿಕಲಾ ಹರಿ ವಿಷ್ಣುಪದದೊಳಿರ್ದು
ದುರುಳದಾನವನಳಿದ ವಾರ್ತೆಯಂ ಕೇಳಂತ್ತ
ವುರಗಪಾಶದ ಕಟ್ಟಿನೊಡನೆ ಗಿರ್ರೆಂದಾಗ
ತಿರಿಗಿ ದುಮ್ಮೆಂದು ಶಿವನಗ್ರದೊಳ್ ಬೀಳೆ ನೀನಾರೆನುತ್ತಭವ ಕೇಳೆ ೩೯

ಎಲೆ ದೇವ ಖಳಜಲಂಧರನೆಯ್ದಿ ವೈಕುಂಠ
ಕೊಲಿದುಬಂದೆನ್ನೊಡನೆ ಕಾದಿ ಹರಿಪಾಶದಿಂ
ಬಲಿದಂ ಬಂಧಿಸುತಂಬರಕ್ಕಿಡಲ್ ಕಟ್ಟಿನೊಳಗಿರ್ದು ಬಂದೀಗ ಪಾದ

---

1 ಗೊರದನಿಟ್ಟ (ಕಗ)

ಜಲಜವಮಂ ಕಂಡೆರಗಿ ಬರ್ದುಂಕಿದೆನೆನಲ್ಕೆ ನೀ
ನೊಲಿದು ವೈಕುಂಠಕ್ಕೆ ನಡೆಯೆನಲ್ ಚಕ್ರವಮಂ
ಪೊಲಿದಿತ್ತೊಡಾಂ ಪೋಪೆನಲ್ಲದೊಡೆಯಸುರರಿಂ ಬಹ ಕೊಲೆಯ ಕೊಳಲಾರೆನು ೪೦

ಮಂತ್ತೆಯಂತಲ್ಲದೆ ಮಹಾಚಕ್ರದಿರವ ಕೇ
ಳ್ದುತ್ತಮ ತಪಂಗೈದು ನಿಮ್ಮ ಮೆಚ್ಚಿಸಿ ಬೇಡೆ
ಚಿತ್ತಮೊಲಿದಿತ್ತೊಡಾಗೆಲ್ಲರಂ ಸಂಹರಿಸಿ ನಿಮ್ಮೊಳಿದಿರಾಂತು ನಿಲ್ವಂ
ತಥ್ಯಮಾಗೆನಗಿತ್ತೊಡಸುರರಂ ಜಯಿಸಿಯಾಂ
ಬಿತ್ತರದ ವೈಕುಂಠದೊಳಗಿರ್ಪೆ ಸುಖದೊಳೆನೆ
ಚಿತ್ತಜಾರಾತಿ ಸಾಸಿರಧಾರೆಯಿಂ ಜ್ವಲಿಪ ಚಕ್ರಮದನಿತ್ತು ಹರಿಯಂ ೪೧

ಕಳುಹಿ ತಾನಧಿಕಾಕ್ಷಗಣಸಮೇತದೊಳಾಗ
ಘಳಿಲನೆಯ್ದಲ್ ರಜತಪರ್ವತಕ್ಕಿತ್ತ ಚಿ
ತ್ಕಳೆಯಾಂತ ಪರ್ವತೇಶ್ವರ ಲಾಲಿಸೈ ಮತ್ತೆ ಕ್ಷುಪನೆಂಬ ಭೂಪಾಲನು
ತೊಳಪ ಚ್ಯವನಾತ್ಮಭವನಾಶ್ರಮಕೆ ಚತುರಂಗ
ಬಲದೊಡನೆ ಪೋಗಿ ಪ್ರತಿದಿನ ಪಗಡೆಯಾಡುತತಿ
ಖಳನೊಂದುದಿವಸಮಿಪ್ಪತ್ತೊಂದುಬಾರಿ ತಾಂ ಸಲೆ ಸೋಲ್ತು ಕಿನಿಸಿನಿಂದೆ ೪೨

ಮುಳಿದು ಘೂರ್ಮಿಸುನೆದ್ದ ಪುಲಿಯಂತೆ ಘುಡುಘುಡಿಸ
ಲಳುಕದಿಹ ಮುನಿಯ ಕರ್ಣದೊಳಾಪ್ತರುಸಂದರ್ಗರೀ
ಯಿಳೆಯೆರೆಯ[1]ಗೊಂ[1]ದಾಟಕೋಡಿದರೆ ಕರೆದೊಯ್ವೆವೆಂಬ ವಚನಕೆ ದಧೀಚಿ
ಚಲದ ಸಿಂಗದ ಶಿಶುಗಳೆತ್ತ ಸೀಳ್ನಾಯೆತ್ತ
ಲಳಿಕಾಕ್ಷಭಕ್ತರೀ ಹರಿದಾಸನೊಳ್ ಸೋಲ್ತೊ
ಡಳವಡದು ಶಿವನಿಷ್ಠೆಯೆಂಬ ನುಡಿಗೇಳಿ ರಾಯಂ ಪೇಳ್ದನೆಲೆ ದಧೀಚಿ ೪೩

ಚಿರಕಾಲ ಹರಭಕ್ತಿಯಿಂದೆರಲೆಸಮ್ಮ ಮ
ತ್ತರಿದೆನಿಪ ಭಾಗ್ಯಮಿದೆ ನಿನ್ನ ತಿಕಕೊಂದು ಪಳೆ
ಯರಿವೆಯಂ ಕಾಣೆಯಹಾಂ ಹರಿಯಿಂದೆ ಸಕಲಸೌಭಾಗ್ಯಮಂ ಭೋಗಿಪೆ ಗಡ
ತಿರುಕ ಗೊರವನ ಭಕತನೆನಲು ಮುನಿ ಕೋಪದಿಂ
ದರಸಿನಂರೆ ಬಾಯ್ಬುಡಿದು ಚೀಯೆನಲ್ಕವ ಕ್ರೋಧ
ದುರಿಯನುಗುಳುತ ವಜ್ರಗದೆಯಿಂದ ಬಡಿಯಲ್ಕೆ ಸಿಡಿದವೆಣ್ದೆಸೆಗಸ್ಥಿಯಚು ೪೪

1 ಕೊಂ (ಕ)

ಮಿಡಂಕುತಾ ಮುನಿಯುಸುವ ಬಿಡುವಲ್ಲಿ ಕವಿಯುಂ ಮನು
ಮೃಡನಿಂದ ಪಡೆದನೆಂತೆಂದು ಜಾನಿಸುತ ಬಿಡೆ
ವೊಡನೆ ಭಾರ್ಗವ ಬಂದು ಪನ್ನೆರಳ್ಕಾವುದದೊಳಿರ್ದಸ್ಥಿಪಲಲಂಗಳಂ
ತಡೆಯದಾಕ್ಷಣ ತಂದು ಸೇರಿಸುತ ಜೀವವಂ
ಪಡೆದ ಮೃತ್ಯುಂಜಯಂ ಸುಮಂತ್ರದಿಂದಾಗುಶನ
ನಡಿಗೆರಗಿಯಾ ದಧೀಚ್ಯುಸುರ್ದನೆನ್ನಂ ಪೆತ್ತ ತಂದೆ ನೀನೆಂದು ಸ್ತುತಿಸೆ ೪೫

ಎಂದ ಮಾತಿಂಗಸುರಗುರುವೆಲೆ ದಧೀಚಿ ಕೇಳ್
ತಂದೆಯೇ ನಿನಗೆನಗೆ ವಿಶ್ವಕ್ಕೆಯಾ ಹರಂ
ಯೆಂದಂ ನಿನ್ನಿಷ್ಟಮಂ ಶಿವನಿಂದ ಪಡೆಯೆನುತ್ತೈದಿದರೆ ಕವಿವಾಸಕೆ
ನಿಂದುಗ್ರತರತಪವ ಮಾಡೆ ಶಿವ ಮೆಚ್ಚುವಗೆ
ಸುಂದರದ ವಜ್ರಕಾಯವನಿತ್ತು ಹೃದಯದೊಳ್
ನಿಂದು ನಿನ್ನಯ ಮನದಯಿಚ್ಛೆಯಂ ಕೊಡುವನೆನಲಾ ದಧೀಚಿವ್ರತಿಪನು ೪೬

ಪರಶಿವಸಹಾಯೆಂದಿಂ ಕ್ಷುಪನ ಸಭೆಗೈದಿಯುಲೆ
ಯಂರವಿಂದಭವನ ಶೀನಿನೊಳುದಿಸಿ ಬಹಂಭಾಗ್ಯ
ಮರವಿಂದನಯನ ನೆರೆಪಡೆದವನ ಬೆಂಬಲದೊಳವನಿತ್ತ ವಜ್ರಗದೆಯಿಂ
ಶಿರವ ಬಡಿದೆನ್ನ ಕೊಂದೈ ದ್ರೋಹಿಯೆಂದು ಮುನಿ
ಕರದ ಮುಷ್ಟಿಯೊಳವನ ತಲೆಯೊಡೆಯಬಡಿದವನ
ವರಸೈನ್ಯಮಂ ಕೊಲಲ್ಕಾರ್ದು ಕ್ಷುಪ ವಜ್ರಗದೆಯಿಂದಿಡೆ ದಧೀಚಿಮುನಿಯಂ ೪೭

ಉರವ ತಾಗುತ್ತ ಪುಡಿಪುಡಿಯಾಗಲವನ ನಿಜ
ಚರಣದಿಂದೊದೆಯಲವನಸ್ಥಿಗಳು ನುಗ್ಗಾಗಿ
ವೊರಲಿ ಕೆಡೆಯಲ್ ನಾಯಿ ನಿನ್ನ ಭಂಗಕ್ಕಾವ ಸಹಕಾರಿ ನೋಳ್ಪೆನವನಂ
ತೆರಳ್ದನೆಂತೆಂದಿತ್ತ ಕ್ಷುಪನೆದ್ದು ಪೂಜಿಸಲ್
ಹರಿ ಬಂದಿದೇನಧಮಶರಣರೊಡನತಿವೈರ
ದಿರವಿನಿಂ ಹಾನಿ ನಿನಗಾಯ್ತಾಗಲೇ ಶಂಖುಕರ್ಣನಿಂದೆನಗಾದೊಲು ೪೮

ಅರಿಯೆ ನೀಂ ಮದ್ಭಕ್ತನಾಗಿ ವೈರವನು ಶಂ
ಕರನೊಡನೆ ಯಾವನಾಚರಿಪನೋ ಬಳಿಕ ಶಂ
ಕರಭಕ್ತನಾಗಿ ನನ್ನಲಿ ವೈರಮಾವನಾಚರಿಪನೊ ಮೇಣಿರ್ವರುಂ

ತರಣಿಚಂದಿರರಿಪ್ಪತನಕ ನರಕಾಲಯದೊ
ಳಿರುವರೆಂಬುದನು ಬಿಡುಬಿಡು ಚಲವನೆನಲಾಗ
ಮರಳಿ ವಂದಿಸಿ ದೇವ ಎಂತಾದರೆನ್ನ ಪಂಥವ ಸಲಿಸಬೇಕೆಂದೆನೆ ೪೯

ಆದೊಡೊಳ್ಳಿತು ನೀನು ಶಿಷ್ಯನಾಗೆನಲಧಿಕ
ಮೋದದೆ ಕಮಂಡಲಂ ಕೊಡೆಯ ಪಿಡಿವುತ್ತ ಬಾ
ಸಾದರದೊಳೆಂದು ತಾಂ ಶತವೃದ್ಧಮೌನಿವೇಷಂದಳೆವುತವನ ಬಲದ
ಭೇದವರಿಯದೆಯಾಶ್ರಮಕ್ಕೈದಲವ ತಿಳಿವು
ತಾ ದಧೀಚಿಯುಂ ಸೋತೆನೆಂಬ ಭೈಕ್ಷಮನುಯೆಂ
ತಾದಡೆಯು ನೀಡೆನೆಂದಿದಿರ್ವಂದು ಕಪಟಮೌನಿಯು ಕಜ್ಜಮೇನೆಂದೊಡೆ ೫೦

ಆನು ಮುನಿ ಎನಗೇಕೆ ಕಜ್ಜಮೆಂಬಾ ನಂಡಿಯ
ಮೌನಿಪ ದಧೀಚಿ ಕೇಳ್ದಿಲೆ ನೀನು ಕ್ಷುಪ ಹರಿಗ
ಳೇನು ಸಮರಕೆ ಬಂದಿರೋ ಎನಲ್ ವಿಸ್ಮಯಂಗೊಂಡು ನಿನ್ನಯ ಘನತೆಗೆ
ನಾನು ಸೋಲ್ದಪೆನೆ ಎಂದೆನಲು ನಸುನಗುತ ಮುನಿ
ನೀನೆನ್ನ ಜಯಿಸೆಂದಡಾಂ ದೈವ ನೀ ಪಾಯಿ
ನೀನೇನ ಮಾಡಲ್ ಬಿಡಿಪರಿಲ್ಲೆನಲ್ ದೇವತೆಯ ತೋರೆನಲ್ಕೆ ಪೊಡೆಯಂ ೫೧

ಬಗೆದುದರದೊಳ್ ವಿಶ್ವಮಂ ತೋರೆ ದನುಜಾರಿ
ನಗುತ ಮಾಡದ ಕೃತ್ಯಮಂ ಮಾಡಿ ಬಹುರೂಪ
ನೊಗುಮಿಗೆಯೊಳೆಸಗಿದ್ಯೆ ನಗರೆ ಮಿಕ್ಕುವರೆನಲ್ ನೀಂ ತೋರು ನೀಂ ತೋರೆನೆ
ಯುಗುರಕೊನೆಯಲ್ಲಿ ಬಗೆಬಗೆ ಹರಿಯಜೇಂದ್ರರಂ
ನಗಜಾಧಿಪತಿಯನಂತಬುಜಾಂಡ ಕೋಟಿಯಂ
ಸೊಗಸಿನಿಂ ತೋರಿಸಲ್ ಭಲರೆ ನೀಂ ದಕ್ಷ ಗಡ ಕಾದಲನುವಾಗೆಂದೆನೆ ೫೨

ಎಲೆ ಕಮಲನಾಭ ನಾಂ ಯುದ್ಧಸನ್ನದ್ಧನಾ
ಗೊಲವಿನಿಂದಿಹೆ ನೀನು ಬಾರೆನಲ್ ದಧೀಚಿ ನೀ
ನಲಘು ಶಸ್ತ್ರಾ[ಸ್ತ್ರ]ಮಂ ಕೋ ನಿರಾಯುಧನೊಡನೆ ಹರಿಬವೇನೆನಲು ಮುನಿಪಂ
ಮಲಹರಕೃಪಾದ್ರ್ರದೃಗ್ವಜ್ರಕವಚಾಸ್ತ್ರವಿಂವೆ
ನಿಲು ಸಮರಕೆನಲು ಹರಿ ಶಾಙ್ಗ್ರಮಂ ಕೊಂಡು ಸ್ಫೂ
ಜ್ವಲತರಶರದ ವರ್ಷಮಂ ಸುರಿಯೆ ಮುನಿಯಂಗಸೋಂಕಿ ತುಂತ್ತುಮುರಾಗಲು ೫೩

•ಮತ್ತೆ ನಂದಕದಿಂದ ಕಡಿಯೆ ಶತಖಂಡಮಾ
ಯ್ತುತ್ಯಧಿಕ ಕೌಮೋದಕೀಗದೆಯಿನಿಡಲದಕೆ
ತತ್ತಸುವ ತಾಗಿ ಪುಡಿಪುಡಿಯಾಗೆ ಮುನ್ನ ಶಿವ ಶಿವಭಕ್ತರಂ ಕೂರ್ತು ನೀ
ಮತ್ತನಾಗಿರ ಬೇಡ ಕೋ ಸಂದರ್ಶನವೆನುತ
ಮೃತ್ಯುಹರ ಪೇಳಿದುದ ಮರೆದು ದನುಂಜಾರಾತಿ
ಕಂತ್ತಿಗೆಗಳಂರಿವ ಚಕ್ರವ ಬಿಟ್ಟನಾಗಲಾ ಮುನಿ[1]ದಿಹ ದಧಿಚಿಯ ಮೇಲೆ[1] ೫೪

ಘುಳುಘುಳುಧ್ವಾನದಿ ತುಳುಂಕಿ ಲೋಕಂಗಳಂ
ಘುಳಿಲ ನೆರೆ ಗಿಳನಮಂಗೊಳುತ ಕಳಕಳಿಸಿ ಬರೆ
ತಳುವದೆ ದಧೀಚಿಯೂರ್ದಳುಕದೆಡಕೈಯಿಂದ ಅಳವಳಿಸಂತದ ಪಿಡಿವುತೆ
ಖಳನೆ ನೋಡೆನುತಲಿಕ್ಕೈ ಗಳಿಂ ತರಗೆಲೆಯೊ
ಲೆಳೆದು ಚೂರ್ಣವಮಾಡಿಯುಃಪೆಂದುವುರುಹೆ ಹರಿ
ಕಳಿತಪೂವಿನ ಪಾಂಗಿನಿಂ ಮೊಗಂ ಬಳಸಿ ನಿಲೆ ಬಳಿಕೆಲ್ಲರಂ ಕೊಲ್ಲುತೆ ೫೫

ಹರಿಯಂ ಮುಂದಲೆವಿಡಿದಂ ಕೆಡಹಿದಂ ರಂಗದುರೆ
ಕಂರಿಯಂತೆ ಮತ್ತವನಯೆರ್ದೆಯನೊದೆಯಲ್ಕಲ್ಲಿ
ಸಿರಿ ನೆಲಸಿದಳ್ ದಧೀಚಿಯೆ ಮಹಾಶೈವ ಮತ್ತವನ ಚರಣದ ಮಹಿಮೆಯಂ
ಯುರಗರಾಜಂಗೆ ಪೊಗಳಲ್ಕರಿದು ಬಳಿಕ ಪದ
ಸರಸಿಜಕ್ಕೆರಗಿ ಹರಿ ಚಕ್ರಮಂ ಬೇಡೆ ಮುನಿ
ಹರನನರ್ಚಿಸಿ ಪಡೆದುಕೋ ಎಂದು ಬೀಳ್ಕೊಟ್ಟು ನಿಂದಂ ನಿಜಾಶ್ರಯದೊಳು ೫೬

ಬಂದು ಪಾಲ್ಗಡಲಲ್ಲಿಯಿಂದಿರೆಯುಂ ವನಜಾಕ್ಷ
ರಂದು ಸುಖಮಿರಲಂ ದನಂಜರ್ ತಪವ ಮಾಡಿಯುರ
ಎಂದಜನಿಯಿಂ ವರವ ಪಡೆದವಂರರಂ ಭ[ಂ]ಜಿಸಲ್ ಸುರರು ವಿಧಿಗೆ ಪೇಳೆ
ಕುಂದುತಬ್ಜಜಮುಖರ್ ವಿಷ್ಣುವಿಂಗರುಹಲವ
ನಿಂದುನಾನೇ ನಿರಾಯುಧಪಾಣಿಯಾದೆನ
ರ್ಧೇಂದುಮೌಳಿಯನರ್ಚಿಸುತ್ತ ಚಕ್ರಂಬಡೆದು ಬಹೆನೆಂದು ಕಳುಹುತಾಗ ೫೭

ಹರನ ಪದಪಂಕಜವ ಪಂಕಜಸಹಸ್ರದಿಂ
ಹರಿಯು ಹರನಂ ಪೂಜಿಸಲ್ ನೇಮದಿಂದಲೊಂ
ದರಲಂ ಕುಂದಿಸಲಭವ ಕಂಡು ವ್ರತಹಾನಿಯಹುದೆಂದು ಹರಿ ಕಣ್ಣ ಕಿಳ್ತು

1 ದೇಹದಗಲು (ಕ) • ಗ ಪ್ರತಿಯಲ್ಲಿ ೫೪ನೆಯ ಪದ್ಯ ಪುನರಾವರ್ತನೆಗೊಂಡಿದೆ

ಪರಮೇಶನಂಘ್ರಿಯೊಳಗಿಟ್ಟು ಪೂಜಿಸೆ ಶಿವಂ
ವರವನೀವರೆ ಮುನ್ನ ಕಣ್ಣಿತ್ತುಯೆಲೆವಿಷ್ಣು
ಗಿರಿಜೆ ಮುಳಿದೆಮ್ಮ ನಿಂದಿಸಿ ಕೇಳ್ದನೆಂದು ಶಿರವರಿದಧಿಕನಿಷ್ಠೆಯಾಂತ ೫೮

ಉತ್ತಮಮಹೇಶ್ವರಂ ನಿನಗೆ ಕಮಲಾಕ್ಷನೆಂ
ಬತ್ಯಧಿಕ ಪೆಸರಿಂದಿನಿಂದಿರಲೀ ವರವ ಬೇ
ಡಿತ್ತಲೆನೆ ಕ್ಷುಪ ಪಾಪಿಯಿಂ ಚಕ್ರಗತಮಾಯ್ತು ಕೊಟ್ಟು ಕಾಯುವದೆಂದೆನೆ
ಮತ್ತೆ ಚಕ್ರಂಬರೆದು ಗೋತ್ರಯದಿನೋಡಿ ಶಿವ
ಕತ್ತಲಾಣ್ಮನೆ ನಾಭಿ ರವಿ ಸುತ್ತುಕಳೆ ಮೊಳೆಯು
ನೆತ್ತಿಗಳ್ ಕೋಟಿಪ್ರಭಾಪುಂಜಮಯಸುದರ್ಶನವ ಹರ ಕರದೊಳಾಂತು ೫೯

ಎಲೆ ಸುದರ್ಶನವೆ ನಮ್ಮಯ ಭಜಕ ಹರಿಯ ಕರ
ತಳದೊಳಿಹುದತಿಭ್ರಷ್ಟರಂ ಕಂಡು ವಧಿಸು ನೀ
ನಲಘು ಶಿವಲಿಂಗಭಕ್ತರ ಕಂಡು ಪೊಡಮಡುವುದೆಂದಂ ವಿಷ್ಣುವಿಗೀವುತೆ
ನಲವಿನಿಂದವನ ಮನ್ನಿಸಿ ದೇವದುಂದುಭಿಗ
ಳುಲಿಯೆ ಸುರಗಣರುಂ ಉಘೆವುಘೆಯೆನಲು ದೇವಕುಲ
ತಿಲಕ ಶಿವಶಾಂಭವಿಯುರಡರ್ದು ವೃಷಭನನಾಗಲೆಯ್ದಿದರ್ ಕೈಲಾಸಕೆ ೬೦

# ಎಂಟನೆಯ ಸಂಧಿ

ಸೂಚನೆ : •

ವಿಧಿಯೆ ಸಂಹರಿಸಭವನಿರೆ ದಕ್ಷಯಾಗವಂ
ಮದದಿಂದ ಹರನುಳಿದುಪಕ್ರಮಿಸೆ ವೀರೇಶ
ನುದಿಸಿ ಜನ್ಮದ ಭಾಗಮಂ ಕೊಡದಿರಲ್ಕಾತಗಾಗ ಕಂರಿದಲೆಯಿತ್ತನು

ಗೌರಿಯುದರದಲಿ ಒಡಬಾಸೆಯ ಕಂಡು ಶಿವ
ಚಾರುಲೀಲೆಯೊಳಿದೇನೇನು ಗಿರಿಜಾತೆ ನಿ
ನ್ನೀ ರಮ್ಯನಾಭಿಯಂ ಎಳೆಯ ಕಾಳೋರಗಂ ಪೊಗಂತಿದನೆ ಶಿವ ಬೆದರುತ
ನೀರೆ ನೋಡುತ ಕಾಣದಕಟಕಟ ಸತ್ತೆನೆನೆ
ಮಾರಾರಿ ಬೆನ್ನೊಳಿದೆ ಬಂತೆಂದು ವೇಣಿಯಂ
ತೋರೆ ಬೆದರುವ ಪಾರ್ವತಿಯನಂ ಬಿನದಿಪ ಮಲ್ಲಿಕಾರ್ಜುನಂ ಪೊರೆಗೆಮ್ಮನು ೧

ಕಲ್ಯಾಣದಲ್ಲುಮಾವಲ್ಲಭನ ಭಕ್ತಗೃಹ
ದಲ್ಲುಣಲು ಪಾರ್ವರೀ ಮುಚ್ಚಿಗನ ಮನೆಯಲ್ಲಿ
ನಿಲ್ಲದನ್ನವ ಕೊಂಬುದಲ್ತೆನಲ್ಕವರ ಜರೆಯಲ್ಕವರು ನಿಮಗೆ ದೈವಂ
ಮೆಲ್ಲನುಸುರೆನೆ ನಮಗೆ ಜಂಗಮವೆ ದೈವವೆಂ
ಬಲ್ಲಿ ವಿಪ್ರರ ದೈವವಾವುದೈಯನೆಗ್ನಿಯ
ನಿಲ್ಲಿಸುತ್ತೇಳುಂದಿನ ಮಹಿಮೆಯಂ ಮೆರೆದ ಶ್ರೀಪತಿಪಂಡಿತರ್ಗೆರಗುವೆ ೨

ವರ ಮರುಳುಸಿದ್ಧೇಂದ್ರಗುರುವೆ ಬಿನ್ನಪವನಾ
ದರಿಸೈ ಜಲಂಧರಪ್ರಹರಚಕ್ರಸುದಾನ
ದಿರವ ಕೇಳ್ದಾನು ಕೃತಕೃತ್ಯನಾದೆನು ದೇವಬ್ರಹ್ಮ ದಕ್ಷಬ್ರಹ್ಮರ
ಶಿರಗಳರಿವುತ ಮೆರೆದ ಪರಮಲೀಲಾಮೃತವ
ನೆರೆವುತೆನ್ನಯ ಕಿವಿಯೊಳಲೆಯೊಳಗೆ ಮನವೆನ್ನ
ವುರುಶಿಶುವ ಸಲಹೈ ಮದೀಯ ಚಿಚ್ಛೇಂದ್ರನೆಂದೆರಗಿ[ದ]ದಧೀಚಿಮುನಿಪಂ ೩

ಉಮೆಯ ರಮಣನ ವಾಕ್ಯದಿಂದ ಬರದೋದೆ ನಿಜ
ಕಮಲಪುತ್ರನವದನದಿಂದುದಿಸಿ ವಾಗ್ದೇವಿ
ಯಮಮ ಲಾವಣ್ಯಲಕ್ಷಣರೂಪಸೌಂದರ್ಯಯುತೆಯಾಗಲವಳ ಕಂಡು

---

• ದಕ್ಷಯಾಗ (ಗ)

ಭ್ರಮಿಸಿ ಕಾಮಾತುರದೊಳವಳ ಪಿಡಿಯಲ್ಕಾಗ
ಕ್ರಮತಪ್ಪುವರೆ ಪಾಪಿಯೆಂದು ಕೈಕೊಸರಿಡುತೆ
ಸುಮನಸರು ನಗರೆ ನವಬ್ರಹ್ಮರೊಡಬಡುವರೇ ಲೋಕಕತಿಹಾಸ್ಯಮಲ್ತೆ ೪

ಲೋಕೇಶ ಲೋಕಜನಕಂ ಪಾವಿತಪ್ಪಿದೊಡೆ
ಯಾಕೆವಾಳರು ತಪ್ಪಿ ನಿನ್ನಂತೆ ನಡೆಯರೇ
ಯಾಕೆ ನೀನೆನಗೆ ಜನಕಂ ನಾನು ಶಿಶುವಲ್ಲವೇ ಎನಲ್ ಕಾಮಾ[1]ತುರಂ[1]
ಸಾಕು ನಿನ್ನಯ ಚಾಟುಮಾತಂಬುಜದ ಜೇನು
ಕಾಕಕೊಂಬುದೆ ಭ್ರಮರನಂತೆ ಎನ್ನಂ ದಯದೊಳ್
ಲೋಕ ಬಲ್ಲುದೆ ಕಾಮಕೇಳಿಗನುವಾಗು ಪೆಣ್ಣೊಂದು ಗಂಡೊಂದು ಕುಲವು ೫

ಮತ್ತೆ ಕೇಳ್ ಶಿವಶಕ್ತಿರೂಪಮಿತ್ತೆರ ಜಗಂ
ಪಥ್ಯಮಿಂತುಳಿದುದೆಲ್ಲಂ ಮಿಥ್ಯಮೆಂದು ಕಡು
ಮತ್ತಿನಿಂ ವಿಷಯವ್ಯಾಮೋಹ ಪೆಗ್ಗಳಿಸಿ ತುಡುಕಲ್ಕೆ ಹೆಣ್ಣೆರಳೆಯಾಗಿ
ಸತ್ತು ಸಾವರಿಯದೇ ನಿಟ್ಟೋಟದಿಂದೋಡಿ
ವಂತ್ತೆ ಸರಳಿಸಿ ಲಂಘಿಸುತ್ತ ಕುಪ್ಪಳಿಸುತ್ತೆ
ತೆತ್ತು ಪರಿಯಲ್ಕತ್ತವಿಧಿ ಗಂಡೆರಳೆಯಾಗುತತಟ್ಟಲ್ಕೆ [2]ಹಾ[2] ಶಿವಶಿವಾ ೬

ಎಂಬ ವಾಣಿಯ ಶೋಕಸಂಕ್ರಾಂತರವವಗೇ
ಳ್ದಂಬಿಕಾಪತಿಯು ಕೈರಾತವೇಷವನಾಂತೊ
ಡಂಬಡಿಸಿ ನಿಗಮಾಳಿಜಾಯಿಲಂಗಳ ರೂಪವಹಿಸಿ ಹರನಡಿಕುರುಪಿನ
ಬೆಂಬಳಿಯೊಳಡಿಯು ಮೂಸುತ್ತ ಮೂಸುತ್ತ ಬರ
ಲಂಬುತೊಡರಿಸಂತಲಾರ್ದಸೆಯೆ ಮೃಗಗಳದಿಂ ಶಿ
ರೋಂಬುರುಹಮಳಿದು ಬೀಳ್ವನಿತಕಭವನ ಸ್ತುತಿಸಲೀಶಂ ಪ್ರಸನ್ನನಾಗಿ ೭

ವರವೇನು ಬ್ರಹ್ಮ ಕೇಳೆನಲು ವಾಣಿಯನೆನಗೆ
ವರಿಸಿ ಮಗಳೆಂಬುದಂ ಬಿಡಿಸಿ ಮದುವೆಯ ಮಾಳ್ಪು
ದಿರವೀಗ ದೇವಯೆನಲವಳ ಸೃಜಿಸುತ ರಮಣಿ ಕಲ್ಯಾಣಮೆಸಗಲೆನಗೆ
ಚರಣಸೇವೆಯ ಮಾಡುತಿರ್ಪರುಂ ಸುಖಮಿನೇ
ದೊರೆದುಂ ಕಳುಹಿದುದು ಪನ್ನೊಂದನೆಯ ಲೀಲೆ ಮುನಿ
ನಿರವಿಸುವೆನಿನ್ನು ದ್ವಾದಶವೀರಭದ್ರಾವತಾರ ರೌದ್ರದ ಲೀಲೆಯಂ ೮

1 ರುತಂ (ಗ) ಹೋ (ಗ)

ಎಲೆ ದಧೀಚಿವ್ರತಿಪ ಕೇಳೆಂದು ಮರುಳೇಂದ್ರ
ನೊಲಿದೊರೆವುತಿರ್ದ ಶೈಲೇಶ ನೀಂ ಲಾಲಿಸೈ
ಜಲಜಸಂಭವನಾದಿಯಲ್ಲಿ ಪುಟ್ಟಿಸಿದ ನವಬ್ರಹ್ಮರೊಳ್ ದಕ್ಷಬ್ರಹ್ಮಂ
ನಲವಿನಿಂದೆಲೆ ಜನಕ ಸಕಲದೇವರ್ಗೆ ಬಿಡ
ದೊಲವಿತ್ತು ರಕ್ಷಿಸುವ ದೇವರಂ ಪೇಳೆನಲ್
ಮಲಹರನೆ ಸರ್ವರೊಳಗುತ್ತಮೋತ್ತಮಮೆಂಬುದಿದು ಸತ್ಯಸತ್ಯಮೆನಲಂ ೯

ನಲಿದಂ ದಕ್ಷಪ್ರಜಾಧಿಪನೆಸಗಿ ತಪವನಂ
ತಲಘುಶಿವನಂ ಕುರಿತೊಡವಗೆ ಮುಂದದಿಂದೆ ಹರ
ಸಲೆ ಸಕಲಸಂಪದವನಿತ್ತು ಕಳುಪಲ್ ದಶಸಹಸ್ರಪುತ್ರರ ಪಡೆಯಲು
ಬಲವಂತ[1]ನಾ[1]ಗಿರುತೆ ನಾರದನ ಬೋಧೆಯಿಂ
ದಲಿ ಮೋಕ್ಷಮಂ ಪಡೆಯಬೇಹುದೆಂದಾಗ ತಪ
ಕೊಲಿದವರುಂ ಪೋಗೆ ಪುನರಪಿ ಪುತ್ರರಂ ಪೆತ್ತಡವರು ಮತ್ತಂತಾಗಲಂ ೧೦

ಅತಿದುಃಖದಿಂ ನೆಂಒಂದು ಗಂಡುಮಕ್ಕಳನಿರದೆ
ಮಿತವಿಲ್ಲದಾಂ ಪಡೆದೆ ಚೇಯಿನ್ನು ಸಾಕೆನ್ನು
ತತಿಶಯದ ಪೆಣ್ಣುಮಕ್ಕಳ ಪೆತ್ತ ಮೂವತ್ತುಮೂರ್ಕೋಟಿಯಾದಮರರ
ತತಿಗೀವುತನಿಬರುಂ ಜಾಮಾತರಾಗೆ ಶಿವ
ನತಿಯುಗ್ರತಪದಿ ಮೆಚ್ಚಿಸಿ ಭವಾನಿಯ ತನ್ನ
ಸತಿಯೊಡನೆ ಪಡೆದು ತದ್ದೇವಿಯಂ ದಕ್ಷ ಪುರಕೊಯ್ದು ಮನದೊಳಗೆ ಹಿಗ್ಗಿ ೧೧

ಏನೆಂಬೆ ಸಕಲಸಂಭ್ರಮದಿಂದ ಸಲಹಿ ಬಳಿ
ಕಾ ನವ[2][ಶಂ][2]ಕರಂಗಿತ್ತು ಕಲ್ಯಾಣಮಂ
ತಾನೆಸಗುತತ್ಯಂತಹರುಷದಿಂದೊಂದುದಿನಮಳಿಯರುಂ ಮಕ್ಕಳುಗಳುಂ
ಸಾನುರಾಗದಿ ನೋಡಿ ಸತ್ಕಾರಗಳ ಮಾಡು
ತಾನಖಿಳರಿಂ ಪೂಜ್ಯಮಂ ಪಡವೆನೆನುತಾಗ
ಲಾ ನಿರ್ಜರಾಲಯಕೆ ಪೋಗಲೆಂದಾಗ ನವರತ್ನಪುಷ್ಪಕವನಡರಿ ೧೨

ಬರಲಖಿಳವೈಭವಂ ವೆರಸಿಯಳಿಯರ್ಗಳತಿ
ಭರದಿಂದ ತಂತಮ್ಮ ನಗರಕೊಯ್ಯುತ ಮುದಂ
ವೆರಸಿ ಸಕಲೋಪಚಾರಂಗಳಿಂ ತಣಿಸಿ ಪೊಡಮಡಲವರ ಪರಸಿ ಬಳಿಕ

1 ದ (ಕಗ) 2 ಶರ (ಕಗ)

ಸುರರನಿಬರಿಂತೆನ್ನ ಸೇವಿಸಿದರಿವರೆರೆಯ
ಹರಿನಿಂತು ಶರಣೆಂದು ಸತ್ಕರಿಪನೋ ಪೇಳು
ಗರುವಿಪನೊಯೆಂದು ಮನದೊಳ್ಬಗೆದು ಶಂಕೆಯಿಂದ್ಯೆದಿದಂ ಕೈಲಾಸಕೆ ೧೩

ಇಂದುಮಣಿಮಂಟಪದೊಳಂಬಿಕೆ ಸಮೇತ ಮುದ
ಮೊಂದಿ ಸಿಂಹಾಸನಾರೂಢನಾಗಿರೆ ಶಿವಂ
ಛಂದಛಂದದ ರುದ್ರಗಣ ಪ್ರಮಥಗಣ ನಿವಹತಂಡತಂಡಂ ಮೆರೆಯಲು
ವಂದಿಸುತೆ ಹರಿಯಜೇಂದ್ರಾದಿ ದಿಕ್ಪಾಲರುರೆ
ನಿಂದು ಪೊಲ್ಮೆಪ ಮುನಿನಿಕರ ಜಯಜಯತುಘೇ
ಯೆಂದು ಸಂಭ್ರಮಿಸಿ ವೇದಾಳಿಯಬ್ಬುಗ್ಗಡಿಸಲಾ ಸಾಂಬಶಿವನೊಪ್ಪಿರ್ದನು ೧೪

ಇಂತೆಸೆವವೋಲಗದೊಳಿಹ ಪ್ರಣಮದರ್ಥನು ಸ
ಮಂತು ಕಾಣುತಲಹಂಕರಿಸಿಯಜ್ಞಾನದೊಳ್
ನಿಂತು ವಂದಿಸದಖಿಳಜಾಮಾತರೊಳಗೊರ್ವನಿವನನೇಂ ಘನತೆಯೆಂದು
ಚಿಂತಿಸುತ್ತಿರಲೆಡದಿಬಲದಿ ನಿಂತೋಲಗಿಪ
ನಂತಕಮಲಾಸನಾದಿಗಳನೀಕ್ಷಿಸಿ ಮರಳಿ
ಚಿಂತಿಸುತ್ತಿಹ ದಕ್ಷನಂ ನೋಡಿ ಕಟಕಟಾ ಮೋಹಕೆಣೆಯಿಲ್ಲವೆನುತ ೧೫

ಅಧಮಪಾತಕನಂತರಂಗದುರಹಂತೆಯಂ
ಮದನಾರಿ ಸರ್ವಜ್ಞನರಿದು ಮೊಗಮಂ ತಿರುಹೆ
ಮುದದಿ ಶಿವ ಮನ್ನಿಸದೊಡೇನು ಮಗಳೆನ್ನನುಪಚರಿಸಳೇ ಎನುತ ದಕ್ಷಂ
ಚದುರೆ ಶಿವೆಯೆಡೆಗೆಯ್ದಲಾ ಗಿರಿಜೆ ಪಂಕರುಹ
ಮೊದಗಿ ದೇವರ ಮಂಡೆಯೊಳಗಿರಲ್ ಪಂಕಬರ
ಲದಕೆ ಸನ್ಮಾನವೇ ನಾನೀತನುಪಚರಿಸೆ ಪತಿಗೆ ಸಲ್ವೆನೆಯೆನುತ್ತೆ ೧೬

ಸದಮಲಾತ್ಮಕಿ ಸತೀದೇವಿ ಮುಸುಡಂ ನೋಡ
ದೆದೆಯೊಳಗುದಾಸೀನಭಾವದಿಂ ಸುಮ್ಮನಿರೆ
ಪದುಳದಿಂದಿಕ್ಕಡೆಯೊಳಿರ್ದ ಗಣನಿಕರ ಬೆರಗಾಗಿ ನೋಡುತ್ತಿರುತಿರೆ
ಮದನಗುರು ಕಮಲಾಸನಾದಿಗಳು ಶಿವನಿಗೇಂ
ಹೃದಯದೊಳಗಾಚರಿಸಿದನೊ ತಪ್ಪನೀ ದಕ್ಷ
ನದ ಕಾಶಿಪುರವೈರಿವೈಮುಖ್ಯನಾಟಕವ ನಟಿಸಿದನೆನುತ್ತಿರ್ದರು ೧೭

ತನ್ನ ಮನದಲಿ ದಕ್ಷದುಮ್ಮಾನಗೊಳುತ ಮಿಗೆ
ಯನ್ನಪಾನಾದಿ ಭೋಗಗಳ ಕೊಳ್ಳದೆ ಮಗಳ
ಮನ್ನಿಸುತ್ತಿತ್ತುದಕೆ ಫಲವಲಾ ಸಭೆಯೊಳಗೆ ತನ್ನ ಮುಸುಡಂ ತೆಗೆದಂದು
ಇನ್ನಿರಲ್ ಸಲ್ಲದೀ ಠಾವಿನೊಳಗೆಂದೆನುತ
ಭಿನ್ನನಾಗಾಗಲೇ ತನ್ನ ಪಟ್ಟಣಕ್ಕೈದಿ
ಭಿನ್ನಭಾವದಲಿ ನೆರೆ ದುರ್ಬುದ್ಧಿಯಂ ನೆನೆವುತಾಗ ಮಂತ್ರಿಗಳ ಕರೆಸಿ ೧೮

ಏನಿರೈ ಮಂತ್ರಿಜನರಿಂತುದಾಸೀನತೆಯು
ತಾನೆಸಗಬಹುದೆ ಶಿವನೆನಲಾತ ಸರ್ವಜ್ಞ
ಮಾನಸದೊಳೀನನೆಣಿಸಿದಿರೊ ಮೇಣದಕೆ ಮಾಡಿದನೀಶ ಪ್ರತಿಕೃತಿಯನು
ನೀನೆಸಗು ಭೃತ್ಯಭಾವವನದಕ್ಕೊಲಿವನೀ
ಶಾನನೆನಲಾ ಮಾತನಾಲಿಸದೆ ಬೇರೊಂದು
ಹೀನಕರ್ಮವ ಮಾಡಲೆಳಸಿದಂ ರುದ್ರಾಪಚಯಸಿದ್ಧಿ ಘಟಿಸುವಂತೆ ೧೯

ಯಾಗಮಂ ಮಾಳ್ಪೆನೆಂದಾಗ ಮನುಮುನಿ ಯಕ್ಷ
ನಾಗ ಗಂಧರ್ವ ಕಿಂಪುರುಷ ಕಿನ್ನರ ಸಾಧ್ಯ
ಯೋಗಪದ ಸಿದ್ಧ ಚಾರಣ ಗರುಡ ದಿಕ್ಪಾಲಪುರಗಳಿಗೆ ಹರಿಯಜರಿಗೆ
ಬೇಗ ಪತ್ರಿಕೆಗಳಂ ಬರೆಸಿ ಕರಸುತ ಚರರ
ನೀಗ ಪೋಗುತ್ತನಿಬರಂ ಕರೆದುಕೊಳುತಲತಿ
ವೇಗದಿಂ ಬಹುದೆಂದು ಉಡುಗೊರೆಗಳಂ [1]ಕ[1]ಟ್ಟುತವರನಾಕ್ಷಣದಿ ಕಳುಹೆ ೨೦

ಅವರೆಲ್ಲ ಕೇಳಿಯಘಹರ ಮಹೇಶ್ವರಯಾಗ
ಕವಿರತಂ ನಿಲ್ಲದೆಯ್ದುವನೆಂದು ಮನದಲ್ಲಿ
ಸವಿನಯದೊಳಳಿಯರೊಳ್ ಚಂದ್ರವಯಂತಾದವರ್ ಬರಲವರ ಸತ್ಕರಿಸುತೆ
ತವೆಯದಾಕ್ಷಣ ಯಜ್ಞಸಾರ ಸಂಬಾರಮಂ
ಸವಿಶೇಷವಾಗಲೆಲ್ಲರ ಮುಖದಿ ಒದಗಿಸು
ತ್ತವರವರ ಕೈಗಳಿಂ ಹವ್ಯವಾಹನನ ಬೆಳಸುತೆ ಯಜ್ಞಮಂ ಮಾಡಿಸೆ ೨೧

ಹರರಹಿತಯಜ್ಞಮಂ ಮಾಡುತಿರೆ ನಾರವಂ
ಭರದಿಂದಲೆಯ್ದಿ ಶಿರಮಿರಲು ಮೇಣ್ ಮೊಳಕಾಲಿ
ಗರಸುಪಟ್ಟಂ ರಚಿಸುವಂತೆ ಶಿರಮಿಲ್ಲದ ಕಬಂಧಕುರೆ ಸೇಸೆಯಿಡುವ

---

1 ಕೊ (ಕ)

ತೆರನಾಯ್ತು ಹಾ ಭಾಗ್ಯವೇ ಎನ್ನ ಪುಣ್ಯದಿಂ
ತೆರದ ಕಾಲಂದೊರೆವುದರಿದೆಂದು ಕಲಹಕತಿ
ಭರದಿಂದಲಿಚ್ಛೈಸುತೆಯ್ದಿದಂ ರಜತನಗಕೇನೆಂಬೆ ಕಲಹಾಶನಂ ೨೨

ಸಂದಣಿಸುತತಿವೇಗದಿಂ ಬಂದು ಗಿರಿಜೆಗಂ
ವಂದಿಸುತ್ತೀ ವಾರ್ತೆಯಂ ಪೇಳೆಯಕಟಕಟ
ಪೊಂದಿತೇಯಜ್ಞಾನ ಶಿವನನತಿಗಳೆದು ಯಜ್ಞವ ಮಾಳ್ಪರೇ ಎನಂತ್ತ
ಇಂದುಶೇಖರನರಸಿ ಸಕಳವೈಭವವೆರಸಿ
ನಂದನನನೊಡಗೊಂಡು ಬಂದು ಪುರಮಂ ಪೊಕ್ಕು
ತಂದೆಯಿಹ ಯಜ್ಞಶಾಲೆಯು ಪೊಕ್ಕಳತಿ ಹೆಕ್ಕಳಂಗೊಂಡುದಮರತಂಡಂ ೨೩

ಬರಲಖಿಳಬ್ರಹ್ಮಾಂಡ ಭಾಂಡಗರ್ಭನ ರಾಣಿ
ಗಿರದೆಯಾರತಿ ಕಳಶ ಕನ್ನಡಿಗಳಾಂತಮಳ
ಸುರಕನ್ನೆಯರು ಬರುತ್ತಿರಲವರ ಕಡೆಗಣ್ಣ ಸನ್ನೆಯಿಂ [1]ತ[1]ಡೆದು ಮೇಲೆ
ಸ್ವರವರ್ಣಮಂ ಕೇಳಿ ಕೇಳದಂತಿರಲಾಗ
ಬರಿಯ ಮಮಕಾರದಿಂ ಮುಂದುವರಿಯಲ್ಕಾತ
ತಿರುಗಿಸಲ್ ದೃಷ್ಟಿಯನ್ನಲ್ಲಿ ಗಿರಿಜಾತೆ ನಿಲಲಲ್ಲಿ ಮುಸುಡಂ ತಿರುಪಲು ೨೪

ನಾಲ್ದೆಸೆಗೆ ಬರೆ ಜಗನ್ಮಾತೆಯಾ ದಕ್ಷ ತಾಂ
ಕಲ್ಮನದಿ ದೃಷ್ಟಿಸದಿರಲ್ ಗೌರಿಯರೆ ದಕ್ಷ
ಸಲ್ವುದೇಯಾಕಾರ್ಯ ಯಾಕೆ ದುರ್ಬುದ್ಧಿಯಿಂತಿದು ನಿನಗೆ ಹಾನಿಯಲ್ತೆ
ನಾಲ್ಮೊಗಂ ಕಾರೊಡಲನಮರರೆರೆಯಂ ಪಾಸಿ
ಯೇಳ್ನಾಲಿಗೆಯನಂತಕಂ ಕಂಪನಾನುಮಂ
ಸಾಲ್ಗೊಂಡು ನಿಂದಂ ಕೀರ್ತಿಸುತಿಹರು ನೀನರಿಯದೇಕೆ ಕೆಟ್ಟೈ ದಕ್ಷನೆ ೨೫

ಎಂಬ ನುಡಿಗೇಳ್ದೀಕೆ ಬಂದೆ ನೀನೆಲೆ ನಮ್ಮ
ಹಂಬಲಂ ಬಿಡು ಬಿಡಾ ನೀವಿರ್ವರೇ ಪೊರತು
ನಂಬುಗೆಯು ನಂದನೆಯರೆನ್ನ ಜಾಮಾತನಶ್ವಿನ್ಯಾದಿಗಳ್ ಚಂದಿರಂ
ಶಂಭು ಸರಿಯಲ್ಲವರ್ಗಳುತ್ತಮರ ನಾಂ ಬಿಡದೆ
ನಂಬೆ ಘಾತಕರು ನೀವೇ ಲೋಕಭಕ್ಷಕರು
ಅಂಬುಜೋದ್ಭವನಂಬುಜಾಕ್ಷನೀ ಜಗವ ಪುಟ್ಟಿಸುವವಂ ರಕ್ಷಿಸುವವಂ ೨೬

---

1 ವ (ಗ)

ಕುಲಹೀನ ತೊವಲುಡಿಗ ಕಠಿಣಚಿತ್ತನು ಮಹಾ
ಮಲರೂಪವಾದ ಕೇಶದ ಜನ್ನಿವಾರವಂ
ಎಲುಮಾಲೆಯಂ ತಳೆದವಂ ಪೆಣದ ಮೈಬೂದಿಗಂ ತಲೆಯ ಸರವಂದಿಗಂ
ಛಲವಿಲ್ಲದವ ಕಿಚ್ಚುಗಣ್ಣನವ ಹುಚ್ಚಾಟ
ದಲಿ ನಿಂದ ತಲೆಯೋಡ ತಿರುಕ ನಿನ್ನಯ ಗಂಡ.
ನೆಲೆಮಗಳೆ ನಿನ್ನವನಿಗೀಯಬಾರದಂ ಕೊಟ್ಟದೆನ್ನಲ್ಲದೇ ಮೋಸವು ೨೭

ಎನಲಾಕ್ಷಣಂ ಗೌರಿ ಶಿವನಿಂದೆಯಂ ಕೇಳಿ
ಕನಲಿಯಾ ದಕ್ಷನೀಕ್ಷಣ ಹನನವಂ ಮಾಡೆ
ತನಗೆ ತಂದೆಯ ಕೊಂದಳೆಂಬುದೊಂದಪಕೀರ್ತಿಯೆಂದು ಮತ್ತೊಂದು ವಪುವಂ
ವಿನಯದಿಂದಾಂತಲ್ಲದೀ ಪಾತಕಂ ಪೋಗ
ದೆನುತ ಘೂರ್ಣಿಸುತರ್ಜಿಸುತ್ತ ಘುಡಿಘುಡಿಸುತ್ತ
ಬಿನುಗಧಮ ಹಿಡಿ ಶಾಪವೆಂದು ಸಭೆ ನಡುಗುವೊಲ್ ಶಪಿಸಿದಳ್ ಗಿರಿಜೆಯಾಗ ೨೮

ಸರ್ವಕಾರಣ ಸದಾಶಿವನ ನಿಂದಿಸಿದಲ್ಲೆ
ಕೊರ್ಬಿಯರಿಯದೆ ನಿನ್ನ ಯಜ್ಞಕ್ಕೆ ಬಂದಿರುವ
ಸರ್ವಮನುಮುನಿಗಳೆಲ್ಲರ್ಗೆ ದಂಡನೆಯಾಗಲೀ ಜನ್ನ ಕೆಡಲಿ ದಕ್ಷ
ಗರ್ವದಿಂ ಹರಗೆರಗದಿಹ ಶಿರಂ ಪೋಗಲಿದೆ
ಪರ್ವಿದ ಮಹದ್ಭಾಗ್ಯವಳಿದು ನಿನ್ನಯ ಪುರಂ
ವುರ್ವಿಯೊಳ್ ಪಾಳಾಗಬೇಹುದೆಂದಾ ದೇವಿ ಶಪಿಸಿದಳ್ ಕೈಯನೆತ್ತಿ ೨೯

ಎಲೆ ಸಭಾಜನವೆ ವಿದ್ಯಾಚೋರರಾದವರ
ಮಲತು ಗುರುಹಿರಿಯರಂ ಬಿಟ್ಟು ನೀಚರ ಮುಂದೆ
ಯೊಲವಿನಿಂ ಪೂಜಿಪರನಾಕ್ಷಣನೆ ಕೊಲಬೇಹುದಲ್ಲದೊಡೆ ನಿಷ್ಠೆಯಿಂದ
ತಲೆಯರಿದುಂಕೊಳಬೇಕು ಹೇಳಿರೈಯೆನಂತಲು
ಜ್ವಲಿಸುತಿಹ ಯಜ್ಞದನಲಜ್ವಾಲೆಯೊಳಗೆ ನಿಜ
ತನುವಳಿದುಂ ಕಾತ್ಯಾಯನಿಯಂ ಪೋಗಿ ಗಿರಿರಾಜ ಮೇನಕಾತ್ಮಜೆಯಾದಳು ೩೦

ಅಲ್ಲಿರ್ದ ಮನುಮುನಿ ಸುರಾಳಿಗಳ್ ತಮತಮಗೆ
ತಲ್ಲಣಂಗೊಳುತ ನಾವೀಗ ಶಾಲೆಗೆ ಬರ
ಲ್ಕಿಲ್ಲದುತ್ಪಾತ ಬಂದಿದಕೆ ಶಾಪಂ ಗಿರಿಜೆಯಿಂ ದಧೀಚಿಯ ದಿಕ್ಕಿನಿಂ

ನಿಲ್ಲದಾಯ್ತಲ್ಲಿ ನಾವಿರಸಲ್ಲವೆಂದು ಕೆಲ
ರಲ್ಲಲ್ಲಿ ಬಿಟ್ಟೋಡೆ ನಂದಿಯರಿವುತೆ ಜಗ
ದ್ವಲ್ಲಭಂಗೆರಗಿ ಶಿವನಿಂದೆಯಂ ಕೇಳಳಿದಳಗಜೆಯೆಂದಾಗ್ರಸುರ್ದಂ ೩೧

ಬರಸಿಡಿಲ ರವದಂತೆ ಮೇಘ ಘರ್ಜನೆಯಂತೆ
ಮರುತನ ಮಹಾ ಪ್ರಳಯಕಾಲದಾ ಗತಿಯಂತೆ
ಮರುಕಾನನವ ದಹಿಪ ಕಾಳ್ಗಿಚ್ಚಿನುರುಬೆಯಂತಸುರರಂ ಸುರರ ಸುಡುವ
ಗರಳವುಬ್ಬೆದ್ದು ತಿರುತಿರುಗಿ ಘೋಷಿಸುವಂತೆ
ಸುರರಸುರರೊಗ್ಗಾಗಿ ಮಂದರದಿ ಕಡೆಯಲ್ಕೆ
ಮೊರೆವ ಸಾಗರದಂತೆ ಹರನ ಕೋಪಾನಳ ಧ್ವನಿಯಂಣ್ಮಿತೇನೆಂಬೆನು ೩೨

ಆರತವಂಬುಧಿಗಳೆಲ್ಲಂ ಸರಿತ್ತುಗಳೆಲ್ಲ
ಬರತವಸುರಾಸುರರ ಮೋರೆಗಳ್ ಬಡವಾಗೆ
ಕರಿತವಮಿತ ಪ್ರಮಥಗಣರ ನಿಜಮುಖರಸಂ ಏನೆಂಬೆನದ್ಭುತವನಂ
ಕರೆವ ಹೈನುಗಳೆಲ್ಲ ಬರಡಾದವಾಗಲಂ
ಕುರಿಸಿ ಪಲ್ಲವಿಪ ಗಿಡುಬಳ್ಳಿ ಮೊದಲಾದ ಘನ
ತರುಗಳೆಲ್ಲಂ ನೋಡೆ ಕೊರಡಾದವಾಕ್ಷಣಂ ಹರನ ಕೋಪಾಗ್ನಿಯಿಂದ ೩೩

ಪಿರಿದಾದ ಕಾಲಾನಳಂ ರೂಪದಳೆದುದೋ
ವರಸೂರ್ಯಶಶಿ ಬೃಹದ್ಭಾನುಕೋಟಿಪ್ರಭೆಯೆಂ
ಕರಣವಾಂತದೊ ರೋಹಣಾದ್ರಿ ಕರಚರಣಮುಖ್ಯಾವಯವಗಳ ಧರಿಸುತ್ತೆ
ಭರದಿ ನಿಂದುದೊ ಶಿರಸಹಸ್ರಭುಜಮೆರಡುಸಾ
ಸಿರನೇತ್ರ ತ್ರಿಸಹಸ್ರದಾಡೆಗಳ ಕಡುಭಯಂ
ಕರರೂಪವಹಿಸುತಾವೇಶದಿಂ ಘೋಷದಿಂ ವೀರಭದ್ರಂ ಮೆರೆದನಂ ೩೪

ಭೀಕರಕರೋಟಿಮಾಲೆಗಳಿಂದ ಭುಸ್ಸೆಂಬ
ಕಾಕೋದರಗಳ ಭೂಷಣಗಳಿಂ ಝಣರೆಂಬ
ನೇಕಾಯುಧಗಳ ಕಿಗ್ಗಟ್ಟಿನ ಸರಂಗಳಿಂದೆಡಬಲದೊಳೋಲೈಸುವ
ಪೈಕಪೈಕದ ಭೂತಗಣದಿಂದ ಕಾಲಿಟ್ಟು
ತೂಕವಂ ಮಾಡೆ ಬಾಳೆಯ ಕಂಭದಂತೆ ಧರ
ಣೀಕಂದವಾದ ಮೇರುವೆ ನಡುಗುತಿರೆ ವೀರಭದ್ರನೀಶ್ವರನ ನೋಡಿ ೩೫

ಅಂಬುಧಿಗಳಂ ಪೀರ್ವೆ ಕುಂಭಿನಿಯ ನೆರೆಸೀಳ್ವೆ
ನಂಬುಜೋದ್ಭವನಂಡವಂ ಕೈಯಲೊಡವೆ ವಿ
ಶ್ವಂಭರನ ಕಾಳೆಗಂ ಬರಲವನ ಬಿಲ್ಲಿನಿಂದವನ ತಲೆಯಂ ಕೆಡಪುವೆ
ಮುಂಬಲ್ಲುದುರ್ಚುವೆ ದಿವಾಕರನ ನಾಲಿಗೆಯ
ಪೊಂಬಾಳೆಯಂತೆ ಸೀಳುವೆ ಕೃಶಾನುವಿನ ಜಗ
ದಂಬಕ ಪರಾಕು ಬೆಸಸೆನುತೆ ವೀರೇಶನಪ್ಪಣೆಯ ಶಿವನಂ ಕೇಳ್ದನು ೩೭

ಆ ಕುಮಾರನ ವೀರರೌದ್ರಪ್ರತಾಪವನ
ನೇಕಸಂತೋಷದಿಂ ನೋಡಿ ಮುಂಡಾಡಿ ನೀಂ
ಲೋಕಕಗ್ಗಳೆಯ ನಿನಗೆಣೆಯೆ ಹರ್ಯಜಸುರಾಸುರರೆಂಬ ಗುಂಗುರುಗಳು
ಏಕಪತಿಯಿಂ ನೀನೆ ಕೇಳಜಾಚ್ಯುತ ಸುರರ
ಕಾಕುತನದಿಂ ಕೂಡುತೆಮ್ಮನುಳಿದಾ ದಕ್ಷ
ಲೋಕವೇದವಿರುದ್ಧಯಜ್ಞಮಂ ಮಾಡುತಿಹನವನ ಸಂಹರಿಸಿ ಬಾರೈ ೩೭

ಬಾರಯ್ಯ ಕುಳಿರ್ವೆಟ್ಟಿನಾ ಪೃಷ್ಠಭಾಗದೊಳ
ದೂರಗಂಗಾದ್ವಾರದೆಡೆಯಲ್ಲಿ ಮೆರೆವುತಿಹಂ
ದಾ ರಮ್ಯಕನ ಖಲಮೆನಿಪ್ಪ ನಗ ಮೇರು ಮಂದರ ಸೌಮ್ಯವೆನಿಪುದದರ
ಚಾರುಶಿಖರಪ್ರದೇಶದೊಳಂ ಯಾಗವ ರಚಿಪ
ಕ್ರೂರದಕ್ಷಂ ತೀವ್ರಮಲ್ಲಿಗೈದುತೆಯವನ
ಪಾರುಮಾಡುವದು ನೀನಾಕಾಶದೊಳಗಿರ್ದು ನೋಡುವೆವು ಪೋಗು ಮುಂದದಿಂ ೩೮

ಪೋಗು ಬೇಗದೊಳೆಂದು ಬೀಳ್ಕೊಡಲ್ಕಗಜೆ ಮಗ
ಗಾಗ ಸೊಸೆಗಿಬ್ಬರಿಗೆ ಭುಜಸೇಸೆಯಿಡುತಲತಿ
ರಾಗದಿಂ ವೀಟಿಕೆಯನೀವುತುಡುಗೊರೆ ಭೂಷಣಂಗಳಂ ಕೊಡುತ ವೀರ
ಚಾಗು ಭಲರೇ ಎಂದು ಮುತ್ತುಗಳನಿತ್ತು ಹರ
ನಾಗಮುವನರಿಯದಾ ಕುರಿ ದಕ್ಷನಂ ಕೊಂದು
ನಾಗಾರಿಗಮಂನಮುಖ ಶಿವನಿಂದಕರ ಚಲ್ಲಬಡಿಯೆಂದು ಬೀಳ್ಕೊಟ್ಟಳು ೩೯

ಎರಗಿ ಸಾಂಬಶಿವರ್ಗೆ ಬರಂತ ಹರ್ಯಜಸುರಪ
ಸಂರರ ಮನುಮುನಿದಕ್ಷರತಿನಿಂದಕರ ನಾನು
ಭರದಿಂದೆ ಸಂಹರಿಪೆನೆಂಬ ಕೋಪೋದ್ರೇಕ ರೋಮಹರ್ಷಣದೊಳುಂದಿಸಿ

ನಿರುತ ರೋಮಜರುದ್ರರಗಣಿತ ಮಹಾಬಲರ್
ವರರುದ್ರಕನ್ನೆಯರೊಡನೆ ಸಹಸ್ರಾಸ್ಯದಿಂ
ವರವೀರಭದ್ರನುರೆ ಶೌರ್ಯಮಂ ಪೋಲ್ವ ರೋಮಜಪ್ರಮಥರೈದಲೊಡನೆ ೪೦

ಹರುಷವಾರಾಶಿಯೊಳಗಾಳ್ದರಾ ಶಿವಶಿವೆಯ
ರರರೆ ವೀರೇಶನಾರ್ಭಡಿಸಿ ಸಿಡಿಲಂತನಿಬ
ರಿರದೆಯಾರ್ಭಡಿಸಿ ಕೋಟಾಕೋಟಿ ಸಿಡಿಲರವಮಂಣ್ಮಲಾ ರಭಸಕಿರದೆ
ಧರೆ ಬಿರಿದಂ ನಾಗಲೋಕಂ ಕಾಣಬಂದುದಂ
ಬರದೊಳಗೆ ವಾಯುಪಾಶದ ಬಿಂಕದಪ್ಪಿ ರ್ಝ
ರ್ಝರಿತವಾಗಲು ಚುಕ್ಕಿಗಳ್ ಸುರಿದುದೇನೆಂಬೆಪಾನೆಕಲ್ಲಿನ ಪಾಂಗಿನಿಂ ೪೧

ನಡನಡುಗಿತಾ ಯಜ್ಞಶಾಲೆ ಯಜ್ಞೇಶ್ವರಂ
ವುಡುಗಿದಂ ಮದವಮರಮುನಿಯಜ್ಞೋಚ್ಯುತ ದಕ್ಷ
ರೆಡೆಗೆಡೆಗೆ ಭೀತಿಯಿಂ ಚಿಂತಿಸಲ್ಕೀ ಮಹಾಭೂಮಿ ಬೆಸಲಾದಂದದೆ
ಪಡೆ ನಡೆಯೆ ವೀರಭದ್ರೇಶ್ವರಂ ಯೋಚಿಸಂತೆ
ದುಡುಕಿನಿಂ ಪೋಪುದಲ್ತೆಂದೊರ್ವ ಗಣವರನ
ಬಿಡದೆ ಕರವುತ ಮುನ್ನವನ ಬಳಿಗೆ ಪೋಗಿ ನಮ್ಮಡಿಯ ಬರವಂ ಪೇಳುತ ೪೨

ಎಲೆ ದಕ್ಷ ಯಾಗಭಾಗೆಯುನೀಗ ನಮಗೆ ನೀ
ನಲವಿನಿಂ ಕೊಡಬೇಹಂದುಚಿತವಲ್ಲದೊಡೆ ನಿ
ನ್ನಲಘು ಯಜ್ಞಂ ಕೆಡುಗು ನೀನು ಭಂಗಿತನಪ್ಪೆ ಹರಿಯಜೇಂದ್ರಾದ್ಯಮರರು
ಕೊಲಬಾರದಿಹ ಕೊಲೆಯಂ ಕೊಲ್ಲಿಸಿಕೊಳುತ್ತಿರುವ
[ರ]ಳಿಕಾಕ್ಷನಾಣೆ ನಮ್ಮಿಂದಳಿಯಬೇಡವೆಂ
ದೊಲಿದು ಬುದ್ಧಿಯ ಪೇಳಿ ಕೇಳಿ ಕೇಳಾ ಸುದ್ದಿ ಬಂದು ಪೇಳೆನುತಟ್ಟಲು ೪೩

ಅಂತೊಪ್ಪುತಿಹ ಯಾಗಶಾಲೆಯಂ ಗಣನಾಥ
ಸಂತೋಷದಿಂ ಸಭೆಯ ಬಗೆದುವೊಳಪೊಗುತಾಗ
ಲಂತಧಿಕದೀಕ್ಷಿತಂ ದಕ್ಷಪ್ರಜಾಧಿಪನ ಮುಂದೆ ಬಂದೆಲೆ ದಕ್ಷನೆ
ಕಂತುರಿಪುವಂ ಬಿಟ್ಟು ಯಾಗವಂ ಮಾಳ್ಪನೀ
ನೆಂತು ಜೀವಿಸುವೆಯಿಾ ಹರಿಯಜರ ಪೂಜಿಸಿ ಸ
ಮಂತು ಯಜ್ಞಂ ರಚಿಸೆ ಜಯುವಹುದೆ ಬಾಲಕರ ತಲೆಗೆ ಹೆಡಗೆಯ ಭಾರದೆ ೪೪

ಅಧವಂದಕ್ಷನೆ ನೆಮ್ಮಿ ಮೂಡೆಯಂ ಬೆಟ್ಟವಂ
ವೊದೆಯಬಹಂದೇ ನೀನು ಘನಗರ್ವದಿಂ ಹರನ
ಸದರವಂ ಮಾಡಿಯಿಾ ಕೀಳ್ದೈವಗಳನಗ್ರಪೂಜಾರ್ಹರೆಂದು ಬಗೆದು
ಮಧುಸೂದನಾದ್ಯರಂ ಯಜಿಸಿ ಜನ್ನವನು ನೀ
ನೊದಗಿಸಲ್ಬಹುದೆ ಬಿಡು ನೀನವರ ರುದ್ರನೇ
ಪುದಿದಗ್ನಿಯಗ್ನಿಮಿಾಳೇಪುರೋಹಿತವೆಂಬ ವೇದವಂ ಮರೆವರಕಟ ೪೫

ಆರಿಂದ ಜನಿಸಿದರಿಯಜಹರಿಮುಖರಿರ ವಂ
ತ್ತಾರಿಂದ ಬಳದಿರಖಿಳೈಶ್ವರ್ಯದಿಂ ಮತ್ತ
ಮಾರಿಂದ ಪಡೆದಿರಿ ಹುತಾಶನಂಗಾಹುತಿಯನೀವ ವೇದದ ಮಂತ್ರವಂ
ಮಾರಾರಿಯಲ್ಲದನ್ಯವ ಪೇಳಬಹುದೆ ಕ
ಣ್ಣಾರೆ ದುರಹಂತೆಯಿಂ ಕೆಟ್ಟರಿನ್ನೇನಿದೇ
ವೀರೇಶನೆಯ್ದಿದನಿದಿರ್ವನ್ನಿಯಲ್ಲದೊಡೆ ಕೆಟ್ಟೋಡಿಯೆಂದೆನಲ್ಕೆ ೪೬

ಘುಡುಘುಡಿಸುತನಿಬರುಂ ಕೋಪವಿಂಹಳಿಸಿಯಿಾ
ಯೆಡೆಗೆ ಬಿಟ್ಟವರಾರು ಬಡಿನೂಂಕಿ ನೀನಾರು
ಮೃಡನೆತ್ತಣವ ಭಾಗೆಯಲ್ಲಿಯದು ವೀರನೆಂಬವನಾರು ಪೋಪೋ ಎನೆ
ತಡೆಯೆಂದಾ ಗಣನಾಥನೊಡನೆಲೇ ವಿಬುಧರಿರ
ಹೊಡವೆ ತಲೆಗಳನಪ್ಪಣೆಯ ಮಿಾರಲಾಗದೆಂ
ದೊಡನೆ ಬರುತಿರೆ ಕೆಲಂಬರು ಪೊಣರಲವರ ಸಂಹರಿಸಿ ವಾರ್ತೆಯ ಪೇಳ್ವೊಡೆ ೪೭

ಕೇಳುತಂ ವೀರಭದ್ರಂ ರೌದ್ರನಾಗಿ ತಾಂ
ದಾಳಿಯಂ ಮಾಡಬೇಹುದಂಯಜ್ಞಲಯಕೆನಲ್
ಕೇಳಲೇನಖಿಳ ದಿಕ್ಕುಗಳು ಗುಮ್ಮಿಡೆ ಭೇರಿ ಧಾಂ ಧಣಂ ಧಣಮೆನಲ್ಕೆ
ಮೇಳದಿಂದಮಿತಚತುರಂಗಸೈನ್ಯಂ ನಡೆದು
ದೇಳಿಗೆಯೊಳಾಗ ಮಾಗಧರು ಗಂಡರ ಗಂಡ
ಖೂಳದೇವರ ಮಿಂಡ ದೈತ್ಯರಂ ತಲೆಗೊಂಡ ವೈರಿಗಿರಿವಜ್ರದಂಡ ೪೮

ಎಂದು ಪೊಗಳಲ್ಕೆ ರೋಮಜಪ್ರಮಥಗಣಕೋಟಿ
ಸಂದಣಿಸಲತಿವೇಗದಿಂ ವೀರಭದ್ರೇಶ
ನಂದು ದಕ್ಷನ ಮಂಖದ್ವಾರಮಂ ಪೊಗಲಖಿಳ ವೀರಗಣಗಳ ರೌದ್ರದ

ಮಂದಿರದೊಳೆಸೆದಿರುವ ಕಿಲಕಿಲಧ್ವಾನದೊಡ
ನೊಂದಿ ಬೊಬ್ಬಿಟ್ಟಾಲಲಾಗ ಸಿಂಹನಾದ
ಮುದುವರಿದಂತಾಗೆ ಸುರಕುಂಜರದ ಪಿಂಡು ಭೀತಿಯಿಂ ನಡನಡುಗಿತು ೪೯

ಕೆಲರು ನಡನಡುಗಿದರು ಕೆಲರು ಮಾತುಡುಗಿದರಂ
ಕೆಲರು ಗುಜುಗುಜುಗುಟ್ಟಿ ಕೆಲರು ಗರ್ವವ ಕಟ್ಟಿ
ಕೆಲರಂತಬ್ಬರಿಸಿ ಬೀಳುತ ಕೆಲರ್ ನಿರ್ಭರದ ನಿಟ್ಟೋಟದಿಂದೋಡುತ
ಕೆಲರು ಕೆಟ್ಟೆವು ಕೆಟ್ಟೆವಿನ್ನೇನುಗತಿ ನವಂಗೆ
ಕೆಲರು ಸತ್ತೆವುವಿದರನಟ್ಟುಳಿಯಿನುಳಿವೆವೆನೆ
ಕೆಲರಂ ಶರಣಂಬೊಕ್ಕು ಬಾಳ್ವೆವೇಳೇಳೆನುತ ಪಲವ ಪಲುಬುತ್ತಿರ್ದರಂ ೫೦

ಕೆಟ್ಟೋಡುತಮರವಧುಗಳ್ ಪಾರಿ ಚೀರಿದರ್
ಮುಟ್ಟಿ ಪುರುಷರ ಹಿಡಿದು ಜಗ್ಗಿದರ್ ಮುಗ್ಗಿದರ್
ಬಟ್ಟವೊಲೆಗಳ್ ಸೋಕಲಾರನಾದರದಕ್ಕೆ ಕೊಂಕು ಕೊಸರೆಂಬುದುಂಟೆ
ಬಿಟ್ಟೊರಲುತಯ್ಯಯ್ಯೊ ಎಂದು ಪತಿಗಳ ಕೊರಲ
ಕಟ್ಟಿಕೊಂಡೆದೆಹಾರುತೆಗಂವೆಯೆಂದೆನುತ ಕ
ಣ್ಗೆಟ್ಟು ಶಿಶುಗಳ ಪಾಯ್ಕಿ ಪೋಡುವಾ ಪೆಣ್ಣುಗಳ ಭಂಗಗಳನೇನೆಂಬೆನು ೫೧

ಅಮರಬಲವೆಲ್ಲ ಕೆಲಬಲಕೆ ಕೆಟ್ಟೋಡುತ್ತ
ತಮತಮಗೆ ನುಡಿವುತಿರ್ದರು ನೋಡಲಿಲ್ಲಿರ್ದ
ಸುಮನಸರ್ಗಿದಂಹೋಳಿಗೆಯು ತುಪ್ಪವಲ್ಲ ಮುರಿಮುರಿದು ನುಂಗುತ್ತಿರುವರೆ
ಕ್ರಮತಪ್ಪಿ ಭ್ರಷ್ಟಾದರೆನೆ ವೀರಭದ್ರ ನಿಜ
ರಮಣಿಯೆನಿಪಾ ಭದ್ರಕಾಳಿಯಂ ನಿಟ್ಟಿಸುತ
ಸುಮನದಿಂ ಬೊಬ್ಬಿಡುಂತಲೊಳಪೊಕ್ಕು ಹರಿಯಜಸುರಪ[ಮುನಿ]ಗಳಂ ನೋಡುತೆ ೫೨

ಏನಿರೈಗೊಡೆಯನೆಂದರಿಯದಲೆಯೂಳುತಿಹ
ಶ್ವಾನನಂ ಮಖದಕ್ಷನಂ ಕುರಿತು ಯಾಗಕಭಿ
ಮಾನವಿಲ್ಲದೆ ತಿನಲ್ಬಂದಿರೀಕ್ಷಣ ನಿಮ್ಮ ತಲೆಗಳಂ ತರಿತರಿವುತೆ
ಭಾನುಸುತನಾಲಯಕೆ ಕಳುಹುವೆಂ ನಿಮ್ಮ ನಿಜ
ದಾನಂದಮೂರ್ತಿಯಂ ಮರದಿರೇ ಮೋಹದಿ
ನ್ನೇನುಫಲವೆನ್ನದಿರಿ ಕೈಯಾರ ಮಾಡಿದುದಕೀಗಲೇ ಘಟಿಸಿತೆಂದು ೫೩

---

1 ಮನು ಮುನಿ (ಕಗ)

ಯೋಜನ ಸಹಸ್ರಾಯತದ ಯಜ್ಞಶಾಲೆಯಂ
ತೇಜೋವಿಶೇಷಮಂ ಕೂಡಲ್ಕೆ ನೇತ್ರಗಳ
ಸೋಜಿಗಮೆನಲ್ ಚಟಪಟನೆ ಕೂಡಿಯುರಿಯಾಗಿ ದಹಿಸೆ ಪ್ರಳಯಾಗ್ನಿಯಂತೆ
ಮೂಜಗತ್ಪತಿ ವೀರಭದ್ರೇಶ ಖಡ್ಗವಂ
ತಾ ಜಡಿವುತಜ ಹರಿ ಸುರೇಂದ್ರಾದಿಗಳ ನೋಡಿ
ಯೋಜೆಯಿಲ್ಲದೆ ಕಟ್ಟಿರಿನ್ನೇಕೆನುತ್ತ ಹೂಂಕರಿಸೀಕ್ಷಿಸುತೆ ಗಣರಂ ೫೪

ಹೊಡೆಯಿರಮರರ ತಲೆಗಳಂ ನೋಳ್ಪುದೇನುಯು
ಗ್ಗಡಿಪ ವೇದಾಳಿ ನಾಯಿಗಳ ತಲೆಗಳ ಬಡಿಯಿ
ರೆಡೆಯಿರಮೃತಾಜ್ಯ ದಧಿ ಕನಕ ಘಟಗಳ ಕ್ರತುಗಳಂ ಸೋಮಯಾಜಿಗಳನು
ಕಡಿಯಿರಗ್ನಿತ್ರಯಗಳಂ ಜಡಿಯಿರಜ ಪಶುವ
ತಡೆಯದೀಗಚ್ಯುತ ಪ್ರಮುಖರೀಕ್ಷಣ ಬಿಡದೆ
ಹೆಡಗುಡಿಯ ಕಟ್ಟಿಯೆಂದಾರ್ದು ವೀರೇಶನಂತೊಡನೆಯಪ್ಪಣೆಯಿತ್ತಾಯಲು ೫೫

ಪೇಳಲೇನಾ ಪರ್ವತೋಪಮಗಣಶ್ರೇಣಿ
ಕೋಲಾಹಳ ಸ್ವನಂಗೆಯ್ದೊಳಪೊಗುತ್ತಧಿಕ
ಬಾಳದಿಂ ಕಡಿದಂ ಯೂಪಗಳನಾ ಋತ್ವಿಜರ ಕಟ್ಟಿಸಂತೆ ಹೆಡಮುರಿಗಳಂ
ಲೀಲೆಯಿಂ ಭೂತಚಯವೊದೆದು ಮಣಿವೇದಿಕೆಯ
ಹೋಳುಮಾಡುತ್ತೆ ಹಲವಮರ ಬೀಡಾರಗಳ
ತೂಳದಿಂ ಕುಣಿದಾಲುತಂಬುಧಿಗಳಂತೆಸೆವ ಹಾಲು ಮೊಸರಂ ಹೀರುತೆ ೫೬

ತೆರವುತಂಬರಕಾಗ ಬಾಯ್ಗಳಂ ಮೈಗಳಂ
ಮುರಿವುತಾಹಾಯೆಂದು ನಗುತಲುಂ ಮಿಗುತಲುಂ
ಜರೆವುತನಿಮಿಷರ ಬಿಡದಟ್ಟುತಂ ಮೆಟ್ಟುತಂ ಅರೆಯಟ್ಟಿ ರೋಡಾಡುತೆ
ಪರಿದಾಡಿ ಕಳಶಗಳ ಬಡಿವುತಂ ಪೊಡೆವುತಂ
ಪರಿಪರಿಯಂ ಭಕ್ಷ್ಯಗಳ ಜಗಿವುತಂ ಮೊಗೆವುತಂ
ವರ ಪಾನಚೋಷ್ಯಗಳ ಸುರಿವುತಂ ಮೊರೆವುತಂ ಮೆರೆದವಾ ಭೂತವಿತತಿ ೫೭

ಕೆಂಡಗಳ ಕೈಗಳಿಂ ಬಗೆವುತಂ ತೆಗೆವುತಂ
ಮಂಡೆಗಳ ಮೇಲ್ಮೈದೆ ಚೆಲ್ಲುತಂ ಮೆಲ್ಲುತಂ
ಕಂಡ ಕಂಡಮರಾಳಿ ಮುಖದ ಮೇಲೆರಚುತಂ ಪರಚುತಂ ಪಾರ್ಬರಿರದೆ

ಚಂಡಿಕೆಗಳನ್ನು ಪಿಡಿದೆತ್ತುತ್ತಂ ಕಂತ್ತುತಂ
ಕುಂಡದೊಳಗೊಯ್ದವರ ನೂಕುತಂ ಪಾಯ್ಕುತಂ
ಚಂಡವಿಕ್ರಮದಿಂದೆಯಶ್ವಮೇಧಾಧ್ವರವ ಭಂಗಿಸುತೆ ಭಂಗಿಸಲ್ಕೆ ೫೮

ಇಂತು ವೀರೇಶನುರು ಭೂತಗಣದಿಂ ಕುಂಡ
ದಂತರಾಳದೊಳು ನಿರ್ಘೋದಾರಿಸುತ ವೇದ
ಸಂತತಿಯು ಚಲ್ಲಬಡಿವುತೆ ಸುರರ ಸಂಹರಿಸುತಂ ಬರ್ಪ ರಭಸ[1] [ಕಳುತೆ][1]
ಚಿಂತಿಸುತ್ತಖಿಳ ಸುರಸಂತಾನ ಸುರಪಗೋ
ರಂತೆ ವೆಂರೆಯಿಡಲಾಗ ಯಜ್ಞದಿಂ ಕೆಟ್ಟೆವೆ
ಮ್ಮಂತ ದೆಸೆಗೇಡಿ ಪರದೇಶಿಜೀವಿಗಳ ಕಾಯುವರಿಲ್ಲವಯ್ಯೋಯೆನಲು ೫೯

ಕೇಣದಿಂ ಸುರಪನವಂರಾಳಿಯೊಡನೆಯ್ತಂದು
ಬಾಣಾರಿಗರುಪು ಬಾಯ್ಬಿಡದಿರಂಜದಿರಿನ್ನು
ಬಾಣವಂ ತೊಡುವೆನೀ ವೀರನಂ ನಿರಸನಂ ಮಾಡುವೆಂ ನೀವೆಲ್ಲರುಂ
ಮಾಣದೆಲ್ಲರು ಬನ್ನಿ ಓಡಿದರ ಕರೆತನ್ನಿ
ಹಾಣಾಹಣೆಯ ಮಾಡಿ ಪೊರೆವೆನೀಕ್ಷಣವೆನುತ
ಪೂಣ್ದೆಲ್ಲರಂ ಕರಸಿ ಪುರಿಗೊಳಿಸುತಾಗ ಚತುರಂಗಸೇನೆಯು ಕೂಡುತೆ ೬೦

ನಡೆಯಿತ್ತೆ ನೂರ್ಪದ್ಮಸೈನ್ಯ ಚಕ್ರಂ ನೋಡೆ
ಯೊಡೆಯನಾಗಿರ್ದ ಹರಿಯಾಜ್ಞೆಯಿಂ ಪದಧೂಳಿ
ತಡೆಯದೇಳಲ್ ಧರಾತಳವಂಬರಂ ಮುಸುಕಲವರೊಳಾರ್ಭಡಿಸುತವಂರ
ಪಡೆಯೇರಿತಾ ವೀರಭದ್ರನುರೆ ಬಲದ ಮೇ
ಲೊಡನೆಯಿರ್ಪಡೆಗೂಡಿ ಪೊಣರಿದರ್ ತವಂತವಂಗೆ
ಮುಡುಹಿಕ್ಕಿ ಲಟಕಟಿಸಿ ಖಣಿಖಿಟಿಲ್ ಛಿಣಿಛಿಟಿಲ್ ಎಂದಂ ಕಾಳಗವೆಸೆಯಂಲು ೬೧

ಒತ್ತಿದರ್ ವಂತ್ತೇಭಗಳ ಮಾವುತರ್ ಕೊಂಬು
ಕತ್ತಿಯಿಂ ಗಜಗಜಂಗಳ ತಿವಿಸಿದರ್ ತುರಗ
ದೊತ್ತೆಗಳ ಕಾಲ್ಪಿಡಿದು ಬಡಿಸಿ ರಾವುತರ ಬಲುಮೊತ್ತವಂಂ ತುಳಿಸಿ ರಥದ
ಜೊತ್ತುಗಳ ಪಿಡಿದೆತ್ತಿ ತಿರುಹುತಂಬರಕಿಡುವ
ವಂತ್ತಗಜಘಟೆಗಳಂ ಭೂತಗಣನಾಯಕಂ
ವೊತ್ತಿ ಸೊಂಡಿಲ ಪಿಡಿವುತುರುಹಲಂಬರದೊಳವು ಗುಂಗುರದೊಲೆಸೆದವರರೆ ೬೨

---

1 ಕ್ಕಳುತ್ತೆ (ಕಗ)

ಕಾಣುತಾಖಂಡಲಂ ವಜ್ರಮಂ ಕೊಂಡಧಿಕ
ತ್ರಾಣನಹ ಚವ್ರದಂತಮಂ ಏರಿ ನಡೆಯಲತ್ತ
ಕ್ಷೋಣೀಶರೆಡಬಲದೊಳೋಲೈಸಿ ಬರಲು ದಿಕ್ಪಾಲರುರೆ ತಂತಮ್ಮಯ
ಪ್ರಾಣಾಪ್ತವಾಹನಂಗಳನೇರಿ ಮೀರಿ ತ
ಮ್ಮಾಣೆಯಿಂ ಸರ್ವಸನ್ನಾಹದಿಂ ಬರೆ ಸುರರ್
ತೂಣೀರದಿಂ ಬಾಣಗಳ ಸುರಿದರಾ ವರ್ಷಮಂ ತೋಯಧರಗಳಂತೆ ೬೩

ಕರೆವುತಂ ಮೊರೆವುತಂ ಹರಿವುತಂ ಸುರರ ಬಲ
ವರ ವೀರಭದ್ರನ ಮಹಾಸೈನ್ಯ ಚಕ್ರಮಂ
ಯಿರದಡ್ಡಗಟ್ಟಿ ಬಿಲ್ಬಾಣ ಪೆಟಲಂಬು ಗುಂಡುಗಳಿಂದ ಕೊಲುತ ತುಡುಕಿ
ಬರಲು ಪೆರ್ಬಲದ ಮಧ್ಯದಿ ಕಾಣುತಾ ವೀರ
ಹರುಷದಿಂ ಪ್ರಳಯಾಗ್ನಿಯಂತೆಯಾರ್ಭಡಿಸಿ ನಿಜ
ಕರಶರಚಮತ್ಕಾರಮಂ ತೋರ್ದನುಭಯಬಲ ಭಾಪು ಭಲ ಭಲರೆ ಎನಲು ೬೪

ಪ್ರಳಯಾನಳನ ಕೂಡೆ ತೃಣರಾಶಿ ಸೆಣಸುವೋ
ಲಳಿಕನೇತ್ರನ ಮೂರ್ತಿ ವೀರಭದ್ರನ ಕೂಡೆ
ನಳಿನಾಕ್ಷಮುಖ್ಯ ದೇವರ್ಕಳೆಣ್ದೆಸೆಯಲ್ಲಿ ಘುಡುಘುಡಿಸೆ ವೀರೇಶ್ವರಂ
ಬಲವೈರಿಮುಖರ ವಾಹನಚಯವ ಕಡಿದಂ ಮಂ
ತ್ರಳಲಂತಮರರ ತಲೆಗಳಂ ಹೊಡೆದು ಚತುರಂಗ
ಬಲಮುಗುರ್ಗೊನೆಯಿಂದೆ ಮಿಡಿದು ಮಡುಪುತ ನಡೆದನಾ ರುದ್ರಬಲಸಮುದ್ರಂ ೬೫

ನೋಡಿ ರೋಮಜಗಣರ್ಗೂಡಿ ಹರುಷ ಮನಂ
ಮಾಡಿ ಬಾಹ್ಯದ ಜಲವ ತೋಡಿ ಹಸ್ತಗಳಿಂದ
ನೀಡಿ ಭೂತಕ್ಕಿರದೆಯೂಡಿ ಸುರರಮೃತಮಂ ಕೂಡಿ ಮರುಳ್ತಂಡದೊಡನೆ
ಯಾಡಿ ಶಶಿಸೂರ್ಯರಂ ಮಾಡಿ ಹಲಗೆಗಳ ಕೈ
ಗೂಡಿ ನಭತಾಳವಂ ಮಾಡಿ ಸುರಬಲವ ರೋ
ಡಾಡಿ ಭಂಗಿಸಿ ಕಾಡಿ ಮನುಮುನಿಗಳೊಡೆದು ಪುಡಿಮಾಡಿ ಕುಣಿವುತ್ತಿದ್ದರು ೬೬

ಮತ್ತಗಜಗಮನೆಯುತ್ತುಂಗಕುಚೆ ವೀರಭ
ದ್ರೋತ್ತಮನ ರಾಣಿಯಹ ಭದ್ರಕಾಳಿಯು ಸುರರ
ಮೊತ್ತಮಂ ಕತ್ತಿಯಿಂ ತರಿತರಿದು ಶೂಲದಿಂದಿರಿದಿರಿದು ರಕ್ತನದಿಯಂ

ಒತ್ತಿ ಪೀರುವ ಭೂತ ಶಾಕಿನೀಬೃಂದಕ್ಕೆ
ವೃತ್ತಮೌತಣವಿಕ್ಕೆ ಮಾಂಸದೋದನದಿಂದ
ನೆತ್ತರಿನ ಮಾನದಿಂ ಕರುಳಶಾವಗೆಯಿಂದ ಬಡಿಸಿದಲ್ ಪೊಡೆ ತುಂಬಲು ೬೭

ವರ ವರುಷದಂತಂಬುಧಾರೆಯಿಂದಿಷುಧಿಯಂ
ಶರಧಿಯಂತನಿಮಿಷರವೊಲ್ ಕುಣಪವೃಷ್ಟಿಯಿಂ
ತುರಗದಿಂ ಗಂಧರ್ವರಂತಾ ಕಬಂಧದಿಂ ದೇವತಾತಟಿನಿಯಂತೆ
ಚಿರರೋಹಣಾದ್ರಿಯೊಲ್ ರುಂಡರಾಶಿಗಳಿಂದ
ಪರಮವತ್ಸರದಂತೆ ಜಯವಿಜಯರಿಂದ ನಿ
ಷ್ಠುರದ ಪಿತೃವನದಂತೆ ಭೂತದಿಂ ರಣಭೂಮಿಯಾವಾಗ ಕಂಗೆಸೆದುದು ೬೮

ಈ ತೆರದ ರಣಭೂಮಿಯಲ್ಲಿ ವೀರೇಶ್ವರನ
ನೂತನ ತ್ರಿಶೂಲಮಂ ಜ್ವಾಲಾಮುಖದ ಸುಗಣ
ನಾಥ ತಾಂ ಚರನಾಗಿ ಪಿಡಿದಖಿಳಗಣಸಹಿತಲಾರ್ಭಡಿಸುತಿರಲಮರರು
ಖಾತಿಯಿಂ ಬರೆ ಸೀಳ್ದು ತೂಳ್ದೊರಸಿ ಲೀಲೆಯಿಂ
ದಾತಮರರಟ್ಟಿದಂ ವೆಂಟ್ಟಿದಂ ಕಂಟ್ಟಿದಂ
ಮಾತೇನಜಾಂಡಂಗಳೂರ್ಧ್ವಮುಖದಿಂ ದಹಿಪ ಮಹಿಮಂನಿದಿರಾರ್ ಜಗದೊಳಂ ೬೯

ಬೆಚ್ಚಿದವು ಬ್ರಹ್ಮಾಂಡಭಾಂಡಂಗಳಾ ಸುರರು
ಕರ್ಚಿದರ್ ತೃಣಗಳಂ ನೀರ್ಪೊಕ್ಕು ಮರನೇರಿ
ಹುಚ್ಚಾದರಚ್ಯುತೇಂದ್ರಾದಿಗಳ್ ಗಣನಿಕರ ಹೆಚ್ಚಿದರ್ ಬಿನದದಿಂದೆ
ಮಂಚ್ಚಿದವು ಪಾತಾಳಮಂಬ್ಖ್ಯ ಗುಂಹೆಗಳ ಮುಖಂ
ಬಚ್ಚ ಬಯಲಾಯಿತಾಗಸದಿಂದೆ ಗ್ರಹಗಣಂ
ವುಚ್ಚಿಬಿದ್ದುರೆ ಕೂಡೆ ಜ್ವಾಲಾಮುಖಾಂಕ ಗಣನಾಥನಾ ರಾವದಿಂದ ೭೦

ಮೃಡನ ಲೀಲಾವತಾರಂ ಗಂಧವಾಹನಂ
ತೊಡೆಗಳಂ ಗದೆಯಿಂದ ಮುರಿದು ವರುಣನ ಪಿಡಿದು
ಯೊಡೆಬಡಿದಂ ತಲೆಯನಿಂದ್ರನ ಮಾನಭಂಗಮಂ ಮಾಡಿ ರಕ್ಕಸರ ದಣಿಯ
ಪೊಡೆದಂ ತಲೆಯಂ ಯಜ್ಞಕುಂಡದೊಳಗಾಗಲೇ
ಕೆಡಹಿ ಶಚಿಯಂ ಪಿಡಿದು ಡಾಗೊತ್ತಿ ಶಾರದೆಯ
ಬಡಿದೇಕೆ ನೀನಿಲ್ಲಿಗೈತಂದೆಯೆಂದು ಮೂಗುತ್ತರಿಸಿ ನಸುನಗುತ್ತ ೭೧

ಮರಗೂಳನಿಂ ಭಕ್ಷ್ಯಭೋಜ್ಯಲೇಹ್ಯಾದಿಗಳ
ಪೊರಹಾರ ತಿನಬಂದೆಯೋ ಯಾಗದೊಳಗೆಂದು
ತರಿದಾಗ ತೋಳ್ಗಳಂ ನಾಲಿಗೆಯನೇ ಸೀಳಿ ದೇವತಾಜನನಿಯಪ್ಪ
ವರ ದಿಶಿಯ ಮೂಗರಿದು ಹೊಲತಿ ಬೀಗನ ಮನೆಯ
ಕುರಿಯ ಹಬ್ಬಕೆ ಬಂದೆಯಾಯೆನುತ ಶುಚಿಸತಿಯು
ಭರದಿ ಸ್ವಾಹೆಯ ಎಡದ ಮೊಲೆತೊಟ್ಟು ಚಿವುಟಿ ಮೂಗಿನ ಹೊಳ್ಳೆಗಳನು ಸೀಳಿ ೭೨

ಮುನ್ನ ಸುಂದರಮುಹ ವಿಶಾಲಾಕ್ಷ ತಮ್ಮದಂ
ದುನ್ನತಾಹಂಕಾರಿಯಾದ ಹಂಸನ ಕಣ್ಗ
ಳುನ್ನತದ ಬಿಲ್ಗೊಪ್ಪಿನಿಂ ತೊಳಸುತೊಡನೆ ಪೂಷಾದಿತ್ಯನುರೆ ಪಲ್ಗಳಂ
ಕುನ್ನಿ ನೀ ಹರನನುಳಿದೇಂ ಬಂದೆಯೋ ಹೇಳು
ಚನ್ನವೇ ಎನುತ ಬಿಲ್ಲಿಂ ತಿವಿಯಲವನ ಪ
ಲ್ಲಣ್ಣೆಕಲ್ಲಿನ ತೆರದೊಳೊಂದುಳಿಯದೆಲ್ಲವಾಕ್ಷಣದಲ್ಲುಂದುರ್ದವಂದು ೭೩

ಲಾಲಿಸೈ ಪೂಷನೇ ದಂತವಿರಹಿತನಾಗೆ
ಮೇಲೇನು ಪಾಪವನೆಸಗಿದನೆನೆ ಹೋಮವಂ
ಶೀಲದಿಂ ಮಾಳ್ಪಾಗ ಸಲ್ಲದೆನಲಾ ದಧೀಚಿಯ ಕಂಡು ನಕ್ಕನಿವನು
ಪಾಲಿಸಲ್ ಸಲ್ಲದೆನೆ ಕೆಲರಲ್ಲಿ ಪರಿವುತಿರೆ
ಬಾಲನೇ ದಕ್ಷ ಭಯಮೇಕೆ ಮುನಿಗಣದಿಂದ
ಮೇಲಾದ ಕಾರ್ಯವೇನಾದೊಡಂ ಕಾಣಬಹುದೆಂದನೀ ಪೂಷ ಸೂರ್ಯಂ ೭೪

ಹೆಂಗಳಂ ಕಂಡು ಕಾಮಿಸುತ ಸೂಳೆಯರ ಚಾ
ರ್ವಂಗರುಚಿಗಾಗಿಯೊಳಪೊಕ್ಕಿರಲ್ ಭೈರವಂ
ತುಂಗವಿಕ್ರಮ ವೀರಭದ್ರೇಶನಾರ್ಭಟಿಗೆ ಹೆದರಿ ಪೊರವಂಡೆ ಕಾಣುತೆ
ಭಂಗಿಸುತ್ತೊದೆಯೆ ಸೊಂಟಂ ಮುರಿದುದಾಗಲಾ
ತಿಂಗಳಂ ಪಿಡಿದು ಕಾಲಿಂದೊರಸಿ ಕಡುಮುಳಿಸು
ಪಿಂಗದಾ ಚಾಮುಂಡಿ ಕಿವಿಗಳಂ ಕಿಳ್ತು ಬೊಬ್ಬಿರಿದನಾ ವೀರಭದ್ರಂ ೭೫

ಮುನ್ನ ಶಿವ ವಿಘ್ನೇಶನೊಡನೆ ಭೈರವ ಮುಖ್ಯ
ರುನ್ನತರ ಕೂಡಿ ದಕ್ಷನ ಶಿರವ ಹೊಡೆವುದಂ
ದುನ್ನತದೆ ಕಳುಹಲೊಳಪೊಕ್ಕರಸುತಂ ಬರಲ್ಕವನ ಕಾಣದ ಮುನ್ನವೇ

ನಿನ್ನು ಪಾಯೆಸ ತುಪ್ಪ ಸಕ್ಕರೆಯು ಚಕ್ಕುಲಿಯಿಂ
ಮಿನ್ನಾದ ಗಾರಿಗೆಯು ಹೂರಿಗೆಯುಯುಂಡಲಿಗೆ
ಚೆನ್ನಾದ ಭಕ್ಷ್ಯ ಫಲ ಗಿರಿಯಂತೆ ಕಾಣುತಿರಲದ ಕಂಡು ಹರುಷದಿಂದ ೭೬

ಕಚ್ಚಡಿಯ ಚಪ್ಪಿರಿದು ಸೀಹಿಂಗೆ ಹುಳಿಸಾರ
ಮೆಚ್ಚಿಕೊಳುತುಪ್ಪುಕಾಯ್ಗಳ ಕಡಿವುತಂ ಸವಿದು
ಪಚ್ಚಡಿಯಲುತ ಸೀಕರಣೆಗಳ ಸ್ವೀಕರಿಸಿ ಪಾನ ಪರಮಾನ್ನಂಗಳಂ
ಹೆಚ್ಚಿ ಸುರಿವುತ್ತ ಫಲಗಳ ನುಣ್ಣನಗಿಯುದವ
ನಚ್ಚಳಿಯಂ ಹಾಯ್ಕು ನಾಲಿಗೆ ತಂಟಿಯು ಚಪ್ಪರಿಸಿ
ಮೆಚ್ಚಿಯಾಹ್ಲಾದಿಸುತ್ತೂಟದಾನಂದದಿಂ ದಕ್ಷನಾಟವ ಮರೆದಿರೆ ೭೭

ಇತ್ತ ವೀರೇಶ್ವರಂ ಪ್ರಮಥಾಳಿಸಹ ಯಾಗ
ದೊತ್ತಿಂಗೆ ಬಂದು ಒಳಪೊಕ್ಕು ದುಂದುಭಿಯ ಬಲು
ಮೊತ್ತದಾರ್ಭಟೆ ದಿಕ್ಕು ಘುಮ್ಮೆಡಲ್ ಭೂರಿಭೂತದ ಬೊಬ್ಬೆ ಸುರರಬ್ಬರಂ
ಕುತ್ತಾಟ ಖಣಿಲೆನುತ್ತಾಲಿ ಬೊಬ್ಬಿರಿದಿರಿವ
ಕತ್ತಿಗಳ ಚಿಮ್ಮಾಟ ಮೊದಲಾದ ಘನರವದ
ಬಿತ್ತರವನೆಣಿಸದುಣುತಿರ್ದನತಿರಾಗದಿಂದೇಂ ಭೋಜನದಿ ರಕ್ತನೊ ೭೮

ಹರನ ಮಗನಾಂ ದಕ್ಷಯಿವ ಶಿವದ್ರೋಹಿಯೆಂ
ದರಿಯದೆಲ್ಲಿಯಂ ಯಜ್ಞಾಯಿಾ ಭಕ್ಷರಾಶಿಯಿಂ
ತಿರಲೀಗಲುಣಬಾರದೆಂದರಿಯದಾರ್ ಸತ್ತರಾರಳಿದರದನರಿಯದೆ
ಭರದಿ ಸುಂಡಿಲನಾಡಿಸುತ್ತುದರವಂ ತುಂಬು
ತಿರೆ.ಗಣರ್ ನೋಡಿಯಿಾ ತುತ್ತು ಹೆತ್ತವ್ವೆಯಂ
ಮರಸಿತೆಂದೆಂಬ ಸಾಣ್ನುಡಿ ದಿಟಂ ಹರಹರಯೆನುತ್ತ ಬೆರಗೊಂದಿ ನೋಡೆ ೭೯

ಏನುಮರಿಯದೆಯಿರಲ್ ವೀರಭದ್ರೇಶ್ವರಂ
ತಾನೆ ಕುಲಿಲೀ ಎಂದು ಪಾಯ್ಕೆ ಕಾಕಂ ಕೇಳು
ತೇನೆಂಬೆ ತಲೆಯೆತ್ತಿ ಮೆಲ್ಲನೀಕ್ಷಿಸಿ ಮುನ್ನ ಶಿವನುಸುರ್ದ ದಕ್ಷನೆನುತೆ
ಜ್ಞಾನನಿಧಿ ವಿಘ್ನೇಶ ಪರಶುಪಾಶಂಗೊಳುತ
ಮಾನದಿಂದೊದಗಿ ಬೀಸಲ್ ಪರಶುಪಾಶವಂ
ತಾ ನೆಗಪಲನಿತಕ್ಕೆ ಸೆಳೆದುಕೊಳಲಾಗ ಕೊಂಬಂ ಕೀಳುತಾರ್ದ ಗಣಪಂ ೮೦

ಇಡುವೆನೆಂದೆತ್ತಲಾಕ್ಷಣ ವೀರ ತೋಳ್ಗಳಂ
ಪಿಡಿದೆತ್ತಿಯೆಡಗಾಲಲೊದೆಯಲಾ ಕಾಲದಲಿ
ಪೊಡೆಯೊಡೆಯೆ ಭಕ್ಷ್ಯಪಾನೀಯಗಳ್ ಸುರಿದು ಗಿರಿ ನದಿಯಂತೆ ನಿಲೆ ಭೂತಗಳ್
ಸಡಗರದಿ ರಾಶಿಗಳ ತಿನುತ ಸಂರ‍್ರನೆ ಸುರಿದು
ಮೃಡ ಪರಾಕೆನೆ ನಗುತಲಣ್ಣನೆನುತುರಗವಂ
ಪಿಡಿದವನ ಪೊಡೆಯ ಬಂಧಿಸಿ ಕಾವಲಿಡುತ ಗಣವರರ ಮುಂದಕೆ ನಡೆಯಲು ೮೧

ಹಿಂದೆ ವಿಘ್ನೇಶನಖಿಳೋಪಚಾರಂಗೂಡಿ
ಸಂದಣಿಸಿ ನಡೆಗೊಂಡು ಬರಲಿತ್ತ ವೀರಗೋ
ವಿಂದನುರೆರಮಣಿ ಲಕುಮಿಯ ಕಾಣುತಲೆ ಹಲವರೆಣಿಕೆ[1][ಯಾ][1] ಸೂಳೆಯಿವನ
ಮಂದಿರದ ಬಾಕುಳಿಗೆ ಬಂದೆ ನಿನ್ನಯ ಗಂಡ
ನಿಂದು ಯಜ್ಞದ ಪುರುಷನೇ ಪೇಳು ಪೇಳೆನುತ
ಮುಂದಲೆಯ ಮೊಲೆಯ ಕೊಯ್ದಟ್ಟಲೀ ವಾರ್ತೆಯಂ ಹರಿ ಕೇಳಿ ಘುಡುಗುಟ್ಟುತೆ ೮೨

ಈ ವೀರನೆಷ್ಟರವ ಚೋರತ್ವದಿಂ ಬಂದು
ಕಾವಲಿರ್ದಮರರಂ ಪೆಣ್ಗಳಂ ಪಾರ್ವರಂ
ನಾವು ಜನ್ನದ ಬಹಳಸಂದಣಿಯೊಳಿರಲವರ ಬಂಧಿಸಿದನಲ್ತೆ ಭಾಪು
ಸಾವಿರವನಾಡಲಿನ್ನೇನೆನುತ ಸುರಪಮುಖ
ಭೂವರರ ಕೂಡಿ ಗದೆ ಶಾರ್ಙಶಂಖಾರಿಯಂ
ಮೂವರಂ ತಾಳ್ದು ಗರುಡನನೇರುತಾ ವೀರಭದ್ರನಿದಿರೊಳ್ ನಡೆಯಲು ೮೩

ಭೋರೆಂದುದಖಿಳವಾದ್ಯಂ ವಿಷ್ಣುಮುಖದ ಕೆಲ
ಸಾರೆಂದುನಮಿತಬೃಂದಾರಕರನಿಲ್ಲಿರದೆ
ಹಾರೆಂದರಲ್ಲಲ್ಲಿ ಬಹಳವೇದದ ರಾಶಿ ಚಿರ‍್ರೆಂದುದೀತನಲ್ಲಿ
ಪಾರೆಂದುದಚ್ಯುತೇಂದ್ರರ ರಥವನಿದಿರಪ್ಪ
ರಾರೆಂದುದೀ ವೀರನಾರ್ಭಟೆಗೆ ನಿಲ್ವರಂ
ತೋರೆಂದುವಾಗ ಬಿರುದಿನ ಕಹಳೆ ಸುರರ ತಲೆವೂರೆಂದವತಿಕೌತುಕಂ ೮೪

ಮಾರರಮಣ ಮಡದ ಸನ್ನೆಯಲಿ ನಾನಾಖಗಗ
ಳಾ ರಮಣನಂ ನಡಸಲಾಗ ನೋಡುತ ಶಾರ
ದಾರಮಣ ನವರತ್ನಯುತಪ್ರಭಾಮಯ ಮಹಾತೇರ ತಂದಾ ಭದ್ರಕಾ

---

1 ಯ (ಕಗ)

ಳೀರವಮಣಗಭಿವಂದಿಸುತ್ತೆ ರಥವೇರಿಸ
ಲ್ಗೋರವಮಣಪಟಸೂರ್ಯರಂತೆಸೆಯಲೆಡಬಲನು
ಮಾರವಮಣಸೂನು ತಾಂ ಶಾಙ್ರ್ಗಮಂ ಜೇವಡೆಯ ಗೆಯ್ಯಲದನೇವೇಳ್ವೆನು ೮೫

ಹೇಳಲೇಂ ರೋಮಜರ್ ಭೂತಗಣ ಸುರರು ದಿ
ಕ್ಪಾಲರೆಲ್ಲರ್ ಕೂಡಿ ಕಣಿಖಟಿಲ್ ಖಟಿಲೆಂದು
ಮೇಳದಿಂ ಚೋಣಿಕಾಳಗವ ಮಾಡುತ ಹಣಾಹಣಿಯ ಮುಷ್ಟಾಮುಷ್ಟಿಯ
ತೂಳದಿಂದಾಗ ಕೇಶಾಕೇಶಿಯೆಸಗುತಿರೆ
ಹೇಳೆಣಿಕೆವೆತ್ತ ಕಡಲೊಂದಾದ ಪಾಂಗಿನಿಂ
ಘೋಳೆಂದು ಸಂರರ ಬಲ ಬೀಗೆ ಹರಿ ಖೋಯೆಂದು ಬಂದೆ ಬಂದೆಂ ನಿಲ್ಲಿರೈ ೮೬

ಕಳಲಿ ಬಿಲುನಾರಿಯುಂ ಟಂಕಾರಮಂಗೈದು
ಮುಳಿಸಿನಿಂ ಬಾಣಮಂ ತೆಗೆದು ಕರ್ಣಾಂತಮಾ
ಗೆಳೆದಿಡಂತ ನಮ್ಮ ಸೈನ್ಯವ ಸದೆದು ಹೆಡಗುಡಿಯ ಕಟ್ಟಿ ಋತ್ವಿಜರ ಬಿಡದೆ
ಬಳಲಿಪ ಮಹಾವೀರನಟ್ಟೆಯುಂ ಥಟ್ಟುಗಿವು
ತೊಳಪೊಗುತೆ ಮರಳಿಯಳಿಕಾಕ್ಷನಗ್ರಕೆ ಪಾಯಿ
ದುಳಿದರ ಬಿಡೆಂದು ಬಿಟ್ಟಂಬು ವೀರನನುಳಿದು ವಾಹಿನಿಯ ಮೇಲ್ ಬೀಳುತೆ ೮೭

ಒಡೆಗೆಡೆವುತಾ ಮಹಾಭೂತಂಗಳವರ ತಲೆ
ಯೊಡಬಡುವುತಾನೆ ಸೇನೆಗಳ ಮೇಲಂಬುಗಳ
ಯೆಡವಿಡದೆ ಕರೆಯಲರುಣಾಂಬುಧಾರೆಗಳೆಂಟುದೆಸೆದೆಸೆಗೆ ಚಿಮ್ಮಲಮುಮ
ಪಡೆಯೆರಡು ರಕ್ತಾಂಬುರಾಶಿಯೊಳ್ ಮುಳುಗಿ ಮ
ತ್ತೊಡನೆಳ್ದು ಬಂದವೆನೆ ನಿಂದರೊಲ್ ನೋಡಿ ಮುದ
ಮಡರಿ ಮೀಸೆಯ ಮುರಿದು ತಿರ್ದುತೆಲೆ ಬಿಲುಗಾರನಹುದೆನಲ್ ವಿಷ್ಣು ನಗುತೆ ೮೮

ವೀರ ನೀನೆನ್ನ ಕೈಚಳಕಮಂ ನೋಡೆನುತ
ಹಾರಿಯುರ್ಬುತ್ತೆ ಮಾರ್ಗಣವೇರಿಸುತ್ತ ಬಿಡೆ
ಭೂರಿಯಂಬುಗಳಾಗಯಂಬುನಿಧಿಗಳನು ದ್ವೀಪಂಗಳಂ ಗಿರಿಗಳೆಲ್ಲಂ
ಪೂರಿಸುತ್ತಂಬರವ ಚುಂಬಿಸುತೆ ಮೇಘಗಳ
ದಾರಿಯುಂ ತಡೆದು ತಾರೇಶನಾಚ್ಛಾದಿಸುತ
ಮೂರಾರುಗ್ರಹಮಂಡಲವ ದಾಂಟೆ ವೀರೇಶ[1][ನು][1]ರುಬಲವ ಕೊಲುತಲಿರಲು ೮೯

---

1 ನೂ (ಕಗ)

ನೋಡಿದೆಂ ಕೈಚಮತ್ಕಾರಮಂ ನಿನ್ನ ಶರ
ದಾಡಂಬರಂ ಸುರರ್ಗಚ್ಚರಿಯನಿತ್ತುವೈ
ಕೂಡೆ ನೀನಾರೆನಲ್ ನಸುನಗುತ ವೀರಲೀಲಾರ್ಥದಿಂದೆಚ್ಚ ಶರವಂ
ಪಾಡಿನಿಂ ಕತ್ತರಿಸಿ ಸರಲ ಸುರಿವುತ ಬೇಗ
ನೋಡಗ್ನಿಶಾಲೆಯಂ ಪೊರಮಡಲ್ಲದೊಡೆನ್ನ
ಗಾಢ ಕರ ಚಾತುರ್ಯಮಂ ತೋರ್ಪೆ ನಿಲ್ಲು ನಿಂದೊಡೆ ನೀನು ಸಾಹಸಿಗನೈ ೯೦

•ಗಹಗಹಿಸಿ ವೀರೇಶ ಯಾಗಶಾಲೆಯೊಳಿರ
ದ ಹಗೆಯೆಂದು ಪೊರಮಡಿಸೆ ದಕ್ಷನಲ್ಲದೊಡೆ ನೀ
ನಹುದಧೋಕ್ಷಜ ನಿನ್ನ ಭಂಗಕೆಣೆಯಿಲ್ಲಯಿಾ ಯಾಗಪಶುಮಾಂಸಂಗಳಂ
ಬಹುಳ ಭಕ್ಷಿಸಿ ಸೋಮಪಾನ ಶಿರಮಡರಿತದ
ಸಹಿಸುರಜನಗಳೊಳ್ ಬಹುದಿನ ಸಮಾನಯುದ್ಧಂಗಳೆಸಗಿದೆ
ನಿನಗೆ ಸರಿಯುಭಟರಾನರಿಯೆ ಜಗದೊಳಿದೆ ವೀರಕೋಯೆನುತ ಹರಿ ಮಾರ್ಸರಲ
ವಂಳೆಗರೆಯಲು ೯೧

ಭೋರನೆಯ್ತರುತಿರ್ಪ ನಾನಾಶರಂಗಳಂ
ವೀರ ಕತ್ತರಿಸುತೆಲೆ ಪಕ್ಷಿಹಯನೇ ನಿನ್ನ
ಪಾರುಮಾಡುವೆನಸುಗೊಳ್ವುದೀಗಿದನಂ ಕೋಯೆನುತೆನುತ ಶರಘಾತದಿಂ
ಹಾರಿಸುತೆ ಛತ್ರ ಚಾಮರ ರಥ ಪತಾಕೆಯಂ
ಘೋರಹಯಚಿತ್ರರಥಸಾರಥಿಪ್ರಮುಖರಂ
ನೀರೇಜನೇತ್ರ ನಿನಗಾವರುಂಟವರ ಕರಸೆಂದು ಬೊಬ್ಬಿರಿದೆಚ್ಚನು ೯೨

ತೂಣೀರದೊಳ್ ಶಿರಂ ಪೊಗುವಂತೆ ತಲೆಯೊಳಗೆ
ಮಾಣದೆ ಪೊಗಲು ಮೂರ್ಛೆಯೊಳಾಳ್ದು ಬೀಳೆ ಹರಿ
ಯೇಣಧರನಾಣತಿಯ ಬಾಣಂಗಳರಿಯುಲೆಂದುಪಚರಿಸಲಾಗ ವಿಷ್ಣು
ಕೇಣದಿಂದೆದ್ದು ಬಳಿಕೊಂದು ಮಣಿರಥಮಡರಿ
ಬಾಣಮಂ ಪೂರಿಸಲ್ಕಿವನಧಮನೆನುತೆ ಗೀ
ರ್ವಾಣರೆಲ್ಲರ್ ಪಳಿಯೆ ಬಾಲರೊಳ್ಮೈಗಾರ ಕಾದುವೊಲ್ ಕಾದುತವಿಂರೆ ೯೩

ಬಣಗು ವಿಷ್ಣುವಿನೊಡನೆ ವೀರಕಾಳಗ ಮಾಳ್ಪ
ಬಣಿತೆಯಂ ಹರನು ರೈಖ್ಯಾಶ್ರಯದೆ ನಿಂದಂ ಸಂ
ದಣಿಸುತಿಹ ದೇವರೊಳು ಚತುರಾಸ್ಯನಂ ನೋಡಿ ಭಲರೆ ಬ್ರಹ್ಮಾಯೆನಲ್ಕೆ

• ೯೧ನೆಯ ಪದ್ಯದ ಛಂದಸ್ಸು ಪ್ರಾಸ ಕೆಟ್ಟಿದೆ

ಹೆಣಗುತಿಹ ಹರಿಯೆನಲ್ಕನಿತರೊಳ್ ದಿವ್ಯಮಾ
ರ್ಗಣವಿಡಲ್ ವೀರೇಶನೊಂದಂಬಿನಿಂ ಕಡಿವು
ತಣಿಯರದೊಳಾಗ್ನೇಯಶರಮೆಚ್ಚು ನೋಡಲಚ್ಚುತನೆದೆಯ ಡೋರುಗೊರೆಯೆ ೯೪

ನೀಲಾದ್ರಿಯಂತೆ ಭೂಮಿಯ ಮೇಲೆ ಮೈಚಾಚಿ
ಕಾಲಾಂತರಕ್ಕೆ ಮೂರ್ಛೆಯ ತಿದ್ದಿಕೊಳುತಂ ಕ
ರಾಳ ನಾರಾಯಣಾಸ್ತ್ರದೊಳೆಸೆಯಲದ ಮುರಿಯೆ ವೀರನಾರಾಯಣಂ
ಮೇಲೆ ಮೇಲಾತ್ಮಸಮರಂ ಸೃಜಿಸಲೆಲ್ಲರಂ
ಶೂಲದಿಂದಿರಿದೆತ್ತಲಾ ಚಕ್ರದೊಳಿಡ[1][ಲಾ
ಕಾ][1]ಳಿಕಾಪತಿಯದಂ ಹೋಳಿಗೆಯ ತೆರದಿ ಬಾಯ್ಬಿಟ್ಟದಂ ನುಂಗಿ ನಿಂದಂ ೯೫

ಮೋಟ ಮರದಂತೆ ಹರಿ ನಿಂದಿರಲು ಇಂದ್ರಾದಿ
ಕೂಟದಮರರು ಕೂಡಿ ಪೊಣರಲವರಂ ಜೈಸಿ
ಘಾಟದಿಂದೆಜ್ಞಶಾಲೆಯ ಪೊಗಲ್ ಪಾರ್ಬರಂಜುತ್ತ ದೆಪೆದೆಪೆಗೋಡಲು
ಪಾಟಿಗೊಳ್ಳದೆ ಹುಳುಗಳೆಂದುಳಿದ ವೀರೇಶ
ನಾಟೋಪದಿಂದಿರಲ್ ಹರಿ ಹರಿಣನಾಗೋಡೆ
ಮಿಾಟಾದ ಹರಿಣಶಿರಮರ್ಧೇಂದುಶರದೊಳಿಟ್ಟಾ ವೀರ ಕುಲಿಲಿಯೆನಲು ೯೬

ಶಿರವರಿಯೆ ಶಂಭುವೆ ಶಿವಾಯೆನಲು ಮೆಚ್ಚಿ ಮುಂದ
ವೆರಸಿ ವಿಷ್ಣುತ್ವಮಂ ಕೊಡಲವಂ ನುತಿಸಲಾ
ಹರಿಣಚರ್ಮವ ಪೊದೆಯಲಂದಿನಿಂ ಹರಶರಣದಾಸನಕೆ ಯೋಗ್ಯಮಾಯ್ತು
ವರ ವೀರಭದ್ರ ರೌದ್ರಾನನದೆ ಘರ್ಜಿಸು
ತ್ತರರೆ ದಕ್ಷನ ಕಂಡು ದ್ರೋಹಿ ಕೆಡೆಕೆಡೆಯೆನು
ತ್ತಿರದೆಡದ ಪಾದದಿಂದೊದೆದು ಕೆಡಪುತ ಮೆಟ್ಟಿ ತಲೆಯರಿದ ಘರಿಘರಿಲೆನೆ ೯೭

ಮುಡದಿಯುಹ ಭದ್ರಕಾಳಿಯ ಮುಖಸರೋರುಹದ
ಸಡಗರದೊಳೊಡನೆ ನೋಡುತ ದಕ್ಷನೀ ತಲೆಯ
ಹೊಡೆದೆವಿದಕೊಂದು ಕಾಲಿಲ್ಲೊದವು[2]ತಾ[2]ಡಿಯೆಂದುಸುರಲಾಕ್ಷಣ ಮರುಳ್ಗಳು
ಬಡ ದಕ್ಷ ಸತ್ತೆಯೋ ಎಂದು ಮೊಗಮುರುಗಿಸು
ತ್ತೊಡನೆ ಪಲ್ಗಿರಿವುತೊಂದೊಂದರಿಂದೊಂದು[ಮಂ]
ಕಡುಗಿಕೊಳುತಾಡುತಿರೆ ಕೈಜಾರಿ ಹೋಮಕುಂಡದೆ ಬೀಳಲಾರ್ದವರರೆ ೯೮

---

1 ಲ್ಕಾ (ಕಗ) 2 ತ (ಕ)

ಮತ್ತೆ ಗಣನಾಯಕರ್ ಯಾರೀತನಧ್ವರಕೆ
ತೆತ್ತಿಗರೆನಿಸಿ ಬಂದು ಮಂತ್ರತಂತ್ರಗಳ ಬಿಡ
ದೊತ್ತಿ ನಡಸಿದರೊ ಮೇಣವರೆಲ್ಲರಂ ಪಿಡಿದು[ತ]ಲೆಗಳಂ ಚೆಂಡಾಡುತಂ
ಒತ್ತಿ ಹಿಂಡುತೆ ಹಿಳಿದು ಗಂಟಲಂ ಪೀರಂತವ
ರೊತ್ತಿ ರೋಡಾಡುತಿಹ ಬಂಧುಗಳ ಸೆರೆವಿಡಿದು
ತೊತ್ತಳಂದುಳಿದಗ್ನಿಕುಂಡ ಕಳಶಾದಿ ಮಣಿವೇದಿಕೆಗಳಂ ಕೆಡಿಸುತೆ ೯೯

ಮಡಿದ ಪಶಿಗಳ ನೋಡಿ ಶೋಕಿಪರ್ ಕೆಲರಂ ಮ
ತ್ತೊಡನಣ್ಣ ತಮ್ಮಂದಿರಳಿವಿಗಳುವರ್ ಕೆಲರು
ಮಡಮುರಿದು ಬೀಳ್ದೇಳಲಾರದವರಿಗೆ ದುಃಖಿಸುವರು ಕೆಲರಂಗನೆಯರ
ಮಂಡಿ ಮಹೂಗು ಮೊಲೆಗಳಂ ಕಂಡಳಲುವರ್ ಕೆಲರು
ಬೆಡಗಿನಬಲೆಯರ ಭಂಗಿಸೆ ನಾಚುವರ್ ಕೆಲರು
ತೊಡರಿ ಘೋಳಿಡುತಿರಲಿವರ್ಕಳಂ ಕಂಡಜಂ ಪೊರಮಡುತೆ ವೀರೇಶನಂ ೧೦೦

ದೇವದೇವನೆ ದೇವ ವೇಶ್ಯಾಭುಜಂಗನೇ
ದೇವೇಶ ದೇವಗಣ ಮಂದಾರ ಬೃಂದಾರ
ಕಾವಳಿಯನಟ್ಟಿ ಕೊಲುತಿದೆ ಭೂತಗಣ ನೋಡಿ ಕಾವರಿನ್ನಿಲ್ಲ ಜಗದಿ
ಹಾವಳಿಯ ನಿಲಿಸು ನಿಲಿಸೈ ಜಗತ್ಪತಿಯೆನ
ಲ್ಕಾ ವೀರಧರ್ಮ ಕಹಳೆಯ ಪಿಡಿಸಿ ಕಾಯಲ್ಕೆ
ದೇವತಾನೀಕಮಷ್ಟಾಂಗನತಿಯಿಂ ಪುರುಷಸೂಕ್ತಾದಿಯಿಂ ನುತಿಸಿತು ೧೦೧

ವರಯಾಗಶಾಲೆಯೇ ಕುಂಡ ವೀರೇಶನುರು
ತರ ಕ್ರೋಧವಹ್ನಿ ರೋಮಜ ಕೋಪವುರಿವುತ್ತ
ಮುರಿವ ಯಜ್ಞಕ್ಕೆ ಪಶುವೇ ದಕ್ಷ ಚರು ಪುರೋಡಾಶಂಗಳೇ ಮುನಿಗಳು
ಸಂರರ ಪಲಲಾಸ್ಥಿರಕ್ತಂಗಳೇ ಕಾಷ್ಠ ದಧಿ
ವರಗವ್ಯಗಳ್ ಶೋಕ ಘೋಷವೇ ಮಂತ್ರಂಗ
ಳಿರವಾದ ಸೋಮಯಾಜಿಯೆ ವೀರಭದ್ರ ಸೋಮೇಶಾನಿಯೇ ಕಾಳಿಯು ೧೦೨

ಇಂತಗ್ರಭಾಗಮಂ ಶಿವನಿರ್ದೆಡೆಗೆ ವೊಯ್ವೊ
ಲಂತು ದಕ್ಷಾದ್ಯರಂ ಕೊಂಡೊಯ್ವುತಿರೆ ಶಂಭು
ವಂತರಿಕ್ಷದೊಳು ಗಣರಿಂ ಕೂಡಿ ನೋಡುತಿರೆ ವೀರೇಶನಷ್ಟಾಂಗದಿಂ

ಮುಂತಡ್ಡ ಬೀಳೆ ದುಂದುಭಿಗಳುಲಿಯಲ್ಕೆ ಗಣ
ರಂತು ಪೂಮಳೆಗರೆಯೆ ರುದ್ರಕನ್ಯಾನೀಕ
ಮಾಂತಾರತಿಗಳಿಂದ ಬೆಳಗೆ ಜಯಜಯತೆನಲ್ ಶಿವನೈದಿ ವೀರೇಶನಂ ೧೦೩

ಮುಂಡಾಡುತಹುದು ಬಿರುದಿನ ಗಂಡಂಮಗನೆಂದಂ
ಮಂಡೆಯೊಳ್ ಕೈಯಿಡುತ್ತಾಖಂಡಲಾದಿಗಳ
ದಿಂಡುಗೆಡೆದುರುಳಿ ಪೊರಳಂತೆ ಮೊರೆಯನಿಡುತಿರ್ಪ ಭಂಗಿತರ ನೋಡುತಭವಂ
ಕಂಡಿರೇನಿಂತು ದಂಬುದ್ಧಿ ನಿಮ್ಮನೆ ಕೆಡಿಸಿ
ತುಂಡಿರೇ ಫಲವ ನೀವಂಜದಿರಿಯೆಂದು ಮಾ
ರ್ತಾಂಡಮುಖರಂಗಗಳನೆಂದಿನಂದದಿ ಕೊಡಲ್ ಸಿಂಗರಂಬಡೆದೆಸೆದರಂ ೧೦೪

ದೇವ ಜನನಾಧಾರ ದೇವ ಮರಣವಿದೂರ
ದೇವ ಪಾವನಕರಣ ದೇವ ನಗಜಾರಮಣ
ದೇವ ಶ್ರುತಿತತಿಸಾರ ದೇವನತಿಮಂದಾರ ದೇವ ವಿವಿಧಾವತಾರ
ದೇವ ಮುನಿಜನವಂದ್ಯ ದೇವ ಸಜ್ಜನವಂದ್ಯ
ದೇವ ರಕ್ಷಾಮಣಿಯೆ ದೇವ ಸದ್ಗುಣಮಣಿಯೆ
ದೇವ ಕೈವಲ್ಯಾಂಗ ಭಕ್ತಜನ ಹೃತ್ಸಂಗ ಎಂದು ನುತಿಸಲ್ಕಮರರು ೧೦೫

ಶಂಕರಂಗೆರಗಿ ದಕ್ಷನ ಕಾಯ್ದುವುದೆನಲಭವ
ಪಂಕಜೋದರನ ಬಿನ್ನಪಕೆ ಪಾರ್ಬರುಂ ತಿನುತ
ಲುಂ ಕೊಡೆ ಪೊಲೆಯರಿಗೆ ಭಾಗೆಯೆಂದುಳಿದಜನ ತಲೆಯಂ ಪತ್ತಿಸಿ ದಕ್ಷನಂ
ಕಂಕಾಳಧರನಿದಿರೆ ನಿಲಿಸಲ್ಕೆ ಪುಂಶ್ಚಮೆ
ಶಂಕೆಯಿನಿತಿಲ್ಲದೆ ಸ್ತ್ರೀ ಚಮೇ ಮೇಯೆಂದು
ಶಂಕರನ ಚಮಕದಿಂ ನುತಿಸಲಾಗವನ ಮನ್ನಿಸಿ ರಜತಗಿರಿಗೈದಿದಂ ೧೦೬

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರ್ಗಿಷ್ಟಾರ್ಥವಹುದು ಸತ್ಯಂ ೧೦೭

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದಪೌರಾಣಿಕಾಗವಾದ್ಯಖಿಳ ವರ
ಮಂತಶಾಸ್ತ್ರಮಂಜುಳ ಸಂಪುಂಜರಂಜಿತ ಪುರಾತನವಚನಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಶ್ರೀತಿಯಂ
ದತಿನೂತ್ನವಹ ಕಾಂಡದೊಳ್ ನೋಡಲೆಂಟನೆಯ ಸಂಧಿ ಸಂಪೂರ್ಣಮಾಯ್ತು ೧೦೮

ಶ್ರೀಪರಮಕೈಲಾಸವಾಸಂ ಸ್ವಯಂಜ್ಯೋತಿ
ರೂಪನಭಿನವಪರಬ್ರಹ್ಮ ಸಂಪಾದನಾ
ದೀಪಿತ ಮಹಾಚನ್ನಮಲ್ಲಿಕಾರ್ಜುನ ಚಾರುಪದಪದ್ಮಭೃಂಗನೆನಿಪ
ಶ್ರೀಪರ್ವತಾರ್ಯನಿಂಗೊರೆದ ಗುರುಚಕ್ರೇಶ
ರೀಪೇಳ್ದ ಸತ್ಕಥಾಚಾರಿತ್ರದೊಳ್ ತಿಳಿಯ
ಲೇಪೇಳ್ವೆನಿಲ್ಲಿ ಮುಗಿಯಿತು ಮೂರಂಕಾಂಡ ಸುಜ್ಞಾನವಮೌಕ್ತಿಕಕರಂಡ ೧೦೯

## ಒಂದನೆಯ ಸಂಧಿ

ಸೂಚನೆ :•

ರಕ್ಕಸನ ರಕುತಗುಡಿದುಕ್ಕಿರಲ್ ನರಸಿಂಹ
ಮುಕ್ಕಣ್ಣನವುಲಸುತ ಸದ್ಬೋಧೆಯಂ ಪೇಳೆ
ಮಿಕ್ಕು ನಿಂದಿಸೆ ಶಿವನ ನರಹರಿಯ ಶಿರವರಿದು ಮೆರೆದನಾ ಶರಭೇಶ್ವರಂ

ರುದ್ರ ನಿಜಭಕ್ತಜನಸಂಸಾರವಾಸನೋ
ಪದ್ರವವಿನಾಶಕರಭೂತಿ ರುದ್ರಾಕ್ಷವಂಯು
ಮುದ್ರ ಕರುಣಾಪೂರಿತೇಕ್ಷಣಸುಧಾಸಿಂಧುಲಹರೀನಿರಸ್ತಮಾಯಾ
ಭದ್ರಪ್ರದಾಯಕ ಭವಾನೀಕಟಾಕ್ಷಲೀ
ಲಾದ್ರವವಿನೋದಿತಾಂತಃಕರಣ ಶರಣಜನ
ಹೃದ್ರಾಜಕಮಲಾಸನಾಸೀನ ಗುರು ಚನ್ನಮಲ್ಲೇಶ ಜಯ ಜಯ ಜಯ ೧

ಸಂಕಲೆಯ ಪರಿದು ಮದದಿಂದ ಗಜ ಸರ್ವರಂ
ರಿಂಖಣಂಗೊಳಿಸುತಿದಿರ್ವರೆ ಹೋಯೆನಲ್ ನಿಂತ
ದಂ ಕಂಡು ಕಾದೆನಲ್ ಕಾದಿಯಳಿದಾ ಕರಿಗಸುವ ಬೇಡಲಸುವೀವುತೆ
ಬಿಂಕದಿಂ ಪರವಾದಿ ಕಲ್ಲಬಸವಗೆ ಕಬ್ಬ
ರಿಂಕೆಯಿಂ ಮೆಲಿಸೆನಲ್ ಮೆಲಿಸಿ ಕೆರೆನೀರೆಲ್ಲ
ವಂ ಕೂಡೆ ಕುಡಿಸಿ ಮಹಿಮೆಯಂ ಮೆರೆದ ಬಾಹೂರಬ್ರಹ್ಮನಡಿಗೆರ್ಪಪ್ಪೆನು ೨

ಕೇಳಂ ಮೌನಿಪ ದಧೀಚನೆ ಮುನ್ನ ಶಿವನಧಿಕ
ಮೇಳದ ತ್ರಯೋದಶ ಹರಿಧ್ವಂಸಲೀಲೆಯಂ
ಪೇಳುವೆವು ಸ್ಕಂಧದೊಳುಸುರ್ದ ಪರಿಯಿಂದೆನಲ್ ದೇವ ಮರುಳೇಂದ್ರ ನಿನ್ನಿಂ
ಕೇಳುತಾ ಕೃತಕೃತ್ಯನಹೆನೆನಲು ಪೂರ್ವದೊಳು
ಖೂಳನಪ್ಪಾ ಹಿರಣ್ಯಕಶಿಪು ಶಿಲೋಚ್ಚಯದ
ಮೇಲುಕೋಡಿನ ತುದಿಯ ಸೂಚಿಯೊಳ್ ತಲೆಯೂರಂತುಗ್ರತಪವಂ ಮಾಡಲು ೩

---

• ನರಸಿಂಹಭಂಜನ (ಗ)

ಆ ತಪಕ್ಕೊಲಿದುಮಾಪತಿ ಕಳುಹೆ ಬ್ರಹ್ಮ ಬಂ
ದೇತಕ್ಕೆ ನಿನ್ನ ತಪದಿಷ್ಟಮಂ ಕೇಳು ನಿಜ
ನಾಥನಪ್ಪಣೆಯನೀವೆನು ದೈತ್ಯಗ್ಪತಿಯೆನಲ್ ಸಕಲಸಾಮ್ರಾಜ್ಯಸುಖಮಂ
ಓಶೀವುತೆನಗೆ ನರ ಸುರ ನಾಗ ಗಂಧರ್ವ
ಭೂತ ಸುರಗಣ ಹರಿಹರಬ್ರಹ್ಮರಿಂ ಶಸ್ತ್ರ
ವ್ರಾತ ಖಗಮೃಗಗಳಿನಿರುಳ್ ಪಗಲು ಒಳಹೊರಗೆ ಸಾವಿಲ್ಲದಂತೆ ಸಲಹೈ ೪

ವರವನಿತ್ತರವಿಂದಭವ ಪೋಗೆಯಸುರನಿರ
ದಂರವಣಿಸಿ ಲೋಕಮಂ ಪಾಳ್ಗೈದು ಸುರರನಿ
ಟ್ಟೊರಸಮರಸತಿಯರಂ ಸೆರೆವಿಡಿದು ಭಂಗಿಸಲ್ಕತಿಶೋಕದಿಂದಮರರು
ಎರಗಿ ಹರನಡಿಗೆ ಮೊರೆಯಿಡೆಯಸುರವೈರಿಯಂ
ಕರೆದಾ ಹಿರಣ್ಯಕಶಿಪುವನೀಕ್ಷಣಂ ಬಿಡದೆ
ಹರಿಸೆನಲ್ಕಪ್ಪಣೆಯಿಂನುಗ್ರನರಹರಿಯಾಗಿ ಸ್ತಂಭದೊಳಗುದ್ಭವಿಸುತೆ ೫

ಘುಡಂಘುಡಿಸುತಸುರನಂ ಪಿಡಿದು ಮುಂದಲೆವಿಡಿದು
ಕೆಡಹುತಂ ದೇಹಳಿಯೊಳಿಡಿದು ಜಡಿವುತ ತೊಡೆಯೊ
ಳಿಡುತೊಡಲನುಗುಗುರ್ಗೊನೆಗಳಿಂ ಪೊಯ್ದುತಿರ್ಬಗೆಯ ಮಾಡಿ ಬಗೆದಂಗಿದು ಕರುಳಂ
ಕೊಡಹಿ ಮಾಲೆಯನಿಟ್ಟಸುರನ ರಕ್ತಾಂಬುಮಂ
ಬಡಬನಂತೆಡವಿಡದೆ ಸುರಿಸುರಿದು ಪೇರೊಡಲ
ಮಡುಪೆ ಮುಸ್ಸಂಜೆಯೊಳಗಖಿಳಲೋಕಾವಳಿ ಮುದಂದಳೆದುದೇವೇಳ್ವೆನು ೬

ಏನೆಂಬೆ ರಕ್ಕಸನ ನೆಣನೆತ್ತರಂಗೊಂಡು
ತಾನ್ಮೈದೆ ಮಧುಪಾನಿಯಂತೆ ನರಸಿಂಹನ
ಜ್ಞಾನದಿಂದಚ್ಯುತತ್ವವ ಮರೆದು ಹರ ತನ್ನ ಹರಿಪೊಡೆಯನೆಂದರಿಯದೆ
ಹೀನಮದದಿಂದುಬ್ಬಿಕೊರ್ಬಿ ಖಳನಂ ತಿಂದು
ಸೂನುವೇ ಜಗಮುಸುರನಿಂ ಪತ್ತುಮಡಿ ಸುಡಲ್
ನಾನಾಸುರರ್ ಶಿವನೆ ಮೊರೆಯೊ ನರಹರಿಕಾಟಮುಸುರನಿಂ ನೂರ್ಮಡಿಸಿತು ೭

ಎನಲಜಪ್ರಮುಖರಂ ಕನಲದಿರಿಯೆಂದು ಶಿವ
ಮನವೊಲ್ದು ಗಿರಿಜೆಯಂ ನಿಟ್ಟಿಸುತೆ ನಿನ್ನಣುಗ
ಘನವೀರಭದ್ರನಿಂದಲ್ಲದೀ ನರಹರಿಯ ಹರಿಸಲಳವಲ್ಲವೆಂದು

ನೆನೆಯೆ ವೀರೇಶ ಶಿವನಡಿಗೆಯಾಕ್ಷಣ ಬಂದು
ವಿನಯದಿಂದೊಂದಿಸಲೊ್ಕಡನಿಹ ಗಣಾಳಿ ನಿಜ
ವಂನಕೆ ಬಂದಂತೆ ಗಿರಿಗಳ ದಾಡಿಪುತ್ತ ಕಡಲೇಳ ಸುರ್ರನೆ ಕುಡಿವುತೆ ೮

ಅಟ್ಟಹಾಸದೊಳಂಡತತಿಯ ಏರಂಡಫಲ
ದೊಟ್ಟಿಲೊಲ್ ಛಟಛಟನೆ ಲಯವನೆಯ್ದಿಪ ಗಣರ
ಥಟ್ಟಣೆಗಳಿಂ ಮೆರೆವ ಮಗನ ಕರೆವುತ್ತಸುರನಟ್ಟೆ ಬಿಸಿರಕುತಗುಡಿದು
ಕೆಟ್ಟು ನರಸಿಂಹ ನರ ಸುರಲೋಕಗಳನಿರದೆ
ಸುಟ್ಟು ಉಃಪೆಂದುರುಹತಿಹನವಗೆ ಸುಗುಣವಂ
ಮುಟ್ಟೆ ಬೋಧಿಸಿ ತಾಹಂದಲ್ಲದೊಡೆ ಶಿರವ ನೀಂ ತಹುದೆಂದು ಬೀಳ್ಕೊಡಲ್ಕೆ ೯

ಹರನಡಿಗೆ ನಮಿಸಿ ಬ್ರಹ್ಮಾದ್ಯರಂ ನೆರೆವೆರಸಿ
ವರಗಣಂಗಳ ನೋಡಿ ಬಲಚಕ್ರಮಂ ಕೂಡಿ
ಭರದಿ ಭೇರಿಗಳುಲಿಯೆ ರೋಮಜರ್ ನಲಿದೊಲೆಯೆ ಭೂತತತಿ ಮುದದೊಳಲೆಯೆ
ನರಸಿಂಹ ಪೆರ್ಚಿ ನಾಗಗಳ ಬಾಯೊಳ್ ಕರ್ಚಿ
ಯಿರದಂಬರಕ್ಕಿಟ್ಟು ಗಿರಿಗಳ್ಗೆ ಭುಜಗೊಟ್ಟು
ವುರವಣಿಸುತೀಡಾಡಿ ಲೋಕಗಳ ರೋಡಾಡಿ ಮೆರೆವ ನರಕೇಸರಿಯನು ೧೦

ಎಲೆ ವಿಷ್ಣು ನೀಂ ಪಿರಿಯಂ ಸುರಕಟಕದೊಳ್ ನೀನು
ಸಲೆ ದಯಾಪರ ಸರ್ವರಕ್ಷಕ ಹಿರಣ್ಯಕನ
ನಂರಿನಂರಿದು ತಿಂದವನ ರಕ್ತಾಂಬು ಮಾಂಸವಂ ಕೊಂಡು ಮೈಮರೆವರಕಟ
ನೆಲೆಯಾಗಿ ಸಾತ್ವಿಕದ ಮತ್ಸ್ಯಾವತಾರದಿಂ
[1][ದ][1]ಳಲಿ ದೈತ್ಯನ ಕೊಂದು ಜಗಕೆ ತಂಪಿತ್ತು ಜಗ
ಜಲದೊಳಾಳಲ್ ಕೂರ್ಮರೂಪವನು ತಳೆದೆತ್ತಿದತಿಹಿತವನೆಲೆ ಲೋಕಕ್ಕೆ ೧೧

ಧರಣಿಯ ಹಿರಣ್ಯಾಕ್ಷನೆಳೆದು ಪಾತಾಳಕ್ಕೆ
ನರಕಾಸುರಂ ಸಕಲನಾರಿಯರ ಕೊಂಡೊಯ್ಯೆ
ಕಿರಿಯ ರೂಪಾಂತೊರಸಿಕೊಂಡು ವಿಶ್ವಂಭರೆಯ ಪರಸಿ ಸಲಹಿದ ಹಿತವನು
ಪರರ ಬಾಧಿಪ ಬಲೀಂದ್ರನ ಬಳಿಗೆ ಖರ್ವನಾ
ಗಿರದೆ ಮೂರಡಿಭೂಮಿಯನ್ನಳವುತಸುರನಂ
ಭರದಿ ತ್ರಿವಿಕ್ರಮಾಹ್ವಯನಾಗಿ ಪಾತಾಳತಳಕೌಂಕಿದುದ ಮರೆತೆಯೊ ೧೨

1 ದದ (ಕಗ)

ಆರು ಲೋಕಕ್ಕೆ ಹಿತವಂ ಮಾಳ್ಪರವರಿರದೆ
ಧಾರಿಸುವರ್ಕೈ ನಮ್ಮ ಶಾಸನವ ಯುಗಯುಗದೊ
ಳಾರು ನಿನ್ನಂತೆ ಹರಪದ[1]ಕೆ[1] ರಾಜೀವಲೋಚನವರ್ಪಣಂಗೆಯ್ವರು
ಮಾರಹರ ಗಿರಿಜೆ ಮೂಗುತಿಯ ಮಂತ್ರಿನ ಮಣಿಯಂ
ಚಾರುಲೀಲೆಯೊಳ್ ವಾಮಮುಖದೆ ಪೊನ್ಮಣಿಮಾಡ
ಲಾ ರಮಣಿ ನಿಂದಿಸಲ್ ಶಿವನಿಂಗೆದೇಳ್ದೆನಂದರಿದುಕೊಂಡೈ ತಲೆಯನು ೧೩

ಮತ್ತೆ ಪರಮೇಶ ನಿನಗುತ್ತಮಾಂಗವ ಪತ್ತಿ
ಸುತ್ತಸುವನಿತ್ತಧಿಕ ಉತ್ತಮಮಹೇಶ್ವರನೆ
ಮತ್ತೆ ವರಮಿತ್ತುದಂ ಮರೆದೆಯಾ ನಿನಗೆಣೆಯ ಕಾಣೆನೆಂದತಿರಾಗದಿಂ
ಹತ್ತಿರಕೆ ಬಂದು ಬುದ್ಧಿಯನುಸುರುತಿಹೆವು ನೀಂ
ಚಿತ್ತಶುದ್ಧದ ಶಾಂತನಾಗಿಯವಗುಣ ಹೋಗಿ
ಮತ್ತೆಲ್ಲರಂ ಸಲಹು ನಮ್ಮೆಳೇತಕ್ಕಹವು ಮಾರಬೇಡೈ ನೃಸಿಂಹ ೧೪

ಎಂದು ವೀರೇಶ್ವರಂ ಹಿಂಗದತಿಮೋಹದಿಂ
ದಂದು ವಿಸ್ತಾರದಿಂ ಬುದ್ಧಿಯಂ ಪೇಳೆ ಗೋ
ವಿಂದಗಜ್ಞಾನ ಪೆರ್ಚಿತ್ತರರೆ ಮರುಳು ತಾಂ ಮದ್ದುಕುಣಿಕೆಯ ಕಾಯನಂ
ತಿಂದಂತೆ ಹುಚ್ಚುಕಪಿ ಕಳ್ಗುಡಿಯೆ ಕೊಡತದೊ
ಳೊಂದಿಸಲ್ ಚೇಳೂರಲದರ ಚೇಷ್ಟೆಯನೇಸು
ಚಂದದಿಂ ವರ್ಣಿಸಲ್ಬಹುದಂತೆ ನರಸಿಂಹನುದ್ರೇಕಮುಸುರಲಳವೆ ೧೫

ಎನಗೊರ್ವ ಯಜಮಾನರುಂಟೆ ವಿಶ್ವವನೆಯ್ದೆ
ಕನಲಿ ತಾಂ ನುಂಗಿದೊಡೆ ನುಂಗುವೆಂ ಬಿಟ್ಟೊಡಂ
ತನುವಿನಿಂ ಬಿಡುವೆನೀ ವಿಶ್ವ[2]ನಾ[2]ನೇ ಕತ ಜನ ಸುಗತಿ ಪ್ರಳಯಕಮುಮ
ಘನವಪ್ಪ ದಿಟ್ಟರಾರ್ಕೈ ನಮ್ಮ ನಾಭಿಯಿಂ
ವನಜಸಂಭವನೊಗೆದನವನಳಿಕದೊಳ್ ನೋಡ
ಲನಂವಿನಿಂ ರುದ್ರ ಜನಿಸಿದ ಗುಣತ್ರಯಗಳುತ್ಪತ್ತಿಯೆನ್ನಿಂದಲೆಂದ ೧೬

ದುರುಳನ ದುರಾಳಾಪಮಂ ಕೇಳಿ ಧೂರ್ತ ನೀ
ನರಹರಿಯೆಂ ನಾನಿನ್ನನುಳುಹಿ ನುಡಿಸಲ್ ನೀನಂ
ಬರಿದೆ ಗಳಹಿದೆ ನಿನ್ನನೀಕ್ಷಣದೊಳಾಂ ಕೊಲುವೆ ಮುನ್ನಿನವತಾರಂಗಳಂ

---

1 ಯುಗಕೆ (ಕ) 2 ತಾ (ಕ)

ಹರನು ಸಂಹರಿಸಲಾಗಜ್ಞಾನಮಳಿದಂತೆ
ಹರಿಣರೂಪಾಗಿ ದಕ್ಷಾಧ್ವರದೊಳೋಡುತಿರ
ಲೆರಗಿಯರ್ಧೇಂದುಶರದಿಂದೆಸೆಯಲಾಗ ಸ್ತುತಿಸಿದೆಯಲಾ ಜಡಜಂತುವೆ ೧೭

ಪ್ರಕೃತಿ ನೀಂ ಪತಿ ಶಿವಂ ಪುರುಷನಂ ಮರೆವರೇ
ವಿಕೃತಿ ನರಸಿಂಹರೂಪವ ತಾಳಿ ನೀನಲ್ಲ
ಧಿಕ ತಾನಧಿಕ[1]ನೆಂ[1]ದು ವಾದಿಸಿಯಜನ ಗರ್ಭವಂ ಪೊಕ್ಕು ಮತ್ತಮಲ್ಲಿ
ಸಕಲಲೋಕಂಗಳಂ ಕಂಡು ಪೊರಮಡುವ ಬಿಲ
ದ ಕಡೆಯಂ ಕಾಣದೆಯಧೋದ್ವಾರದೊಳ್ ಪೊರಡ
ಲಕಟ ನಿನಗಾಗಧೋಕ್ಷಜನಾಮಮಾದುದಂ ಮರೆದೆಯಾ ನೀನೆಂದನು ೧೮

ಮತ್ತೆ ನಿನ್ನುದರದೊಳಗಿರ್ಪ ಲೋಕಾಳಿಯಂ
ಬಿತ್ತರದೊಳೆಲೆ ಬ್ರಹ್ಮ ನೋಡೆನಂತ್ಪೊಳಪೊಗಿಸ
ಲತ್ಯಧಿಕ ನಾಭಿಕಮಲದೊಳುದಿಸಿ ಪದ್ಮಜಂ ತಪದಿಂದೆ ಶಿವನನೊಲಿಸಿ
ಮತ್ತೆನ್ನ ನಿಟಿಲದೊಳಗುದಿಸು ದೇವಾ ಎನಲ್
ಕುತ್ತುಗೊಳುತಳಿವೆ ಬೇಡೆನೆ ಕೇಳದಿರಲಜನ
ನೆತ್ತಿ ಪಟಪಟನೆಯಿರ್ಪೋಳಾಗಿ ಬೀಳೆ ಹರ ನುಡಿಸಿ ಪೊರೆದುದ ಮರೆದೆಯ ೧೯

ವೀರನಾರೆಲ್ಲೊಗೆದನೆಂದು ಗಳಹಿದೆ ದುರವಿ
ಚಾರಿ ಪನ್ನೆರಡುಲೀಲೆಯ ಸಾರಮೂರ್ತಿಯಾಂ
ವೀರಭದ್ರೇಶ್ವರಂ ನಿನ್ನ ದಕ್ಷಧ್ವರದೊಳರೆಯಟ್ಟಿ ಸದೆದಂದಮಂ
ನಾರಸಿಂಹಾ ನೀನು ದೈತ್ಯನರುಣಾಂಬುವಂ
ಹೀರಿ ಮದದಿಂ ಮರೆದೆಯೆಂಬ ಬೋಧೆಯ ಕೇಳು
ವಿಾರಲೀಕ್ಷಣದಿ ಕಾರಿಸುವೆ ರಕ್ತವ ನಿನ್ನ ಶಿವಗೆಣೆಯೆ ಎಲೆ ನರಹರಿ ೨೦

ಸೋಮಕನ ಕೊಂದುರ್ಬಿ ಕೊಬ್ಬಿರ್ದ ಮಚ್ಚವಂ
ಸೋಮಧರ ಕೊಂದದರ ಸಮ್ಮವಂ ಶಿರಕೆ ಹರ
ತಾ ಮುದದೆ ಪಾಗಿನೊಳ್ ಸುತ್ತಿದಂ ನಿನ್ನ ಕಮಲಾಕೃತಿಯ ಬೆನ್ನಸ್ಥಿಯಂ
ಪ್ರೇಮದಿಂ ಪದಕದಂತಿಟ್ಟದಂ ಕಿಟಿಯಾಗು
ತೀ ಮಹಾಲೋಕಮಂ ಸಂಹರಿಸೆ ಮೊರೆಯಿಡಲ್
ಕಾಮಾರಿಸೂನು ಷಡ್ವದನನದ ಕೊಂದು ಕೋರೆಯನೀಯಲಭವ ತಾಳ್ದಂ ೨೧

---

1 ನಲ್ಲೆಂ (ಕ)

ಇಂತಿವಂ ಮರದೆ ದುರ್ಮಾಂಸಮದದಿಂದಧಮ
ಸಂತತಂ ರಂಭೆಯೂರ್ವಶಿಯರಿಂದ್ರನ ಸಭೆಯೊ
ಳಂತನಂಗನಕಲಾಕುಶಲೆಯಾಂ ತಾನೆಂದು ಸೆಣಸೆ ನಾರದ ನಗುತ್ತೆ
ನಿಂತು ನೋಳ್ಪೆವು ಶಂಕುಕರ್ಣನಾವಳ ಚಲುವೆ
ಯಂತಂ ಪೇಳುವನವಳೆ ಚೆಲುವೆಯೆನೆ ತಪದೊಳಿರು
ವಂತ ತವಸಿಯ ಬಳಿಗೆ ಪೋಗಿ ನಾನಾವಿಲಾಸವ ತೋರೆ ಮೆಚ್ಚದಿರಲು ೨೨

ಹರನಡಿಯು ಪೂಜಿಸಿ ಮಹಾದೇವನಿಂದ ತಾಂ
ವರವ ಪಡೆದಾ ರಂಭೆ ತಪಸಿಗಿದಿರಾಗಿ ಸುಂ
ದರಮಾದ ನಿಜಮೂರ್ತಿಯಂ ತೋರಲಾ ಶಂಖುಕರ್ಣನಾಕ್ಷಣ ಕಾಮಂನ
ಸರಳೆರ್ದೆಯ ಥಟ್ಟುಗಿಯಲಾಗ ಕಾಮಿನಿ ಪಿಡಿಯು
ಲರರೆ ದಕ್ಕದೆ ಸಗ್ಗಕೈದಲಾಯಕ ಕಾಮಂ
ದುರಿಯಿಂದ ಬೆಂದು ಪೊರಳುವ ಮುನಿಯ ಮೇ[1]ಲಾಗ[1] ಹರಿವಾಹನದ ಪಕ್ಷದ ೨೩

ನೆಳಲು ಬೀಳಲ್ ಶಂಖುಕರ್ಣ ಮೇಲಕೆ ನೋಡೆ
ಬಳಲುತಿಹ ಶಾಪವಿತ್ತಪನೆಂದು ಹರಿಚರಣ
ನಳಿನಕೆರಗಲ್ಕೆಯೆಲೆ ರಂಭೆಯಂ ಕರತಹುದೆನಲ್ ಸ್ವರ್ಗಕವ ಪೋಗಲು
ನಳಿನಾಕ್ಷನಡಿಗೆ ನಮಿಸುತ್ತ ಕಳುಹಲ್ಕವಳ
ನಳುಕದತಿ ಕಾಮದಿಂ ರಮಿಸಿ ಬರೆ ಮುನಿ ಕಂಡು
ಕಳಲಿ ಛೀಃಯೆಂದು ಮುಂದಲೆಯದರೆದೊದೆದು ಬಿಡೆ ನೀಂ ಮುಂಜಕೇಶನಾದೆ ೨೪

ಹರಿಯೆ ನಿನ್ನವನು ವಿಷ್ವಕ್ಸೇನನಂದು ಪುರ
ಹರನ ತಡೆಯಲ್ ಬಾಗಿಲೊಳ್ ತಿಸುಳದಿಂದಿರಿದು
ಯಿರವರಿಯದೇ ನಿನ್ನ ಸುತನಜಂ ಸರ್ವಕಾರಣಮೆನಲ್ಕವನ ತೆಲೆಯುಂ
ಹರಿದಂಗುಗುರ್ಗೊನೆಯೊಳದ ಭೈಕ್ಷಪಾತ್ರೆಯ ಮಾಡಿ
ದಿರವ ತಿಳಿಯಾ ಮೂರ್ಖ ನಿನ್ನಣುಗ ಕಾಮು ಕ
ಣ್ಣುರಿಯಿಂದ ಧಗಧಗನೆ ಸುಡುವಾಗಲೇಂ ನೀನು ಸತ್ತಿರ್ದೆಯೋ ನೃಸಿಂಹ ೨೫

ಹರಿದಾಸ ಕ್ಷುಂಪನಾಗ ಚಕ್ರದಿ ದಧೀಚಿಮುನಿ
ವರನೆದೆಯನಿಡಲು ಚೂರ್ಣವ ಮಾಡೆ ನಾಚಿ ಪೋ
ದಿರವ ಮರೆವರೆ ಕ್ಷೀರಸಾಗರದೊಳೊರಗಿ ನಿದ್ರಿಸುತಿರಲ್ಕುಪಮಂನ್ಯು ತಾಂ

---

1 ಲೆ (ಕಗ)

ಭರದಿಂದ ಕ್ಷೀರಮಂ ಸಂರ್ರೆಂದು ಪೀರೆ ನೀಂ
ಪರಿವೃತಾ ಮುನಿಯ ಗಂಟಲ ನಡುವೆ ಸೆತ್ತೆಯೋ
ಲಿರದೆ ಸಿಕ್ಕಲ್ಕೆ ಕೆಕ್ಕರಿಸಿ ಥೂಯೆಂದುಗಿಯೆ ಶ್ಲೇಷ್ಮದೊಳ್ ಬಿದ್ದುದರಿಯ ೨೬

ಆಳುತೇಳುತ್ತ ಪೊರಳುರುಳಿ ಕೋಟಲೆಯಿಂದ
ಘೋಳಿಡಲ್ ನೀನಾರೆನಲ್ ಜೀಯ ಹರಿಯೆನು
ತ್ತೂಳಿದುದ ಮರೆದೆಯೋ ಬೊಮ್ಮ ಮೊದಲಿರುವೆ ಕಡೆಯಾದ ಜಂತುಗಳಭವನ
ಮೇಳದಿಚ್ಛಾಶಕ್ತಿಯಾಜ್ಞೆಯೊಳಗಿಹರ್ರೈಸೆ
ಹೇಳಲೇಂ ದ್ಯಾವಾಪೃಥಿವ್ಯೋ ಎನುತ್ತಾಂತ
ರಾಳಿಕಂ ಲಿಂಗವೆಂದೆನುವ ವೇದೋಕ್ತಿಯಂ ಮರೆವರೇ ಭೃಗುನಾಮದ ೨೭

ಮುನಿಶಾಪದಿಂದ ನರಸಿಂಹನಾಗಸುರನಂ
ಕನಲಿ ಸೀಳ್ದರುಣಾಂಬು ಮಾಂಸಮಂ ತಿನಲು ಮತಿ
ಹನನಮಾಗಲ್ ಕೊರ್ಬಿದ್ಯೆ ಬುದ್ಧಿಃಕರ್ಮಾನುಸಾರಿಣಿಯ ಮಾಳ್ಪುದೇನು
ಬಿನುಗು ನರಹರಿ ನಿಲ್ಲು ಗಿರಿಯ ಶತಕೋಟಿ ತಾ
ನನುವಿನಿಂ [1]ಟೊ[1]ಲ್ಗು ಟ್ಟುವಂತೆ ಸರ್ರನೆ ಸೀಳಿ
ಘನಚರ್ಮವಂ ಸುಲಿದು ಶಿರವವೊಡೆವುತ್ತ ಹರನಡಿಗೊಯ್ವೆನೆಂದಾಲುತ ೨೮

ಬಿಡು ತಾಮಸನ ಸಾತ್ವಿಕಂ ನೀನು ಶಾಂತಿಯಿಂ
ಮೃಡನೆಡೆಗೆ ನಡೆಯೆನಲ್ ಘುಡುಘು[2]ಟ್ಟಿ[2] ನರಸಿಂಹ
ಮೃಡನಾರು ಸುಡುಗಾಡ ಬೂದಿಗಂ ನನಗಿದಿರೆ ಪೇಳ್ವರೆನಂತಂ ಘರ್ಜಿಸಿ
ಪಿಡಿವೆನೆಂದೆದ್ದು ಲಂಘಿಸೆ ವೀರಭದ್ರನಂ
ತೊಡನಾಗ ಮಾಯುವಾಗಲ್ ಸುರರು ಭಯಗೊಂಡು
ಕಡುದುಃಖಿಸಲ್ಕಂತರಿಕ್ಷದೊಳು ಕೋಟಿ ಚಂಚಲೆಯಂತೆ ಪೊಳೆದನಾಗ ೨೯

ಘೋರತರವಾದ ಸಾಸಿರತೋಳು ದಾಡೆಯಿಂ
ಕ್ರೂರವಹ ಚಂಚುಪುಟದಿಂ ವಹ್ನಿಜೂಟದಿಂ
ದಾ ರಮ್ಯವಜ್ರಮಯನಖರತತಿಯಿಂ ಕೋಟಿಕಾಲಾನಲನ ಕಾಂತಿಯಿಂ
ಸಾರಮೃಗಪಕ್ಷ್ಯರ್ಧದೇಹದಿಂದಿಳೆಯೊಳಗೆ
ಚಾರಿವರಿವಂಘ್ರಿಗಳನಾಲ್ಕರಿಂ ಗಗನದಲಿ
ಚಾರಿವರಿವಂಘ್ರಿಗಳ ನಾಲ್ಕರಿಂ ವಜ್ರಮಯಪಕ್ಷದಿಂ ಶರಭನಾದಂ ೩೦

---

1 ಪೋ (ಕ) 2 ಟಿಸಿ (ಕ)

ಲೋಕಾಳಿಯಂ ಬಳಸಿ ಸಂಚಲಿಪ ವಾಲದೊಳ
ನೇಕವಜ್ರಧ್ವನಿಗಳಂತೆ ಘುಡುಘುಡಿಸುತಿಹ
ಭೀಕರಾಕಾರ ಹೂಂಕಾರದಿಂದಧರೋಷ್ಠದಿಂ ಮಿಡಿವ ಪಟುರಾವಕೆ
ಮೂಕಂಗಳಾದವೆಣ್ದಿಕ್ಕುಗಳು ಕುಲಗಿರಿಗ
ಳಾಕಾರವಳಿದವಾ ಶರಭಮೂರ್ತಿಯ [1]ಸು[1]ರಾ
ದ್ರಾಕಾರವರರೆ ಬ್ರಹ್ಮಾಂಡಕೋಟಿಗೆ ಭಯಂಕರವಾದುದೇವೇಳ್ವೆನು ೩೧

ಇದು ಶರಭಕವಚಮೂರ್ತಿಧ್ಯಾನಮಿದರಿಂದ
ಪದಗಳುನ್ನತ ಸಕಲಸೌಭಾಗ್ಯಮಪಮೃತ್ಯು
ವೊದವಿರ್ದುಪದ್ರವಂ ಭೂತಪೈಶಾಚಾದಿಭಯನಿವಾರಣಮಪ್ಪುದು
ಮುದದಿಂದ ಕೇಳಧಿಕ ಶರಭಸಾಳವನಲ್ಲಿ
ವಿಧುವಹ್ನಿರವಿನೇತ್ರಕುಲಿಶಚಂಚುಂಗಳಿಂದೆ
ಕದಲುವೆಡರೆಕ್ಕೆ ಕಾಳಿಗೆ[ಯೆ] ಬಲರೆಕ್ಕೆ ದುರ್ಗಾದೇವಿಯಾಗಲೆಸೆದಂ ೩೨

ಮತ್ತೆ ಹೃದಯಂ ಭೈರವಂ ಜಠರ ಬಾಡಬಂ
ಕುತ್ತುಗೊಳಿಪಪಮೃತ್ಯು ಕಾಲಮೃತ್ಯುಗಳೂರು
ಸುತ್ತಿ ಬೀಸುವ ಕಾಲವಾಯುವೇ ಪಾದಂಗಳಿಗೆ ಶತ್ರುಗಳೀಗೆಲುವ
ಅತ್ಯಧಿಕ ಶರಭಮೂರ್ತಿಯ ಕಾಣುತಮರರುರೆ
ಮೊತ್ತಮುಘೆಯುಘೆಯೆಂದು ಗಂಡನಸುರರ ಮಿಂಡ
ಬಿತ್ತರದ ವೈರಿಕುಲತಿಮಿರಮಾರ್ತಾಂಡ ಘನಗಿರಿವಜ್ರದಂಡೆಂದುದಂ ೩೩

ದೇವದೇವನೆಯಿಾ ದುರಾತ್ಮನಂ ಬೇಗದಿಂ
ದಾವ ಕಾರ್ಯವ ನೋಡದೀಕ್ಷಣಂ ಭೇದಿಸಲು
ನಾವೆಲ್ಲ ಸುಖಮಿರ್ಪೆವಲ್ಲದೊಡೆ ಲೋಕಕುಳಿಂವಿಲ್ಲವೆಂದಜಸುರಪರು
ದೇವಾ[2]ಳಿ[2] ಮನುಮುನಿಗಳೆಲ್ಲ ಬಿನ್ನೈಸೆ ಹರ
ಪಾವನಾತ್ಮಂ ಪಕ್ಷಮಂ ಚರಿಸಿದಂಗ್ಗಡಕೆ
ಮಾವರಂ ಬೆದರ್ದ ಭಗಣಗಳುದುರ್ದವಾ ಗಿರಿಗಳೆಲ್ಲ ಪಾರುತ್ತಿರ್ದ[3]ವು[3] ೩೪

ಎರಗಿಯಾಗಸದಿಂದ ಕೋಟಿಸಿಡಿಲಾರ್ಭಟೆಯ
ತೆರದಿಂದ ನರಹರಿಯ ತಲೆಯಂ ಕಚ್ಚುತ್ತೆತ್ತಿ
ತಿರುಹಿಕೊಡಹುತ್ತಂಬರಕ್ಕಿಡಲ್ ವೈಕುಂಠಕ್ಕೈದುವೊಲ್ ಪೋಗಿ ಭರದಿಂ

---

1 ವಿಷ್ಣು (ಕ) 2 ದಿ (ಕ) 3 ರು (ಗ)

ತಿರುಗಿಬೀಳುವ ಹರಿಯ ಕೊಕ್ಕಿನಿಂ ಕುಕ್ಕಿ ಕ
ಣ್ಣರದೆ ಮೂಗಿಂಗೆ ಪವಣಿಸಿ ಚಂಚುಕೋಟಿಯಿಂ
ಭರದಿ ಸೆಳೆವುತ ತಿರುಪಿಡಲ್ಕೆ ಕುಂಬರನ ತಿಗುರಿಯೊಲಾಗ ತಿರುಗುತಿರ್ದಂ ೩೫

ನೋಡುತ್ತ ನರಸಿಂಹದಂಷ್ಟ್ರನಂ ಚಂಚುವಿಂ
ದಾಡಿಸುತ ಕಿಳ್ತು ಕಟವಾಯ ಸೀಳುತ್ತಲೆಡೆ
ಯಾಡುವತಿನಾಲಗೆಯ ಪಿಡಿದಿರೆ ವಿಯತ್ತಳಕೆ ಬೀಳ್ವ ನರಹರಿಯೊಡಲನು
ಗಾಢದಿಮಿರುಂಕಿ ಚರಣದೊಳು[1]ಕೊಂಡೊ[1]ಯ್ವುತ್ತ
ರೂಢಿಯಾಕಾಶವಂ ಮುಟ್ಟುವನ್ನವರ ಶಶಿ
ಚೂಡನಪರಾವತಾರಂ ವೀರಶರಭೇಶನಾರ್ದು ಭಂಗಿಸುತಿರ್ದನು ೩೬

ವಾಮಚರಣದೊಳೊದ್ದು ಬೊಬ್ಬಿರಿಯೆ ನರಮೃಗಂ
ಭೂಮಿಯೊಳ್ ಮೂರ್ಛೆಯಿಂ ಬೀಳ್ವನಿತರೊಳ್ ವೀರ
ತಾಮಸನ ರೆಕ್ಕೆಯಿಂ ಪೊಯ್ದೊಬ್ಬಿಸಲ್ಕೌಡಕಚ್ಚಿ ಗುರ್ದುವೆನೆನುತ್ತೆ
ತಾ ಮುದದೆ ತಾಳಮರದುದ್ದ ಕೈಗಳ ನೆಗಪ
ಲಾ ಮಹೇಶ್ವರನವನ ತೋಳ ಪಿಡಿದೆತ್ತುತ್ತ
ಲೀ ಮಹಿಯೊಳೌಂಕಿ ಕುಸುಕಿರಿದು ಕುಕ್ಕಲ್ಕಹಿಪನಳುಕಲಿಳೆ ನಡನಡುಗಿತಂ ೩೭

ಪೊಡವಿಯಿಂದೆತ್ತಿ ಮೇಲಕೆ ಚಿಮ್ಮೆ ನರಸಿಂಹ
ನೊಡನೆಯಂಬರದಿಂದ ನೆಲಕೆ ಬೀಳ್ವನ ರುದ್ರ
ಮಡುಂಕಿ ಪ್ರಡೀತಗತಿಯಿಂದೆಯ್ದಿರುಂಕಿಯುಡ್ಡೀನ ಸಂಡೀನಗತಿಯಿಂ
ಬಿಡದಾಡಿಸುತೆ ದಿಗಂತರದೊಳಮಿತಾಯುಧದೊ
ಳಡಿಗಡಿಗೆ ಬೊಬ್ಬಿರಿವುತಾಲುತಿರಿತಿರಿದು ಕೊಲ
ಲೆಡವಿಡದೆಯರುಣಾಂಬುಧಾರೆ ಭೋರೆಂದಿಳಿಯೆ ರಕುತಗಡಲಂತೆಸೆದಂದು ೩೮

ಪಾರಿಸುತ್ತಂಬರಕೆಯುಗುರ್ಗೊನೆಯ ದೇಹದೊಳ್
ಪೂರಿಸುತೆ ಶಸ್ತ್ರಜಾಲಂಗಳೆಡೆಯೊಳಗಿರದೆ
ಸೇರಿಸುತೆ ರಕ್ಕಸನ ರಕ್ತವಂ ಬಾಯೊಳಗೆ ಕಾರಿಸುತೆ ಮುದದೊಳಾಗ
ತೋರಿಸುತೆ ಸುರರ ಸಂತಾನಕ್ಕೆ ಜಗಕೆ ಮುದ
ಮೇರಿಸುತೆಯರುಣಾಂಬುನಿಧಿಯೊಳಾ ನರಮೃಗವ
[2]ಚಾ[2]ರಿಸುತೆಯದ್ರಿಗಳನವನ ಮೇಲಕ್ಕಾಗ ಹೇರಿಸುತೆ ಶರಭೇಶ್ವರಂ ೩೯

---

1 ಹಿಂದೊ (ಕ) 2 ಜಾ (ಗ)

ಎತ್ತಿ ಗಿರಿಗಳನೆಯ್ದೆ ಹತ್ತಿ ಲಂಘಿಪ ಪರಿಯ
ನೆತ್ತಿಯಂ ಪೊದೆದೊದೆದು ಸುತ್ತಲೆಳೆವುತ ತೊವಲ
ನೊತ್ತಿ ಸುಲಿವುತ ಶಿರವ ಕತ್ತಿಯಿಂದುತ್ತರಿಸಲಸುರನತಿ ಕೊರ್ಬುಗಂಡಂ
ನೆತ್ತರುಂ ನೆಣನೆಲ್ಲತ್ತಿತ್ತ ಪೋಗಲ್ಕಧಿಕ
ಸುತ್ತಿದಜ್ಞಾನವಳಿವುತೆ ನೃಸಿಂಹಂ ಮುದದೆ
ಚಿತ್ತಜಾರಿಯಕುವರ ವೀರಭದ್ರೇಶ್ವರನ ಪೊಗಳ್ದನದನೇವೇಳ್ವೆನು ೪೦

ಸೊಕ್ಕಿ ತಲೆಗೇರ್ದ ಮಧುಪಾನದಂದದಿ ದೈತ್ಯ
ನುಕ್ಕವತಿ ರುಧಿರಾಂಬುಪಾನಮುದದೇಹದಿಂ
ಕಕ್ಕಿ ಪೋಗಲ್ ನೃಸಿಂಹಂ ಗರ್ವಮುಳಿದು ಭಯಭಕ್ತಿಯಿಂ ಭುವಿಯೊಳಮುಮ
ಮುಕ್ಕಣ್ಣನಣುಗಗಷ್ಟಾಂಗದಿಂ ನಮಿಸಭವ
ಮಿಕ್ಕು ನಿಮ್ಮಂ ಗಳಹಿ ಕೆಟ್ಟೆ ರಕ್ಷಿಪುದೆನುತೆ
ಯಕ್ಕರಿಂದಮರಪಂಕ್ತಿಯೊಳು ನಿಲ್ವುತೆ ಮೃದುಳವಚನದಿಂ ಸ್ತುತಿಸುತಿರ್ದಂ ೪೧

ಶರಣು ರುದ್ರಾಯ ರೌದ್ರಾಯ ಸುಮಹೋಗ್ರಾಯ
ಶರಣಂ ಜಿಷ್ಣುವೆ ಶರಣು ಸೋಮಾಯ ಭೀಮಾಯ
ಶರಣು ಕೃದ್ಧಾಯಾತಿಮನ್ಯವೇ ಶಂಭವೇ ಶೂಲಹಸ್ತಾಯ ಶರಣು
ಶರಣು ಕಾಲಾಯತೇ ಕಾಲಕಾಲಾಯತೇ
ಶರಣು ಮೃತ್ಯೋರ್ಮೃತ್ಯುವೇ ಮಹಾಮೃತ್ಯುವೇ
ಶರಣು ಶರಣು ಕ್ಷಯದ್ವೀರಾಯ ವೀರಾಯಯೆಂದು ನರಹರಿ ಪೊಗಳಲು ೪೨

ಇಂತು ನಾನಾವಿಧದೊಳಾಗ ನರಸಿಂಹ ತ
ನ್ನಂತರಂಗದ ಪರಂಜ್ಯೋತಿಯಹ ಶರಭೇಶ
ನಂ ತುತಿಸುತಿರುತಿರಲ್ಕಜ ಸುರಪ ಸುರರೆಲ್ಲ ಪೊಡಗೆಡವುತಷ್ಟಾಂಗದಿಂ
ಇಂತನಿಬರುಂ ಬಹಳ ಸ್ತುತಿಗಳಿಂ ಸಲಹೆನಲ್
ಕಂತುರಿಪು ಚರ್ಮವಂ ಪೊದೆದವನ ಶಿರವನ
ತ್ಯಂತಪಟುರುಂಡಮಾಲೆಯೊಳು ನಾಯಕರತ್ನವಾಗಿ ಮುದದಿಂ ತಾಳ್ದನು ೪೩

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತರೂಪವಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹಕಾಂಡದೊಳ್ ನೋಡಲೊಂದನೆಯ ಸಂಧಿ ಸಂಪೂರ್ಣಮಾಯ್ತು ೪೪

# ಎರಡನೆಯ ಸಂಧಿ

ಸೂಚನೆ :

ಪೆಂಡತಿಯು ತಾಯೊಡಲೊಳೊರಗಿರ್ಪ ಹರಿಯಜಂ
ಕಂಡು ನೀನಾರೆಂದು ಕಲಹಿಸಲ್ಕೀರ್ವರು
ದ್ದಂಡಾಸ್ತ್ರದುರಿಯಿಂ ಜಗವ ಪೊರೆಯಲರ್ಧನಾರೀಶನಾದಂ ಶಂಕರಂ

ರಾಜೀವಶೋಭನಾಂಬರೆ ಗಿರಿಜೆ ನಿಜನೇತ್ರ
ತೇಜವಂ ನೋಳ್ಪೆನೆಂದಿರ್ಕಣ್ಣಿನಿಂ ನೋಡ
ಲಾ ಜವದ ತೆರೆಯಭವ ಮುಚ್ಚೆ ಮುಚ್ಚದವೊಲೊಂದೊಂದರಿಂದೊಂದೊಂದನು
ಸೋಜಿಗವೆನಲ್ ಕಣ್ಣರಳ ಮುಗಿವುತಂ ನಗಲ್
ಮೂಜಗನ್ಮಾತೆ ಪ್ರಣಯಂದೊಳಿದೇಂ ಲೀಲೆಯೆಂನೆ
ವ್ಯಾಜದಿಂ ಸ್ನೇಹದಿಂದಪ್ಪಿ ಬಿನದಿಪ ಚನ್ನಮಲ್ಲಿಕಾರ್ಜುನ ಜಯ ಜಯ ೧

ಅಳಜಾವತಿಯೊಳಮಳ ಜಂಗಮಾರ್ಚನೆಯ ತಾಂ
ಬಳಸುತ್ತಮಿರಲು ವರ್ತಕನಾಗಿ ಧನ ತೀರ
ಲಳುಕದುಪವಾಸವಿರೆ ಶಿವ ಸ್ವಪ್ನದೊಳ್ ಬಟ್ಟೆಯಂ ಬಡಿದು ಮಾಡೆಂದೊಡೆ
ತಿಳಿಯದಿಳೆಯಂ ಬಡಿಯಲಿದು ಪೊಲ್ಲ ಧನಿಕರಂ
ಕೊಲುವುದೆನೆ ಹರನ ಬಡಿಯಲ್ ಮೆಚ್ಚಿ ಧನವಿತ್ತೊ
ಡೊಲಿದು ಚರಸೇಸೆಯಿಂ ಕೈಲಾಸದೊಳ್ ನಿಂದ ಕಲಕೇತಿಯಡಿಗೆ ಶರಣು ೨

ನಿಂದು ಕೈಗಳ ಮುಗಿವುತೆಂದಂ ದಧೀಚಿಮುನಿ
ಸಂದ ಹರಿಘಾತಿ ಹದಿಮೂರನೆಯ ಲೀಲೆಯಂತಿ
ಛಂದದಿಂ ನಿರವಿಸಿದಿರಿನ್ನು ಹದಿನಾಲ್ಕನೆಯ ಅರ್ಧನಾರೀಶನಿರವಂ
ತಂದೆ ಪೇಳ್ವೆ ಮರುಳಸಿದ್ಧೇಶನೆನಲು ಮುದ
ಮೊಂದಿ ಲೈಂಗ್ಯದೊಳು ಮುನ್ನಸುರ್ದಂದದಿಂ ನಿನಗೆ
ಸುಂದರದ ವಚನರಚನೆಯೊಳು ಪೇಳುಂವೆಂದು ಚಂದದಿಂ ಪೇಳುತಿರ್ದಂ ೩

ಪಾಲ್ಗಡಲೊಳಾ ಹರಿಯುಂ ಮಲಗಿರಲ್ಕಜ ಕಂಡು
ಪುಲ್ಮನುಜ ನೀನಂ ನಾಂ ಲೋಕೇಶ ನನ್ನಿದಿರೆ
ಕಾಲ್ನೀಡಿ ಕೆಡೆದೇಳೆನಲ್ಕದಂ ಕೇಳಿಯೆಂದ್ದೀ ಜಗಕ್ಕೊಡೆಯಂ ನಾನೆ
ಸೊಲ್ವೆಣ್ಣನಾಣ್ಮ ನೀನಣುಗನೆನಗಾಂ ನಮಿಸೆ
ಸಲ್ವುದೇ ಎನುತಲೊಬ್ಬೊಬ್ಬರಾಗ್ರಹದಿ ವಚಿ
ಸ[1]ಲ್ಗ[1]ರ್ವದಿಂದಾರ್ಭಟಿಸಿ ಭುಜವ ತಟ್ಟುತ್ತ ರಣಕ್ಕಿಬ್ಬರನಂವಾದರು ೪

ಆಚ್ಚುತನಸವಂಬಲರ್ ದಶಕೋಟಿ ವಿಷ್ಣುಗಳ್
ಹೆಚ್ಚಾದ ವಂಕರಕುಂಡಲರು ಪೀತಾಂಬರರು
ಹೊಚ್ಚಹೊಸಹರೆಯದವರಜನಿಗೆ ಸಹಾಯಿಗಳ್ ನವಕೋಟಿ ಬ್ರಹ್ಮರ್ಕಳು
ಎಚ್ಚಾಡತೊಡಗಿದರ್ ಪೊಸಕಣೆಗಳಿಂ ಮುಗಿಲ
ಮುಚ್ಚಳಂದೆಗೆಯೆ ಸುರಿವಂಬುಧಾರೆಗಳಂತೆ
ಹೆಚ್ಚಾಗಿ ಸುರಿಯಲಂಗೋಪಾಂಗಗಳಲರುಣಜಲವಂಭಯಸ್ಸೈನ್ಯದೊಳಗೆ ೫

ಸೆಣಸುತ್ತ ಮಲ್ಲಯುದ್ಧಂ ಮಾಡುತಿರಲುಮು
ಗ್ರಣೆಗಳಹ ಹರಿವಿಧಿಗಳೆಂದರಿನಿಬರ ಹರಿಬ
ಗಣಿದಿಸಲ್ ಕಲ್ಪಾಂತಕಾದರಾಗದು ನಾವೆ ಕಾದಬೇಕೆಂದು ಬಗೆದು
ಹೊಣಕೆಯಿಂ ಘನಮಲ್ಲರಂತೆಳ್ದು ಧನುಗಳಂ
ಭಣಿತೆಯಿಂದಾಂತು ಜೇವಡೆದ ರಭಸಕ್ಕರರೆ
ಪೆಣದವೊಲ್ ಜೀವಿಗಳ್ ನಿರ್ಜೀವವಹಾಗೆ ದಿಗ್ಭ್ರಾಂತಿಯಂಗೊಂಡರಾಗ ೬

ಪೊಡವಿ ನಡನಡುಗುವಂತಾಲೀಢದಡಿಗಳಂ
ಕಡುವೇಗದಿಂದಿಟ್ಟು ತರ್ಜನಿಯೊಳೇ ಹೆದೆಯಂ
ಬಡಿದಂ ಕುಬುಬೆಂದಾಲ್ದು ಸರಲ ಸುರಿಯಲ್ ಸುರಿದು ಖಂಡಿಸಲ್ ಖಂಡಿಸುತ್ತೆ
ಬಿಡದೆಚ್ಚೊಡೆಚ್ಚು ಬಾಣಗಳ ನುಂಗಲ್ ನುಂಗಿ
ಯೊಡನೆ ಹೂಂಕರಿಸಿ ಹೂಂಕರಿಸಿ ನೋಡಲ್ ನೋಡಿ
ಬೆಡಗಿನತಿಮಾನದಿಂದಜಹರಿಗಳೆಚ್ಚಾಡಿದರ್ ವರುಷಸಾಹಸ್ರಮುಂ ೭

ಏನೆಂಬೆ ಖಡ್ಗ ಪಟ್ಟಸ ಕುಂತ ಮುದ್ಗರಾ
ದ್ಯಾನು ಕುಲ್ಯಾಸ್ತ್ರ ಶಸ್ತ್ರಂಗಳಿಂ ಕಾದಿ ಬಹು
ಮಾನದಿಂದೋರೊರ್ವರೆಂದರೆಲೆ ನೀನೇನು ತಾನೇನೆನುತ್ತೆ ಕನಲಿ

1. ಲ (ಕಗ)

ಸಾನುರಾಗದೊಳು ಶಿವನಿಂ ಪಡೆದುಕೊಂಡಿರ್ದ
ಭಾನುನಿ[1]ಭ[1] ಪಾಶುಪತಶರವ ಶಿವಮಂತ್ರಮಂ
ಜಾನಿಸುತೆಯಭಿಮಂತ್ರಿಸುತ್ತ ವಿಧಿ ಹರಿಗಳೆಚ್ಚಾಡಿದರ್ ಚಾಪಕರರು ೮

ಎಚ್ಚಡಾ ಬಾಣಗಳ್ ಘಂಡುಘುಡಿಸುತೆಣ್ದೆಸೆಯ
ಮಂಚ್ಚಿ ಕಿಡಿಗಳನುಗುಳಲದರಿಂದ ಚರಿಸುವ ವಿ
ಯಂಚ್ಚರರ ಮೈಬೆಂದು ರವಿಶಶಿಪ್ರಮುಖತಾರೆಗಳೊಂದುಕಡೆಗೆ ನಿಲಲು
ಉಚ್ಚತರ ಲೋಕಂಗಳಂ ಸಂಡಂತ ಭಗಭಗನೆ
ಹೆಚ್ಚಿ ಶರಧಿಗಳ ಪೀರುತ್ತ ಕುಲಗಿರಿಗಳಂ
ನುಚ್ಚುನುರಿಮಾಡಿ ದಿಗ್ಗಜ ಕಮಠ ಶೇಷರಂ ಸುಟ್ಟು ಭಸ್ಮವ ಮಾಡುತೆ ೯

ಕಾರುತಂ ಬ್ರಹ್ಮನಾರಾಯಣಾದ್ಯಸ್ತ್ರಗಳ
ತೋರುತಂ ಸಕಲಲೋಕಾಳಿಗೆ ಭಯಂಕರವ
ಬೀರುತಂ ದಿಗ್ನಭೋಮಂಡಲಂ ಕಿವುಡಾಗೆ ಬೀರುತ್ತಮದ್ಭುತವನು
ಪೋರುತ್ತ ಉಭಯಬಾಣಂಗಳತಿರೌದ್ರದಿಂ
ಬೀರುತ್ತಲಚ್ಚುತಾಜರ್ಗೆ ಎದೆದಲ್ಲಣವ
ಸಾರುತ್ತೆ ಸರ್ವಪ್ರಳಯಕ್ಕೆ ಕಾರಣವಾಗಿ ತಿರುಗುತ್ತಿರ್ದವು ಭುವನದಿ ೧೦

ಇಂತೆಸೆವ ಬಾಣದುಪಹತಿಗಳಂ ನೋಡಿ ಬಸ
ವಂ ತಿದ್ದಲಾಗೆರೆಯ ಮಣ್ಣಿಂದ ಮುಸಿಯುನಾ
ದಂತೆ ನಮ್ಮಯ ಜಯಕ್ಕಾಗಿ ಬಿಡಲಸ್ತ್ರಗಳ ಲೋಕಲಯಂಕಾದಲೀಗ
ಹಂತೆ ನಮ್ಮಯ ಕೆಡಿಸಿ ತೆಗುಮೆಯೆಂದೆನುತಧಿಕ
ಚಿಂತೆಯಿಂ ನೊಂದು ನಮಗಳಿವು ಬರಲಿಲ್ಲಿದಕೆ
ಮುಂತೇನು ಕಜ್ಜ ಪೆಂದುಜ್ಜವಿಸಿ ನುಡಿಸಿದರ್ ಜಗದಾದಿಯಾದ ಹರನಂ ೧೧

ನತಭಕ್ತಮಂದಾರ ನಾಗಕಂಕಣಹಾರ
ಜಿತಸರ್ವಜಿನ್ಮಾರ ಚಿತಸಾದ್ವಲಂಕಾರ
ನಂತವೇದಪದವಾರ ನೂತನೇತನಚಾರ ಕಾಲಗರ್ವಾಪಹಾರ
ಸತತೋಜ್ವಲಾಧಾರ ವಿತತಸದ್ಗುಣಧೀರ
ಚತುರಗುಣಗಂಭೀರ ಚಾರುಕರುಣಾಪೂರ
ಗತಮಾಯಿಕವಿಕಾರ ಗಂಗಾಜಲಸ್ಫಾರಜಟಿ ಜಯ ಎನುತ ನುತಿಸಲಂ ೧೨

---

1. ನ (ಕ)

ಶತಪತ್ರನೇತ್ರ ಸರಸಿಜಸಂಭವ[1][ರಾ][1]ಸ
ನ್ನುತಿಭಕ್ತಿಗೊಲಿದು ಶತಪತ್ರಸಖಹರಿಣಾಂಕ
ಹುತವಹತ್ರಯನೇತ್ರನಾಗ ಪ್ರಸನ್ನನಾಗಲ್ಕುಭಯ ಶರವಡಗಲು
ಜಿತಕೋಟಿದ್ಯುಮಣಿದೀಧಿತಿ ಲಿಂಗತೇಜದೊಳ
ಗತಿಶಯಾಕೃತ್ಯರ್ಧನಾರೀಶನಾಗಿ ಜಗ
ಕ್ಕಿತರ ಕಾರಣವಿಲ್ಲವೆಂದೆನಿಸಿ ತನ್ನ ಬಿಟ್ಟಾಗ ತೋರುತ್ತಿರ್ದುದು ೧೩

ಸಡಗರದ ರುಂಡಮಾಲೆ[2]ಯಂ[2] ಮಲ್ಲಿಗೆಯ ದಂಡೆ
ಜಡೆಯಂ ಜಂಗುಳಿಯು ಬಾಚಿದ ಚೂರ್ಣ ಕುಂತಳಂ
ಕಿಡಿಗಣ್ಣು ಕತ್ತುರಿಯ ತಿಲಕ ರವಿನಯನ ಸಸಿ ಬಗಸೆಗಣ್ ಕಿವಿಯ ಸರ್ಪಂ
ಜಡಿವ ಹರಳೋಲೆ ಮುತ್ತಿನ ರಂಗಂ ಕೆಂಬರಲ
ಕಡುಬಣ್ಣ ವಿ[3]ಷ[3]ಕಾಂತಿ ನೀಲಮಣಿ ಸಾರಂಗ
ಜಡಜವರ ಕರಗಳತಿಬೆಡಗಿನ ಮಹಾದೇವ ದೇವಿಯೊಡನೊಪ್ಪಿರ್ದನು ೧೪

ವರಚಿತಾಭಸಿತ ಮೃದುಯಕ್ಷಕರ್ದಮ ಸಂರೇ
ಶ್ವರರಸ್ಥಿಮಾಲೆ ಮುತ್ತಿನ ಸರಂ ಪುಲಿಯ ಬಿ
ತ್ತರದ ಸಮ್ಮಂ ಮಿದುಪ ಪೊಂಬಟ್ಟೆ ನಾಗಹಂಸಕರತ್ನಹಂಸಕಮಿಮಂ
ಧರಿಸಿ ತಾನರ್ಧನಾರೀಶ್ವರತ್ವಮನಾಂತು
ಹರಿ[4]ವಿರಿಂಚಿ[4] ಮುಖಾಮರರ ಕುಟುಂಬಿಗೆಳೆನಿಸಿ
ಮೆರೆಯುಮೀ ಲೀಲೆ ಪರಮೇಶ್ವರಂಗಾರಯ್ಯೆ ಕಲ್ಪಕಲ್ಪದೊಳುಂಟೆಲ್ಯೆ ೧೫

ಸತತೋಜ್ವಲಾನಂದ,ಸಂದೋಹರೂಪಸ
ನ್ನುತ ವೇದ ಪೌರಾಣಿಕಾಗಮಾದ್ಯಖಿಳವರ
ಮತ ಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನಸಮ್ಮತವಹ
ಅತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನಮಹಕಾಂಡದೊಳ್ ನೋಡಲೆರೆಡನೆಯ ಸಂಧಿ ಸಂಪೂರ್ಣವಾಯ್ತು ೧೬

1 ರ (ಕಗ) 2 ಯ (ಕ) 3 ಹ (ಕ) 4 ೦ (ಕ)

## ಮೂರನೆಯ ಸಂಧಿ

ಸೂಚನೆ :

ನಮಕ ಮಂತ್ರದೊಳಮಳ ಭಕ್ತಚಿಂತಾರ್ಹನಹ
ರಮಣೀಯಪಂಚದಶ ಕೈರಾತಲೀಲೆಯಿಂ
ಕ್ರಮದಿ ಶಿವ ನಟಿಸಿದಂದವ ಮುನ್ನವೆ ಪುರಾರಿ[1][ಯು][1]ಸುದರ್ಗಂದವಂ ಪೇಳ್ವೆನಂ

ಎಲೆಯಳಿಕನಯನ ನಿನ್ನಯ ಜಟಾಬಂಧದೊಳಗೆ
ಗೆಲವಿನಿಂದಬಳೆಯಂದದಿ ಕಾಣಬಪ್ಪುದೇಂ
ನೆಲೆಯಾಗಿ ಪೇಳೆನಲ್ಕಳಿಕಿ ಎಲೆ ದೇವಿ ನೀನೆನ್ನ ಮಂಡೆಗೆ ಮಜ್ಜನಂ
ಬಲುದಿವಸದಿಂ ಮಾಡಲಿಲ್ಲ ನಿನ್ನಾಣೆ ಕೇ
ಳಳಿಕನೇತ್ರಕ್ಕಾಗಿ ತಳೆದನಿರಿದೇ ಎನಲ್
ಭಲರೆ ಪೋಗೈವೊಲ್ಲೆನೆಂಬಗಜೆಯಂ ಮುದ್ದಿಸುವ ಚನ್ನಮಲ್ಲ ಸಲಹ ೧

ಶಿವರಾತ್ರೆಯೊಳಗೆ ಶಿವಲಿಂಗದೇವಂಗಮಳ
ತೊವಲತಿತ್ತಿಯ ಸಲಿಲದಿಂದಲಭಿಷೇಚಿಸುತ
ತವೆಯದಾ ಶಾಂಡಿಲ್ಯಪತ್ರದಿಂ ಯಜಿಸಿ ನಿಷ್ಪಾವದಿಂ ನೈವೇದ್ಯಮಂ
ಭವಗರ್ಪಿಸುತ್ತ ತತ್ಸತಿ ದಿವ್ಯಲಿಂಗಕ್ಕೆ
ಸವೆಯದಾ ಬೆಳಗನ್ನ ಪೆಂಜೊಡರ ಬೆಳಗದಕೆ
ಭವಹರಂ ರಜತಾಚಲಕ್ಕೊಯ್ಯೆ ರಾಜಿಸುವ ಸಂಕಣ್ಣಗಳಿಗೆರಗುವೆಂ ೨

ಸಾರಶಿವನಿಷ್ಠನೆ ದಧೀಚಿಮುನಿ ಕೇಳೆನು
ತ್ತಾರಾಧ್ಯ ಮರುಳುಸಿದ್ಧೇಂದ್ರ ನಿರವಿಸಿದನತಿ
ಕ್ರೂರದಕ್ಷಾಧ್ವರದೊಳಾ ಹರಿಯ ಹರಿಣಾವತಾರಮಂ ಹರಿಸಲ್ ಹರಂ
ವೀರೇಜನಯನ ನುತಿಸಿದ ನುತಿಯ ನುತಿಸಧಿಕ
ಸಾರಮಂನದಿಷ್ಟವಂ ಪಡೆದ ಕಥೆ[ಯಂ] ಪದ್ಮ
ಪೌರಾಣದುಪರಿಭಾಗ[2]ದೊ[2]ಳುಸುರ್ವುದದನೆ ಬಿತ್ತರಿಪೆನೆಂದಾರ್ಯವರ್ಯಂ ೩

---

1 ಮು (ಕಗ) 2 ಗೆಯೊ (ಗ)

ಕಾಂತಾರವಾಸದೆಂಳ್ ಪತ್ನೀಸಹೋದರರ
ತಾಂ ತಳುವದೊಳಿದರ್ಜುನಂ ಇಂದ್ರಕೀಲದ
ಪ್ರಾಂತದೊಳಗುಗ್ರತಪವೊಡರಿ[1]ಸಲ್[1] ಮುನಿಪರೈದು[2]ತ[2] ಶಂಭುಪಾದದಡಿಗೆ
ಕ್ಲಾಂತರಾಗುತ [3]ಪೋ[3]ಗಿ ಹರಗೆ ಬಿನ್ನೈಸಲ್ಕೆ
ಸ್ವಾಂತದೊಳಗರಿದವನ ಸಲಹಲೆಂದತಿ ಕರುಣ
ವಾಂತಗಜೆ ಗು[4]ಹ[4]ಗಣಪವೀರಗಣರಿಂ ಶಬರವೇಷವಂ ತಾಳ್ದನಂದು ೪

ಎಳೆವರೆಯುದವನಾ[5][ಗಿ][5] ಪೊಸಹರೆಯುದವಳಾದ
ಕಂಳಿರ್ವೆಟ್ಟಿನಣುಗಿ ತನ್ನೊಡನೈದಲಸುಗೆ ಮಾಂ
ದಳಿರು ಕದ್ದಾಳೆ ಸುರಹೊನ್ನೆದೊಂಗಲ ತುರಾಯುವ ಮಸ್ತಕದಲಿ ಧರಿಸಿ
ವಿಳಸಿತದ ಸಪ್ತವಿಂಶತಿತಾರೆಗಳ ತೆರದಿ
ನಳನಳಿಪ ನವಿಲ್ಗರಿಯಂ ಮಾಲೆತಲೆಯೊಳ್ ಮೆರೆಯ
ಲಳವಟ್ಟು ಹುಣ್ಣಿಮೆಯ ಚಂದಿರನ ನಿಂದಿಸುವ ಮೊಗದಿಂದಲೆಸೆವನೀಶಂ ೫

ವ್ಯಾಘ್ರಚರ್ಮದ ಚಲ್ಲಣವನುಟ್ಟು ಹರಿಸಮ್ಮ
ದಗ್ಗಳಿಯ ಕಾಸೆಯಂ ಬಿಗಿದಾನೆದೊವಲನ
ತ್ಯುಗ್ರದಿಂ ಗು[6]ಬ[6]ಕಟ್ಟಿಕಟ್ಟಿ ಮೊಲನಾಗರದ ಎಕ್ಕಡಂಗಳ ಮೆಟ್ಟುತ
ಅಗ್ರಿಯಾರಗ್ವಧದ ಪೂದೊಂಗಲೆಡಬಲದ
ಕಿಗ್ಗಡೆಯೊಳಿಳಿಯ ಬಿಟ್ಟೊಲದಾಡಿಸುತಲತಿ ಸ
ಮಗ್ರರತ್ನದ ಮಾಲೆಯೊಳ್ ಕದಂಬದಮಾಲೆ ನಾಭಿದೇಶದೊಳೊಲೆಯಲು ೬

ಇಂತೊಪ್ಪುತಿಹ ಶಬರಮೂರ್ತಿಯಂ ನೋಡಲ್ಕ
ನಂತಮಂಗಳಮಪ್ಪುದರಿಮಿತ್ರಜನಕೆನಲ್
ಕಂತುಮರ್ದನನೇ ಪುಳಿಂದನಾಗೆಸೆಯೆ ಶಿವೆ ಶುಭಕುಸುಮಶೃಂಗಾರದಿಂ
ನಿಂತೀಶ್ವರನ ಪೆಗಲೊಳಿರಿಸಿ ಕರಪದ್ಮವ ಸ
ಮಂತು ಸಿರಿವಾಣಿ ಶಚಿಯರು ಪುಳಿಂದಿಯರಾಗಿ
ಸಂತಸದಿ ಸೇವಿಸಲು ಬಿಲ್ಬಾಣವಾಂತೆಸೆದಳಾ ಮಹೇಶ್ವರನ ರಾಣಿ ೭

ಗಣಪ ಷಣ್ಮುಖ ವೀರಭದ್ರೇಶ್ವರರು ತಮ್ಮ
ಗಣಗಳಂ ಕೂಡಿ ಕಿರುಜಾಯಿಲಗಳಂ ಪಿಡಿದು
ಕಣೆಗಳಂ ಮರಬಿಲ್ಗಳಂ ಪಿಡಿದು ಬಡಿಗೋಲನಾಂತು ಕೈಯಲಿ ತಿರುಹುತ

---

1 ಚಲ್ (ಗ) 2 ಶತ (ಗ) 3 ಹೋ (ಗ) 4 ಣ (ಕ) 5 ಗಿಯ (ಕಗ) 6 ಜಾಬ (ಗ)

ಭಣಿತೆಯಿಂ ಬರೆ ನಂದಿ ಭೃಂಗಿಮುಖ ಪ್ರಮಥಗಣ
ಗಣಿದಿಸಲ್ಕಗಣಿತ ಪುಳಿಂದನಾಯಕರಾಗಿ
ಯಣಿಯರದೆ ಬೇಡಗೊಟ್ಟುಗಳಾಂತು ಗುರುಗುಂಜಿ ದಂಡೆಗಳನಾಂತು ಬಿಡಲು        ೮

ಹರಿಯಜೇಂದ್ರಾದಿ ಸುರರೆಲ್ಲ ತೊವಲ್ಗುಪ್ಪಸವ
ನಿರದಾಂತು ಸಮ್ಮಟೊಪ್ಪಿಗೆಗಳಂ ತಲೆಗಿಡುತ
ತರಿಗತ್ತಿ ಧನು ಬಾಣ ಕುಂತ ಮುದ್ಗರ ಮುಸಲ ಭಿಂಡಿವಾಲಂಗಳೆಂಬ
ಪರಿಪರಿಯ [1]ಆ[1]ಯುಧಂಗಳ ಪಿಡಿದು [2]ಖೋ[2]ಯೆಂನು
ತ್ರಿರದಾಲಿ ಬೊಬ್ಬಿಡಂತೆ ಬಡಿಗೋಲು ಬಲೆಗಳಾಂ
ತುರವಣಿಸಿ ಹೆಬ್ಬಲೆಗಳಂ ಕೊಂಡು ತಾವೇ ಕಿರಾತರಂತಾದರಾಗ        ೯

ಬಳಿಕತ್ರಿಮುನಿ ಗೋತ್ರ ಗಾಯತ್ರಿಯೇ ಛಂದ
ಜಲಜಾಸನನೆ ದೈವವಾಗುಳ್ಳ ಋಗ್ವೇದ
ಬಿಳಿಯಜಾಯಿಲನಾಯ್ತು ನೋಡೆ ಭಾರದ್ವಾಗೋತ್ರ ತ್ರಿಷ್ಟುಪ್‌ಛಂದವು
ಜಲಜಾಕ್ಷನಧಿದೈವವಾಗಿಹ ಯಜುರ್ವೇದ
ನಳನಳಿಪ ಕೆಂಪಿನ ಸೊಣಗನಾಯ್ತು ಕಶ್ಯಪನ
ಕುಲಜ ಗತಿಯೇ ಛಂದ ರುದ್ರನಧಿದೇವವಾಗೊಪ್ಪುತಿಹ ಸಾಮವೇದ        ೧೦

ಮೆರೆವ ಮಾಸಲವಣ್ಣದಿಂದೆಸೆವ ನಾಯಾಯ್ತು
ಮರಳಿ ವೈಖಾನಸ ಮುನಿಯ ಗೋತ್ರನಿರ್ವಾಣ
ರೆರೆಯನಧಿದೈವತಮನುಷ್ಟುಪೆ ಛಂದವಾಗುಳ್ಳಥರ್ವಣವೇದವು
ಕರಿಯ ನಾಯಾಯ್ತು ನೋಡಲ್ಕಿಂತು ವೇದಂಗ
ಳೆಂರಿವ ಸೊಣಗಗಳಾಗಿ ಪರಶಿವಪುಳಿಂದಪದ
ಸರಸಿಜಂಗಳ ನೆಲೆಯ ಮೂಸುತ್ತ ಮೂಸುತ್ತ ಬಂದವತಿವೋದದಿಂದ        ೧೧

ಎಂದಿಂದ್ರಕೀಲನಗಕಟಕಂಗಳಲಿ ಶುನಿಗ
ಳಂದದಿಂದುಚ್ಚೈಶ್ಶ್ವರಂಗಳಿಂ ಗಳಹೆ ಗಿರಿ
ವೃಂದಮೆಲ್ಲಂ ಬ್ರಹ್ಮನಾದಮುಂದೀವಲಖಿಳಾಗಮ ಪುರಾಣ ಶಾಸ್ತ್ರಂ
ಸಂದಣಿಸಿ ಪಿಡಿವ ಕೈಸೊಪ್ಪಾಗೆ ಜಪ ಹೋಮಂ
ಸಂಧ್ಯಾದಿ ಸತ್ಕ್ರಿಯೆಗಳೇ ಬಲೆಗಳಾಗೆ ವ್ರತ
ವೃಂದ ಬಾಣಗಳಾದವಾ ಶ್ರವಣ ಮನನಗಳ್ ಬೀಸುವಲೆಯಾದವವಂಮ        ೧೨

---

1 ಲಾ (ಕ)   2 ಯೋ (ಕ)

ಈತೆರದೊಳಖಿಳಬೇಂಟೆಗಳ ಸನ್ನಹಗೂಡು
ತೇ ತೆರಳ್ದವಂರಗಣಪ್ರಮಥಗಣ ರುದ್ರಗಣ
ಭೂತೇಶನೊಡನೆ ಹರ್ಯಜ ಸುರಪಸುರರು ಶಾಬರವೇಷದಿಂದೆಯ್ದಲು
ಖ್ಯಾತವಹ ಮೃಗಗಳಿಂ ಪಕ್ಷಿಸಂಕುಳವೆ ಯಮಿ
ವ್ರಾತದಿಂ ತೃಣಗುಲ್ಮ ಕುಜಗಳಿಂ ಗೈರಿಕುರ
ದ್ಧಾತುವರ್ಗಗಳಿಂದ ಶಬರಪೆಕ್ಕಣಗಳಿಂದಿಂದ್ರಕೀಲಂ ಮೆರೆಯಲು ೧೩

ಇಂತೊಪ್ಪುತಿಹ ವಿಪಿನದೊಳ್ ಬೇಂಟೆಯಾಡುತತಿ
ಕಂತುರಿಪುವಂಖ್ಯ ಶಬರರ್ ನಿಂತು ನಿಂತು ಬರ
ಲ್ಕಂತು ಮುನಿಜನದ ಮಧ್ಯದೊಳೋದು ಕಾಲೂರಂತೋದಂಬರಕ್ಕೆ ನೆಗಪಿ
ಸಂತಸದೆ ಪವನಧಾರಣೆಯಿಂದ ನಿಂದು ಬಿಡು
ದಂತರಂಗದ ನಿಟಿಲತಟದಂತಂ [ಚಿ]ಜ್ಯೋತಿ
ಯಂತೆಸೆವ ಶಿವನಂ ನೆನವುತುಗ್ರತಪವಂ ಮಹಾನಿಷ್ಠೆಯಿಂ ಮಾಡುತ ೧೪

ಬತ್ತಳಿಕೆ ಧನುವ ಬೆನ್ನೊಳ್ ಬಿಗಿದು ಕಟ್ಟಿ ತಾಂ
ಚಿತ್ತಜಾರಿಧ್ಯಾನವಂ ಬಲಿದಂ ಪಾರ್ಥನುರೆ
ಯತ್ಯಧಿಕ ತಪವ ಮಾಡುತ್ತಲಿರೆ ಬೇಡಪಡೆ ಬೊಬ್ಬೆಯಾರ್ಭಟೆಯಿಂದಲು
ಕತ್ತಿಗಳ ಚಿಮ್ಮುತ್ತ ಶರಗಳಂ ಹಮ್ಮುತ್ತ
ಕಂತ್ತುತ್ತ ವಿಂಗಗಳಂ ಹತ್ತುತ್ತಲರೆಗಿರಿಗ
ಳೊತ್ತಿ ನಾಯಿಗಳ ಬಿಡುವಾ ಪುಳಿಂದರ ಬಳಸಿನಿಂ ಬರಲ್ ಶಬರೇಶ್ವರಂ ೧೫

ಹರ ತನ್ನ ಲೀಲೆಯಿಂ ನೆನೆಯೆ ಮೂಕಾಸುರಂ
ಪಿರಿಯ ಸೈರಿಭದಂತೆ ಪಂದಿಯಾಗಂತ ಸುಳಿಯು
ಲಗರೆ ಶಬರಾಳಿ ಕಂಡಿಡಿಯಿಡಿ ಶರಂಗಳಂ ಬಿಡಿಬಿಡೀ ನಾಯಿಗಳನು
ತರಿತರಿಯಿರೆಲೆ ಖಡ್ಗದಿಂದ ಹೇರಿಟ್ಟಿಯಿಂ
ದಿರಿಯಿರಿಯಿರಯ್ಯ ಬಡಿಗೋಲ್ಗಳಿಂ ಪಂದಿಯಂ
ತಿರದೆ ಬಡಿಬಡಿಯೆಂಬ ವಾಕ್ಯಕ್ಕೆ ಮುನ್ನವೇ ಹೊಡಕರಿಸಿತೇನೆಂಬೆನಂ ೧೬

ನೆಟ್ಟ ನಡುದಿಟ್ಟಿಯೊಳ್ ಕಿಡಿಯನುಗುಳುತ್ತ ಘುಡು
ಗಂಟ್ಟುತದು ಕೋರೆಯಂ ಮಸೆದು ಘೂರ್ಣಿಸಿ ಪಾಯಿ
ದಿಟ್ಟಣಿಸಿ ನಿಂದ ಶಬರನ ಬಲವ ಪೊಕ್ಕುಭಯದಂಷ್ಟ್ರದಿಂ ಪೊಯ್ದು ಪೊಯ್ದು

ಅಟ್ಟುತ್ತ ಬಿಳ್ದರೆದೆಯಂ ಖುರಪುಟದಿ ಕೆದರ್ದು
ನೆಟ್ಟನೊದೆದೋಡುವಡೆ ಬಡಿವುತಂ ತಲೆಗಳಂ
ತೊಟ್ಟಿ ನಿಟ್ಟಿಪರ ತೊಡೆ ಮೊಣಕಾಲು ಜಂಘೆಗಳ ಹೊಯ್ದು ಕತ್ತರಿಸಿಡಲ್ಕೆ ೧೭

ಅನಿತರೊಳ್ ಪಿರಿಯನಾಯಕರಪ್ಪ ಹರಿಯಜರ್
ಕನಲಿ ಕಾರ್ಮುಕವಕೊಂಡೆಸೆಯೆ ದಾನವ ಕಿರಿಯ
ತನುವೆಲ್ಲವನು ಮುತ್ತಲ್ ನಿಗುರ್ದು ನಿಂದು ಕೊಡಹಲ್ಕೆ ಮುತ್ತಿದ ಶಬರರ
ತನಂಗಳಂ ನಾಂಟಿದವು ನಿಗುರಿ ಸರಳಿಸಿ ಬಿಡದೆ
ಘನಕೆ ಲಂಘಿಸಿ ಕೋರೆಯಿಂ ಕೋಲ್ಗಳಂ ಕಡಿಯೆ
ಬಿನುಗು ಬೇಡರು ಬೀಳಂವಂದವಂ ಕಂಡು ಗಹಗಹಿಸುತಾ ಶಬರೇಶ್ವರಂ ೧೮

ಭಲರೆ ಎಕ್ಕಟಿಗ ನಿನ್ನಯಂ ಬಲುಹ ನೋಳ್ಪೆನೆನು
ತೊಲವಿನಿಂ ಬಿಲ್ಲಬಿಲ್ಲಂ ಜೇಗಡೆಯಗೈದು
ತಳುವದಾಕರ್ಣಾಂತವಾಗಿ ಸೇದುತ ಸರಲ ಬಿಡಲವರ ನಿಟಿಲತಟವಂ
ಘಳಿಲನೇ ತಾಗಿ ಥಟ್ಟುಗಿಯೆ ರಕಂತದ ಧಾರೆ
ಸಲೆಪರಿಯೆ ಘಾಯಂದಿಂ ಕೋಪ ವಿಹ್ವಳಿಸಿ ತಾ
ನಲಿವುತಮರರ ಪೊಡೆದು ಸೀಳುತಂ ಬಿರಿಸಾಗಿ ಬಪ್ಪ ಕಿಟಕಿಯಂ ಕಾಣುತ ೧೯

ಮರಣವಂ ತೃಣವೆಂದು ಲೆಕ್ಕಿಸದ ವೀರ ಸಂ
ಗರಕೆ ಲಂಘಿಸುವಂತೆ ಗಾಂಡೀವಿ ತಪವ ಬಿ
ಟ್ಟರರೆ ಬಿಲ್ಗೊಳಂತಲಾಕರ್ಣಪರಿಯಂತೆ ತೆಗೆದೆಚ್ಚೊಡಾ ಕಿಟಿಯೆರ್ದೆಯೊಳು
ಸರಳಂ ತಟ್ಟುಗಿಯಲ್ಕೆ ಬಿಳ್ದ ಘೋಣಿಯಂ ಕಂಡು
ಹರಿಯಜೇಂದ್ರಾದಿ ಶಿವಗಣಕಿರಾತರು ಹೊಗಳೆ
ಹರ ಬಂದು ನಮ್ಮದೀ ಬೇಂಟೆಯೆಚ್ಚವರಾರು ತೆಗೆತೆಗೆಯಿರ್ಕೆಯೆನುತ್ತೆ ೨೦

ಇವನ ಪಾಡೇನು ನಮ್ಮಯ ಭಟರ ಪೋಲ್ವನೇ
ಹವಣರಿಯದುಸುರುವರೆ ಹಂದಿಯಂ ತೆಗೆಯಿರೆಂ
ಬವನ ವಚನವ ಕೇಳುತತಿವೇಗದಿಂ ಬಂದು ಫಲ್ಗುಣಂ ಕೋಪದಿಂದೆ
ಆವನಾವ ಬೇಡತಿಯ ಮಗನೆಚ್ಚುಕೊಂದ ತೆಗೆ
ಯವಿಗಡದ ಪಂದಿ ನನ್ನಂಬಿನಿಂ ಮಡಿದುದಿದ
ನವಗಡಿಸಿ ಕೊಂಡೊಯ್ವ ಬಗೆಯೆಂತು ಪೋಗೀಗಲೆನ್ನ ಶರದಿಂದಳಿಯದೆ ೨೧

ಎಂಬ ಮಾತಂ ಕೇಳಿ ಘುಡುಘುಡಿಸುತೀಶ್ವರಕ
ಲಂಬವಂ ತೊಡಗಿಯಾರ್ದೆತ್ತಲಾಕ್ಷಣ ಪಾರ್ಥ
ತಾಂ ಬೇಗದಿಂ ಸರಳ ಸುರಿಯಲವ ಕತ್ತರಿಸುತೀಶನೆಸೆದಂಬುವಳೆಯ
ಬಂಬಲ್ಗಳಂ ತೆವರಿ ಮರಳೆ ಜೋಡಾ ಖಗವ
ಶಂಭು ಛೇದಿಸುತಾಲ[1]ವಾ[1]ಲುತ್ತೆ ದಿವ್ಯಶರ
ಮಂ ಬಿಡಲ್ ಗಹಗಹಿಸಿ ನುಂಗಲರ್ಜುನ ಧನುವನಿಪ್ಪಡಿಯೊಳಪ್ಪಳಿಸಲು ೨೨

ಮೃಡನೆಡದ ಕೈಯೊಳಾಂತಾ ಧನುವ ಕೀಳುಕೊಳ
ಲೊಡ[ನೊಡ]ನೆ ತೂರದಿಂ ಹೊಡೆಯೆ ಶಿವ ಪಾರಿಸಲ್
ಘುಡುಘುಡಿಸುತಾ ಪಾರ್ಥನಡ್ಡಾಯುಧಂಗೊಂಡು ಹೊಡೆಯೆ ಕೈಪಿಡಿದು ತಿರುಪಿ
ಜಡಧರಂ ಸೆಳೆದುಕೊಳಲಿಂದ್ರಸುತನೌಡಕಡಿ
ದೊಡನೆ ಮುಷ್ಟಿಯನೆತ್ತಿ ತಿವಿಯೆ ತಪ್ಪಿಸಿ ಹರನ
ಹಿಡಿವೆನೆಂದಾಲುತೊಳಪೊಗೆ ಪೆಡಂಮೆಟ್ಟಿ ಕುಪ್ಪಳಿಸಿ ಕುಲಿಲೆನುತ ನಿಲಲು ೨೩

ಅತಿವೇಗದಿಂದ ಫಲ್ಗುಣ ಮಲ್ಲಯುದ್ಧಕನು
ವಂತಿಸೆ ಹರನಿದಿರಿಸಲ್ ಮುಷ್ಟಿಯಿಂ ಮುಷ್ಟಿಯಿಂ
[2][ಖ][2]ತಿಯಿಂ ಹಣಾಹಣಿಯನಾಚರಿಸಿ ಮೇಲೆ ಕೇಶಾಕೇಶಿಯಂ ಮಾಡುತ
ಪ್ರತಿಯಿಲ್ಲದಪ್ರತಿಮ ಶಿವನೊಡನೆಯರ್ಜುನಂ
ನುತಸರ್ವಶಕ್ತಿಯಿಂ ಕಾದೆ ಹರ ಭಲರೆ ಭಾ
ಪತಿ ಸುಭಟನಹುದೆನುತ್ತಡಿಯೊಳಿರ್ದನಿತೌಂಕಲೊಡನೆ ಮೂರ್ಛಿತನಾದನಂ ೨೪

ಕಟಕಟಯೆನುತ್ತ ಶಿವ ಮರುಗಿ ನೋಡಲ್ ಪಾರ್ಥ
ಪುಟವೇಗದಿಂದೆದ್ದು ಚಿಂತಿಸುತೆ ಯುಕ್ತಿಯಿಂ
ನಿಟಿಲಾಕ್ಷನೊಲ್ಮೆಯಿಂದಲ್ಲದೀ ಭಿಲ್ಲನಂ ಗೆಲಬಾರದನುತೆ ಮುದದಿಂ
ದಿಟವಾಗಿ ಸೈಕತದ ಲಿಂಗಮಂ ಮಾಡುತು
ತ್ಕಟಭಕ್ತಿಯಿಂದಷ್ಟವಿಧಪೂಜೆಯಂ ಮಾಡಿ
ಕುಟಿಲಶಾಬರ ಮತ್ತಿದಿರಿಸೆನಲ್ ಶಿವ ನಗುತ್ತಿದಿರಾಗಲಾಕ್ಷಣದೊಳು ೨೫

ಬೊಬ್ಬಿರಿವುತಿಬ್ಬರುಂ ಪೊಣರಲರ್ಜುನ ಕಾಣು
ತುರ್ಬಿ ಭಜಿಸಿದ ಲಿಂಗಪೂಜೋಪಸಮುಚಯಂ
ಸಬ್ಬ ಶಬರನ ಮಂಡೆಯಲಿರಲ್ ಕುರುಹಗಂಡೀತ ನರನಲ್ಲವೆಂದು

1 ಲಾ (ಗ) 2 ಛೀ (ಕಗ)

ಸಬ್ಬಾಣಿಯೊಣ್ಮನಹುದಕಟಕಟ ಕೆಟ್ಟೆ ನಾಂ
ಕೊಬ್ಬಿ ಕಾದಿದೆ ದುರಜ್ಞಾನದಿಂ ಶಿವಶಿವಾ
ಮಬ್ಬಿಗ ದುರಾತ್ಮದುಷ್ಕರ್ಮಿಯಯಂ ಕಾಯೆನುತೆ ಪೊರವಂಟ್ಟು ಪೊರಳ್ವಾತ[1]ನ[1] ೨೬

ಶಿರವ ಪಿಡಿದೆತ್ತಿ ಕುಸ್ತರಿಸಿ ಶಿವನೆಂದನೆಲೆ
ಮರುಗಬೇಡೈ ಮುನ್ನ ನರನು ನಾರಾಯಣಂ
ಪರಮಭಕ್ತರು ನನಗೆ ನಾನವರಿಗತಿಪ್ರಿಯಂ ನೀವೀರ್ವರೀಗ ಮುದದಿ
ನರ ನೀನು ನಾರಾಯಣಂ ಕೃಷ್ಣ ಕೇಳಯ್ಯ
ವರವ[2][ನೀವೆ][2]ನು ಬೇಡುಬೇಡೆನಲ್ ಪಾರ್ಥನತಿ
ಭರಿತಭಕ್ತಿಯೊಳೆರಗಿ ಪಾಶುಪತಮಂ ಕೇಳಲೀಶನೀಯಲ್ಕಗಜೆಯುಂ ೨೭

ಹರಿಸುರಜ್ಯೇಷ್ಠ ಸುರಪಾದ್ಯಮರರಾಗ ಮುದ
ವೆರಸುತರ್ಜುನಗೆಯೊಂದೊಂದು ಶರಗಳ ಕೊಡಲ್
ಭರದಿ ಮನ್ನಿಸಿ ಮುಂದೆ ನೀನೆ ಕಣ್ಣಪ್ಪ ಶಿವ ಮುನಿಯೆ ಹರಿಯಾಗವೇಳ್ಕುಂ
ಭರದಿಂದ ಪೋಗಖಿಳ ರಾಜರಂ ಜಯಿಸು ಸಂ
ಗರದೊಳಚ್ಯುತಸಹಿತ ಸಾಮ್ರಾಜ್ಯವಾಳ್ವುದೆಂ
ದಿರದೆ ಕಳುಹಿತ್ತ ರಜತಾಚಲವ ಪೊಕ್ಕಗಜೆಯೊಡನೆ ಸುಖಮಿರ್ದ ದೇವಂ ೨೮

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದ ಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳ ಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ಮೂರನೆಯ ಸಂಧಿ ಸಂಪೂರ್ಣವಾಯ್ತು ೨೯

---

1 ನಾಗಾ (ಗ) 2 ನಿದೇ (ಕಗ)

## ನಾಲ್ಕನೆಯ ಸಂಧಿ

ಸೂಚನೆ :•

ಬಲಿಯ ಗೆಲಿದಾ ತ್ರಿವಿಕ್ರಮನ ನಿಟ್ಟೆಲುವನಂ
ದೊಲಿದು ಕಂಕಾಳಮಂ ಧರಿಸಿ ತಂದೆಯ ತಲೆಯ
ಛಲದಿಂದಲರಿದ ಚಂಡೇಶಂಗೆ ಗಣಪದವನಿತ್ತು ಮೆರೆದಂ ಶಂಕ[1]ರಂ[1]

ವಾಹನವನೇರಿ ಷಣ್ಮುಖನಂತಮಂ ಸೇರ
ಲಾಹಾರವಾಗಿರುವ ಸರ್ಪಗಳ್ ಭಯದಿಂದ
ಹೋಹ ದಾರಿಯ ಕಾಣದಭ್ಯರ್ಣವೊಳಗಿರುವ ವಿಘ್ನೇಶ್ವರ[ನ] ಸುಂಡಿಲ
ಗೇಹಮಂ ಪೊಗಲು ಭಯದಿಂ ಫೀತ್ಕೃತಿಯ ಮಾಡ
ಲಾ ಹೈಮವತಿ ನೆತ್ತಿಯಂ ತಟ್ಟಿಲಾಲಿಸ
ಲ್ಕೀಹದನ ಕಂಡು ನಸುನಗೆಯು ಬೀರುವ ಚನ್ನಮಲ್ಲೇಶ ಜಯತು ಜಯತು 　　೧

ಸೋಮನಾರಾಧ್ಯರೇಕೋದೇವ ಶಿವನೆನು
ತ್ತೀ ಮಹಿಯೊಳು ಪ್ರತಿಷ್ಠಿಸೆ ವೈಷ್ಣವಂ ಬಂದು
ತಾ ಮರಲುತವರ ದಾಸಿಯು ಕೂಡೆ ಪೆರುಗುಕುರಿಕಾರಾಧ್ಯ ಒಡೆನೆಸಲು
ಧೀ[2]ಮತೆ[2]ಯೇಮಿರಾ ತೊತ್ತುಕೊಡುಕಾ ಮುನುಪು
ಪ್ರೇಮತೋ ಪಾಲ್ಕುರಿಕಿತೇ ಪೇರುಗಾಯೆನ
ಲ್ಕಾ ಮಹಾಚೇಟಿ ವಾಕ್ಯವ ಕೇಳಿ ನಸುನಗುವ ಸೋಮೇಶಗಾನೆರಗುವೆಂ 　　೨

ಎಲೆ ದಧೀಚಿಪ್ರತಿಪ ಕೈರಾತಲೀಲೆಯಂ
ತೊಲಿದು ಪೇಳಿದೆವು ನಿನಗಿನ್ನು ಹದಿನಾರನೆಯ
ಬಲಿಯ ಕೆಡಹಿದ ತ್ರಿವಿಕ್ರಮನ ನಿಗ್ರಹಿಸಿರ್ದ ಕಂಕಾಳಧರಮೂರ್ತಿಯ
ನೆಲೆಯ ಕೇಳ್ವೈ ಸ್ಕಂದ ಕಾಳಿಕಾಕಾಂಡದೊಳ
ಗೊಲವಿನಿಂ ಪೇಳ್ದಂದದಿಂದುಸುರ್ವೆನೆಂದು ಯತಿ
ತಿಲಕನಹ ಮರುಳಸಿದ್ಧೇಂದ್ರ ಬೋಧಿಸುತಿರ್ದ ಭಕ್ತಹೃತ್ಕುಮುದಚಂದ್ರ 　　೩

---

1 ರ (ಕ) 2 ಮಂತೆ (ಗ) • ಕಂಕಾಳಧರಲೀಲೆ (ಗ)

ಅಸುರೇಶಸಹ ಬಲೀಂದ್ರನು ಸಕಲಕ್ಷಿತಿಯ ಸಂ
ತಸದಿಂದಲಾಳಂತಿರುತಿರೆ ಸರ್ವಜನರು ಸುಖ
ರಸನಿಧಿಯೊಳಾಳುತೇಳಂತ್ತಿರಲುವೇಳ್ಕುಗೆಂದಜನಿಂದೆ ವರವ ಪಡೆದು
ರಸೆಯನಾಳುತ ದಾನಧರ್ಮಪರನಾಗಿ ತಾ
ಝಸವಂತನಾಗಿರುತೆಯುಖಿಳಯಜ್ಞಂಗಳಂ
ಪೊಸೆದುಪಕ್ರಮಿಸಿ ಕ್ರಮುಬದ್ಧರಹ ಸೋವಂಯಾಜಿಗಳ ಮುಖದಿಂ ರಚಿಸಲು ೪

ಈ ವಾರ್ತೆಯಂ ತಿಳಿವುತತಿನೊಂದು ಮನದೊಳಗೆ
ಮಾವರಂ ಚಿಂತಿಸುತೆ ಸಕಲದೇವರ ಪದಗ
ಳಾವಗಂ ಮೇಣವನ ಹಸ್ತಗತಮಾಗೆ ಬಿಡದಾವು ಕಡುದಂಃಖದಿಂದೆ
ನೋವುತತಿಬಡವರಹೆವೆಂದವನ ಕೆಡಿಪೆನಂ
ದಾ ವಾಮನಾವತಾರದ ವೃದ್ಧನಾಗಿ ಹರಿ
ಭೂವರನ ಹತ್ತಿರಕೆ ಪೋಪೆನೆನಲೈವತ್ತುಯೋಜನದ ಪೊಡ್ಡೋಲಗಂ ೫

ಶೀವಿ ಮನ್ನೆಯ ಮಂತ್ರಿಗಳು ಮಕುಂಟವರ್ಧನರು
ಮಾವಂತ ಮಂಡಳೀಕರು ವಜೀರರು ಬಳಸು
ತೇವೇಳ್ವೆನಾಹ ಕಿಕ್ಕಿರಿಗಿರಿದು ನಿಂದಿರಲ್ ದೂರದೊಳ್ ಕೈಯೆತ್ತುತೆ
ದೇವಾಯುರಾರೋಗ್ಯಮಸ್ತು ಶಂಭಮಸ್ತುಯೆಂ
ದೋವಿ ಪರಸುತ್ತ ಕೋದಂಡ ಕೊಡೆಕಮಂಡಲುವಾಂತು (?)
ಧೀವಶದ ಬಾಲವಾಮನ ವಿಪ್ರನಂ ಕಂಡು ವಿಸ್ಮಯಂಗೊಂಡರಪವು ೬

ತನ್ನ ಬಳಿಗಾತನಂ ಕರೆಸಿ ನೀಂ ಬಯುಸಿದುದ
ಚನ್ನಾಗಿ ಪೇಳಂ ಕೊಟ್ಟಪೆನೆನಲಂ ಪೇಳಲೇ
ನನ್ನಿಯೇ ನಂಬುಗೆಯೊಯೆನಲು ಪಶ್ಚಿಮದಲ್ಲಿ ರವಿ ಜನಿಸಿ ಮೇರುಗೋತ್ರಂ
ತನ್ನಂತೆ ನಡುಗಲನಲಂ ಶೈತ್ಯಮಾದೊಡಂ
ಪನ್ನಗಂಗಳ ಕೋರೆಯೊಳಗಮೃತವೆಂಸೆದೊಡಂ
ಸನ್ನುತರು ಕೊಟ್ಟ ಭಾಷೆಗೆ ತಪ್ಪುವರೆ ವಿಪ್ರ ನಂಬೆಂದ ಭೂನಾಥನು ೭

ಪಾಪಿ ವಾಮನ ವಿಪ್ರನಂತರಂಗದ ಕಪಟ
ಭೂಪನರಿಯದೆ ಭಾಷೆಗೊಟ್ಟನೆಂತೆನೆ ಮುನ್ನ
ಪಾಪಾತ್ಮನೊರ್ವಾಧಮಂ ಭಾಗ್ಯಶಾಲಿ ಹಗೆಯುವ ಹಾಯ್ಕುವಲ್ಲಿ ತಾನು

ಕಾಪಟ್ಯದಿಂದಾರ್ತರಾಗಿಯೊಡಕಂ ಪಾಯ್ಕು
ತಾ ಪತಿಯೊಳಂಸುದರ್ಧರಾಗಿ ನ[1]ನ್ನ[1]ದುಯೆಂದು
ಕೋಪದನ್ಯಾಯದಿಂದೆಲ್ಲವಂ ಸೆಳಕೊಂಡು ನರನಂದದಿಂ ಶಿವಶಿವ ೮

ಕೂಡೆ ಹಾಲೋಗರವನುಣುತಲೆಡಗೈ ಮಣ್ಣ
ನೀಡುವಧಮನ ತೆರದಿಯುಂಡಮನೆಗಿರದೆಂಟು
ಕೇಡಬಯಸುವ ದ್ರೋಹಿಯಂತೆ ನಾನೇನೊಲ್ಲೆ ಮೂರಡಿನೆಲವ ಕೊಟ್ಟೊಡೆ
ಮಾಡಿ ವೃಂದಾವನವ ಬಿತ್ತಿ ಪ್ರದಕ್ಷಿಣವ
ಮಾಡಿಕೊಂಡಿಹೆನು ಧಾರೆಯನೆರೆದು ಕೊಡುವುದೆನೆ
ನೋಡದೀ ಕಪಟಮಂ ಸಕಲವನ್ನೊಂದು ಕೊಡೆಯಿಂದಾಳುವೆನ್ನ ನೀನು ೯

ಮತ್ತೆ ಧನಕನಕವಾಹನವಸ್ತುರಾಜ್ಯವಂ
ಚಿತ್ತವೊಲಿದಂತೆ ಕೇಳೀವೆನೆನೆ ನಾನೊಲ್ಲೆ
ಮೃತ್ಯುಹತ್ತಿರೆ ಸಾರಿತಿನ್ನೇಕೆ ಮೂರಡಿಗೆ ಧಾರೆಯೆರೆಯೆನಲು ರಾಜಂ
ಬಿತ್ತರದ ದಾನವಲ್ಲದಧರ್ಮದಾನಕ್ಕೆ
ಯೆತ್ತಣದು ಧಾರೆ ಬೇಕಾದವನ ಸಾಗಿಸೆನೆ
ನೀತಿಯೇ ಉತ್ತಮದ್ವಿಜರಿಗಿದು ನೀತಿಯೇ ಸಲ್ಲ ಧಾರಾದತ್ತ ಮುಖ್ಯವೆನಲು ೧೦

ನಗುತಲಸುರೇಶನಹ ಬಲಿ ಕನಕಭೃಂಗಾರ
ವಗಲದತಿವೇಗದಿಂದಾಂತು ಕೈಯೆತ್ತಲ್ಕೆ
ಭೃಗು ಕೆಡುವನೆಂದು ಗಿಂಡಿಯ ಜೋಳಿಯೊಳ್ ಮೊಗವನಿಟ್ಟಡ್ಡಗಟ್ಟಿ ವಿಷ್ಣು
ಬಗೆಯರಿದು ಕುಶದಿಂದೆ ತಿವಿಯಲುಶನನ ಕಣ್ಣು
ಮಿಗೆಪೋಗೆ ಕಣ್ಣಂದು ಕುರುಡಾಯ್ತು ಬಲಿ ತಾನೆ
ಸೊಗಸಿನಿಂ ಧಾರೆಯೆರೆಯಲ್ಕಾಗ ಮುಗಿಲುದ್ದಬೆಳೆದು ತಾಂ ನಾರಾಯಣಂ ೧೧

ಧರೆಯಂನೆಲ್ಲಳೆಯಲಾದುದು ಪಜ್ಜೆಯೆರಡು ಭೂ
ವರಧರ್ಮಶೀಲ ಬಲಿ ಚಿಂತಿಸುತೆ ದಾನಕೀ
ಧರೆ ಸಾಲದಾಯ್ತುಕಟಯೆಂದು ಮರುಗಿದನಲ್ಲದೆನ್ನ ಕ್ಷಿತಿ ಪೋಯ್ತೆರಡು
ಮರುಗಲಿಲ್ಲಿಂತಪ್ಪ ಧರ್ಮಿಷ್ಠ ಶಿವಶಿವಾ
ನರಸುರೋರಗರೊಳಗೆ ಕಾಣೆವೇ ಕಥೆಗಳೊಳ
ಗರಿಯೆವೆಂದಖಿಳಜನ ಕೊಂಡಾಡೆ ಹರಿ ನುಡಿದನಿನ್ನೊಂದಡಿಯ ಭೂಮಿಯಂ ೧೨

---

1 ಮ್ಮ (ಕ)

ಕೊಡು ರಾಯಯೆನಲು ಪೊಡವಟ್ಟಳದಂಕೋಯೆನಲ್
ಪೊಡವಿಯಂತಿದೆನೋಳ್ಪರಾರೆನಲ್ ಮೇಲಾಗಿ
ಹೆಡೆತಲೆಯು ಕೆಳಗಾಗಿ ಮಲಗಿಕೊಂಡಳದುಕೋಯೆನಲಾಗ ಎದೆಯ ಮೇಲೆ
ಅಡಿಯನಿಂದಿಷ್ಪೊತ್ತಲಾಗಿ ನಿರಿನಿಟಿಲೆಂದು
ಗಡಬಡನೆ ಮುರಿದು ಧರೆಗಿಳಿದನಾ ಬಲಿ ಮತ್ತೆ
ಬಿಡದೊಂದು ಪಾದಮಂ ಬ್ರಹ್ಮಾಂಡದೂರ್ಧ್ವಭಾಗಕೆ ಚಾಚಿದಂ ಮುಕುಂದಂ ೧೩

ಇದನ್ನೈದೆ ವೈಷ್ಣವರ್ ಮಹಿಮೆಯೆಂಬರು ಗಡಾ
ಪುದಿದು ನೋಡಲ್ಕಷ್ಟಮಹರೀಶತೆಯನೆಣಿಸೆ
ಬದಗ ವಾಮನ ಗಣಿಮೆ ಗರಿಮೆಯೆಂತೆಂಬವೀಯೆರಡು ಸಿದ್ಧಿಗಳು ಕೇಳು
ಮದನನಂ ದಹಿಸೆ ಭಳಿ[ರೇ] ಪಡೆದರೆ[ಲೆ] ಹರಿಗೆ
ಯದು ಮಹಿಮೆ ವೀರ ನುಂಗಿದ ಚಕ್ರವನ್ನಾತ
ನುದರಮಂ ಬಗೆದು ತಂದರೆ ಮಹಿಮೆ ಮಿಕ್ಕ ಮಹಿಮೆಗಳೆಣಿಸಲೇನು ಮುನಿಯೆ ೧೪

ವಾಮನಂ ಮುನ್ನ ಭುವನಂಗಳಾಕ್ರಮಿಸುವಡೆ
ಸೋಮಶೇಖರನ ಪೂಜಿಸಿದ ಠಾವಿದೆ ಶಿವನ
ಭೂಮಿಯೊಳು ಲಿಂಗರೂಪಂಗೆಯ್ದು ಯಜಿಸಿಹಾ ಲಿಂಗವಿದೆ ಸಿದ್ಧಿಯಿತ್ತ
ಆಮಹಾಮಂತ್ರಂಗಳಿವೆ ಸಿದ್ಧಿಸದ ಮುನ್ನ
ತಾ ಮಹಿಮೆಯಿಂದೊಪ್ಪವಿಲ್ಲವಾಗರಿಯದೇ
ಪಾಮರರು ಗಳಹಂತಿಹ ನುಡಿಯನಾಲಿಸುವರೇ ಬಲ್ಲವರು ಸಲ್ಲೀಲೆಯಿಂ ೧೫

ಎಡದ ಕಾಲಿಂ ಬಲೀಂದ್ರನ ಮೆಂಟ್ಟಿ ಬಲಗಾಲ
ತಡೆಯದಂಬರಕೆ ಯಸುರಾಂತಕಂ ಎತ್ತುತ್ತ
ಕೊಡಹುತಂ ಚಕ್ರದೊಲ್ ತಿರುಗಿಸುತ ತಾರೆಗಳನುದುರಿಸುತ ಗ್ರಹಗಣಗಳಂ
ಬಿಡಿವುತಂ ಬೆದರಿಸುತ ಸ್ವರ್ಲೋಕವಮಖಿಲೋಕ
ಕಡಿಯ ನಿಗುರಿಸುತ ಕಮಲಾಸನನ ಸಲ್ಲೋಕ
ದೆಡೆಗೆ ನೀಡಲ್ ಕಾಲಸುರಪಾದ್ಯರೈದೆ ಶತಕೋಟಿಯಿಂ ಕಡಿದು ಜಡಿಯೆ ೧೬

ಮರಗೂಳ ಜವನಂ ಪೆಣದಿನಿಗಂ ನೆಗಳ್ದೀರ
ಹರಿಣಾಶ್ವನಿಂ ತಿಸುಳಿಗೆಳೆಯನೀಶಾನನುಂ
ಭರದಿಂದೆ ಶಕ್ತಿಯಿಂದಿಟ್ಟು ದಂಡದೆ ಬಡಿದು ತಿರಿದಂ ಕೊರತದೆ ಪಾಶಮಂ

ಇರದೆ ಚೀರುತ ಧ್ವಜದೊಳಿರಿದಿರಿದು ಖಡ್ಗದಿಂ
ದರರೆ ಕಡಿವುತ ಶೂಲದಿಂದ ಕುತ್ತುತ್ತಮರ
ರುರವಣಿಸಿ ಸುತ್ತಿ ಮುತ್ತುತ್ತಲಾರ್ಭಟಿಸಿ ಭಂಗಿಸಿದೊಡನಿಬರ ಬಡಿಯುತಂ ೧೭

ಲೆಕ್ಕಿಸದೆ ಕಾಲುತಪಮಂ ಮಾಳ್ಪ ಬ್ರಹ್ಮನಂ
ಸೊಕ್ಕಿ ತೀವುತ ಮಯಂದೆ ತೋರಲಜನೇಕೆ ತಪ
ದಕ್ಕರಿಂದಿಹನೆನಲ್ ಗಿರಿಜಾತೆ ಕಲ್ಯಾಣದೋಳರೆಯ ಮರೆಯೊಳಿರುತ
ಮುಕ್ಕಣ್ಣನರಸಿ ಚರಣವನೀಡೆ ಹರಿ ಕಂಡು
ಸಿಕ್ಕಿದರೆ ಕಾಮಂಕ್ಕೆ ಪದದ ಲಾವಣ್ಯರಸ
ಮುಕ್ಕುತಿರೆ ತಲೆಹೋಕ ಕಂಡಜಂ ಭ್ರಮಿಸೆ ವೀರ್ಯಸ್ಖಲನವಾಗಲಲ್ಲಿ ೧೮

ಪುಟ್ಟುತಿರಲಮಿತಬ್ರಹ್ಮರ್ಕಳವರೆಲ್ಲರಂ
ಮೆಟ್ಟಿ ಹೊಸಹೊಸದು ಕೊಲಲತಿ ಸೂಕ್ಷ್ಮರೇತದೊಳ್
ಪುಟ್ಟಿದರು ನವಕೋಟಿ ವಾಲಖಿಲ್ಯರ್‌ನರಾಂಗುಷ್ಠ ಪ್ರಮಾಣನಿಂದೆ
ನೆಟ್ಟನಿದನರಿತು ಹರನಿದಂ ಸಮಯವಲ್ಲವೆಂ
ದಟ್ಟುತಜನೀನ ಮಂಗಳದೊಳಿಹೆ ಪೋಗಿದಂ
ಮುಟ್ಟಿ ಶಂಚಿಮಾಳ್ಪನೆನೆ ನಿನ್ನಯ ಕಮಂಡಲೋದಕ ಶಸ್ತ್ರಮಾಗಲೆನಲು ೧೯

ಆದರಿನಿಂ ಪಾಪಶಮನಾರ್ಥಕೋಸುಗ ಬ್ರಹ್ಮ
ಪದೆದು ತಪಮಂ ಮಾಡುತಿರೆಯಜನ ತಿಗಟ ಕಾ
ಲೊದೆದೆತ್ತಿಯೆಬ್ಬಟ್ಟುತ್ತಿರೆ ನೋಡಿ ಕೆಳಗಣೀ ಕಾಲಾರದೆಂದು ಕಿನಿಸಿ
ಬೆದರದೆ ಕಮಂಡಲೋದಕವನಭಿಮಂತ್ರಿಸಂತ
ಮದನಾರಿಯಂ ಸ್ಮರಿಸುತೆರೆಯೆ ಜಲಶಸ್ತ್ರಮಾ
ಗದು ತಾಗುತಾ ಕಾಲ ಕತ್ತರಿಸಿ ಬೀಳುತ್ತ ಪಾದಲೋಕಂಗಳಲ್ಲಿ ೨೦

ಘುಡಂಘುಡಿಸಂತಖಿಳಲೋಕಂಗಳ ಭಯಂಕರದೆ
ಗಡಬಡಿಸುತದಂ ಬಾತು ಕೀವುನೆತ್ತರು ಬಾಡಿ
ನೊಡನೆ ಸುರಿವುತ ಖಂಡದಿಂಡುದಿಂಡುಗಳಾಗಿ ಬೀಳಲ್ಕೆ ಲೋಕಂಗಳು
ಹಡಿಕೆಯಾಯ್ತಿದನರಿಯದಧಮಮನುಜರು ಮುನ್ನ
ಜಡಜೋದರಂ ಎರೆದ ನೀರಧಾರೆಯ ನೋಡ
ಲೊಡನೆ ಇಪ್ಪತ್ತೆಂಟುಕೋಟಿಯೋಜನದುದ್ಧಮಾಗಿಳಿದೊಡದ ತಿಳಿಯದೆ ೨೧

ಊಳುತಿಹರಥಮುವೈಷ್ಣವರು ಮೇಣಾ ಹರಿಯ
ಕಾಲೊಳಗೆ ಗಂಗೆ ಪುಟ್ಟಿದುದೆಂಬುದದುವೆ ಸಟೆ
ಮೇಲೆ ಕಾಲ್ಗಡಿದು ಪೋಗಲ್ಕಾಗ ವೈಕುಂಠನೆಂಬುದೇ ನಿಶ್ಚಯವಲ
ಪೇಳಲೇನಜಹರಿಯ ಕಾಲನುದಕಾಸ್ತ್ರದಿಂ
ಹೋಳುಮಾಡಿದನ್ಯೆಸೆಯಿದು ಸತ್ಯ ಮತ್ತೆಲವೊ
ಕೇಳಜಂ ಭಕ್ತಿಯಿಂದೆರೆದನೇ ಸಟೆ ಕಮಂಡಲು ಜಲವು ಪಾದ್ಯಮಾಗಿ ೨೨

ಕಡಿದ ಕಾಲ್ಕೆಳಗಿರ್ದ ಕಾಲೆರಡು ಕೂಡಿ ಈ
ಪೊಡವಿಯಂ ಬಾಧಿಸುತ್ತಿರೆ ನಾಗನರದೈತ್ಯ
ರೆಡದೆರಪಕಾಣದೇ ಮೊರೆಯಿಡಲ್ಕಾಗ ಭೈರವಗಪ್ಪಣೆಯ ನೀಡಲು
ಪಿಡಿದೌಂಕೆ ಎಲುಗಳುರೆನುಗ್ಗಾಗಲವ ನುತಿಸೆ
ಮೃಡನೊಲಿವುತಿಷ್ಟವೇನೆನೆಯೆನ್ನ ನಟ್ಟೆಲುವ
ಪಿಡಿದು ಸಲಹೆನಲು ಕಂಕಾಳಮಂ ಧರಿಸಿ ರಾಜಿಸಿದನಾ ಶಶಿಶೇಖರಂ ೨೩

ಕೇಳಿದೈ ಮುನಿವರನೆ ಹದಿನಾರನೆಯಹ ಕಂ
ಕಾಳಧರಲೀಲೆಯಂ ಮುಂದೆ ಪದಿನೇಳನೆಯ
ಲೀಲೆ ಚಂಡೇಶ್ವರಾನುಗ್ರಹದ ಕಥೆಯ ನೀಂ ಕೇಳಖಿಳ ದೇಶದೊಳಗೆ
ಭಾಳಲೋಚನನ ಭಾಗ್ಯದ ಕೋಶಮೆನಿಸುತಿಹ
ಚೋಳದೇಶದೊಳು ನಲ್ಲೂರೆಂಬ ಪುರಮದರೊ
ಳಾಳೋಕಿಸಲ್ಕೆಯಚ್ಯುತಭಟ್ಟ ಸಾವಿತ್ರಿದೇವಿಯರ್ ದಂಪತಿಗಳು ೨೪

ಎಸೆವುತಿರಲವರ ಭಾಗ್ಯದ ಸಿರಿಯ ಕೇಳುವಡೆ
ಯಸಮಾಕ್ಷ[1]ನೇಂ[1] ಬಲ್ಲನವರ ಸದ್ಗುಣಪುಂಜ
ವಿಸರಮಂ ಬಣ್ಣಿಸುವೊಡಾ ಬಹ್ಮಗಳವಲ್ಲವೇಂ ಧನ್ಯರೋ ಶಿವಶಿವ
ಶಶಿಮುಖಿಯಳೆನಿಪ ಸಾವಿತ್ರಿ ಚಿಂತಿಸಿ ಪತಿಯೊ
ಳುಸುರಿದಳು ಪುತ್ರರಿಲ್ಲದರಿಗಿಹಪರದೊಳತಿ
ಸಸಿನೆ ಗತಿಯಿಲ್ಲವೆಂದೆಂಬುದು ನಪುತ್ರಸ್ಯನಾಸ್ತಿಗತಿ ಎಂದಾಗಮಂ ೨೫

ಇದನರಿವುತುಸಿಕನಿರುವುದಂ ನೀತಿಯೇ ಇನೆಯ
ಪದುಳದಿಂದೀ ಪುರದೊಳಮಿತಜನರಿಗೆ ಪುತ್ರ
ಪದಮುಖ್ಯಮಂ ಕೊಟ್ಟು ಪಾಲಿಸುತ್ತಿರ್ಪ ಪಿಳ್ಳೆಯರು ನಮ್ಮಂ ಪೊರೆಯೆನೆ

---

1 ನೇ (ಕ)

ಮದನಾರಿಸುತನ ನಿಳಯಕ್ಕೆ ನಡೆಯೆನುತ ಬಿಡ
ದೊದವಿ ಪತಿಯಂ ಸತಿಯುಂ ಬಂಧುಗಳು ವಾದ್ಯದಿಂ
ಮುದದಿ ನಡೆತಂದು ಪೂಜೆಯನೆಸಗಿ ಭಕ್ಷಭೋಜ್ಯಾದಿಫಲಗಳನರ್ಪಿಸಿ ೨೬

ಶರಣು ವಿದ್ಯಾ[1][ಧೀಶ][1] ಶರಣು ಸದ್ಗುಣಕೋಶ
ಶರಣು ಕುಂಜರವದನ ಶರಣಂ ಧೀಮತ್ಸದನ
ಶರಣೈಕದಂತವರ ಶರಣಂ ಸುಮುನಿಸ್ವಾಂತ ಚಿಂತಾಫಲಪ್ರದಾಯಿ
ಶರಣಂ ನರಸುರವಂದ್ಯ ಶರಣು ನಿರ್ಜಿತ[ಕಾಯ]
ಶರಣು ಮದನಾರಿಸುತ ಶರಣು ಪಂಚಾಸ್ಯನಂತ
ಶರಣಯ್ಯ ಹೃಚ್ಛಾಯ ನೀನೆಮಗೆ ಸುತನಾಗಿ ಸಲಹೆನುತ ಪೊಡಮಡುತ್ತ ೨೭

ವಂದಿಸುತೆ ನಿಂದು ಬದ್ಧಾಂಜಲಿಯಿನಿರಲೊಲಿದು
ಸಿಂಧೂರವದನ ತನ್ನಯ ಕರದ ಪರಶುವಿನೊ
ಳಂದದಿಂ ಪೂಜಿಸಿದ ಯೂಥಿಕಾಕುಸುಮಪ್ರಸಾದವಂ ಕರುಣಿಸಿದೊಡೆ
ಬಂದು ಮನೆಗಖಿಳರೊಡಗೊಂಡು ಸಂಭ್ರಮದಿಂದ
ತಂದಾ ಪ್ರಸಾದವಂ ಸೇವಿಸಲ್ಕುತ್ಸವದೊ
ಳಿಂದುವದನೆಗೆ ಗರ್ಭ ಸಂಜನಿಸೆ ಸಕಲಬಂಧುಗಳೊಸಗೆಯಂ ಮಾಡಲು ೨೮

ಅತಿಶಯದ ಗರ್ಭದಾನಂ ಮಾಡಿ ಸುಖಮಿರಲು
ಸಂತಗೆ ನವಮಾಸಸಂಪೂರ್ಣಮಾಗಲ್ಕುದಿಸೆ
ಸತಿ ಹರ್ಷದಿಂದ ಚಂಡೇಶಪಿಳ್ಳಾರೆಂದು ನಾಮಕರಣವನು ಮಾಡಿ
ಪ್ರತಿಯಿಲ್ಲದಂತೆ ಷೋಡಶಕರ್ಮಗಳನೆಸಗಿ
ಸಿತಕಂಠಸುತನ ಉತ್ಸವದೊಳಿರೆ ಚಂಡೇಶ
ನತಿಬಾಲ್ಯವಂ ಕಳಿವುತೆರಡುಮೂರೈದಾರು ವರುಷವಾಗಲ್ ಶಿವಶಿವ ೨೯

ದಿನದಿನಕೆ ಸುತ ಬೆಳೆವುತಿರಲು ಧನಧಾನ್ಯವೆ
ಲ್ಲನಘನೇ ಕ್ಷಯಿಸಿದವು ಕನಕಮೌಕ್ತಿಕರತ್ನ
ಘನಭೂಷಣಂಗಳಲ್ಲಲ್ಲಿ ಬಯಲಾದ ಉತ್ತಮವಾದ ಪೊಲಪೊಲಗಳು
ಬಿನುಗೆದ್ದವವಿಂತ ಕೊಡವಾಲ ಸುರಭಿಗಳೊಂದು
ಹನಿಯಮೃತವಿಲ್ಲದಂತಾದವಾಶ್ರಿತವಸ್ತು
ತನತನಗೆ ನೋಡಲಳಿದವು ಸತ್ತುಕೆಟ್ಟುಹೋದುದು ಭೃತ್ಯ ದಾಸೀಜನಂ ೩೦

---

1 ಧಿ (ಕಗ)

ಏನೆಂಬೆ ಸಾವಿತ್ರಿಯೈರದಾಳಿಯ ಮೊದಲ
ಹಾ ನಿಖಿಲವಸ್ತುವೆಲ್ಲಂ ಪೋಗಿ ದೊರಕಿಸ
ಲ್ಕೇನುಮಿಲ್ಲದ ಬಡವರಾಗಲಖಿಳರ್ ಬಂದುಯೆಂದರಚ್ಚುತ ಭಟ್ಟರೆ
ಈ ನಿಮ್ಮಮಗನುದಿಸಿದಂದಿನಿಂ ದಾರಿದ್ರ್ಯ
ತಾನೆಯೇ ಬಂದುದೀ ಪಿಳ್ಳೆಯಂ ಪೊರಡಿಸ
ಲ್ಕೇನಾದರಂಟದೆಡರೆಂದೆಲ್ಲರೊಂದಾಗಿ ಬಂದು ಪೇಳಲ್ ಮನೆಯೊಳು ೩೧

ಇಂತುಸುರಿದಿರಿ ನಮಗೆ ಕಂತುರಿಪು ಮುಳಿಯಲಕ
ಟಿಂತು ನಿರ್ಭಾಗ್ಯಮೊಂದಿತು ಸಕಲಧನಕನಕ
ಸಂತತಿಯು ಸೌಭಾಗ್ಯ ಪೋದರೇನವರಿಂದ ದುಃಖವೆಳ್ಳನಿತಿಪ್ಪುದೆ
ಮುಂತೆಲ್ಲ ಕೇಳಿಯೆಮ್ಮನ್ವಯದ ಸದ್ಗತಿಗೆ
ಇಂತಿವನೆ ಮೂಲಿಗನೆನುತ್ತ ಹರುಷದೆ ವಂಗನ
ಚಿಂತೆಯಿಲ್ಲದೆ ಸಲಹಲಾತಂಗೆ ಬುದ್ಧಿ ಬಂದುದು ದಿನದಿನಕ್ಕೆ ತಾನೆ ೩೨

ಉಣಲನ್ನಮಿಲ್ಲವೆಂದೇ ಜನನಿಯೇ ಮರುಗು
ತೆಣಿಸಲೇಕಖಿಳಚಿಂತೆಯಂ ಪುರದ ಕರುಗಳಂ
ಭಣಿತೆಯಿಂದೆನಗೆ ಕಟ್ಟಳೆಯ್ಯ ಮಾಡಲ್ ಕಾಯ್ವೆನೆನಲವರ್ ಶೋಕಿಸುತ್ತೆ
ಗಣಪನಂ ವರಿಸಿ ಈಯಧಮಕೃತ್ಯಕೆ ನಿನ್ನ
ಭಣಿತೆಯಿಂ ಪಡೆದೆವೇ ಕಟಕಟಾವೆನೆ ಸುತಂ
ಹಣೆಯ ಬರಹವ ಮೀರಲಳವೆ ಸಹದೇವ ಲೋಹಿತರು ಕರುಗಳ ಕಾಯರೆ ೩೩

ಎಂದ ಮಾತಿಗೆ ತಂದೆ ತಾಯಿಯಚ್ಚರಿಗೊಂಡು
ಕಂದನಂ ಬೋಳೈಸಿ ಮನೆಮನೆಗೆ ಪೋಗವರ
ಮಂದಿರದ ಕರುಗಳೊಂದೊಂದಕ್ಕೆ ತಿಂಗಳಿಗೆ ಬೇಳೆ ಕಂಬಳವ ಮಾಡಿ
ತಂದೆಯೈವತ್ತು ಕರುಗಳ ಕೂಡಿಕೊಡುತೂರ
ಮುಂದಕ್ಕೆ ಬಂದು ಕರುಗಳ ಕಾಯ್ವ ಬಾಲರೊಳ
ಗೆಂದರೆಲೆಯಪ್ಪಣ್ಣಗಳಿರೀತನಂ ಕೂಡಿಕೊಂಡು ಬಹುದೆಂದು ನಯದಿ ೩೪

ಸುತನೆ ಈಯೈವತ್ತು ವತ್ಸಗಳನೆಯ್ದೆ ನೀ
ಜತನವಂ ಮಾಡುತವರವರ ಮನೆಗೊಪ್ಪಿಸೆನೆ
ಮತಿವಂತನಾ ತೆರದೆ ಕಾಯೆ ತಾಯ್ತಂದೆಗಳಿಗಾಯಿತೊಪ್ಪತ್ತಿನೂಟ

ಅತಿಶಯದಿ ತೃಪ್ತಿಬಡಿಸುತ್ತ ಸುಖಮಿರೆ ಬಂದು
ಸುತನೆಂದನೆಲೆತಂದೆ ನನಗೆ ಕರುಗಳ ಬಿಡಿಸಿ
ಶತಸಂಖ್ಯೆಗಳವಟ್ಟ ಪಶುಗಳಂ ಕಾಯ್ವ ಕೂಲಿಯನೆನಗೆ ನೇಮಿಸೆನಲು ೩೫

ಊರ ಪಾರ್ಬರಿಗೆಲ್ಲ ಈ ವಾರ್ತೆಯಂ ಪೇಳೆ
ಹಾರುವರು ಎಲೆ ಭಟ್ಟರೇ ನಿಮ್ಮ ಕುವರನು ವಿ
ಚಾರಪರ ಬುದ್ಧಿಯುಳ್ಳವನೆಂದು ನಂಡಿವುತಂತಾಗಲೆನುತಾ ಪಶುಂಗಳ
ಸಾರಿಕೊಂಡೊಯ್ದು ಕಾಯ್ದೊಡೆ ಹಾಗ ಹಸುವಿಗೆಂ
ದಾರಯ್ಯತೊಂದುತಿಂಗಳಿಗೆನಲ್ಕಚ್ಚುತಂ
ಧೀರನಹ ಸುಕುಮಾರನೇ ಜಲತೃಣಂಗಳಂ ನೋಡಿ ಸಲಹೆಂದು ಕಳುಹೆ ೩೭

ನೂರಾರುಪಶುಗಳೊಯ್ಯಾರದಿಂ ಕಾಯಲಾ
ಕ್ಷೀರ ಮುನ್ನಿನ ಪರಿಗೆ ವೆಗ್ಗಳಿಸೆ ಸರ್ಬರಂ ವಿ
ಚಾರಿಸುತೆ ಮೇಲೆಮೇಲೀಯೆ ಕೂಲಿಯನದರಿನಿರ್ಪೊಳ್ತಿನೂಟಮುಂಡು
ಹಾರೈಸಿ ತಾಯಿ ತಂದೆಗಳ್ ಸುಖದೊಳಿರಲ್ಕೆ
ಮಾರಾರಿಪೂಜೆಯನೆಸಗುವಿಚ್ಛೆ ಹಿಂದೆ ಸದ
ಸ್ಕಾರದಿಂದುದಿಸಿ ಚುಡೇಶ ನಾಂ ಶಿವನಿಳಯಕೈದನೀ ಪಶುಗಳಿಲ್ಲ ೩೭

ಪೋಪವೆಂದತಿ ಚಿಂತಿಸುತ್ತ ಚಂಡೇಶ್ವರಂ
ತಾಂ ಪರಮಪ್ರೀತಿಯಿಂ ನದಿಯ ತೀರದೊಳಮಳ
ರೂಪದಿಂ ಸೈಕತದ ಲಿಂಗವಂ ಮಾಡಿ ಮುಳ್ಮುಗದೆಲೆಯ ದೊನ್ನೆಯಲ್ಲಿ
ಏಪೇಳ್ವೆ ನದಿಯುಂದಕಮಂ ತಂದಂ ಬಗಸೆಯಿಂ
ದೀಪಿಸುವ ಲಿಂಗಕಭಿಷೇಕವ ಸಮರ್ಪಿಸುತ
ಸೋಪಾಧಿಯಲ್ಲದೆಕ್ಕದ ಕಕ್ಕೆ ತುಂಬೆ ಹೊನ್ನವರೆಗಳ ಪೂದಳಿರಿಗೆ ೩೮

ಮಂದಾರ ಬಿಲ್ವಾದಿ ಗಂಧಮಂ ಲೇಪಿಸು
ತ್ತಿಂದುಮೌಳಿಗೆ ತೃಣಧ್ವಜದಕ್ಕಿಯಕ್ಷತೆಯಂ
ನಂದದಿಂದಾ ಶಿಲಾಧೂಪವ ತೃಣಜ್ಯೋತಿಯ ಜ್ಯೋತಿಯಂ ಕಪಿತ್ಥ
ತಿಂದಂ ಕಾದ್ಯಾರಣ್ಯಕದ ಫಲಾಹಾರವಂ
ಮುಂದಿಟ್ಟು ಕುಣಿವುತ್ತಲಿರಲಾವುಗಳ್ ಕಂಡು
ಬಂದವತಿವೇಗದಿಂ ಕಾರಣದ ಗೋವುಗಳಿವೆಂದವಂ ಚಂಡೇಶ್ವರಂ ೩೯

ಎಲೆಲೆಯಮ್ಮಗಳಿಲ್ಲ ಬನ್ನಿರೇ ಚೆಲುವನಾ
ದಳಿಕನೇತ್ರಂಗೀಗ ನಿಮ್ಮ ಮನದಿಷ್ಟದಿಂ
ದೊಲಿದು ಕ್ಷೀರಾಭಿಷೇಚನವ ಮಾಡಿರೆ ಎನಲ್ ಘಳಿಲನೊಂದೊಂದು ಮುದದಿ
ತಲೆಯ ಬಗ್ಗಿಸಿ ಲಿಂಗಮಂ ನಿಟ್ಟಿಸುತ್ತೆ ಮೆಂ
ಯ್ಯೊಲೆದು ಬಾಲವ ನಿಗುರಿಸಂತ್ತ ಕಾಲ್ ಪಸರಿಸುತ
ಬಲುಮೋಹದಿಂದ ಪಾಲ್ದುಂಬಿ ಕೆಚ್ಚಲ ಸೊರಹನಿಳಂಹುತ್ತ ಮೊಲೆಯೊಳಾಗ ೪೦

ಸಾರಾಮೃತಾಸಾರದಂದದಿಂ ಶಿವಲಿಂಗ
ದಾ ರಮ್ಯಮೂರ್ಧ್ನದೊಳ್ ಭೋರು ಭೋರನೆ ಪಶುಗ
ಳೋರಂತೆ ಕರೆಯೆ ಚಂಡೇಶ್ವರಂ ಕಂಡು ಸಂಭ್ರಮಗೊಂಡು ನಲಿನಲಿವುತ
ಚಾರುಲಿಂಗವನನಿಮಿಷದ ದೃಷ್ಟಿಯಿಂದವಂ
ಪೂರಿಸುತ ನೋಡಿ ಚಿತ್ಕಳೆಯೈದಲಾ ಶಿವಂ
ಭೂರಿಭಕ್ತರ ಮನೋರಥಗಳಿಹುದೆಂತಂತೆ ಕೈಕೊಳುತ್ತಿರೆ ಮುದದೊಳು ೪೧

ಇಂತೆರಡು ಮೂರುದಿನತನಕ ಚಂಡೇಶ್ವರನ
ನಂತಭಕ್ತಿಯೊಳೊಂದಿ ಸಾಯಾಹ್ನಕಾಲ ಬರ
ಲಂತಂ ಗೋವುಗಳ ಹೊಡೆತಂದೂರಕೂಡೆ ತಂತಂಮನೆಗೆಯಾ ಪಶುಗಳ
ಸಂತತಿಗಳೈದೆ ಮನೆಯಮವರಂಡೆಗಳನು ಕೊಂ
ಡಂತು ಪ್ರೀತಿಯೊಳಂ ಕರೆಯಲು ಶಿಶುಗಳಿಗೆ ಪಾಲು
ಚಿಂತಿಸಿದೊಡಿನಿತಿಲ್ಲದಿರಲೆಲ್ಲರುಂ ಬಂ[ದಿ]ದೇನು ಅಚ್ಯುತಭಟ್ಟರೆ ೪೨

ಸಲೆ ಕೂಲಿಕೊಂಡು ಪಾಲ್ಗರೆದುಂಡು ಗೋವುಗಳ
ನೊಲಿದೆಮ್ಮ ಗೃಹಗಳಿಂಗಟ್ಟುವುದು ನೀತಿಯೇ
ಮಲಹರಂ ಮೆಚ್ಚಬೇಡವೆ ಸಾಕು ನಿಮ್ಮಣುಗ ಮಾಳ್ಪ ಕಾ[1][ಯ್ಪು][1] ಗೋವುಗಳು
ನೆಲೆಯಾದವೈ ಪಾಲ್ ಕನಸಿನಲ್ಲಿ ಕಾಣೆ [2]ಬಂ[2]
ತುಲಿವುದಲ್ತೆಮಗೊರ್ವ ಪಶುಗಾಹಿ ಪುಟ್ಟನೇ
ತಿಳಿದಂತೆ ಮಾಳ್ಪೆವೆನಲಚ್ಯುತಂ ನೊಂದಿಂದುನೋಡೆನುತ ಕೈಮುಗಿವುತೆ ೪೩

ಮರುಗಿ ಮನದೊಳ್ ಪೆಂಡಿರುಂ ತಾನು ಚಿಂತಿಸುತ
ವರಸುತನನೆಂದುಕೊಂದರಿಯೆವೈ ಕೈಯೆತ್ತಿ
ಭರದೆ ಕೊಲ್ಲುವದರಿಂದಾವಳಿವುದುಚಿತವೆಂದಿರುಳಿನೊಳಗವನ ಕರೆದು

---

1 ಯಿಪು (ಕಗ) 2 ಬಂ (ಕ)

ಪರಮಸುತ ನಾವಿರ್ವರೀಗ ನಿನ್ನಿಂದಲೇ
ಪೊರೆವುತಿಹೆವೈಯ ಜೀವವ ನೀನುಂ ತುರುಗಳಂ
ನೆರೆಕಾಯಲಿಲ್ಲವೋ ಪಾಲ್ಗರೆದುಕೊಂಬರೋ ಏನುಕಾರಣ ಕರೆಯವೈ ೪೪

ಪೇಳ ಸರ್ಬರು ಪಾರ್ಬರೆರ್ದೆಗುಟ್ಟುತೆಲೆಯಣ್ಣ
ಗೋಳಿಟ್ಟರೆಂದಂ ಶಿಶುಗಳ್ಗೆ ಪಾಲಿಲ್ಲವೆಂ
ದಾಳಿಯಿಂದೆನಲು ಚಂಡೇಶ್ವರಂ ಮನದೊಳತಿಯಾತನೆಗೊಳುತ್ತ ಮರಳಿ
ಪೇಳಲೇಂ ಭಾಳಲೋಚನನ ಭಜನೆಗೆ ತಂದೆ
ಮೇಳವಾಗದನೆನುತ್ತುಸಿಕನಿರುತಿರಲು ಶಶಿ
ಮೌಳಿಯಣುಗಂ ಬೆಳಗಖಿಳ ಪಶುಗಳಂ ಕೊಡುತ್ತೈದಿದಂ ಕಾಂತಾರಕೆ ೪೫

ಎಂದಿನಂದದೊಳು ಸೈಕತಲಿಂಗವನ್ನೊಲಿದು
ಚಂದದಿಂ ಯಜಿಸಿ ನಿಂದಿರೆಯಮೃತದಾಯಿನಿಯಂ
ರಿಂದುಮೌಳಿಯಭಕ್ತೆಯರಿರ ಪುಣ್ಯಾಂಗನೆಯರೆಂದು ಗೋವುಗಳ ಕರೆಯೆಂ
ಸಂದಣಿಸುತೊಂದೊಂದಂ ಲಿಂಗದೇವರಿಗೆ ಮುದ
ವೊಂದಿ ಪಾಲ್ಗರೆವುತಿರೆ ಹಿಂದೆ ಪಿತ ನೋಳ್ಪೆನೆಂ
ದೊಂದಂ ಮರನೇರೌತುಕೊಂಡಿರುತ್ತಿರ್ದು ಕಂಡೆಂದನಾ ಮುದಿಪಾರ್ಬನು ೪೬

ಎಲೆ ಹುಡುಗ ಪಾಪಿ ಈಕರಣಮೇನೇನೆನುತೆ
ಕೊಲಲಾರದಾ ಮಗನ ಮಳಲಗುಡ್ಡೆಯಿದೇನು
ವೊಲಿದು ಪಾಲ್ಗರಸುವುದಿದೇನುತ್ತೊದ್ದನಾ ಲಿಂಗಮಂ ಕಡುಪಾತಕಂ
ಹಲುಬಿ ಚಂಡೇಶ್ವರಂ ಶಿವಶಿವಾ ಲಿಂಗಮಂ
ಮಲದೇಹಿ ಕೆರಹುಗಾಲಿಂದೊದೆದ ದ್ರೋಹಿಯಂ
ತಲೆಯಂನರಿಯಲ್ಬಹುದು ಮಾತರಂ ವಾ ಗುರುಂ ಚ ತ್ಯಜೇದ್ವಕ್ರಚಾರಂ ೪೭

ಶಿವಪೂಜನೇಯೆಂದು ಪೇಳ್ವ ನಿಗಮೋಕ್ತಿಯಿಂ
ದಿವನ ಸಂಹರಿಸಬಹುದೆಂದು ನಿಶ್ಚೈಸಿ ಕೊ
ಲ್ಲುವರಿಲ್ಲಲಾ ಕತ್ತಿಯಿಂದೆಡಬಲದಿ ನೋಡುತಿರಲಾಗ ಲಿಂಗದೊಳಗೆ
ಭವನೆಯ್ದಿ ಸರ್ಪಕಂಕಣದ ಕರವಂ ನೀಡಿ
ಯವಿರಳಾಪ್ತನೆ ಮಗನೆ ನಿನ್ನ ನಿಷ್ಠೆಗೆ ಮೆಚ್ಚಿ
ತವಕದಿಂದಿದೆ ಕೊಡಲಿ ನಿಂದಕರು ಭ[ಯ]ಬಡಲಿಕೋ ಕೋಯೆನುತ್ತ ಕೊಡಲು ೪೮

ಕೊಡಲಿಯಿಂ ಕೊಂದು ಘುಡುಘುಡಿಸಿ ತರದೆಯು ತಲೆಯ
ಹೊಡೆಯೆ ದೂರಕೆ ಬೀಳೆ ಮುಂಡವಾಗಲೆ ಧುಪ್ಪ
ನೊಡನೆ ಕೆಡೆಯಲ್ ಕೆಟ್ಟ ಶಿವದ್ರೋಹಿಯೊಂದು ಲಿಂಗವನಪ್ಪಿ ಮೊರೆಯಿಡುತ್ತ
ಮೃಡನೆಯಾ ದ್ರೋಹಿಯಳಿದಿವನೇನು ಪುಳು ನಿಮಗೆ
ಪಡಿಯೆ ನಿನ್ನಯ ರೋಮಕೂಪದೊಳ್ ನೋಡೆ ಬಿಡ
ದಡಗಿಹವು ಬ್ರಹ್ಮಾಂಡಕೋಟಿಗಳ್ ನಿನ್ನ ರೋಮಕ್ಕೆಣೆಯೆ ಹರಿವಿಧಿಗಳು ೪೯

ಎಂದು ಶೋಕಿಸುವ ಚಂಡೇಶಗತಿಮುದದಿಂದೆ
ಇಂದುಜೂಟಂ ಮುಂದೆ ನಿಂದಿರಲ್ಕಷ್ಟಾಂಗ
ಮೊಂದಿ ನುಡಿಯಲ್ಕೆ ಬಿಗಿಯಪ್ಪಿ ಎಲೆ ಕಂದ ನಿನ್ನಿಷ್ಟವೇನೆನೆ ಹರಿಯಜಂ
ಸಂದರ್ಶನಂಗೈದುದಿಲ್ಲ ನಿಮ್ಮಡಿಮುಡಿಯ
ಗೊಂದಣಂಗೊಂಡು ನುಡಿಸುತ್ತ ಸಾಯಿಗಳಾದ
ವಂದದಿಂ ಕಾಣಲಾರದೆ ವೇದರಾಶಿ ನಾನೇಂ ಸ್ತುತಿಸುವಲ್ಲಶಕ್ತಂ ೫೦

ಎಲೆ ದೇವ ನಿನ್ನ ಸನ್ನಿಧಿಯೊಳಾವಾಗಳುಂ
ಚಲಿಸವಾರ್ದಿಪ್ಪುದೇ ಇಷ್ಟವಿದರಿಂದಧಿಕ
ಫಲಮುಳ್ಳ ಪದವಿಲ್ಲಿದೇಸಾಕೆನಲ್ಕೆಲ್ಲಿಯಾನಿರ್ಪೆನಲ್ಲಿ ನೀನು
ನೆಲೆಯಾಗಿರ್ಪೈಯೆನುತ ವರವನೀವುತೆ ತಂದೆ
ಗೊಲವಿನಿಂದಸುವೀವುತಾ ಗೋವುಗಳ ಸಹಿತ
ನಲವಿನಿಂ ಕೈಲಾಸಕೊಯ್ದು ಚಂಡೇಶನಂ ತೋರಿ ಮೆರೆದಂ ಶಂಕರಂ ೫೧

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರ ಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಆತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ನಾಲ್ಕನೆಯಸಂಧಿ ಸಂಪೂರ್ಣವಾಯ್ತು ೫೨

# ಐದನೆಯ ಸಂಧಿ

ಸೂಚನೆ :

ಸುರಪತಿಯ ಸಿರಿಗವರ್ದುಗಡಲನು ಸುರಾಸುರರು
ಉರವಣಿಸಿ ಕಡೆಯಲಹಿ ವಿಷಮುಗುಳೆ ಸರ್ವರಾ
ಗುರಿದು ಮೊರೆಯಿಡೆ ಕ್ಷ್ವೇಡಮಂ ಕಂಠದೊಳ್ ಶಿರದೆ ಶಶಿಕಳೆಯ ತಳೆದನೀಶಂ

ಅತಿಸೂಕ್ಷ್ಮವಸ್ತುವಾವುದೆನಲ್ಕೆ ಶಿವನೆಂದು
ಶ್ರುತಿಗಳೊದರುತ್ತಿಹುದಿದೇನು ಮಸ್ತಕದೊಳಗೆ
ಶತಪತ್ರಪೀಠನಂಡವನೊಡೆದು ಬಂದು ನಿಂದಿಹ ದೇವಗಂಗೆಯನು
ಕ್ಷಿತಿಯುಂ ಕಂಲಾಚಲದ ಕೂಡೆ ಸಾಗರದೊಡನೆ
ಪತದಂಡಜಠರ[1][ದಾ][1]ಹಾಗೆ ತಾಳಿದ ನಾಗ
ಪತಿಯ ಕಂಕಣವ ಮಾಡಿದುದೇನು ನಿನ್ನಿರವನರಿವರಾರ್ ಚೆನ್ನಮಲ್ಲ ೧

ಚರಪಾದ ತೀರ್ಥಕ್ಕೆ ಸಾಟಿಯಿಲ್ಲೆನುತೆ ಡಂ
ಗುರಹೊಯ್ಸಿ ಕೇಶಿರಾಜಂ ಮೆರೆವುತಿರೆ ದ್ವಿಜರು
ನೆರದಂ ವಾದಿಸೆ ಶಾಸ್ತ್ರದೊಳೋತು ಕಾಶಿಗಂಗಾಜಲವ ಚರಮೂರ್ತಿಯ
ಚರಣತೀರ್ಥವನೆರಡಂಬಿಡದೆ ತೂಗಿಸುತೆ ಲಘು
ಗುರುವೆಂದು ಮಹಿಮೆಯಂ ತೋರಿ ವಿಪ್ರರ ಪಳಿದು
ಚರಣತೀರ್ಥದ ಮಹಿಮೆಯಿಂ ಮುಕ್ತಿವಡೆದವಂಳ ಕೇಶಿರಾಜಂಗೆರಗಂವೆಂ ೨

ವಂದಿಸುತೆ ಮುನಿಪ ಪದಿನೆಂಟನೆಯ ವಿಷವ ತಳೆ
ದಂದವಹ ಲೀಲೆಯುಂ ನಿರವಿಸುವುದೆಲೆ ಸ್ವಾಮಿ
ಯೆಂದೆನಲು ಮರುಳುಸಿದ್ಧೇಶ್ವರಂ ಶೈವಪೌರಾಣದೊಳ್ ರಾಜಿಸುತಿಹ
ಸುಂದರದ ಶಿವಧರ್ಮಸಂಹಿತೆಯೊಳಂ ಪೇಳಂ
ವಂದದಿಂ ಬೋಧಿಸಂವೆನೆಲೆ ದಧೀಚಿವ್ರತಿಪ
ನುದದಿಂ ಲಾಲಿಸ್ಯೆ ಶಿವನಂಶದೂರ್ವಾಸನೆಯ್ದಿ ಭವನೋಲಗಕ್ಕೆ ೩

---

1 ದ (ಕಗ)

ಎರಗಿ ಸ್ತುತಿಸುತ್ತ ಓಲಗ ಪರೆಯೆ ಬೀಳ್ಕೊಂಡು
ಬರುವ ಸಮಯಕ್ಕಗಜೆ ತನಗೊರ್ವ ದೇವಸುಂ
ದರಿ ನೂತ್ನಮಂದಾರಮಾಲೆಯಂ ತಂದೀಯೆ ತನ್ನ ಲಿಂಗಕ್ಕರ್ಪಿಸಿ
ಶಿರದ ಕೇಶಕ್ಕೆ ಮುಡಿವನಿತರೊಳ್ ಮುನಿ ನಮಿಸೆ
ಪರಮಪ್ರೀತಿಯೊಳು ದೂರ್ವಾಸಂಗೆ ಕೊಡೆ ಯತೀ
ಶ್ವರ ಕೊಂಡು ಮಂಡೆಯೊಳಗಿಟ್ಟು ನಾ ಬದುಕಿದೆ ಜಗನ್ಮಾತೆ ಖ್ಯಾತೆ ಶರಣು ೪

ಇನಿತುಮಾ ನಿರ್ಮಾಲ್ಯಮಂ ಸಾವಧಾನದಿಂ
ಮನವೊಲ್ದು ತರುತಿರಲ್ಕಾಮೋದಕಿರದೆ ಗ
ಮ್ಮನೆಯೆರೆಪ ಬಜ್ಜರದ ತುಂಬಿಕಾಟಕ್ಕಲಸುತಂಬರದೊಳಾಚ್ಛಾದಿಸಿ
ವಿನಯದಿಂ ಬರುತಿರಲ್ಕಿತ್ತ ದೇವೇಂದ್ರನತಿ
ಘನತರದ ಓಲಗಂಗೂಡಿಯೈರಾವತವ
ಸುನಯದಿಂದೇರುತಿದಿರಾಗಿ ಬರೆಯಾಖಂಡಲನ ಕಾಣುತಾಗ ಮುನಿಪಂ ೫

ಪೊಗಳ್ವ ಭಟ್ಟಾಳಿಗಳ ನಿನದದಿಂ ಬಿನದದಿಂ
ಬಗೆಬಗೆಯ ವಾದ್ಯರವ ಘೋಷಣದಿ ಭೀಷಣದಿ
ಸೊಗಸಿನತಿ ನಚ್ಚಣಿಯರಾಟದಿಂ ನೋಟದಿಂ ಕೂಟದಿಂ ದಿಕ್ಪಾಲರ
ಪೊಗರೊಗುವ ಗಂಧರ್ವಗಾನದಿಂ ತಾನದಿಂ
ತಗಲದೇ ಝಗಝಗಿಪ ಧ್ವಜಗಳಿಂ ಕುಜಗಳಿಂ
ಮೊಗೆದ ಪಲ್ಲವ ಕುಸುಮಫಲರಾಜಿಯಿಂ ಸುರಪ ಬರ್ಪುದಂ ಮಿಗೆ ನೋಡುತ ೬

ಅತಿಹರುಷದಿಂದ ಪಾರ್ವತಿಯಿತ್ತ ಪೂಮಾಲೆ
ಯತಿ ಸುರಪಗಿದನೀಯಬೇಹುದೆಂದಾಗಲು
ನ್ನತ ಕರುಣದೊಳ್ ಸಮೀಪಕ್ಕೈದಲದನು ಕಂಡಿಳಿಯದೈರಾವತವನು
ನುತಿಸೆ ಶರಣೆನ್ನದಿರಲದನು ಲೆಕ್ಕಿಸದೆ ಮುನಿ
ಪತಿ ದಯದೊಳೆಲೆ ಸುರಪ ಮಂದಾರಮಾಲೆ ಪಾ
ರ್ವತಿಯಿತ್ತ ನಿರ್ಮಾಲ್ಯಮಿದಕೋ ಎನಲ್ಕೆಯಂಕುಶದೊಳಾಂತದ ಗರ್ವದಿಂ ೭

ಗಜದ ಕುಂಭಸ್ಥಳಕೆಯಂಕುಶದ ಮಾಲೆಯಂ
ರುಜುವಾಗಿ ಪಾಯ್ಕೆ ಬಜ್ಜರದ ತುಂಬಿಗಳೈದೆ
ಮಜ ಭಾಪುರೇ ಪರಿಮಳಕ್ಕೆರಗಿ ದೋರುಗೊರೆಯಲ್ಕೆ ಸೈರಿಸಲಾರದೆ

ಗಜ ಪರಿದಿಡಲ್ಕಖಿಳಚತುರಂಗ ವಾರ್ಬಲಂ
ಗಿಜಿಗಿಜಿಯನ್ನೈದೆ ತುಳಿಯಲ್ ಕಂಡು ಕೋಪಿಸುತ
ಭುಜಗಭೂಷಣನರಸಿ ಕೊಟ್ಟ ನಿರ್ಮಾಲ್ಯವಿಂತುಳಿಯದೊಳ್ತುಳಿಸಿದೆಲೈ ೮

ನಿನ್ನ ಸಂಪದದ ಗರ್ವದಲಿ ಗೀರ್ವಾಣರೊಳ
ಗುನ್ನತಂ ನಾನೆಂಬ ಹಮ್ಮಿನಿಂದೆಲೆ ಸುರಪ
ಸನ್ನುತಾಮಳಸದಾಶಿವನ ನಿರ್ಮಾಲ್ಯವಂ ಚತುರಂಗಬಲದ ಕಾಲ್ಗೆ
ನನ್ನಿಯಿಂ ಈಡುಮಾಡಿದೆಯಧಮ ಹಿಡಿ ಶಾಪ
ಮನ್ನಿಂದ್ಯ ನೀಮಾಡಿಕೊಂಡೆ ನಿನ್ನಯ ಕೇಡ
ಯಿನ್ನಿದೇವೊದಲಾಗಿ ದಟ್ಟದಾರಿದ್ರನಾಗೆಂದು ಘುಡುಘುಡಿಸೆ ಮುನಿಪಂ ೯

ಸಿರಿಯಿಂದ ದೊರಕೊಂಡುದೆಲ್ಲ ನೀರೊಳ್ ನೆರೆವು
ತಿರದೆ ಪೋಗಲಿ ನೀಚನಾಗೆನಲು ತತ್ಕ್ಷಣಂ
ಭರದಿ ಕೊಂಡೊಯ್ದು ಪಾಯ್ಕಿದ ಪಾಂಗಿನಿಂದ ವಜ್ರಾಯುಧವು ಸೊದೆಯ ಕೊಡಲು
ಸುರರ ಚಿಂತಾಮಣಿಯು ಮರುಜವಣೆ ತಾನೇರಿ
ಬರುವ ಕರಿ ಮುಂದೆ ನರ್ತಿಸುವ ರಂಭಾದಿಗಳು
ತರತರದ ಕಲ್ಪವೃಕ್ಷಗಳೆಲ್ಲ ನಿಜರೂಪವಳಿದು ನಿಮಿಷದೊಳಾಳ್ದವು ೧೦

ಶ್ರೀಸದನಸಂಪದಂಗಳ ನೀಗಿ ದಾರುಣದೊ
ಳಾ ಸುರಾಚಾರ್ಯನಿಲ್ಲಿಗೆ ಪೋಗಿ ಎಲೆ ಗುರುವೆ
ಈ ಸಮಸ್ತೈಶ್ವರ್ಯಮಳಿಯಿತಿದಕೇನೆನಲ್ ಧಿಷಣನೆಂದಂ ಸುರಪನೆ
ನಾಶವಾದೊಡದೇನು ನೀನು ದೂರ್ವಾಸಮುನಿ
ವಾಸಕೈದುತ್ತವರ ಪದಪದ್ಮಕೆರಗಿ ನೀ
ನೋಸರಿಸೆನಲ್ ಮರಳಿ ಕೋಪಿಸಿದರವರ ಖತಿಯೆಂತು ತಾಳಂವೆಸಂದನು ೧೧

ಇಂದ್ರನೆಲೆ ಸುರಪ ಧೀಮಜ್ಜನರ ಕೋಪ ತಾ
ನಂದವಹ ತೃಣದಗ್ನಿಯಂತೆ ತೋರ್ದಾಕ್ಷಣವೆ
ನಂದುವುದು ಪಾಪಾತ್ಮರಾದವರ ಕೋಪವೇ ಬಾಡಬಂ ವಾರಿಧಿಯನು
ಛಂದದಿಂ ಪೀರುವಂತದು ಪೀರುವುದು ಮತ್ಸ
ರಾಂಧರಹ ಜನರು ಪ್ರಾಣಕ್ಕೆ ಮುನಿವರು ಮೇಲೆ
ಸಂದ ಸಜ್ಜನರು ಮುನಿಯರು ಬೆದರದೇ ಪೋಗಿ ಶರಣವಾಶ್ರೈಸೆಂದನು ೧೨

ಎನಲು ಪೋಗುತ್ತಡಿಗೆಯಡ್ಡಬೀಳಲ್ ಕಂಡು
ಮುನಿ ನುಡಿದ ಭಲರೆ ದಾರಿದ್ರ್ಯಾಂಜನನೆ ಇವನ
ಘನತರೈಶ್ವರ್ಯದಂದವ ಕೆಡಿಸಿದೈ ನಿನ್ನ ಪೋಲುವರದಾರಿಳೆಯಲಿ
ಜನಪರಖಿಳರು ನಿನ್ನ ಕಾಣದವಮತಿಯಿಂದೆ
ವಿನಯಮುಳಿ ಉತ್ತಮದ ರಾಗಾದಿ ದುರ್ಗುಣಗ
ಳನುರಸಣೆಯಿಂದಲೇಂ ನಿನ್ನ ಕಂಡವರೆ ಮದವಳಿವರೆಣೆಗಾಣೆ ನಿನಗೆ ೧೩

ದೂರ್ವಾಸಮುನಿಪ ಗಹಗಹಿಸುತ್ತ ಬಡವಾದೆ
ಗೀರ್ವಾಣಪತಿಯದೇನೆನುತ ಕೇಳಲ್ ಸುರಪ
ಸರ್ವೇಶನಪರಾವತಾರ ನಾಂ ಖಲನಾದೆ ಸಲಹೆನುತ್ತಡಬೀಳಲು
ಪರ್ವಿದತಿಕರುಣದಿಂದೆಂದನೆಲೆ ದೇವೇಂದ್ರ
ಸರ್ವಸಂಪತ್ತಿಯುಳಿದುದು ಮರಳಿ ಬೇಕಾದೊ
ಡೂರ್ವಿಯೊಳ್ ಕ್ಷೀರಸಾಗರವ ಕಡೆದದರಿಂದ ಪಡೆಯೆಂದನಂಗ್ರಹಿಸಿದಂ ೧೪

ಸುರರಾಜನುಗ್ರತಪಮಂ ಮಾಡೆ ಶಿವನೊಲಿವು
ತಿರದೆ ನಿನ್ನಿಷ್ಟವೇನೈ ಪೇಳು ಸುರಪನೆನೆ
ಮೊರೆಯಿಡುತೆ ಹರಹರಾ ಗರ್ವದಿಂ ನಿಮ್ಮ ನಿರ್ಮಾಲ್ಯದೌದಾಸೀನ್ಯದಿಂ
ನಿರತ ನಿರ್ಭಾಗ್ಯನಾದೆನು ದೇವ ದೂರ್ವಾಸ
ವರಮುನಿಯ ಶಾಪದಿಂದಂ ಕರುಣಿಸೆನಲೆಂದ
ಹರಸುರಾಸುರರು ಪಾಲ್ಗಡಲ ಮಥನಿಸೆ ಬರ್ಪುದೆನಲು ದೇವೇಂದ್ರ ಬಂದಂ ೧೫

ಸಚಿವರುಂ ದೈತೇಯರೆಡೆಗಟ್ಟುತವರ್ಗೆ ಬಿಡ
ದುಚಿತ ವಾಕ್ಯಂಗಳಿಂ ನುಡಿದನಣ್ಣದಿರಿಂ
ದಚಲಮುಹ ಸಿದ್ಧಿ ಸಿದ್ಧಿಪುದು ತಮ್ಮಂದಿರ್ಗೆ ತದನುಮತಿಯಿಂದಿರಲ್ಕೆ
ಪ್ರಚುರ ವಿಕ್ರಮಶಾಲಿಗಳ್ ನೀವೆನಲ್ ಮಚ್ಚು
ತಚಲಾರಿ ಕೇಳೆನಲ್ಕೆನ್ನ ಭಾಗ್ಯಕ್ಕಮರ
ನಿಚಯಮೊಡನೀಕ್ಷಣಂ ಕಡಲ ಕಡೆಯಲ್ಬೇಹುನೆನೆ ಬಂದರೊಡಬಡುತ್ತ ೧೬

ಕೂಡುತೆ ಸುರಾಸುರರ್ ಮಂದರಾದ್ರಿಯ ಮಂತ
ಮಾಡಿದರಂ ಶೇಷನಂ ಮಿಗೆ ನೇಣನೆಸಗದಕೆ
ಪೂಡಿದರು ಹರಿಯಲೀಲಾಕಮಠನಂ ಮಂತಿಗಿರದೆಯಾಧಾರಮಾಗಿ

ಜೋಡಿಸಿದರವಂರರಸುರರುಯಿರ್ಕೆಲದಲಿ ವಾ
ತಾಡಿದರು ತಲೆಬಾಲಗಳ ಪಿಡಿಯಲೆಮ್ಮ ಕೈ
ನೀಡಿದರು ಬೆದರಲಮರರುಂ ತಲೆಯಂ ಕಡೆಗೆ ದೈತ್ಯರು ಬಂದು ಪಿಡಿದರಾಗ ೧೭

ಕಡೆದವಿಂತ ವಸ್ತುಗಳ್ ಪುಟ್ಟಲ್ಕೆ ತವಂಗೆನು
ತ್ತೊಡನೆ ಯೋಚಿಸಿ ಮೊದಲು ಪುಟ್ಟಿದಾ ಪೊಡವೆಯಂ
ಜಡಜೋದರಂಗೆ ಮತ್ತುಳಿದರ್ಗೆನುತ್ತ ನುಡಿವುತ್ತಿರಲ್ಕಸುರ ಸುರರು
ಸಡಗರದೊಳಗ್ರವಸ್ತುವ ಶಿವಂಗತಿ ಮುದದಿ
ಕೊಡಬೇಹಂದದ ಮರೆದು ದುಡುಮದುಡುದುಡುಮೆನಂತ
ಕಡೆಯಲಹಿರಾಜಂಗುಪದ್ರವಂದೋರಲ್ಕೆ ವಿಷವ ಗಳಗಳನುಗುಳಿದಂ ೧೮

ಪಿಡಿದಿರ್ಪ ದೇವಾಸುರರ್ಕಳೆಲ್ಲರ ಮೊಗವ
ಬಡಿವುತಂ ಪೆಡೆಸಾವಿರಂಗಳಿಂದವರಲ್ಲಿ
ಬಿಡದಗಲ ನೀಳಯೇಕತ್ರಿಂಶದುಪರಿ ಸಾಹಸ್ರದ್ವಿಸಾಹಸ್ರದ
ಗಡಣದುರಿನಾಲಿಗೆಗಳಂ ಚಾಚುತಾರ್ಭಡಿಸು
ತೊಡನಾಗ ಭುಗಿಭುಗಿಲು [ಭುಸ್ಸ] ಭುಸ್ಸೆಂದು ಹೆಡೆ
ಗೊಡಹೆ ದೇವಾಸುರರ್ ಗಡಗಡನೆ ನಡನಡುಗಿ ಕೆಡೆದೋಡಿದರ್ ತಡೆಯದೆ ೧೯

ಪಾಲ್ಗಡಲ ಪೊಡೆಯೊಳುರಿ ಪೆಚ್ಚುತ ವಿಷಜ್ವಾಲೆ
ಸಾಲ್ಗೊಂಡು ನಾಲಿಗೆಗಳಂ ನೀಡುತಿರಲದರ
ಬಲ್ಗಿಚ್ಚು ತರುಬುತನಿಬರ ಬಿಡದೆ ಕೈಕಾಲು ಮೈಮೋರೆಗಳ ಚುಚ್ಚಲು
ನಾಲ್ಗೈಯ್ಯನಂ ಬಿಡದೆ ದೇವಾರಿ ದೇವತತಿ
ಜೋಲ್ಗೈಗಳೆತ್ತಿ ಬಾಯ್ಗುಟ್ಟುತ್ತ ಮರೆಯೊಗಲ್
ಕಾಲ್ಗೆಟ್ಟು ಹರಿಯೋಡಲರೆಯಟ್ಟಿ ಸುಡಲಾಗ ಪಿಂಗಳಂ ಕೃಷ್ಣನಾದಂ ೨೦

ಆರೆ ಹರಿವಿಧಿಮುಖರಸಂ ಹಂಸ ತಾರ್ಕ್ಷ್ಯಗಳ್
ಹಾರೆಯುಗಸಕೆ ನಿಲಲಾರದೈರಾವತಂ
ಪಾರೆ ಸೊದೆಯಂ ಪಡೆದು ಸುಖಿಪೆವೆಂಬಮರಾಸುರರ ನೇತ್ರ ಪಾರ್ಶ್ವಂಗಳಿಂ
ಸೋರೆ ದುಃಖಾಶ್ರುಜಲವಾರೆ ತಂತಮ್ಮೊಳಗೆ
ಯಾರಿನ್ನು ನಮ್ಮ ರಕ್ಷಿಪರೆಂಬ ದೈನ್ಯೋಕ್ತಿ
ಚಾರಣಾದ್ಯಖಿಲ ದೈವತಯೋನಿಭೇದಂಗಳೊಳಗೆ ಮುಂಬಲಿದುದು ವಿಷಂ ೨೧

ತನ್ನ ಭಾಗ್ಯವ ಹಮ್ಮಿನಿಂ ನೀಗಿಕೊಂಡನ
ತ್ಯುನ್ನತದ ಗರ್ವದಿಂದೀ ಕೆಲಸವಂ ಮಾಡಿ
ಪನ್ನಗಾಧಿಪನ ಮಥಿಸಿದೆವದರಿನಿಂ [1]ಬೆ[1]ಂದೆವೆಂದಸುರ ಸುರರು ಮರುಗಿ
ಖಿನ್ನಮಾನಸರಾಗಿ ನೋವುತಿರೆ ಮತ್ತವರ
ಬನ್ನಬಡಿಸುತ್ತ ರೋಪಾಡಿ ದಹಿಸುತ ಲೋಕ
ಮಂ ನಿರೀಕ್ಷಿಸದೆ ಭೂಲೋಕದಿಂದಾ ನಾಕಪರ್ಯಂತಮಾಯ್ತು ಗರಲಂ ೨೨

ಭಗಭಗನೆ ಬ್ರಹ್ಮಾಂಡಜಾಂಡಮಂ ಪತ್ತಿ ಸಂಡೆ
ಧಗಧಗನೆ ನರಸುರೋರಗದಾನವರು ಬೆಂದಂ
ನೆಗೆನೆಗೆದು ಬೀಳೆ ಸುರವಾಹಿನೀಮುಖ್ಯ ತಟಿನೀಜಾಲಜಲಧಿಗಳೆಲ್ಲ
ಬಗೆಬಗೆದು ನೋಡೆ ವಿಷದುರಿಯಿಂದಲೊಂದಾಗಿ
ಭುಗಿಭುಗಿಲೆನುತ್ತ ತೀರದತಿತರುಗಳೊಣಗುತರೆ
ತೆಗೆತೆಗೆವುತುರಿಗಾರದಂಬರಂಗಳ ದಿಗಂಬರರಾದರಖಿಲ ಜನರು ೨೩

ಬೆಂದು ಓಡಿದರು ಕೆಲಕೆಲರು ತಮಗಾಯುಷ್ಯ
ಸಂದ ಕಾಲೆಂದು ನಿಂದುರಿವುತಿರ್ದರ್ ಕೆಲರು
ತಂದೆ ತಾಯ್ಗಳ ಕಾಣದೇಯುರಿದೆವಯ್ಯೋಯೆಂದವರ್ ಕೆಲಕೆಲಬರು
ಇಂದುಮೌಳಿಯೆ ನಿಮಗೆ ತಪ್ಪಿದತಿದ್ರೋಹರಾಂ
ಹಿಂದೆ ದಕ್ಷಾಧ್ವರದೊಳಂ ಮರೆ[2]ದು ಕಾ[2]ಯ್ದುಭವ
ನೆಂದ[ರಾ] ಸುರರಂ ಸುರಪಾದ್ಯರುಂ ಮೊರೆಯಿಡುತೆ ಶಂಕರನೆ ಸಲಹೆನುತ್ತ ೨೪

ಹರ್ಯ್ಯಜೇಂದ್ರಾದಿ ಸುರದಾನವರು ಕೈಲಾಸ
ಪರ್ಯಂತಕೋಡೆಯೊರ್ಭಡಿಸಿ ಚುಚ್ಚುತ್ತ ಬರೆ
ಧೈರ್ಯದಿಂ ಕುಂದಿ ತಿರುತಿರುಗಿ ನೋಡುತ್ತವರ ಬೆಂದ ಮೈನವಿರೆಲ್ಲವಂ
ಕಾರ್ಯವಾವುದು ನಮಗೆನುತ್ತ ಚಿಂತಿಸಿ ಚಿಂತೆ
ಗಾರ್ಯಪ್ರಯತ್ನಮಂ ಕಾಣದೇ ಮುಖದ ಸೌಂ
ದರ್ಯರಸಮಿನಿತಿಲ್ಲದಾಗ ಕೈಲಾಸಪಾದವ ಭೀತಿಯಿಂದಡರ್ದರು ೨೫

ಅರೆಯಟ್ಟಿ ಬಪ್ಪ ವಿಷದುರಿಯಂ ಹೊಯ್ಲಿಗೆ ಮರಗ
ಳರೆಗಳಂ ಸೇರಿರ್ಪ ಖಗಮೃಗಂಗಳ ಕಾಯ
ಮುರಿವುತಿರೆ ಹಮ್ಮೈಸಿ ಹವ್ವನೇ ಹಾರಿ ಮೂರ್ಛಿತರಾಗಿ ಬಿಳ್ದೇಳುತ

---

1 ಬಂ (ಕ) 2 ಯೆ ಕಾದ (ಗ)

ಕರಿಚರ್ಮಧರನೆ ಕಾಯೆನುತ ಕೈಲಾಸಪುರ
ವರವ ಸಾರ್ದೊಳಪೊಕ್ಕು ನಾಲ್ಗಡೆಯ ನಕಂಲೀಶ
ಸರಸೈಕಪಾದಾದಿ ರುದ್ರರೊಡ್ಡೋಲಗಂಗಳ ನೋಡಿ ಪೊಡವಡುತ್ತ ೨೬

ಒಳಪೊಗುತ್ತೆರಡನೆಯ ಶಂಭುವೆಂದೆನಿಪ ನಿ
ರ್ಮಳ ನಂದಿಕೇಶ್ವರನ ಕಾಣುತ್ತ ಸಾಷ್ಟಾಂಗ
ದೊಳು ನಮಿಸಿ ನಿಂದು ಶಿಶುಗಳು ಜನನಿ ಜನಕರಂ ಕಂಡು ಶೋಕಿಪ ತೆರದೊಳು
ಗುಳುಗುಳನೆಯಳುತ ಶಿವಧೋ ಶಿವನೆ ಮೊರೆಯೆನುತ
ತಳುವದೆಮ್ಮಂ ಸಲಹು ಧರ್ಮಸ್ವರೂಪನು
ಜ್ವಳ ಸುತೇಜೋಮೂರ್ತಿಯೆಂದು ಸೈಗೆಡೆದು ನಂದೀಶಂಗೆ ಪೇಳ್ದರವರು ೨೭

ಏನಿರ್ಪೆ ಹರಿಯಜೇಂದ್ರಾದಿ ದೇವಾಸುರರೆ
ಮೌನಿಮುಖ್ಯರೆ ನಿಮ್ಮ ಸರ್ವಾಂಗಗಳ್ ಬೆಂದು
ನಾನಾವಿಕಾರವೊಂದಿಹುದೆಂದು ಕೇಳಲಾಗಂಸುರ್ದರವರಾ ನಂದಿಗೆ
ಏನೆಂಬೆವೈ ಸ್ವಾಮಿ ಶಿವನ ನಿರ್ಮಾಲ್ಯಮಂ
ಹೀನ ದೇವಪನುದಾಸೀನತೆಯ ಮಾಡಲ್ಕೆ
ಮೌನೀಂದ್ರನಿಂ ಬೀಗಿದೈಶ್ವರ್ಯಮಂ ಪಡೆವೆವೆಂದು ಕಡೆಯಲ್ಕಹಿಪನು ೨೮

ಉಗುಳ್ದ ವಿಷವೊಡನಟ್ಟಿಸುಟ್ಟಿತ್ತು ದೇವಯೆದೆ
ದಿಗಿಲು ದಿಗಿಲೆನುತಲಿದೆ ಕಲ್ಪಾಂತ ವಹ್ನಿಯಂ
ತಗಲದಖಿಳಾತ್ಮಲೋಕಗಳ ಧಗಧಗನುರುಹುತಿದೆ ಬಂದಿತೆಂದು ಬೆದರಿ
ನಗಧರಾದ್ಯರು ಬೆಟ್ಟಕಳವಳಿಸಿ ಭ್ರಾಂತಿಯಿಂ
ದೆಗುವೆ ಕೆಟ್ಟೆವು ದೇವ ಶರಣಾಗತರ ಸಲಹು
ಮಿಗೆ ರಕ್ಷಿಸೈಯೆಮಗೆ ದಿಕ್ಕುದೆಸೆಯಂ ಕಾಣುವೈಯನಾಥರ ಬಂಧಂವೆ ೨೯

ಎಂಬ ನುಡಿಯನು ಕೇಳಿ ಮರುಗಿ ದೇವಾಸುರರ
ಕಂಬನಿಗಳಂ ತೊಡೆಯುತಂಜದಿರಿಯೆಂದಭಯ
ವಂ ಬಿಡದೆ ಈವುತತಿವೇಗದಿಂ ಪೋಗಿ ಒಳವೋಲಗದೊಳೆಸೆವುತಿರ್ಪ
ತ್ರ್ಯಂಬಕನ ಬಳಿಗೆಯ್ದಿ ನಿಂದು ನಂದೀಶ್ವರಂ
ಮುಂಬರಿದು ಗಿರಿಜಾಧಿನಾಥನೆ ಚರಾಚರಕು
ಟುಂಬಿ ಜಗದೇಕವಲ್ಲಭನೆ ಚಿತ್ತೈಸೆಂದು ಬಿನ್ನವಿಸಿದಂ ಪ್ರಕೃತಮಂ ೩೦

ಬಾಗಿಲ್ಗೆ ಬಂದು ವಿಷದುರಿಯಿಂದೆ ಬೆಂದವರಂ
ಭೋಗಿಭೂಷಣ ಸಲಹು ಕರುಣದಿಂದೆನುತಲನು
ರಾಗದಿಂ ಸ್ತುತಿಸಿ ಮೊರೆಯಿಡುತ ನಿಂದಿಹರೆನಲ್ಕಭವ ಬರಹೇಳಲವರಂ
ಸಾಗಿ ನೀವನಿಬರೀಶನ ಓಲಗಕ್ಕೆ ಸಮ
ವಾಗಿ ಬನ್ನಿರಿಯೆನಲ್ ನಂದೀಶಗೆರಗಿ ಸುರ
ನಾಗನರರಸುರದಿಕ್ಪಾಲ ಮುನಿಗಂಧರ್ವರಜಮುಖ್ಯರೈತರುತ್ತ ೩೧

ಖಂಡಶ ಶೇಖರನ ಸಭೆಯ ಮುಂದಕ್ಕೈ [ದಿ]
ದಿಂಡಂಗೆಡೆವುತ ಸರ್ಬರೆಳ್ದು ಕರಗಳ ಮುಗಿದು
ಮಂಡೆಯೊಳಗಾಂತು ವರದೇವದೇವೇಶ ದೇವಾದಿ ವಂದಿತ ಪದಾಬ್ಜ
ಚಂಡ[1]ಕರ[1] ಕೋಟಿಪ್ರಕಾಶ ರಿಪುನಗವಜ್ರ
ದಂಡ ಜಯ ಜಯ ಜಗದ್ರಕ್ಷ ಮಾಯಾದೂರ
ಕುಂಡಲೀಕೃತ ಕುಂಡಲೀಶ ಕುಂಡಲ ಶರಣು ಶರಣಾದ್ರಿಜಾಸಹಾಯ ೩೨

ಪಾಲಿಸು ಸಹಸ್ರಶೀರ್ಷನೆ ಸಹಸ್ರಾಕ್ಷನೇ
ಪಾಲಿಸು ಸಹಸ್ರಬಾಹುವೆ ಸಹಸ್ರಾಂಘ್ರಿಯೇ
ಪಾಲಿಸು ವಿಶಾಲಾತ್ಮ ವಿಶ್ವವಿಶ್ವಾಧಿಪತಿ ವೀತರಾಗದ್ವೇಷನೆ
ಪಾಲಿಸು ಸಮಸ್ತ ನಿಗಮಸ್ತುತ್ಯಘನಕೃತ್ಯ
ಪಾಲಿಸು ಪರಾಶಕ್ತಿ ಪೀಠವಿಶ್ರುತಕೂಟ
ಪಾಲಿಸು ಮಹಾದೇವನೆಂದು ಬ್ರಹ್ಮಾದ್ಯರಾಮೋದದಿಂ ನಂತಿಸುತಾಗ ೩೩

ಎಮಗಾರು ಗತಿಮತಿಯು ನೀವಲ್ಲದೆಲೆ ದೇವ
ಕ್ರಮದೆ ಮಾತಾಪಿತರು ನೀವೆ ಇನ್ನೊಂದುಂಟೆ
ಶ್ರಮಪಡುತ್ತಿರುವರಿಂಗಾರಾಗುವರು ಲೋಕದೊಳಗಿರ್ವರುಂಟು ದೇವ
ಅಮರಕಟಕದೊಳಾರೆನಲ್ಕೆ ಹೆತ್ತಹನೊರ್ವ
ಕ್ರಮದಿ ತೆತ್ತವನೊರ್ವನರ್ಥವುಂ ಭೂಮ್ಯಾದಿ
ಸುಮಹಚ್ಚರೀರಂಗಳಿಂದೆಮ್ಮ ಪೊತ್ತವನು ತೆತ್ತವನು ಹರ ನೀನಲ ೩೪

ಬರ್ಪ ಹಾಳಾಹಳಕೆಯಖಿಳರುರೆ ಹೆದರುತಿರೆ
ಸರ್ಪಭೂಷಣನಂಜದಿರಿಯೆಂದು ಸಂತೈಸಿ
ತೋರ್ಪ ಗರಳಕ್ಕೆ ಕೈಯಾನೆಯುಂಗೈಯೊಳದು ಮಿರುಗೆ ನೀಲದ ಮಣಿಯೊಲು

---

1 ಕಿರಣ (ಕ)

ಕರ್ಪಾಗಿ ನಿಲಲು ಹರಿಯಜರು ಜಯಜಯಯೆನೆ
ಲ್ಕೂರ್ಪಿನಿಂ ಮೊಳಗೆ ದುಂದುಭಿ ಪುಷ್ಪವೃಷ್ಟಿ ಕಂ
ದರ್ಪದರ್ಪಾಪಹನ ಮೇಲೆ ಕರೆವುತ್ತುಘೇ ಜಾಂಗು ಭಲರೇ ಎನುತ್ತ ೩೫

ಪೊಗಳುತಿರೆ ನೀಲಮಣಿಗನ್ನಡಿಯೊಲೆಸೆಯೆ ವಿಷ
ಮಾಗಲದರೊಳ್ ಕೋಟಿ ಕಂದರ್ಪ ರೂಪಿನಿಂ
ದಗಜಾಧಿಪತಿ ರೂಪು ಮೆರೆಯೆ ಕಾಣುತ್ತ ಶಿವ ಪೊರಟು ನೀ ಬಾಯೆನಲ್ಕೆ
ಸೊಗಸಿನಿಂ ಬರೆ ನಮಗೆ ಪುಷ್ಪದತ್ತಕನಾಗಿ
ಮಿಗೆಪೂಜಿಸುತ್ತಿಪ್ಪುದೆಂದು ಸೆಲವಿತ್ತಾಗ
ನಗಧರಾದ್ಯರು ಪೊಗಳೆ ಕಂದದೊಳ್ ಕತ್ತುರಿಯರೇಖೆಯೊಲ್ ತಳೆದನಭವಂ ೩೬

ಹರಿಯಂಜಾದ್ಯಮರರು ಸುರರ ಕರೆದು ಶಿವ ನಮ್ಮ
ಮರೆದು ಮಥನವ ಮಾಡಲಿಂತಾಯ್ತು ಮೊದಲಲ್ಲಿ
ಭರದಿಂದ ಪುಟ್ಟಿದಾ ವಸ್ತುವೆಮಗೀವುದನಿಬರು ಮತ್ತೆ ಕಡೆಗಾಲದಿ
ಸರಸದಿಂದೊಗೆದೊಡವೆಗಳ ಭಾಗೆಯಂ ಮಾಡಿ
ಸುರಪಮುಖ್ಯರು ಕೊಳ್ವುದೈ ಮಹಾಶೇಷ ನೀ
ನುರವಣಿಸಬೇಡ ಮೂರ್ಸೂಳು ಕಡೆಯಲಿಯೆನುತ್ತಪ್ಪಣೆಯನೀಯೆ ಮುಂದದಿ ೩೭

ಶಿವನಿರೂಪಂದಾಳಿ ದೇವಾದಿದೇವ ಮುನಿ
ನಿವಹ ಹರಿಯಂಜರು ಸುರಪಾದ್ಯಖಿಳರುಂ ಬೆದರ
ದೆ ವಿಗಡದ ಶೇಷನುರೆ ತಲೆ ಬಾಲಗಳ ಪಿಡಿವುತಮುದ್ರ್ರಕಡಲಂ ಮಥನಿಸೆ
ನವತರದ ಷೋಡಶಕಲಾಪೂರ್ಣಚಂದ್ರನು
ದ್ಭವಮಾಂತನಮಿತಧಾವಲ್ಯಮಯ ಕರದಿ ಶೀ
ತವಬೀರಲಖಿಳ ದೇವಾಸುರರ್ ಕಳವಳಿಸಿಯಾಲಿವರಿವುತ್ತಿರ್ದರು ೩೮

ಗಡಗಡನೆ ನಡುಗುತಿರ್ದರ್ ಕೆಲರುಂ ಕೆಲರು ಮಾ
ತುಡುಗಿದರುಂ ಕೆಲರು ನುಡಿ ತಡಬಡಂಬೋಗಿ ಪ
ಲ್ಗಿಡಿಗಿರಿದು ಕೆಲರು ದಂತದ ಕಹಳೆಗಳ ಪಿಡಿದು ಸರ್ವಾಂಗಮುಂ ಕೊಡಹುತ
ಮುಡುಬರಾದರ್ ಕೆಲರು ಕೈಕಾಲ್ ಮುರುಟುಂಗಟ್ಟಿ
ಗುಡುಗುರಿಸಿ ಕೆಲರು ಪೊಡೆಯೊಳಗೆಯಾವೆಯ ತೆರದ
ಲಡಗಿಸಿದರವಯಂವಂಗಳನಾಗಲೊಬ್ಬಬ್ಬರಂ ತಬ್ಬಿಕೊಳುತಿರ್ದರು ೩೯

ಸೇದಿದವು ಕೈಕಾಲು ಶೀತದಿಂ ಜನರ ಮತಿ
ಯೇ ದಿಕ್ಕನೈದಿದಡೆ ಸ್ತಬ್ಧವಾಗಲ್ಕಾಗ
ಮಾಧವಾದಿಗಳಿದೇನೆಂದು ನಡುವೆ ಬಂದುದದತ್ಯುಪದ್ರವಮೆನುತ್ತ
ಬಾಧೆಪಡಿಸುವ ಕುಳಿರ್ಗಾರದಭವನ ನುತಿಸೆ
ಮಾಡೇವ ಕಲೆಯನೊಂದಾಂತುಳಿದ ಕಲೆಗಳಂ
ನೀ ಧರಿಸಿಯಂಬರದೊಳಿಹುದೆಂದು ಚಂದ್ರಂಗೆ ನಿರವಿಸಿದ ನಂದೀಶ್ವರಂ ೪೦

ಇಂದಂಥರಬರಕೆ ಶಿವ ಕಳುಹೆ ದೇವಾಸುರರ
ವೃಂದ ಮಂದಿರದಿ ದುಗ್ಧಾಂಬುಧಿಯನೆರಡುಸೂ
ಳಂದದಿಂ ಕಡೆಯಲಗಣಿತವಸ್ತುತತಿಗಳುರೆ ಕಾಲಕಾಲದೊಳೊಗೆದವು
ಇಂದಿರೆಯು ಬಿಳಿಯಾನೆ[ಯ]ಮೃತ ಚಿಂತಾರತ್ನ
ಮಂದಾರಮುಖಕುಜಂ ಸುರಧೇನು ಸುರಹಯಂ
ಚಂದದಪ್ಸರೆಯರಾ ಧನ್ವಂತರಿಯು ತಾರೆಗಳು ಮೊದಲ ರೂಪನೈದಿ ೪೧

ಕೊಂಡು ತಮತಮಗೆಯುಲ್ಲಾಸದಿಂ ಕಂಣಿವುತಿರೆ
ಪುಂಡರಹ ದನುಜಾಳಿ ನಮಗೀಯದೇನನು
ದ್ದಂಡತೆಯೊಳಮಿತ ವಸ್ತುವ ಕೊಂಡುಪೋಪುದಿದಂ ನೀತಿಯೇ ಎನುತಮೃತದ
ಕುಂಡಮಂ ತಮಗೆಂದು ಕೊಂಡೊಯ್ಯುತಿರೆ ಸುರರ
ತಂಡ ಕೆಟ್ಟೆವು ಕೆಟ್ಟೆವಯ್ಯಯ್ಯೊ ಎನುತಜಗೆ
ಪುಂಡರೀಕಾಕ್ಷಂಗೆ ದೂರಲವರಾಗ ತಮ್ಮೊಳಗೆ ಯೋಚಿಸಿಕೊಳುತ್ತ ೪೨

ಮತ್ತಕಾಶಿನಿಯ ರೂಪಂದಾಳಿ ದಾನವರ
ಚಿತ್ತಮಂ ವಂಚಿಸಿದರಹುದಿಷ್ಟಸಿದ್ಧಿಯೆಂ
ದತ್ಯಂತ ರೂಪವತಿಯಾಗಿ ನಾರಾಯಣಂ ಕೂಡಿರ್ಪ ದನುಜರ್ಕಳ
ಮೊತ್ತದೊಳ್ ಪೊಗುತ ಸುರರಂ ಜರೆದು ಗಿಂಡಿಗಾ
ಗಿತ್ತೆರದ ನಾಳಿಯಂ ರಚಿಸಿ ಸುರೆ ಸೋದೆಯಂನದ
ರಿತ್ತಲದಿ ತುಂಬಿ ಪಾಲ್ಗಡಲ ತೀರದಲಿ ದೇವಾಸುರರ್ಗೊಡನೆ ನೀಡೆ ೪೩

ಕಾದಂಬರಿಯ ಪಾನದಿಂದಸುರ ಸಂದೋಹ
ಬಾಧೆಬಡುತಸುಸಂಗಟಂಗೊಳುತ ತಲೆಹತ್ತಿ
ಖೇದದಿಂ ಬೀಳ್ವಂದಮಂ ಕಂಡಿದೇನು ಕೌತುಕಮೆಂದು ಸೈರೋಕೆಯಂ

ಭೇದವಮಾದ[1]ಮ[1]ರಪಂಕ್ತಿಗೆ ಬರಲ್ ನೆರೆ ಕಾಣ
ದಾದರದೊಳಮೃತ ಮೆರೆವುತ್ತಿರಲ್ ಶಶಿ ಸೂರ್ಯ
ರೈದಿವನಸುರನೆನಲು ಹರಿ ಕರದ ಚಕ್ರದಿಂದೆಚ್ಚು ಬೊಬ್ಬಿರಿದನಾಗ ೪೪

ತಲೆಪರಿದು ಕೆಡೆಯಲಸುರರು ಮೊರೆದು ಸುರರೊಡನೆ
ಬಲುಗಾಳಗವಮಾಡಿ ಮುರಿದೋಡಿದರ್ ದನುಜ
ರಲಘು ರುಂಡಂ ಪರಿದ ರಕ್ಕಸನ ಮುಂಡಮುಂ ರಾಹು ಕೇತುಗಳಾಗುಂತ
ಕಲಿತನದ ಪೂರ್ವವೈರದೊಳು ವಿಧು ರವಿಗಳಂ
ಬಳಸಿ ನುಂಗುತ್ತಿಹವು ಕಾಲಕಾಲಕ್ಕಿದಂ
ತಿಳಿವುತಾಹಾರ ಕಂಟಕಿಗಳಹ ನರಕಿಗಳನೇನೆಂಬೆನೆಲೆ ಶಿವ ಶಿವ ೪೫

ಉಪಕಾರಮಂ ಮಾಡಬಂದ ದನುಜರನೆಲ್ಲ
ರಪಹರಿಸಿ ವಸ್ತುಗಳನವರ ಸಂಹರಿಸುತ್ತ
ಲಪಕರಿಸಿದರು ಲೋಕದೊಳಗೆ ಕಾಮಾತುರರ್ಗಿಲ್ಲ ದಾಕ್ಷಿಣ್ಯಲೇಶಂ
ಚಪಲಾಕ್ಷಿ ಕುಂತಿ ಕೃಷ್ಣರ್ ಕೂಡಿ ಕರ್ಣನಿಂ
ದಪರಿಮಿತ ನಂಬುಗೆಯಿನಂದು ಕೊಲಿಸಿದಳಂ ಕೇ
ಳುಪಮಿಸಲ್ ದೇವತೆಯರಿಂತಪ್ಪ ಘಾತಕರು ಶಿವಶಿವಾ ನರರೆಂತುಟೊ ೪೬

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳವರ
ಮಂತಶಾಸ್ತ್ರಮಂಜುಳ ಸಂಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡಲೈದನೆಯ ಸಂಧಿ ಸಂಪೂರ್ಣಮಾಯ್ತು ೪೭

# ಆರನೆಯ ಸಂಧಿ

ಸೂಚನೆ :

ಮಂದಮತಿ ಹರಿಯಜರು ಕಾದುತಿರೆ ಬಹುಕಾಲ
ಮಂದವರ ಮಧ್ಯದೊಳು ಶಿವಲಿಂಗವಾಗುದಿಸೆ
ನಿಂದು ನುತಿಸಲ್ ಹರಿಗೆ ಶಂಖಚಕ್ರವನಿತ್ತು ವಿಧಿಯ ಪೊರೆದಂ ಮಹೇಶಂ

ಮಾಜದುಸುರ್ವೆ ತಲೆಯೊಳಿಪ್ಪ ಬಾಲಕಿಯಾವ
ಳಾ ಜಗದೊಳರಿದಾದ ಮೊಗವೇನು ಕಣ್ಣೇನಂ
ಸೋಜಿಗವಲಾ ಜಡೆಯ ತೊಡರ ಹಿಂಗಡಿಸಿ ನೋಡಂವಳೆಂದು ಶಿವೆ ಕೇಳಲು
ಆ ಜಾಹ್ನವಿಯನಾಂತುದಿಲ್ಲವೇ ಕನಕನೀ
ರೇಜ ನೀಲೋತ್ಪಲಗಳಿಲ್ಲವೇಯೆನಲಲ್ಲಿ
ನೈಜವೇ ನಿನ್ನ ನುಡಿಯೆನಲು ನಸುನಗುತಿರುವ ಮಲ್ಲಿಕಾರ್ಜುನ ಜಯಜಯ ೧

ಹೊರಗೆ ವೈಷ್ಣವನಾಗಿ ಬಿಜ್ಜಳಗೆ ಕೊಂಡೆಯುವ
ನರುಪುತ್ತಲೊಳಗೆ ಲಿಂಗವ ಪೂಜಿಸಲ್ ಧೂಪ
ಪರಿಮಳಿಸೆ ಭಕ್ತನೆಂಬುದ ಕೇಳಿ ಬಸವ ಗಣಸಹ ಬಂದು ನಮಿಸೆ ಪೋಗೆ
ಇರಸಲ್ಲ ಪ್ರಕಟವಾಯ್ತೆನುತಸುವಗಳೆಯಲ್ಕೆ
ಭರದಿ ಬಿಜ್ಜಳ ಕೇಳಿ ಕೋಪಿಸಲ್ ಬಸವನಿಂ
ಹರಣವಂ ಪಡೆದವಳ ಗುಪ್ತಮಂಚಣ್ಣಗಳ್ ಕೊಡುಗೆ ಮನದಭಿಮತವನು ೨

ಲಾಲಿಸಿದೆಯಾ ದಧೀಚಿ ವೃತಿಪ ವಿಷಧರದ
ಲೀಲೆಯನುವಂ ಮುಂದೆ ಏಕೋನವಿಂಶತಿಯ
ಲೀಲೆ ಹರ ಹರಿಗೆ ಚಕ್ರವನಿತ್ತುದಾ ಸ್ಕಂದದೀಶಾನ ಸಂಹಿತೆಯೊಳು
ಬಾಲೇಂದುವಮೌಳಿಯಂಬುಗಂಗೆ ಕುಂಭಜನಡ್ಡ
ಬೀಳುತ್ತ ಶಂಖಚಕ್ರಗಳಚ್ಯುತಂ ಪಡೆದ
ನಾ ಲಲಿತಲೀಲೆಯಂ ಪೇಳೆನಲ್ ಪೇಳ್ದನದ ನಿನಗುಸುರ್ವೆನೆಂದನಾರ್ಯ ೩

ಅಧಿಕಜಲಪ್ರಳಯದೊಳಗಜಹರಿಗಳುದಿಸಾಗ
ಮುದವಳಿದು ಬಾಲರಿರ್ವರು ಹರನೆ ತಾತನೆಂ
ಬುದ ಮರೆದು ಗಾಂಢಾಂಧಕಾರಜಲದೊಳ್ ಮುಳುಂಗುತ್ತೇಳುತುಳಂತಿರ್ವರುಂ
ಹೊದಕುಳಿಗೊಳುತ್ತ ಶಿಶುಗಳು ಮಾತೆಯಂ ಕಾಣ
ದೊದರಿಯಳುವಂತಿರಲ್ಕೊರ್ರೋರ್ವರಿಂಗಾಗ
ವದನಮಂ ಕಾಣ್ಬಂತೆ ಶಶಿಧರಂ ಬೆಳಗ ಪಸರಿಸೆ ಕಂಡರೊರ್ವನೊರ್ವ ೪

ಬಾಲರಹ ಹರಿಯಜರಿಗಾಗ ಕಿಂಚಿತ್‌ಜ್ಞಾನ
ಮಾಲೋಕಿಸುತ್ತೀಯೆ ಬಲಿದು ಭುಜಬಲರಾಗಿ
ಮೂಲದುರಹಂಕಾರಮದದೊಳೊಬ್ಬೊಬ್ಬರುರೆ ರೋಕಿನಿಂ ನಿಟ್ಟಿಸುತ್ತೆ
ಕಾಲಗೆದರುತೆ ಕಾಳಗಕ್ಕೆ ಘೂರ್ಮಿಸುತೆ ಬಿಡ
ದಾಳಿಯಿಂ ಮುಡುಹುಮುಟ್ಟುತ ಮಿಾಸೆಗಳನು ಮುರಿ
ದೇಳಿಗೆಯೊಳಂ ತಿರ್ದುತುರಿದ್ದು ಭೂಭುರ್ಗಿಲೆನುತ ಕಣ್ಗಳಂ ಕೆಂಪೇರಿಸಿ ೫

ನೋಡಿದರು ಒಬ್ಬರೊಬ್ಬರು ಕಣ್ಣ ಕೆಕ್ಕರಿಸಿ
ಹೂಡುತ್ತ ದಂಡೆಗಳ ಕೈಗಳಂ ಮುಷ್ಟಿಗಳ
ಮಾಡಿದರು ಮುಂದಮುಂದಕೆ ಬಂದು ಕುಲಿಲಿಯೆಂದಾಡಿದರು ಮುಷ್ಟಿಯಿಂದೆ.
ಕೂಡಿದರು ಖಟಿಖಟಿಲೆನಂತ್ತ ಲಂಘಿಸಿ ಹಿಂದ
ಕೊಂಡಿದರಂ ಭಲರೆ ಮಲ್ಲರಮಲ್ಲನೆಂದು ಮಾ
ತಾಡಿದರು ಭುಜದ ತಾಡನದಿಂದಲೋಡಾಡಿ ತಮ್ಮೊಳಗೆ ತಾವೆ ಹಳಚಿ ೬

ಮರಳಿ ಸರಳಿಸಿ ನೆಗೆದು ಮಚ್ಚಪುಟಗಳ ಹಾಯ್ಕಿ
ಇರವಣಿಸಿ ಬಿಡದೆ ಮುಷ್ಟಾಮುಷ್ಟಿಯಿಂ ಕೂಡಿ
ಭರದೆ ಕೇಶಾಕೇಶಿಯಿಂದ ಹಾಣಾಹಾಣಿಯಿಂದ ಹೆಲ್ಲಾಹೆಲ್ಲಿಯಿಂ
ಮೊರೆವುತಂ ಕಾಕುಗಳ ಹಾಕುತ್ತ ನೂಕುತ್ತ
ಹೊರಳಿಸುತ ಮರಳಿಸುತಲಗಡಿಸುತ ವಿಗಡಿಸುತ
ಪರಿಪರಿಯ ವಿನ್ನಾಣದಿಂದ ಡೊಕ್ಕರಿಸಿ ಹೆಕ್ಕರಿಸಿ ಕಾದಿದರುಕ್ಕಿನಿಂ ೭

ಬಿರ್ದು ಮೂರ್ಛೆಯೊಳು ಕೆಲಕಾಲ ಕಳಿಯಲ್ ನೋಡ
ಮರ್ದಕರುಣದೊಳಭವ ಚೇತನವನಿತ್ತವರ
ಬರ್ದಿನಿಂದೆಬ್ಬಿಸುತ್ತವರ ಮಧ್ಯದೊಳು ಲಿಂಗಾಕಾರದಿಂದುದಿಸುತ

ಪೊರ್ದಿದಾ ಪ್ರಳಯಾಗ್ನಿತೇಜದಿಂದಗ್ಗಳಿಸು
ತಿರ್ದು ಜಗಜಗಿಸಲಾ ಲಿಂಗಕ್ಕೆ ಪಾರ್ಶ್ವದೊಡ
ನಿರ್ದರಗಿ ನೋಡಲತಿಭೀತಿಯಿಂ ಕಣ್ಗಳಂ ಮುಚ್ಚಿದರ್ ಹರಿವಿಧಿಗಳಂ ೮

ಏನೆಂಬೆ ಹರಿಯಜರ್ ಭೀತಿಯೊಳಿದೇನೆಂದು
ಜಾನಿಸುತ್ತಿರ್ವರೆಂದರು ನಮ್ಮ ಗರ್ವಮಂ
ನ್ಯೂನಮಜ್ಞಾನಮಂ ಕೆಡಿಸಲುದಿಸಿದ ಭಾನುಕೋಟಿಪ್ರಕಾಶಲಿಂಗಂ
ಮಾನಾಂಧಕಾರಮಂ ತೆರಳಿಸಿತು ತತ್ತೇಜ
ಮೇನ ಹೇಳಲ್ಬಹುದು ನಾವಿರ್ವರರಿಯದ
ಜ್ಞಾನದಿಂ ಕಾಳಗದಿ ಬಹುದಿನಂಗಳದೆವೆಂದೀರ್ವರುಂ ಮಾತಾಡುತ ೯

ತಮ್ಮೊಳತಿಚಿಂತೆಯಿಂದೀ ಲಿಂಗದಡಿಮುಡಿಯ
ಹಮ್ಮಿನಿಂ ಕಾಬೆನೆಂದೆನುತ ಹರಿ ಕಿಟಿಯಾಗಿ
ಬೊಮ್ಮಂ ಮರಾಳರೂಪಮನಾಂತು ಬಹುಕಾಲ ಪೋಗಿ ಕಾಣದೆ ಮರಳ್ದು
ದುಮ್ಮಾನಗೊಳುತಿರ್ವರೆಂದರು ಯಥಾರ್ಥದಿಂ
ನಮ್ಮಳವೆ ಕಾಣಲಾ ಮೂರ್ತಿಯಂ ವೇದಗಳ್
ಹಮ್ಮಿನಿಂ ಪೇಳ್ವೆವೆಂತೆಂದೊಡನೆ ಪೇಳಲಾರದೆ ನಾಯ್ಗಳಾದವಲ್ಲ ೧೦

ನುತಿಸತೊಡಗಿದರಮಳ ಶಿವಲಿಂಗಮೂರ್ತಿಯಂ
ಮತಿವಂತರಾದ ವಿಧಿವಿಷ್ಣುಗಳು ಮುದದಿಂದ
ಲತಿಶಯದ ಲಿಂಗಕ್ಕೆ ನಮಿಸುವೆವು ಶುದ್ಧಲಿಂಗಕ್ಕೆ ವಂದಿಸುವೆವನಿಶಂ
ನತರಪ್ಪೆವಾ ಬುದ್ಧಲಿಂಗಕಂ ಜ್ಞಾನದಿಂ
ದತಿನಮ್ರರಪ್ಪೆವಾ ವಿಜ್ಞಾನಲಿಂಗಕಂ
ಹಿತರಪ್ಪೆವಾ ಸತ್ಯಲಿಂಗಕಂ ಬ್ರಹ್ಮಲಿಂಗಕ್ಕೆ ವಂದಿಸುವೆವೆಂದು ೧೧

ಇಂತು ನಾನಾವಿಧದೊಳಾತ್ಮಭೂವಿಷ್ಣುಗಳ
ನಂತಭಕ್ತಿಯೊಳೆರಗಿ ನುತಿಸುತಿರೆ ಭಕ್ತಿಗೊಲಿ
ದಂತಕಾಂತಕ ಲಿಂಗಲಾವಣ್ಯರಸವೆ ತನುದಳೆದಂತೆ ಲಿಂಗದಲ್ಲಿ
ಸಂತಸದೊಳಮಳಶುದ್ಧಸ್ಫಟಿಕಸಂಕಾಶ
ಮಾಂತ ಪ್ರಭಾಪುಂಜದಿಂ ರಂಜಿಸುತ [1][ತ][1]ಮ್ಮೊ
ಳಾಂತಖಿಳಭೂತಗಳನೊಳಕೊಂಡು ತೋರಿತತ್ಯದ್ಭುತವದೇನೆಂಬೆನು ೧೨

1 ತಂತ (ಕಗ)

ಪರಿಪೂರ್ಣಶಾಂತಮಯನಮೃತಕರದೃಷ್ಟಿಯಿಂ
ದಿರುವ ನಗಜಾಧಿಪ ಪರಂಜ್ಯೋತಿ ಪ್ರತ್ಯಕ್ಷ
ಮಿರೆ ಕಂಡಂ ಪಂಕಜೋದ್ಭವ ಪಂಕಜಾಕ್ಷರಾನಂದಪುಳಕಿತರಾಗುಂತೆ
ಶಿರದಿಂದ ಭೂಮಿಯಂ ಮುಟ್ಟಿ ಗರ್ವಗಳ ಪರಿ
ಹರಿಪುತೊಡನಡ್ಡಬೀಳುತಲೇಳುತಂ ಸ್ತುತಿಸೆ
ಹರನವರ್ಗೆ ತೇಜದೊಳ್ ಸುಪ್ರಸನ್ನತೆಯಾಂತನುಮೆಯನೆಡದೊಳಗಪ್ಪುತ ೧೩

ಅತ್ಯಧಿಕಶ್ರದ್ಧೆಯಿಂದಡ್ಡಬಿಳ್ದೇಳದಿರೆ
ಮೃತ್ಯುಂಜಯಂ ನೋಡಿ ರದನರುಚಿಯಂ ಬೆಳಗಿ
ಸುತ್ತಪ್ಪದಿಕ್ಕಿನೊಳ್ ಪೊಳೆವುತಿರೆಯಜಹರಿಗಳಿನ್ನೇಳಿಯೇಳಿಯೆನುತ
ಚಿತ್ರಜಾಂತಕ ನುಡಿದ ನೀವು ಸ್ತುತಿಸಿದ ಸ್ತುತಿಯು
ಬಿತ್ತರದಮೃತರಸವ ಕಿವಿಗೋವೆಯಿಂದೀಂಟಿ
ಚಿತ್ತದೊಳು ಹರುಷವಾಂತೆವು ನಿಮ್ಮ ಮನದಭೀಷ್ಟವ ಕೊಡುವೆ ಕೇಳೆನಲ್ಕೆ ೧೪

ವಿಧಿಹರಿಗಳಾಗ ಕರವಂ ಮುಗಿದು ದೇವೇಶ
ಪದಪದ್ಮಭಕ್ತಿಯಂ ಕೊಟ್ಟು ಕರುಣದೊಳೆಮ್ಮ
ಮುದದಿಂದ ಸಲಹುವದು ನಿಮ್ಮೊಳತಿರತ್ನರತ್ನದ ಕಾಂತಿಯೊಲ್ ತೋರುವ
ಮೃದುಳಗಿರಿಜಾಪಾದ ರಾಜೀವ ನಮ್ಮ ನಿಜ
ಹೃದಯಸರಸಿಯೊಳು ಮೆರೆವಂತಮಳಭಕ್ತಿಯಂ
ವೊದವಿಸುವುದೆರಡು ತೆರದಧಿಕಭಕ್ತಿಯ ವರವನೆಂದವರು ಬೇಡಿಕೊಳಂತ ೧೫

ಚಿತ್ರಜಾಂತಕ ಜನ್ಮಜನ್ಮದೊಳ್ ನಿಮ್ಮಡಿಯೊ
ಳತ್ಯಂತ ಭಕ್ತಿಗೆಡೆದಂತೆ ಕರುಣಿಸುವುದೆನೆ
ಚಿತ್ತಶುದ್ಧದೊಳಿತ್ತೆವೈ ವಿಷ್ಣುವಿಧಿಗಳಿರ ಇನ್ನುಚಿತವಾವುದೆನಲು
ಮೃತ್ಯುಂಜಯಾ ನಾವು ಮಾಡಿದೀ ಸ್ತೋತ್ರಮಂ
ಬಿತ್ತರದ ಭಕ್ತಿಯಿಂ ಪಠಿಸಿ ನುತಿಸುವನಾವ
ಗುತ್ತಮಾಯುಃಶ್ರೀಯುಮಾರೋಗ್ಯಬುದ್ಧಿಯುಂ ಶೈವಸಂಪದಗಳಹವು ೧೬

ಜಪ ಹೋಮಂ ನೇಮ ಮೌನ ಧ್ಯಾನ ತೀರ್ಥಕಿಂ
ದಪರಿಮಿತ ಫಲಗಳಿತ್ತವರನತಿಪ್ರೀತಿಯಿಂ
ದುಪಮಿಸುವೊಡಧಿಕತೇಜೋವಿಶೇಷದೊಳವರ ಪಾಲಿಸುವುದೆಂದು ಮರಳಿ

ವಿಪುಳವಹ ಹರನ ಪೂಜಾಸಮಯದೊಳಗೊಲ್ದು
ಸುಪಥಮಿಾ ನುತಿಯೆನೆಸಗುವಗೆ ಹಿಂದಣ ಪಾಪ
ದ ಪಟಲವ ಸುಟ್ಟು ಫಲಮಿತ್ತು ರಕ್ಷಿಪುದಯ್ಯ ಕೃಪೆಯಿಂದೆ ದೇವದೇವ ೧೭

ಮಂದದಿಂದ ನಿಷ್ಕಾಮರಾಗಿ ಸ್ತುತಿಸಿದವರ್ಗೆ
ಮಂದನಾರಿ ನೀನವರ ಹಸ್ತಗತಮಾಗಿರ್ಪ
ದಿದನೆ ಬೇಡುವೆನೆಂಬ ಬಿನ್ನಪವನವಧರಿಸಿ ಶಿವನುಸುರ್ದ ಹರಿಯಜರಿಗೆ
ಪುದುಗಿ ಸೇವಕರಾಗಿ ಭವಭವದೊಳರ್ಚಿಸುತ
ಪದುಳದಿಂದೀ ಸ್ತೋತ್ರಮಂ ಮಾಡಿದವರ್ನಮ್ಮ
ಪದವ ಸಾರುತ ಸರ್ವಲೋಕದೊಳ್ ಸ್ವೇಚ್ಛೆಯಿಂದಿರಲಿ ಕೃತಕೃತ್ಯರಾಗಿ ೧೮

ಪ್ರೀತಿಯಿಂ ನೀವು ಮಾಡಿದ ಸ್ತೋತ್ರಮಂ ಪಠಿಸು
ವಾತನಪಮೃತ್ಯು ಬಲ ಯಕ್ಷ ರಾಕ್ಷಸ ಮಹಾ
ಭೂತ ಪೈಶಾಚಾದ್ಯುಪದ್ರವಂಗಳ ನೀಗಿ ರುಣ ದಾರುಣಂಗಳಳಿದು
ಖ್ಯಾತಿಯಿಂದಿರಲಿ ತ್ರಿಕಾಲದೊಳ್ ಸ್ತುತಿಸಿದವ
ನೋತೆಮ್ಮ ಭಕ್ತನಾತನೆ ಮುಕ್ತನಜ ನೀನು
ಸಾತಿಶಯದಿಂದೆಸಗು ಸೃಷ್ಟಿಯಂ ಹರಿ ನೀನು ರಕ್ಷಿಸೈ ಲೋಕಾಳಿಯಂ ೧೯

ನೆಲೆಯಾದ ಭಕ್ತಿಯಂ ಇತ್ತೆನಿರ್ವರ್ಗೆ ಮುದ
ಮಲರೆ ಕೇಳುವದೆಬಿಕೆಯು ತ್ರಿಯಂಬಕನಿಲ್ಲಿ
ಸಲೆ ನಿಮಗೆ ಮಾತಾಪಿತರ್ ನೋಡೆ ನೀವಿರ್ವರೀ ಜಗಕೆ ಪಿತರುಮಾಗಿ
ನಲವಿನಿಂ ಪೊರೆವುದೈಯಖಿಳಲೋಕಂಗಳಂ
ಬಲವಂತರಾಗಿ ವಿಧಿವಿಷ್ಣುಗಳಿರಾ ಸಮಂ
ಜ್ವಲಿಪ ತೇಜೋಲಿಂಗಮಂ ನಿಮ್ಮ ಹೃದಯದೊಳ್ ಜಾನಿಸುವ ಭಾವದಿಂದ ೨೦

ಆಯುರಾರೋಗ್ಯಾಭಿವೃದ್ಧಿಯುಂ ಭಕ್ತಿಯುಂ
ಶ್ರೀಯುನಂ ಕೀರ್ತಿಯಂ ಪಡೆದು ಕಮಲಾಸನನೆ
ನೀಯಧಿಕ ಸೃಷ್ಟಿಯಂ ಮಾಡು ನಿನ್ನಂ ಭಜಿಸಲಿಷ್ಟಾರ್ಥಮಂ ಕೊಡಂ ಗಡಾ
ಶ್ರೀಯೊಣ್ಮ ನೀನಖಿಳ ಲೋಕಮಂ ಸಲಹುವತಿ
ಧೀಯುತದ ಕರ್ತವ್ಯವಾಗಲೆನೆ ಪದ್ಮ ಪ
ತ್ರಾಯತಾಕ್ಷಂ ನುಡಿದನೆಲೆ ದೇವದೇವ ವೃಷಭಾರೂಢ ಗಿರಿಜಾಪ್ರಿಯ ೨೧

ದನಂಜರಜನಿಂ ವರಂಬಡೆದು ಲೋಕಾಳಿಯಂ
ವಂನಕೆ ಬಂದಂತೆ ಭಂಜಿಸದೊಡೆಂತವರ ನಾಂ
ಮುನಿದು ಗೆಲುವುದು ನಿರಾಯುಂಧಪಾಣಿಯಾಗಿರ್ಪೆನಿಲ್ಲವೆನಗೊಂದಾಯುಧಂ
ವನಜಾಂಬಕನ ಕರೆದು ಮರುಂಗಬೇಡೈ ನಿನಗೆ
ಘನ ಚಕ್ರವಂ ಕೊಡುವೆನೆಂದುಗ್ರಚಿತ್ತದಿಂ
ನೆನೆದೊಡಗ್ರದೊಳೊಪ್ಪಿದುದಂ ದಶಸಹಸ್ರಾರ್ಕತೇಜಃಪ್ರಭಾಪುಂಜದಿಂ ೨೨

ಶಶಿಯಂನಲ ರವಿ ನೇತ್ರದಿಂದೆ ಪುರುಷಾಕೃತಿಯೊ
ಳೆಸೆವಮಳಚಕ್ರರಾಜಂ ಮಹೋಗ್ರತ್ವದಿಂ
ದೊಸೆದ ಮೇಘಾಯುಂಧಂ ಯುದ್ಧಸಮಯದೊಳಾ ಸುದರ್ಶನಾಕಾರವಾಂತು
ಪಸರಿಸುತ ಮಂಡಲತ್ರಯದಿಂದೆ ರಂಜಿಸುತ
ಲಸಮಾಕ್ಷನಡಿಯಂ ಮುಂದೆಸೆಯಲ್ಕೆ ಕೈಮುಗಿದು
ಬೆಸಸು ದೇವೇಶ ಕ[1]ಜ್ಜ[1]ವದೇನೆನುತ್ತ ಬಿನ್ನೈಸಿದಂ ಚಕ್ರೇಶ್ವರಂ ೨೩

ಎಲೆ ಚಕ್ರರಾಜ ಬಾರೆಂದು ಕರದೊಳ್ ತಳೆದು
ನಲವಿನಿಂ ನಾರಾಯಣಂಗೆ ಕೊಡೆ ತಲೆವಾಗು
ತಳುಕಿನಿಂದೆರಡುಂ ಕೈಯೊಡ್ಡಿ ಕೊಳಂತಾಗ ಜಯಜೀಯ ಬರ್ದುಕಿದೆನೆನುತ್ತ
ಮಲಹರನ ಸ್ತುತಿಸಿದಂ ಬಳಿಕ ಗದೆಯೆಂತೆನಲಂ
ಖಲದೈತ್ಯರಂ ಕೊಲುವ ರೌದ್ರಮೇ ರೂಪಮಂ
ತಳೆದು ರತ್ನಾದ್ಯಖಿಳ ಭೂಷಣಗಳಿಂದ ಷಡ್ಧಾರೆಯಂ ಭಾಮಿನಿಯೊಲಃ ೨೪

ಹರನಿರೂಪಣದಿಂದ ಹರಿಗೆ ಸೇರಲ್ಕೆಡದ
ಕರದೊಳಾಂತಾ ಬಳಿಕ ಹರನರಸಿಯಾ ಮೃದುಲ
ಚರಣಾರವಿಂದಕ್ಕೆ ವಂದಿಸಲ್ ಗಿರಿಜೆಯಾ ಶಿವನ ಸಮ್ಮತದಿಂದವೆ
ವರ ಶಂಖರಾಜನಂ ನಿಜವದನದಿಂ ಪಡೆದ
[2]ಳುಂ[2]ರುಶಶಿಮಯದೆ ಸರ್ವಭೀಕರ ನಿನಾದದಿಂ
ಮೆರೆವ ತತ್ಕಂಬುವಂ ಪರಸಿ ಖಲರೆದೆಬಿರಿಯಲೂದೆನುತ್ತೊಲಿದಿತ್ತಳು ೨೫

ಮತ್ತೆ ಗಿರಿರಾಜಸುತೆ ನಿಜನೇತ್ರದಿಂದಧಿಕ
ಬಿತ್ತರದ ಸೌವರ್ಣಪದ್ಮಮಂ ಪಡೆದು ಹರಿ
ಗತ್ಯಂತಕರುಣದಿಂದೀಯೆ ನಿಜಜನನಿ ನೀಂ ಪ್ರೀತಿಯಿಂದಿತ್ತು ಭಯವಮಂ

---

1 ಟ್ಟ (ಗ) 2 ರು (ಕ)

ಒತ್ತಿ ಪಿಡಿಯಲ್ ತಾಯೆ ಇನ್ನೆರಳ್ ಕೈಯಿಲ್ಲ
ಚಿತ್ತವೊಲ್ದೀವುದೆನೆ ನಸುನಗುತ ಶ್ರೀಗೌರಿ
ಇತ್ತಳಾಗತಿಕರುಣದಿಂದೆ ಕರಮೆರಡನಿವರಿಂದೆ ನಾಲ್ಗೈಯ್ಯನಾದಂ ೨೬

ಶಂಖಚಕ್ರವನೆಡದ ಬಲದ ಕೈಯೊಳಗಾಂತು
ಬಿಂಕದಿಂದೆರಡೆರಡು ಕರಗಳಿಂ ಪದ್ಮ ಗದೆ
ಯಂ ಕೊಡೆ ಪಿಡಿದು ಶಿವಶಿವೆಯರ್ಗೆ ನಮಿಸಿ ನಿಲೆ ಹರಿಯಂ ಕರೆದು ದನುಜರ
ಶಂಕೆಯಿಲ್ಲದೆ ಜೈಸಂ ವಿಧಿ ನೀನಂ ಎಮ್ಮ ದಯ
ದಿಂ ಕಮಲಜಾಂಡ ಸೃಷ್ಟಿಯನೆಸಗುತೀರ್ವರುಂ
ಸಂಕಷ್ಟಮೈದದಿಹುದೆಂದು ಪರಸುತ್ತಲಂತರ್ಧಾನವಾಂತನೀಶಂ ೨೭

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡಲಾರನೆಯ ಸಂಧಿ ಸಂಪೂರ್ಣವಾಯ್ತು ೨೮

# ಏಳನೆಯ ಸಂಧಿ

ಸೂಚನೆ :

ಹರ ತನ್ನಯ ಮಹತ್ವದಿಂದೊಗೆದ ಗಣಪಂಗೆ
ಯೊರೆದ ಸುಜ್ಞಾನದಿಷ್ಟಾರ್ಥವಹ ಬೋಧೆಯದು
ಪರಮವಹ ವಿಂಶತಿಯ ಲೀಲೆಯದನುಸುರ್ವೆ ಲಾಲಿಸುವುದೆಂದಾರ್ಯವರ್ಯರ್ಂ

ಶ್ರೀಗೌರಿ ನಿದ್ರೆಯೊಳಗೇನು ಕೌತುಕವುಂಟು
ಸೋಗೆಗಂಗಳೆ ಸರ್ವಪೀಠಗೋಳಕ ನೀಲ
ಯೋಗಿ ಶಿವಲಿಂಗದಂತಮೃತಗೃಹಮರರೆ ರಾಜಿಕುಮಿಲ್ಲಿ ಶಶಿಕಳೆಯನು
ರಾಗದಿಂ ಕಾಣೆನೆಂದೆನಲುಂಟುಮಾಡೆನಲ್
ವೇಗದಿಂ ನೋಡ್ಪೈದುಕಳೆಯೆನುತ ನಖಗಳಿಂ
ದಾಗಲೊಡನೊತ್ತಿತೋರಿಸಿ ಸರಸದಿಂ ಮೆರೆವ ಮಲ್ಲಿಕಾರ್ಜುನ ಪೊರೆವುದು ೧

ವರಮಂಗಲಾಂಬೆ ಸಹ ಮಾಯಿಭಟ್ಟಾಚಾರ್ಯ
ರಿರುತಂಬೆಯಲ್ಲಿ ಷಡ್ದರ್ಶನವ ಗೆಲಿದಮಳ
ಪರುಷಮಯಮೆಸಗಿ ಕಾಶೀಖಂಡಮಂ ಬಿಡದೆಯಂತಕಾಂತಕನೆ ದೈವಂ
ಹರಿಮುಖರು ಸೇವಕರೆನುತ್ತ ಸ್ಥಾಪಿಸಿ ಗೌರ
ಯರಸರ ಲಸತ್ಪುತ್ರ ಪದ್ಮರಸರಿಗೆ ತಮ್ಮ
ಪರಮಸುತೆಯ[1][ಹ][1] ಮಹಾದೇವಿ[2][ಯಂ][2]ಕೊಟ್ಟವರ ಭೃತ್ಯರಿಗೆ ಭೃತ್ಯನಪ್ಪೆ ೨

ಎಲೆ ಮುನಿಯೆ ಪೂರ್ವವಾತೂಲದೊಳು ಪೇಳುತ್ತಿ
ರಲು ಗಣೇಶಸ್ತು ಸಾಕ್ಷಾದ್ಗಳೋದ್ಭವಯೆನು
ತ್ತಲಿ ತನ್ಮಹೇಶ್ವರನ ಕೊರಲೊಳ್ ಗಣಾಧಿಪಂ ಸಂಜನಿಸಿ ಮೆರೆದನಿಂತು
ಎಳೆಯ ನೇಸರ ಕಾಂತಿಯಂ ಪಳಿವ ಕಾಯದು
ಜ್ವಲಿಪ ರುಚಿಯಿಂ ಚಂದ್ರರೇಖೆಯಿಂ ಮಂದಮಾ
ಗಿಳಿವ ಮದಧಾರೆಗೆರಗುವ ಚಂಚರೀಕಂಗಳಿಂದೆಸೆವ ಗಂಡತಲದಿಂ ೩

---

1 ಯ (ಕಗ) 2 ಯ (ಕಗ)

ಹರನೂರುವಿನ ಮೇಲೆ ವಿಘ್ನೇಶ ಷಣ್ಮುಖರು
ಪೊರಳಿ ಬಿನದಿಸುತವಿರಲನಿತರೊಳಗಖಿಳಾಂಡ
ಕೆರೆಯರಹ ರುದ್ರರೊಳಗೊರ್ವ ಗಣನಾಥ ಮಾವಿನ ಹಣ್ಣನೊಂದ ತಂದು
ಪರಮೇಶನಡಿಗೆ ಕಾಣ್ಕೆಯನಿತ್ತು ನಮಿಸಿ ನಿಲೆ
ಹಿರಿಕಿರಿಯ ಸುತರೀರ್ವರೀ ಪಣ್ಣ ಕಾಣುತ್ತ
ಭರದಿಂದ ನನಗೆ ತನಗೆಂದು ಪೋರಲ್ ಪರಮ ನಗುತ ಮೇಲಕ್ಕೆತ್ತಲು ೪

ನನತನಗೆ ಕೊಡಬೇಹುದೈಯಂ ಜೀಯಾಯೆನಂ
ತ್ತನಘ ಷಣ್ಮುಖ ಗಣಪರಿರದೆ ಪೀಡಿಸೆ ಶಿವಂ
ಮನದಿ ಯೋಚಿಸುತಿಬ್ಬರೆಣಿಸಿದೀ ಪಣ್ಣನೊರ್ಬನಿಗಿತ್ತಡೊಬ್ಬನೆಳುವಂ
ಎನುತ ಚಿಂತಿಸಿ ಗಣರು ಗಹಗಹಿಸುತಿರೆ ಸಂತರ
ವಿನಯದಿಂ ಬನ್ನಿ ನೀವೀಗ ನಮ್ಮಯ ಮಾತ
ಮನವೊಲ್ದು ಕೇಳಲಿತ್ತಪೆವಂಡವಮಂ ಬಳಸಿ ಮುನ್ನಾವ ಬರ್ಪನವಗೆ ೫

ನನ್ನಿಯೇ ಬೊಪ್ಪ ಈ ನುಡಿಯೆನುತ ಸ್ಕಂದಗತಿ
ಯಿನ್ನಣ್ಣನುರೆ ದೊಡ್ಡಬೊಜ್ಜು [1][ಗನಲಾ][1] ಶೂರ್ಪ
ಕರ್ಣ ಪೆರ್ದಡಿಕೊಂಬಿನವನಿಲಿಯತೇರನೀ ಕೃತ್ಯದಲ್ಲಿಂತು ಶಕ್ತಂ
ಬನ್ನಬಡುತಿವ ನನ್ನ ಗೆಲುವನೇ ಸಾಕದೇಂ
ಮುನ್ನ ಬಂದಿರ್ಪ ಪಣ್ಣಂ ಕೊಂಬೆನೆಂದಾಗ
ಪನ್ನಗಾಭರಣ ಚರಣಕ್ಕೆರಗಿ ನವಿಲೇರಿ ಭೂತಳವ ಬಳಸಲೆಯ್ದೆ ೬

ಹಿರಿಯ ಮಗನಾದೇಕದಂತ ವಿದ್ಯಾಧೀಶ
ನರುಮೊಗಂ ಪೋದಂದವಮಂ ಕಂಡು ನಸುನಗುತ
ಭರದೊಳಗೆ ಕುಕ್ಷಿನಿಕ್ಷಿಪ್ತಾಖಿಲಾಂಡನಹ ಶಿವನ ಬಳಸುತ್ತ ನಮಿಸಿ
ವರಫಲವ ಕೊಡು ತಾತ ತುಟಿಮಿಸುಕದನಲು ಮನ
ಮರಳಿ ಗಣತತಿಯು ಗಿರಿಜೆಯ ಮೊಗಮ ನೋಡುತತಿ
ಕರುಣದಿಂ ಕರದ ಸಹಕಾರಫಲವಂ ಕೊಟ್ಟು ಮುಂಡಾಡಿದಂ ಶಂಕರಂ ೭

ಅನಿತಕ್ಕೆ ಬ್ರಹ್ಮಾಂಡವಮಂ ಬಳಸಿ ಷಣ್ಮುಖಂ
ಘನಶ್ರಮದೊಳೈದಿದೋ ತಂದೆ ಫಲಮಿಾಯೆನಗೆ
ಎನಲು ಹೇರಂಬಗದನಿತ್ತೆವೆಂದೆನೆ ಧರೆಯ ಬಳಸಿ ಬಳಲಿದೆ ನಾನಲ್ಲೆ

---

1 ಗ (ಕಗ)

ಬೆನಕಂಗೆ ಮೋಹದಿಂದಿತ್ತೆ ನಿನ್ನಯ ವಚನ
ನಿನಗೆ ಮುಟ್ಟಿತು ಸುತದ್ರೋಹ ನಿನ್ನನೆ ಸೇರಿ
ತೆನುತ ನುಡಿಯಲ್ ಮಗನೆ ನಿನ್ನಣ್ಣನಂ ನೀನೆ ಕೇಳೆನಲ್ ಷಡ್ವದನನು ೮

ಅಣ್ಣ ನೀ ಪಣ್ಣನುರೆನೀಳ್ದು ಕೊಳಬಹುದೆಯೆನೆ
ಚಿಣ್ಣ ನೀನೊಂದಂಡಮಂ ಬಳಸಿದೈ ನಾನು
ಕಣ್ಣುಮೂರುಳ್ಳ ಶಿವನೊಡಲೊಳಖಿಳಾಂಡಮಿಹವೆಂದು ಪ್ರದಕ್ಷಿಣವನಂ
ಬಣ್ಣಿಸುತ ಮಾಡಿಯಾಂ ಫಲವ ಕೊಂಡೆನಂ ತಮ್ಮ
ತಣ್ಣನಿರು ತಾತನಂ ನುಡಿಯಬೇಡೆಂದು ಮು
ಕ್ಕಣ್ಣನುರೆಯಣುಗ ಬೆನವಣ್ಣನಹುದಹಂದೆಂದು ಗಣನಿಕರ ಪೊಗಳ್ದರಾಗ ೯

ಇಂತಹ ಮಹಾವಾಕ್ಯಮಂ ಕೇಳಿ ಶಂಭು ತಾ
ನಂತಸಂತಸದಿಂದೆ ತಳ್ಕೈಸಿ ಗಣಪ ನಿ
ನ್ನಂತರಂಗದಭೀಷ್ಟಮಾವುದುಸುರೈ ಕೊಡುವೆನೆನಲು ವಿಘ್ನೇಶ ದೇವ
ಕಂತುರಿಪು ನಿಮ್ಮ ಶ್ರೀಚರಣಮಹಿಮೆಯನುಸುರ್ವ
ನಂತಶಾಸ್ತ್ರಗಳನುರೆ ಬೋಧಿಸುವುದೆನಲು ನಿ
ಶ್ಚಿಂತ ನಿರವದ್ಯ ಕೇಳೈ ವಿಘ್ನರಾಜನೆಂದಾಗ ಬೋಧಿಸತೊಡಗಿದಂ ೧೦

ಲಾಲಿಸೈ ಶಬ್ದಮುಂ ಕಲ್ಪಮುಂ ಛಂದಸ್ಸು
ಮೇಲಾದ ಶಿಕ್ಷೆಯಂ ಜ್ಯೋತಿಷ ನಿರುಕ್ತಿಯಂ
ಸಾಲಾಗಲಾರಂಗಮಹುದಂ [1][ಋಕ್ಕುಂ][1] ಯಜುಸ್ಸಾಮ ಮತ್ತಾಥರ್ವಣಂ
ನಾಲೆಣಿಕೆಗೊಂಡ ವೇದಂಗಳಿವು ಮೀಮಾಂಸೆ
ಪೇಳಲೇಂ ಧರ್ಮಶಾಸ್ತ್ರಂ ಪುರಾಣಂ ತರ್ಕ
ಜಾಲದಿಂ ಕೂಡಿ ಪದಿನಾಲ್ಕು ವಿದ್ಯೆಗಳಿವಂ ಬೋಧಿಸಿದ ಸುತಗೆ ಶಂಭು ೧೧

ಬಳಿಕಾಯುರರ್ಥ ಗಂಧರ್ವ ಧನುರ್ವೇದಗಳ
ಕಲಿಸಲಿವರೊಳಗಿವಷ್ಟಾದಶ ಸುವಿದ್ಯೆಯಂ
ದೊಲಿವವೈ ಕಾಮಿಕಂ ಮೊದಲಾಗೆ ವಾತೂಲಮಂತಮಾಗೊಪ್ಪುತಿರುವ
ಲಲಿತಾಗಮಂಗಳಿಪ್ಪತ್ತೆಂಟು ಶ್ರೀರುದ್ರ
ಮಳವಡಲ್ ಮೊದಲೊಳಗಥರ್ವ ಶಿರಮಂತದೊಳ್
ಪೊಳೆಯೆ ಮೂವತ್ತೆರಡುಪನಿಷತ್ತುಗಳನಂ ಬೋಧಿಸಿದನಾ ಸುತಗೆ ಗಿರಿಶಂ ೧೨

---

1 ಜುರ್ಕುಂ (ಕಗ)

ಸ್ಮೃತಿಗಳಷ್ಟಾದಶಂ ನಾಲ್ಕುಯುಗದೊಳ್ ಯಮನ
ಸ್ಮೃತಿಯುಂ ಗೌತಮನ ಸ್ಮೃತಿಯುಂ ಶಂಖಲಿಖಿತನ
ಸ್ಮೃತಿಯು ಪಾರಾಶರಸ್ಮೃತಿಯು ಮುಖ್ಯಂ ನೋಡಲಲ್ಲಿ ವರಧರ್ಮಂಗಳೆ
ವಿತತಮವರೊಳ್ ಜಾತಿವರ್ಣಾಶ್ರಮಾಚಾರ
ಸತತ ದಾಯಾದ ಭಾಗಂಗಳಷ್ಟಾದಶಾಂ
ಕಿತವೃತ್ತಿ ಪಾಪನಿವೃತಿಯುಸುರ್ವುದೆಂದು ಬೋಧಿಸಿದ ಗಣಪಂಗಭವನು ೧೩

ಶೈವದೊಳ್ ಪತ್ತು ವೈಷ್ಣವದಲ್ಲಿ ನಾಲ್ಕೊಂದು
ಪಾವಕದಿ ಸೌರದೊಳಗೊಂದು ವೈರಿಂಚದೊಳ್
ದ್ವೈವಿಧ್ಯಮಾಗಿರ್ಪವಂತು ಪದಿನೆಂಟರಿಂದೆಣಿಕೆಗೊಂಡವು ಪುರಾಣಂ
ಈ ವಿಧದೊಳುಪಪುರಾಣಂಗಳಷ್ಟಾದಶಂ
ಭಾವನಾಮಾರ್ಗಾನುಸಾರಿಗಳೆನಿಸುತಿಹವು
ಜೀವರುಗಳಿದರ ತತ್ತ್ವವ ತಿಳಿದು ಸುಖಿಸೆಂದು ಗಣಪಂಗೆ ಶಿವನುಸುರ್ದಂ ೧೪

ಕೇಳಯ್ಯ ಗಣಪ ವಿದ್ಯಾಧೀಶನಾಗೆಂದು
ಬಾಲೇಂದುಮೌಳಿ ತಾಂ ಪರಸಿ ವಿದ್ಯಾರಂಭ
ಕಾಲದೊಳ್ ನಿನ್ನ ಮೊದಲರ್ಚಿಸಲವರ್ಗೆ ಜನಿಜನ್ಮಂತರದೊಳು ಶಾಸ್ತ್ರಂ
ಜಾಲಂಗಳೈದಲಿ ನನಗೆ ಟೊಂಗನಿಕ್ಕಲ್ ವಿ
ಶಾಲಬುದ್ಧಿಯ ಕೊಡುವುದೀಗ ಸಕಲ ಪ್ರಮಥ
ಪಾಳಿಯೊಳ್ ಮುಖ್ಯನಪ್ಪುದರಿಂದ ಗಣಪಾಭಿಧಾನ ನಿನಗಕ್ಕುಗೆನುತಂ ೧೫

ವರವನೀವುತೆ ಹರಂ ನಿಜಸುತನ ಮನ್ನಿಸಲ್
ಗಿರಿಜಾತೆ ಹಿರಿಯಮಗನಂ ನೋಡಿ ಕರುಣದಿಂ
ದರಿಬಿರಿದನರುಮೊಗಂ ವೀರೇಶನೀತನಂ ಲೆಕ್ಕಿಸರು ಹೊಟ್ಟೆಗನಿವಂ
ಬರಿಗೈಯೊಳರಿಗಳಂ ಕೊಲಲು ದುಸ್ತರಮೆಂದು
ಪರಶುಪಾಶವನಿತ್ತು ಕುಳ್ಳಿರ್ದ ಠಾವಿನೊಳ
ಗರಿಗಳಂ ಜಯಸೆನುತ್ತಿಷ್ಟಮಂ ಕೊಟ್ಟಳಭವನ ಪಟ್ಟದರಸಿ ಗಿರಿಜೆ ೧೬

ನಿಜ ಜನಕ ಜನನಿಯಿಂ ವರವ ಪಡೆವುತ ತನ್ನ
ಯಜಿಸಿದರ್ ಮಾರ್ಮಲತ ರಿಪುಗಳೆಲ್ಲಿರ್ದೊಡಂ
ರುಜುವಾದ ಪಾಶವಂ ಬಿಡಲವರ ಕಟ್ಟಿ ತಂದಿದಿರಿನೊಳ್ ಪಾಯ್ಕೆ ನಗುತ

ನಿಜಕರದ ಕೊಡಲಿಯಿಂ ತರಿತರಿವುತುಂ ಸ್ವಾತ್ಮ
ಭಜಕರ್ಗೆ ಬೇಡಿದ ವರವ ಕೊಡುತ ತಾನಾಗಿ
ತ್ರಿಜಗವೆಂಲ್ಲರ ಕೈಯ ಪೂಜೆಯಂ ಕೈಕೊಂಡು ರಾಜಿಸುವ ವಿಘ್ನರಾಜಂ ೧೭

ಮಂತ್ತೊಂದು ಕಲ್ಪದೊಳ್ ಪರಶಿವಂ ಶಿವೆಯೊಡನೆ
ಬಿತ್ತರದ ಮಂದರಾದ್ರಿಯೊಳು ರವಿಸುತವಿರಲು
ಚಿತ್ತವೊಲಿವಖಿಳ ಖಗಮೃಗಗಳಾಕೃತಿಯಾಂತು ಚರಿಸಿ ಮುದದಿಂದ ಬಿಡದೆ
ಮತ್ತಗಜಹಸ್ತಿನೀರೂಪದಿಂದಾ ಶಿವರ್
ಚಿತ್ತಭವಲೀಲೆಯಂ ರಚಿಸಿ ತಮ್ಮಯ ಮನದೊ
ಳತ್ಯಂತಪುತ್ರಮೋಹಂ ಜನಿಸಲುಾಕ್ಷಣ ಗಜಾನನಂ ಸಂಜನಿಸಿದಂ ೧೮

ಇಂತುದಿಸುತಾ ಗಣಪ ಹರನಗ್ರಸುತನಾಗ
ನಂತ ವಿಭವದೊಳಿರ್ಪ ಮುಂತೆ ಕೇಳೈ ಶಿವಂ
ಸಂತಸದೆ ಮಹಿಷಾಸುರನ ಪುತ್ರನಾಗ ಗಜದೈತ್ಯನಂ ಕೊಲಲು ದನುಜಂ
ಅಂತಕಾಂತಕನ ನುತಿಸಲು ಮೆಚ್ಚಿ ಹರ ನಲಿದು
ಮುಂತೆ ವರಮಂ ಬೇಡು ಕೊಡಂವೆನೆನೆ ಸುರವೈರಿ
ಕಂತುಮರ್ದನನೆ ನಾನೆಸಗಿದಪರಾಧಕೋಟಿಯೆ ನೋಡದತಿಕರುಣದಿಂ ೧೯

ಸ್ವಾಮಿ ಸರ್ವಜ್ಞ ಶಾಂತನು ದಯಾಂಬುಧಿ ಘನ
ಪ್ರೇಮದಿಂ ವರವ ಬೇಡೆಂದೊಡೇನುಮನೊಲ್ಲೆ
ಸೋಮಧರ ನಿನ್ನ ತಿಸುಳದ ಸೋಂಕಿನಿಂದೆನ್ನ ಸಮ್ಮ ಪಾವನಮಾದುದು
ನೀ ಮುದದೊಳದ ಮೃದುಳ ಕೌಶೇಯದಂದದಲಿ
ಚಾಮಿಾಕರಾಂಬರದೊಲೆಸಗಿ ಪೊದೆಯೆನೆ ದೇವ
ನೇಮಂದತಿನೂತ್ನಮಾದುತ್ತರೀಯದವೋಲ್ ಪೊದೆದನಾ ಭವಾನೀಧವಂ ೨೦

ನರಸಿಂಹ ಚರ್ಮಂ ಬಹಿರ್ವಾಸಮಾಗಿರು
ತ್ತಿರಲು ವ್ಯಾಘ್ರಾಜಿನಂ ಕಟಿಯೊಳರ್ಧೋರುಕಂ
ಕರಿದೈತ್ಯ[1][ನಂ ಪತ್ತಿ][1] ಕೋಮಲದ ಮೇಲ್ಪೊದಕೆಯಾಗಮರಿಸುತ್ತಭವನು
ಹರುಷದಿಂ ಹರಿಯಜೇಂದ್ರಾದಿ ಬಲಗಣಪಬಲ
ಸುರರ ಬಲ ಸಂಭ್ರಮದೆ ನಡೆತರಂತಲತಿಮೋಹ
ದುರವಣೆಯೊಳಗಜಗಾ ಶಿರವ ತೋರುವೆನೆನುತೆ ಕರದೊಳಾಂತೆಯ್ದಿ ಭರದಿಂ ೨೧

1 ನಮತಿ (ಕಗ)

ಬರುತ ಚರರಂ ಮುಂದೆ ಗಿರಿಜೆಗರುಪಲ್ಕಳುಹ
ಲರರೆ ಬಂದೆರಗಿ ಬಿನ್ನವಿಸೆ ಪಾರ್ವತಿ ಮುದಂ
ಬೆರೆಯುದಾ ಯಾತ್ರೆಯಂ ಪೋದದಿವಸಂ ತೊಡಗಿಯಭ್ಯಂಜನವನು ಕಳಿದು
ಇರುತಮಿಂದಿನದಿನಂ ಪುರುಷಂಗೆಯಾರತಿಯ
ನಿರದೆತ್ತಬೇಹುದೆಂದ[1]ಭ್ಯ[1]ಂಗವಮಂ ತೀರ್ಚೆ
ಸಿರಿಗಂಧ ಮುಂತಾದ ಪರಿಮಳದ ತಿಗುಡ ಸೂಸುತ್ತ ಜಯೆಯುಂ ವಿಜಯೆಯುಂ ೨೨

ಪಾದಾದಿ ಕೇಶಪರಿಯಂತ ತಿಕ್ಕುತ ತಿಗುರ
ಮೋದದಿಂ ಮೆಯ್ಯ ಕಾಳಿಮುವ ತೆಗೆದುಂಡೆಯಂ
ತಾ ದೇವಿಯುವರ ಕೆಯ್ಯಿಂ ಸೆಳೆದುಕೊಂಡು ಪುತ್ತಳಿಯನೆಸುಗುತ್ತದಕ್ಕೆ
ಮಾದೇವನರಸಿ ಪ್ರಾಣವನಿತ್ತು ಮುದ್ದಿಸು
ತ್ತಾದರದೆ ಮಗನೆಂದು ಮನ್ನಿಸುತ್ತೆಲೆಕಂದ
ಕಾಯ್ದುಕೊಂಡಿರು ಬಾಗಿಲೋಳೋರ್ವರು ಬಿಡವೆಯೆನುತ ನಿಜಜನನಿ ಮಡಗಿ ೨೩

ಗಿರಿಜೆ ಸ್ನಾನವನೆಸಗಿ ಸಿಂಗರಿಸಿಯಾರತಿಯ
ತರುವನಿತರೊಳ್ ವಾದ್ಯಘೋಷಣದ ಘನರಭಸ
ದುರವಣಿಯೊಳಂತಪುರಬಾಗಿಲ್ಗೆ ಬಂದು ನಂದಿಯನಿಳಿದು ರತ್ನಖಚಿತ
ವರಹೇಮಪಾದುಕೆಗಳಂ ಮೆಟ್ಟಿ ಕೈಲಾಗ
ವೆರಸಿ ವಳಯಿಂಕೆ ಬರಲಲ್ಲಿ ಬೆನವಣ್ಣ ಕಂ
ಡರರೆ ನಿಲ್ಲೊಳಗಮ್ಮ ಮಿಂದಪಳು ಪೋಗಬೇಡೆಂದು ಝಂಕಿಸಿ ತಡೆಯಲು ೨೪

ಆತ ಗಿರಿಜಾಧಿಪತಿ ತಂದೆಯೆಂದರಿಯದತಿ
ಖಾತಿಯಿಂದಡ್ಡನಿಲೆಯುಗ್ರಕೋಪದೊಳಿವಂ
ಭೀತಿಯಿಲ್ಲದೆ ತಡೆಯಬಹುದೆಯೆಂದಾ ನಖಾಗ್ರದೊಳವನ ಶಿರವನರಿದು
ಭೂತೇಶನಂಬರಕ್ಕಿಡಲು ಪ್ರಮಥಾಳಿ ಬಿಡ
ದೋತು ಪೊಗಳಲ್ ಸಕಲವಾದ್ಯತತಿ ಮೊಳಗೆ ಶಿವ
ಪ್ರೀತಿಯಿಂ ನವರತ್ನದಾರತಿಯ ಜಯೆ ವಿಜಯೆಯೊಡಗೊಂಡು ಬಂದು ಬೆಳಗಿ ೨೫

ಕೆಳದಿಯರ ಕೆಯ್ಯಾರತಿಯನಿತ್ತಭವದಪದ
ನಳಿನಕಭಿವಂದಿಸಿದ ಗಿರಿಜಾತೆ ಶಿರವ ಕರ
ತಳದಿಂದ ಪಿಡಿದೆತ್ತಿ ಮುಂಡಾಡಿ ಹಸ್ತಮಂ ಪಿಡಿಯೆ ನಖಗತ ರಕ್ತಮಂ

---

1 ಭ್ಯಾಂ (ಗ)

ಘಳಿಲನೇ ಕಂಡಗಜೆ ದೇವ ದೈತ್ಯನ ಶಿರವ
ಪೊಳೆವ ನಖದಿಂದರಿದಿರೇ ದೊಡ್ಡತಲೆಯನನೆ
ಚಲುವೆ ಕೇಳ್ ಶೂಲದಿಂದಿರಿದು ಖಡ್ಗದೆ ಕಡಿದು ತಂದೆವಿದ ನೀ ನೋಡಲು ೨೬

ಎಂದ ಮಾತು ಕೇಳಿ ನೋಡಿ ನಸುನಗುತಗಜೆ
ಛಂದುಗುರ್ಗೊನೆಯು ರಕುತವಿದೇನೆನಲ್ ಕೇಳು
ಹಿಂದೆ ಬಾಗಿಲೊಳಿವ್ಮ ತಡೆಯಲಾತನ ತಲೆಯ ಚಿವುಟಿಟ್ಟೆನೆನಲಂಬಿಕೆ
ಸುಂದರದ ನಿನ್ನ ಕಂದನ ತಲೆಯನರಿವರೇ
ಎಂದು ಶೋಕಿಸೆ ಗಿರಿಜೆ ನೋಡೆನುತ ಗಜನಿರವ
ನಂದು ಮುಂಡದೊಳಮರಿಸುತ್ತ ಪ್ರಾಣವನೀಯಲಗ್ರಸುತನೆಮೂರ್ತಿರ್ವರುಂ ೨೭

ಅತ್ಯಂತ ಪ್ರೀತಿಯಿಂ ನೀನಖಿಲ ಮತಗಳೊಳ್
ಬಿತ್ತರದ ಲೋಕಂಗಳಲ್ಲಿ ದೇವಾಳಿಯೊಳ
ಗುತ್ತಮನೆ ಸಕಲವಿದ್ಯಾಭ್ಯಾಸದೊಳಗಗ್ರಪೂಜೆ ನಿನಗಾಗಲೆನುತ
ಕೃತ್ತಿವಾಸಂ ಪಾರ್ವತಿಯು ವರವನಿತ್ತರಿದು
ಚಿತ್ರಜಾರಿಯ ಕುವರ ಗಜವದನ ಚಾರಿತ್ರ
ಬಿತ್ತರಿಸೆ ಕಲ್ಪ ಕಲ್ಪದೊಳುಂಟು ತಿಳಿಯಲದು ವಿಂಶತಿಯ ಲೀಲೆಯುಣುಗ ೨೮

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಲ ವರ
ಮತಶಾಸ್ತ್ರ ಮಂಜುಳ ಸಂಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡಲೇಳನೆಯ ಸಂಧಿ ಸಂಪೂರ್ಣಮಾಯ್ತು ೨೯

# ಎಂಟನೆಯ ಸಂಧಿ

ಸೂಚನೆ :

ಗಿರಿಜೆಯುದರದೊಳು ಸುತರಾಗದೊಲ್ ಹರಿಮುಖರು
ವರವಪಡೆದನಲನಭವನ ವೀರ್ಯಮುಂಡುಗುಳೆ
ಸುರರು ಗರ್ಭಿಣಿಯರಾಗುದ್ಗಾರಿಸಲ್ ಬಾಹುಲೇಯ ಶರವಣದೊಳೊಗೆದಂ

ಆಧ್ವಷಟ್ಕಲಿದೂರ ವಿಶ್ವಸೃಣ್ಣತಪಾದ
ಚಿದ್ವಿಶಿಷ್ಟಾತ್ಮ ಚಿತ್ಪರಿಪೂರ್ಣ ಪರಮಾತ್ಮ
ಸದ್ವಿಬುಧ ಭಕ್ತಜನಮಂದಾರ ಸಕಲಜನವಿಖ್ಯಾತ ಮರಣರಹಿತ
ಮಧ್ವರೀನಮಿತ ಪಾದಯುಗ್ಮ ಸರಸಿರುಹ ಮ
ರುದ್ವಹ್ನಿ ಶಶಿಭಾನುಭೂಮಿಂಸಲಿಲಾಕಾಶ
ಪುದ್ಗಲಮಯಾಂಗ ನಿತ್ಯಾನಂದ ಜಯಜಯತು ಮದ್ಗುರುವೆ ಚೆನ್ನಮಲ್ಲ ೧

ಬಲ್ಲಾಳರಾಯನಾಸ್ಥಾನಕ್ಕೆ ಜಂಗಮವ
ಸಲ್ಲೀಲೆಯಿಂದ ಕರಕೊಂಡೊಯ್ಯೆ ವಿಪ್ರಜನ
ರೆಲ್ಲಮೊರೆದೆದ್ದು ರಾಯಗೆ ಪೇಳಲೆಂದ ದೇವರು ಗಡಾ ಕೋಷ್ಠಮುಂಟೆ
ಚೆಲ್ಲಾಲಿತಾಂಗ ಜಂಗಮದಂಗಕೋಷ್ಠಕುರೆ
ಬಲ್ಲಾಳ ನೋಡೆಂದು ದಿವ್ಯವಪುದೋರಿ ಭೂ
ವಲ್ಲಭನ ಕೈಯಿಂದ ಪೊರಮಡಿಸಿಕೊಂಡ ಪದ್ಮರಸರಡಿಭೃತ್ಯನಪ್ಪೆಂ ೨

ಎಲೆ ಗುರುವೆ ಗಣಪಪ್ರಸಾದವಿಂಶತಿಯು ನಿ
ರ್ಮಳಲೀಲೆಯಂ ಕೇಳಿ ಕೃತಕೃತ್ಯನಾದೆ ನೀ
ಲಲಿತೈಕವಿಂಶತಿಯುಮಾಸ್ಕಂದಲೀಲೆಯಂ ನಿರವಿಪುದಂ ಗರುನಾಥನೆ
ನೆಲೆಯಾಗಿ ಕೇಳಿದಾದಿತ್ಯನ ಪುರಾಣದೊಳು
ನಲವಿನಿಂ ಪೇಳ್ದಂತೆ ಪೇಳುವೆಂ ಗಿರಿಜೆಯ
ತ್ಯಲಘು ಕಲ್ಯಾಣಮಾಗಂತ ರಾಜತಾದ್ರಿಯಿಂ ಮಂದರಾಚಲಕೆ ಗಮಿಸಿ ೩

ಪರಿಪರಿಯ ಖಗಮೃಗದ ಮುಖದವರಂ ನಖದವರು
ಮೆರೆವಮಳ ಏಕಮುಖದವರು ಮುಖವುಂಳಿದವರು
ಸರಸೈಕ ನೇತ್ರ ದ್ವಿನೇತ್ರ ಶತಸಾಹಸ್ರನೇತ್ರ ಬಹುನೇತ್ರದವರು
ತರತರದ ಕರ್ಣೈಕ ಕರ್ಣ ನಾನಾಕರ್ಣ
ವೆರಡು ಮೂರಾರು ಪದಿನೆಂಟು ಪತ್ತಡಿಯರೊಂ
ದರೆಕಾಲು ಮುಕ್ಕಾಲು ಪಲ್ಲಂಕೈಯವರು ಶಿವನಂ ಬಿಡದೆವೋಲೈಸಲು ೪

ಶಂಕರಂ ದೇವತಾನೀಕಕೋಸುಗ ಬಿಡದೆ
ಶಾಂಕರಿಯ ರತಿಯೊಳಾದಿತ್ಯ ಸಾಹಸ್ರಾಬ್ದ
ಮುಂ ಕೂಡಿ ಕ್ರೀಡಿಸುತ್ತಿರ್ದನೇಂ ಕಾಮಿಯವೊಲಾ ತಾರಕನ ವಧಿಸಲು
ತಾಂ ಕೂರ್ತು ಷಣ್ಮುಖೋತ್ಪತ್ತಿಯಂ ಪರಶಿವಂ
ಬಿಂಕದಿಂ ರಮಿಸಲೇಂ ಜಾವಳನೆಯಲ್ಲ ಕೇಳ್
ತಾಂ ಕಮಲಜಾಂಡಮಂ ಮತ್ತೆ ತಾರಕ ಪೆರ್ಚಿ ತಲ್ಲಣಂಗೊಳಿಸುತಿರಲಂ ೫

ಕ್ರೂರತಾರಕದೈತ್ಯನಟ್ಟುವಳಿ ಮಿಗಿಲಾದ
ಭೂರಿತತ್ವಗಳು ಬಾಧಿಸಲುಪಕ್ರಮಿಸಿದವು
ಮಾರಾರಿ ಜಗವ ರಕ್ಷಿಪ ಚಿಕೀರ್ಷೆಯ ನೆನಹನುಳಿದಕಾರಣಮಿಚ್ಛೆಯಿಂ
ಕಾರುವೋಡಗಳಸ್ಥಿ ಫಲಲಂಗಳಂ ಸುರಿಯೆ
ವಾರಿಧಿಗಳಾ ಹ್ರದನದಾದಿಜಲಮುಳಿಯದೊಲ್
ಹೀರುತ್ತೆ ಬಾಡಬಂ ಬ್ರಹ್ಮಾಂಡಮಂ ಸುಡಲ್ ಭೂಮಿ ಭೂರ್ಭುಗಿಲೆಂದೆನೆ ೬

ಬಿಡದೆ ಜಂಝಾಮಾರುತಂ ಬೀಸಲುಡುಗಣಂ
ಪೊಡವಿಗುದುರಿದವು ಮೇಘಗಳು ತಮ್ಮೊಳು ತಾವೆ
ಸಿಡಿಲಂತೆ ಗರ್ಜಿಸಲಂ ಲೋಕಂಗಳಳಿದವಾ ದೇವರ್ಕಳಾ ವಿಮಾನಂ
ಆಡರಿ ಪೋಗುತ್ತಿರಲ್ ಬಳಬಳನೆಯುದಂರ್ದವಾ
ಜಡಗಳಿಂಗಿದವನಲನುತ್ಪಾತ ಧಗಧಗನೆ
ಮುಡಲಿರಿದು ಸುಡೆ ಧೂಮಕೇತು ಉದ್ಭವಿಸೆ ದೇವರ್ಕಳುರೆ ಬಗೆಗೊಂಡರು ೭

ನೊಂದು ಚಿಂತಿಸುತ ಕುಡಿವಮೃತವಿಷಮಾಗೆ ಮಂದ
ದಿಂದ ವೇದಂಗಳುದ್ಘೋಷಂಗಳಳಿದು ಜಡ
ನೊಂದಿ ಜಪತಪಹೋಮನೇಮ ಮಂತ್ರಾದಿ ಸಾಮರ್ಥ್ಯಮಳಿದವು ದೇವನ

ಸಂದ ಕೃಪೆಯಿಲ್ಲದಿಹ ಕಾರಣಂ ಜಗಕೆ ಭಯ
ಹೊಂದಿ ಹರಿಯಂಜ ಸುರಪ ದೇವತತಿ ದಿಕ್ಪಾಲ
ವೃಂದ ಮುನುಮುನಿಗಳೆಲ್ಲರು ಯೋಚಿಸುತ್ತ ನಮ್ಮಂ ಕಾಯ್ವ ದೇವನಾರೊ ೮

ಎಂದು ಚಿಂತಿಸುತಿರಲ್ ನಾರದಂ ಬಂದು ನಿಲೆ
ವಂದಿಸುತೆ ಸರ್ವಸುರರೆಲ್ಲ ಕೈಗಳಮುಗಿವು
ತೆಂದರೆಲೆ ಜೀಯ ನಮಗಿಂತಹ ಮಹೋಪದ್ರವಂದೋರಲೇಂ ಕಾರಣಂ
ತಂದೆ ನಿರವಿಸುವುದೈಯಾವಕಾರಣದಿಂದ
ಬಂದುದೀ ಬಾಧೆ ಮತ್ತಾರ ದೆಸೆಯಿಂ ಕ್ಷಯಿಪು
ದೆಂದು ಸುಖಮಹುದು ಮುನಿವಲ್ಲಭನೆ ನಿರವಿಸುವುದೆಂದು ಪೊಡಮಂಟ್ಟ ಶಚಿಪಂ ೯

ಎಲೆ ಸುರಪ ಲಾಲಿಸೈ ಶರ್ವಶರ್ವಾಣಿಯೊಳ
ಗೊಲಿದು ಕ್ರೀಡೆಯನೆಸಗುತೀ ಜಗತ್ತಿನ ನೆನಹ
ನುಳಿದಕಾರಣ ಲೋಕ ತಲ್ಲಣಿಸುತಿದೆ ಭಯದೊಳೆಲ್ಲರುಂ ನೀವು ಕೂಡಿ
ಸಲೆ ಯೋಚಿಸುತ್ತಭವಕೊಟಕ್ಕೆ ವಿಘ್ನಮಂ
ನೆಲೆಯಾಗಿ ಮಾಡಿದೊಡೆ ಬದುಕುವಿರಿಯಲ್ಲದೊಡೆ
ಲಲಿತಾಂಬಿಕೆಯ ಗರ್ಭದೊಳ್ ಸುತಂ ಜನಿಸೆ ನಿಮ್ಮಯ ಭಂಗಕವಧಿಯುಂಟೆ ೧೦

ಎಂದು ಪೇಳುತ್ತ ನಾರದನೆಯ್ದಿದಂ ಬಳಿಕ
ಬೃಂದಾರಕರ ಕೂಡಿ ದೇವೇಂದ್ರ ಚಿಂತಿಸುತ
ಮುಂದತಿ ಬಲೋಪದ್ರವವನು ಜಯಿಸುಪೆವೆನುತ ಗೋವಿಂದಗರುಪಲಾತಂ
ಎಂದನೆಲೆ ಸುರಪನೆಮ್ಮಯ ಸ್ವಾಮಿ ಕಾಮಿಯ
ಲ್ಲಿಂದುಧರ ಸರ್ವಬೋಧಂ ಜಗದ್ರಕ್ಷಕನು
ಮಂದದಿಂ ಪೂರ್ವಕಂದರ್ಪನಾತನ ವೀರ್ಯದಿಂದೊಗೆದ ಪುತ್ರನೀಗ ೧೧

ತಾರಕನ ಸಂಹರಿಸುವಂ ಗಡಾ ನಿಶ್ಚಯಂ
ಗೌರಿಯುದರದೊಳುದಿಸೆ ನಮ್ಮೆಲ್ಲರಂ ಕೊಲ್ವ
ಮಾರಾರಿಯತ್ಯುಗ್ರತರದ ವೀರ್ಯವನಾನಲಾವ ದಕ್ಷಂ ಸ್ವರ್ಪತಿ
ಆರೈವುದೆಂದಜಾದ್ಯರುಂ ಯೋಚಿಸುತ್ತಲಂ
ಗಾರನಿವಶಕ್ತನುಳಿದರ ಕೈಯಲಾಗದೆಂ
ದಾರೈದು ನಾರಾಯಣಂ ಪೇಳಲೆಲ್ಲರೊಡಬಡಿಸಿದರು ಬಲವಂತದಿಂ ೧೨

ಮರೆಗೊಳ ನೀಂ ಪೋಗಿ ಹರಗಿರಿಜೆಯರ ರತಿಯ
ಹರಿಸಿದೊಡೆ ನಾವೆಲ್ಲರುಳಿವೆವಲ್ಲದೊಡೆಮಗೆ
ಹರಣದಳಿವಲ್ಲದನ್ಯಮದಿಲ್ಲ ಪೋಗೆನಲ್ಕಗ್ನಿಸುರರೆಲ್ಲ ಕೇಳಿ
ಪರಮೇಶನೇಕಾಂತಕೂಟಕ್ಕೆ ನನ್ನ ನೀ
ವಿರದೆ ಪೋಗೆಂಬುದಲ್ತುಲ್ತು ಹರಿ ಕೇಳು ನೀ
ನರಿಯದದನೇ ಧ್ಯಾನ ಮಂತ್ರ ಭೋಜನ ಶಯನ ವಂದನನ ಕ್ರೀಡೆಯೆಡೆಗೆ ೧೩

ಇರದೆ ಪೋಪುದು ನೀತಿಯಲ್ತಾ ಮಹಾಮಾತೆ
ಗಿರಿಜೆಯೊಡಗೂಡಿ ಸರ್ವಜ್ಞನಾನಂದದಿಂ
ದಿರುವೆಡೆಗೆ ಕಳುಪುವುದು ಧರ್ಮವೇ ಕಾಮನಂ ನೀವೆಲ್ಲರತಿಪ್ರೌಢಿಯಿಂ
ಪರಮೇಶನೆಡೆಗಟ್ಟಿದಂತೆ ನಾನೊಲ್ಲೆ ಸ
ರ್ವರ ಪೊರೆವ ಮಾತೆಯಂಬರವನುಳಿದಿರಲು ನಾ
ನಿರದೆ ನೋಡಲ್ ಮಹಾದೋಷಮಹಂದಿದು ಜಗದೊಳತಿ ನಿಕೃಷ್ಟಂ ನಿಂದ್ಯಮುಂ ೧೪

ಪುಲುಮನಂಜರೇಕಾಂತರತಿಕೇಳಿಯೆಡೆಗನ್ಯ
ಘಳಿಲನೈದಲ್ಕವನ ಪ್ರಾಣಕ್ಕೆ ಮುನಿವರಿಂ
ಗಳಗಣ್ಣನೆಡೆಗೆಂತು ಪೋಪೆ ನಾನೊಲ್ಲೆನೆನಲಾಗ ಹರಿ ವಿನಯದಿಂದೆ
ಎಲೆ ವಹ್ನಿಯುತ್ತಮರು ತಾ ಕೆಟ್ಟು ಪರರನಂ
ತುಳುಹುವರು ಪರರ ಕಷ್ಟವೆ ತಮ್ಮದೆಂಬುವರು
ಮಲಹರನ ತನುವಲ್ಲವೇ ನೀನು ಸಂದೇಹಮುಳಿದು ಪೋಪುದು ಧರ್ಮವೈ ೧೫

ಮತ್ತೆ ಕೇಳ್ ಸತಿಸಂಗ ನಿನ್ನಯ ಗುಣಂ ಸರ್ವ
ರತ್ಯಧಿಕ ದೇವದಾನವ ಮಾನವರ್ ಮನೆಯೊ
ಳುತ್ತಮದ ಜ್ಯೋತಿ ಬೆಳಗಿನೊಳು ರಮಿಸುವರು ನೀಂ ಸಾಕ್ಷಿ ಸಕಲರ್ಗೆ ನೋಡೆ
ಬಿತ್ತರದ ಶ್ರುತಿಯಗ್ನಿಮೀಳೇಪುರೋಹಿತಮೆ
ನುತ್ತ ನುತಿಸುವದಲಾ ವಹ್ನಿಯೇ ನೀಂ ಸಟೆಯೆ
ಚಿತ್ತಜಾಂತಕನೆಡೆಗೆ ಪೋಗು ಸಂಶಯಮುಳಿವುತೆಂದು ನಾನಾವಿಧದೊಳು ೧೬

ಬೋಧಿಸುತ್ತನಿಬರುಂ ಸ್ತುತಿಸಿ ನಾನಾತೆರದೊ
ಳಾದಿದೇವನ ಬಳಿಗೆ ಪೋಪುದೆಂದೆಲ್ಲರುಂ
ಪಾದಕ್ಕೆ ನಮಿಸಲಂಗಾರಕಂ ಹರಿಮುಖರ್ಗೆರಗಿಯೊಡಬಡುತ ಮುಂದೆ

ಮಾದೇವನಿರ್ಪಮಳಮಂದರಾಚಲಕೈದಿ
ಮೋದದಿಂ ಪ್ರಮಥಾಳಿಯಿಂದಲೋಲೈಸಿಕೊ
ಳ್ವಾದಿಪರಮೇಶನವತಾರ ನಂದೀಶ್ವರನ ಕಾಣುತ್ತ ಭೀತಿಯಿಂದ ೧೭

ಮನದೊಳ್ ನಮಸ್ಕರಿಸುತೀಕ್ಷಿಸಂತೆಯಗ್ನಿ ಈ
ಘನನಂದಿ ಸಭೆಯು ನಾನೆಂತು ಕಳಿವೆನಂ ದೇವ
ಚಿನುಮಯಾತ್ಮಕನಪ್ಪ ನಂದೀಶನಾಣತೆಯನುಳಿದೆಂತು ಪೋಪೆನಹಹ
ಎನುತ ಚಿಂತಿಸುತಿರಲ್ಕಗಜಾತೆ ನೇತ್ರಮನ
ಕನುವಿನಿಂ ಪರಿತುಷ್ಟಿ ಈವುತ್ತೆ ಖಗಕುಲಂ
ಘನಮಾರ್ಗದೊಳ್ ಮೆರೆಯುಲಗ್ನಿ ತಾಂ ಹಂಸೆಯಾಕಾರವಾಗೊಳಪೊಗಂತ್ತ ೧೮

ನಂದೀಶ್ವರಂ ಕಾಯ್ವ ಬಾಗಿಲಂ ದಾಂಟಿ ಶುಚಿ
ಸಂದೇಹಮುಳಿದುಪೋಗುತ್ತಿರಲ್ ಗಿರಿಜೆಯಡ
ರ್ವಂದದ ಮಹಾಸಿಂಹ ಮತ್ತೋರ್ವ ದೇವದಾನವರು ಪೊಗದಂತೆ ಪ್ರಳಯಂ
ಪೊಂದಿದ ಮಹಾಸಿಡಿಲ ರವದಂತೆ ಶರಧಿಗಳ
ಮುಂದಾಗಿ ಪೀರ್ವ ಬಡಬಾನಲನ ರಭಸದೊಲ್
ಸಂದಣಿಸಿ ಗರ್ಜಿಸುತ್ತಿರಲು ವೈಶ್ವಾನರಂ ಮರಳ್ದನತಿಭೀಕರದೊಳು ೧೯

ಓಡಿಬರ್ಪನೆಲನಂ ಕಾಣುತ್ತ ಹರಿಯಜರ್
ಮಾಡಿದತಿಹರುಷದಿಂದಿದಿರ್ವಂದು ವಹ್ನಿ ನೀಂ
ಮಾಡಿದತಿಕಾರ್ಯಮಂ ಬೆಸಸೆನಲ್ ನಂದೀಶನಿರ್ಪ ದ್ವಾರವನು ಕಳಿದು
ರೂಢಿಯಿಂದೊಳಪೊಕ್ಕು ಪೊಗುತಿರಲ್ ಘನಸಿಂಹ
ದಾಡಂಬರಂ ಬೆರೆದ ದನಿಗೇಳಿ ಭೀತಿಯಿಂ
ದಾಡಲೇಂ ಪುಲ್ಪುಟ್ಟದಂತೋಡಿಬಂದೆ ಶಿವನಂ ಕಂಡುದಿಲ್ಲವೆನಲು ೨೦

ಎಂಬ ನುಡಿಯಂ ಕೇಳಿ ಚಿಂತಿಸುತ ವಿಷ್ಣುಸ್ವ
ಯಂಭು ಮುಂತಾದವರು ಯೋಚಿಸುತ ಮುಂದಣುರೆ
ಬೆಂಬಳಿಯ ಕಾರ್ಯವೊಂದಿಲ್ಲ ಸರ್ವರುಂಪೋಗಿ ನುತಿಸಲೆಂದನುಗೈಯುತ
ಶಂಭುಶಂಕರನಿರ್ಪ ಮಂದರಾಚಲಕೈದಿ
ಯಂಬಿಕಾಪತಿಯ ಸ್ತೋತ್ರವ ಮಾಡತೊಡಗಿದರು
ಕಂಬುಧರನಂಬುಜೋದ್ಭವನಿಂದ ಮೊದಲಾದ ಸುರರು ಸಂಭ್ರಮದಿಂದಲು ೨೧

ಶರಣ್ಯೈ ಶರಣ್ಯಾಯತೇ ವರೇಣ್ಯಾಯತೇ
ದುರಿತ ದೂರಾಯತೇ ವರವಿಹಾರಾಯತೇ
ಕರುಣಾಕರಾಯತೇ ಕಾಲಕಾಲಾಯತೇ ಭೂಯೋ ನಮೋಸ್ತು ಎಂದು
ಭರದಿಂದ ಸ್ತುತಿಸಂತಿರೆ ಸಾಂಬನಾಕ್ಷಣವವ
ಗರ್ುರುತರದ ಪ್ರೀತಿಯಿಂದಂ ಪ್ರಸನ್ನನುಮಾಗಿ
ವರವಾವುದೈಯ ನಿಮ್ಮೆಲ್ಲರ ಮನೋಭೀಷ್ಟಮಂ ಕೊಡುವೆನೆನಲು ನಲಿದು ೨೨

ದೇವ ಬಿನ್ನಪವನವಧರಿಸುವುದು ಜೀಯಂ ಕೇಳ್
ದೇವಿಯರ ಗರ್ಭದೊಳ್ ಸುಕುಮಾರನುದಿಸದೋ
ಲೀ ವರವನಿತ್ತು ರಕ್ಷಿಸಬೇಹುದನಲಾ ವಿಚಾರವಮಂ ಕೇಳ್ದಭವನು
ದೇವಸಾಹಸ್ರಾಬ್ದಪರಿಯಂತ ಕ್ರೀಡಿಸಿಯೆ
ತೀವಿರ್ದ ರೇತಸ್ಸನೀಗ ಪೊರಗಿಡಲಾಗಿ
ನೀವೆಲ್ಲರದರಿಂದ ಮೃತವಪ್ಪಿರೆಂದು ಶಂಕರ ನಿರವಿಸಲ್ಕೆ ಸುರರು ೨೩

ಕಟಕಟಾಯೆಂದು ಮರುಗುತ್ತ ಬಿದಿಹರಿಗಳು
ತ್ಕಟದ ರೇತಸ್ಸಿನುತ್ಪಾತಭಯದಿಂದಿರಲ್
ಕುಟಿಲನಾರದನೆಯ್ದಿ ಎಲೆಪಾಪಿಗಳಿರ ಚಿಂತಿಸಬೇಡ ಗಿರಿಜೆಯಲ್ಲಿ
ದಿಟವಾಗಿ ಸುತನುದಿಸೆ ಸರ್ವಲೋಕಂಗಳಂ
ತೃಟಿಮಾತ್ರದೊಳ್ ಹರಿಪ ನಿಶ್ಚಯಮೆನಲ್ ಸುರರು
ನಿಟಿಲಲೋಚನನೆಯಾ ಉಭಯಸಂಕಟಕಾರೆವೆಂದು ಕಂಪಿಸುತನಿಬರು ೨೪

ಅತಿಚಿಂತೆಯಿಂದೆ ನಾವೆಲ್ಲರಂಳಿವಂದದಾ
ಜತನಮಂ ಕಾಣೆವೇಳೆಂದಂ ಯೋಚಿಸಿ ಶಂಭು
ವತಿಶಯದ ವೀರ್ಯಮೆಲ್ಲರ ಸುಟ್ಟು ಕರಿಮುರಿಯ ಮಾಳ್ಪುದಿದ ಕೊಳಲೆಂತುಟೊ
ಚತುರಾಸ್ಯಮುಂತಾದವರ್ ಪಲುಂಬುತಮಿರಲು
ನುತಜಾತವೇದನೆಂದಂ ಮಹಾಶಿವವೀರ್ಯ
ಮತಿಹರುಷದಿಂ ಕೊಳ್ವೆ ನೀವಂಜಬೇಡೆಂದ[ನ]ಮರರಂ ಸಂತವಿಸಲು ೨೫

ಆಸೆನುತ್ತಾಗಗ್ನಿಯಂ ಮುಂದುಮಾಡಿಯು
ಲ್ಲಾಸದಿಂ ಸುರರೆಲ್ಲ ಪಿಂದಿರಲ್ ವಹ್ನಿ ಸ
ರ್ವೇಶಂಗೆ ನಮಿಸಿ ಬಿನ್ನಪ ಜೀಯ ಸುರರ ಸಂತಾನಕ್ಕೆ ಬೇರೆ ಬೇರೆ

ಪೋಷಿಸಲ್ ಕಾರಣಮದಿಲ್ಲೊರ್ವ ನನಗಮಳ
ಭಾಸುರದ ವೀರ್ಯಭಿಕ್ಷೆಯಂ ನೀಡಬಹುದೆನು
ತ್ತಾ ಸರ್ವಗತನಪ್ಪ ಶಿವನ ಮುಂದೆಸೆಯೊಳಾಗಗ್ನಿ ಬಗಸೆಯನೊಡ್ಡಲು     ೨೬

ಗಿರಿಜೆಯೊಳ್ ದಿವ್ಯಸಾಹಸ್ರಾಬ್ದಪರ್ಯಂತ
ಭರಿತ ಕ್ರೀಡಾನಂದದಿಂದಿರ್ಪ ನಿಶ್ಶಂಕ
ಚರಿತ ತನ್ನಯ ಲಿಂಗಮಂ ತೆಗೆಯಲದು ಬಾಲಸೂರ್ಯಬಿಂಬದೊಲೆಸೆವುತ
ನಿರತ ಚಂದ್ರಾಭದಂತೊಪ್ಪುವಾ ಬೀಜಮ
ನ್ನಿರದೆ ಬಿಡಲಾಗ ವೈಶ್ವಾನರಂ ಮನದಣಿಯ
ಲರರೆ ಕೊಂಡದರ ಉರಿಗಾರದವ ಪಾತಾಳಸಪ್ತಸಾಗರದೊಳಾಳ್ದಂ     ೨೭

ಎಲೆ ದೇವಿ ನಿನ್ನುದರದೊಳು ಸುತನ ಜನಿಸದೊಲ್
ನೆಲೆಯಾಗಿ ಹರ್ಯಜಾದ್ಯರು ವರವ ಪಡೆದರೆನೆ
ಬಳಲಿಯಾ ಕ್ಲೇಶದಿಂದೆಂದಳಗಜಾತೆ ನಿರ್ಮಳಶಿವನ ಕೂಟದಿಂದ
ಚಲುವ ಕುವರನ ಪಡೆದು ಬಲುಮೋಹದಿಂದಲಾ
ನೊಲಿದು ಭುಲ್ಲವಿಸಿ ಮುದ್ದಿಸಿ ಮನದ ಪ್ರೀತಿಯಂ
ಸಲಿಸಲೆಂದಿರ್ದೆನಿದ ಕೆಡಿಸಿದ ಮಹಾಪತಿದ್ರೋಹಿಗಳ  ಪಾಪಕೆಣೆಯೆ     ೨೮

ಎನುತಗಜೆ ಘುಡುಘುಡಿಸಂತಜ ಹರಿ ಸುರೇಂದ್ರರ್ಗೆ
ಕನಲಿ ನುಡಿದಳು ಪಾಪಿ ದ್ರೋಹಿಗಳಿರಾ ನಿಮ್ಮ
ಮನಕೆ ಸಂತಸಮಾಯ್ತೆ ನಿಮ್ಮೊಡಲೊಳೆಂದೆಂದಿಗುಂ ಮಕ್ಕಳಾಗಬೇಡ
ಅನಿಬರಬಲೆಯರು ಬಂಜೆಯರಾಗಲೆಂದು ಶಿವೆ
ಮನಕೆ ಬಂದಂತೆ ಶಾಪವನೀಯೆ ಸುರರೆಲ್ಲ
ವಿನಯದಿಂ ಬೇಡಲಾಗಧ್ವರದ ಮಂತ್ರದಿಂ ಸುತರು ನಿಮಗಕ್ಕೆಂದಳು     ೨೯

ಭ್ರಮೆಗೊಂಡು ಮೂರ್ಛೆಯಿಂ ಬಿಳ್ದೇಳುತಿರಲದಂ
ಸುಮನಸರು ಕಂಡುಗುಳು ನಾವೆಲ್ಲರುಂ ಕೊಂಬೆ
ವಮಕಮಂ ಎನಲಗ್ನಿಯುದ್ಗಾರಿಸಲ್ ಸುರರು ಸೇವಿಸುತ್ತಿಮುದದೊಳು
ಪ್ರಮದೆಯರ ತೆರದಿ ಗರ್ಭಿಣಿಯರಾಗತಿನೊಂದು
ತಮತಮಗೆ ಗಡ್ಡ ಮಿಸೆಗಳುದುರಿ [1]ಬಿ[1]ಳ್ಪಾಗಿ
ದಮದೊಳೈವತ್ತೆಂಟು ಸಾವಿರಾಬ್ದಂ ಬಳಲಿ ಬೆಂಡಾಗಿ ದಿಂಡುಗೆಡೆದು     ೩೦

---

1 ಬಾ (ಗ)

ಕೆಟ್ಟೆವಕಟಕಟಯಿಾ ಹೊಟ್ಟೆಯ ಮಂಹಾಬಾಧೆ
ಯಟ್ಟಿ ಸದೆವುತ್ತಲಿದೆ ಆರೆವಯ್ಯಯ್ಯೊ ಶಿವ
ನೆಟ್ಟನೆಪಹಾಸ್ಯಕೀಡಾದೆವಸುರರು ನಗರೆ ನರರು ಭಜಿಸುವರೆ ನಮ್ಮ
ಹೊಟ್ಟೆಗಳು ಬಿರಿವುತಿವೆ ಹೆರಂಪವೇ ತಾವಿಲ್ಲ
ಕೆಟ್ಟ ಕೇಡಿಂಗೆ ಕಡೆಯಿಲ್ಲ ನಮ್ಮೆಲ್ಲರಂ
ನಷ್ಟವಂ ಮಾಡುವೊಡೆ ಬಂದುದಿದ ಪರಿಹರಿಸು ಶಿವನುಧೋ [1]ಮೊ[1]ರೆಯೆನಲ್ಕೆ ೩೧

ಸುರರ ಮೊರೆಯಂ ಕೇಳಿ ಶಂಕರಂ ನಸುನಗುತ
ಮುರವೈರಿ ಮುಂಖ್ಯರೆಲ್ಲರು ಕೇಳಿ ದೇವಿಯರ
ವರಗರ್ಭದೊಳ್ ಕುವರನಂದಿಸದೊಲ್ ವರವಪಡೆದಿರಿಯದರಿನಿಂದೆ ನಿಮಗೆ
ಬರಬಾರದತಿಬಾಧೆ ಬಂದಿತ್ತು ಅಂಜದಿರಿ
ಪರಿಹರವ ಮಾಳ್ಪೆವಾ ಮೇರುವಿನ ಬಡಗಲೊಳ್
ಶರದಾವವೆಂಬ ವನಮದರೊಳಗೆ ಕಾರಣದ ಶರವಣ ಕೊಳಂ ಮೆರೆವುದು ೩೨

ಅಲ್ಲಿಗೈದುತ ವಹ್ನಿಮುಖರಗ್ನಿ ಮುಖ್ಯರುರೆ
ನಿಲ್ಲದೆಮ್ಮಾತ್ಮಧಾತುವಿನುಪದ್ರವವನೀ
ವೆಲ್ಲರುದ್ಗಾರಿಸುತ ಕಳೆಯಿರೆನೆಯೆಯ್ದಿ ವಮನವ ಮಾಡಲಾ ಶುಕ್ಲವು
ಮೆಲ್ಲನೊಬ್ಬುಳಿಯಾಗಿ ಕನಕಪ್ರಭೆಯೊಲ್ ಬೆಳಗು
ತೆಲ್ಲ ತರುಗಿರಿ ಮೇರುಂಗುಲ್ಮತೃಣ ಖಗಮೃಗಗ
ಳಲ್ಲಲ್ಲಿ ಮೆರೆವ ನಿಜವರ್ಣಮಂ ಕೆಡಿಸಿ ಕನಕಪ್ರಭೆಯನಾಗಿತ್ತುದು ೩೩

ಕಂತುರಿಪುವೀರ್ಯಮೇ ಸರ್ವಮಂ ಮುಸುಕುತ್ತ
ನಂತಪ್ರಭೆಯಿಂ ಬೆಳಗುತಿರೆ ಸುರರ ಬಾಧೆಯಂ
ಅಂತಕಾಂತಕ ಬಿಡಿಸಲೆಂದು ಪಿಂಗಳನೆಂಬ ಗಣಪನಂ ಕಾಪಿಡಲ್ಕೆ
ಕಂತುಂಗುರು ಮುಖ್ಯರಾ ಬಾಧೆಯಂ ನೀಗಿ ನಿ
ಶ್ಚಿಂತೆಯಿಂದಿರೆಯಗ್ನಿ ಮೊದಲೆ ಶಿವವೀರ್ಯ ಬೃಂ
ದಂ ತಳುವದೇ ಕೊಂಡಕಾರಣಂ ಕಾರಿದೊಡೆಯವಗೆ ಕೋಟಲೆ ಬಿಡದಿರೆ ೩೪

ಹರಿಮುಂಖ್ಯನಿರ್ಜರವ್ರಾತ ಪಾತಕರಿರಾ
ಹರವೀರ್ಯದಂತ್ಪಾತವಮಂ ನೀಗಿ ನೀವೆಲ್ಲ
ಪರಿಣತೆಯೊಳಿಹಿರಿ ನಾನಿಂತು ದುಃಖಂಬಡುವುದೇಂ ಲೇಸೆ ನಿಮಗೆಂದೆನೆ

1 ಮೆ (ಗ)

ಹರಿಯೆಂ ನೀ ನಮ್ಮೆಲ್ಲರೋಸುಗಂ ದುಃಖಿವಂ
ನಿರುತವನನುಭವಿಸಿದ್ಯೆ ನಿನಗೊಂದುಪಾಯವಂ
ನಿರವಿಸಿದೆನೆನುತ ನಾರಾಯಣಂ ಪೇಳ್ದನಾ ಸಪ್ತಋಷಿಗಳ ಪೆಂಡಿರು ೩೫

ಬರುತಲವರಿಗೆ ನದಿಯ ತೀರಕ್ಕೆ ನೀನಲ್ಲಿ
ಗಿರದೆಯ್ದಿ ನಿಜತೇಜದಿಂದುರಿವುತಿರೆಯವರು
ವಿರಸದಿಂ ಹಿಮರುತುವಿನುರೆ ಶೀತಕಳ್ಕಿ ನಿನ್ನಂ ಸೋಂಕಲವರ್ಗೆ ಗರ್ಭಂ
ಧರಿಸಲ್ಪಡುವದು ಕೇಳಾಗ ನಿನ್ನಯ ಬಾಧೆ
ನಿರುತ ಪಿಂಗುವದೆನಲ್ ಪೋಗುತಾ ವಹ್ನಿಯಾ
ತೆರದಿಂದ ಧಗಧಗನೆಯುರಿಯುತಿರೆಯಲ್ಲಿಗೈತಂದರಾ ಸತಿಯರೊಲವಿಂ ೩೬

ಪಿಂಡುಹಿಮಕಳ್ಕುತ್ತ ಕೆಂಡಮಂ ಕಾಯಲೆಂ
ದಂಡಲೆವುತೊರ್ವರೊರ್ವರ್ಗೆ ಪೇಳಲ್ಕವರ
ದಂಡಿಸಿಯರುಂಧತಿಯು ನುಡಿದಳೀಯಗ್ನಿಪತಿ ಸೇವೆಗೋಸುಗ ಸೇರಲು
ಕಂಡು ತರಲುಂ ಯೋಗ್ಯನಲ್ಲದಾತ್ಮಾರ್ಥಕ್ಕೆ
ಮಂಡಿಸಿರಲಾಗದೀತನ ಸಮೀಪದೊಳೀತ
ಗಂಡಲಾ ಪರಪೆಂಡಿರಿಂಗೀತ ಸಂಸರ್ಗಯೋಗ್ಯವೇ ಬೇಡವೆನಲು ೩೭

ಮತಿಯಿಂದರುಂಧತಿಯ ನುಡಿಗೇಳದೆಂದರಂ
ನ್ನತಿಯಿಂದಲೀ ವಹ್ನಿಯೇನಾದೊಡೇ ಸುಟ್ಟು
ವಿಂತಮಾದ ನಿನ್ನ ಮನೆಯಗ್ನಿ ಸುಡದೇ ಇನ್ನು ಕೌತುಕವೆ ಪೋಗೆನಲ್ಕೆ
ಪತಿವ್ರತೆಯುವರ್ಕಳೊಡನಾಡದೇ ತಾನು ಸೈ
ಕತಘಟದಿ ನೀರ್ದುಂಬಿ ಹಾವಿನುರೆ ಸಿಂಬಿಯಂ
ರತಿಯಿಂದ ಮಾಡಿ ಮಂಡೆಯೊಳಾಂತು ಮನೆಗೆಯ್ದಿ ಪುರುಷಭಕ್ತಿಯೊಳಿರಲ್ಕೆ ೩

ಇತ್ತಲ[1]ವರುಂ[1] ಬೆಂಕಿಯಂ ಕಾಸುತಿರೆ ವಹ್ನಿ
ತತ್ತರುಣಿಯರ ಲಜ್ಜೆಬೀಡುಗಳ ಒಳಪೊಗ
ಲ್ಕುತ್ತಮೆಯರದನರಿಯದೆಂದಿನೊಲ್ ಸೈಕತಘಟಗಳೆಸಗಲವುವೊಡೆಯಲು
ಮತ್ತೆ ಮಂಜಿನ ನೀರು ಮಾಗದಿರೆ ಸರ್ಪಗಳ
ಬಿತ್ತರದ ಸಿಂಬಿಗಳನೆಸಗೆ ಭುಸ್ಸೆಂದು ತಾ
ವತ್ಯಂತಕೋಪದಿಂ ಕಡಿಯಬರೆ ನಾಣ್ಚುತಾಶ್ರಮಕ್ಕೈದೆ ಪತಿಗಳವರ ೩೯

1 ರು (ಕಗ)

ಸತಿಗಳಿರ ನೀವೀ ವಸಿಷ್ಠನರ್ಧಾಂಗಿಯೊಲ್
ಪತಿವ್ರತವನುಳಿದು ಪಾಣ್ಬೆಯರಾದಿರೆಂದವರ
ಪತಿಗಳ್ ಮರೀಚ್ಯಾದಿ ಮುನಿಗಳಾ ಸತಿಯರಟ್ಟಲ್ ತಿರಿಗಿ ಬರುತಲವರು
ಮತಿಗೆಟ್ಟು ಗರ್ಭಿಣಿಯರಾಗಲಗ್ನಿಯ ಮಹೋ
ನ್ನತಭಾರದುರಿ ಪಿಂಗಿ ಸುಖದೊಳಿರ್ದಂ ಸತಿಯ
ರತಿನೊಂದು ಪಾರ್ವತೀಪದಾಬ್ಜಮಂ ಕುರಿತು ಬಂದೆರಗಿ ನಿಲಲು ದೇವಿ ೪೦

ನೀವಾರುಂ ಬಂದ ಕಜ್ಜಂ ಪೇಳೆನಲ್ಕವರು
ಸಾವಧಾನದೊಳು ಬಿನ್ನಹ ಜಗನ್ಮಾತೆಯೆಂ
ದಾ ವಿವಿಧಪೂರ್ವವೃತ್ತಾಂತಮಂ ಬಿನ್ನವಿಸಲಂಜದಿರಿ ಶಶಿಮುಖಿಯರು
ದೇವರ್ಕಳಭವವೀರ್ಯಗ್ರಹೋಪದ್ರವಂ
ತೀವಿ ಬಾಧಿಸಲು ಶರವಣದೊಳುದ್ಗಾರಿಸ
ಲ್ಕಾ ವೀರ್ಯದುರಿಯಿಂಗ ಗರ್ಭವಾದುದು ನೀವು ಶರವಣಕೆ ಪೋಗಿ ಬೇಗ ೪೧

ಸೀಳುತ್ತ ಪೊಡೆಗಳೊಳಗೊದವಿರ್ದ ಬೀಜಮಂ
ಮೇಲೊಂದುಗೂಡಲಾಗುದಿಸಿದೆನ್ನಯ ಸುತಂ
ಗಾಳುವತಿಮೋಹದಿಂ ಮೊಲೆಗೊಟ್ಟು ಸಲಹಿರೆಂದಪ್ಪಣೆಯನೀಯೆ ಗಿರಿಜೆ
ಪೇಳಿದಂದದೊಳಾರು ಪೆಣ್ಗಳಾ ವೀರ್ಯಮಂ
ತೊಳದಿಂ ತೆಗೆದೊಂದುಮಾಡಿ ಪೊಂಗೋವೆಯೊಳ್
ಪೇಳಲೇನೆಂಟು ಪಿಂಗಳ ಕಾಯ್ವ ವೀರ್ಯದೊಳ್ ಬೈ[1]ಚಿ[1]ಟ್ಟರಬಲಾಜನಂ ೪೨

ಮಡಗಲಾ ವೀರ್ಯ ಸಾಹಸ್ರಾಬ್ದಪರ್ಯಂತ
ದೃಢಮಾಗಿ ಗೆಣಸಿನಂದದೊಲೆಸೆಯಲಾಗ ಕಂ
ಡೊಡನೆ ಸ್ಕಂದಾಹ್ವಯಂ ಬಂದುದಾ ಮೇಲೆ ತಲೆಯಾರು ತನುವೊಂದಾಗಲು
ಬಿಡದೆ ಷಣ್ಮುಖನೆಂದು ಪೆಸರಿಟ್ಟರಾಗ ಸುರ
ರೊಡನೆ ಕೃತ್ತಿಕೆಯರಾತ್ಮಸ್ತನ್ಯಮಂ ಕೊಟ್ಟು
ತಡಹಿ ಸಲಹಲ್ ಕಾರ್ತಿಕೇಯನೆಂದಾಗ ನಾಮಂ ಬಂದುದೆಲೆ ಮುನಿವರ ೪೩

ಕೃತ್ತಿಕೆಯರನುರಾಗದಿಂದ ಮೊಲೆಗಳ ಕೊಡಲ್
ತತ್ತರುಣಿಯರ ಮುಂದಲೆಗಳ ಪಿಡಿದೇಳುತ್ತ
ಮತ್ತಗಜಗಮನೆಯರ ಮುಖಗಳಂ ನೋಡಿ ಕಿಲಿಕಿಲಿಯೆಂದು ನಗುತಳಲ್ಕೆ

---

1 ತಿ (ಕ)

ತೆತ್ತೀಸಕೋಟಿದೇವತೆಗಳು ಭಯಂಗೊಂಡ
ರುತ್ತಮಾಚಲಗಳುಂ ನಡುಗಿದವು ದಿಗ್ಗಜಂ
ಗೊತ್ತುಗಳನುಳಿದು ಮೂರ್ಛಿತವಾದವಷ್ಟಕುಲಸರ್ಪಂಗಳಳಿದವರರೆ ೪೪

ಹರಬೀಜಮಗ್ನಿಯೊಡಲೊಳ್ ಪ್ರವೇಶಿಸಿಯುಂದಿಸ
ಲುರೆಯುಗ್ನಿಭೂವೆನಿಪ ನಾಮಮುಂಟೆನಿಸಿದುದು
ಸುರರ ಸಂಬಂಧದಿಂ ಬಾಹುಲೇಯಾಭಿಧಾನಂ ಬಂದುದೆಂತಾದುದು
ಶರವಣಭವಾಖ್ಯೆ ಹೃದವಮಧ್ಯಗುಹೆಯಲಿ ಬಳೆದ
ಪರಿಯಿಂ ಗುಹಾಹ್ವಯಂ ಸಕಲಭುವನಗಳಿಗೀ
ಶ್ವರನಾದ ಪರಮೇಶ್ವರನ ಪುತ್ರನಾದಕಾರಣ ಕುಮಾರಾಂಕಮಾಯ್ತು ೪೫

ಗಿರಿಜೆಯ ನಿಮಿತ್ತದಿಂ ಪಾರ್ವತೇಯಾಂಕನಂ
ಪರಮಗಂಗೆಯೊಳುದಿಸಲಾಗಿ ಗಾಂಗೇಯನೆಂ
ಬುರುನಾಮ ಮುಂತಾದ ನಾಮಗಳ ಧರಿಸಿ ದಿವ್ಯಪ್ರಕಾಶದ ಕುವರನಂ
ನೆರೆನೋಡಿ ಪಿಂಗಳಗಣೇಶ್ವರಂ ಬಂದಾಗ
ಹರನಡಿಗೆ ಬಿನ್ನವಿಸಿದಂ ಮಹೋತ್ಸವ ದೇವ
ನಿರತ ನಿಮ್ಮಾಜ್ಞೆಯಿಂ ಕಾಯ್ದಿರ್ದೆ ಹರಪುತ್ರನಂದಿಸಿದಂ ದೇವ ನಿನಗೆ ೪೬

ಹೊಳೆವಾರು ಮೊಗಗಳೀರಾರುಭುಜ ಪನ್ನೆರಡು
ನಳನಳಿಪ ಕಣ್ಗಳೊಂದಾಗಿ ಪನ್ನೆರಡುಕೈ
ಗಳ ಪಡೆದ ಕಲ್ಪಾರ್ಕರಂತೆಸೆವ ಕಾಂತಿಯಿಂ ದೆಸೆದೆಸೆಗಳಂ ಬೆಳಗುತ
ಕಳಕಳಿಪ ನಿನ್ನ ಮಗನಂ ನೋಡ ತಕ್ಕುದೆನೆ
ಪುಳಕಾಂಕುರಂ ತೋರಲಾಗ[ಲಾ] ದೇವಿಯಂರ
ನಳಿನಾಸ್ಯಮಂ ನೋಡಿ ದೇವಿಯೇ ಕೇಳು ನಿನ್ನಯ ಮನೋಭೀಷ್ಟದಣುಗಂ ೪೭

ಉದಯವಾಗಿರ್ದಪಂ ಚಾರುಷಡ್ವದನದಿಂ
ಮದನಾಗಮನೆ ನೋಡುವೋಡೀಗ ನಡೆಯೆನಲ್
ಸದಮಲಾಂಬಿಕೆ ಕೇಳಿ ಗದ್ಗದಂ ಮಾಡಿಯಾನಂದಾಬ್ಧಿಯೊಳಗಾಳಂತ
ಮದನಾರಿ ತಳುವೇಕೆನುತ್ತ ನದಿಯನಡ
ರ್ದೊದವಿದಗಣಿತ ವೈಭವಂವೆರಸಿ ಬರುತಾಗ
ಪದುಂಳದಿಂದಾ ಸುತನ ಸತ್ಪ್ರಭೆಯ ಕಾಣುತ ಶಿವಂ ಶಿವಗೆ ಕೈಸನ್ನೆ[1][ಯಿಂ][1] ೪೮

---

1 ಯಿಂದ (ಕಗ)

ತೋರಿಯತ್ಯಂತಹರಂಪದೊಳೆತ್ತಿ ಮುಂಡಾಡಿ
ನಾರಿ ಪಾರ್ವತಿಯು ಕರಕಿತ್ತೊಡಾನಂದರಸ
ಮಿಾರಿ ಸರ್ವಾಂಗದೊಳ್ ಘರ್ಮಾಂಬು ಉಣ್ಮುತಿರೆ ತೊಡೆಯಮೇಲತಿಮುಂದದೊಳು
ನೀರನಹ ಸುಕುಮಾರನರುಣಾಧರೋಷ್ಠಮ
ನ್ನಾರೈದು ಪಿಡಿದು ಲಲ್ಲೈಸಿ ಚುಂಬಿಸುತ ಮನ
ವಾರೆ ಮೊಲೆಗೊಡುತ ಜೋಗುಳೆಯ ಪಾಡುತ ದೃಷ್ಟಿಕಪ್ಪಿಡುತ ಗಲ್ಲದೆಡೆಗೆ ೪೯

ಇಡುತ ಕ್ಷೀರಾಕಾರ ಮಣಿಗಳಂದುಗೆಗಳಂ
ಬಿಡದೊಡನೆ ನವರತ್ನವಂಕುಟಮಾಗಾಯ್ಗಳಂ
ಜಡಿ[ವ]ವಲೆ ವಳತೋಳಬಂದಿ ತಾಯಿತೆ ಹೊನ್ನಹುಲಿಯುಗುರು ಮೊದಲಾಗಿಹ
ಒಡವೆಗಳ ಧರಿಸಿ ಚಪ್ಪಳೆಯಿಕ್ಕಿ ಕರುಣಿಸುತ
ನಡಸಿ ಸರಸವನಾಡಿ ಚಿವುರಿಬಡಿಸುತ ಮುಸುಡ
ಮೃಡನ ಕೈಯೊಳಗಿತ್ತು ಮರಳಿ ಕೈಕೊಳುತಿಂತು ಸಲಹುತಿರ್ದರು ಕುವರನಂ ೫೦

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರ ಮಂಜುಳಸುಪುಂಜರಂಜಿತ ಪುರಾತನ ವಚನಸಮ್ಮತವಹ
ಅತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡಲೆಂಟನೆಯಸಂಧಿ ಸಂಪೂರ್ಣವಾಯ್ತು ೫೧

# ಒಂಬತ್ತನೆಯ ಸಂಧಿ

ಸೂಚನೆ :

ಬಾಲಲೀಲೆಯ ನಟಿಸಿ ಈಲೋಕವಲ್ಲಭನ
ಮೇಲೆ ಬಯಸುತ್ತಿರ್ದ ಸೇನಾನಿಯಾಗಿ ಸುರ
ಜಾಲಾರಿಯಾದ ತಾರಕನ ಸಂಹರಿಸಿದಂ ಸ್ಕಂದನತ್ಯುತ್ಸಾಹದಿಂ

ಶ್ರೀಶಾಜನಾಕೇಶ ನಿರ್ಜರಶಿರೋಮಕುಟ
ಭಾಸುರಪ್ರತಿಬಿಂಬರಂಜಿತಪದದ್ವಂದ್ವ
ಮಾಸಹೋದರ ಕಲಾಮಂಡನ ಮಹಾಸುರಜ್ಯೇಷ್ಠ ಮದವಿಧ್ವಂಸನ
ಶೇಷಕೃತತಲ್ಪ ಸುಕಳತ್ರ ಮಧುಮಿತ್ರ ಪ್ರ
ಣಾಶನದಿವಾಕರ ನಿಶಾಕರಾನಲನೇತ್ರ
ವಾಸವಾದ್ಯಖಿಳಸುರಮಾಲಾವಿಭೂಷ್ಯಪದ ಚೆನ್ನಮಲ್ಲೇಶ ಪಾಹಿ ೧

ಮೃಡನ ಎರಡನೆಯ ಅವತಾರ ಬಸವೇಶ್ವರಂ
ಗೆಡವಿಡದೆ ಪರಮಾಪ್ತನಾಗಿ ವೀಳ್ಯವ ಕೊಡುತ
ಎಡೆಯೊಳಿರೆ ಬಿಜ್ಜಳಂ ಹನುಮಂತಗಂಗಳದಿ ವಾಲಾಗ್ರದಿಂ ತರುತ್ತ
ಬಡನಿಧಿಯು ಕಟ್ಟಿದ ಮಹಾಚೋದ್ಯವೆನ್ನಲಾ
ಗೊಡನಂಗುರ್ಗೋನೆಯಿಂದ ಕೊಡಗಿರಿಯ ತೋರೆ ನೃಪ
ನಡನಡುಗಿ ಭೀತಿಯಂ ಬಿಡಿಸಿ ಸರ್ವರ ಪೊರೆದ ಹಡಪದಪ್ಪಣ್ಣ ಸಲಹ ೨

ಇತ್ತಲೈದನೆಯ ದಿನದೊಳ್ ದಾನಮೆಸಗುತ್ತ
ಲತ್ಯಧಿಕವಿಧಿಗಳಂ ತೀರ್ಚಿ ಕುವರಂ ತನ್ನ
ಚಿತ್ತಕನಂಕೂಲವಹ ತೆರದಿ ಸಚರಾಚರದೊಳಂ ಚರಿಸ ಕಲಿವನಾಗ
ಚಿತ್ತಜಾರಿಯ ಸುತಂ ಗಿರಿಗಳಂಬರಕಿಡುತ
ಮತ್ತೆ ಬೀಳದ ಹಾಂಗೆ ಗಿರಿಗಳಂ ಕಿತ್ತಿಟ್ಟು
ತುತ್ತುಮೂರನೆ ಮಾಡಿ ಮುಃಪೆಂದು ಉರುಹೆ ಬ್ರಹ್ಮಾಂಡರಜಮಂ ಶೀವುತ ೩

ಹರಿಯಬ್ಜೇಂದ್ರಾಮರರ ಸುರರ ನರನಾ[1]ಕ[1]ರ್ಕ
ಳುರುಸಿದ್ಧ ಸಾಧ್ಯ ಚಾರಣ ಯಕ್ಷ ಗಂಧರ್ವ
ಗರುಡಾದ್ಯನೇಕ ಜೀವರ ಕಣ್ಗಳೊಳ್ ರಜಂ ಪೂರಿಸಲ್ಕಳಲಂ ನಗುತಂ
ಸರಸದಿಂ ಬ್ರಹ್ಮರಂ ಜುಟ್ಟುಗಂಟಿಕ್ಕರರೆ
ತಿರುಹಿ ದಿಟಕಿಡುತ ಸೂರ್ಯರಂ ಮಿಂಚುಬುಳು
ಸರದಂತೆ ಮಾಡಿಯಾಡಿಸುತ ಸೋಮನ ಹಲ್ಲೆಯಂ ರಚಿಸಿಯಾಡುತಿರ್ದಂ ೪

ಮಿಗೆ ಲೀಲೆಯಿನ್ನಾಗಕುಲವ ಪಿಡಿವುತ ಹೊಸೆದು
ನಗುತ ಸಿಂಹಗಳ ನಾಸಿಕಕೆ ಪವಣಿಸಿ ಕಟ್ಟಿ
ಸೊಗಸಿನಿಂದಡರಿ ಬಿನದಿಸುತ ದಿಗ್ದಂತಿಗಳ ಮೇಲೆ ಲಂಘಿಸಿ ಕೆಡಪುತ
ಚಿಗಿವುತಾಗಸದಿಂದ ಧ್ರುವಮಂಡಲಂ ದಾಂಟಿ
ಯಗಲದಾ ಶಿಂಶುಮಾರನ ಶಿರವನಡರ್ದು ತಾಂ
ಭಗಣತತಿಗ್ರಹಗಳಂ ವಾಯುಸೂತ್ರದೊಳಾಡಿಸುತ್ತ ಸುಕುಮಾರನೆಸೆದಂ ೫

ಅಲ್ಲಿಂದ ಭೂತಳಕ್ಕುಲ್ಲಾಸದಿಂ ದುಮುಕು
ತಲ್ಲಿ ನಟಿಸಲ್ ರಸೆ ರಸಾತಳಕ್ಕಿಳಿಯೆ ಜಗ
ವೆಲ್ಲ ಏಕಾರ್ಣವಂ ಮಾಡುತ್ತ ತಿಮಿತಿಮಿಂಗಿಲಗಳಂ ಪಿಡಿದು ನಲಿದು
ಸಲ್ಲೀಲೆಯಿಂದಲೇಕಾರ್ಣವ[ವ] ರಚಿಸುತ್ತ
ಮುಲ್ಲಾಸದಿಂದ ಮುನ್ನಿನ ತೆರದಿ ನಿರ್ಮಿಸು
ತ್ತೆಲ್ಲಂಬುನಿಧಿಗಳಂ ಕದಡುತ್ತ ಜಗದೇಕವಲ್ಲಭನ ಸುತ ಮೆರೆಯಲು ೬

ಇಂತಖಿಳ ತೆರದಿಂದ ಸಚರಾಚರಂಗಳ ಸ
ಮಂತು ಬಾಧಿಸಿ ಬಾಲಲೀಲೆಯಂ ನಟಿಪ ನಿ
ಶ್ಚಿಂತ್ಯ ನಿರವದ್ಯ ಸುಕುಮಾರನುರೆ ಬಾಲಲೀಲೆಯ ಮಹೋತ್ಪಾತಕಂಜಿ
ಚಿಂತಿಸುತ್ತಾಗ ಸಚರಾಚರಂ ಜಗಮೈದಿ
ನಿಂತು ದೇವೇಂದ್ರಂಗೆ ಪೇಳ್ದರೀ ಲೋಕಗಳ
ನಿಂತುಳಿಯದಂತೊರ್ವಬಾಲಕಂ ಕೊರ್ಬಿ ಪಾಳ್ಮಾಡಿದಂ ಸುರವಲ್ಲಭ ೭

ಏನುಕಾರಣ ಸುಮ್ಮನಿರ್ಪೆ ಈಲೋಕದಭಿ
ಮಾನ ನಿನ್ನದು ಸಟೆಯೆ ಐರಾವತಂ ಮುಖ್ಯ
ನೂನವಸ್ತುಗಳ ಸಂಹಾರಮಂಗೈದು ಸುರಸಂತಾನವಮಂ ಹರಿಸಿದಂ

---

1 ಥ (ಗ)

ಮಾನವುಂ ಬಿಡು[1][ವ][1]ಲ್ಲಿ ಹಾಸ್ಯಮಲ್ಲವೆ ಸುರಪ
ನೀನು ಬಹುಸಾಹಸಿಗನಹುದು ಶಿಶು ನಿನ್ನಿಂದ
ಯೇನ ಹೇಳಲ್ಬಹುದು ಶತಗುಣಾಧಿಕಮೆನಲ್ ನಸುನಗುತ್ತೆಂದನಿಂದ್ರಂ ೮

ಕೇಳಿರೈಯಿಂತಷ್ಟಕಷ್ಟವಚನವ ನೀವು
ಪೇಳಬಹುದೇ ಶಿಶುವ ಕೊಲಲು ಪಾಪಂ ಬಿಡದು
ಮೇಲೆಯಪಕೀರ್ತಿ ತಪ್ಪದು ಸತ್ಯ ಚಂದ್ರಾರ್ಕರುಳ್ಳನಕ ಮತ್ತೆ ಕೇಳಿ
ಹಾಳಪ್ಪುದೈ ಸಕಲ ಧರ್ಮಪೂಜಾಫಲಂ
ಹೇಳಲೇನಿನ್ನು ಭೀತ್ಯಾತುರನ ಮುರಿದವನ
ಕೋಳುಹೋದವನ ಶರಣಾಗತನ ಬ್ರಾಹ್ಮಣನ ಪತಿತನಂ ದೈನ್ಯಪರನಂ ೯

ಸ್ಮರತಾಪಪೀಡಿತನ ಜರೆಯಡಸಿದನ ಲಗ್ನ
ನರನ ದೀನನ ನಿರಾಯುಧನ ಜಲವಾಳ್ದವನ
ಹರನ ನೆನೆವನ ಶಿಶುವ ಸತಿಯ ನಿರ್ಮದನ ಶಿವಲಾಂಛನನ ತಲೆಗೇರ್ದನಂ
ಮರನನೇರ್ದನ ಪುತ್ತಮುಂ ಪತ್ತಿದವನ ಬಂ
ಧುರತರದ ದೈವಮುಂ ಮರೆಯುಪೊಕ್ಕವನ ಮಿಗೆ
ಪರಿದು ಪುಲ್ಲಂ ಕಚ್ಚಿದವನ ನಂಬಿದನ ಕೊಲ್ಲುವದೇ ಮಹಾಪಾತಕಂ ೧೦

ಇಂತಿವರ ಬಿಡದೆ ಕೊಂದವಗೆ ಮುನಿಗಳುಂ ಪೇಳಿ
ದಂತು ಪೌರಾಣಂಗಳೊಳು ಚಂದ್ರತಾರಾರ್ಕ
ರಿಂತಿರ್ಪನಂ ಯಮನ ಮುಖದೊಳುಂ ನರಕಬಾಧೆಯು ಪಿಂಗದದು ಕೇಳಿರೈ
ಇಂತು ಬಾಲಕನ ಕೊಲ್ವುದು ನೀತಿಯಲ್ಲ ನೀ
ವಂತುಕಾರಣ ಬಾಲಕಂಗೆ ಶರಣಂಬೊಕ್ಕು
ನಿಂತು ಬಾಳ್ವುದು ಧರ್ಮವೆನಲು ಸಚರಾಚರಂ ಮರಳಿ ಪೇಳುತ್ತಿರ್ದರಂ ೧೧

ಏತಕೆಲ್ಲರ ನೂಂಕಿದಪೆಯೆಂಮಂ ಶಿಶುವೆ ಪುರು
ಹೂತ ಕೇಳೈ ನಿಜಜನನಿ ಜನಕರೇ ಸುತಂ
ಮಾತಮೀರಲ್ ಕೊಲ್ಲದೇ ಬಿಡರು ದುಷ್ಟನಿಗ್ರಹ ಶಿಷ್ಟಸಂಪಾಲನಂ
ಖ್ಯಾತವಹ ನೃಪತಿ ನೀ[2][ನುಂ ಸುರರ][2] ರಾಜನೈ
ನೀತಿ ತಪ್ಪಲ್ಲ ಕೊಂದಡೆಯುಮಂ ಶಿಶುವಲ್ಲ
ಮಾತದೇ ನಿನ್ನ ಪ್ರೋಲ್ವಿಂದ್ರರು ಸಹಸ್ರಮಿರಲವನಘೋರರೋಮಕೆಣಿಯೆಂ ೧೨

1 ವುದ (ಕಗ) 2 ನುಸುರ (ಕಗ)

ನಿನಗೆ ವೀರದ ಮಾತು ಬೀತುದ್ದೈ ಏಕೆನಲು
ಕನಲಿ ಸುರಪಂ ಮೀಸೆಗಳ ಮುರಿದಂ ತಿದ್ದುತ್ತ
ನುನಯದಲಿ ಮಿಕ್ಕು ಘೂರ್ಣಿಸುತ ಕಣ್ಣೊಳ್ ಕಿಡಿಯು ಕೆದರುತ್ತ ಬಾಯೊಳರರೆ
ಬಿನುಗುನುಡಿಗಳ ಕೊಚ್ಚುತುರಿಯನುದ್ಗಾರಿಸುತ
ಘನವಜ್ರಮಂ ಜಡಿದು ಚಿಮ್ಮುತ್ತ ನನ್ನಿದಿರೆ
ಪೊಣರಿಚುವನಾವ ದಕ್ಷಂ ನೋಳ್ಪೆನಿದುವೆ ಸನ್ನಾಹಭೇರಿಯು ಪೊಡೆಯಿರೈ ೧೩

ಎನಲು ದಾಂಧಣರವಂ ಪೊಣ್ಮೆಯಂಬುದಕೋಟಿ
ಘನಭೇರಿರವಗಳೆಣ್ದೆಸೆಗೆ ಘುಮ್ಮಿಡಂತಿರ
ಲ್ಕನುವಿನಿಂದಷ್ಟದಿಕ್ಪಾಲಕರ್ ತಂತಮ್ಮ ವಾಹನಂಗಳನಡರುತ
ಕನಲುತಾಯುಧಗೊಂಡು ಸಕಲಸನ್ನಹವೆರಸಿ
ಯನುವಿನಿಂದಖಿಲಬಲಗೂಡುತ್ತೈರಾವತವ
ವಿನಮಿತವನೇರಿ ಶರವಣಕೆ ನಡೆತಂದು ಪಾಳೆಯಮಿಳಿದ ಸುರರರಸನು ೧೪

[1]ಆ[1]ಕಾಲದೊಳ್ ಲೋಕನಾಯಕನ ಸುತನೊಡನೆ
ನಾಕಪತಿ ಪೊಣರಿಚಲ್ಕೇಳೆ ವಂದಿಯ ಜನಂ
ಲೋಕಪ್ರಸಿದ್ಧ [2][ಜೀವೇಶ][2] ಜಯಂಜಯು ವೈರಿಗಿರಿವಜ್ರ[3][ದಂ][3]ಡನೆನುತ
ಬೇಕಾದ ಪರಿಯಲುಗ್ಗಡಿಸುತಿರಲಾಗಳಿಸಂ
ಶ್ಲೋಕ ನಾರದಮುನಿಪನಾ ಸಮಯದೊಳ್ ಬಂದು
ನೀ ಕೇಳು ಸುರಪ ನಿಮ್ಮೆಲ್ಲರಂ ಸಲಹಲೆಂದುದಿಸಿದೀ ಬಾಲನನುವಂ ೧೫

ಕಂಡು ಕೇಳ್ದರಿಯಿರೋ ನೀವೆಲ್ಲರಾ ಹರನ
ಚಂಡವೀರ್ಯಂಗೊಂಡು ಹೆಂಡಿರುದ್ಗರ್ಭವು
ದ್ದಂಡ ಕೋಟಲೆಯನುದ್ಗಾರಿಸಲ್ ಶರವಣದೊಳುರಿಯೆ ಪಟ್ಕೃತ್ತಿಕೆಯರು
ಭಂಡತನದಿಂ ಕಾಸಲವರೊಳುದಿಸಲ್ಕವರು
ಪಿಂಡಗಳ ಪಿಡಿದೊಂದುಗೂಡಲದುವೊಂದಾಯ್ತು
ಮಂಡೆಯಾರಾಗಲಾ ಸ್ಕಂದಂಗೆ ವೊಲೆಗೊಟ್ಟು ಸಾಕಿದರು ಕೃತ್ತಿಕೆಯರು ೧೬

ಪುಟ್ಟಿಯಾಕಾರವಾದಂ ನಾಲ್ಕುದಿನದೊಳಗೆ
ನೆಟ್ಟನೈದನೆಯೊಳಾ ಸರ್ವಾವಯವ ನೆಗಳ್ದ
ವಟ್ಟಿಸದೆಯಾರನೆಯ ದಿವಸದೊಳಗಸತನಿಹನೇಳನೆಯ ದಿನದೊಳವನು

---

1 ಈ (ಕ) 2 ನೇಶಜೀವೇಶ (ಕ) ನೇಶಜೀಶ (ಗ) 3 ದಂದಂ (ಕಗ)

ಕಟ್ಟುಗ್ರತಾರಕನ ಸಂಹರಿಸುವಂ ಗಡಾ
ದಿಟ್ಟನಿವಸೂರ್ಯಕೋಟಿಪ್ರಕಾಶಂಗೆ ವಂನ
ಮುಟ್ಟಿ ಶರಣೆಂದು ಪೋಗಲ್ಲದೊಡೆ ನಿಮ್ಮಂತ ಪುಳುಗಳಂ ಲೆಕ್ಕಿಸುವನೆ ೧೭

ಎಂಬ ನುಡಿಯಂ ಕೇಳಿ ವಾಸಿಪಂಥಂ ಪುಟ್ಟಿ
ದಂಭೋಳಿಧರ ಮುನಿಯ ಮಾತ ಮೀರುತ ಬಲಕ
ದಂಬವಂ ಬರವೆಳ್ದು ಸಮರಭೇರಿಯ ಪೊಯ್ಸಿ ಸುರನಾಯಕರ್ಗೆ ಮುದದಿ
ಕುಂಭಿಹಯರಥಪದಾತಿಯ ಸೈನ್ಯಗಳನಿತ್ತು
ಬಂಬಲ್ಗಳಂ ವಿವರಿಸುತ್ತ ಶಲವೀಯಲಾ
ತ್ರ್ಯಂಬಕನ ಸುತನ ಮೇಲೆರಗಿದರು ವಹ್ನಿಯಂ ತೃಣರಾಶಿ ಮುಸುಕುವಂತೆ ೧೮

ಸುತ್ತಿಮುತ್ತುತ್ತ ಎಣ್ದೆಸೆಯೊಳಾ ಹರಿಕರಿಗ
ಳೊತ್ತರಿಸಿ ರಥಗಳಂ ನೂಂಕಿ ಕಾಲಾಳ್ಗಳಾ
ಗತ್ತಿತ್ತ ಮಾಯವಾದಪನೆಂದು ಮುಸುರಿ ಬೊಬ್ಬಿರಿದಂ ಕತ್ತಿಗಳ ಚಿಮ್ಮಿ
ಕುತ್ತಲೆಸುತಂ ಬಲ್ಲೆಹಂಗಳಂ ನೆಗಪಲ್ ನ
ಗಂತ್ತಿದೆ ಮಹಾನಂದಮೆನುತಟ್ಟಹಾಸದಿಂ
ಮೃತ್ಯುಂಜಯನ ಕುವರನನಿಬರಂ ಮೂರ್ಛೆಯೊಳಗಾಳಿಸಿದನದು ವಿಚಿತ್ರಂ ೧೯

ಕಾಣುತಾಖಂಡಲ ನಿಜೈರಾವತವನಡಸಿ
ಕೇಣದಿಂ ವಜ್ರಾಯುಧಂಗೊಂಡು ಕಡಿಯಲದು
ಮಾಣದಾ ಶಿಶುವ ಸೋಂಕದ ಮುನ್ನ ತುತ್ತುಮುರದಾಗಲಾ ದೇವೇಂದ್ರನು
ತೂಣೀರದಿಂದ ಬಾಣಗಳ ತೆಗೆದೆಸೆಯೆ ಕ
ಲ್ಯಾಣಾದ್ರಿಚಾಪನಣುಗೊಂದಂಬಿನಿಂದವನ
ಪೂಣ್ದೆಸೆಯೆ ಶರಶಾರ್ಙ್ಗ ಬತ್ತಳಿಕೆಯಂ ತರಿದು ಕರಿಯ ಶಿರದೊಳ್ ನಾಂಟಲು ೨೦

ರಜತಗಿರಿಯೊಲ್ ಶುಭ್ರಮಾತಂಗ ಮೂರ್ಛೆಯೊಳ್
ನಿಜವಾಗಿ ಬೀಳೆ ದೇವೇಂದ್ರನಳ್ಕದೆ ಮತ್ತೆ
ರುಜುವಾದ ಪೊಂದೇರನೇರಿ ಮುದ್ಗರಗೊಂಡು ಪೊಡೆಯೆ ಹರಸೂನು ಸುರರ
ಯಜಮಾನನಾಯುಧವ ಪೊಂದೇರ ಕಡಿದಂ ಮು
ತ್ತಜಯಕರವಾದೆದೆಯಂ ಮೂರಂಬಿನಿಂದೆಸೆಯೆ
ಗಜಬಜಿಸಿ ತಾಂ ಬಿಳ್ದ ದೇವೇಂದ್ರನಮರಸತಿಯರಂ ಬೊಬ್ಬೆವೊಯ್ಯುತಿರಲು ೨೧

ಒಂದೈಯ್ದು ಪತ್ತು ಪದಿನೈದು ಪದಿನಾರು ಪ
ತ್ತೊಂದು ಪಂಚಾಶತ್ಕಳಂಬದಿಂ ಪಾವಕನ
ಮಂದನಗ್ರಜನ ನಿರುತಿಯ ಪಾ[1]ಶಿ[1]ಗಂಧವಹ ಯಕ್ಷೇಶನೀಶಾನನ
ಹೊಂದಿದತಿಗರ್ವಂಗಳಂ ಹರಿಸಿ ಬೀಳ್ಗೆಡಪ
ಲಂದು ಬಲವೈರಿ ಮೂರ್ಛೆಯ ತಿಳಿವುತಿದಿರಿಸಲ್
ಸ್ಕಂದ ಶತಪಂಚಶರದಿಂದೆಸೆಯೆ ದೇವೇಂದ್ರ ನಿಟ್ಟೊರಗಿದಂ ನೆಲದೊಳು ೨೨

ಎಡಬಲದ ಮನ್ನೆಯರ ಪರಿವಾರಗಳನೆಲ್ಲ
ದೃಢವಹ ತ್ರಯಸ್ತ್ರಿಂಶದಿಷುಗಳಿಂದಿಡಲೊಡನೆ
ಕೆಡೆದರವರೆಲ್ಲ ಪಲ್ಗಿರಿವುತಂ ಪೊರಳುತಂ ನರಳುತಂ ಬಾಯ್ದೆರೆವುತಂ
ಮೃಡನ ಪಡಿರೂಪಹ ಕುಮಾರಗಿದು ಭುಜಬಲದ
ಸಡಗರದ ಯುದ್ಧಮಲ್ಲೈ ಬಾಲಲೀಲೆಯಿದಂ
ಕೆಡದಿಂದ್ರಮುಖರೆದ್ದು ಕೋಪದಿಂ ಮರಳಿದಿರಿಸಲ್ ಕಂಡು ದೇವತಾರ್ಯಂ ೨೩

ಎಲೆಯಧಮ ನೂರುಸೂಳ್ ಮುರಿದೊಡಂ ನೀನೀಗ
ತಿಳಿವಿಲ್ಲ ನಿನ[2]ಗಿನಿ[2]ಸು ಬುದ್ಧಿ ಸಾಲದು ಗಡಾ
ಫಲಿಸಿತು ವಿನಾಶಕಾಲೇತು ವಿಪರೀತಮತಿ ಎಂಬ ಗಾದೆಯದೀಗಲೆ
ಸಲುವುದೇ ಸಾಕ್ಷಾನ್ಮಹೇಶ್ವರನ ಸುಕುಮಾರ
ನೊಳು ಕಲಹ ಸಲ್ಲದೈ ಶರಣಂಬೊಗಲ್ ದುಃಖ
ಮಳಿದು ಕಂಟಕಮಿಲ್ಲದಮಿತಸುಖದಿಂ ಸಗ್ಗದೊಳಗಿಪ್ಪೆ ಕೇಳಣುಗನೆ ೨೪

ಎಂಬ ಮಾತಂ ಕೇಳಂತಜ್ಞಾನಮುಳಿದಿಂದ್ರ
ಕುಂಭಿನಿಯೊಳಷ್ಟಾಂಗವೊಂದಿ ಪೊಡೆಗೆಡದು ಪದ
ಕಂ ಭರದಿ ನಮಿಸಿ ಕೈಮುಗಿವುತೆಲೆದೇವ ನಾನಪರಾಧಿಯಾದೆನೀಗ
ಶಂಭುವೇ ಕಾಯಿ ಕರುಣಾಕರ ಕೃಪಾಂಬುನಿಧಿ
ತ್ರ್ಯಂಬಕನೆ ನಾಂ ಮಶಕಸಮನಾಗಿ ನಿಮ್ಮ ಕೂ
ಡಂ ಬಹುಳಕೋಪದಿಂ ಕಲಹಮಾಂತೆನು ರಕ್ಷಿಸೈಯೆನಲ್ ಕರುಣಮೊಗೆದು ೨೫

ಸುರರಾಜ ಮೆಚ್ಚಿದೆಂ ವರವ ಬೇಡಿನ್ನು ಬೇ
ಡಿ[ರ]ದೀವೆ ಮನದಿಷ್ಟಮೇನೆಂದು ಶಿವಸುತಂ
ನಿರವಿಸಲ್ಕಾಗ ವಂದಿಸಿ ಸುರಪ ಬಿನ್ನೈಸಿದಂ ದೇವ ನಾನು ಶಚಿಪಂ

1 ಶ (ಗ), 2 ಗೀ (ಗ)

ಸುರರು ಮುಂತಾದವರ್ ನಿನ್ನ ತೊಳ್ತಿರು ನಿಜಂ
ವರವ ನೀ ಸ್ವರ್ಗಕ್ಕೆ ನೀನು ಸೇನಾನಿಯಾ
ಗಿರುತ ನಮ್ಮಿನಿಬರಂ ಸಲಹಬೇಕೆನಲು ನಸುನಗುತದೇಂ ವರವ ಕೇಳ್ವೈ ೨೬

ನಾನೊಲ್ಲೆನಜಹರಿಗಳಮಳ ಪದಗಳನೆನಲ್
ತಾನವಂರಪತಿ ಚಿಂತಿಸುತ್ತಭವಪದಪದ್ಮ
ಧ್ಯಾನಮಂ ಮಾಡಲಾ ಶಿವ ಶಿವೆಯನೊಡಗೊಂಡು ಪುತ್ರಕಾಂಕ್ಷೆಯೊಳ್ಳೈದುತ
ಮಾನನಿಧಿ[1]ಗಳ್ ಸುತನ[1] ತೊಡೆಯ ಮೇಲಿರಿಸಿಯನು
ಮಾನವಿಲ್ಲದೆ ಮೊಲೆಯನೂಡುತಿರೆಯಿಂದ್ರನತಿ
ಸಾನುರಾಗದೊಳೆರಗಿ ಬಿನ್ನೈಸಲಿತ್ತನಾ ಸುರರ ಸೇನಾಪತ್ಯಮಂ ೨೭

ಅನಘ ಸುಕುಮಾರನಂ ವಹಿಸಿ ಸುರಸಂಘಮಂ
ವಿನಯದಿಂ ಪೊರೆಯೆಂದು ನಿರವಿಸುವುದೆನಲು ಶಿವ
ವಿನಯದಿಂದೆಲೆ ಪುತ್ರ ನಿರ್ಜರರ ಸೇನಾನಿಯಾಗೆನಲೊಲ್ಲೆನೆನಲು
ಘನಮಹಾದೇವ ನಂದೀಶನಂ ನೋಡಿ ಷ
ಡ್ವದನನಂ ನಂದಿನಾಥಂ ಪೇಳ್ದ ಸ್ಕಂದ ಕೇ
ಳನುವಿನಿಂ ಶಿವನ ಸಾಮ್ರಾಜ್ಯಾದಿ ಸಂಪದಕ್ಕೊಡೆಯ ನೀನಲ್ಲದುಂಟೆ ೨೮

ಆದೊಡಂ ಕೇಳಯ್ಯ ಮುನ್ನಂಧಕಾಸುರಂ
ಕಾದಲ್ಕೆ ಶಿವನೊಡನೆಯವನ ಸಂಹರಿಸವನ
ಪಾದದಡಿಯೊಳಗಿರ್ದು ನುಡಿಸೆ ಶಿವ ಮೆಚ್ಚಿ ಗಣಪದವಿಯಾಯಲವನಣುಗನು
ಭೇದದಿಂ ಕಲ್ಲಿಸೆವ ಶೃಂಗದೊಳ್ ಸೂಜಿಯಂ
ಮೋದದಿಂದೂರಿ ತಪವಂ ಮಾಡೆ ಬ್ರಹ್ಮತಾ
ನಾದರದೊಳವಗೊಲಿದು ನಿನ್ನಿಷ್ಟವಾವುದುಸುರೈ ದೈತ್ಯಚಕ್ರೇಶನೆ ೨೯

ಎಂಬ ನುಡಿಯಂ ಕೇಳಿಯಾನಂದಿಸುತ್ತ ಸುರ
ನಂಬುಜಾಂಬಕ ಮುಖ್ಯ ಸುರನರೋರಗರೆನ್ನ
ಬೆಂಬಳಿಯೊಳಿಹುದಲ್ಲದಿರೆಯವರ ಭಂಗಿಪ ಬಲಾಢ್ಯದ ಸುರೇಶಪದಮಂ
ನಂಬುಗೆಯನೀವುತಾರಿಂದೆನಗೆ ಲಯವಿಲ್ಲ
ದಂಬುಜೋದ್ಭವ ವರವ ಕೊಡುವುದೆನಲೆಂದಂ ತ್ರಿ
ಯಂಬಕಂ ನಿತ್ಯನಾವೆಲ್ಲರುಮನಿತ್ಯರೈ ಮರಣಮಂ ಕೇಳ್ ತಾರಕ ೩೦

---

1 ಗಳು ತನ್ನ (ಕ)

ಎನಲಂ ಯೋಚಿಸಿಯೆಂದ ಪರಶಿವನ ವೀರ್ಯಮ
ನ್ನನಲ ಮುಂತಾದಮರರುಂಡು ಪ್ರಸವವಾನು
ತನಿಬರುಗುಳಲ್ಕಲ್ಲಿಯುರಿವುತಿರೆ ಶರವಣದೊಳಲ್ಲಿ ಕೃತ್ತಿಕೆಯರೆಯ್ದಿ
ಮನವೊಲ್ದು ಕಾಸೆಯುವರುದರದೊಳೊಗೆದ ಷಡ್ವ
ದನ[ನ] ಸುರಪಂಗೆ ಸೇನಾನಿಯಾಗುತಲೇಳು
ದಿನದೊಳೆನ್ನಂ ಕೊಲಲ್ ಮರಣಮಲ್ಲದೊಡೆನಗೆ ಸಾವಿಲ್ಲ ನಿತ್ಯನೆಂದಂ ೩೧

ಬೇಕಾದ ವರಗಳಂ ಪಡೆದು ಸಪ್ತಮಶರಧಿ
ಯಾಕರದಿ ಪಟ್ಟಣವ ಮಯನಿಂ ರಚಿಸಿ ಮತ್ತ
ನೇಕ ಲೋಕಂಗಳಂ ಪಾಳ್ಗೈವುತತಿ ಬಾಧಿಸುತಿರ್ಪನದುಕಾರಣಂ
ಲೋಕೋಪಕಾರಿ ಸೇನಾಪತಿತ್ವವನಾಂತು
ನಾಕೇಶಮುಖ್ಯರಂ ರಕ್ಷಿಸೆನೆ ನಂದಿ ನಂಡಿ
ಗೈಕಕಂತ್ಯಂದಾಳಲಾಗ ಶಂಕರನಿದಕ್ಕಂಗೀಕರಿಸಿದನೊಡನೆ ೩೨

ತ್ರ್ಯಂಬಕನ ತನಯ ದಳಪತಿಯೆಂದು ಸಂಭ್ರಮಂ
ಗೊಂಬುಂತಂಬುಜ ಭವಾದ್ಯುತ್ತಮ ತ್ರಿದಶ ಸುಕ
ದಂಬ ಮನು ಮುನಿ ಸಾಧ್ಯ ಸಿದ್ಧ ವಸು ಚಾರಣ ಖಗೇಶಾನರೊಂದುಗೂಡಿ
ಅಂಬಿಕೇಶ್ವರರುಮೀಕ್ಷಿಸುತಿರಲ್ ವಿಷ್ಟರದೊ
ಳಿಂಬಾಗಿ ಕುಳ್ಳಿರಿಸೆ ಸುರರು ಪೂಮಳೆಗರೆದು
ದಂಬಿಕೆಯು ಸುತ ಷಣ್ಮುಖಂಗೆ ಪಟ್ಟವ ಕಟ್ಟುತಖಿಳಜನ ಸೈಗೆಡೆದರು ೩೩

ಪಟ್ಟಮಂ ಕಟ್ಟಿದಾಕ್ಷಣವೆ ತಾರಕನ ಘನ
ಪಟ್ಟಣದ ಕೋಂಟೆ ಜರ್ಝರಿತವಾದುದಂ ಬಳಿಕ
ಹೆಟ್ಟುಗೆಯ ಹರಳೋಲೆ ಬಿಳ್ದುದಾ ದಿವದಲ್ಲಿ ತಾರೆಗಳ್ ತೋರ್ದವಾಗ
ನೆಟ್ಟನೇ ನರಿಗಳೂಳಿದವು ಸತ್ತಿಗೆಗಳಸ
ತೊಟ್ಟನೇ ಕೆಡೆದವಖಿಳಾಶೆಯೊಳ್ ಮಂಜಿನುರಿ
ಪುಟ್ಟುತಂತಮಿತಾದ್ಭುತಂಗಂಡು ದೈತ್ಯೇಶಗುಪ್ತಚರ[1][ರಿಂ ಸುದ್ದಿ][1]ಯಂಂ ೩೪

ತರಿಸುತೀ ಷಣ್ಮುಖನ ವಾರ್ತೆಯಂ ಕೇಳ್ದಸುರ
ಮುರಿದು ಮೀಸೆಗಳ ಘೂರ್ಮಿಸುತ ಸನ್ನಹಭೇರಿ
ಯಂರರೆ ಪೊಡೆಸುತ್ತ ಬಲಸನ್ನಾಹವಂ ಮಾಡಿ ಸುರರ ಮೇಲ್ ದಂಡೆತ್ತಲು

1 ಲಿಂಶುಧಿ (ಕಗ)

ಹರಿಯಜಾದ್ಯಮರಪತಿಗಳು ಕೇಳಿ ತಮ್ಮಬಲ
ಮುರವಣೆಯೊಳಂ ಮಾಡಿ ಮಾರೊಡ್ಡನೊಡ್ಡಿಸುತ
ಬಿರಿದಿನಗ್ಗದ ಕಹಳೆಯೊದರೆ ಕೋಟಾಕೋಟಿ ಭೇರಿ ದಾಂಧಣರೆನಲ್ಕೆ ೩೫

ಕೇಳಿ ರಕ್ಕಸ ನೂಕಿ ಘುಡುಘುಡುಧ್ವಾನದಿಂ
ಹೇಳಲೇನಾರ್ಭಡಿಸಿ ನೆಲನ ಪೊಯ್ದೆದ್ದು ಸುರ
ಜಾಳವೆನ್ನಯ ಕೈಯ ಕೋಳಿಗಳು ನನ್ನಿದಿರೆ ಮಾರ್ಮಲತಿದೇ ನಿಂದಿರೆ
ಖೂಳರಕ್ಕಸರೇನ ನೋಳ್ಪಿರೆಂದೆನಂತ ಕರ
ವಾಳಮಂ ಚಿಮ್ಮುತ್ತ ಬೆರಲಿಂದೆ ಬೊಬ್ಬೆಯಂ
ತೂಳದಿಂ ಪೊಯ್ಯೆ ತಾರಕನ ಸೇನಾಜಾಲಮೇರಿತ್ತು ಕುಬುಬೆನುತ್ತಂ ೩೬

[ಆ]ಕಾಲದೊಳ್ ಸುರರ ಸೈನ್ಯಮಿದಿರಿಸುತ ನಿಲೆ
ಘೂಕತಾರಕ ಘೋರಕಿಲಕಿಲಸ್ವನವೆಸಗೆ
ನಾಕಪತಿ ಹರಿಯಜರ್ ಕೇಳಿ ಕೆಟ್ಟೋಡಿ ಕಂಪಿಸುತ ಬಾಯ್ಬರದಳಲಿ
ಸಾಕು ನಮ್ಮಯ ಬಾಳಿಗಾರು ಗತಿಯೆಂದೆನುತ
ನೇಕ ಪರಿಯಿಂದ ವಂದಿಸುತಲೀಶನ ಸುತಗೆ
ಲೋಕನಾಯಕ ಮುನ್ನ ನಮ್ಮೆಲ್ಲರಂ ಸದೆದ ಪಾಪಾಂಧಬಂಧದೇವ ೩೭

ಏನಮಾಡುವನೊ ನಮ್ಮೆಲ್ಲರಂ ತಲೆಯರಿದಂ
ಹೀನವಿಕ್ರಮದಿಂದ ಚಂಡನಾಡುವೆನೆನುತ
ಮೌನನಿಧಿ ನಿಮ್ಮಡಿಯ ಸಾರ್ದೆವೀಗಲೆ ಸಲಹು ಗೌರೇಯನೆಂದೆರಗಲು
ಭಾನುಪ್ರಕಾಶನೀ ನುಡಿಯ ಕೇಳ್ದೊಂದಗ್ನಿ
ಬಾಣಮಂ ತೊಟ್ಟೆಸೆಯಲಸುರನಕ್ಷೋಹಿಣಿಯ
ನೇನೆಂಬೆ ನಿಮಿಷಮಾತ್ರಕ್ಕುರುಹಲೊರ್ವನೇ ನಿಂದು ಸ್ಕಂದನೊಳಿದಿರಿಸೆ ೩೮

ಎಲೆ ದುರಾತ್ಮನೆಯಗ್ನಿಯೊಳ್ ಮಶಕ ಸೆಣಸುವವೊ
ಲಳಿಕನೇತ್ರನ ಕೂಡೆ ಕಾದಿ ನೀನುಳಿವುದಿ
ಲ್ಲಳಿವೆ ಗಡ ಶಿವಕುಮಾರಕನೆತ್ತ ನೀನೆತ್ತ ಮರುಳೆ ಕೇಳ್ ಶರಣೆಂದೊಡೆ
ನೆಲೆಯಾಗಿ ರಕ್ಷಿಸುವನೆನಲು ಮುನಿವಚನಮಂ
ಸಲೆ ಕೇಳಿ ಘೂರ್ಣಿಸುತ್ತಳಿಕಾಕ್ಷನೆನ್ನಿದಿರೆ
ಮಲಿಕಾಕ್ಷನಾಗುವಾತನ ಶಿಶುವ ಬಲ್ಲೆನೇಯೆನ್ನ ಭುಜಬಲಕೆ ಪಡಿಯೆ ೩೯

ಎನುತ ಶರವರ್ಷಮಂ ಕರೆಯೆ ಕ್ರೌಂಚಾರಿ ತಾ
ನನುವಿನಿಂದೇಳುದಿವಸಂ ಪೂರ್ಣಮಪ್ಪುದೆಂ
ದೆನುತ ತನ್ನಯ ಮಾತೆ ಗೌರಿಯಿತ್ತಾ ಶಕ್ತಿಯಂ ತಿರಂಹಿ ಬೊಬ್ಬಿಡುತ್ತೆ
ಬಿನುಗುತಾರಕನೆ ನೀ ಬೀಳೆನುತ್ತಿಡಲು ಘ
ಮ್ಮನೆಯುವನ ಕಲ್ಲೆರ್ದೆಯ ಡೋರುಗೋರೆಯಲ್ ಬಿಳ್ದ
ನನಘತರ ದೇವದುಂದುಭಿಗಳೊದರಿದವಲ್ಲಿ ಸುರರಂ ಪೂಮಳೆಗರೆದರು ೪೦

ಉಘೆ ಉಘೆಯೆನುತ್ತಾಗ ಹರಿಯಜೇಂದ್ರಾದಿಗಳ್
ನಗಜಾತೆಸುತಗಡ್ಡಬಿದ್ದೆಲ್ಲರಂ ಪೊರೆದೆ
ಯಗಣಿತಮಹಾತ್ಮನೇ ಶರಣು ಶರಣೈ ಪಾದಪಂಕಜಕ್ಕೆನಲುಮೇಶಂ
ಮಗನ ಬಿಗಿದಪ್ಪಿ ಮುಂಡಾಡೆ ಗಣವರರಾಗ
ನಿಗಮದುರ್ಲಭನೆಂದು ಕೊಂಡಾಡೆ ವೀರೇಶ
ಮಿಗೆ ವಿಘ್ನರಾಜ ಷಣ್ಮುಖನ ಮುಂಡಾಡುತಿರೆ ನಲಿದರೀಶಾನೀಶರು ೪೧

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳವರ
ಮಂತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡಲೊಂಬ[1][ತ್ತು][1] ಸಂಧಿ ಸಂಪೂರ್ಣವಾಯ್ತು ೪೨

---

1 ತ್ತನೆಯ (ಕಗ)

# ಹತ್ತನೆಯ ಸಂಧಿ

ಸೂಚನೆ :

ಮೆರೆವೇಕಪಾದಲೀಲೆಯೊಳು ಜಗದಾಧಿಪತಿ
ಪರಮೇಶ್ವರಾಂಗನೇತ್ರೋದಕ ಪ್ರಳೆಯವಹಾಂ
ತಿರದೆ ನಿಲ್ಲಿಸಿ ಗಂಗೆಯುಂ ತಳೆದು ತಪಿಸುತಿರ್ಪಾ ಭಗೀರಥಗೊಲಿದನು

ಉಕ್ಷವಾಹನ ಸಕಲದೈವತಾಧಿಕ ವಿರೂ
ಪಾಕ್ಷ ಪಾಪಾವಳೀಮೇಘಜಂಝೂಪವನ
ದಕ್ಷಾಧ್ವರಧ್ವಂಸನ ಕ್ರಿಯಾದಕ್ಷಸರ್ವೇಶ್ವರ ಜಗದ್ವಂದ್ಯನೆ
ಈಕ್ಷಣೇಕ್ಷಣದೊಳುದಿಸಿದಜಾಂಡ ಪೂಗಮಂ
ವೀಕ್ಷಣವ ಮುಚ್ಚಿದಾಗುಳಿಸಿ ತಾನೊರ್ವನೆ ವಿ
ಲಕ್ಷಣನೆನಿಸಿ ಭುವನಕೆಸೆವ ಶ್ರೀಮಲ್ಲಿಕಾರ್ಜುನ ಲಿಂಗ ಸಲಹೆನ್ನನು  ೧

ಹರಿಯೆ ಪರತತ್ತ್ವವೆಂದವನೆ ಸ್ವತಂತ್ರನೆಂ
ದಿರದೆ ವಾದಿಸುವ ತ್ರಿಭುವನತಾತನಿಗೆ ಮರಳಿ
ಹರಿಯೆ ಮಾಯಾಮಯನು ಹರಗೆ ಕಿಂಕರನೆಂದು ತದ್ವಾದಮಂ ಖಂಡಿಸಿ
ಹರನೆ ಪರಮೆಂಬುದಕೆ ದೃಷ್ಟಮಂ ತೋರೆನಲ್
ಶರಧಿರಾಜಂಗೋಲೆಯಂ ಕಳುಹಿ ಹನುಮಂತ
ಬರದ ಶ್ಲೋಕವ ತರಿಸಿಯವನ ಶಿಷ್ಯನ ಮಾಡಿ ಮೆರೆದ ಪದ್ಮ[1][ರ][1]ಸ ಜೈಸ  ೨

ಇಪ್ಪತ್ತುಯೆರಡನೆಯದೇಕಪಾದದಲೀಲೆ
ಕಪ್ಪುಗೊರಲೀಶ್ವರನಿಗೆಂದುದೆಲೆ ಮರುಳೇಶ
ಒಪ್ಪದಿಂ ನಿರವಿಸೆನೆ ಕೇಳು ನಂದೀಶ ತಾಂ ಶೈವಪೌರಾಣದೊಳಗೆ
ಒಪ್ಪವಾಗಿಹ ರುದ್ರಕೋಟಿ ಸಂಹಿತೆಯೊಳಗೆ
ತಪ್ಪದಂತುಸುರ್ದರ್ಥವನೆ ನಿನಗೆ ಪೇಳುವೆ
ನ್ನಪ್ಪ ಮರೆಯದಿರೀಶ್ವರಂ ಪ್ರಕೃತ್ಯುಪಧಿಯಿಂ ಭೂಗಗನಬ್ರಹ್ಮಾಂಡಮಂ  ೩

---

1 ವ (೩ಗ)

ಪರಿನಿರ್ಮಿಸುತ್ತಸಮ ಶಿವ ತನ್ನ ಬಲಗಡೆಯೊ
ಳರವಿಂದಭವನ ಪುಟ್ಟಿಸಿ ಭೂಮಿಗಧಿದೈವ
ಮಿರದೆಸಗಿಯಾ ಭೂಮಿಗಾಧಾರವಹ ಜಲಕೆ ತನ್ನ ವಾಮಾಂಗದೊಳಗೆ
ಕರಿಯಮೈಯುವನುಂಟುಮಾಡುತಾ ಜಲಕೆ ಕೇ
ಳಿರದೆ ಪರಿಯೆನುತ ಸೃಷ್ಟಿ ಸ್ಥಿತಿಗೆ ಕರ್ತರೆಂ
ದರುಹರಗ್ನಿಗೆ ಮೊಗದೊಳೊಗೆದ ರುದ್ರಂಗೆ ಸಂಹಾರಮಂ ನಿಯಮಿಸುತ್ತ ೪

ಮಾರುತಂಗೀಶ್ವರ ಸದಾಶಿವನೆಯಾಗಸ
ಕ್ಕೋರಂತೆ ಕರ್ತನೀಶಾಷ್ಟಮೂರ್ತಿಗಳಿಗೈ
ಭೂರಿಸರ್ವಕ್ಕೆ ತವಿವನೇ ಪತಿಯೆನಲು ಮೌನಿಪ ನುಡಿದನೆಲೆ ಕರ್ತನೆ
ಸೇರುವೆಯೊಳಧಿದೈವವೆನಿಸಿಕೊಳುತಂ ಮತ್ತೆ
ಕಾರೊಡಲ ಬಿದಿಗಳೀರ್ವರು ಸೇವಕರ್ ಮುದದೊ
ಳಾರಯ್ಯಲಾಗಳಾ ರುದ್ರತ್ರಯಂ ಸೇವ್ಯರೆಂತಾದರೆಲೆ ಜೀಯನೆ ೫

ಎಂತೆನಲ್ ನಂದೀಶ ನುಡಿದನಜಸುತನೆ ಕೇ
ಳಂತು ಭಂಟರು ಹರಿಯಜರು ಭಾವಿಸುತ ನೋಡ
ಲಂತು ರುದ್ರೇಶ್ವರ ಸದಾಶಿವ ತ್ರಿವಿಧಮಾಗಿರ್ದೊಡೊಂದಾಗಿಯೆ ವರ್ತಿಕುಂ
ತಿಂತಿಣಿಸಿವವನಿಜಲವೆಂತಧೋಗತಿಗಳು ಸ
ಮಂತು ಕಾರೊಡಲ ಬಿದಿಗಳು ಪ್ರಾಕೃತರು ವಹ್ನಿ
ಯೆಂತು ತಲೆಕೆಳಗುಮಾಡಲ್ಕೂರ್ಧ್ವಮಾಗುರಿವುದಂತಲ್ತೈ ರುದ್ರತ್ರಯಂ ೬

ಮತ್ತೆ ಕೇಳಂಗಮೊಂದೇ ದೇವರೊಂದೆಂಬ
ಮಂತ್ತರ ದುರಾಲಾಪಮಂ ಖಂಡನಂಗೆಯ್ವೆ
ಚಿತ್ತದಿಂ ನೋಡು ಗುದಗುಹ್ಯಗಳ್ ನೇತ್ರಜಿಹ್ವಾಘ್ರಾಣಕೆಣೆಯಪ್ಪವೆ
ಸತ್ತ ಮಾತೇತಕಿನ್ನುತ್ತಮಾಂಗಕೆ ಸರಿಯೆ
ಮತ್ತೆ ಕಾಲದ ಮಾನವರ ದೇಹಮಾದೊಡಂ
ಮೃತ್ಯುಂಜಯನೆ ಕರ್ತ ಹರಿಯಜರು ಭೃತ್ಯರೈ ತಥ್ಯವಿದು ಸತ್ಪುರಾಣ ೭

ಖಿನ್ನ ಮನುಜರು ನುಡಿವರೈ ತ್ರಿವಿಧ ಮೂರ್ತಿಗಳು
ಚಿನ್ನದುರೆಘಟ್ಟಿಯವೊಲೆಂತೆಂಬರೇ ಮುನಿಯೆ
ಮುನ್ನಾದೆಸೆಯದಾಗ ಹರಿವಿಧಿಗಳಭವಂಗೆ ಬಿನ್ನಪಂಗೈದರವುಮ

ಸನ್ನುತನೆ ನೀನು ವಿಶ್ವಕ್ಕೆಲ್ಲ ಕರ್ತ ಕೇಳ್
ನಿನ್ನಯ ಪದಾಂಬುಜದ ಲೆಂಕರಾವ್ಮೆ ದೇವ
ನಿನ್ನ ಎವೆಮಾಟವಮಾತ್ರದೊಳೆಮಗೆ ಸೃಷ್ಟಿ ನೆಲೆ ಸಂಹಾರಮಕ್ಕು ಭವನೆ ೮

ಫಲಿಸಿತಿದರಿಂದಲೀಯಜಹರಿಗಳೇ ಭೃತ್ಯ
ರಳಿಕಾಕ್ಷ ರುದ್ರನೊರ್ವನೆಯೊಡೆಯನೈಯಿದೇ
ನೆಲೆಯಾಗಿ ದೃಷ್ಟಾಂತವಂ ಕೇಳು ಮೃತದೇಹದೊಳಗೆ ಧರೆಜಲಗಳಿಹವು
ಸಲೆಯವರೊಳವರೊಡೆಯರಿರ್ಪರ್ರೈ ಚೆನ್ನಾಗಿ
ಜಲಜಭವ ಜಲಜಾಕ್ಷರಿದರಿಂ ವಪ್ಯಾತರಾ
ಜ್ವಲನ ನೀಲಾಕಾಶವಿರವ ವರದೇವತೆಗಳತಿಪವಿತ್ರರು ನೋಡಲು ೯

ಅನಲಾನಿಲಾಂಬರಂ ಜೀವಸಾನ್ನಿಧ್ಯವಾ
ತ್ಮನು ಶುದ್ಧಚೈತನ್ಯವುವರ್ಕಳಧಿಪತಿಗಳವ
ನನುಕರಿಸಿರಲ್ಕವರು ಜಡರಹಿತ ನಿರ್ಮಳರು ನಿರ್ಮಳಂ ಪಾವಕಕಣ
ಘನಪಾವನಂ ಪವಿತ್ರಂತುತೇ ವಿತತವೆಂ
ದನುವಿಡಿದು ಬ್ರಾಹ್ಮಣಸ್ಪತಿಯೆನಂತ ಶ್ರುತಿಸಾರ
ಲನುವಿನಿಂ ರುದ್ರನೊರ್ವನೆಯರಡನೆಯನಿಲ್ಲದಿಹನೆಂದು ಪೇಳುಂತಿಹುದು ೧೦

ಶ್ರೀರುದ್ರನೀಶ್ವರ ಸದಾಶಿವಂ ಪರಶಿವಂ
ಚಾರುಚಾತುರ್ವಿದ್ಯವೊಂದದಾಗೀ ಬ್ರಹ್ಮ
ವೇ ರುದ್ರನಾಗಿರ್ಪನಾತನೇ ಏಕಪದಲೀಲೆಯೊಳ್ ಕರ್ತನೆನಿಪಂ
ನೀರೇಜಜಾಚ್ಯುತರ್ ಭೃತ್ಯರ್ರೈಯಿವರೊಳ್ ವಿ
ಚಾರಮೇಂ ಹರಿಹರರ್ಗೊಂದೆಂಬ ನೀಚರ ವಿ
ಕಾರವಾಕ್ಯಕ್ಕೆ ಖಂಡನವಾಚರಿಪೆ ಹರಿಯುಂ ಹರನೊಂದು ತತ್ತ್ವವಾಗೆ ೧೧

ಒಂದಂಗವಾದೊಡರೆಬಿಳಿದರ್ಧ ಕರಿದೆಂತು
ನಿಂದಕರ ಮಾತೇನು ಒಂದಾದ ಹರಿಯ ಹರ
ಕೊಂದಂ ಹರಿಂ ಹರಂ ತಂ ಸದಾತ್ವನುಯಾಂತಿ ಎಂಬ ಶ್ರುತಿಯಿಂ ನಿತ್ಯವು
ಒಂದಾಗದಿರಲು ಹರಿಹರವೆಂಬ ಕ್ಷೇತ್ರದೊಳ
ಗೊಂದಾಗಿ ಹರಿಹರರ್ ತೋರ್ಪರೆಂತೆನಲಿದಕೆ
ಹಿಂದೊಂದು ಕಥೆಯುಂಟು ಘನವಾಗಿ ಕೇಳ್ ಗುಹಾಸುರನೆಂಬ ದೈತ್ಯನೊರ್ವಂ ೧೨

ನೀರೇಜಭವನ ಕುರಿತುಗ್ರತಪಮಂ ಮಾಡೆ
ವಾರಿಜೋದ್ಭವನವಂಗೊಲಿದಿಷ್ಟಮಂ ಕೇಳೆ
ಸಾರಸಂಪದ ಸಕಲಶೌರ್ಯಗಳ ಕೇಳೆನಗೆ ಮರಣವಾರಿಂದಾದೊಡಂ
ಬಾರದೊಲ್ ನಿತ್ಯತ್ವಮಂ ಕೊಟ್ಟು ಪಾಲಿಸೆನೆ
ಶಾರದೆಯ ಪತಿ ನುಡಿದ ಜಾತಸ್ಯಮರಣಮೆಂ
ದಾರೈದು ನಾಶಮಂ ಕೇಳೆನಲು ಹರಿಹರರ ಏಕಮೂರ್ತಿಯೊಳು ಮರಣಂ ೧೩

ಎಂದು ಕೇಳುತ್ತಖಿಳಲೋಕಗಳ ಬಡಿದುರುಹು
ತಂದು ಪಾಳ್ಗೆಯ್ದುರ್ಗೆ ಜಯಿಸಲಳವಲ್ಲಸುರ
ನಂದು ಗರ್ವದೊಳಿರೆ ಮುಕುಂದ ಶಿವನೆಡೆಗೆಯ್ದಿ ದೇವದೈತ್ಯೋಪದ್ರವಂ
ಬಂದಿರುವದಿದನು ಪರಿಹರಿಸಲ್ಕೆ ಮನವಿಟ್ಟು
ಸುಂದರದ ಪುರುಷರೂಪಿನೊಳರ್ಧಭಾಗದೊಳ
ಗೊಂದಿ ನಾಂ ವರ್ತಿಸುವೆನೆನಲದರಿನಿಂದೆ ಹರಿಹರರೇಕಮೂರ್ತಿತ್ವಮಂ ೧೪

ಧರಿಸಂತಸುರನ ಕೊಲಲ್ಕಾ ಕಾಲದೊಳಗೇಕ
ಹರಿಹರರು ಮಂತ್ರರಿದು ನೋಡೆ ಹರಿ ಭೃತ್ಯನೈ
ಹರನೆಡೆಯನಂತಲ್ಲದೊರ್ವರಸು ತನ್ನಲೀಲಾನಂದದಿಂ ಭೃತ್ಯನಂ
ಸರಿಯೆಡದ ಭಾಗದೊಳಗಿಟ್ಟುಕೊಂಡಿರೆಯವಂ
ಯರಸಿಂಗೆ ಸಮವೆಂದೊಡವರ ನಾಲಿಗೆಯನ್ನು
ತರಿಯಿಸುವೆ ಮತ್ತೊರ್ವ ಬೆಲೆವೆಣ್ಣು ರಾಜಮುದ್ರೆಯ ವಹಿಸಲರಸಪ್ಪಳೆ ೧೫

ಏನೆಂಬೆನಾಗಮಾಮ್ನಾಯ ಪೌರಾಣಾದ್ಯ
ಹೀನಶಾಸ್ತ್ರಂಗಳರಿತರಿಯದಜ್ಞಾನಿಗಳ್
ಹೀನರು ತ್ರಿಮೂರ್ತಿಗಳನೊಂದೆಂಬರಲ್ಲು ಹರಿಯಜರು ಲೆಂಕರು ರುದ್ರನೆ
ತಾನೆ ಕರ್ತನು ಮತ್ತೆ ಬಹುಜನವ್ಯವಹಾರ
ಹಾನಿಯಿಲ್ಲದೆ ಹಗಲೊಳೊಸಗಿ ರಾತ್ರಿಯೊಳೊರಗ
ಲಾ ನವ್ಯದುಃಖಮಳಿವಂತೆ ಸೃಷ್ಟಿಸ್ಥಿತಿಗೆ ಲೇಸು ಸಂಹಾರಮುಹುದು ೧೬

ಅಂತಜಾಚ್ಯುತರ ರುದ್ರಂ ತನ್ನೊಳಗಡಗಿಸು
ತ್ತಂತು ತನ್ನಂಶದಿಂ ತಾನಾದ ರುದ್ರನೆಯ
ನಂತಸೃಷ್ಟಿಸ್ಥಿತಿಯ ತಾನೆಸಗುತಖಿಳ ಸ್ವಾತಂತ್ರ್ಯಂಬುರಾಶಿಯೆನಿಪ

ಅಂತಕಾಂತಕನ ಉರಿಗಣ್ಣಿನಿಂದುರುಹಿ ಭುವ
ನಾಂತರಂ ಸುಟ್ಟ ಸುಡುಗಾಡಿನೊಳಗೊರ್ವ ನಿ
ಶ್ಚಿಂತನಾಗಿರಲಲ್ಲಿ ಸುಡುಗಾಡ ಕಾಯ್ವನೆನಲದು ಭೂಷಣಂ ದೇವಗೆ ೧೭

ಅದುಕಾರಣದಲಜಾಚ್ಯುತರನಿತ್ಯರು ನಿತ್ಯ
ಮದನಾರಿಯೊರ್ವ[1]ನೆ[1]ರಡನೆಯಪ್ಪ ಪುರುಷನಾ
ಗದು ನಿಮಿತ್ತಂ ಲೋಕಸಂಹಾರಮಂ ಮಾಡೆ ಹರನಾಮ ಭುವನದಲ್ಲಿ
ಉದಯವಾಯಿತ್ತು ಸ್ವಯಂಜ್ಯೋತಿನಾಮದಿಂ
ವಿದಿತಮಾಗಿಹ ಭಸ್ಮಮಂ ಕೊಂಡು ಸರ್ವಾಂಗ
ಪದದೊಳನುಲೇಪನಂಗೈದು ತೇಜೋಮೂರ್ತಿಯಾದನಂದೀಶಾನನು ೧೮

ಸವಿಲಾಸದಿಂದ ತನ್ನಪಯಪಗಳಂ ಬಿಗಿದು
ಸವಿಶೇಷದೇಕಪಾದದೆ ನಾಟ್ಯಮಂ ನಟಿಸ
ಲವಯವಂಗಳಲಿ ಮಿಗೆ ಘರ್ಮಾಂಬುವಿನಕಣಂ ಮೌಕ್ತಿಕದ ಮಣಿಗಳಂತೆ
ತವೆಯುದುದ್ಭವಿಸುತ್ತ ಪೊಳೆಪೊಳೆವುತಖಿಳವನು
ಜವದೆ ಭಯಗೊಳಿಸುತಿರೆ ಮಲ್ಲಿಗೆಯ ಸರದಂತೆ
ಶಿವಶಿರಸ್ಸಿನೊಳಿಡಲ್ ಗಣಚಯಂ ಭಾಪು ಉಘೆ[2]ಉ[2]ಘೆಯೆನುತ್ತೆಂದುದಾಗ ೧೯

ಒರೆವೆನ್ನೈ ಗಂಯೆನಲ್ ಗಗನವಾ ಗಗನದೊಳ
ಗಿರದೆ ಗಮಿಸಲ್ಕೆ ಗಂಗಾನಾಮಮಾಯ್ತುದಂ
ಧರಿಸೆ ಗಂಗಾಧರನೆನಿಪ್ಪ ನಾಮಂದಳೆದನೆಂತೆನಲ್ ಸ್ವಚ್ಛಂದದಿಂ
ದಿರುವ ಸಂಪನ್ನಪರಮಾನಂದ ಮೇದುರಂ
ಪರಮಾಭ್ರುಮಧ್ಯಸ್ಥಮಾತ್ಮಶಕ್ತ್ಯಮೃ[3]ತ[3]ಮಂ
ಕರಿಗೊರಲನಾಗ ವಹಿಸಿದನಲಾ ಶಿರದೊಳಾನಂದದಿಂದಂ ನಟಿಸುತಂ ೨೦

ಜಲವ ಶಿರದೊಳ್ ಸೃಜಿಸುತೀಶ್ವರಂ ಮೊದಲೆ ಕೇ
ವಲೆಯಪ್ಪ ತನ್ನ ಸುಖಮಯಮಾದ ಶಕ್ತಿಯಿಂ
ದಲಘುತರ ಪರಮಸುಖಮಯಬೀಜಮಂ ಶಂಭು ಸಲಿಲದೊಳ್ ಕೂಡಲಂಡಂ
ಸಲೆ ಜನಿಸಿತಂಡದೊಳಗಾ ಹರಿಗಳಮರೇಂದ್ರ
ಕುಲನರೋರಗದೈತ್ಯಗಂಧರ್ವಯಕ್ಷಸಂ
ಕುಲಮುಂದಯಿ[4][ಸಿತ್ತಂದಂ][4] ಜಗಕೇಕಜನಕನೀಶ್ವರನಲ್ಲದನ್ಯರೊಳರೆ ೨೧

---

1 ಯ (ಕ) 2 ಯು (ಗ) 3 ತಂ (ಗ) 4 ಸಿತಂ (ಕ) ದಿಸಿತಂ (ಗ)

ಶ್ಲೋಕ॥

ಅಥ ಸ್ವಚ್ಛಂದಸಂಪನ್ನಂ ಪರಮಾನಂದಮೇದುರಂ
ಪರಮಾಕಾಶಮಧ್ಯಸ್ಥಮಾತ್ಮಶಕ್ತ್ಯಮೃತಾಪ್ಲವಂ 1

ಅಪಾರಮಶಮಂ ದೇವೋ ಬಭಾರಸಿರಸಾಹರಃ
ಗಗನೇಗಮಿಂತಿ ಪ್ರೋಕ್ತಂ ಗಾಮಿನೀದೇತಿ ಕಥ್ಯತೇ 2

ಗಗನೇಗಮನಾದ್ಗಂಗಾ ನಿರುಕ್ತಂ ತತ್ತ್ವವೇದಿಭಿಃ
ಮಹಾಜ್ವಲನ ರೂಪಸ್ಯ ಹರಸ್ಯ ಶಿರಸಿ ಪ್ರಭೋಃ 3

ಜ್ವಾಲಾಭಿರ್ವ್ಯೋಮಕೇಶೇಷು ವಿಲೀನಾಸಾಸ್ವಯಂ ಶಿವಾ
ಮಹಾನಂದಾಮೃತಪ್ಲಾವಾ ತೇನಗಂಗಾಧರೋ ಹರಃ 4

ಆಪಯೇವಸ ಸಜ್ಜಾರ್ದೌತಾಸುವೀರ್ಯಮುಪಾಸೃಜಿತ್
ತದ್ದಂಡಮಭವದ್ವೈಮಿಂ ವಿಶ್ವಸ್ಯಾಯತನಂ ಮಹತ್ 5

ಮತ್ತೆ ಲಾಲೈಸು ನೇತ್ರೋದ್ಭವದ ಗಂಗೆಯಂ
ಬಿತ್ತರದ ಲಲಿತಭೈರವಿಯೆನ್ನುವಾಗಮದೊ
ಳತ್ಯಧಿಕ ಗ್ರಂಥಾರ್ಥವೆಂತೆನಲ್ ಕೈಲಾಸಪುರವದರ ಮಧ್ಯದಲ್ಲಿ
ಉತ್ತಮ ಸುನಿರ್ಮಲ ಸಭಾಮಂಟಪದಿ ರತುನ
ತೆತ್ತಿಸಿದ ಸಿಂಹಪೀಠಾಗ್ರದೊಳಗಿಹ ಶಿವಗೆ
ಎತ್ತಿ ಕೈಮುಗಿದಭವ ಗಂಗೆಯುದ್ಭವನೆನಗೆ ಪೇಳೆನಲ್ ಶಿವೆಗುಸುರ್ದನು ೨೨

ಎಲೆ ದೇವಿ ಪೂರ್ವಕಲ್ಪಾಂತರದೊಳಾಂ ರತ್ನ
ಕಲಿತ ಸಿಂಹಾಸನಾರೂಢನಾಗಿರೆ ಕಾಳಿ
ಯೊಲಿದೆಮ್ಮ ಕಣ್ಮುಚ್ಚೆ ಪತ್ತುಬೆರಲಿಂ ಬಿಗಿದು ಬಿಡದಿರಲ್ಕಗ್ನಿನೇತ್ರಂ
ಲಲಿತಾಂಗಿ ತೆರೆಯಲದರೊಳಗೆ ಘುಡುಘುಡಿಸಗ್ನಿ
ಯುರಿವುತುರಿದೆದ್ದು ಹಿಮವಂತನಂ ಸುಡುತಿರಲ್
ಜಲಜಾಕ್ಷ ಪಾರ್ವತಿಯು ಕಂಡು ಕಂಗೆಟ್ಟು ಸಂಕಟವಾಯ್ತು ತಂದೆಗೆಂದು ೨೩

ಮರುಗಿ ಬಾಯ್ಬಿಡುತಭವ ಏನು ಕಾರಣದೇವ
ಉರಿಗಣ್ಣ ತೆಗೆದೆ ನಮ್ಮಯ್ಯನುರಿವುತ್ತಿಹಂ
ನಿರವಿಪುದೆನಲ್ ಕೇಳಿ ನಸುನಗುತ ಮತ್ಪ್ರಾಣನಾಯಕಿಯೆ ನೀಂ ವಿನಯದಿಂ

ಮೆರೆವಿಂದುಸೂರ್ಯನೇತ್ರಂಗಳ ನಿರೋಧಿಸದೆ
ಗಿರಿಜೆ ನಿನಗೊಂದುನಿಮಿಷಂ ಜಗಕೆ ಬಹುಕಾಲ
ವಿರದಾಯಿತೆಂದು ಲೋಕವ ಪೊರೆಯಲಾಗಿ ನಾಂ ತೆರೆದೆನಿಂಗಲನ ಕಣ್ಣಂ ೨೪

ಕೇಳಿದೌ ಚಲುವೆ ನಿನ್ನಯ ಬೆರಲ್ಗಳಂ ಮೃದುಳ
ಭಾಳನೊಂದಪೆನೆನುತ್ತಳ್ಕಿಯುರಿಗಣ್ ತೆರೆದೆ
ಪೇಳುವೆಂ ಚನ್ನಾಯ್ತು ನಮ್ಮೈಯ್ಯನುರಿದಪನೆನಲ್ ಕಣ್ಣ ಮುಚ್ಚುತಭವಂ
ಯಾಳೋಕಿಸಲ್ ನಿನ್ನ ಪತಿಗೆ ಭಯಮಿಲ್ಲೆನಲ್
ಭಾಳಾಕ್ಷಮಂ ತೆರೆಯಲೇಕೆ ನಿನ್ನಯ ದಶನ
ದಾಳಿ ರವಿಕೋಟಿಪ್ರಭಾಪುಂಜಮುದ ತೆರೆಯದಂರಿಗಣ್ಣ ತೆಗೆದೆ ಕಪಟಿ ೨೫

ಎಂಬಬಲೆ ಸವಿವಾತ ಕೇಳುತಾನಂದಾಶ್ರು
ವಂಬಕದ್ವಯದೊಳುಣ್ಮಲು ದಶಾಂಗುಲಿ ಸೋಂಕಿ
ಯಂಬುದದ ಧಾರೆಯಂವೊಲಿಳಿದವಾ ಬಿಂದುಗಳೆ ಮುತ್ತಿನಂದದಿ ರಾಜಿಪ
ಕಂಬನಿಗಳಾ ಪವಿತ್ರಾಂಗುಲಿಯೊಳಿಳಿದು ವಿ
ಶ್ವಂಬೆರೆದು ದಶಪಾತಕಂಗಳಂ ಪಳಿವೆನೆನು
ತಂ ಬಿಡದೆ ದಶಗಂಗೆಯಾದವಾವಾವೆಂದೊಡವನುಸುರ್ವೆಯಾನಂದದಿಂ ೨೬

ಹರಿ ಸಾಂಬಶಿವನ ಭಜಿಸುತ್ತ ತನ್ನಯ ಪುರಕೆ
ಕರೆದೊಯ್ದುದೊಂದು ವೈಷ್ಣವಿ ಬ್ರಹ್ಮ ಬೇಡಿಕೊಂ
ಡುರೆ ಸತ್ಯಲೋಕದೊಳಗಿಡೆ ಬ್ರಾಹ್ಮಿ ಇಂದ್ರನೊಲಿದೊಯ್ಯಲದು ಮಂದಾಕಿನಿ
ವರಭೋಗವತಿಯು ಕುದ್ದಾಲೆ ಬ್ರಹ್ಮೋಕ್ತೆ ಭಾ
ಸುರಯೋಗ್ಯೆ ಸುರಸೆಯಘನಾಶಿನಿ ಪ್ರವಾಹೆಯೆಂ
ದಿರದೇಳುಗಂಗೆಗಳು ಭೂಲೋಕ ನಾಗಲೋಕಗಳಲ್ಲಿ ಸಂಚರಿಪವು ೨೭

ಉಳಿದೇಳುಗಂಗೆಗಳು ಮೇಳೈಸಿವೊಂದಾಗಿ
ಘುಳುಘುಳುಧ್ವಾನದಿಂ ಮೆರೆವುತಂ ಮೊರೆವುತಂ
ಬುಳುಬುಳನೆ ಹೆಚ್ಚುತಂ ಕೊಚ್ಚುತಂ ವೇಗದಿಂ ಕುಲಗಿರಿಶಿಖರಂಗಳಂ
ಹೊಳೆಹೊಳೆದು ದಳವೇರಿ ನಳನಳಿಸಿ ಕಳಕಳಿಸಿ
ಬೆಳೆಬೆಳೆದು[ಸುಳಿಸುಳಿದು]ಯುಭ್ರಂಕಪತ್ವದಿಂ
ದುಳಿಯದಂತೀಯಂಡಭಿತ್ತಿಯಂ ಪೊಯ್ದು ಗರ್ಜಿಸುತ ಘೂರ್ಣಿಸಂತಲಾಗ ೨೮

ಧರೆಯಂ ಭೇದಿಸುತ ಪಾತಾಳಪರ್ಯಂತೇಳು
ಶರಧಿಗಳ ಏಕಾರ್ಣವವ ಮಾಡಲಾಗ ದಿ
ಕ್ಕರಿಗಳೇ ನೀರಾನೆಯಂತಾದವಹಿಪತಿಗಳಾದವಲಗರ್ದಂಗಳು
ಅರಿಲಂತೆ ತೋರ್ದವಾ ಬಿಂದುಗಳು ಬುದ್ಬುದಗ
ಳಿರದೆ ಶಾರದಮೇಘದಂತೆ ತೋರಿದವು ಖೇ
ಚರರಲ್ಲಿ ನೀರ್ಮಾನಿಸರ ತೆರದೊಳಿರೆ ಪುಷ್ಪಕಗಳುಡುಪದಂತೆಸೆದುವು ೨೯

ಮೇರು ಮೈನಾಕಗಿರಿಯಂತೆಸೆಯಲಲ್ಲಿರ್ದ
ನೀರೇಜನೇತ್ರ ನೀರಜಪುತ್ರಮುಖ್ಯರಂ
ಸಾರಿತ್ತು ಜಲವಿಲಯವಯ್ಯಯ್ಯೋ ಪುರವೈರಿ ಕಾಲಾರಿ ನೀಲಕಂಠ
ಮಾರಾರಿ ನಮ್ಮೆಲ್ಲರಂ ಪೊರೆದೆ ವಿಷವಟ್ಟಿ
ಕ್ರೂರತರದಿಂದ ಸುಡುವಲ್ಲಿಯಂತಂತೆಯೂ
ಬಾರಿ ಕಾಯ್ದೊಡೆ ಬದುಕುವೆವು ಶಿವಶಿವಾ ಕೃಪಾಕರನೆಂದು ಪೊಗಳ್ದರಾಗ ೩೦

ಎಂದು ಕೀರ್ತಿಸಲಭವನವರ ಸಂತೈಸಿ ನಲ
ವಿಂದೆ ದಿಕ್ತಟಗಳಂ ಕಲ್ಲೋಲಮಾಲೆಯಿಂ
ಹೊಂದಿಸುತ ಶಾರದಕಠೋರತಾರಾಧಿಪ ಕಲಾಕಾರೆಯಹ ಗಂಗೆಯ
ಸುಂದರಿಯ ಶ್ರೀಮಕುಟತಟ ಜಟಾಪಟಲಾಗ್ರ
ದಿಂದಾಂತು ಹಿಮಕಣವ ಧರಿಪಂತೆ ಶಂಕರಂ
ಚಂದದಿಂ ತಳೆಯೆ ಹರಿಯಜರುಘೇವುಘೆಯೆಂದಂ ಪೂವಳೆಯಂ ಕರೆದರಾಗ ೩೧

ದೇವ ಭವದೀಯಾಕ್ಷಿಸಂಭೂತ ಕಂಕಣಂ
ತಾವಕಸತೀಕರಾಂಗುಲಿ ಮುಂಕ್ತ ಬಿಂದುಕಂ
ಪಾವಸತರಸ್ವರೂಪದ ಗಂಗೆಯೊದುದೀ ದಶಭೇದಮಂ ಧರಿಸಿದ
ಜೀವನವ ನಮ್ಮ ನಮ್ಮೂರಿಂಗೆ ದಯಮಾಡಿ
ಭೂವಲಯಮಂ ರಕ್ಷಿಪಂತೊಂದುಂ ಗಂಗೆಯ
ನ್ನೀವುತ್ತ ಪೊರೆವುದೆನಲಚ್ಯುತಾದಿಗಳ ಬಿನ್ನಪವ ಕೇಳ್ದಾನಂದದಿಂ ೩೨

ಇಂತು ಶಿವನಕ್ಷಿಯಿಂ ದಶಗಂಗೆಯೊಗೆದವಂ
ದಂತುಸುರಿದಿರಿ ದೇವ ಬಿನ್ನಪವನವಧರಿಸಿ
ಎಂತು ಜಗ ಜೀವಿಪುದು ಮುನ್ನ ಗಂಗೋದಕವದಿಲ್ಲದಿರೆ ಧರೆ ನಿಲುವುದೆ

ಅಂತಕಾಂತಕ ಗುರುವೆ ನಿರವಿಸೆನೆ ಮನದಿ ನಲಿ
ದಿಂತು ಕೇಳ್ಳೈ ಶಿವನ ಪಂಚಾಸ್ಯದಿಂ ನೋಡ
ಲಂತು ಧರೆ ಜಲ ದಹನ ಪವನಾಂಬರಂಗಳುದಿಸಿದವುವಂದರಿಂದಜಾಂಡಂ ೩೩

ಮತ್ತೆ ಕೇಳ್ ಪರಶಿವಂ ಪಂಚತನ್ಮಾತ್ರಗಳ
ಬಿತ್ತರಿಸುತವರಿಂದೆ ಪಂಚಭೂತಂಗಳಂ
ತಥ್ಯದಿಂ ಸೃಜಿಸಿರಲ್ ಜಲಮಿಲ್ಲವೆನಬಹುದೆಯಂತಲ್ಲದಿನ್ನು ಕೇಳು
ಮಿಥ್ಯಮಾಯಾರಚನೆಯೇನಂಯಿಲ್ಲದೆ ಇರುತ
ಚಿತ್ತಜಾಂತಕನಾತ್ಮನಂ ಸೃಜಿಸಲಾತ್ಮನಿಂ
ಮತ್ತೆ ಗಗನಂ ಗಗನದಿಂ ವಾಯುವಾಯುವಿಂದಗ್ನಿಯಗ್ನಿಯ ಮೂಲದಿಂ ೩೪

ಸಲಿಲವಾ ಸಲಿಲದಿಂ ಧರೆಧರೆಯಿನೋಷಧಿಗ
ಳಳವಟ್ಟವೌಷಧಿಗಳಿಂದನ್ನಮನ್ನದಿಂ
ದಲಿ ಜೀವ ಜೀವದಿಂದೀ ಚರಾಚರ ಜನನವಾದವಿದು ಶ್ರುತಿಸಿದ್ಧವು
ಸಲೆ ಪಿಂಡಬ್ರಂಹ್ಮಾಂಡಗಳ ಸೃಷ್ಟಿಮುಖಕರ್ಮ
ವಿಲಯಕ್ಕೆ ಕಾರಣಂ ಜಲಮರಿಯದಜ್ಞಾನಿ
ಗಳ ಮನುಜರಾ ವಿಷ್ಣುವಿನ ಕಾಲೊಳಗೆ ಗಂಗೆಯುದಿಸಿತೆಂದೊಳ್ವರಹಹಾ ೩೫

ತಂದೆ ಸಂಶಯ ಪರಿದುದೆಂದು ಹರಿಯಜಮುಖರು
ಇಂದುಮೌಳಿಯೊಳು ಬಿನ್ನೈಸಲಾ ಬಿನ್ನಪವ
ನಂದು ಶಿವನೇಗೆಯ್ದನೆನಲು ಹರಮೌಳಿಯಿಂ ಗಂಗೆಯಂ ಪರಿಯಿಸಿದನು
ಛಂದದಿಂ ಬಿಂದುಗಳನೊಂದಾಗಿ ಬಿಡೆ ದೊಡ್ಡ
ದಂದುಗಂ ಬ್ರಹ್ಮಾಂಡಕಪ್ಪುದೆನುತಾಗ ಜಡೆ
ಯೊಂದಗ್ರಕೇಶದಗ್ರದಿ ಕೊಡುವೆನೆನುತಲಿಚ್ಛೈಸಿದ ಭವಾನೀಧವಂ ೩೬

ಸಲೆ ಜಟಾಮಾರ್ಗದಿಂ ತಳೆವುದದು ಸಲ್ಲದೆಂ
ದೊಲಿದು ಮೇರುವಿನಗ್ರದೊಳ್ ಚತುರ್ಮುಖಿವಾಗಿ
ಬಲಿಸಿತ್ತು ಪರ್ವತದ ಪೂರ್ವಪಶ್ಚಿಮ ದಕ್ಷಿಣೋತ್ತರದ ಮುಖಗಳಾಗಿ
ನೆಲಕಿಳಿದಂ ನಾಲ್ಕು ನದಿಯಾದವಾ ಪ್ರಾಗ್ಭಾಗ
ದೊಳಗೆ ಸೀತೆಯು ವರುಣನಲ್ಲಿ ನಂದೆಯುಯ್ಯೆಲ
ಬಿಲನಲ್ಲಿ ಭದ್ರೆ ಕಾಲನ ದಿಕ್ಕಿನೊಳ್ ಸೋಮೆಯೆಂಬ ನಾಮಂಗಳಿಂದ ೩೭

ಚತುರಾಶೆ[1]ಯೊಳ್ ಚತುಷ್ಪ್ವ[1]ಣ್ಯಗಂಗೆಗಳಾಗಿ
ನುತಶರಧಿಯೊಳ್ ಕೂಡಿಹವು ತಮ್ಮ ನಾಮಮಂ
ಮತಿಗೆ ತಂದಾರುಕೀರ್ತಿಪರವರ ಪಾಪಜಾಲಂಗಳಂ ಕತ್ತರಿಸುತ
ಗತಿಯೊಳುತ್ತಮವಾದ ಗತಿಯನೀವುದರಿಂದ
ಪತಿತಪಾವನಿಯೆನಿಪಳೀಯಕನ ತುಂತುರ
ಚ್ಯುತಮುಖಸುರಾವಳಿಯ ಕೃತಪುಣ್ಯರಂ ಪೊಳ್ಪುದಾ ದಿಗಿಕೆ ದೈವಗಂಗೆ ೩೮

ಎಲೆ ದೇವ ಶಿವನಮಳ ಮಸ್ತಕದೊಳಿಹ ಗಂಗೆ
ನೆಲಕಿಳಿದು ಕಾಶಿಯೊಳ್ ಭಾಗೀರಥಿಯ ಪೆಸರ
ತಳೆದಂದಮಂ ನಿರವಿಸೆನಲು ಕೇಳ್ ಪಟ್ಟಕ್ರವರ್ತಿಗಳೊಳಾ ಸಗರನು
ಇಳೆಯಾಣ್ಮನಾತಗಂಗನೆಯರಿರ್ವರು ಕಣಾ
ಪೊಲವಿನಿಂದಿರ್ವರ್ಗೆ ಗುರುಂಗಳುಂಟಾ ಹಿರಿಯ
ಲಲನೆಗೆ ವಸಿಷ್ಠಗುರು ಕಿರಿಯಳಿಗೆ ಗುರುವೆ ವಿಶ್ವಾಮಿತ್ರಮುನಿವರ್ಯನು ೩೯

ಸತಿಯರಿರ್ವರು ಸುಖದೊಳಿರುತಿರೆ ವಸಿಷ್ಠಮುನಿ
ಪತಿಬರಲು ಹಿರಿಯ ಪಟ್ಟದರಾಣಿ ಬಹುವಿಧದ
ನುತಭಕ್ತಿಯಂ ಮಾಡೆ ಗುರು ಮೆಚ್ಚಿ ನಿನ್ನಿಷ್ಟಮಂ ಮಗಳೆ ಕೇಳೆಂದೊಡೆ
ಯತಿಯೆ ಕೌಶಿಕನ ಸುತೆಯೆನ್ನ ಸಾಪತ್ನಿಯಂ
ನ್ನತ ದ್ವೇಷಿಯವಳ್ಗೆ ಪುಟ್ಟುವ ಮಕ್ಕಳಿಗೆ ಮಿಗಿಲು
ಸಂತನಾಗಬೇಕು ನಿನ್ನಯ ಶಾಂತಿಯಿಂದಹನನೊಲ್ಲೆ ದುಷ್ಟನ ಪಾಲಿಸು ೪೦

ಮುಂಗುಳ್ನಗೆಯೊಳಗೆ ವರವನೀವುತ್ತ ಗುರು ಪೋದೊ
ಡಗಣಿತ ಪರಾಕ್ರಮವಿಶಾಲಸುತನಂ ಪೆತ್ತೊ
ಡೊಗುಮಿಗುವ ಹರುಷದಿಂ ಜಾತಕರ್ಮದೊಳಗಸಮಂಜಸಾಂಕವನೊಡರ್ಚಿ
ಸಗರನ ಸತಿಯು ಸುಖಮಿರಲು ದಿನದಿನಕ್ಕೆ ಸುತ
ನಗಲದೇ ಬಾಲರವಿಯಂದದಿಂ ಬಳೆಯುತಿರೆ
ಸೊಗಸಿನಿಂ ನೋಡದತಿನೊಂದಂ ಚಿಂತಿಸುತ ವಿಶ್ವಾಮಿತ್ರಗುರುವ ನೆನೆಯೆಂ ೪೧

ನೆನೆಯಲಾಕ್ಷಣ ಬಂದ ಗುರುವಿಗಷ್ಟಾಂಗದಿಂ
ವಿನಯದಿಂ ಪೊಡಮಂಟ್ಟವರ್ಗೆ ಪಾದ್ಯಾಸನದ
ಘನತರದ ಸತ್ಕಾರಗಳ ಮಾಡಿದಿರೆ ನಿಂದು ಕೈಮುಗಿದು ಸಂಸ್ತುತಿಸಲು

1 ಯೊಳತುಪ್ಪ (ಗ)

ಅನುವಿನಿಂ ಗುರು ನೋಡಿ ಮಗಳೆ ನಿನ್ನಿಷ್ಟಮಂ
ಮನವೊಲ್ದುಸುರ್ವುದೆನೆ ದೇವ ನನ್ನಯ ಸವತಿ
ದನುಜನಂದದ ಮಗನ ಪಡದಳ್ಳೈ ದೊಡ್ಡಗುರುವಿನ ಶಿಷ್ಯಳಾದ ದೆಸೆಯಿಂ ೪೨

ನಾನೇನ ಪಡೆವೆ ಬಡಗುರುವಿನಂಘ್ರಿಯ ಶಿಷ್ಯ
ಳಾನಭಾಗ್ಯಳು ಪುತ್ರಸಂತಾನವಿಲ್ಲೆನ
ಲ್ಕಾ ನವ್ಯಕೌಶಿಕಂ ಕೇಳಿ ಘುಡುಘುಡಿಸಿ ಕೆಂಜುರಿಯೆನುಗುಳುತ ಕಣ್ಣೊಳಂ
ಮಾನಿನಿಯೆ ನಾಂ ಬಡವನೇ ನನ್ನ ಮಹಿಮೆಯಂ
ದಾನವಾಂತಕಮುಖ್ಯ ನಿರ್ಜರರು ಬಲ್ಲರೆಲೆ
ದೀನಂ ವಸಿಷ್ಠ ತ್ರಿಶಂಕಂ ಸ್ವರ್ಗದ ಭೋಗಮಂ ಕೇಳೆ ಕೊಡಲಾರದೆ ೪೩

ಆಟ್ಟಲವ ನನಗಡ್ಡಬಿಳ್ದ ಶಿಷ್ಯನುಮಾಗ
ಲಟ್ಟಿವಾಲೆಯನಿಂದ್ರಲೋಕದುರೆಪಟ್ಟಮಂ
ಕಟ್ಟಿದೆಂ ಸುರಮುನಿಗಳವನ ಬಲ್ಪಿಂ ನೂಂಕೆ ಮರಳಿ ಪ್ರತಿಸ್ವರ್ಗಮಂ
ನೆಟ್ಟನೇ ಮಾಡಿದೆಂ ವಿಧಿಯೊಡನೆ ಮಲಿದು ಪ್ರತಿ
ಸೃಷ್ಟಿಯೊಳ್ ಸಚರಾಚರವ ಪುಟ್ಟಿಸಿದೆ ಈ ವ
ಸಿಷ್ಠಮುನಿಯೊರ್ವಣುಗನಂ ಕೊಟ್ಟನರುವತ್ತುಸಾವಿರಣುಗರನೀವೆನು ೪೪

ಎಂದು ವರವೀವುತಭಿಮಂತ್ರಿಸುತ ಮುನಿ ಪೋಗ
ಲಂದು ಸಗರನ ಕಿರಿಯರಸಿ ಗರ್ಭಿಣೀಯಾಗೆ
ನಂದನರ ಪಡೆದು ಸುಖಮಿರಲಿಕಸಮಂಜಸಂಗಾಗೆ ಪದಿನಾಲ್ಕಬ್ದಮು
ಸಂದಣಿಸುತವಗೆ ಪರಿಣಯಮೆಸಗಿ ರಾಯನಾ
ನಂದದಿಂದಿರಲಾ ಸುತಂ ಕೆಟ್ಟು ದುರ್ಗುಣದೊ
ಳಂದು ಪುರಜನರ ಪಿಡಿಪಿಡಿತಂದು ನೀರೊಳಲುಬುತ್ತ ಪೆರ್ಗಲ್ಲೊಳೊಗೆದಂ ೪೫

ಜುಟ್ಟುಗಳ ಪಿಡಿದು ಪಾರ್ವರ ಶಿರಿಪಿಡಂತ್ತಲರೆ
ಯಟ್ಟಿ ಸರ್ಬರ ಸದೆವುತಿರೆ ಸಗರ ಕೇಳಿ ಮೊರೆ
ಯಿಟ್ಟು ವಿದ್ವಾಂಸರಿಂದರಿದು ವಿಜ್ಞಾನೇಶ್ವರದ ಚಾರುತರ ಧರ್ಮಮಂ
ಬಿಟ್ಟು ಪುರಮಂ ಪೊರಡಿಸಲ್ಕವನ ಸತಿ ಮುನ್ನ
ನೆಟ್ಟನೇ ಗರ್ಭವಾಗಿರ್ದ ಸಂತನಂ ಪಡೆಯೆ
ಕೆಟ್ಟಾಣೆ ಮೋಹದಿಂದಂಶುಮಾನೆಂದೆಂಬ ಹೆಸರಿಡುತ ಚಕ್ರೇಶ್ವರಂ ೪೬

ಏನೆಂಬೆ ಬಾಲ್ಯದೊಳ್ ಸಕಲವಿದ್ಯೆಗಳ ಕಲಿ
ತೂನವಿಲ್ಲದೆ ಬಹಳಸದ್ಧರ್ಮದಿಂ ನಡೆದು
ತಾನಧಿಕ ಯೌವನದೊಳುಂ ರಾಜ್ಯವಾಳುತ್ತೈವತ್ತುವರುಷಂ ತುಂಬಲು
ಸಾನಂರಾಗದಿ ಶತಕ್ರತುಗಳಂ ರಚಿಸಲ್ಕೆ
ದಾನಧರ್ಮವ ಮಾಡಿ ತೊಂಬತ್ತುವರ್ಷಂಗ
ಳೇನುಯಿಲ್ಲದೆ ಪೋಗೆ ಜರೆಯುಡಸೆ ತಪದಿಂದ ದೇಹವಂ ಕಳಿದಮರರ ೪೭

ಪತಿಯ ಪದದೊಳ್ ನಿಂದು ಸ್ವರ್ಗಭೋಗಂಗಳನು
ಮತದಿಂದ ಭೋಗಿಸುವೆನೆಂದು ತೊಂಬತ್ತರಿಂ
ದತಿಶಯುದ ಒಂಬತ್ತುಯಾಗುಗಳುಂ ರಚಿಸಿಯುಳಿಯಲಾಗೊಂದು ಯಜ್ಞಂ
ನುತವಾದ ಕುದುರೆಯುದರದೊಳು ಸಲ್ಲಕ್ಷಣೋ
ನ್ನತದ ಮರಿ ಪುಟ್ಟುತಿರೆ ಸ್ವರ್ಣಪಾತ್ರೆಯೊಳಗಾಂ
ತತುಳಧರ್ಮಂಗಳೆಸಗುತ್ತ ಹದಿನೆಂಟುತಿಂಗಳು ನಿಶಾಲಯದೊಳಿರಿಸಿ ೪೮

ಸಂದಣಿಸುತಾ ಸಗರನಗರಮಂ ಶೃಂಗರಿಸಿ
ಎಂದಂ ತೇಜಿಯ ಬಿಡುತ ಹಜ್ಜೆಹಜ್ಜೆಗೆ ಬಿಡದೆ
ಛಂದದಿಂ ನವರತ್ನಕನಕಮಂ ತುಂಬಿಸುತ್ತದನು ದಾನವ ಮಾಡುತಾ
ನಂದದಿಂ ಚಕ್ರೇಶನಿರಲಿಂದ್ರ ಕಂಡು ಮನ
ನೊಂದು ಮರುಗುತ ಚಿತ್ರವರ್ಮನಂ ಕರೆದು ನಿ
ನ್ನಂದದಿಃ ಕುದುರೆಯಂ ಕಳ್ದುತಾರೆನೆ ಸ್ವರ್ಗಕತಿವೇಗದಿಂ ತಂದೊಡೆ ೪೯

ತೇಜಿ ಬಯಲಾಯ್ತೆಂದು ಭಟರುಲಿದು ಪೇಳೆ ಭೂ
ರಾಜ ಚಿಂತಿಸುತಾಗ ಕುದುರೆ ಬಯಲಾದುದಿದು
ಸೋಜಿಗಂ ಸಪ್ತದ್ವೀಪದೊಳುಳ್ಳ ರಾಯರಿದ ಕೊಂಡು ಜೀವಿಸಬಲ್ಲರೆ
ವಾಜಿಯಿಂ ತನ್ನ ಪದ ಪೋಪುದೆಂದಿಂದ್ರನಳಿ
ದೋಜೆಯಿಂ ಕದ್ದು ತರಿಸಿದುದೆ ನಿಜವೆಂದರಿದು
ಸೋಜಿಗದೊಳುಂದಿಸಿದರವತ್ತುಸಾಸಿರ ಪುತ್ರರಂ ಕರೆಸುತೀ ವಾರ್ತೆಯಂ ೫೦

ಪೇಳಲಾಕ್ಷಣ ಪ್ರಯಾಣದ ಭೇರಿಯಂ ಪೊಯ್ಯೆ
ಲಾಳಿಯಿಂ ಹದಿನೆಂಟುದೋಳೆ ಚತುರಂಗಬಲ
ದಾಳಿಯಿಂ ನೆರೆದು ಬರಲಾತನಾಕ್ಷಣವೆ ಸ್ವರ್ಗಕ್ಕೆ ದಾಳಿ[1][ಯ][1] ಮಾಡಲುಂ

---

1 ಯಂ (ಕಗ)

ಆಳೋಕಿಸುತ್ತಿಂದ್ರನೇನುಬಲದಾರ್ಭಟೆಯು
ದಾಳಿಯನೆ ಸಗರನಾತ್ಮಜರ ಬಲವೆನಲಳ್ಕಿ
ಪೇಳಿದುವೆ ಚಿತ್ರವರ್ಮನೆಯಶ್ವಮಂ ನೀನುಮರಸಿ ಕೊಂಡೊಯ್ದುವೆಂದಂ ೫೧

ಎಂಬ ಮಾತಂ ಕೇಳುತಾ ಕುದುರೆಯಂ ಪಿಡಿವು
ತಂಬರದ ಮಾರ್ಗದಿಂದಿಳಿದು ಭೋಗಾವತಿಯ
ಜಂಭಭೇರಿಯ ಚರಂ ಪೊಗಲು ನೀನಾರು ಹಯವೆಲ್ಲಿಯದು ಬಂದ ಕಥೆಯ
ಬೆಂಬಳಿಯ ಪೇಳೆನಲ್ ನಾನಿಂದ್ರನಾನೆನು
ತ್ತಂ ಬಿಡದೆ ತಕ್ಕಥನವಮಂ ಪೇಳುತಿರಲಿತ್ತ
ಕುಂಭಿನೀಶನ ಸುತರು ಖೋಯೆನುತ್ತಮರಪುರಿಯಂ ಮುತ್ತಿ ಬೊಬ್ಬಿಡುತ್ತ ೫೨

ಮುತ್ತುತ್ತ ದಿಕ್ಕಿದಿಕ್ಕುನೊಳಂ ಪೊರಕೋಂಟೆಯಂ
ಹತ್ತುತ್ತ ಕತ್ತಿಗಳ ಚಿಮ್ಮುತ್ತ ಸುರರ ಬಿಡ
ದೊತ್ತೊತ್ತಿ ಕಡಿವುತಂ ಜಡಿವುತಂ ಪೊಂದೇರ್ಗಳಂ ನಡಸುತಾ ಪುತ್ರರು
ಒತ್ತಿ ದಿವ್ಯಾಸ್ತ್ರಂಗಳಂ ಪಿಡಿಯುತೊಂದಿಡಲ್
ಹತ್ತುಬಿಡೆ ಸಾಹಸ್ರಮಯುತಮಾಗಾಗರಿಯ
ಕುತ್ತುವೆಡೆಯೊಳ್ ಕೋಟಿ ಮಾರ್ಗಣಂ ಪಸರಿಸಲ್ ಕಂಡು ಕಂಪಿಸುತಿರ್ದನಂ ೫೩

ನೀವೇಕೆ ನಮ್ಮ ಪುರವಂ ಮುತ್ತಿ ಸುರರಿಗತಿ
ನೋವ ಮಾಡುವದೇನುಯೆನೆ ನಮ್ಮ ಕಂದುರೆಯಂ
ನೀವೇಕೆ ತಂದಿರದ ಕೊಡಬೇಹುದಲ್ಲದೊಡೆ ಸುರರ ಲೋಕವನು ರುದ್ರ
ದೇವಗಾಹುತಿಯ ಕೊಡುವೆವು ಕ್ಷಣದೊಳೆನೆ ಸುರರ
ದೇವನಾಡಿದ ನಾವು ತರಲಿಲ್ಲ ಸ್ವರ್ಗಮಂ
ಸಾವಧಾನದೊಳು ಶೋಧನೆಗೊಳ್ವುದೆನೆ ನೋಡಿ ಸುದ್ದಿಯಂ ತಂದು ಜೀಯ್ಯ ೫೪

ಸುರರೆರೆಯ ಪುರದ ಶೋಧನೆಯ ಕೊಡಿಸಿದ ಸ್ವಾಮಿ
ನಿರತಮಾ ಗಂಧರ್ವಮಲ್ಲಿಲ್ಲವೆನಲು ಭೂ
ವರ ಕುವರರಂ ಕರೆಸುತೆಂದ ಹಯ ನೋಡೆ ಫಣಿವರನ ಲೋಕದೊಳಿರ್ಪುದು
ಭರದೊಳೈದುತ ತನ್ನಿಯಲ್ಲದೊಡೆ ನಾಗರ್ಕ
ಳುರುಬಿ ಸಂಹರಿಸೆಂದು ಕಳಂಹಲವರ್ಕೈದಧಿಕ
ಗಿರಿಗುಹೆಗಳೊಳ್ ಪೊಕ್ಕು ಪೋಗೆ ಬಹುಬಲಕೆ ಬಹುಕಾಲಮುಹುದೆಂದನಿಬರಂ ೫೫

ಕರೆದು ಹದಿನೆಂಟುಂದೋಳೆಯು ಮಾರ್ಬಲಕ್ಕೆ ಈ
ಧರೆಯ ಖಿನನೆಂಗೆಯ್ದು ತಾರಿಸುತ ನಡೆಯಿರೆನೆ
ವರಮುಕುಟವರ್ಧನರುಂ ಮಂಡಳೀಕರು ಭುವಿಯಂ ಡೋರುಗೊರೆವುತ ಮಣ್ಣನು
ಶರಧಿಗಿಡೆ ಶರಧಿಯೊಳ್ [1][ದ್ವೀ][1]ಪಂಗಳಾಗುತ್ತ
ಮೆರೆದವಾ ರಂಧ್ರವೇ ಪೆರ್ಬಟ್ಟೆಯಾದವ್ಯೆ
ಶರಧಿಯೊಳ್ ಸಗೆರಕುವರರು ಪೊಕ್ಕುಪೋಗೆ ಸಾಗರನಾಮುವಾಂತುದಬ್ಧಿ ೫೬

ಬಗೆದುಂ ಧರೆಯುಂ ಸಗರನಾತ್ಮಜರ್ ಪಾತಾಳ
ಮುಗಲದೆಯ್ದುತ್ತ ಭೋಗಾವತಿಯ ಮುತ್ತುತಾ
ಗಗಣಿತದ ಭೇರೀರವಂ ದಾಂ ಧಣಂ ಧಣಮೆನುತ್ತ ಕಹಳೆಗಳೊದರುತ
ಬಗೆಬಗೆಯು ಬಿರುದುಗಳನೆತ್ತಿ ಮಾಗಧರುಲಿಯ
ಲೊಗುಮಿಗುವ ಆರ್ಭಟೆಯಂ ಕೇಳಿ ಫಣಿರಾಜ ಬಿಡ
ದುಗುಳುತ್ತ ವಿಷವ ಸಗರಜಪುತ್ರರಂ ನೋಳ್ಪೆನೆನುತಾಗ ಘುಡುಗುಂಟ್ಟುತೆ ೫೭

ಪುಳುಂಜನರು ನಮ್ಮಬ್ಬೆತನವದೇಂ ಕಂಡಿಲ್ಲಿ
ಗೆಳಸಿ ನಡೆತಂದರೆಲೆ ಪಯಣಭೇರಿಗಳನಿದೆ
ತಳುವದೇ ಸನ್ನೆಗಳ ಮಾಡೆನಲ್ಕಾರ್ಭಡಿಸಿದವು ಕಹಳೆ ಹೆಗ್ಗಾಳೆಯುಂ
ಇಳೆಯೆ ತಾಂ ಬೆಸಲಾದ ಮಾಳ್ಕೆಯಿಂ ನಾಗಕುಲ
ಬಲಜಲಧಿ ಭೋರ್ಮೊರೆವುತಿದಿರೊಡ್ಡನೊಡ್ಡಿ ಬಿಡ
ದಳುಕದಾ ಸೈನ್ಯ ಸೈನ್ಯಂ ಕೂಡಿಯಾರ್ಭಡಿಸಿ ಮಲ್ಲಯುಂದ್ಧವನೆಸಗುತ ೫೮

ಕರಿಕರಿಗೆ ಹರಿಹರಿಗೆ ತೇರ್ತೇರ್ಗೆ ಬಲಬಲಕೆ
ಇರದೆ ಕಾದುತ್ತಿರಲ್ ಸಗರನ ತನೂಜರಾ
ಗಂರುಬಿ ಶರವರ್ಷಮುಂ ಸೈಗರೆಯುಲವು ಸಕಲ ನಾಗಬಲವಂ ಮುಸುಂಗುತೆ
ಶಿರವೊದಲ್ಗೊಂಡಂಗದೊಳ್ ತಾಗಿ ಘಟ್ಟುಗಿವು
ತರುಣಾಂಬಂಧಾರೆ ಸುರಿವುತ ಪ್ರವಾಹಂಗಳಾ
ಗರರೆ ಶಾಕಿನಿಡಾಕಿನೀಮುಖ್ಯ ಭೂತಂಗಳಿಗೆಯೌತಣಗಳಾಗಿರೆ ೫೯

ನಾಗರ್ಕಳಂರುಬುತಂತಗ್ನಿಬಾಣಂಗಳತಿ
ವೇಗದಿಂ ಸಂಧಾನಿಸುತ್ತಿಡಲ್ ಸಾಗರರ
ತಾಗುತಾಕ್ಷಣದಿ ಭೂರ್ಭುಗಿಲೆಂದು ಬಲವನಾ ಪಾಳಯುವ ಸುಡುತಬರಲು

1 ವಿ (ಕಗ)

ಬೇಗ ಕಾಣುತ್ತ ಕೌಶಿಕ ಪೌತ್ರರಿರದೆ ವಂ
ತ್ಯಾಗ ವರುಣಾಸ್ತ್ರಮಂ ಬಿಡಲು ಬಿಡಿಮಿಂಚಂಗಳ
ಮೇಘಾಳಿ ಕವಿದು ಸರಿಯಂ ಸುರಿಯಲಾಗ ತಂಪಾಗೆ ನಾಗರ್ ಖೇದದಿಂ ೬೦

ಎಲೆ ಸಗರಸುತರು ಸಾಯೆಂದೆ ಪೋಗಿಯಲ್ಲದೊಡೆ
ಯಳಿವರಾಹಾಯೆನುತ್ತಹಿಬಾಣಮಂ ಬಿಡಲ್
ಬುಳುಬುಳನೆ ಪರಿವುತ್ತ ಭುಸ್ಸುಭುಸ್ಸೆನುತ ಪೆಡೆಗಳ ಕೆದರಿ ನಾಲಿಗೆಗಳಂ
ಚಲಿಸಿ ಚಾಚುತ್ತ ಭೋರ್ವೋರೆವುತಖಿಳಾಸೆಯೊಳ
ಗಿಳಿವುತ್ತ ವಿಷವನುದ್ಗಾರಿಸಂತ ಸರ್ಪಗಳ
ಬಲವಂತದಿಂದಲರೆಯಟ್ಟಿಬರೆ ಸೈನ್ಯಚಕ್ರಂ ಕೆಟ್ಟೆವಯ್ಯೊಯೆನಲಂ ೬೧

ಬೆದರದಿರಿಯೆಂದು ನಾರಾಯಣನ ಪ್ರಾರ್ಥಿಸು
ತ್ತದಕೆ ಗರುಡಾಸ್ತ್ರಮಂ ಮಂತ್ರದಿಂ ತೊಟ್ಟೆಸೆಯೆ
ಬೆದರಿಸುತ ವೈನತೇಯರ್ ಕೋಟಿಕೋಟಿರೂಪಗಳಾಂತು ಪಕ್ಷಂಗಳಂ
ಒದರಿ ತಾರೆಗಳುದುರ್ಗುಟ್ಟುತ್ತ ಚಂಚುಪುಟ
ದದಟಿನಿಂ ನಗಗಳೀಡಾಡಂತ್ತಬರೆ ಭುಜಗ
ರೆದೆಗುಂದಿ ಕೆಟ್ಟೋಡಿ ಪತ್ತನವ ಪೊಕ್ಕು ಕಟಕಟಯೆನುತ್ತರಸಿಗುಸುರೆ ೬೨

ಉರಗರಾಜಂ ಚರರ ಕಳುಹಿ ಕೇಳಲ್ಕವರು
[1]ಹ[1]ರಿಹಯನ ಚರನೊರ್ವ ನಮ್ಮ ಯಾಗಾಶ್ವಮಂ
ಭರದಿಂ[ದ] ಕದ್ದು ಭೋಗಾವತಿಯ ಸಾರ್ದನವನೊಪ್ಪಿಸಿದೊಡೆಮಗೆ ನಿಮಗೆ
ಸರಸಮಲ್ಲದೊಡೆ ನಿಮ್ಮಂ ಕೊಲುವಲೀಪುರವ
ನುರುಹಿ ಧೂಳೀಪಟ್ಟಮಂ ಮಾಳ್ಪೆವೆಂಬುದಂ
ಚರರಿಂದೆ ಕೇಳಿಯಾ ಚಿತ್ರವರ್ಮನ ಕೂಡೆ ನುಡಿದನಾ ಶಿರಸಾಯಿರಂ ೬೩

ಏನಾದೊಡಂ ಪೋಗಲೀ ಪ್ರಾಣವಳಿದೊಡಂ
ಮಾನಮಾಚಂದ್ರತಾರಕವೆಂಬ ವಾಕ್ಯದಿಂ
ನೀನೆಯೆನ್ನಯ ಮಾನ ನಿನ್ನ ಕೊಡೆನೆನಲವಂ ದೇವತೋರ್ವನ ನಿಮಿತ್ತಂ
ಹಾನಿಯಾಗುವದಹಿಗಳೆಲ್ಲರ್ಗೆ ಜೀಯ ಕೇಳ್
ನಾನು ದೃಶ್ಯದ ಕರಣಮಂ ಬಲ್ಲೆ ಕುದುರೆಯಂ
ಮಾನವರಿಗೀಗ ತೋರಿ ಪೋಪೆ[ನೆ]ನುತೆ ಯಾಗದ ಕುದುರೆ ಏರಿ ನಿಲಲು ೬೪

---

1 ಹ (ಗ)

ಸಗರಸುತನಿದೆ ಕಳ್ಳನೆನುತ ತೋರಿಸಲಾಗ
ನಗುತವನ ಪಿಡಿ ಸನ್ನಿ ಕಟ್ಟಿ ಕುಟ್ಟಿರಿಯೆಂಬ
ಬಗೆಯ ವಚನವನಂ ಕೇಳದ ಮುನ್ನಲವನದೃಶ್ಯಂ ಪೊಂದಿಯುಗ್ರತದ
ಸೊಗಸಿನಲಿ ನಿಬ್ಬೆರಗಿನಿಂದಿರುವ ಕಪಿಲನಾ
ಹೆಗಲ ಹಿಂಗಡೆಯಲ್ಲಿ ಕಟ್ಟಿ ಕಂದುರೆಯ ಚೋರ
ನಗವೈರಿಯೆಡೆಗೆ ಪೋಗುತ್ತಲೀ ವಾರ್ತೆಯಂ ಪೇಳಿದಂ ಸಂತೋಷದಿಂ ೬೫

ಸಕಲಬಲ ಚಕ್ರಸಹ ರಾಜನಂದನರುಂ ತಾ
ವಖಿಳ [ದಿಕ್ಕು]ದಿಕ್ಕಿನೊಳರಸುತಂ ಬರಲು ತಾ
ನಕಳಂಕ ಮುನಿಯೊತ್ತಿನೊಳಿರ್ಪಾ ಕುದುರೆಯುಂ ಕಾಣುತಿವ ಕಳ್ಳನೆಂದು
ಮುಕುರಿಕೊಳ್ಳುತ್ತಾತನಂ ಬಳಸಲಾಧ್ವನಿಯ
ವಿಕೃತಿಯುಂ ಕೇಳಿ ಕೋಪಾಗ್ನಿಯಿಂ ಕಣ್ದೆರೆಯ
ಲಕಟ ತೂಲದ ರಾಶಿಗೊಂದು ಕಿಡಿಬಿದ್ದಂತೆ ಬೆಂದು ನಿಂದುರಿದವರಿಗೆ ೬೬

ಪಿಡಿಯಿರೆನುತಾಗ ಪೈಶಾಚತ್ವಮಂ ಕೊಟ್ಟು
ಸುಡುಗಾಡೊಳಿರಿಯೆನುತ್ತವರ ಧಗಧಗನುರುಹಿ
ಕಡುಬೇಗದಿಂ ಬೂದಿಯಂ ಮಾಡಿ ಮುನ್ನಿನೊಲ್ ಧ್ಯಾನಮಂ ಮಾಡುತಿರ್ದಂ
ಸುಡುತಲರವತ್ತುಸಾವಿರಮಕ್ಕಳಂ ಸೈನ್ಯ
ಮೊಡನೆ ಭೂತಗಳಾಗಿ ಕನಸಿನೊಳ್ ಕಾಣಿಸಲ್
ಪೊಡವಿಪತಿ ಸಗರ ಚಿಂತಿಸುತ್ತಲಸ[1][ಮಂಜನ ಸು][1]ತನಂಶುಮಂತಗುಸುರ್ದಂ ೬೭

ಎಲೆ ರಾಯ ನಿನ್ನ ಮೋಹದ ಚಿಕ್ಕತಂದೆಗಳ್
ಬಲವಂತರರುವತ್ತುಸಾಯಿರಂಬಡೆಗೂಡಿ
ಸಲೆಯಾಗದಶ್ವಮಂ ತರಲು ಪಾತಾಳಕೈದಿದರವರೊಳೊರ್ವ ನರನುಂ
ನಿಲವರದ ಸುದ್ದಿಯಂ ಕೊಂಡುವರಲಿಲ್ಲ ಕೇ
ಳಳಿದಿಹರೊ ಬದುಕಿಹರೊ ಕಾಣಬಾರದು ಜೀಯ
ಉಳಿದ ವಾಹಿನಿ ಚಕ್ರಮೊಡಗೊಂಡು ಪೋಗಿ ಸುದ್ದಿಯ ತಹುದು ಮತ್ಸುತೇಂದ್ರ ೬೮

ಎನಲು ಪಾತಾಳಕೈದುತಮಪ್ಪನಾಗಗಳ
ವಿನಯದಿಂ ನಾಗಕುಲಮಂ ಕೇಳುತೆಮ್ಮ ಬಲ
ದನುವಿನಿಂ ನಮ್ಮ ತಂದೆಗಳ ಕಾಣಿರೆಯಣ್ಣಿಯೆಂದು ಕೇಳಲ್ಕೆ ಮರುಗಿ

1 ಮಾಜಸನು (ಕಗ)

ಮುನಿಯಾಶ್ರಮಕೆ ಪೋಗಿ ಕೇಳೆನಲ್ಕೈದಿ ಮುನಿ
ಮನಸಿಜಾಂತ[1]ಕನ ಧ್ಯಾನದೊಳಿರಲ್ ಕೈಮುಗಿದು
ಚಿನುಮಯನೆ ಚಿತ್ಪ್ರಕಾಶನೆ ಚಿದಾನಂದರಸಭರಿತ ಮುನಿಶಾರ್ದೂಲನೆ ೬೯

ಎಂದು ಸ್ತುತಿಯಿಸೆ ಮುನಿಪ ತಂದೆರೆಯೆಲಂಶುಮಾ
ನಂದಷ್ಟತನುವೊಂದಿಯಡ್ಡಬೀಳಲ್ ಮೌನಿ
ಸಂದದಯದಿಂ ಕರೆದು ನೀನಾರು ಕಜ್ಜವೇನೆಂದು ಕೇಳಲ್ಕೆಂದನಂ
ಇಂದಿರಾಪತಿ ಸಗರನಣುಗನಣುಗನು ನಾನು
ತಂದೆಗಳು ನಮ್ಮ ಬಲ ಮಂತ್ರಿಗಳು ನಿಮ್ಮ ನಿಜ
ದಂದಮಂ ಕಾಣದೇ ಕವಿದು ದುರ್ಬುದ್ಧಿಯಿಂ ಬೆಂದು ಭೂತಗಳಾದರಂ ೭೦

ಅವರನತಿಕರುಣದಿಂ ಸಲಹಬೇಹುದು ಜೀಯ
ಭವದೀಯ ಕಾರುಣ್ಯದಿಂದೆನಲು ಮುನಿ ಮೆಚ್ಚಿ
ಸುವಿನಯಾತ್ಮನು ನೀನು ನಿಮ್ಮ ತಂದೆಗಳ ಕೋಪಾಗ್ನಿಯಿಂದಿಲ್ಲಿ ಸುಟ್ಟು
ಬಿನುಗು ಸುಡುಗಾಡಿನೊಳ್ ಶಿವನ ಮಕುಟದ ಗಂಗೆ
ಯನುವಿನಿಂ ಪರಿಯೆ ಸ್ವರ್ಗಸ್ಥರಾಗುವರು ಪೋ
ಗೆನಲೈದುತಜ್ಜಂಗೆ ಬಿನ್ನೈಸೆಯಂಶುಮಂತಂಗೆ ಪಟ್ಟವ ಕಟ್ಟುತ ೭೧

ಏವೇಳ್ವೆ ಸಗರನಾ ಸಕಲಸೌಭಾಗ್ಯಮುಮ
ನೇ ವಿಡಂಬಿಸಿ ತನ್ನ ಪುತ್ರರಂ ಬಲವನುಂ
ತಾ ವಿವಿಧ ಬಂಧುಗಳ ಸ್ವರ್ಗಸ್ಥರಂ ಮಾಡಲೆಂದು ತಪಮಂ ಮಾಡುತ
ಕೋವಿದನೆಯ್ವತ್ತು ವರುಷ ತಪಮಂ ತೀರ್ಚು
ತಾವನಿಪನಳಿಯಲದ ಕೇಳಂಶುಮಂತ ತಾಂ
ಸಾವಧಾನದೊಳು ತಪಕೈದುತ್ತ ತನ್ನ ಸುತಖಟ್ವರಗೆ ನಿಜಪಟ್ಟಮಂ ೭೨

ಕೊಟ್ಟು ತಾನಧಿಕ ವ್ರತನಿಯಮಂಗಳಿಂ ತಪವ
ಮುಟ್ಟಿಮಾಡುತ್ತಲೈವತ್ತುವರುಷಂ ತುಂಬ
ಲಪ್ಪರೊಳು ಮರಣವಾಗಲ್ಕೆ ಖಟ್ವರ ತನ್ನ ನಂದನ ದಿಲಿಪಗೊಲಿದು
ನೆಟ್ಟನೇ ಪಟ್ಟಗಟ್ಟುತ್ತ ತಪಮೆಸಗಧಿಕ
ಪುಟ್ಟಿದೈವತ್ತಬ್ದಕಂ ಖಟ್ವರಂ ಮಡಿಯೆ
ಪಟ್ಟದ ದಿಲೀಪನದ ಕೇಳಿ ಸಕಲೈಶ್ವರ್ಯಮಂ ಭಗೀರಥಗೀವುತ ೭೩

1 ಕರ (ಕ)

ವರತಪವನೆಸಗಿ ಹರನೊಲವಿಲ್ಲಡಳಿಯೆ ಪಿತ
ನಿರವರಿವುತಾ ಭಗೀರಥ ತನ್ನ ಕುವರಂಗೆ
ಧರೆಯ ಭೋಗವ ಕೊಟ್ಟು ತನ್ನಯ ಪಿತಾಮಹರು ಸತ್ತರೈ ವ್ಯರ್ಥರಾಗಿ
ನಿರಂತ ತಾನಂತಳಿಯ ಸಲ್ಲದೆಂದತಿಯುಗ್ರ
ತರತಪವ ಮಾಡುತ್ತಲೇಕನಿಷ್ಠೆಯೊಳಿರಲು
ಪರಮೇಶ ತಾಂ ಪ್ರಸನ್ನನುಮಾಗುತೆಲೆರಾಯ ನಿನ್ನಿಷ್ಟವಾವುದೆನಲು ೭೪

ಸ್ವಾಮಿ ಬಿನ್ನಪ ಚತುರ್ವಿಧ ಪಿತೃಗಳು[ಂ] ತಪವ
ನೇಮದೊಳುಪಕ್ರಮಿಸಿ ಮರಣವಾದರು ದೇವ
ತಾಮರಸಲೋಚನಾಂಕಿತಪಾದಪದ್ಮ ನಾನೇಂ ಕೃತಾರ್ಥನೊ ಹರಹರ
ಪ್ರೇಮದಿಂದೊಲಿದೆ ನನಗೈದನೆಯ ಪಿತೃಗಳಾ
ದಾ ಮಹೀಶ್ವರರು ಆರುವತ್ತುಸಾವಿರ ಕಪಿಲ
ನಾ ಮಹಾಶಾಪದಿಂದಳಿದರವರಂ ಪೊರೆಯೆ ಮಸ್ತಕಾಗ್ರದ ಗಂಗೆಯಂ ೭೫

ಪಾಲಿಸುವುದೆನುತಲಾಮ್ನಾಯಗಮ್ಯಂಗೆ ಬಿಡ
ದಾ ಲಲಿತಶರಣಜನಕಾಯಂಗೆ ಪ್ರಣಮಂಮಯ
ಮೂಲಾಯತನಘನಾಪಾಯಂಗೆ ಗಾನರಸಲೋಲಂಗೆ ಪೊಡಮಡುತ್ತ
ಲಾಲಿಸಂವುದಿನ್ನೊಂದು ಬಿನ್ನಪವನುಂ ಜಟಾ
ಜಾಲಗಂಗಾಬಿಂದಂಸಂಗಮಾತ್ರದೊಳಿವ್ಮ
ಮೂಲದಿಪ್ಪತ್ತೊಂದು ಪಿತೃಗಳಾ ಶಾಪವಂ ಕ್ಷಯಿಸಿ ಮುಕ್ತಿಯನೀವುದು ೭೬

ಮರಳಿ ಬಿನ್ನಪ ಜೀಯ ನರಸಂರೋರಗ ಯಕ್ಷ
ಗರುಡಗಂಧರ್ವಾದಿ ಚೌಶೀತಿ ಜೀವತತಿ
ಇರದೆಸಗಿದಖಿಳ ಪಾಪಗಳ ಪರಿಹರಿಸಿ ಸ್ಪರ್ಶನದಿಂದ ಸದ್ಗತಿಯನು
ಕರುಣಿಸೆಲೆಜೀಯ ತ್ರಿಲೋಕಪಾವನಿಯಾಗಿ
ಮೆಂರೆವುತಲ್ಲಲ್ಲಿ ಚರಿಸಲಿಯೆಂದು ಬಿಡೆ ಮನವ
ಲರಿ ನಸುನಗುತ್ತಿತ್ತೆವೆಲೆ ರಾಯ ನಿನ್ನ ಕೀರ್ತಿಯ ಗೆಳತಿಗನುಕೂಲೆಯಂ ೭೭

ಕೊಟ್ಟೆನೆನೆ ಹರಸಿಳೆಗೆ ಗಂಗೆ ತೆರಳಲು ಪಣೆಯೊ
ಳಿಟ್ಟ ಭಸಿತಂ ಪೀರೆ ರಾಯಂ ಕಂಗೆಟ್ಟಾಗ
ನೆಟ್ಟನಭವನ ಕುರಿತು ದ್ವಾದಶಸಹಸ್ರಾಬ್ದಪರ್ಯಂತ ತಪಮೆಸಗಲು

ಮುಟ್ಟಿಯಾತಂಗೆ ಶಂಕರನೊಲಿವುತೆಲೆ ಮಗನೆ
ಕಟ್ಟುಗ್ರತಪವ ಮತ್ತೇಕೆಮಾಡಿದೆಯೆನಲ್
ದಿಟ್ಟನೆಂದಂ ಲಲಾಟದ ಭಸ್ಮ ಪೀರ್ದುದದ ಮರಳಿ ಪಾಲಿಸುವುದೆನಲು ೭೮

ಕೃತ್ತಿಧರನುಂಗುಷ್ಠತರ್ಜನಿಗಳಿಂ ಕೂಡಿ
ಸೆತ್ತಲದು ಪಿಂತೆ ವಾಹಿನಿಯಾಯ್ತುಗುರ್ಗೊನೆಯೊ
ಳಿತ್ತ ಬೀಳಲ್ಕೆ ಭೂಭಾಗದೊಳ್ ನದಿಯಾಗಿ ಭಸ್ಮವರ್ಣದೊಳ್ಳೈದುತ
ಚಿತ್ತಜಾರಿಯ ರಾಜಮಂದಿರಂ ತಾನೆನಿಸು
ವತ್ಯಧಿಕ ಕಾಶಿಗೈದಿತ್ತು ಜೀವನ್ಮುಕ್ತಿ
ಮತ್ತೆ ಸುಕ್ಷೇತ್ರಯೆನಿಸುತ ಭಗೀರಥನ ಬೆಂಬತ್ತಿಬರೆ ಭಾಗೀರಥಿ ೭೯

ಇದಂಮಮರರಲ್ಲಿ ಮಂದಾಕಿನಿಯು ಪಾತಾಳ
ಕಿದುವೆ ತಾಂ ಭೋಗವತಿ ಮರ್ತ್ಯಕ್ಕೆ ಜಾಹ್ನವಿಯು
ಇದರಿಂದ ಸುರನಾಗನರರು ಪಾವನರಪ್ಪರೇನೊಂದು ನೆವದಿ ಮುಟ್ಟಿ
ಇದು ಸಕಲಸಂಪದದ ಭೂತಿ ಧರ್ಮಜ್ಯೋತಿ
ಇದುವೆ ಪಾಪಾಟಿಗೇಹೇತಿ ಸದ್ಗುಣರೀತಿ
ಇದುವೆ ದುರ್ಗತಿಭಯಕ್ಕುಪರತಿಯೆನುತ್ತ ದೇವಾಸುರರಂ ಕೀರ್ತಿಸುವ ೮೦

ನದಿಯಂಕೆಯುನ್ಮದಂ ಪೆರ್ಚಿ ಬರುತಿರೆ ಜಹ್ನು
ಮುದದಿಂ ಶಿವಪ್ರೀತಿಗೋಸುಗಂ ಯಜ್ಞಮ
ನ್ನೊದವಿಮಾಡುತ್ತಿರಲ್ ಬಪ್ಪ ಪ್ರವಾಹಮಂ ಕಂಡು ಶಿಷ್ಯರು ಕಪಟದಿಂ
ಒದವಿ [1]ನಿ[1]ಮ್ಮಧ್ವರಕೆ ಮಾರಿಯಿದು ನದಿಯಲ್ಲ
ವಿದನಂ ಚಿತ್ತೈಸೆನಲ್ ಒರ್ಕುಡಿತೆಯಿಂದಾಂತಂ
ಸದರದಿಂದೀಂಟಲವ ಕಂಡರಸು ಎರ್ದೆಗುಂದಿ ಮರಳಿ ಶಂಕರನ ನೆನೆದು ೮೧

ಪತ್ತೆರಳ್ಸಾಸಿರಾಬ್ದಂ ತಪವನೊಡರ್ಚಲಾ
ಮೃತ್ಯುಂಜಯಂ ಪ್ರಸನ್ನನುಮಾಗಿ ರಾಜೇಂದ್ರ
ಮತ್ತೇಕೆ ತಪವೆನಲು ದೇವ ನಿಮ್ಮಂ ಪೋಲ್ವ ಜಹ್ನು ಗಂಗೆಯಂ ಪೀರ್ದನಂ
ಸತ್ಯಯೆನಗೀಯಬೇಕೆನಲೆನ್ನ ಭಕ್ತನುರೆ
ಯುತ್ತಮದ ತಪದೊಳೊಲಿಸೈಯೆನಲ್ ತಪಮೆಸಗೆ
ಚಿತ್ತವೊಲಿದಾ ಮೌನಿ ಜಾನುವಿನೊಳಿತ್ತನಾ ಗಂಗೆಯಂ ವಿಮಳಾಂಗಿಯಂ ೮೨

---

1 ನ (ಕ)

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ಪತ್ತನೆಯ ಸಂಧಿ ಸಂಪೂರ್ಣವಾಯ್ತು ೮೩

## ಹನ್ನೊಂದನೆಯ ಸಂಧಿ

ಸೂಚನೆ :

ಹರಿಯ ಕಾಲೊಳ್ ಗಂಗೆ ಪುಟ್ಟಿತೆಂದೆಂಬ ಕೀ
ಳ್ನರರ ನಾಲಗೆಯ ನಾಯ್ವಾಲಮಂ ಮುರುಟಿಸುತ
ವರವೃಷಭನೇಕಪಾದದೆ ನಟಿಸುತಿಹಲೀಲೆ ಇಪ್ಪತ್ತುಯೆರಡನೆಯದ್ಯೆ

ಎಲೆ ದೇವ ಕೀಳ್ನಡೆಯ ನಡೆವೃತ್ತ ಸರ್ವರಲಿ
ಚಲಿಪ ಹೊಲೆಗಳ ತೊಳೆದು ಹೊಲಸುನಾರುವಳ ಕುಲ
ಫಲವಿಲ್ಲದಖಿಳದೆಂಜಲಿನಲ್ಲಿ ಬೆರೆದ ಕುಲಹೀನೆಯಂ ತಲೆಯ ಮೇಲೆ
ಒಲಿದಂ ಪೊತ್ತಿರಬಹುದೆ ಸತಿಯುಗೆಯಿದೇನೆನಲು
ಲಲನೆ ನಾನರಿಯೆ ಬಿಡುವೆನು ಗಂಗೆಯೆಂದು ತಲೆ
ಕೆಳಗುಮಾಡಲ್ ಗೌರಿ ನಾಚಿದೊಡೆ ನೆಗುತಿರ್ಪ ಮಲ್ಲಿಕಾರ್ಜುನ ಜಯ ಜಯ ೧

ಭಾಳಲೋಚನನಮಂಳಭಕ್ತಿ ಶಿವಲಿಂಗಕ್ಕೆ
ಮಾಲೆ ನೇಮುವನಡಸಿ ನಂಬೆಣ್ಣನಂ ಪಡೆದಂ
ಲೋಲಸಂಪತ್ತಿನಿಂದಿರುವ ವಲ್ಮೀಕನಾಥನಿಗನಾರತವು ಮಾಳ್ಪ
ಮಾಲೆಯಂ ಕನಕಪಾತ್ರೆಯೊಳೊಲ್ದು ಕೊಂಡೊಯ್ವೆ
ಯಾಳೋಕಿಸುತ ಬಯಲ್ಮಾಡಿ ನಿಷ್ಠೆಯ ನೋಡೆ
ತೋಳೆರಡನಿತ್ತು ಶಿವನಂ ಸೂರೆಗೊಂಡೆಯಾ ಸುಜ್ಞಾನಿಯಡಿಗೆರಗುವೆಂ ೨

ಸಕಲಶಾಸ್ತ್ರಂಗಳೊಳ್ ನೋಡೆ ಶಿವನಿಂ ಗಂಗೆ
ಪ್ರಕಟಮಾಗಿರೆ ಹರಿಯ ಕಾಲೊಳುದಿಸಿತ್ತೆಂಬ
ಯುಕುತಿಹೀನರಿರ ಭೃಗು ಶಪಿಸಲಾ ವಿಷ್ಣು ಬಹುಜನ್ಮಂಗಳಾನುತವನು
ಸುಕರವಹ ಬಲಿಯು ಭೂದಾನವಂ ಕೊಡುವಲ್ಲಿ
ಮಂಕರಕೇತನ[ನ]ಪಿತೃ ವಾಮನ ತ್ರಿವಿಕ್ರಮ
ಪ್ರಕೃತಿಯಿಂ ಗಗನಕ್ಕೆ ನೀಡೆ ಕಾಲೊಳ್ ಗಂಗೆಯುದಿಸಿತಾ ಬ್ರಹ್ಮ ಮುದದಿಂ ೩

ಹರಿಯಡಿಯ ಭಕ್ತಿಯಿಂ ತೊಳೆದನೆಂದೊಳಂವರು
ಚರಣಮಂ ತೊಳೆವುದಕೆ ಮುನ್ನ ಜಲಮೆಲ್ಲಿಯಿರು
ತಿರದೆ ಚಾಚಿದ ಕಾಲಜಾಂಡಮಂ ತಾಗೊಡೆಯೆ ನೀರು ಬಹಿರಾವರಣದಿಂ
ಸುರಿಯಲದು ಗಂಗೆಯುಮರರು ಸ್ತುತಿಸಿದರು ಶಿವಂ
ಶಿರದೊಳಾಂತಿದನೆಂದು ಬಗುಳ್ವ ಕುನ್ನಿಯೆ ಕೇಳು
ಹರಿಯ ಕಾಲ್ ಧರೆಜಲಾದ್ಯಷ್ಟತನುಗಳ್ ಕೂಡಿಯಾದವೋ ಮೇಣಲ್ಲದೆ ೪

ಭೂತದಂರೆ ಕಾಲ್ಗಳೊಳ್ ಮೂರುಭೂತಂಗಳಿಂ
ದೋತು ತಾನಾ ಹರಿಯ ಕಾಲಿನೊಳಗೀ ಗಂಗೆ
ಏತೆರಂ ಪುಟ್ಟಿದುದು ಲೋಕೇಶ ಕಾಲ್ದೊಳೆಯಲಾ ಕಮಂಡಲದ ನೀರು
ಮಾತೇನು ಮೇಲಾದರಿದ್ದುದೋ ಇಲ್ಲವೋ
[1]ಆ[1]ತೆರನ ಪೇಳು ಮತ್ತೆಲವೊ ಮತ್ಸ್ಯಂ ಕುಂಭ
ಜಾತಂ ಸಮುದ್ರಮಂ ಕೊಂಬಲ್ಲಿಯಂಜಲಿಯೊಳಿರ್ದನೇ ಸಟೆಯೊ ಪೇಳ ೫

ಗಂಗೆಯಾ ತೀರದೊಳ್ ವಾರಾಹರೂಪಮಂ
ಗಾಂಗೇಯ ಕೊಲುವಲ್ಲಿ ಗಂಗೆಯಿಲ್ಲವೊ ಉಂಟೊ
ಪಿಂಗದೇಯುಸುರು ವಾಮನ ಮೊದಲೊ ಕಿಟಿ ಮೊದಲೊ ಮತ್ತೆ ಬಲಿಧಾರೆಯೆರೆಯೆ
ಮಂಗಳಾತ್ಮಕದ ಜಲಮೆಲ್ಲಿರ್ದುದೋ ಕೇಳ
ಲಂಗಬಹಿರಾವರಣಜಲವೀಗ ಹರಿಯು ಕಾ
ಲುಂಗುಷ್ಠಘಾತದಿಂದೊಡೆದಿಳಿದು ಜಲವಿಲಯವಾಗುತಿರಲಾ ಗಂಗೆಯಂ ೬

ಶಿವನು ಮಸ್ತಕದಲ್ಲಿ ಧರಿಸಿದನೆನುತ್ತಲುರೆ
ಭುವಿಯ ನರನೀಚರೂಳುವರದಕೆ ಖಂಡನಂ
ಶಿವ ತನ್ನ ಪಂಚಾಸ್ಯದಿಂ ಪಂಚತತ್ವಗಳ ಕಲ್ಪಿಸುತ್ತದರೊಳಂಡಂ
ತವೆ ನಿರ್ಮಿಸುತ್ತದರ ಸೃಷ್ಟಿಯಂ ಮಾಡೆಂದು
ಸವೆಯದಿರಂವಧಿಕಾರವಂ ಕೊಟ್ಟು ವಿಷ್ಣುವಿಂ
ಗವಿರತಂ ಸ್ಥಿತಿಕರ್ಮವಂ ಜಲಕ್ಕಧಿದೈವ ನೀನೆಂದು ವಹಿಸಿದನಲ ೭

ಎಲೆ ವಾದಿ ಮೊದಲೆ ಜಲವಂ ಕೊಂಬುದೇ ಸತ್ಯ
ನಲವಿನಿಂ ಹರಿಪದೋದ್ಭವ ಗಂಗೆಯೆಂಬುದ
ನ್ನೊಲಿದು ನೋಡಿದಡೆ ಮೊದಲೇ ಮಿಥ್ಯ ವೈಷ್ಣವನೆ ವಿಷ್ಣುವಿನ ಉಂಗುಷ್ಠದ

1 ಲೀ (ಕ)

ಬಲುಘಾತದಿಂದೊಡೆದು ಸೋರ್ದುರ್ ಬಹಿರಾವರಣ
ಜಲವೊಂದು ನದಿಯಾಗಿಯಂಬರದೊಳುಂಟು ಕೇ
ಳೆಲವೊ ಮತ್ತೊಬ್ಬ ಕಾಲಿಂದೊದೆಯೆ ಭಾಂಡೋದಕಂ ಸುರಿಯಲವ[ನ] ಕಾಲಿಂ ೮

ಉದಿಸಿತೇ ಸುಮ್ಮನಿರು ಮತ್ತೆ ತ್ರಿವಿಕ್ರಮಂ
ಒದೆಯೆ ಕಾಲಿಂದಜಂ ಕೋಪಿಸಿ ಕಮಂಡಲುವೊ
ದೆದ ಜಲದಿ ಕಾಲ ಕತ್ತರಿಸಲ್ಕೆ ಇಟ್ಟನಲ್ಲದೆ ಭಕ್ತಿಯಿಂ ತಳಿದನೆ
ಪದುಮದ ಪುರಾಣದಲಿ ಸತ್ಯಲೋಕವನುಳುಹೆ
ಬಿದಿ ಕಮಂಡಲಜಲಾಸ್ತ್ರದಿ ಹರಿಯ ಕಾಲ ತರಿ
ದೊದಗಿಸಿದನಖಿಲರ್ಗೆ ಮುದವನೆಂದುಸುರಿದುದ ಜನ್ಮಮಧ್ಯದಿ ಕೇಳಿಯ ೯

ಶ್ರೀಶೈಲಬಿಲದಲ್ಲಿ ನರಸಿಂಹನಿರ್ದಧಿಕ
ಭಾಸುರ ಸುಮಲ್ಲಿಕಾಕುಂದಬೃಂದಂ ಪೋಲು
ವಾ ಸಾರಪಾತಾಳಗಂಗೆಯಂ ಮಂದಾಕಿನೀಮುಖ್ಯತೀರ್ಥಂಗಳಂ
ಲೇಸಾಗಿ ನರಸಿಂಹನೆಸಗಿದುದು ಮೊದಲೊ ತಾ
ನೈಸಲಜನೆರೆದುದಕ ಮೊದಲೊ ಹರಿ ಪಾದಾಂಬು
ವೈ ಸಮಸ್ತರ್ಗೆ ಯೋಗ್ಯವೊ ಹರಿಯ ಕಾಲ್ನೀರು ಹರಿಯ ಸ್ನಾನಕೆ ಯೋಗ್ಯವೆ ೧೦

ಹರಿಯ ಪಾನಾದ್ಯಖಿಳಕ್ರಿಯೆಗಳಿಗೆ ಸಲುವವೆಂ
ತಿರದೆ ಪೇಳೆನೆ ವಾದಿ ಹರನ ಕಣ್ಣೀರೆತು
ಸರಿಯೊಯೆನೆಯುತ್ತಮಾಂಗಕೆ ನೀಚದೇಹ ಪಡಿಯೆಂತಧಮ ಕೇಳು ಶಿವನ
ವರ ನಯನತ್ರಯದೊಳುದಿಸಿದ ಪಯೋಬಿಂದುಗಳ್
ಧರೆಯಲ್ಲಿ ಬೀಳೆ ರುದ್ರಾಕ್ಷಂಗಳೊಗೆದವೆಂ
ದೊರೆವುದಲೆ ಕಾತ್ಯಾಯನೀಯಶಾಖೆಯಲಿ ಸಾಂಗೋಪಾಂಗವಾಗಿ ಕೇಳು ೧೧

ಗಳದಲ್ಲಿ ಕಂಠಮಾಲೆಯ ತೆರದಿ ಬಿಡದೆ ಕುಂ
ಡಲದ ಪಾಂಗಿಂ ಕರ್ಣದೇಶದಲಿ ಕೈಯಲ್ಲಿ
ಬಳೆಯಂತೆ ಭುಜಗಳಲಿ ತೋಳಬಳೆಯಂತೆ ಯಜ್ಞೋಪವೀತದ ಭಾವದಿಂ
ಗಳದ ಕಿಗ್ಗಡೆಯಲ್ಲಿ ನಾರಾಯಣನು ವಿಧಿಯು
ಬಲವೈರಿಯುಂ ಸುರಾಸುರರುಂ ರುದ್ರಾಕ್ಷಗಳ
ಪುಲಕಾಮರಾಗಿ ಮೋಕ್ಷವ ಧರಿಸಿದರುಯೆಂದು ಪೇಳಿದುದ ಕೇಳಿಲ್ಲವೆ ೧೨

ಅದುಕಾರಣಂ ಶಿವನ ದೇಹ ಪಾವನವಾಗ
ಲದರಿನಿಂ ಪಾವನದ ರುದ್ರಾಕ್ಷೆಯೊಗೆದವೈ
ಯಥಮಕೃಷ್ಣನ ಕಾಲನಾ ಕಿರಾತಕನೆಚ್ಚ ರಾಕ್ಷಣಂ ಕಾಲಿನಿಂದ
ಮಿದುಳು ರಕ್ತಂ ಸುರಿದು ಸಾಯಲರ್ಜುನ ಸುಡ
ಲ್ಕದು ಪೊಳೆಯು ಕೂಡಿ ಪೊಡ್ಡಿಯಂ ಜಗನ್ನಾಥದೊಳ
ಗೊಪವಿ ಮೂರ್ತಿಯ ಕಾಲಕಾಲಕ್ಕೆ ಕೀವುರಕ್ತವ ಸುರಿವುದೇ ಸಾಕ್ಷಿಯೈ ೧೩

ಸದಮಳ ಸುಸಚ್ಚಿದಾನಂದಲಕ್ಷಣನೆಂದು
ಪದೆದು ಶಿವನಾಗನ್ಯವಿಲ್ಲೆಂದು ಶಿವನ ನೋ
ಡಿದರೆ ಶಿವನೆಂತೆಂದು ನಾಮರೂಪಂಗಳಿಂ ಪೇಳ್ವುದು ಪುರಾಣರಾಜಂ
ಇದನರಿಯದೇ ನುಡಿವುತಿಹರು ನರಕಿಗಳು ಕೇ
ಳದೆ ಶಿವನ ದೇಹಸಾವಯವವೇ ನಿರವಯುವ
ಮಿದರಂತೆ ತೋರುವಾ ವಿಧಿ ಹರಿಗಳ ಶರೀರಗಳು ಪ್ರಾಕೃತಂಗಳಹವು ೧೪

ಶಿವನ ದೇಹಂ ಪಾವನಂ ಸಕಲತೀರ್ಥಗಳ್
ಶಿವಲಿಂಗಮೂಲದೊಳಗಡಗಿರ್ಪವೆಂಬ ವಾ
ಕ್ಯವ ಕೇಳಲಿಲ್ಲವೇಯೊದರಿನ್ನೊಂದು ಪೌರಾಣಿಕವ ಕೇಳು ಬಿಡದೆ
ಶಿವನ ಪಾದಾಂಗುಷ್ಠದಗ್ರದಿ ಚತುಷ್ಷಷ್ಟಿ
ಭುವನಪಾವನತೀರ್ಥಗಳ್ ಪುಟ್ಟಿತೆಂಬುದನು
ವಿವರವರಿಯದೆ ವಾದವಂ ಮಾಡಬೇಡ ಪರವಾದಿ ಬಿಡು ಬಿಡು ಮೋಹವಂ ೧೫

ಹರಜಟಾಗ್ರದ ಗಂಗೆಯಂ ಭಗೀರಥ ತರಲು
ಉರುವ ಭಾಗೀರಥೀನಾಮವಾದುದು ಇಳೆಯೊ
ಳಿರದೆ ತಾಂ ಜಹ್ನುಗತವಾಗೆ ಜಾಹ್ನವಿಯೆಂಬ ಪೆಸರಾಂತುದಾ ಗೌತಮಿ
ವರಗಂಗೆಯೈ ಗೌತಮಂ ತರಲ್ಕಾ ಗಂಗೆ
ಪರಿಯಲ್ ಗೋವಿನ ಮೇಲೆ ಗೋದಾವರಿಯುಮಾದ
ಳಿರದೆ ನಾಮಂಗಳಿಂದಿಂತು ಹರಿಚಾರಣೀಯೆಂದೊಂದು ಗಂಗೆಯುಂಟೆ ೧೬

ಎಲೆ ಕೇಳು ದೇವಗಂಗೆಯು ನಾಮರಾಜಿಯೊಳ
ಗೊಲವಿನಿಂದಚ್ಯುತನ ಕಾಲೊಳುದಿಸಿದ ಗಂಗೆ
ಇಳೆಯೊಳಿಂದುಸುರಾವುದದುವೆ ಮಂದಾಕಿನಿಯೊ ಕೃಷ್ಣೆಯೋ ಭೀಮರಥಿಯೊ

ಸಲೆ ಪಿನಾಕಿನಿಯೊ ನೋಡಲ್ ಪಾಪನಾಶಿನಿಯೊ
ಮಲಹಾರಿಣಿಯೊ ತುಂಗೆಯೋ ನರ್ಮದೆಯೊ ಸುಮಂ
ಗಲೆಯೊ ಕಾವೇರಿಯೋ ಕೌಶಿಕಿಯೊ ತಾಮ್ರಪರ್ಣಿಯೊ ಗಂಡಕಿಯೊ ಕಪಿಲೆಯೊ ೧೭

ಧರೆಯೊಳಗೆ ವಿಷ್ಣುಪದಿಯೆಂದಿಲ್ಲವೇ ಗಂಗೆ
ಗುರುತರದ ನಾಮವೆನೆ ವಿಷ್ಣುಪದವೆನೆ ಗಗನ
ಮಿರದಲ್ಲಿ ಸಂಚರಿಪ ದೆಶೆಯಿಂದ ವಿಷ್ಣುಪದಿಯೆಂಬ ನಾಮಂ ಬಂದುದು
ಸುರರ ಮಾರ್ಗಕ್ಕೇತಕಾ ಪೆಸರ್ ಬಂದುದೆನೆ
ತಿರುಗಿ ಕೇಳ್ವೈ ವಿಷ್ಣುವೆನೆ ವ್ಯಾಪಕಂ ಪದಂ
ಸ್ಥಿರತೆ ಮೇಣೆರಡಕ್ಕೆ ಕರ್ಮಧಾರಯಸಮಾಸಂ ಬಂದುದಮರದಲ್ಲಿ ೧೮

ಶಿವತತ್ವವೇ ಮೊದಲು ಭೂಮ್ಯಾದಿ ತತ್ತ್ವದೊಳ
ಗವಿರತಂ ವ್ಯಾಪಕಮುಮಾ ಗಿಣ್ ಗತೌಯೆಂಬ
ಸವಿಶೇಷಧಾತ್ವರ್ಥದಿಂದಾ ಚರಾಚರಕೆ ಸ್ಥಾನಮಾಕಾಶಮಾಗೆ
ತವೆ ಪದಂಯೆಂಬುದಕೆ ನೈಘಂಟುಕಂ ಪೇಳ್ವ
ನವಿರಳದ ವಿದ್ವಜ್ಜನಂಗಳದರಿಂ ನಭವೆ
ಸವೆಯದ ಮಹಾಬಿಲಂ ವ್ಯಾಪಕಂ ಮತ್ತೆಯಾತ್ಮಾಕಾಶಮುಯಮೆನಿಪ್ಪ ೧೯

ಶ್ರುತಿಯುಂಟು ಆಕಾಶವೇಯಾತ್ಮಯಾತ್ಮನೆನೆ
ಮತಿವಂತ ಪರಮಾತ್ಮನೇ ನೋಡೆ ಪರಶಿವನು
ನುತಿಸುವಡೆ ಪರಶಿವನೆ ಪರಬ್ರಹ್ಮ ತತ್ಪರಬ್ರಹ್ಮ ಏಕೋರುದ್ರನು
ದ್ವಿತಯದಿಂ ವಿರಹಿತಂ ತಾನಣುವಿಗಣುವಾಗಿ
ಮಿತವಿಲ್ಲದೇ ಮಹತ್ತಿಗೆ ಮಹತ್ತಾಗಿ ತೋ
ರುತ ಶುದ್ಧಪರಿಪೂರ್ಣ ವಿಶ್ವತಃಚಕ್ಷುರುತ ವಿಶ್ವತೋಬಾಹುವೆನಲು ೨೦

ಆದರಿಂ ಜಗದ್ವ್ಯಾಪ್ತನೀಶ್ವರಂ ಈಶ್ವರನೆ
ಹದಿದಂಬರಾಂಬರವೆ ವಿಷ್ಣುಪದಮಾಗಲಂ
ತದುಕಾರಣಂ ವಿಷ್ಣುಪದಿಯೆನಲ್ ಶಿವಗಂಗೆಯೆಂದೊಡನ್ಯೋನ್ಯನಾಮಂ
ಪದುಳದಿಂ ಸಲ್ವುದೈ ವಿಷ್ಣುವಭಿಧಾನವೇ
ನದು ಶಿವಾಹ್ವಯ ಗಗನಕಂ ರೂಢಿನಾಮ ಕೇ
ಳದು ಹರಿಗೆ ಗುಣಗಮ್ಯನಾಮಮಲ್ಲದೆ ನಿಜದ ನಾಮಂವಲ್ಲಂಧಕರಿರ ೨೧

ಧರಣಿಯೇ ಪೀಠಮಂಬರಲಿಂಗವೆಂಬುದಂ
ಮರೆಶಿರೇ ತಾರಕಾಪುಷ್ಪವೆಂಬ ವಿಶೇಷ
ಣ ರಸಕ್ಕೆ ತಾತ್ಪರ್ಯಮಂ ನೋಡದೇ ಲಿಂಗಮೆನಲಾ ಶಿವಂ ವ್ಯಾಪಕಂ
ಹರಿಯೆ ಭೃತ್ಯಂ ಹರಂ ಕರ್ತೃವದರಿಂ ಭೃತ್ಯ
ನಂರುವ ಪಾದಾಂಬುವಂ ಧರಿಸುವುದಯೋಗ್ಯ ಕೇ
ಳರರೆ ಸೇವಕಸೇವ್ಯನಮಳಪದವಾರಿಯುಂ ಕೊಂಬುದೆ ಮಹಾಸೌಖ್ಯವು ೨೨

ಇದನರಿಯದೇಯುಸುರುತಿಹರು ನರಕದೊಳಾಳ್ದು
ಹೊದಕಂಣಿಗೊಳುತ್ತೆಳ್ದು ಮತ್ತಲ್ಲಿಗೈದುವರು
ಮದದೊಳಂಧರು ಹರಿಪದೋದ್ಭವದ ಗಂಗೆಯಂ ಹರ ತಾಳ್ದನೆಂದೆನುವನ
ವಿಧಿಯಿಂದವನ ನಾಲಗೆಯನುತ್ತರಿಸಿ ವಂತ್ತಿ
ರದೆ ಬಾಯಲ್ಲಿ ಘುಳುಘುಳನೆ ಕಾಯ್ದುರ್ಕಿನುರೆ
ಚದರದೇ ಪೊಯ್ದಡೆನ್ನಳಲು ಮಾಣದು ನೋಡಲಂದಿಗಾದರು ಹರಹರ ೨೩

ಸಾವಯವನಾಗಿ ಪ್ರಾಕೃತತನುವೆ ಹರಿಯೆಂಬ
ಠಾವಿನಲಿ ಗುರುತನಾಲಿಸಿ ಭೈರವಂ ಬಂದು
ಈವುದಂ ರಕ್ತಭಿಕ್ಷೆಯಂನೆನಲ್ ನಿಟಿಲದಿಂ ನೆತ್ತರಿತ್ತುದ ಮರೆಶಿರೆ
ಈವಿಚಾರದಲಿ ನಿರವಯವನಲ್ಲಚ್ಯುತಂ
ಭಾವಿತಂ ನಿರವಯವನಿಗೆ ವಿಷ್ಣುನಾಮ ಮ
ತ್ತಾ ವಿಷ್ಣುಪದಕೇನುಗತಿಯೆನಲ್ ವ್ಯಾಪಾರಶೀಲನೆಂದರ್ಥವದಕೆ ೨೪

ಗೋ ಎಂಬುದಾಕಾಶದಲ್ಲಿ ನಯನಗಳಲ್ಲಿ
ನೋಯದಿರುತಿಹುದು ಮತ್ತಾ ಬ್ರಹ್ಮರಂಧ್ರದ ಸು
ತೋಯಜದ ದಳಸಹಸ್ರಾಂತರಾಳಿಕಬಿಂದುವಂಯ ಸೋಮಮಂಡಲದಲಿ
ಕಾಯದಿಳಿವಮೃತವೇ ತದ್ಗಗನದೊಳ್ ಚರಿಸ
ಲಾಯಿತ್ತು ಗಂಗೆಯುದನಖಿಲನಾಡೀಮುಖಕೆ
ಬಾಯಿಂಗಾಣಿಸದೆ ಧರಿಸಲ್ಕೆ ಗಂಗಾಧರನೆನುತ್ತ ನಾಮಂ ಬಂದಂದು ೨೫

ಗಿರಿರಾಜನಂದನೆಯ ಕೂಡೆಯಂತಃಪುರದಿ
ಸರಸವಾಡುವ ಕಾಲದಲ್ಲಿಯಾನಂದದಿಂ
ಪೊರಮಡಲ್ಕಾಯಮೃತಮಕ್ಷಿತ್ರಯದ್ವಾರದಿಂದಾಗ ಗಂಗೆಯೆಂನಿಸೆ

ಪರಿಯಲಾರದ ಮೋಹದಿಂದದಂ ಜಡೆಯ ಕಂ
ಧರದೊಳದನಾಂತು ನೆತ್ತಿಯ ಬಾಯಲದರ ಶೀ
ತರಂಚಿಯಂ ಶಂಭುವರಿಸಿದನಾಗಿ ಗಂಗಾಧರಾಂಕನಂ ಬಂದುದಾಗ ೨೭

ಪರಮೇಶನಾ ಗಂಗೆಯಂ ಶಿರದೊಳಾಂತನದು
ಪರಮಪಾವನಮೂಲ ಗಂಗೆಯಾನದಿಯ ಸಾ
ವಿರಪಾಲಿನೊಳಗೊಂದು ದೇವಗಂಗೆಯು ದೇವಗಂಗೆಯಾ ಕೋಟ್ಯಂಶದ
ವರಬಿಂದುವಿಂದಬ್ಧಿಗಳ ಜನನ ಸರ್ವಕಂ
ಮರಳಿ ಮೇಘಂಬೊಕ್ಕು ಧರೆಗಿಳಿವುತಖಿಳಕುಲ
ಗಿರಿನಗಗಳಿಂದಂದಿಸಿ ಗಂಗೆಯುಪಗಂಗೆಯನು ಗಂಗೆಯಗಣಿತಮಾದವು ೨೭

ಇಂತ್ಯೇಕ ಗಂಗೆ ಬಹುವಿಧದ ಗಂಗೆಗಳಾಗಿ
ಶಿಂತಿಣಿಸಿ ಮೆರೆವುತಿರ್ಪವು ಶಿವನ ಮಹಿಮೆಯಂ
ಯೆಂತೆಂದರಿಯದೂಳುತಿಹ ನರಕಿಗಳ ಮಾತನುಳಿಯ್ಯೆ ಸ್ವತಂತ್ರನೆನಿಪ
ಕಂತುಹರ ತನ್ನ ಪರಮಾನಂದಲೀಲೆಯಿನ
ನಂತಜಗವಂ ನಿರ್ಮಿಸುತ್ತಜಗನುಜ್ಞಾನ
ಮಂ ತಳೆದು ಕೆಡದವೊಲ್ ತನ್ನನರಿಯಲ್ಕೆ ನಿಜದುನ್ನತಿಯ ಪ್ರಕಟಿಸಿದನು ೨೮

ಇನನ ಘನಕಿರಣದೊಲ್ ರತ್ನಕಾಂತಿಯೊಲೆಸೆವ
ಚಿನುಮಯಂ ತನಗನನನ್ಯತೆಯಾಂತ ಸದ್ಭಕ್ತಿ
ಯನಘ ಸನ್ಮಾರ್ಗ ಸುಜ್ಞಾನ ಸಂವಿಚಾರ ಸದ್ಧರ್ಮವೇ ಮೂರ್ತಿಯಾಂತಂ
ಘನವಿಶೇಷಣ ವಿಶೇಷ್ಯದ ಪಾಂಗಿನೊಳ್ ಶಿವನೊ
ಳನಂವಿನಿಂದೊಪ್ಪುವತಿ ವೃಷಭೇಶ್ವರಂ ನೋಡ
ಲನುಪಮಂ ತನ್ನ ಸದ್ಧರ್ಮವ್ಯೆ ಕೃತಯುಗದೊಳೊಪ್ಪಿ ಪ್ರವರ್ತಿಸಿತಲ ೨೯

ತ್ರೇತೆಯೊಳ್ ಧರ್ಮವೇ ಮೂರುಪಾದಂನಡೆದು
ದಾ ತೆರದ ದ್ವಾಪರದ ಯುಗದೊಳಾ ಧರ್ಮ ತಾಂ
ಸಾತಿಶಯಮೆರಡುಪಾದಂ ಕಲಿಯೊಳಾಯ್ತೇಕಪಾದ ಧರ್ಮ[ಂ] ನಡೆವುದು
ಭೂತೇಶ ವೃಷಭಮೂರ್ತಿಯೆ ಧರ್ಮಮೂರ್ತಿಯೆಂ
ದೀ ತೆರದಿ ಧರ್ಮಮಂ ಯುಗಯುಗಾಂತರದಲೀ
ಖ್ಯಾತಿಯಿಂ ಸ್ಥಾಪಿಸುವನೆಂಬಂದಕೆ ಲಿಂಗದಿದಿರಿನ ವೃಷಭಪಾದ ಸಾಕ್ಷಿ ೩೦

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತ ರೂಪರಹ ಚತುರ್ಗುರಂಚರಿತದೊಳ್ ಚತುರ್ಥ
ದತಿನೂತ್ನವಹಕಾಂಡದೊಳ್ ನೋಡೆ ಪನ್ನೊಂ[1][ದು][1] ಸಂಧಿ ಸಂಪೂರ್ಣವಾಯ್ತು ೩೧

---

1 ದನೆಯ (ಕಗ)

# ಹನ್ನೆರಡನೆಯ ಸಂಧಿ

ಸೂಚನೆ :

ಪುಷ್ಕಳದ ಕ್ಷಾಮದೊಳ್ ಗೌತಮಂ ಪಾರ್ಬರ ಮ
ನಸ್ಕರಿಸಿ ಪೊರೆಯಲವರೆಯ್ದುತಿರೆ ಶಾಂಡಿಲ್ಯ
ನಿಷ್ಕಾರಣಂ ವೈರ ಸಲ್ಲದೆಂದನ್ನದಾನದ ಕಥೆಯ ಪೇಳ್ದ ಮುನಿಪ

ಹರನಧಿಕಯುದ್ಧದಿಂ ಬಂದಂ ಶಯ್ಯಾಗೃಹದೊ
ಳೊರಗಿ ಬಿನದದೊಳಿರ್ಪ ಕಾಲದೊಳಗಗಜೆ ನಿಜ
ವರನೆಡೆಗೆ ಬರೆ ಕಂಡು ಬಾಬಾಯೆನಲ್ಕೆ ಹತ್ತಿರೆ ಸೇರುತಭವ ಪೊದೆದ
ವರದುಕೂಲವ ಕಂಡು ಭಯಂಗೊಂಡು ಮೊಗದಿರುಹಿ
ಪರಿವುತಿರೆ ನೋಡಿ ವಸನಮಂ ಮರಸಿ ಕೈವಿಡಿದಂ
ಸರಸಿಜಾಸ್ಯೆಯನಪ್ಪಿ ಮೆರೆವಮಳ ಮಲ್ಲಿಕಾರ್ಜುನಲಿಂಗ ಕೊಡುಗಿಪ್ಪವಂ ೧

ನೆಟ್ಟನಂಗಡಿಯೊಳಗೆ ಮುಕ್ತನಾಗಿರೆ ರಾಯ
ಕಟ್ಟಿದಿರಿನೊಳ್ ಕಂಡಿದೇನಕ್ಕಜಂ ಬಸವ
ಮೆಟ್ಟಿ ಹೂಳಿಸಿ ಕೊಂಬ ನರರ ಗಂಡಂ ಸುಕೈಲಾಸಕ್ಕೆ ಪೋಪೆವೆಂಬ
ಮಿಟ್ಟಿ ಭಂಡರ ಮಿಂಡನೆಂದು ಹೊಗಳಿಸಿ ಕೊಳ್ವ
ಘಟ್ಟಿ ಬಿರಿದಿನ ಶರಣ ಸತ್ತನೇಕೆನುತ ನಗೆ
ಮುಟ್ಟಿ ಶರಣರ ಕರೆದೆ ಬಟ್ಟಬಯಲಾದವಂಳ ಘಟ್ಟಿವಾಳಂಗೆರಗುವೆಂ ೨

ಕರುಣದಿಪ್ಪತ್ತೆರಡನೆಯ[1]ಡ[1]ವೊಂದಡಿಯಾದ
ವರಲೀಲೆಯಂ ನಿರೂಪಿಸಿದಿರಲೆ ಜೀಯ[2]ಯಿ[2]
ನ್ನುರುತ್ರಯೋವಿಂಶತಿ ಸುಖಾವಹದ ಲೀಲೆಯಂ ಬೋಧಿಸೆ ಕೃತಾರ್ಥನಪ್ಪೆಂ
ಭರದಿಂದ ಪಾಲಿಸುವುದೆನಲು ನಸುನಗುತ ಕೇಳ್
ವರಹನಪುರಾಣದೊಳಗೊರೆದ ಕಥೆಯಂ ಸಾಧಂ
ತರಮಾಗಿ ಪೇಳುವೆವು ಪನ್ನೆರಡು ವತ್ಸರದ ಬರ ತಿಳಿಯೆಲಾ ಗೌತಮಂ ೩

---

1 ಲಿ (ಗ)   2 ಐ (ಕ)

ಹರನ ಕುರಿತುಗ್ರತಪವಂ ಮಾಡೆ ಮೌನಿಪಂ
ಗಿರದೆ ಶಂಕರ ಮೆಂಚ್ಚಿ ಸುಪ್ರಸನ್ನನುಮಾಗಿ
ವರವ ಬೇಡೆನೆ ದೇವ ನಾನಿಳೆಯೊಳಖಿಳಬೀಜವ ಬಿತ್ತಲಾಕ್ಷಣದೊಳು
ವರ ಫಲಗಳಪ್ಪಂತೆ ಕರುಣಿಸೆನೆ ದೇವ ಬಂ
ಧುರಮನೋಭೀಷ್ಟಮಂ ಕೊಡೆ ಸುಖದೊಳಿರೆ ಮುನಿಪ
ಬರಬಂದುದ್ಯೆದುವರ್ಷದ ಮಾರಿ ಸುಖವೈರಿ ಘಾತಕಕ್ಕುಪಕಾರಿಯು ೪

ಒಲಿದಾಗ ಕಾಲಕಾಲಕೆ ಮಳೆಗಳಾಗದೇ
ಘಳಿಲನೇ ಗಂಗಾದಿ ನದಿಗಳಿಂಗಿದವಧಿಕ
ಜಲಹ್ರದಗಳುಂ ಕೆರೆಯು ಕಾಸಾರ ಕೂಪವಾಪಿಗಳು ನಿರ್ಝರವಾರಿಯುಂ
ಸಲೆ ಬತ್ತಿ ಖಗಮೃಗಂಗಳು ನರರು ಪಶುಗಳುಂ
ಬಳಲಿ ಬಾಯಾರಿ ಮೂರಾರುದಿವಸಕ್ಕೊರ್ಮೆ
ಒಲಿದನ್ನಪಾನತೃಣ ಮುಂತಾದವುಂ ದೊರೆಯದಖಿಳಜೀವಗಳಳಿದವು ೫

ಕಂಡು ಕಡುನೊಂದು ದಾರುಕವನಾಶ್ರಮದ ಮುನಿ
ಷಂಡ ಬ್ರಾಹ್ಮಣರು ಹೆಂಡಿರುಮಕ್ಕಳೆಲ್ಲರುಂ
ದಿಂಡುರುಳನುರುಳುತ್ತ ನಾಲ್ಕಾರು ಉಪಪಾಸಮಿರುತಲಾವಲ್ಲಿ ನೋಡಿ
ಹಿಂಡಿಯುರುವೆಯಂ ನೀರ ಬಾಯೊಳೆರೆಯಲ್ಕಿಲ್ಲ
ದಂಡಲೆಯುಂತವರು ಸಾವುದನರಿದು ಗೌತಮನು
ಚಂಡತಪದಿಂದ ಹರನೊಲಿಸಿಪ್ಪಮಂ ಪಡೆದ ಚಂದಮಂ ನೆನೆವುತವರು ೬

ಏತೆರದೊಳಾದಡಂ ಗೌತಮನಮಾಶ್ರಮ
ಕ್ಕೊಕೇತು ನಾವೆಲ್ಲರುಂ ಪೋಗವೇಳ್ಕೆನುತ ಮುನಿ
ವ್ರಾತಸುತರಿಂ ಸರ್ವರಲ್ಲಲ್ಲಿ ಕೊಳ್ಳಿರುತ ಪೊರಳುತಂ ತೆವಳುತ್ತಲಂ
ತಾತ ಸತ್ತೆವು ಸತ್ತೆವೆನುತ ಬಾಯ್ಬುತ್ತಿಬರೆ
ಭೀತಿಯಿಲ್ಲದೆ ಬರದ ಖಾತಿಯರಿಯಂದೆ ಬರ್ಪ
ರೋತು ಸುಖದಿಂದ ಗೌತಮನ ವಾಸದೊಳಿರ್ಪರಂ ಕಂಡು ಸಂತೋಷಿಸೆ ೭

ತಾಳಿಯತಿಹರುಷಮಂ ತಾನಿದಿರ್ವಂದ ಮುನಿ
ಜಾಲಕಷ್ಟಾಂಗದಿಂ ವಂದಿಸುತೆ ಗೌತಮಂ
ಪೇಳಲೇನವರ ಸಂಭ್ರಮದಿಂದ ಕರೆತಂದು ಬೇರೆ ಬೇರಾಶ್ರಮಂಗಳಂ

ಹೇಳಿ ತೋರಿಸಿಕೊಡುತ್ತಖಿಳೋಪಕರಣಗಳ
ಮೇಳವಂ ವೊದಗಿಸುತ್ತವರನಲ್ಲಲ್ಲಿರಿಸಿ
ಯೊಳೋಕಿಸುತ್ತುಚಿತವಚನಗಳ ನುಡಿದೆಯ್ದಿದಂ ತನ್ನ ನಿಜಸದನಕೆ ೮

ತನ್ನ ಸತಿಗಂ ಪೇಳಿಯುನ್ನತಬ್ರಾಹ್ಮರಿಗೆ
ಸನ್ಮನಿಜನಕ್ಕೆ ಸದ್ವೃತ್ತಿ ಪತಿವ್ರತೆಯರ್ಗೆ
ಯುನ್ನತದ ಷಡ್ರಸಂಗಳ ಬೆರೆದ ಮೃಷ್ಟಾನ್ನ ಶಾಕಫಲಪಕ್ವಂಗಳಂ
ಚನ್ನಾಗಿಗೈದು ತ್ರಿಕಾಲಸಂತೃಪ್ತಿಯಿಂ
ಮನ್ನಿಸಲ್ ಧರ್ಮಕೀರ್ತಿಯಂ ನಿನಗೆಯಕ್ಕುಮೆಂ
ದುನ್ನಿಯಮಿಸುತ್ತ ದಿನದಿನಕೆಯತಿಶಯಮಾಗಿ ಗೌತಮಂ ಸತ್ಕರಿಸುತ ೯

ಅಪರಾಹ್ನದಮಳಛಾಯಾಪುರುಷನೊಲ್ ಬೆರ್ಚು
ತಪರಿಮಿತದೌಪಚಾರಂಗಳೆಸಗುತ್ತ ಮಿಗೆ
ಚಪಲತ್ವಮಳಿದಮಲ ಸಲ್ಲಾಪ ಶಾಸ್ತ್ರ ಸದ್ಗೋಷ್ಠಿಗಳ ಮಾಡುತನಿಶಂ
ಜಪತಪಾನುಷ್ಠಾನಗಳನೆಸಗಿ ಕಾಸಾರ
ಉಪ[ವ]ನಾಶ್ರಮಂಗಳೊಳ್ ಬಿನದಿಸುತ ಸರ್ವರೊಳ್
ಕುಪಥಗಳನುಳಿದನ್ನಪಾನ ವಸನಾಭರಣತತಿಗಳಿತ್ತವರ ಮುದದಿಂ ೧೦

ಬೇಕಾದ ಪರಿಯಿಂಗಲುಪಚರಿಸುತಿರೆ ಸರ್ವ
ರೇಕಸುಖದಿಂದಿರುತ್ತಕ್ಷಪಾದನ ಧರ್ಮ
ನಾಕಪತಿ ಬ್ರಹ್ಮರಿಗಸಾಧ್ಯಮೆಂದಾ ರಾಜಋಷಿ ಬ್ರಹ್ಮಋಷಿನಿಕರಮ
ಜೋಕೆಯಿಂ ಪೊಗಳುತಿರೆಯುಂಳಿದೆಡೆಯೊಳಿಹ ಜನರು
ಕಾಕು ಹೆಬ್ಬರದಧಿಕನಿಬ್ಬರದೊಳತಿನೊಂದು
ಸಾಕುಸಾಕೋ ಶಿವನೆಯೆನುತ ಸತ್ತುರುಳುತಿರೆ ಸುಖಮಿರ್ದರಾ ಋಷಿಜನಂ ೧೧

ಕ್ಷಾಮಗಾಲದೊಳನ್ನವಂ ನೀಡಿ ಸಲಹಿದರ
ಪ್ರೇಮದಿಂ ಕ್ಷೇಮಕಾಲದೊಳು ಕಾಂಚನಮಿತ್ತು
ನೇಮದಿಂ ಸಲಹಿದವರೊಂದಾಗಿ ಪರರಾಯರುಗಳು ಬೆನ್ನಟ್ಟಿಬರಲು
ತಾಮಸಂಮಾಡದೇ ಮರೆಯೊಗಿಸಿಕೊಂಡು ಬಿಡ
ದಾ ಮನುಜರಸುಗಳಂ ಕಾಯ್ದವರು ಮೂವರುರೆ
ಸೋಮಶೇಖರನ ಕೃಪೆಯಿಂದ ಸುಖಮಿರ್ಪರ್ಕೈ ನೋಡಲೀ ಗೌತಮಂಗೆ ೧೨

ಸರಿಗಾಣೆವೆಂದಂ ಮೌನಿಗಳುಲಿವುತಿರೆ ಬರಂ
ವರುಷಹನ್ನೆರಡು ತೀರಲು ಸುಭಿಕ್ಷಂ ಮೇಲೆ
ಬರಲುಳಿದ ಜನರೆಲ್ಲ ನೆರೆವುತ್ತ ಹಳ್ಳಿಪಳ್ಳಿಗಳ ಕಟ್ಟುತ್ತ ಸುಖದಿಂ
ದಿರುವ ವಾರ್ತೆಯ ಕೇಳಿ ಗೌತಮಾಶ್ರಮವನ್ನು
ನೆರೆಸೇರಿ ಬರಗಾಲ ಕಳಿಯಲೆಂಬತ್ತೆಂಟು
ವರ ಸಾವಿರದ ತಪೋಧನರು ತಂತಮ್ಮಾಶ್ರಮಂಗಳಿಗೆ ಪೋಗಲೆಳಸಿ ೧೩

ಎಲೆ ಗೌತಮಾಖ್ಯಮುನಿ ನಾವು ನಮ್ಮಾಶ್ರಮಕೆ
ನೆಲೆಯಾಗಿ ಗಮಿಸಬೇಕೆಂದು ಕೇಳಿದೊಡೆ ಮುನಿ
ತಿಲಕ ಗೌತಮನೆಂದನಿದುವೆ ನಿಮ್ಮಾಶ್ರಮಂ ನನಗೆ ಸ್ವಾತಂತ್ರ್ಯವುಂಟೆ
ಸಲೆಸುಖದೊಳಿರ್ಪುದೆಂದಾಗ ಪೇಳುತ್ತಿರಲು
ಬಲಧೂರ್ತರೆಲ್ಲ ಯೋಚಿಸುತ ನುಡಿದರು ತಮ್ಮ
ಕುಲದ ಹಾರಂಪರೇಕಚಕ್ರಪುರದಲ್ಲಿ ದಿನದಿನಕ್ಕೊರ್ಪ ಮನುಷ್ಯನಂ ೧೪

ನೆರೆತುಂಬಿದೊಂದು ಭಂಡಿಯ ಕೂಳನಾ ಬಕಾ
ಸುರಗೀವುತಲ್ಲಿ ಕಾಲಂಕಳಿಯೆ ಭೀಮ ಬಂ
ದರರೆ ಭಂಡಿಯ ಕೂಳ ತಿಂದವನ ಕೊಲ್ಲನೇ ಎನುತಲಾರಾದೊಡೇನು
ಭರದಿಂದ ಹೊಕ್ಕು ಬದುಕಲ್ಬೇಕು ತಾವು ತ
ಮ್ಮೂರು ಜನ್ಮಭೂಮಿಯಲ್ಲೆಂದು ಮುನಿಜನ ನಲಿದು
ಪರಿಪರಿಯೊಳಿಂತಾಡುತಿರೆ ಮುನಿಪ ಶಾಂಡಿಲ್ಯ ಕೇಳಿ ಚಿಂತಿಸುತಲಮಮ ೧೫

ಹನ್ನೆರಡು ವರುಷ ಬರದಲ್ಲಿ ಗೌತಮನೊಲಿವು
ತನ್ನಪಾನಾದಿ ವಸ್ತುಗಳಿತ್ತು ನಮ್ಮುಮಂ
ತನ್ನ ಬಂಧುಗಳಾಪ್ತರಿಂದಧಿಕವಾಗಿ ಸಲಹಿದ ಮುನಿಪನಂ ನಿಂದಿಸಿ
ಗನ್ನದಿಂ ಪೋಪೆವೆಂಬುದು ಸಲ್ಲ ತನ್ಮುನಿಯ
ಮನ್ನಿಸುತೆ ಪೋಗಬೇಕೆ ನೆರಪ ರಸಾಯನಂ
ತನ್ನ ಮನೆಯೊ[1][ಳಗುಂ][1]ಟು ಬೇಕಾದ ವಸ್ತುಸದ್ಗೋಷ್ಠಿ ಶಾಸ್ತ್ರಗಳೆನುತ್ತ ೧೬

ನಮ್ಮನಾದರೆ ಬಿಡನೆನಲ್ಕೆ ಸತ್ಪುರುಷನಹ
ಸುಮ್ಮಾನಿ ಶಾಂಡಿಲ್ಯನೆಂದ ಗೌತಮನೀಗ
ದಂಮ್ಮಾನಿಯಲ್ಲೀತನೀ ಕಾಲದೊಳಗಿಕ್ಕಿದನ್ನದಾನಕ್ಕೆ ಮಿಗಿಲು

1 ಳುಂ (ಕಗ)

ನಿಮ್ಮಾಣೆ ಭೂಲೋಕದೊಳಗಿಲ್ಲವೈ ನಿಮಗೆ
ದುಮ್ಮಾನವೇಕೆ ಸಲ್ಲದು ನೀವು ಬಲ್ಲವರು
ಸುಮ್ಮನಿರಿಯೆಂದನ್ನದಾ ಕಥೆಯ ನಿಮಗುಸುರುರ್ವೆನೆಂದನಾ ಶಾಂಡಿಲ್ಯನು ೧೭

ಕೇಳಿರೈ ಧರ್ಮಪಾಲಕನಗರಮುಂಟದಂ
ಆಳುವ ಮಹಾರಾಜ ಸತ್ಯನಿಧಿಯೆಂಬರಸಂ
ಮೇಳವಿಪ ಸಕಲವೈಭವಗಳಿಂ ವೀರವಿತರಣ ವಿನಯಸದ್ಗುಣಗಳಿಂ
ಪಾಲಿಸುತ ರಸೆಯ ಷೋಡಶಮಹಾದಾನಗಳ
ಪೇಳಲೇನಧಿಕ ಸಂತೋಷದಿಂ ಮಾಡಿ ಭೂ
ಪಾಲನೊಂದಾನೊಂದು ದಿನದಲ್ಲಿ ತತ್ಪುರೋಹಿತರ ಕರಸುತ್ತೆಂದನು ೧೮

ಷೋಡಶಮಹಾದಾನಗಳ ಮಾಡಿ ಎನ್ನ ಧನ
ದಾಡಂಬರಂ ಪೋಯ್ತುದೇನುಕಾರಣವಯ್ಯ
ಮಾಡುವತಿಧರ್ಮಂಗಳೊಳಗಧಿಕವಾವುದದ ಸಕಲವಿದ್ವಾಂಸರೆಲ್ಲ
ಕೂಡಿ ಪೇಳಿರೆಯೆನಲ್ ಮುನ್ನೂರರಿಂದೆಣಿಕೆ
ರೂಢಿಸಿದ ದೇವಪ್ರಮುಖರುಸುರ್ದರೊಡ
ನಾಡೀಶ ಕೇಳು ಶಿವಧರ್ಮೋತ್ತರದಲೀಗ ಸಕಲಧರ್ಮಂಗಳೊಳಗೆ ೧೯

ಸುಕರಮಪ್ಪನ್ನದಾನವೆ ದಾನಮುಣಲೊಡನೆ
ವಿಕಳತೆಯ ಕೆಡಿಸಿ ಹಿತಬಲಪುಷ್ಟಿಯಂ ಕೊಡುವು
ದಕುಟಿಲನೆ ಜೀವರಾಶಿಗಳನ್ನದಿಂ ಜನನಮಹುದನ್ನದಿಂ ಸ್ಥಿತಿಯಲ
ಸಕಲ ರಕ್ತಂ ಮಾಂಸಮಜ್ಜಾಸ್ಥಿ ಶುಕ್ಲಂಗಳ
ಳಕಳಂಕವಾದನ್ನದಿಂದೆ ರಾಜ್ಯಾದಿಪದ
ಮುಂಕುತಿ ಭಕುತಿಯು ಜಯಾಜಯಮನ್ನದಿಂದನ್ನದಾನಕ್ಕೆ ಮಿಗಿಲಿಲ್ಲವೈ ೨೦

ಕನಕರತ್ನಾಭರಣ ಗಜವಾಜಿ ಶಿಬಿಕಾರ್ಥ
ವನಿತಾದಿಭೋಗಂಗಳಶನಮುಂ ಕೊಂಡಬಳಿ
ಕನುವಿನಿಂ ಬಯಸುವರು ಕೆಲಕೆಲರು ಭೋಗೋಪಭೋಗ ಸಂತತಿಯನರರೆ
ಬಿನುಗೆಂದು ಕಂಡಶನಮುಂ ಕೊಂಡು ಸುಖಿಮಿರ್ಪ
ರನಘರಾ ದೇವತಾಂತರದಲ್ಲಿ ನೈವೇದ್ಯ
ದನುಭವದೆ ಜೀವಕಳೆ ಗರ್ಭದರ್ಭಕರನ್ನರಸವ ನಿಶ್ಚೈಸುವರಲ್ತೆ ೨೧

ಅನ್ನದಾನಕ್ಕಧಿಕ ದಾನ ಮಿಗಿಲಿಲ್ಲ ಮ
ತ್ತನ್ನಮನ್ನುಂಡಾಗ ಪಾನಮಂ ಕೊಳಬೇಕು
ಸನ್ನುತದ ಜೀವನಂ ಸರ್ವಲೋಕಾಧಾರವಾಗಿರುವದೇ ಜೀವನಂ
ಚೆನ್ನಾಗಿಯೋಗರದ ಪರಮಾನ್ನ ಮುಂತಾದ
ವನ್ನಿವೇದಿಸುವಲ್ಲಿಯಮೃತಮುಖ್ಯಂ ದೇವ
ತಾನ್ನ ಶಾಂತಿಯೊಳಮೃತಮುಖ್ಯ ಪಾನಗಳ ಕೊಡುವಾ ದಾನವೇ ದಾನವು ೨೨

ಇದು ಸತ್ಯ ಸತ್ಯ ಭೂವರನೆ ಚಿತ್ತೈಸೆನಲು
ಪದುಳದಿಂ ಕೇಳಿ ಭೂಪಾಲನೆಂದಂ ಎನ್ನ
ಹೃದಯಕ್ಕೆ ಬರಲಿಲ್ಲ ನೀವು ಪೇಳಿದ ಶಾಸ್ತ್ರಮನ್ನದಾನಕ್ಕೆ ಮಿಗಿಲು
ಸುದತಿ ಭೂಸ್ವರ್ಣದಾನಗಳೀಯದರ್ಗೆಯಂ
ಭ್ಯುದಯಮಾದನ್ವಯೋದ್ಧರಣಮಹುದುಂಡನ್ನ
ಮುದದಿಂದಲುಂಡಾಗಲೇ ತೃಪ್ತಿಯಾ ಕಡೆಯೊಳಿಲ್ಲನ್ನ ಕಿಂಚಿತ್ಫಲಂ ೨೩

ತೆಗೆಯಿರೈ ಇನಿತುದಿನ ನಿಮಿಂಗಿತ್ತುದೆಲ್ಲವುಂ
ಮಿಗೆ ಧರ್ಮ ಮೂರುದಿವಸಕ್ಕೆ ನೀವೆಲ್ಲರುಂ
ಜಗದೊಳಗೆಯನ್ನದಾನವೆಯಧಿಕಮೆಂದಿರೆಲೆಮನ್ನದಾನದ ಮಹಿಮೆಯಂ
ಸೊಗಸುದೋರ್ಪಂತೆನಗೆ ದೃಷ್ಟಮಂ ತೋರಿದೊಡೆ
ಯಗಲದತಿ ಸುಖದೊಳಿರ್ಪಿರಿಯಲ್ಲದೊಡೆ ನಿಮ್ಮ
ನಗಣಿತದ ಬಾಧೆಗಳ ಮಾಡಿಸಂವೆನೆಂದರಸು ಶಲಮೀಯಲವರು ಪೋಗಿ ೨೪

ದೇವದತ್ತಂ ಮುಖ್ಯ ಮುಂನ್ನೂರುವಿದ್ವಾಂಸ
ರೋವಿದಧಮುಂಗನ್ನಮಹಿಮೆಯಂ ರಾಯಂಗೆ
ನಾವು ತೋರಿಸಬೇಕು ದೇವರುರೆ ಸುಕೃತದುಷ್ಕೃತ ಫಲಾಫಲವನೆಯ್ದೆ
ಈವರೈ ಕಾಲಾಂತರಕೆ ಭೂಪ ಪ್ರತ್ಯಕ್ಷ
ದೇವತೆಯು ತಾನಾದಕಾರಣಂ ಬೇಗ ನಮ
ಗಾವ ಶಿಕ್ಷೆಯ ನಿಯಮಿಸುವನೊ ಶಿವಶಿವಯೆಂದುಸುರ್ವರತಿಚಿಂತೆಯೊಳಿರೆ ೨೫

ಎಲ್ಲರಿಗೆ ಹಿರಿಯನಹ ದೇವರತ್ನನ ಮಂಗಳು
ಮೆಲ್ಲನೆಲೆ ತಾತ ಕೇಳ್ ನೀವೆಲ್ಲರುಂ ಕೂಡಿ
ಯುಲ್ಲಾಸಮುಳಿದು ಚಿಂತಿಸುವುದೇನೆನೆಯೆಲ್ಲವಂ ಪೇಳ್ ಕೇಳಿ ಪುತ್ರಿ

ಸಲ್ಲೀಲೆಯಿಂದಂಸರ್ವರ್ಗಳಯ್ಯ ನಂದಿಯು ನೋನು
ತೆಲ್ಲವಂ ಪೇಳುತಿಹೆನೆನ್ನ ಕರೆದೊಯ್ವುದೆನ
ರೆಲ್ಲರುಂಡುಟ್ಟುದಾನಂದದಿಂ ದೇವದತ್ತಾಚಾರ್ಯನಾ ಪುತ್ರಿಯಿಂ ೨೬

ಸಹವಾಗಿ ನೃಪವರಾಸ್ಥಾನಕ್ಕೆ ಬರಲರಸು
ಮಹಿಲದಿಂ ಕಂಡುಚಿತವಚನದಿಂ ಕುಳ್ಳಿರಿಸಿ
ಮಹಿಸುರರ ಮುಖಗಳಂ ನೋಡಿ ಮಂತ್ರನ್ನದಾನದ ಮಹತ್ವದ ದೃಷ್ಟವಂ
ಇಹುದು[1]ಸು[1]ರಿರೈಯೆನಲ್ ದೇವದತ್ತಂ ನಮಗೆ
ಮಹನೀಯನೀತನಿಂದರಿವುದೆನಲಾಗವಂ
ಮಹಿಪತಿಯೆ ಕೇಳು ಹೇಳುವಳೆನ್ನ ನಂದನಾಮಣಿ ಸುಗುಣೆಯರೊಳಗಾಣಿ ೨೭

ಎಂದ ಮಾತಂ ಕೇಳಿ ರಾಜನಾನಂದದಿಂ
ಸುಂದರಿಯೆ ಪೇಳು ಪೇಳ್ಳೈ ತಾಯೆ ಎನಲಂ ನಯ
ದಿಂದುಸುರ್ದಳೆಲೆ ಜೀಯಯನ್ನದಾನದ ಮಹಿಮೆಯಂ ಪೇಳಲಾರಿಗಳವು
ಚಂದದಿಂದರಿಯಲಾದೊಡೆ ಪುರೋಹಿತಪುರಕೆ
ಮುಂದಾಗಿ ಪೋಗಲ್ಲಿ ಭದ್ರಾಶ್ವರಾಜನಾ
ನಂದಕಾರಕಸುದತಿ ಪುತ್ರನಂ ಪಡೆವಳಾ ಸುತ ಜನಿಸಿದಾಕ್ಷಣದೊಳು ೨೮

ನೀನಲ್ಲಿ ಕಾಯ್ದಿರ್ದು ಕೇಳಿಯಾ ಶಿಶು ನಿನ್ನ
ತಾನೋಡಿಯನ್ನದಾನದ ಫಲವ ನಿನ್ನ ಮನ
ಕಾನಂದಮಪ್ಪವೊಲುಸುರ್ವುದೈ ಭೂಪಾಲಯೆನಲುಮಾನಂದವಂಣ್ಮೆ
ತಾ ನಮ್ಮದೇಶಕೋಶಾದ್ಯಖಿಳಭಾರಮಂ
ಸಾನಂರಾಗದೆ ಮಂತ್ರಿಯಲಿ ವಹಿಸಿ ವಿನಯದಿಂ
ದೇನೆಂಬೆ ಧರ್ಮಪಾಲಕನಗರಮಂ ಪೊರಟು ದೇಶಂಗಳೊಳ್ ತಿರುಗುತ ೨೯

ಧರಣೀಶನೊರ್ವನೆಯ್ತರುತಿರಲ್ ಮುಂದೊಂದು
ಹಿರಿದಾದ ಘೋರಕಾಂತಾರಮಂ ಕಂಡರಸ
ನುರೆ ಮನಕ್ಕಿದೆ ಪುಣ್ಯವನಮೆಂದು ತೋರಂತ್ತ ಮತ್ತಧಿಕಬಂಧುವೆಂದು
ನೆರೆ ಸೂಚಿಸುತ್ತ ಬರಬರಲಿಕಾರಣ್ಯದೊಳ್
ಭರದಿಂದ ಲುಬ್ಧಕಂ ಕಾಳಮೇಘನೆನಿಪ್ಪ
ದುರುಳಕೈರಾತ ನರ ಪಶು ಪಕ್ಷಿ ಮೃಗಗಳಂ ಭಕ್ಷಿಸುತ ಸತಿಸಮೇತಂ ೩೦

1 ಸ (ಗ)

ಇರುತ ನರಮೃಗಬೇಂಟೆಯಾಡುತಾಡುಂತಲು ಬಂ
ದರಸನಂ ಕಂಡು ಕಾತುರದಿಂದ ಪಿಡಿದೊಯ್ದು
ತರಳೆಯಾಂ ಸಲಲಂಗಳಪರಿಮಿತ ಸವಿದೆನಿಂತಹ ಮೃದುಳಮಾಗಿರುತಿಹ
ನರನ ಕಂಡರಿಯೆ ಪಿಸಿತದ ಮಧುರಮೆಂತಹುದೊ
ಗರುಂವೆ ಬೇಗೊಯ್ದು ಬಾಣಸವಗೈದಿನಿಸು ನಾಂ
ಬರುವನಿತಕೆಂದು ಕರಕಿತ್ತು ಪೋಗಲ್ಕರಸನಂ ಕಂಡು ತಾಂ ಕೇಳುತ ೩೧

ಎದೆಗುಂದಿ ಎಲೆತಾತ ಇಲ್ಲಿಗೇತಕೆ ಬಂದೆ
ಮದನಾರಿಪಾದವೇ ಗತಿಯೆನುತ ತೊಂಬೆಯೊಳ
ಗೊದವಿ ಬೈಚಿಟ್ಟು ಪ್ರತಿಮಾಂಸವಂ ಸಂಭಾರಗೂಡಿ ಕಡಿದಿರಿಸಿ ಬರುವ
[ಪದ]ಪದದಿ ನೋಡುತಿರಲಿತ್ತರಸ ಶಿವನೆ ಭೂ
ಬುಧರ ಕೊಲಲೆಣಿಸಿದಾ ಪಾಪಮೇ ಕೈಯಮೇ
ಲಿ[1][ದುವೆ][1] ಫಲವಾಯ್ತುಕಟಯಿಂತಪ್ಪ ದುರ್ಮರಣಕೀಡುಮಾಡಿದೆ ವಿಧಿವಿಧಿ ೩೨

ಎಂದಂ ಚಿಂತಿಸುತರಸನಿರೆ ಕಿರಾತಂ ಬಳಲಿ
ಬಂದಂದಮಂ ಕಾಣುತಬಳೆ ನೀರ್ಗೊಟ್ಟಿರಿಸಿ
ಚಂದಚಂದದ ಪಲಲಶಾಕಗಳ ನೀಡೆ ಚಪ್ಪರಿದು ಸ್ವಾದುಂದೋರಲು
ಸುಂದರದ ಕೋಮಲೆಯೆ ಇನಿದಾದುದೀ ಮಾಂಸ
ಎಂದಿನವೊಲೊಡನುಂಬ ಬಾ ಮುದ್ದುಮುಖಿಯೆನಲ್
ಹಿಂದಕ್ಕೆ ನಿಂದೋರೆನೋಟದಿಂ ನೋಡೆ ಕುಂದಿದುಂದಾಗ ಭಿಲ್ಲನೆರ್ದೆಯು ೩೩

ಹಾವಡರ್ದ ಹಂದೆಯಂತತಿಭೇದಮಂ ತಾಳಿ
ಭಾವಕಿ[2]ನಿ[2]ಸುಂ ಮುಳಿದಳೇಗೆಯ್ಕನೆಂದಮಂ
ವಿಮೇಳ್ವ ಮದದಂತಿಶುಂಡಾಗ್ರಮಂ ಪಿಡಿದಂ ಲಂಘಿಸಂವ ಭಟರು ಹರಿಯ
ತಾವಿಂಗೆ ಪೋಗಿ ಗರ್ಜಿಸಲು ಬಾಯೊಳಗಿರಿದು
ಹಾ ವೀರಯೆನುತಾಲ್ವ ವೀರರಾದೊಡದೇನು
ವೋವಿ ಸೊಬಗಿಯರುರದಟಿಗಂ[3]ಜಿ[3] ಕಾಲ್ಗೆಟ್ಟು ಕಂಗೆಟ್ಟು ಕಾಲ್ವಿಡಿವರಹಹ ೩೪

ಏನೆಂಬೆನಾ ಕಾಳವೇಘ ತನ್ನೋಪಳಂ
ತಾನೆ ತಿರ್ದುವೆನೆಂದು ಪ್ರೀತಿಯಿಂ ಭೀತಿಯಿಂ
ದೇನಬಲೆಯುಸುರೆನಲ್ ತಪ್ಪ ಮಾಡಿದೆನೊ ತಳುವಿದೆನೊ ಪರಸತಿಯರಿರದೆ

---

1 ರದೆ (ಕಗ) 2 ನ (ಗ) ದೆ (ಕ)

ತಾ ನೆರದೆನೋ ನಿನಗೆ ರತಿಸಾಲದೋ ಕಲೆಯು
ನಾನರಿಯೆನೋವೊಲಿದವಳ ಸಂಡಿಯುನನ್ಯಳೊಡ
ನೇನುಸುರ್ದೆನೋ ತಳುವದೇಕೆ ಪೇಳೆಂದು ಕೇಳಿದ ಪುಳಿಂದಿಯ ಪುಳಿಂದಂ ೩೫

ಎಂಬ ಪುರುಷನ ಮೆಲ್ಲಿದೆಯ ನುಡಿಗಳಿಗೆ ನೀರ
ಜಾಂಬಕಿಯು ಸರಸದಿಂ ನೋಡಿ ತಾ ನಸುನಗುತ
ತುಂಬಿಗುರುಳಬಲೆಯೆಂದಳಂ ನಲ್ಲ ನಾನೊಂದು ತಪ್ಪಮಾಡಿದೆ ತಪ್ಪಿನ
ಬೆಂಬಳಿಯನುಸುರೆಂದೊಡುಸುರುವೆನೆನಲ್ಕಾತ
ನಂಬುಜಾಸ್ಯೆಯೆ ನಿನ್ನ ಮನನೊಂದುದೆಂದಂಜಿ
ಪಂಬಲಿಸುತಿರ್ದೆ ನೀ ಪೇಳು ನಿನ್ನಯ ಚಿತ್ತಕನುಕೂಲಮಪ್ಪಂದದಿಂ ೩೬

ಎನಲು ನಸುನಗುತೆಂದಳೆಲೆ ಪುರುಷ ನೀತಂದ
ಮನುಜ ನಿನ್ನಯ ಬೆನ್ನ ನಾಂ ಕೊಂದು ಬಾಣಸವ
ನಿನಗೆ ಮಾಡದ ತಪ್ಪನವನ ಹನನವನುಳುಹುಯೆಂದೆನಲ್ ಸತಿ ನಿನ್ನಯ
ಅನುಜನೇ ಮೈದುನಂ ಪಿರಿಯಮಂ ಭಾವನೆನ
ಗನುವಿನಿಂ ಕಾಯ್ದುದೇಯಾಂ ಕಾಯ್ದುದೆನುತಾಗ
ಮನ ನಲಿದು ನುಡಿದನಾಗೀ ಕಾರ್ಯಕೆನ್ನಯೆಂದೆ ಡವಡವಯೆನುತ್ತಿರ್ದಂದಂ ೩೭

ಇದೆ ನೋಡೆನುತ್ತ ತೋರುತ್ತ ಭಾಷೆಯಂ ಕೊಡಲ್
ಪದುಳದಿಂ ಕೈವಿಡಿದು ತೋರಿಸಿದಡಬಳೆ ಕೇ
ಳಿದು ಮಹಾಕಾಂತಾರ ಸಿಂಹ ಶಾರ್ದೂಲ ವೃಕಗಳ ಭಯಂ ಪಿರಿದೊರ್ವನಂ
ಪುದಿದಿರುಳಿನೊಳ್ ಕಳುಪುವುದಯುಕ್ತ ನಾಂ ಪೋಗಿ
ಯುದಯಕಾಲಕ್ಕೆ ಕಳುಪುವೆ ಕಾಂತೆಯಿವ ನಮ್ಮ
ಸದನದನ್ನವನೊಲ್ಲ ಉಪವಾಸಯಿರಸಲ್ಲವೆನುತ ಬಿದಿರಕ್ಕಿಗೊಡಲಂ ೩೮

ಕೊಟ್ಟಕ್ಕಿ ಬಿದಿರಿನೊಳ್ ಕಟ್ಟಿ ಪಾಕವ ಮಾಡಿ
ನಿಷ್ಠೆಯಿಂದನ್ನಮಂ ತನ್ನ ದೇವರಿಗಿತ್ತು
ಕಟ್ಟಕ್ಕರಿಂದೈದಂ ಕಬಳಮಂ ಕೊಳಲಾತನಂ ತಾವು ಮಲಗುತಿರ್ಪ
ಬೆಟ್ಟದುಂರೆ ಕೋಡುಗಲ್ಲಿನೊಳ್ ಮಲಗಿಸುತ ಕೆಳಗೆ
ಹೆಟ್ಟುಗೆಯ ಕೂಡೆ ಬಿಲ್ಬಾಣಗಳ ಕೊಂಡು ಮನ
ಮುಟ್ಟಿ ಕಾಯ್ದಿರ್ದು ಬೆಳಗಾಯ್ತೆಂದು ಶಬರಿಶಬರರ್ ಮರೆದರ್ ನಿದ್ರಿಸಲ್ಕೆ ೩೯

ಪಿರಿದಾದ ಶಾರ್ದೂಲ ಬಂದು ಗರ್ಜಿಸಿ ಪೊಯ್ದು
ಕೊರಲ ಕರ್ಚುತ್ತ ರಕ್ತವ ಹೀರಿ ಶಬರನಂ
ತಿರದೆ ಪಾಯ್ತುರೆ ನಿದ್ರೆಯಂ ತಿಳಿವುತಾ ಪುಳಿಂದಿನಿ ಕಾಣುತಸು ಬೆರ್ಚುತ
ಹರಣ ಹವ್ವನೆ ಹಾರಿ ಮೂರ್ಛೆಯೊಳಗಾಳ್ದೆಳ್ದು
ಪುರುಷ ಕೆ[1]ಟ್ಟೆನಂ ಕೆಟ್ಟೆ[1] ಹಾ ಪುರುಷ ಹಾ ಪುರುಷ
ಅರಿವಿಲ್ಲದೀರ್ವರೊರಗಿದೆವು ನಮ್ಮಂ ಬಿಟ್ಟು ಮುರಿಯಿತೇ ಕೊರಲ ನಿನ್ನ ೪೦

ಚೆನ್ನಿಗನೆ ಚಲುವನೇ ಪಕ್ಕಿಯೋಲೀರ್ವರುಂ
ಗನ್ನವಿಲ್ಲದೆ ಕೂಡಿಬಾಳಿದೆವು ನಿನ್ನನುಳಿ
ದನ್ನಮಂ ತಿಂದಂ ನೀರ್ಗುಡಿದು ನಾ ಜೀವಿಸಲೆ ಹಾ ಗಂಡಯೇನು ಮುಳಿಸು
ನನ್ನಮೇಲೆಂದೆರ್ದೆಯ ಬಾಯ ಬಡಿದಾರ್ಭಡಿಸೆ
ತನ್ನರೇಂದ್ರಂ ಕೇಳಿಳಿದುಬಂದಕಟಕಟಾ
ಪನ್ನಗಾಭರಣ ಹಾಹಾಯೆಂದು ಮರುಗಿ ಶಬರಿಯ ಕರವ ಪಿಡಿದು ರಾಜಂ ೪೧

ಎಲೆ ತಂಗಿ ದುಃಖಮಂ ತೊರೆಯವನ ಪಣೆಯಲ್ಲಿ
ಮಲಹರಂ ಬರೆದ ಪೋಲಾಯ್ತೆನ್ನ ರಕ್ಷಿಸಿದೆ
ನೆಲೆಯಾಗಿ ನೀನಕ್ಕ ನಾನನುಜ ನನ್ನ ಪಟ್ಟಣಕೆ ನಡೆಯರಮನೆಯೊಳು
ಸಲೆ ನೀನು ಎನ್ನ ಹೆಂಡಿರುಗಳಿಗೆ ಬುದ್ಧಿಯಂ
ಕಲಿಸುತ್ತ ನೀಂ ಮಾತೆಯಂತೆ ಕಣ್ಣಿಂ ನನ್ನ
ಪೊಲಿದು ನೋಡುಂತ್ತಿರುವುದೆಂದು ಪೇಳಿದ ರಾಯನಾಗಲಾ ಮಾತ ಕೇಳಿ ೪೨

ಇಂತೊಲ್ಲೆ ರಾಜಯೋಗಿಯೆ ರಾಜರಾಜನೆಯು
ನಂತಮಾತೇನಣ್ಣ ಚನ್ನಾಗಿಯಾಲಿಸ್ಸೈ
ಕಾಂತಿಯಿಂದಿಳಿದ ಮಣಿಜೀವವಿಲ್ಲದ ಕಾಯವಿಟ್ಟಂತೆ ನನ್ನ ದೇಹಂ
ನಿಂತಿರ್ದಡೇನುಫಲವಿಲ್ಲೆನಲ್ಕವರ್ಗೆ ತಾಂ
ಚಿಂತೆಯಿಲ್ಲದೆ ಕಿಚ್ಚನೀವುತಾ ರಾಯ ವಿಪಿ
ನಂ ತಳುವದಾಕ್ಷಣಂ ಪೊರಮಟ್ಟೆರಳ್ಮೂರುತಿಂಗಳಿಗೆ ನಡೆದುಬಂದು ೪೩

ವಹಿಲದಿಂ ರೋಹಿತಪುರಂಬೊಕ್ಕು ಭದ್ರಾಶ್ವ
ಮಹಿಮನಂ ಕಂಡುಚಿತ ಸಲ್ಲಾಪಮಂ ಮಾಡಿ
ಯಹಿಕಟಕನಾ ಭಕ್ತರಾಜಾಧಿಮಣಿಯೆ ಕ್ಷೇಮವೆಯೆನಲ್ ರಾಜ ನೋಡಿ

---
1 ಟ್ಟೆಕೆಟ್ಟೆನು (ಕ)

ಇಹದಲ್ಲಿ ಪರದೇಶಿಗಳ್ ನೀವದಾರುಯೋ
ಮಹಿಯಿಂದ ಬಂದಿರೆಮ್ಮಿಂದಾದ ಪಕ್ಕಮಂ
ಸುಹಿತದಿಂದುಸುರಿದೊಡೆಯೂಪನಿತ ತೀರಿಸುವೆನೆನಲು ಏಕಾಂಗಿಯೆಂದಂ ೪೪

ಭೂಪ ಕೇಳ್ ನಿನ್ನ ಪಟ್ಟದ ರಾಣಿ ಗರ್ಭವಾ
ಗೀ ಪುರವನಾಳ್ವ ಪಟ್ಟದ ಸಂತನ ಪಡೆದರಾಂ
ದೀಪಿಸುವ ಸುಕುಮಾರಪುಟ್ಟಿದಾಕ್ಷಣ ಪ್ರಸನ್ನಿಸಬೇಕು ರಾಜಾಗ್ರಣಿ
ಚಾಪಳಮುನೀಶಕಾರಣಮುಸುರ್ದನದರಿಂದ
ಸೋಪಾಧಿಯಿಂದ ಸತ್ಕರಿಸೆ ಸೇವಕರಿಗಾ
ರೋಪಿಸುತ ಬ್ರಾಹ್ಮಣ ಸುಸಂನ್ಯಾಸಿಗಳ್ ಬರ್ಪುದೈ ನಮ್ಮ ಬಳಿಗೀಗಳಂ ೪೫

ಎಂಬ ನುಡಿಯಂ ಕೇಳಿ ಸಂಭ್ರಮಂಗೊಂಡಿರಲ್
ಕುಂಭಿನೀಶನ ರಾಣಿ ನವಮಾಸಘಟಿಸೆ ಸುತ
ನಂ ಭರದೆ ಪೆರುವಂತ ಸುಮುಹೂರ್ತ ಲಭಿಸೆ ನೃಪ ಪೊಂದೆರೆಯ ಪಿಡಿಸಿ ತಾನು
ನಂಬುಗೆಯ ಸಂನ್ಯಾಸಿಸಹಿತಿರಲ್ಕಾ ಘನನಿ
ತಂಬಿನಿಯ ಗರ್ಭದಿಂದುದಿಸಿದ ಕುಮಾರಕನಂ
ಕಂಬುಕಂಧರೆಯರಾ ಸ್ವರ್ಣಪಾತ್ರೆಯೊಳಿರಿಸಿ ಭೂಪನಿದಿರೊಳ್ ಮಡಗಲು ೪೬

ಪೊರ್ಕುಳಿನ ಸೂತ್ರ ಮುಸುಕಿದ ಮಾಸವೆರಸಿ ಸತಿ
ವೆರ್ಕಳತಿವೇಗದಿಂ ಮುಂದಿಡಲ್ ಶಿಶುವೆ ತಾ
ನಿರ್ಕೈಗಳಿಂದ ಮಾಂಸವ ನೂಂಕಿ ಕುಳಿತೆಲ್ಲೈ ಸತ್ಯನಿಧಿ ಭೂಪಾಲಕ
ಉರ್ಕುವತಿ ಹರುಷದಿಂದನ್ನಪಾನದ ರೀತಿ
ಇರ್ಕುವೆಂತೆನಲಾ ಪುರೋಹಿತನ ಸುತೆಯಿಲ್ಲಿ
ಗಕ್ಕರಿಂದಟ್ಟಿದಳು ನಿನ್ನನೆಲೆ ರಾಯ ನಾನಾರೆಂಬುದಂ ಬಲ್ಲೆಯ ೪೭

ಘೋರಕಾಂತಾರದೊಳ್ ನಿನ್ನ ಪ್ರಾಣಕೆ ಬಂದ
ಕ್ರೂರಬಾಧೆಯ ಬಲ್ಲೆಯಾ ನಿನ್ನ ಪಿಡಿದೊಯ್ದ
ನೀರೆಯ ವಶಕ್ಕಿತ್ತನಾವನದ ಬಲ್ಲೆಯಾ ನಿನ್ನ ಪ್ರಾಣವನು ಕಾಯ್ದ
ನೀರೇಜದಳನೇತ್ರೆಯಾರು ಭೂಭುಜನೆ ಕೇ
ಳಾರಿಸಿದ ಬಿದಿರಕ್ಕಿ ನಿನಗಿತ್ತು ಕೋಡ್ಗಲ್ಲೊ
ಳಾರೈಕೆಯಿಂದಿರಿಸಿ ಪುಲಿಯಿಂದ ಸಾಯಲೊಡನೊಂದಿದವಳಂ ಬಲ್ಲೆಯ ೪೮

ಬಿದಿರಕ್ಕಿಸೊಲಗೆಯಂ ನಿನಗೀಯಲದರ ಫಲ
ದುದಯಂದಿಂದೀ ರಾಜ್ಯಪದವನನುಭವಿಸಲ್ಕೆ
ಯುದಿಸಿದೆಂ ನಾಂ ಕಾಳಮೇಘನೆಂಬಾ ಬೇಡನೆನ್ನ ಪೆಂಡಿರು ನಿನ್ನಯ
ಸುದತಿಯುದರದೊಳು ನಂದನೆಯಾಗಿ [ನಿ]ನಗೊಗೆದು
ಪದುಳದಿಂ ಪಟ್ಟದಂಗನೆಯಪ್ಪಳೆನಗರಸ
ವಿದಿತವಾದಕ್ಕಿಯಿಂದಿನಿತು ಫಲವನ್ನದಾನದ ಫಲಕೆ ಸಾಟಿಯುಂಟೆ ೪೯

ಗಜವಾಜಿಸಾಹಸ್ರ ಭೂರಿಗೋದಾನಮಂ
ರುಜುವಾದ ಕನಕಪಾತ್ರೆಯನಿತ್ತೊಡಂ ಭೂಮಿಂ
ಭುಜರಿಗುದಯಾಂಬುನಿಧಿಪರ್ಯಂತಮಿತ್ತೊಡಂ ಹೆಣ್ಣುಗಂಡುಗಳ ಕುಲವಂ
ನಿಜದಿಂದಲಾರೈದು ಕೋಟಿಕನ್ಯೆಯರ ಬಿಡ
ದಜರ ಪರಿಣಯುಮೆಸಗಲನ್ನದಾನದ ಫಲಕೆ
ಭಜಿಸಿ ನೋಡಿದೊಡೆ ನಹಿನಹಿ ಸಮಾನಮೆನುತ್ತ ನುಡಿದಂ ಮೊರದೊಳ್ ಮಲಗಿದಂ
೫೦

ಕಂಡುಭಯ ರಾಜರಂ ವಿಸ್ಮಯಂಗೊಂಡು ಭೂ
ಮಂಡಲದೊಳಿಂತಪ್ಪ ಶಿಶುವನೆಂದುಂ ನಾವು
ಕಂಡುಕೇಳ್ದರಿಯೆವಿದು ಚಿತ್ರತರಮೆಂದಧಿಕದಾನವಂ ಶಿವಭಕ್ತರ
ತಂಡತಂಡಕ್ಕಿತ್ತು ಭದ್ರಾಶ್ವರಾಜ ಮುಂ
ಕೊಂಡು ಎಲೆ ಸತ್ಯನಿಧಿಭೂಪ ನೀಂ ಕರ್ತೃ ನಾಂ
ತೊಂಡನೈ ನೀನಿಂತು ಸಂನ್ಯಾಸದಿಂ ರಾಜವೇಷಮಂ ಮರೆಸಿರುವರೆ ೫೧

ಹರಹರ ಮಹಾದೇವ ಚೋದ್ಯಮೆಂದೆರಗಿ ಭೂ
ವರಸತ್ಯನಿಧಿಯನಂತಃಪುರದೊಳಿರಿಸಿಕೊಂ
ಡರರೆ ರೋಹಿತಪುರದ ಭದ್ರಾಶ್ವ ತನ್ನಿಖಿಳವಿನಿಯೋಗ ಸಹಿತರಸನಂ
ಕರೆತಂದು ಧರ್ಮಪಾಲಾಖ್ಯನಗರಂಬೊಗಿಸಿ
ತಿರುಗಿ ಭದ್ರಾಶ್ವರಾಜಂ ಪೋಗೆ ಸತ್ಯನಿಧಿ
ಯರಸನುರೆ ಸತಿಯ ಪೊಡೆಯಲ್ಲಿ ಶಾಬರಿಯುದಿಸಿ ಸತಿಯಾದಳಾ ಶಿಶುವಿಗೆ ೫೨

ನೋಡಿರೇ ಮೌನಿಗಳ್ ಬಿದಿರಕ್ಕಿ ಪೊಲಗೆಯಂ
ನೀಡಿದನ್ನದ ಫಲದೊಳಾ ಕಾಳಮೇಘನುಂ
ಗಾಡಿಕಾತಿಯುಮಪ್ಪವನ ಪೆಂಡಿರುಂ ಸಕಲವಾದ ಕಿಲ್ಬಿಷಗಳಳಿದು

ಕೂಡದಿನ್ನೊಬ್ಬನಾತನ ಮಹಿಮೆಯಾದಳಿದ
ನಾಡಲೇನನ್ನದಾನದ ಪರಿಯ ಗೌತಮಂ
ಬಾಡುಂವತಿ ಭರದೊಳಿಮ್ಮೆಲ್ಲರಂ ಪೊರೆದ ವೈರದಿ ಪೋಪುದಲ್ತು ಕೇಳಿ ೫೩

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತವೇದ ಪೌರಾಣಿಕಾಗವಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಪಟ್ಟದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ಪನ್ನೆರಡುಸಂಧಿ ಸಂಪೂರ್ಣವಾಯ್ತು ೫೪

# ಹದಿಮೂರನೆಯ ಸಂಧಿ

ಸೂಚನೆ :

ಗೌತಮನ ಮೇಲೆ ಗೋವಧೆಯ ಪೊರಿಸುತ ಮುನಿ
ಪ್ರಾತಮೈದಲ್ ಗಂಗೆಯಂ ಪಡೆದು ಶಿವನಿಂದ
ಪೂತಾತ್ಮ ಪಾರ್ವರಂ ಶಪಿಸೆ ಹರಿ ಹರನಾಜ್ಞೆಯಿಂದ ದುಬೋ೯ಧೆಯುಸುರ್ದಂ

ನಿಗಮಂಗಳ್ ಮುಂದೆ ಮರಿಜಾಯಿಲಗಳಾಗಿ ನೆಗೆ
ನೆಗೆದಾಡುತಿರೆ ಕಿರಾತೆಯ ರೂಪನುರೆ ತಾಳಿ
ದಗಜೆಗಂ ಗುಂಜಾಮಣಿಯ ದಂಡೆಯಂ ಕಟ್ಟಿ ಕಂಠದೊಳಗಳವಡಿಸುತ
ಮಂಗುಚಿನೋಡೆನ್ನಯನುರಾಗಮಾಲಿಕೆಯನೆಂ
ಬ ಗಿರೀಶನಾಲಾಪಕಂ ಕೈಯ ಕಮಲದಿಂ
ಹೆಗಲಲ್ಲಿ ಪೊಡೆಯಲಾ ಕಾಲದೊಳ್ ನಸುನಗುವ ಚೆನ್ನಮಲ್ಲನೆ ಪಾಲಿಸ ೧

ಚೋಳದೇಶದೊಳಗೈನೂರು ಪೊಲೆಯರೊಳು ತಿರು
ನಾಳ್ಪೋವರುದಿಸಿ ವಿಪ್ರರ ಸೇವೆಯಂ ಮಾಡು
ತಾಳೋಕಿಸುವೆನಾ ಚಿದಂಬರೇಶ್ವರನ ತಿರುಣಾಳೆಂದು ದ್ವಾದಶಾಬ್ದಂ
ಮೇಲೆ ತಿರಂನಾಳು ತಿರುನಾಳುಯೆಂದಾವಾಗ
ಲಾಳಾಪಿಸಲೋಲೆಯನಿತ್ತು ಪೋಯೆನಲಿರುಳು
ಬಾಳ ನೆನೆವುತ ಬೆಳಗೆ ಲಿಂಗದೊಳ್ ಪೊಕ್ಕ ತಿರುನಾಳ್ಪೋವರಡಿಗೆರಗುವೆಂ ೨

ಅನ್ನದಾನದ ಕಥೆಯ ಕೇಳಂತವರೆಲ್ಲರುಂ
ಕುನ್ನಿ ಸುಡುಗಾಡಬೂದಿಯೊಳಿರ್ದು೯ ತನ್ನೇಳು
ಜನ್ಮದುನ್ನತಿಯ ನೆನದೆದ್ದಕಾಲಕ್ಕೆ ಹರಿವಂತೆಯದು ದುರ್ಬು೯ದ್ಧಿಯಿಂ
ಚನ್ನಾಯ್ತು ಗೌತಮಂ ನಮ್ಮ ಬಿಡದಿರೆಯವನ
ಮನ್ನಣೆಯ ಮೇಲಾಳುಗಳೆ ತೆಗೆಯಿವನ ಮೇಲೆ
ಯುನ್ನತದ ಗೋವಧೆಯ ಕಲ್ಪಿಸಲ್ ಬೇಹುದೆಂದನಿಬರೇಕಾಂತಕೈದಿ ೩

ಸ್ಥಿರಯಾಗವಂ ರಚಿಸುತದಕೆ ಪೃಷದಾಜ್ಯಮುಖ
ವರವಸ್ತುಗಳ [1]ಬೇಳೆ[1] ಸ್ತುತಿಸಲಗ್ನೀಶ್ವರಂ
ನೆರೆಯೊಲ್ದು ನಿಮ್ಮಿಷ್ಟವೇನೆನಲ್ಕಾವೊಂದು ಪರಿಜವಂ ಮಾಡಿ ಪೊಲದೊಳ್
ಇರಿಸಲದ ದೇವ ನೀಂ ಸಾವಂತೆ ಮಾಡಿಯೆನೆ
ಪರಿಯಿಂದ ಗೌತಮನ ಮೇಲೆ ಪುನವಂ ಬಿಡದೆ
[2]ಹೊ[2]ರಿಸಬೇಕೆಂಬುದೆಮ್ಮಿಷ್ಟವೆನೆಯಗ್ನಿ ನಂಡಿದಂ ಮಂನಿಗಳಿರ ಕೇಳಿರೈ ೪

ಗೌತಮಂ ನಿಷ್ಪಾಪಿ ಸುಕೃತಾತ್ಮ ಸರ್ವಜ್ಞ
ನಾತಗಾಂ ಪಾಪಮಂ ಕಲ್ಪಿಸುವನಲ್ಲ ನೀ
ವೇತೆರದೆ ತೃಣಪಶುವಮಾಡಲದರೊಳ್ ಪೊಕ್ಕು ಪೋಗುವೆಂ ಮುಟ್ಟಲೊಡನೆ
ಸೋತು ನಿಮಗೊಲಿದಕಾರಣಮಿನಿತಂ ಮಾಳ್ಪೆನಾ
ಪಾತಕಂ ನಿಮ್ಮದೆನಲಂತಾಗಲೆಂದು ಮುನಿ
ವ್ರಾತ ಕೃತಕದ ಗೋವನೆಸಗೆರಡುಕಾಲಂ ಪೊಲದಲ್ಲೆರಡು ಪೊರಗಿರಿಸಲಂ ೫

ಬಡವಾಗಿ ದಡದಡಿಸಿ ನಡನಡುಗಿ ಬೀಳ್ವವೊಲ್
ಪೊಡವಿಗಂ ತಲೆಗುತ್ತಿ ಬಾಯ್ದೆರೆದು ಕಣ್ಣುನೀ
ರೆಡವಿಡದೆ ಸೂಸುತ್ತ ಸುಗಿದ ತೊವಲೊಡೆದ ಮೈರಕುತ ನೊಣ ಮುಸುರಿಕೊಂಡು
ಕಡಿದು ಪುಲ್ಕಚ್ಚಿಕೊಂಡಿರೆ ಗೌತಮಂ ಕಂಡು
ಕಡುಮರುಗಿ ಬಡಪಶುವೆ ಪುಲ್ಮೇಯಿಯೆನುತ ಮೈ
ದಡಹಲಾಕ್ಷಣವೆ ಭೇಳೆಂದೊರಲಿ ಬಿಳ್ದಳಿಯೆಂ ಕಾಣುತಾ ಗೌತಮನತಿ ೬

ಬೆರಗುಗೊಂಡೇ ಪಾಪಮೆಂದು ತನ್ನೊಳಗೆ ಭೂ
ಸುರರೆಸಗಿದೀ ವಂಚನೆಯ ವಿಚಾರಿಸದೆ ಬೇ
ಸರಿಗೆ ಮನಮಂ ತಂದು ಕಡುನೊಂದಂ ಶಿವಶಿವಾ ಶಿವಶಿವಾ ಶಿವಯೆನುತ್ತ
ಇರಲನಿತರೊಳ್ ಸರ್ಬರೆಲ್ಲ ಮೊರೆದೆದ್ದವನ
ಜರೆವುತೆಲೆ ಪಾಪಿ ಗೋವಧೆಯನೆಸಗಿದನವಂ
ನಿರಂತನ್ನಪಾನಗಳ ಇವನ ಮನೆಯೊಳ್ ಮುಂಟ್ಟಿದರೆ ಹೊರಗಂ ಹೊರಗೆನುತ್ತ ೭

ಹೊರಟಖಿಳ ಪಾರ್ಬರೆಲ್ಲರು ಪೋಗುತಿರೆ ಮೌನಿ
ವರಗೌತಮಂ ತತ್ವವೇತ್ತರೊಳಗುತ್ತಮಂ
ಭರದಿಂದ ಬಂದಡ್ಡಬಿರ್ದು ಕೈಮುಗಿದು ಸದ್ಬ್ರಾಹ್ಮಣಜನಂಗಳೆಲ್ಲ

1 ಬೆಳ್ಳಿ (ಗ) 2 ಹೆ (ಗ)

ಪರಿಕಿಸಲ್ ನಾನದಂ ಪೊರಡಿಸಲ್ ಬಂದು ಕೇ
ಳಿರದೆ ಹೊಡೆದವನಲ್ಲ ಗೋವಿನುರೆ ಬಡತನವ
ನೆರೆಕಂಡು ಮೇಯೆಂದು ಮೈದಡಹಲಾಕ್ಷಣಂ ಪ್ರಾಣಮಂ ನೆರೆಬಿಟ್ಟುದು ೮

ಪಾಪವಿದು ಪರಿದುಪೋಗುವದೆಂತೆನಲ್ಕವರು
ಚಾಪಳದೆ ನುಡಿದರದು ಸಾಮಾನ್ಯವಾದುದೇ
ಶ್ರೀಪರಂಜ್ಯೋತಿಯ ಜಟಾಜೂಟಗಂಗೆಯಂ ತಂದದರ ಮೇಲೆ ಪರಿಸೆ
ಲೋಪಮಹುದೆಂದಂ ದುರ್ಘಟವನುಸುರಂತ ಪೋಗೆ
ಏಪೇಳ್ವೆನಾ ತ್ರಿಯಂಬಕಪರ್ವತಾಗ್ರದೊಳ್
ತಾ ಪರಮನಂ ಕುರಿತು ಪಂಚಾಗ್ನಿಮಧ್ಯದೊಳ್ ತಪಮೆಸಗಲುಜ್ಜುಗಿಸಲಂ ೯

ಅನಿತರೊಳ್ ಕರುಣಾಂಬುರಾಶಿಯಹ ಶಂಕರಂ
ಮನವೊಲ್ದು ಸುಪ್ರಸನ್ನನುಮಾಗೆ ಗೌತಮಂ
ಘನಭಕ್ತವತ್ಸಲನೆ ನಾನಂ ಕೃತಕೃತ್ಯನೆಂದಡ್ಡಬಿಳ್ದೊಂದಿಸಿರಲು
ಮುನಿಯೆ ನಿನ್ನಿಷ್ಟವೇನೆಂದು ಮಸ್ತಕವಿಡಿದು
ವಿನಯದಿಂ ಕೇಳೆ ಗೌತಮನೆಂದ ದೇವೇಶ
ಮುನಿಗಳೆನ್ನಾಶ್ರಮದೊಳಿರ್ದೊಡರ್ಚಿದ ಗೋವಧೆಯನು ಪರಿಹರಿಸೆ ನಿನ್ನ ೧೦

ಉರುತರಜಟಾಮಕುಟ ಪಾವನದ ಗಂಗೆಯಂ
ಕರುಣದಿಂ ಪಾಲಿಸುವುದೆನಲಭವ ನುಡಿದ ಬಂ
ಧುರವಚನದಿಂದ ಮುನಿನಾಥ ಕೊಟ್ಟೆನು ಕೊಟ್ಟೆ ಗಂಗೆಯಂ ಕೊಂಡುಪೋಗು
ಹರ ಮಹಾದೇವ ಬಿನ್ನಪ ಜೀಯ ಗೋವಧೆಯ
ಧರೆಯೊಳಾವಂ ಮಾಡಲಾ ಪಾಪ ಬಹುಳಮಾ
ಗಿರದೆ ಕುಲಕೋಟಿಯಂ ಬಾಧಿಸುತ್ತಿರೆ ಜವಂ ಜವದೊಳಾ ವಂಶ[1]ದ[1]ಲ್ಲಿ ೧೧

ಆವನಾನೊರ್ವಂಗೆ ಗಂಗಾಧರಸ್ಪರ್ಶ
ತೀವಲವರೇಕವಿಂಶತಿಕುಲಂ ಪಿತೃಪತಿಯ
ಠಾವಿನುರೆ ನರಕಬಾಧೆಯ ಪಿಂಗಿ ಮೋಕ್ಷವಹ ಮಹಿಮೆಯನ್ನೀ ಗಂಗೆಗೆ
ನೀವು ಪಾಲಿಸಿಕೊಡುವುದೆನಲು ಭಲರೇ ಮುನಿಯೆ
ಏವೇಳ್ವೆ ನೀಂ ಪರಹಿತಾರ್ಥಿಯಹುದೆಂದು ಶಿವ
ದೇವವಾಲಾಗ್ರದಿಂದೊಂದುಕಣಮಂ ಕೊಡಲ್ಕದು ಮಹದ್ಗಂಗೆಯಾಗಿ ೧೨

1 ವ (ಗ)

ಪರಿದಂ ಪಸರಿಸಲಖಿಳಸುರರು ಪೂಮಳೆಗರೆದಂ
ಸರಿಯಾರಂ ಗೌತಮಾ ನಿನಗೆಂದು ಕೊಂಡಾಡ
ಲರರೆ ಸರ್ವರ ಕಿಲ್ಬಿಷಂಗಳಂ ತೊಳೆಯುತ್ತ ಭೂಮಿಯೊಳ್ ಪರಿಯುತಮಮ
ಧರೆಗೆ ಗೌತಮ ತಂದ ಕತದಿಂದ ಗೌತಮಿಯು
ಇರದೆ ಗೋವಂ ಸೋಂಕೆಯುದಕೆ ಪ್ರಾಣಂ ಬಂದು
ಪರಿದ ಕಾರಣವೆ ಗೋದಾವರೀನಾಮಮಿಾ ಧರೆಯೊಳ್ ಪ್ರಸಿದ್ಧಮಾಯ್ತು ೧೩

ಶ್ರೀಪರಮಗಂಗೆಯಂ ಗೌತಮಂ ತಂದಧಿಕ
ಮಿಪೊಳ್ಕು ಸ್ನಾನಾರ್ಚನಾಕ್ರಿಯೆಗಳಂ ನದಿಯೊ
ಳೀ ಪೇಳ್ವಿನಾನಂದದಿಂದೊಡರ್ಚುತ ನೆನೆದಂ ನಿರ್ದೋಷಿಯಹ ನನ್ನನು
ಪಾಪಿ ಗೋದ್ರೋಹಿಯೆಂದೆನುತ ನಿಂದಿಸಿ ಪೋದ
ರೀ ಪಾರ್ಬರನಿಬರಜ್ಞಾನಿ ಜಂತುಗಳಿವರ್ಗೆ
ಶಾಪ ಸಲ್ವುದು ಕೊಡಲ್ಕೆಂದು ಯೋಚಿಸಿದನಾ ಗೌತಮಂ ಸಜ್ಜನತಮಂ ೧೪

ಪಗೆಯ ಭಾವಿಯ ತಳ್ಳಲೇಕವನ ಮನ್ನಿಸುತ
ಆಗಲವಾದೀ ಕೂಪದಿರವ ನೋಡೆನುತಿಳುಹೆ
ಮಿಗೆಯೇಳದೇ ತಾನೆ ಸಾವ ತೋಟವ ಕಡಿಯಲೇಕೆ ನೀರ್ ತಪ್ಪಿಸಿದೊಡೆ
ಮಿಗೆಯೊಣಗಿ ಪೋಪುದನ್ಯರ ತಲೆಯ ಪೊಡೆಯಲೇ
ಕಗಣಿತದ ರಾಜನಿಂದೆಯು ಕಲಿಸೆ ಸಾಲದೆಂ
ದಗಜಾಧಿಪತಿಗೆ ಹರಿಯಜರಧಿಕ[1]ವೆಂ[1]ದೂಳಿ ನರಕದೊಳಗಾಳೆನಂತ್ತಂ ೧೫

ಭಸಿತ ರುದ್ರಾಕ್ಷಮಾಲಾಮಂತ್ರಗಳ ಜರೆದು
ಹಸಗೆಟ್ಟು ಶಿವತೀರ್ಥಶೇಷಮಂ ನಿಂದಿಸುತ
ಮಸಿಮಟ್ಟಿ ಮಣ್ಣು ಗೋಪಿಯರಂಗವಂಲಿನಮೃತ್ತಿಕೆಯಧಿಕವೆಂದಿಡುತ್ತ
ಶಶಿಧರನ ಸ್ಮರಿಸದೇ ನಿಮ್ಮ ಪಿರಿಯರ್ಕಳಿಂ
ಮೊಸೆದು ನಿರಯಕ್ಕಿಳಿಯಿರ್ಪೈ ಭ್ರಾಂತರಾಗಿ ನೀ
ವಸಮ ಶಿವಶಾಸನವ ಕೆಡಿಸಿ ಘೋರಾಂಧತಾಮಸನರಕದೊಳಾಳಿರೆ ೧೬

ಉತ್ತಮ[ದ] ಜಾತಿಧರ್ಮವನುಳಿದು ನೀವೆಲ್ಲ
ಬತ್ತಿಸಾಯುಧವಾಂತು ಮ್ಲೇಚ್ಛರಂದದಿ ನಡೆದು
ತೊತ್ತಾಗಿ ಸಕಲಕೃತಿಗಳ ಮಾಡಿ ಶೂದ್ರಸೇವೆಯಂ ಮಾಡಿ ಬದುಕಿ ನೀವು

---

1 ರಂ (ಕ) 2 ನಿಧಿ (ಗ)

ಚಿತ್ತಜಾರಿಸ್ಮರಣೆಯುಂ ಪಳಿದು ಹರಿಯ ನೆನೆ
ವುತ್ತ ನರಕಕ್ಕಿಳಿಯಿರ್ಪ್ಪ ಊರ್ಧ್ವಪುಂಡ್ರಮಂ
ಬಿತ್ತರಿಸಿ ಶೂಲದಂದದಲಿಯಾ ಕೇಶಾಂತನಯನಾಂತವಾಗಿ ಧರಿಸಿ ೧೭

ಏರೂಪುವಾದ ಲಾಂಛನವ ಧರಿಸುವಿರಿ ವೇಂ
ಣಾರೂಪವಾದ ಶಸ್ತ್ರಗಳಿಂದ ಯವುಭಟರಂ
ಘೋರಯಾತನೆಯನ್ನೈದಿಸಲಿ ನಿವ್ಮಾನು ಬಿಟ್ಟು ಪರಪುರುಷರಲಿ ನಿಮ್ಮಯ
ನಾರಿಯರು ರತಿಯಂನೆಸಗಲಿ ಕಾಸಿನಾಸೆಯಿಂ
ವಾರಣಾಸ್ಯಾದಿ ತೀರ್ಥಸ್ನಾನಫಲಗಳಂ
ಧಾರೆಯನ್ನೆರೆದು ಕೊಡಿ ಧನಿಕರಿಗೆ ಮಾರಿಮಸಣಿಗಳ ಪೂಜಕರಾಗಿರಿ ೧೮

ಇತ್ಯಾದ್ಯನೇಕ ವಿಧ ಶಾಪಗಳ ಗೌತಮಂ
ಯಿತ್ತೊಡಾ ಶಾಪನಿಗ್ರಹಶಕ್ತಿಬಹುಮುಖದೊ
ಳೆತ್ತಲುಂ ನೋಳ್ಪ ಕೆಂಗಣ್ಣು ಜುಂಜುರುದಲೆಯು ಕೋರದಾಡೆಗಳಿಂದಲು
ಬಿತ್ತರದ ಭುಜಗಳಿಂ ಕರವ ಬೀಸುತ್ತ ಕಾ
ಲೆತ್ತಿವೊದೆಯಲ್ ಬಂದು ಕಡಿಯಲಂಘೈಸಂತಿರೆ
ಮತ್ತೆತ್ತ ಪೋಗುವರೆ ಗತಿಯ ಕಾಣದೆ ಕಣ್ಣಗೆಟ್ಟತಿಭಯಂಕರದಲಿ ೧೯

ಭೂಸುರರು ನಡನಡುಗುತೇನಹೋ ಸರ್ವೇಶ
ನಾಶವಹ ಕಾಲ ಸಮನಿಸಿತು ನಮಗೆಂದು ಬಿಡ
ದಾಸರಿಂ ಶಿವಶಿವ ಮಹಾದೇವಯೆನುತ ಶಿವಸ್ಮರಣೆ ಶ್ರೀರುದ್ರಮುಖ್ಯ
ಭಾಸುರದ ಮಂತ್ರಂಗಳಂ ಜಾನಿಸಂತ ನಿಲ
ಲ್ಕಾ ಸರ್ವಮೌನಿಗಳ ಮುಟ್ಟದವರಗ್ರದೊಳ್
ತಾ ಸಕಲರಂ ಬೆದರಿಸುತ್ತ ಗರ್ಜಿಸಿ ಘುಡುಘುಡುಮ್ಮೆನುತ್ತತಿರೌದ್ರದಿಂ ೨೦

ಇರೆಕಂಡು ಸರ್ವೇಶ್ವರಂ ಪಾತಕರ್ನಂದು
ವರದ ಸುತಗೌತಮಾಂಗಿವರು ದ್ರೋಹವನೆಸಗಿ
ದರು ತನ್ಮುಖಿಂ ಶಾಪವಿಾಯಲದು ಘೋರರೂಪಂತಾಳಿ ಬರಲಂಜುತ
ಭರದಿಂದ ನಮ್ಮ ಧ್ಯಾನಿಸಂತಿಹರು ಪಾತಕ
ರ್ಗಿರದೆ ಮುನಿಯಿತ್ತ ಶಾಪಂ ತಪ್ಪದಂತಾಗ
ಲರಿದಿವರಿಗಜ್ಞಾನಬೋಧೆಯಂ ಬೋಧಿಸಲ್ಕಾರಿಂದಲಾಗದೆಂದು ೨೧

ನೀಚಪುಲ್ಕಸನಾಜ್ಞೆಯಂಮಾಡಲುತ್ತಮರ್
ನಾಚುವರುಲೀತೆರದೊಳೆಮ್ಮ ಗಣವರರಿಂದ
ನೀಚಬೋಧೆಯು ಪೇಳಿಸುವದಲ್ತೆನಂತ್ತ ಹರಿಯಂ ಕರೆದು ಎಲೆ ಮುರಹರ
ಸೂಚಿಸುತ್ತಧಿಕ ದುರ್ಬೋಧೆಯಿಂ ಮುನಿಗಳಂ
ಕೋಚೆಯಾಗಲು ನೀಚದರ್ಶನವ ಮಾಡಂ ನೀ
ನಾ ಚಮತ್ಕಾರಮಂ ಬಲ್ಲೆಯೆನೆ ಹರಿಯುಸುರ್ದ ಪಾಪದತಿಶಯುವ ತಿಳಿದು ೨೨

ದೇವದೇವೇಶನಾನಜ್ಞಾನಬೋಧೆಯಂ
ತೀವಿ ನಿನ್ನಯ ಭಕ್ತಿಯಂ ಬಿಡಿಸಿ ಗುತಮುಸುತ
ನಾ ವಿವಿಧ ಶಾಪಶಕ್ತಿಯ ಪತ್ತುವೋಲೆಸಗಿ ನೀಚದರ್ಶನವ ಮಾಡೆ
ಭೂಮಿಯೊಳಗದೆ ಮೆರವುದಭವ ನಿಮ್ಮಂ ಪಳಿವ
ರೀ ವಸುಧೆ ನರಕಿಗಳೆನಲ್ ವಿಷ್ಣುವೇ ಕೇಳು
ನಾವು ನಮ್ಮಯ ಭಕ್ತನಿಂದೆಯಂ ಮಾಡಲತಿದ್ರೋಹಿಗಳ್ ನಮ್ಮಂಘ್ರಿಗೆ ೨೩

ಎಲೆ ಹರಿಯೆಯವರು ನರಕದೊಳಾಳ್ವರೈ ನಿನಗೆ
ನೆಲೆಯಾಗಿ ಸಂದೇಹಬೇಡ ಪೋಗೈಯೆನ
ಲ್ಕಳಿಕಾಕ್ಷ ನಿಮ್ಮ ನಿಂದಿಸುತ ತ್ರಿಪುರಂಗಳಂ ನಾರದಸಹಾಯದಿಂದ
ನೆಲೆಗೆಡಿಸಿಬಿಟ್ಟೆ ನಿಮ್ಮಯಂ ಕರುಣದಿಂದಲೀ
ಖಲಋಷಿಗಳಂ ಬಲ್ಲೆನೆಲೆ ನಿಮ್ಮ ದಯೆಯಿರ
ಲ್ಕೊಲವಿನಿಂದಷ್ಟಾಂಗವೊಂದಿ ಹರಿ ನಡೆಗೊಂಡನಾ ದಾರುವನಕೆ ಮುದದಿಂ ೨೪

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ಪದಿಮೂ[1]ರು[1]ಸಂಧಿ ಸಂಪೂರ್ಣಮಾಯ್ತು ೨೫

---

1 ರನೆ (ಕಗ)

# ಹದಿನಾಲ್ಕನೆಯ ಸಂಧಿ

ಸೂಚನೆ :

ಹರನಾಜ್ಞೆಯಿಂ ದಾರುವನದ ಮುನಿಗಳೀ ಹರಿ
ಯೊರೆದ ದುರ್ಬೋಧೆಯಿಂ ಪಾಷಂಡರಾಗೆ ಶಿವ
ನಿರವಿಸಲ್ ನಂದಿಗಂ ಸುಖಮೂರ್ತಿಯಾಗಿ ತತ್ವವನುಸುರ್ದನಂತವರಿಗಂ

ಪುರಗಳೊಂದಾದ ಕಾಲದಿ ಕೆಂಗಿಡಿಯನುಗುಳ್ವ
ಶರದಗ್ರದಿಂದುರುಹಿ ಬೆನ್ನಬತ್ತಳಿಕೆಯಂ
ಗಿರಿಸುತೆಯ ಕೈಗಿತ್ತು ತಿರುಹನೊಂದಿಳುಹಿ ಬಿಲ್ಲಿನ ಕೊಪ್ಪನೂರಿ ಕರದಿ
ಶರವೊಂದ ಪಿಡಿದು ನಿಂದಿರುವ ತನ್ನಯ ಮಂಡೆ
ಗೆರೆದ ಪೂವಳಿಯೊಳನುಸರಿಸಿ ಝೇಂಕರಿಪ ಬಂ
ಭರದ ಪಿಂಡಿಂ ನೀಲಕುಂತಲನೆನಿಪ್ಪ ಶ್ರೀಗಿರಿಚೆನ್ನಮಲ್ಲ ಸಲಹ ೧

ಸೊನ್ನಲಾಪುರವನಾ ಸಿದ್ಧರಾಮೇಶಂಗೆ
ಯುನ್ನತಸುಭಕ್ತಿಯಿಂ ಲಿಂಗಮುದ್ರೆಯಂ ಶಿಲೆಯ
ತನ್ನಿಯಮಿಸುತ್ತ ಪಟ್ಟವ ಕಟ್ಟಿ ಚರಲಿಂಗದಾಸೋಹವಂ ಮಾಡುತ
ಪನ್ನಗಧರಂಗಮುಳರತ್ನದಕ್ಷತೆನೇಮ
ವನ್ನಡಸುತವಿರತಮಿರಲ್ಕೆಯಕ್ಷತೆಗಖಿಳ
ರನ್ನಮಿಲ್ಲೆಂದೈಕ್ಯವಾಗಿ ಶಿವನೊಲಿಸಿದಾ ಚಾಮಲಾಂಬಿಕೆಗೆರಗುವೆ ೨

ಸುಂದರದ ಮಕರಕುಂಡಲರತ್ನಕೋಟೀರ
ಮಂದಾರಮಾಲಿಕಾಪೀತಾಂಬರವ ಧರಿಸಿ
ವೊಂದುಮುದ್ದಾನೆಯಲ್ಲಳವಡಿಸಿ ಪುಸ್ತಕವ ಶಿಷ್ಯರೊಡಗೊಂಡು ತಾನಂ
ಬಂದು ಮುನಿಗಳಿರ ನಿಮ್ಮಭಿಮತದ ದೈವಮಂ
ಚಂದಾಗಿ ಪೇಳ್ವುದೆನಲೇಕ ಏವೋಂರುದ್ರ
ನೆಂದೆನಲ್ ನಾರಾಯಣಾಜ್ಞಾನಯತೇ ರುದ್ರಯೆಂಬ ಶ್ರುತಿಯಂ ಬೋಧಿಸಿ ೩

ಮತ್ತೆ ಕೇಳಿರೆ ವಿಷ್ಣು ಮಾಯಾತ್ಮಕಂ ಜಗಮೆ
ನುತ್ತುಸುರ್ದ ಪನ್ನೆರಡು ಲಕ್ಷಗ್ರಂಥವ ಕೇಳಿ
ತಥ್ಯವೋಗೆನಲದಂ ಕೇಳಿ ಶಿವನಂ ಮರೆದು ವೈಷ್ಣವರ್ ತಾವಾದರು
ಮತ್ತೆ ಬೌದ್ಧನೆಯಾಗಿ ಮಾಯಿಮಾಯಾಮಯಂಮೆ
ನುತ್ತುಸುರಿ ಷೋಡಶಕಲಕ್ಷಗ್ರಂಥಂಗಳಿಂ
ದತ್ತಿತ್ತಲಿದ್ದವರ ಬೌದ್ಧರಂ ಮಾಡಿ ಕೆಲರಿಗೆ ಹಿಂಸೆ ಕೊಡದೆಂದು ೪

ಹೇಳಿ ದಶಲಕ್ಷಗ್ರಂಥವ ಜೈನರಂ ಕೆಲರ
ಮೇಳದಿಂದೆಸಗಿ ಮತ್ತೊಂದಡೆಗೆ ಪೋಗಿ ಮುನಿ
ಜಾಳದಲಿ ದೇಹವೇಯಾತ್ಮ ಸುಖವೇ ಸ್ವರ್ಗ ದುಃಖವೇ ನರಕವೆಂದು
ಮೇಲೆ ಮರಣವೆ ಮುಕ್ತಿ ಪರಲೋಕವಿಲ್ಲೆಂಬ
ಲೀಲೆಯಿಂ ಚಾರ್ವಾಕರಂ ಮಾಡಿ ಕೆಲರ ಬಿಡ
ದಾಲಾಪಿಸುತ್ತ ಗುಣತ್ರಯದಿಂದ ಜಗಮೆಂದು ಕೆಲರ ಸಾಂಖ್ಯರ ಮಾಡಿದಂ ೫

ಕಾಲದಿಂದಖಿಳಮಳಿವುದು ನಿಗಮಗಳನಾರು
ಪೇಳಲಿಲ್ಲೀ ಜಗತ್ತಿಗೆ ಕರ್ತರಾರಿಲ್ಲ
ಮೇಲೆ ಕರ್ಮವೆ ದೈವಮಿಾ ಜೀವನೇ ದೈವಮಷ್ಟಮೂರ್ತಿಗಳೆ ದೈವಂ
ಭಾಳಲೋಚನ ದೈವಮಲ್ಲೆಂದು ಪದ್ಮಾಕ್ಷ
ಮಾಲಿಯನೂರ್ಧ್ವಪುಂಡ್ರವ ಶಂಖಚಕ್ರಗಳ
ಪಾಳಿಯಂ ಧರಿಸುವಂದದಿ ಮಾಡಿ ಹರಿ ಮರಳಿ ಶಂಕರಗೆ ಬಿನ್ನವಿಸಿದಂ ೬

ಗೌತಮನ ಶಾಪ ಹರಿ ದುರ್ಬೋಧೆಯಿಂ ಮುನಿ
ವ್ರಾತ ಬಹುದರ್ಶನಮತಾಂತರವ ತಳೆದಮಲ
ಭೂತಪತಿ ಶಿವನ ಶಿವಭಕ್ತರಂ ಭಸಿತಾಕ್ಷಮಾಲೆ ಮಂತ್ರವ ಪಳಿವುತ
ಖ್ಯಾತವಿಪ್ರರುಗಳಾಗುದಿಸುತ್ತ ಕಲಿಯೊಳಪ
ನೀತಿಯಂ ನಡೆಸುತಿರಲವರ ಚರ್ಯೆಯಂ ಕಂಡು
ಗೌತಮಂ ಶಿವನೊರ್ವನೇ ದೈವಮೆಂದು ಧ್ವಜಮೆತ್ತಿ ಡಂಗುರಪೊಯ್ಸಿದಂ ೭

ಆ ವಾರ್ತೆಯಂ ಕೇಳಿ ದಾರುಂವನವಾಸಿಗಳ್
ತಾವೈದೆ ನಾಲ್ವತ್ತುಯೆಂಟುಸಾವಿರ ಭೂಸು
ರಾವಳಿಗಳೆಯ್ತುರಲ್ಕಕ್ಷಪಾದಂ ಕಂಡಿದೇನು ಶಿವಮತಮುಳಿದಿರೆ

ಆವಕಾರಣ ಬಂದಿರೆನಲಷ್ಟತನುಗಳೇ
ತೀವಿ ಲೋಕಕೆ ದೈವತೆಗಳೆನಲು ಗೌತಮಂ
ತಾವವೆಲ್ಲಿಯು ದೈವ ಜಡತತ್ತ್ವವೆಂದಷ್ಟಮೂರ್ತಿವಾದವ ಜಯಿಸಿದಂ ೮

ಪರಿಪೂರ್ಣನಲ್ಲಾತ್ಮನೆಂದಾತ್ಮವಾದಿಯಂ
ಜರೆದು ಲೋಕಕ್ಕೀಶನಿಲ್ಲೆಂಬ ವಾದಿಯಂ
ತಿರುಗುತಿಹ ಚಕ್ರ ಸೂರ್ಯರ ತೋರಿ ಪಳಿದು ನಿಶ್ವಸಿತಂ ಹಿ ಯಸ್ಯವೇದಾಃ
ಭರದೊಳಿಂತುಸರ್ವ ಶ್ರುತಿಶ್ರುತಿಯಿಂ ಸತ್ಯತೆಯ
ಜರೆದು ಭುವನದ ಸತ್ಯತೆಯಂ ನಿರಾಕರಿಸಿ ಸ
ತ್ಕರಣವೇ ದೈವವಾಗದು ಚೇತನಾಧಿಷ್ಠಿತಂ ಹೃಷೀಕಪ್ರೇರಿತಂ ೯

ಏನೆಂಬೆ ಕರ್ಮವೇ ದೈವವೆನೆ ಗೌತಮಂ
ಜ್ಞಾನಿ ನುಡಿದಂ ಕರ್ಮಕರ್ತೃವಿಲ್ಲದಿರೆ ತಾ
ನೇನ ಶಿಕ್ಷೆಯ ಮಾಡಲಾರವದರಿಂ ಕರ್ಮಕರ್ತೃವಲ್ಲೆಂದು ಪಳಿಯೆ
ಈನೆರೆದ ಕಾಲವೇ ನಿತ್ಯವೆಂತೆಂದೆನ
ಲ್ಕಾ ನವ್ಯಮುನಿ ಪೇಳ್ದ ನಿತ್ಯನೀಶ್ವರನಹಂ
ಮಾನಸೋದಿತಮಹುದು ಕಾಲಮಾದಪ್ರಾಣವಾಹಿಕಂಯೋಗಾಸ್ಪದಂ ೧೦

ಎಂದು ಸೇವಿಸೆ ಸಾಂಖ್ಯನಂದಂ ಮುನಿ ಕೇಳಯ್ಯ
ಹೆಂದವಾ ಸಂಕೃತಿ ಪ್ರಕೃತಿಯೆ ಮಾಯೆಯುದರಿನಿಂ
ದಂವದ ಗುಣತ್ರಯಂ ಗುಣಗಳಿಂ ಜಗದುದಯ ಶಿವನೆಲ್ಲಿಯವನೆನಲ್ಕೆ
ಮಂದಮತಿ ಸೂಜಿಗಲ್ಲುಗಳುಭಯಜಡವು ಪಿಡಿ
ದಂದದಿಂದಾಡಿಸುವ ಬೇರೊಬ್ಬನಿಂದ[1]ರಿದ
ದಂದ[1]ಮಾಯಾಗುಣತ್ರಯಕೆ ಶಿವನೇ ಮೂಲಕರ್ತೃ ಕೇಳಯ್ಯ ವಾದಿ ೧೧

ಅಷ್ಟಾಂಗಯೋಗ ಮುಂತಾದ ಯೋಗಿಗಳ ಮತಿ
ಕಷ್ಟರಂ ಮಾಡಿ ಚಾರ್ವಾಕಮತಮಂ ಹಿಟ್ಟು
ಗುಟ್ಟುತ್ತ ಬೌದ್ಧಮತದವರ ನಿರ್ಬುದ್ಧಿವಂತರ ಮಾಡುತಾಗ ಮುನಿಪಂ
ಕೆಟ್ಟ ಜಿನಮತದಿಳೆಯ ವೇದಕುದ್ದಾಲದಿಂ
ನೆಟ್ಟನಂತಪ್ಪಾಟನಂಗೈದವರು ಮೊದಲಳಿದ
ಕಷ್ಟಕಥೆಗಳ ಪೇಳಿ ಖಂಡಿಸುತ್ತಿರ್ದನಾ ಗೌತಮಂ ಮುನಿಪೋತ್ತಮಂ ೧೨

1 ರಿದ (ಗ)

ಕಾಪಿಲರ ಮಟ್ಟಿ ಕಾಲ್ಗೆಡಿಸಿ ಪೋಕರ ಮಾಡಿ
ಚಾಪಲದಾ ನೀಲಪಟಮತ[1][ವ ನೀ][1]ಕರಿಸಿ ಮುನಿ
ಕಾಪಟ್ಯ ನೈಯಾಯಿಕರ ದುರನ್ಯಾಯಿಗಳನೆಸಗಿ ಕೂಡಲೆ ನಗುತ್ತ
ಸೋಪಾಧಿಮೀಮಾಂಸೆಯುಕ್ತಿಸಾಸಿ[ರದ]ಳಂ
ತಾ ಪರಮವಾದ ತರ್ಕದೊಳು ಜಯಿಸುತ ಶಿವಾ
ಲಾಪದೀಪಿತಬೋಧೆಯಿಂದೆಸೆವುತಿರ್ದನಾ ಗೌತಮಂ ಪ್ರಖ್ಯಾತನು ೧೩

ಎಲೆ ವಾದಿ ಪೂರ್ವಮೀಮಾಂಸವನೆ ಕರ್ಮವಂ
ಪಳಿದು ಶಂಕರನ ಮರೆಗೊಂಡು ಜೀವಿಸು ಪಿಡಿದು
ಪಳಿನುಡಿಯ ತಲೆಯ ವೇದಾಂತಿಯೇ ನಿನದಾದ ಘನನಿರೀಶ್ವರವಾದಮಂ
ಪಳಿದು ಶಶಿಧರನ ಮರೆಯೊಕ್ಕು ಮುಕ್ತಿಯನೈದು
ಒಲಿದಂ ವೈಶೇಷಿಕಾ ಈಶನೆ ವಿಶೇಷಮಂ
ದೊಲವಿನಿಂ ಭಜಿಸು ಗಾಣಾಪತ್ಯನೇ ಕೇಳು ಗಣಪ ಶಿವಸೂನು ಮತ್ತೆ ೧೪

ಮಲದೋಷ ಕರ್ಮಪಾಶಂಗಳ[2][ಳಿ][2]ಯಲ್ಕೆ ಶಿವ
ನೊಲವಿನಿಂ ನಿತ್ಯನಿರ್ಮಳವಸ್ತುಮಂ ಬೆಸಲೆ
ಮಲಹರನ ದೃಷ್ಟಿಪಾತನಶಕ್ತಿಯಿಂದಲ್ಲದವು ಕೆಡವು ನಿನ್ನ ಮತಮಂ
ನೆಲೆಯಾಗಿ ಬಿಟ್ಟು ಶಿವಮತವ ಪೊಂದೈ ಮಾಯೆಂ
ಸಲೆ ನಿತ್ಯಮಾಯಾಮಯಂ ಜಗತ್ತೆಂಬಾತ್ಮ
ಕಲೆಯಿಂದ ಮಾಯೆಯಲ್ಲದೆ ಮಾಯೆಯೇ ನಿತ್ಯವೆಂದು ವಾದವ ಜೈಸುತ ೧೫

ಶಕ್ತಿಯೇ ದೈವವೆಂದೊಡೆ ಮೂಲಪ್ರಕೃತಿಯದು
ಶಕ್ತದ ಮಹತ್ತತ್ವದಿಂದಂದಯಂಮದಕೆ ಸಂ
ಪೃಕ್ತಮಾಗಿಹಂದದಕ್ಕೀಶನೇ ನೋಡೆ ಮೂಲಸ್ತಂಭವಾಗಿರ್ಪನಂ
ರಕ್ತಿಯಿಂ ಶಾಂಭವಮೆನುತ್ತಿಹುದು ಶಿವಪದವ
ಭಕ್ತಿಯಿಂ ಸಾರ್ದು ಬದುಕಿರೊ ಸರ್ವಮತದವರು
ಮುಕ್ತಿಯಂ ಪಡೆಯಲ್ಕೆನುತ್ತ ಕೈಯೆತ್ತಿ ಶಿವನೇ ದೈವವೆಂದು ಸಾರೆ ೧೬

ದಾರುವನದಾಶ್ರಮದೊಳಿಪ್ಪ ಮೌನಿಗಳು ತಾ
ವಾರಾಧ್ಯ ಗೌತಮನ ಕೂಡೆ ವಾದಿಸಿ ಸೋತು
ಭೂರಿಮತವಾದ ಗಿರಿವಜ್ರಗೌತಮನ ಕೂಡಾರು ವಾದಕೆ ದಕ್ಷರು

1 ದಸ್ವೀ (ಕ) ದಸೀ (ಗ) 2 ಳಿವು (ಕಗ)

ಶೂರ ನಿನ್ನಯ ಬೋಧೆಯಂ ಕೇಳಿಯಾ ವಿಗಡ
ಪೋರಿದೆವು ತೃಣರಾಶಿಯಗ್ನಿಯೊಳ್ ಸೆಣಸುವೊಲ್
ನೀರೇಜನೇತ್ರ ನಿನ್ನಯ ಶಾಸ್ತ್ರವಾತಂಗೆ[1][ಯೇನ[1]]ಪ್ಪುದೋ ಭಾವಿಸೆ ೧೭

ಎನಲು ಕೇಳುತ್ತ ನೀವೀ ಡವಾಮಿಯಂ ಸದ್ದಿ
ಗನುಮಂತಿಸೆ ಕಾಲ್ಗೆಡುವರೇ ನಾನೆ ಪೋಪನೆಂ
ದೆನುತೊಂದಂ ಕರಿಯ ಪೃಷ್ಠದಿ ಪುಸ್ತಕವನವುರಿಸುತ್ತ ಬಹುಶಿಷ್ಯರ್ಕಳಿಂ
ದನುಗೂಡಿ ವೈಷ್ಣವಾಚಾರ್ಯನಾಗಂದಳವ
ಸನಯದಿಂದೇರಿ ಬಹುವಾದ್ಯರವ ಪಾಠಕರ
ನಿನದದಿಂ ಬಂದು ಗೌತಮನ ಸಿಂಹಾಸನಕ್ಕಿದಿರೆ ವಿಷ್ಟರವನಡರಿ ೧೮

ಎಲೆ ವೈಷ್ಣವಾಚಾರ್ಯ ಸಕಲಮುನಿಗಳಂ ಸೋತು
ಬಲುಭಂಗಬಟ್ಟು ಪೋದರವರ್ಕಳಪಜಯವ
ಗೆಲಲು ಬಂದೆಯ ಕೇಳು ನಿನ್ನ ದೈ[2][ವದ][2] ಭಂಗಮುಸುರಲ್ಕೆ ಕರಕಷ್ಟವೈ
ಸಲೆಮುನಿಪ ಭೃಗುವಿತ್ತ ಶಾಪದಿಂ ದಶಜನ್ಮ
ದಲಿ ಹಂದಿ ಮೀನಾವೆಯಾಗಭಕ್ಷ್ಯಾಪೇಯ
ಗಳ ಕೊಂಡ ರೀತಿಯಂ ತಿಳಿಯಬೇಡವೆ ಮನದ ದೃಕ್ಕಿನಿಂದೆನ್ನಲಾಗಿ ೧೯

ನಾಚಿ ಬರುತಾ ವಿಷ್ಣು ಶಿವನ ಸನ್ನಿಧಿಯಲ್ಲಿ
ಚಾಚಿ ಕೈಕಾಲ್ಗಳಷ್ಟಾಂಗದಿಂ ನಮಿಸಿ ನಿಂ
ಧಾ ಚಮತ್ಕಾರಮಂ ಕಂಡಭವ ಹರಿಯೆ ನೀಂ ಬಂದುದಂ ಪೇಳೆನಲ್ಕೆ
ವಾಚಾಮಗೋಚರನೆ ನಿತ್ಯಸಂಪೂರ್ಣನೇ
ಸೂಚಿಪೆಂ ಗೌತಮನ ಕೂಡೆ ವಾದಕೆ ಪೋಗಿ
ಕೋಚೆಯಾದರು ಸಕಲ ಮುನಿಗಳೇದಾಂ ಪೋಗಲಾನೆ ಭಂಗಿತನಾಗುತ ೨೦

ಬಂದೆ ಚಿತ್ತೈಸಯ್ಯ ಬಿನ್ನಪವನೆಲೆ ದೇವ
ಎಂದೆಸಲು ನಸುನಗುತ ಎಲೆ ವಿಷ್ಣುವಾತನಂ
ಒಂದುಪ್ರಶ್ನೆಯೊಳು ಸೋಲಿಸುವೆನೆಂದೆನುತ ಹರ ನವರತ್ನಮಂಕುಟದಿಂದ
ಮಂದಹಾಸಂ ಮಿಗಲುಂ ಶಂಭುಭಟ್ಟಾರಕಂ
ಎಂದೆಂಬ ನಾಮದಿಂ ಛತ್ರಚಾಮರದ ಪೊ
ನ್ನಂದಣಮನೇರಿ ನಾನಾಶಾಸ್ತ್ರಗಳ ಕಲಿತ ಶಿಷ್ಯಪ್ರಶಿಷ್ಯರಿಂದ ೨೧

---

1 ಮ (ಕಗ) 2 ವ (ಕಗ)

ಬರಲು ಸುರರೆಲ್ಲ ಸೇವಕರಾಗಿ ಕನಕಚಾ
ಮರವ ಥಾಳಿಸುತ ಮೌಕ್ತಿಕದ ಬಿಲ್ಗೊಡೆಗಳವು
ತರತರದೊಳೆಸೆಯೆ ಬಿರಿದಿನ ಕಹಳೆ ಭೋರ್ಗರೆಯಲಖಿಳಾಶೆ ಘುಮ್ಮಿಡುತಿರೆ
ಭರದೆ ಭಟ್ಟಾಳಿ ಕೋಟಾಕೋಟಿ ಪೊಗಳೆ ಗಣ
ವರರುಘೇ ಉಘೆ ಚಾಗುಭಲರೆಂದು ಗೌತಮನ
ಪರಮಾಶ್ರಯಂಬೊಕ್ಕು ಸಿಂಹಪೀಠದೊಳು ಕುಳಿತಲ್ಲಿ ಚರರಂ ಕರೆವುತ ೨೨

ಮಾತುಗಾರಿಕೆಯ ಬೂಟಾಟದಿಂ ಬಡಪಾರ್ಬ
ರೇತೆರದಿ ಸೋಲಿಸಿದೆ ಶಂಭುಭಟ್ಟನ ಕೂಡೆ
ಖ್ಯಾತವಾದವ ಮಾಡಿ ಜೈಸಿದಡೆ ವಿದ್ವಾಂಸನಲ್ಲದೊಡೆ ಗಾಂಪನೀಶಂ
ಮಾತೇನು ಕರೆಯಿರ್ರೈ ಓಡಿಪೋ[1][ಪದ][1]ನೆನ
ಲ್ಕಾ ತೆರದೆ ಕರೆಯಲಾಕ್ಷಣವೆ ಗಹಗಹಿಸುತ್ತ
ಗೌತಮಂ ಜ್ಞಾನೋತ್ತಮಂ ಸಕಲಸಂಭ್ರಮದೆ ಬಂದಿದಿರ ಗದ್ದಿಗೆಯೊಳು ೨೩

ಮಂಡಿಸಲ್ ಗೌತಮನ ದರಹಸನವದನವಂ
ಕಂಡಮಳ ಶಂಭುಂಭಟ್ಟಂ ಮನದೆ ಪರಿಣಮಿಸಿ
ಮಂಡನದೆ ನುಡಿದನಾತವ ಮತಂ ಕಿಮಿತಿಪ್ರತ್ಯುತ್ತರಂ ಮೇದೀಯತಾಂ
ಖಂಡಪರಶೋಃ ಸುತೋ ಗೌತಮೋಹಂ ಶ್ರುಣುತ
ಪುಂಡರೀಕಾಕ್ಷಶ್ಚ ಯಸ್ಯದಾರಾಃ ಸಮ
ಸ್ತಾಂಡೇಷು ಸಪ್ರಭಂನ್ನಾರ್ನ್ಯೈಧಿಕಾರಿಣಃ ಸಂತಿ ಜಗತಾಮಿದಾನೀಂ ೨೪

ತವಶಾಸ್ತ್ರವಚನೇನ ಖಂಡನಂ ಕುರ್ವಿದಂ
ಸವಿಶೇಷಮಿಂತಿಚ ಶ್ರುತ್ವಾ ಶಂಭುಭಟ್ಟೋಪಿ
ನ ವಚನ ಪಟುರ್ಹಿಭೂತ್ವಾವಿತಂಡಾಂ[ದ]ದಾತುಮಾಬ್ಧವಾನ್ ಗೌತಮಾ
ಶಿವ ಏವ ನಾಸ್ತಿ ಭೂಯೋಸ್ತಿಚೇನ್ಮಂಗಲಾ
ರ್ಥವಿಧಾನಕಂ ಶಿವಪದಂ ವರ್ತತೇ ಎನಲ್
ಕವಕವಿಸಿ ಚೆನ್ನಾಯಿತೆಂದು ತಲೆದೂಗಿ ಮಾರುತ್ತರಮನೀಯದೊಪ್ಪೆ ೨೫

ಚಂದವಾಯಿತು ಶಂಭುಭಟ್ಟ ನಿನ್ನಯ ಮಾತು
ಸಂದೇಹವೇ ಎಂದು ನಸುನಗುತ ಗೌತಮಂ
ಮಂದಮತಿಯೇ ಶಿವಂ ಪುಲ್ಲಿಂಗವಾಗಿರಲ್ಕದನರಿಯದೆನ್ನ ನುಡಿಯಂ

1 ಪುದ (ಕ)

ಹಿಂದುಗಳೆಯಲ್ ಬಂದೆಯೋ ಶಿವತರಾಯೆನು
ತೊಂದಿದ ವಿಶೇಷಣಮು ಪುಂವ್ಯಕ್ತಿಯಾಗಿರಲ್
ಮುಂದೆ ಶಿವಪದವಿಶೇಷ್ಯವೆಂನುತ್ತ ರುದ್ರಭಾಷ್ಯದಲಿ ಪೆಳ್ದುದ ಮರತೆಯ ೨೬

ಗಂಗಾದಿಸಕಲತೀರ್ಥಕ್ಷೇತ್ರರಾಜಿಯಂಲಿ
ಮಂಗಳಾತ್ಮಕ ಶಿವನ ಲಿಂಗಂಗಳುಂಟಿದಕೆ
ಭಂಗಮುಹುದೇನಿನ್ನು ನುಡಿಯು ಹುಸಿಯಾಯ್ತೀಗ ಸೋತೆ ಇನ್ನೇಕೆ ಮಾತು
ಹಿಂಗದೇ ಹಗಲಕಾಣದ ಗೂಗೆ ಸಟೆಯೆನಲ್
ಭಂಗವಾದುದೆ ರವಿಗೆ ಶಿವನಿಲ್ಲವೆಂಬ ನುಡಿ
ಯಂಗವಿಸಬೇಡ ಶಿವಪದಕೆ ಶರಣಂಬೊಕ್ಕುವಾದವುರ ಮಾಣು ಮರುಳ ೨೭

ಎನಲಂ ಗೌತಮು ಕೇಳು ಬಾಯ ಮುಚ್ಚಿದರೆ ನೀ
ನನುವದಿಸಿ ಹೆಡತಲೆಯೊಳಗೆ ಕೂಗುತಿಹೆ ನಿನಗೆ
ಘನವಾದವೇಕೆ ಶಿವನಿಲ್ಲ ಸತ್ಯಂ ಸತ್ಯವೆಂದು ದೃಷ್ಟವ ತೋರಲು
ಸನುಮತವೆಯೆನಲಾವ ದೃಷ್ಟಾಂತವಿದು ಸುಳ್ಳು
ವಿನಯದಿಂ ನೋಡಿ ಶಿವನಿಲ್ಲ ನಿಶ್ಚೇಯವೆಂ
ದನಘ ಪಣೆಗಣ್ದೆರೆಯಲಾಗ ಗೌತಮನದಕೆ ರೋಮವೊಂದಳುಕಿಲ್ಲದೆ ೨೮

ಎಲೆ ವಾದದೊಳ್ ಸೋತ ಶಂಭುಭಟ್ಟನೆ ವಾದ
ದೊಳು ಜಯಿಸದೇ ಮುಳಿದು ಕೊಲಲೆಳಸಿ ನನ್ನನೀ
ಬಲದಿಂದೆ ನೊಸಲಕಣ್ ತೋರಿಸಿದೆ ನೋಡು ಶಿವನುಂಟೆಂಬ ಪಕ್ಷದಲ್ಲಿ
ನೆಲೆಯಾಗಿಯಂಗಾಲಿನಲ್ಲರಳ್ದ ಕಣ್ಣಮರೆ
ಸಲೆ ತೋರ್ಪೆ ನೋಡೆನುತ್ತಂಗಾಲಮುಖದೆಡೆಯೊ
ಳಳವಡುವ ಪಾಂಗಿನಿಂ ತೋರಲಂಬುಜದಂತೆ ಕಣ್ದೆರಲ್ ಶಂಭುಭಟ್ಟ ೨೯

ಆರರೆ ವಿಸ್ಮಯಗೊಂಡು ಹರಿವಿರಿಂಚಾದ್ಯಮರ
ವರ ಪ್ರಮಥಗಣರಚ್ಚರಿಯಪಟ್ಟರುಘೆಯೆನಲ್
ಹರಸುಪ್ರಸನ್ನನಾಗುತ್ತ ತಳ್ಕೈಸಿತ್ತನಾಗಕ್ಷಪಾದಾಂಕವಮಂ
ಇರಲಿ ನಿನಗೆಂದು ನಿಟಿಲಾಗ್ರದೊಳ್ ಲಿಂಗಮಂ
ಧರಿಸನಾರತ ಭಜಿಸುವಾದಿಗಳ ಗಣಕಗ್ರ
ಸರನಂ ನೀನೆನುತ ಮೂರ್ಧಾಭಿಷಿಕ್ತನ ಮಾಡಿ ಪೊರೆದಂ [1]ವಾದಿ[1] ಶಂಕರಂ ೩೦

---

1 ಉವಾದಿ (ಗ)

ತಾತ ಕೇಳ್ ಗೌತಮನ ಮೇಲೆ ಗೋವಧೆಯೆಸಂ
ದೋತು ಹೊರಿಸುತ ಶಾಪದಿಂ ಭ್ರಷ್ಟರಾದ ಮುನಿ
ವ್ರಾತಮೇನಾದುದದ ನಿರವಿಸೆನೆ ಕೇಳವರ್ ನಾನಾಮತಸ್ಥರಾಗಿ
ಭೂತೇಶನಂ ನಿಂದಿಸುತ್ತಿರಲು ಕೇಳಿವರು
ಮಾತೇನಂ ನರಕಭಾಜನರಾದರೇನುಗತಿ
ಪೂತಾತ್ಮ ಪರಮೇಶ ಪಾಲಿಸೆಂದಾ ವಸಿಷ್ಠಾದಿಗಳು ಬಿನ್ನೈಸಲು ೨೧

ಅಂತಾಗಲೆಂದಮಿತಮುನಿಗಳಂ ಬೀಳ್ಕೊಳಂ
ತ್ಯಂತಕಾಂತಕನಾಗ ಧರ್ಮಸ್ವರೂಪನಂ
ಚಿಂತಿಸಲ್ ನಂದೀಶ ಕರವ ಮುಗಿದಿದಿರಿನೊಳ್ ನಿಲಲು ಸುಜ್ಞಾನಕೋಶ
ಭ್ರಾಂತಜೀವರು ದಾರುವನವಾಸಿಗಳ್ ಕೆಟ್ಟ
ರಂತಕನ ಬಾಧೆಗೊಳಗಪ್ಪರಜ್ಞಾನದಿಂ
ದಂತರವ ಬೋಧಿಸಲ್ ನೀನೆ ಸುಖವಹಮೂರ್ತಿಯಾಗಿ ಪೋಗೈ ಮುದದೊಳಂ ೨೨

ಎನಲಡ್ಡಬಿದ್ದು ವಂದಿಸುತ ನಡೆಗೊಂಡನ
ತ್ಯನುಪಮದ ಕೆಂಜೆಡೆಯ ಮಕುಟತ್ರಿಣೇತ್ರದಿಂ
ದನುಕೂಲವಕ್ತ್ರದಿಂ ರುದ್ರಾಕ್ಷಕುಂಡಲದ ಕಾಂತಿಯಿಂ ಸುಲಿಪಲ್ಗಳಿಂ
ಘನಯೋಗಪಾದುಕೆಗಳಿಂದ ಕಟಿಸೂತ್ರದಿಂ
ಮಿನುಗುತಿಹ ಸರ್ವಾಂಗಭಸಿತಾನುಲೇಪದಿಂ
ತನತನಗೆ ಸುಳಿವಾಳೆಯಂತೆ ಥಳಥಳಿಪ ಪಟ್ಟಾಂಬರದಿ ಪೊಳೆದು ಬಂದಂ ೨೩

ದಾರುವನದಾಶ್ರಮಿಗಳಪ್ಪ ಮೌನಿಗಳಂ ಕಂ
ಡಾರಯ್ದು ಕರೆದೊಯ್ದು ಮೇಲುಗದ್ದುಗೆಯಿತ್ತು
ಸಾರವಾಗಷ್ಟಾಂಗವೊಂದಿ ನಮಿಸುತ ದೇವ ಗೌತಮನ ಶಾಪದಿಂದ
ಶೌರಿ ದುರ್ಬೋಧೆಯಿಂದಜ್ಞಾನವಾವರಿಸಿ
ಮಾರಾರಿನಿಂದ್ಯೆಯಿಂ ಪಾಷಂಡರಾದೆವಿ
ನ್ನಾರು ಲೆಕ್ಕಿಪರಿಲ್ಲ ನಿಮ್ಮ ಪಾದದ ಮಹಿಮೆಯಿಂದಲಜ್ಞಾನ ಪೋಯ್ತು ೨೪

ಗುರುವೆ ಸುಖವಹಮೂರ್ತಿ ದುರ್ಬುದ್ಧಿಯಿಂ ಕೆಟ್ಟ
ವರಿದಾದ ಸದ್ಬೋಧೆಯಿಂದ ನಮ್ಮೆಲ್ಲರಂ
ಪರಿರಕ್ಷಿಸಲ್ಬೇಕು ಜೀಯಯೆನೆ ಚೆನ್ನಾಗಿ ಮುಂಡಿಸುತ ಚಿನ್ಮುದ್ರೆಯಂ

ಇರದೆಯಭಿನಮಿಸಿ ಮತ್ತಾ ಮುನಿಗಳಿಂದಾಗ
ಪರಮ ಪ್ರೀತಿಯೊಳು ಗುರುಸಾರ್ವಭೌಮಂ ನಲಿದಂ
ಸುರುಚಿರೋನ್ನತಬೋಧೆಯಿಂ ಬೋಧಿಸುತ್ತಿರ್ದನಜ್ಞಾನಮುಳಿವಂದದಿಂ ೩೫

ಪರಶಿವನ ಪರಮುಚಿಚ್ಛಕ್ತಿಯಿಂದವೆ ಮೊದಲು
ಪರಶಕ್ತಿಮುಖ್ಯಪಂಚಕಶಕ್ತಿಗಳ್ ಪುಟ್ಟ
ಲಿರದೆಯುವರವರ ಸಂಬಂಧದಿಂ ಸಾದಾಖ್ಯವದರಿಂದ ಮೊಗಗಳೈದು
ನೆರೆ ಮೊಗಗಳಿಂ ಪಂಚಭೂತಾಪ್ಪತನು ಜನನ
ಮಿರದೆಯದರಿಂದಂಡ ಪದಿನಾಲ್ಕು ಭುವನಗತ
ಗಿರಿ ಸಪ್ತಸಾಗರಂ ಸಚರಾಚರಂ[ತುಮಾ] ಭೂಗೋಳದುದಯ ಕೇಳಿ ೩೬

ಎಲೆಲೆ ಮುನಿಗಳಿರ ಗ್ರಂಥಾರ್ಥಬಾಹುಲ್ಯಮಂ
ದೊಲಿದಂ ಸಂಕ್ಷೇಪದಿಂದೊರೆವೆ ಕೈಲಾಸಕ್ಕೆ
ನೆಲೆಯ ಮೂವತ್ತೆರಡುಕೋಟಿಯೋಜನದುದ್ದಮುದರಗಲಮುದಕೆ ಸಾಮ್ಯಂ
ಅಳಿಯದೊಡಲಿನ ದಿವ್ಯಕಾಂತಿಯಿಂ ಗಣಪರಾ
ಪೊಳಲೊಳಿರ್ಪರೆನಲ್ಕದಂ ಸಾರುವಸ್ಥಿತಿಯ
ನೆಲೆ ಗುರುವ ಬೋಧಿಸೆಂದೆನೆ ಕೇಳಿ ಮೊದಲು ಜೀವಂ ಕರ್ಮಬದ್ಧನಾಗಿ ೩೭

ಅಂಡಜ ಸ್ವೇದಜುದ್ಭಿಜ ಜರಾಯುಂಜಮೆಂಬ
ತಂಡತಂಡದ ಸೃಷ್ಟಿಯಂ ಪೇಳಿ ಸತಿಪುರುಷ
ರುಂಡನ್ನಪಾನಂಗಳಿಂದ ದೋಷತ್ರಯದಿ ಸಪ್ತಧಾತುಗಳಪ್ಪವು
ಹೆಂಡಿರೊಡಗೂಟದಿಂ ಶುಕ್ಲರಕ್ತಂಗಟ್ಟಿ
ಗೊಂಡು ಪಿಂಡೋತ್ಪತ್ತಿಯಪ್ಪ ಭೇದವನೊಳಗೆ
ಪಿಂಡ ಚಿಂತಿಸುತಿರುವ ಚಿಂತೆಯಂ ಶಿವಚಿಂತೆಯುಂದಮಂ ಪೇಳ್ದನನಘೆ ೩೮

ಪುಟ್ಟುವರ ಬಾಲ್ಯದಲ್ಲಾಗುವದ ಯುವ್ವನದಿ
ಪುಟ್ಟುವ ವಿಕಾರಗಳ ಮೇಲೆ ಗೃಹಧರ್ಮಕಳ
ವಟ್ಟಾಗ ನಡುವೆ ನಡುವೇ ಬಂದಂ ಪೀಡಿಸುವ ತಾಪತ್ರಯದ ರೀತಿಯ
ಕೆಟ್ಟು ಬರುತಿಹ ಶರೀರಸ್ಥಿತಿಯ ಪಾಪಗಳ
ಮುಟ್ಟಿಮಾಡಿದ ಕಾರಣಂ ಬರುವ ನರಕಗಳ
ಪೆಟ್ಟಿನುಪಟಳವನೊಂದುಳಿಯದಂದಲ್ಲಿ ವೈರಾಗ್ಯಮುದಿಸಲ್ಕುಸುರ್ದಂ ೩೯

ಹರಿಯು ದುರ್ಬೋಧೆಯಿಂ ಗೌತಮನೊಡನೆ ನೀವು
ಹರದೈವವಲ್ಲ ಧರೆಮೊದಲಾದವೆಂದೆನುತ
ಹರಿ ಬೌದ್ಧಜೈನಭೈರವಭೀಮಮೈಲಾರಮೊದಲಾದಸುರರ ಪಿಡಿದು
ಭರದಿ ವೈಷ್ಣವ ತರ್ಕದೊಳಗೂಡಿ ಹರಗುಸುರೆ
ಪರಮೇಶನಾದೀಶ್ವರಂ ಮಥನದಿಂ ಸೋತ
ಪರಿಯಂ ಕಂಡಿರೆ ಮರೆಯಬೇಡೆನುತ್ತಂತರ್ಧಿಯಂ ಸುಖಾವಹನೆಯ್ದಿದಂ ೪೦

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದ ಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರ ಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತರೂಪರಹಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ಪದಿನಾಲ್ಕನೆಯಸಂಧಿ ಸಂಪೂರ್ಣವಾಯ್ತು ೪೧

## ಹದಿನೈದನೆಯ ಸಂಧಿ

ಸೂಚನೆ :

ಮಾರಾರಿ ದಾರುವನಕಾಗಿ ಭಿಕ್ಷಕೆ ಬರಲು
ಕ್ರೂರಮುನಿಗಳಲ್ಲಲ್ಲಟ್ಟಿದಹಿಮುಂತಾದ
ವಾರೈದುಂ ಧರಿಸಿ ನಿಜಮಂ ತೋರಿ ಸಗರಶೂದ್ರನ ಕಥೆಯ ಪೇಳ್ದನಾರ್ಯಂ

ಹರನೆ ಹದಿನಾಲ್ಕಾದ ಭುವನ ರಾಜ್ಯಗಳಿರಲ್
ಹರಿವಿರಿಂಚಿಗಳೆಂಬ ಸೇನಾನಿಮಂತ್ರಿಗಳ್
ಸುರ[ರ]ಮಿತಬಲ ಚಿನ್ನಬೆಳ್ಳಿಮನೆಗಳ್ ವೀರಗಣಪ ಷಣ್ಮುಖಕುವರರಂ
ಮೆರೆವುತಿರೆಯೋಡಪಿಡಿದೇಕೆ ತಿರಿವುದ ನೋಡಿ
ಹಿರಿಯರೇನಾದೊಡಂ ನಗರೆ ಹಣೆಯಲ್ಲಿ ವಿಧಿ
ಬರೆದ ಬರಹವಿದೆಂಬ ಗಿರಿಜಯಂ ನೋಡಿ ನಸುನಗುವ ಗುರುಚನ್ನಮಲ್ಲ ೧

ಊರಿಂಗೆ ಪೋಗುತಿರೆ ದಾರಿಯೊಳ್ ಘಟಸರ್ಪ
ಘೋರನದೆ ಸತ್ತುಬಿದ್ದಿರಲು ಕಾಣುತ ಜೈನ
ಕ್ರೂರಕರ್ಮಿಗಳು ಶಿವನಾಭರಣ ಸತ್ತು ನಾವ್ಪುದ ಕಂಡೆವೆಂದು ನಗಲು
ಮಾರಾರಿಭೂಷಣಕೆ ಸಾವಿಲ್ಲ ನಿದ್ರೆಯೆನೆ
ತೋರು ದೃಷ್ಟವನೆನಲುರಗನನೇಳಿಸಿ ಶ್ರವಣ
ಚಾರ್ವಾಕರಂ ಗೆಲಿದು ಮಹಿಮೆಯಂ ಮೆರೆದಂ ಧರ್ಮಯ್ಯನಡಿಗಾಳಪ್ಪೆನು ೨

ದೇವ ಚಿತ್ತೈಸು ಇಪ್ಪತ್ತುಮೂರನೆಯಾ ಸು
ಖಾವಹನಲೀಲೆಯಂ ಕೇಳಿ ಸಂತೋಷಿಸಿದೆ
ಭಾವಜಾಂತಕನ ಇಪ್ಪತ್ತುನಾಲ್ಕನೆಯದಾದಾ ದಕ್ಷಿಣಾಮೂರ್ತಿಯಂ
ನೀವೆ ಕರುಣಿಪುದೆನಲ್ಸ್ಕಂದನ ಪುರಾಣದೊಳ್
ಪಾವನಾಕೃತಿಯಾದ ಕಾಳಿಕಾಕಾಂಡದೊಳ್
ದೇವನ ಕುಮಾರ ಕುಂಭಜಗೊರೆದ ಪರಿಯದಂ ನಿನಗುಸುರ್ವೆವೈ ಮುದದೊಳು ೩

ಗಜಹಯಾದ್ಯಖಿಳ ವಾಹನವಿರಲ್ ಮುದಿಯೆತ್ತ
ನಿಜವಾಗಡರ್ದು ಚಂದನಗಂಧಮಂ ಬಿಟ್ಟು
ಭಜಿಸಿ ಸರ್ವಾಂಗದೊಳ್ ಸಿತಭಸ್ಮರೇಣುವಂ ಕನಕರತ್ನಾಭರಣವುಂ
ತ್ಯಜಿಸಿಯೆಲುವಾಲೆಯಂ ತೊಟ್ಟು ವಸನವ ಬಿಟ್ಟು
ಗಜ ಸಿಂಹ ಶಾರ್ದೂಲ ಚರ್ಮಂಗಳಂ ಪೊದ್ದು
ರುಜುವಾದ ಮೇರುಮಂದರವಿರಲ್ ಸುಡುಗಾಡ ಮನೆಯುದೇಂ ದೇವ ದೇವ ೪

ಕಿರಿಯ ಕೋರೆಯನಾಮೆಬೆನ್ನೆಲುವ ಭಯಗೊಳಿಪ
ಉರುಗಮುಖ್ಯಾಭರಣವೇಂ ರತ್ನಮೌಕ್ತಿಕಾ
ದ್ಯುರುತರ ಸುವರ್ಣಪಾದುಕೆಯಿರಲಪಸ್ಮಾರಗಳನೇಕೆ ಮೆಟ್ಟಿದಭವ
ಸುರಯಕ್ಷಗಂಧರ್ವ ಸಿದ್ಧಚಾರಣರಿರಲು
ಮರುಳುತಂಡಗಳೊಡತನವಿದೇಕೆನುತ್ತಿಹರು
ವರ ಗುರುವೆ ನಿರವಿಸೆನೆ ನಸುನಗುತ ಪೇಳ್ದನಾಚಾರ್ಯರಿಂಗಾಚಾರ್ಯನು ೫

ಸರ್ವಸನ್ನಾಹವಮಂ ಮಾಡುತ್ತ ಶಿವ ತನ್ನ
ಪೂರ್ವಸದ್ಧರ್ಮ ಕೆಡಬಾರದೆನುತಂ ನೆನೆಯ
ಲೊರ್ವಸದ್ಗುಣ ವೃಷಭವೆ ಪ್ರಣವವೇದಪೌರಾಣಾಗಮಾಂಗನಾಗಿ
ಪರ್ವಿ ನಿಲಲಾ ವೃಷವನೇ[1]ರ್ದೀಶ ಜಗವನಂ
ತುರ್ವಿ[1] ದಹಿಸಲ್ಕೆಲ್ಲ ಸುಡುಗಾಡೆನಿಸಿತಾಗ
ಯೋರ್ವನೇಯಿರುತಲಾ ಭಸ್ಮವಂ ಧರಿಸಿ ಹರಿಯಜಮುಖ್ಯರೆಲುವಾಲೆಯಂ ೬

ತಳೆದನನಿಬರುಮನಿತ್ಯರಂ ನಾನೆ ನಿತ್ಯನೆಂ
ದಳಿಕಾಕ್ಷನಾ ಬಳಿಕ ಸುರರಸುರರಬ್ಧಿಯಂ
ಘಳಿಲನೇ ಕಡೆವಲ್ಲಿ ಧರೆಯಿಳಿವುದೆಂದಾಮೆಯಾಗಿ ಬೆಂಗೊಟ್ಟ ಹರಿಯ
ಖಳವರ್ಯನಾಗಂಬುನಿಧಿಗಳ ಕಲಂಕಿ ತಾಂ
ಬಳಲಿಸುತ್ತಿರೆ ಜಗವ ಕಚ್ಛಪನ ಕೊಲಲುಂ ಹರಿ
ಸಲೆ ನುತಿಸೆಯುದರ ಬೆನ್ನೊಡದ ಪದಕವ ಮಾಡೆ ತಳೆದನಾ ದಿನ ಶಂಕರಂ ೭

ಹರಿ ಹಂದಿಯಾಗಸುರನಂ ಕೊಂದು ಲೋಕವಂ
ನೆರೆಕೊಲುತ್ತಿರೆ ಷಣ್ಮುಖಂ ಕಿಟಿಯಂ ಕೊಂದದರ
ಮೆರೆವ ಕೋರೆಯಂ ತಂದು ತಂದೆಗೊಪ್ಪಿಸೆ ಕೊರಲಪದಕದೊತ್ತಿನೊಳು ತಳೆದ

1 ಚಾರಣ ಗಂಧರ್ವಸಿದ್ಧ (ಕ)

ನರಸಿಂಹನಾಗಿ ರಕ್ಕಸನ ರಕುತವ ಕುಡಿದು
ಕುರಿಯಂತೆ ಕೊಬ್ಬಿರಲ್ ಸಂಹರಿಸಿ ವೀರೇಶ
[1][ನೆ][1]ರಗಿತ್ತೊಡಾ ಚರ್ಮವಮಂ ಕಂಡು ಕಂಚುಕವ ಮಾಡಿ ತೊಟ್ಟಂ ಮಹೇಶಂ ೮

ಕರಿದೈತ್ಯನಂ ಕೊಂದು ಚರ್ಮವಮಂ ಪೊದೆದನೀ
ಪರಿಯನರಿ ವಮಂದೆ ತಾಂ ದಕ್ಷಿಣಾವಮೂರ್ತಿಯಾ
ದಿರವನೊರೆವೆನು ಕುಳಿರ್ವಟ್ಟಿನುರೆ ಬೆನ್ನೊತ್ತಿನೊಳ್ ದಾರುವನ ಮೆರೆಯಲು
ಪರಿವಿಡಿಯೊಳೊಂಬತ್ತುಯೆಂಟುಸಾವಿರಋಷಿಗ
ಳಿರದೆಯಾ ವನದ ಶೃಂಗಾರವಮಂ ಕಂಡಲ್ಲಿ
ನೆರೆದು ಗೃಹಸಂತವಮುಖ್ಯರತಿಹರುಷದಿಂ ರಾಜಋಷಿಬ್ರಹ್ಮಋಷಿಗಳಿಹರು ೯

ಕೆಲರೇಕಪಾದದಿಂ ಕೆಲರು ಸೂಜಿಯ ಮೇಲೆ
ತಲೆಯೂರಿ ಕೆಲರು ಪಂಚಾಗ್ನಿಮಧ್ಯದಿ ನಿಂದು
ಕೆಲರು ಜಲದೊಳ್ ಕಂಠದಘ್ನದೊಳ್ ಪೊಕ್ಕೂರ್ಧ್ವಮುಖರಾಗಿ ನೋಡುತೊಂದು
ಸಲೆ ಕಾಲನಂಬರಕ್ಕೆತ್ತಿ ಕೆಲರುಂಗುಂಟವ
ಕೆಲರೂರಿಯೂರ್ಧ್ವಬಾಹುಗಳಾಗಿ ಮತ್ತಲ್ಲಿ
ಕೆಲರು ರವಿ ಶಶಿಕಿರಣಸಂದೋಹಗಳ ಸೇವಿಸುತ್ತೊಲಿದು ತಪದೊಳಿಹರು ೧೦

ಹರನೇಕದೈವವೆಂಬರು ಕೆಲರು ರವಿಶಶಿಗ
ಳಿರದೆ ಪರದೇವತೆಗಳೆನುತೆಣಿಸುವರು ಕೆಲ[2][ಕೆ
ಲರಾ][2]ಜಿನ ಬುದ್ಧ ಕೇಸರಿ ಪುತ್ರ ಶಕ್ತಿ ಭೈರವರೆ ದೈವಂಗಳೆಂದು
ಧರೆಜಲಾಗ್ನಿಯನೆಜಿಪರಲ್ಲಿ ಹರಿಮಂತ್ರವಮಂ
ವರಪುರುಷಸೂಕ್ತಶ್ರೀಸೂಕ್ತಂಗಳಂ ಗಣಪ
ಪರಮಂತ್ರಗಳ ಕೆಲರು ಪಠಿಸುತ್ತ ಶಾಸ್ತ್ರಗಳನೋದಿ ಬಹುಮುಖರಾಗಿರೆ ೧೧

ಇಂತಖಿಳಮತವಾಗಿ ಭ್ರಾಂತಿಯಿಂದಿರಲಿವರೊ
ಳಂತರವ ನೋಳ್ಪೆನೆನುತಾ ಶಿವ ಜಟಾಮಕುಟ
ಮಂ ತಳೆದು ಕೋಟಿಮನ್ಮಥರೂಪವಮಂ ಪಳಿವ ಸೌಂದರ್ಯವಂ ಧರಿಸುತ
ಭ್ರಾಂತಿಗೊಳಿಸುವ ದಿಗಂಬರವಚನಪ್ರೌಢಿಯಿಂ
ದಂತು ಭಿಕ್ಷುಕವೇಷವಾಂತುಂ ವಿಂಸುನಿಯ ಕೋಲ
ನಂತರತ್ನದ ಖರ್ಪರಂಗೊಂಡು ದಾರುಂವನದಾಶ್ರಮಕೆ ನಡೆತಂದನಂ ೧೨

---

1 ಪರವೆ (ಕಗ) 2 ರು ಕೆಲರು (ಕಗ)

ಬಂದು ಭಿಕ್ಷಾಂದೇಹಿಯೆಂಬ ನುಡಿಯಂ ಕೇಳಿ
ಸಂದಣಿಸಿ ಭಿಕ್ಷೆಯಂ ತಂದಂಗನಾಮಣಿಗ
ಳಿಂದುಧರನಮಳಲಾವಣ್ಯಮುವಯುವದ ಸೊಗಸಂ ಕಂಡಂ ಮುನಿಸತಿಯರು
ಕುಂದರದನದ ಬಾಯ ತೆರೆದು ಕಣ್ಣೆವೆವೊಯ್ಯ
ಲಂದವಂ ನಿಟ್ಟಿಸಂತ ನಿಲಲು ಮುನಿಗಳ್ ಪಾಯುಂ
ವಂದವಂ ಲೆಕ್ಕಿಸದೆ ತನುವುಬ್ಬಿ ನಿರಿಸಡಿಲ್ದು ಮೇಲುದಂ ಜಾರೆಯಂರರೆ ೧೩

ದಿಟ್ಟಿಮೂರರ ದೇವ ಮೆಲ್ಲನಡಿಯಿಡೆ ಮುಂದೆ
ಕಟ್ಟಾಣಿವೆಣ್ಗಳತಿಮೋಹದಿಂ ನಡೆತರಲ್
ಕಟ್ಟುಡುಗೆ ನಾಭಿಯಿಂ ಕೆಳಗಿಳಿಯೆ ಕಾಂಚಿದಾಮಂ ಮುರಿದು ನೆಲಕೆ ಜೀಳೆ
ಬಟ್ಟವೊಲೆದೋರೆ ಕಂಚುಕಿಜಾರೆಯದನರಿಯ
ದಿಟ್ಟಣಿಸಿ ಪಿಡಿದು ಕಲೆದೋರುವಧರವ ಪೀರು
ನೆಟ್ಟನೆನಂತಂಬುಜಾಸ್ಯೆಯರು ಮೈಮುಂದಿಪ್ಪ ಭಂಗಂಗಳಂ ನೋಡುತ ೧೪

ಆವ ದೇಶದ ಸಿದ್ಧ ಭಿಕ್ಷುಕನಬದ್ಧನಿವ
ಮಾವರನೊ ಮದನನೊ ಜಯಂತ ನಳಕೂಬರನೊ
ಭಾವಕಿಯರಿವನ ಬೆಂಬತ್ತಿ ಬಿಡರೇಗೆಯ್ವೆವೆಂದು ಘುಡುಘುಡಿಸುತವರಂ
ನಾವಿವಗೆ ತಕ್ಕುದಂ ಮಾಳ್ಪೆವೆನುತಂ ಶಪಿಸಿ
ಯಾ ವಿವಿಧ ಮಂತ್ರಾಸ್ತ್ರಜಲವನಿಡೆ ಶಿವನೆನಲು
ಸೇವಿಸದೆ ಶಾಪಮಂತ್ರಾಸ್ತ್ರಗಳ್ ಮರಳವರನೇ ತಾಗೆ ಶಿವ ನಗುತ್ತ ೧೫

ವೀಣೆಯಂ ಬಾಜಿಸುತ ಗಾನರಸರಂಜನದೆ
ಏಣಲೋಚನೆಯರಂ ತಾಂ ಮರುಳ್ಗೊಳಿಸಿ ಸುಮ
ಬಾಣನುಪಹತಿಗೀಡುಮಾಡಿ ನಸುನಗುತ ಮೆಲ್ಲನೆ ನಡೆವುತಲ್ಲಲ್ಲಿಗೆ
ಮಾಣದಬಲೆಯರ ನೋಡುತ್ತ ಸರಸವ ಬೀರು
ತಾಣತಿಯಿನವರ ಸ್ತುತಿಸಂತ್ತಿರಲ್ ಮುನಿನಿಕರ
ಕೇಣದಿಂ ಕಲ್ಗುಂಡು ಕೋಲ್ಗಳಿಂದಿಟ್ಟು ಬಡಿದರೆ ಲೆಕ್ಕಗೊಳ್ಳದವರ ೧೬

ಎಲೆಲೆ ಮುನಿಗಳಿರ ನಿಮ್ಮಯ ಸತಿಯರೆಲ್ಲ ಈ
ಚಲುವಚನ್ನಿಗ ನಮ್ಮ ಪುರುಷ ಇವನೊಡನೆಮಗೆ
ಸಲೆಬಾಳೆನುತ್ತ ಲಗ್ನದ ಪುರುಷನಂತೆ ನಾಣಳಿದು ಚರಿಸಲ್ಕೀತನಂ

ನೆಲೆಯಾದ ಶಾಪಮಂತ್ರಾಸ್ತ್ರಮುಂಟದು ಇವನ
ಕೊಲಲೆಂತುಸಾಧ್ಯ ಕಟಕಟಮೆನಂತ್ತಿರೆ ವಿಷ್ಣು
ಮಲಹರ ನಿರೂಪದಿಂ ಕೋಟಿರತಿರೂಪ ಕೀಳ್ಪಡಿಪ ಚೆಲ್ವಿಕೆಯನಾಂತು ೧೭

ವರಹಾವಭಾವವಿಭ್ರಮವಿಲಾಸಂಗೂಡಿ
ಪರಿವಿಡಿಯ ರತ್ನವಮೌಕ್ತಿಕ ಕನಕದಾಭರಣ
ಮರರೆ ಸಿಂಗರಿಸಧಿಕ ಗಂಧ ಸಂಮಮಾಲ್ಯಗಳ ಧರಿಸಿಯಂಬರವನುಳಿದು
ಗುರುಕುಚಂ ನಿಬಿಡ ಪೊರವಾರು ಲಜ್ಜೆಯ ನೆಲೆಯ
ನೆರೆ ತೋರುತಾ ಮುನಿಗಳಿದಿರಾಗೆ ಕಂಡಮಿತ
ಹರಂಪದಿಂ ಕೋಪವಡಗುತ ತಾಪ ಮೈದೋರೆ ಭ್ರಮೆಗೊಂಡರೇನೆಂಬೆನು ೧೮

ಚಾಟುಮಾತುಗಳ ನುಡಿವುತ್ತ ಕಣ್ಸನ್ನೆಯಿಂ
ಮಾಟಂತ್ತ ಮುಗುಳ್ನಗೆಗೆ ಮುನಿಗಳೆಲ್ಲರುಂ ಸೋತು
ಕೂಟಕಿಚ್ಛೈಸಿ ಮೇಟಿಯ ಪಶುಗಳಂತವಳ ಸುತ್ತುತ್ತ ಜಪತಪಗಳ
ಆಟಗಳನುಳಿದು ಭ್ರಷ್ಟಾಗಿ ಲಜ್ಜೆಯಂ ನೀಗಿ
ಕೋಟಿಮುನಿಗಳು ಕಾಲ್ವಿಡಿವುತಿರೆಯವಳ್ ಸಿಲ್ಕ
ದಾಟೋಪದಿಂದೆಯ್ದಿತಿರೆ ಫಣಮರದ ಬೀಟೆಯಂತೆ ಬಾಯ್ಬಿಡುತಿರ್ದರು ೧೯

ಇಂತು ಮೋಹಿನಿಗೆ ಮೋಹಿಸಿ ಮುನಿಗಳೆಲ್ಲರ
ತ್ಯಂತ ಭಂಗಿತರಾಗಿ ಯೋಚಿಸಿದರೀ ಕುಟಿಲ
ಕಾಂತೆಯಿಂ ನಾವು ಭ್ರಷ್ಟಾದೆವೆಮ್ಮಯ ಸತಿಯರಾ ಭಿಕ್ಷುಕನ ಸಂದತಿಯ
ಚಿಂತೆಗೆಳಸಂತ ಪತಿವ್ರತಮುಳಿದು ಬಿಡುಸೂಳೆ
ಯಂತಾದರಾಹ ಭಂಡಾದೆವೇ ಜಗದೊಳಿವ
ರೆಂತಾದೊಡಂ ಕೊಲಲ್ಬೇಹುದೆಂದಾಗ ಮಾರಣಹೋಮವಂ ಮಾಡಲು ೨೦

ಮಾರಣದ ವ್ಯಭಿಚಾರ ಮಂತ್ರದಿಂ ದ್ರವ್ಯಗಳ
ಸೇರುವೆಯೊಳಗ್ನಿಕುಂಡಕ್ಕೆ ಬೇಳುತ್ತಿರ
ಲ್ಕಾ ರೌದ್ರಹೋಮದಿಂ ಘುಡುಘುಡಿಸಿ ಭೀಕರೋರಗ ಶಶಕರೂಪನಾಂತು
ಕ್ರೂರದೃಷ್ಟಿಯೊಳವರ ಕ್ಲೇಶರೂಪಾಯಿತನೆ
ಲಾರುಭಟೆಯಿಂದ ಮುನಿಗಳ ಮುಂದೆ ನಿಂದಂಬು
ಪೂರಗಳ [ನಾ]ನೊಂದೆ ಗುಟುಕಿನೊಳ್ ಪೀರಬೇಕಾವುದೆಂದುಸುರ್ದುದು ೨೧

ಎನ್ನಿದಿರೊಳಾವ ನಿದಿರಿಸಲಾರ್ಪ ಸರ್ವರಂ
ಛಿನ್ನಭಿನ್ನಂ ಮಾಳ್ಪೆ ಬೆಸಸೆನಲ್ಕವರಾಗ
ಮನ್ನಿಸಲ್ಬೇಕಬಲೆಯುಂ ಹತಿಸೆ ದೋಷ ನಮ್ಮಯ ಸತಿಯರಂ ಕೆಡಿಸಿದ
ಗನ್ನ ಭಿಕ್ಷುಕನ ಸಂಹರಿಸು ಭಿಕ್ಷುಕನನುಳಿ
ದಿನ್ನೇನು ಪೋಗೆಂದು ಕಳುಹಿದರು ಪಾಪಾತ್ಮ
ರನ್ಯಾಯಕಾರಿಗಳು ನೀತಿಮಾರ್ಗವನುಳಿದು ನರಕಪಥಕ್ಕೈದುವವರಂ ೨೨

ಬರುತಲದು ಘೂರ್ಣಿಸುತ ದಶದಿಕ್ಕ ತುಡಂಕುತ್ತೆ
ಲರರೆ ಲೋಕಗಳ್ಬೆದೆ ಬೆದರಿಸುತ ನರಸುರರ
ಮುರಿಮು ಮೋದುತ್ತ ಬರೆ ಹರನದಂ ಲೆಕ್ಕಿಸದಿರಲ್ಗರುಡಮಂತ್ರಭಯಕೆ
ಉರಗ ಪೆಡೆಯುಂ ಮುದುಟಿ ಕಣ್ಮುಚ್ಚಿದಂತೆ ಸಂ
ದಿರಲು ಪರಶಿವ ಚಿದಂಬರದ ಮಧ್ಯದಿ ನಿಲು
ತ್ತೊರಲ್ವಪಸ್ಮಾರವಂ ವಾಮಪಾದದೊಳೊದೆದು ಮೆಟ್ಟಿ ನಾಟ್ಯವನಾಡಲು ೨೩

ಮುನಿಗಳದ ಕಂಡಪಜ್ಞಾನದಿಂ ಪಲ್ಗಡಿವು
ತನಘ ಪರಶಿವನ ಮಹಿಮೋನ್ನತಿಯನರಿಯದಿರೆ
ಮುನಿಗಳಜ್ಞಾನಮಾಯ ಮನದ ಸಂಚಲಮೆ ರೂಪಾದವೊಲ್ ಕುಂಡದೊಳಗೆ
ಘನ ಹರಿಣನಾರ್ಭಡಿಸುತುದಿಸಿ ಮುನಿಗಳ ಕೂಡೆ
ಯನಗಪ್ಪಣೆಯದೇನೆನಲ್ಕೆ ಮೌನಿಗಳೆಲ್ಲ
ಮಂನಿದ ಕರಪುಟದಿಂದಲೂದೆ ಬಿಳೆ ಡೊಕ್ಕೆಯಂ ಸೀಳಂ ಶೃಂಗದೊಳಾತನ ೨೪

ಎಂಬ ಮಾತನು ಕೇಳುತಂಬರಕೆ ಲಂಘಿಸುತ
ಲಂಬುಜಭವಾಂಡಮಂ ಬೆದರಿಸುತ ಬರೆ ಕರದೊ
ಳಂಬಕತ್ರಯನಾಂತೊಡದನರಿಯದಜ್ಞಾನದಿಂ ಗಳಹುತಿರೆ ಮುನಿಗಳು
ಮುಂಬಿನೊಳ್ ತಮ್ಮ ಕೋಪಮನೇ ಬಹಿಷ್ಕರಿಸಿ
ದಿಂಬಾದ ರೂಪಮೆನೆ ವ್ಯಾಘ್ರಾಸುರಂ ಜನಿಸೆ
ಕುಂಭಿನಿಯೊಳಾರು ನಿನಗಿದಿರಿಲ್ಲಲಾ ಭಿಕ್ಷುಕನ ರಕ್ತಮಂ ಪೀರಿಕೊ ೨೫

ಭೀರುರೂಪಾಂತು ವ್ಯಾಘ್ರಾಸುರಂ ನಿಲಲವಗೆ
ಮೇರುಗಿರಿಯೇ ಪೊಕ್ಕುಳಿನ ಘಂಟೆಯಂತೆಸೆಯಿ
ತಾರಯ್ಯಲವನುದ್ದಮಂ ನುಡಿಯಬಾರದುರೆ ಘುಡುಘುಡಿಸಿ ಬಾಯ್ತೆರೆವುತ

ಕ್ರೂರವ್ಯಾಘ್ರಾಸುರಂ ಬರಲವನ ಮೆಟ್ಟಿ ಸೀ
ಳ್ದಾ ರಮ್ಯ ಕಟಿಯೊಳರ್ಥೋರುಕದೊಲಾ ತೊಗಲ
ಸೌರಂಭದಿಂದುಟ್ಟು ಮೆರೆದನಾ ಮಾರಾರಿಯರ್ಧೇಂದುಕೃತವತಂಸಂ ೩೬

ಮತ್ತೆ ಕುಂಡದೊಳುದಿಸಿದೌ ಟಂಕ ಶೂಲ ಗದೆ
ಕತ್ತಿ ಪಾಶಾಂಕುಶಂ ವಜ್ರ[1][ಪರಶು][1]ಗಳು ಮೇ
ಣತ್ಯಧಿಕ ಭೂತ ವೇತಾಳ ಪೈಶಾಚಗಳ ಮೊತ್ತಮೊತ್ತಂ ಜನಿಸಂತ
ಸತ್ಯಮಾಗುಸುರೆಮಗೆ ಕಜ್ಜನಂ ಮುನಿಗಳೆನೆ
ಚಿತ್ತಜವಿಕಾರದಿಂ ನಮ್ಮ ಸತಿಯರನೈದೆ
ಕುತ್ತಂಗೊಳಿಸಿದ ಭಿಕ್ಷುಕನ ಸಂಹರವ ಮಾಳ್ಪುದತಿ ವೇಗದಿಂದ ಪೋಗಿ ೨೭

ಎನಲು ಘಲ್ಲಿಸುತ ಬಂದಾ ಭೂತಜಾಲಂಗ
ಳ[2]ನ[2]ವನೀಶ್ವರ ಕೃಪಾದೃಷ್ಟಿಯಿಂ ನೋಡಲವು
ಸನಯದಿಂದಭವಂಗೆ ಚರರಾಗೆ ಕೈಯಡಕವಾದಂದಾ ಶಸ್ತ್ರಜಾಲಂ
ಮುನಿಗಳಾ ಹೋಮದೊಳ್ ಮತ್ತೆ ದ್ರವ್ಯಂ ಬೇಳ
ಲನಘನೇ ಹೆಡೆಗಳೈದುಳ್ಳ ಸರ್ಪಾಳಿಗಳ್
ಘನವಾಗಿ ದಶದಿಕ್ಕಿನೊಳ್ ತುಂಬಿ ಭುಸ್ಸುಭುಸ್ಸೆಂದು ಭೋರ್ಗರೆದು ಬರಲು ೨೮

ತುಡಂಕಿ ಕರ ಕರ್ಣೋರು ಮುಖ್ಯ ತಾಣಂಗಳೊಳ್
ಬೆಡಗಿನಾಭರಣಮಾಗಿಡಲು ಶಿವ ಮುನಿಗಳಂ
ತೊಡನೆ ಕಂಡಜ್ಞಾನಮಂಳಿಯಂದೇ ಪಲ್ಗಡಿದು ಡಮರುಂ ಘಂಟೆಯ ಪುಟ್ಟಿಸಿ
ಒಡನೆ ಕಳುಹಲ್ಕಖಿಳ ಲೋಕಗಳ ನುರ್ಗುತೆಡೆ
ವಿಡದೆ ಘಂಟೆಯುಂ ಘಣಂ ಘಣಮೆಂದು ಸರ್ವರಂ
ಬಿಡದೆ ತಲೆಗಳನು ಪೋಳ್ಮಾಡುತಿರಲೀಶನದ ಕರದೊಳು (?) ೨೯

ಋಷಿಗಳಭಿಚಾರಮಂತ್ರ[ಂ]ಗಳಭವನ ಹಸ್ತ
ವಿಸರುಹದ ಡಮರುವಂ ಸೇರಿಸುಖಮಿರಲವರು
ಪಸಿದ ಪುಲಿಯಂತೆ ಗಳಹಂತ ಕೊಂಡದೊಳಗಿರ್ದ ವಹ್ನಿಯಾಹ್ವಾನಿಸಧಿಕ
ವಿಷಮಭಿಕ್ಷುಕನ ಸಂಟ್ಟುರುಪು ಪೋ ನೀನೆಂದು
ಮಸೆದು ಪಲ್ಲಂ ಕಳುಹಲದು ದೈನ್ಯಬಡೆವಹ್ನಿ
ಯಸಮಾಕ್ಷ ವಾಮಕರದೊಳಗಾಂತು ಬಿನದಿಸುತ್ತಿರ್ದಸ ಸತ್ಯದಮುದ್ರಂ ೩೦

---

1 ದ ಪಶು (ಕ) ಪದಶು (ಗ) 2 ನು (ಗ)

ಆನಲನಂ ಕರೆದವುಲರತ್ನಕಂತುಕದಂತೆ
ವಿನಯದಿಂ ಪಿಡಿದಪಸ್ಮಾರಪೃಷ್ಠವ ಬಲದ
ಘನಪಾದದಿಂ ಮೆಟ್ಟಿ ನಟಿಸುತಿರೆ ಖಿನ್ನಮಾನಸರಾಗಿ ನೋಡುತಿರಲು
ಸನಯದಿಂ ಸುಮನಸರ್ ಪೂಮಳೆಯ ಶಿರದ ಮೇ
ಲನುವಿನಿಂ ಕರೆದಂ ಜಯಜಯಮೆನಲ್ ಪರಶಿವಂ
ಮನವೊಲ್ದು ಸಂಪ್ರಸನ್ನನುಮಾಗಿ ನೋಡುತಿರ್ದಂ ದಯಾಮೃತದೃಷ್ಟಿಯಿಂ ೩೧

ಏನುಕಾರಣ ಶಿವನಪಸ್ಮಾರ ಮಂಂತಾದ
ಪ್ರಾಣಿವರ್ಗದಿ ಕ್ರೂರರಂ ಕೊಲ್ಲದೇ ತಳೆದ
ತಾನದೆಂತೆನಲವೇ ತಪವನೆಸಗುತ ನಮ್ಮ ಧರಿಸಬೇಕೆನಲು ಮುಂದೆ
ಹೀನಯಜ್ಞದೊಳುದಿಸೆ ಧರಿಪೆನೆಂಬಾ ಕತದೆ
ತಾನಾಂತನೆನೆ ಗುರುವೆ ಶಿವನ ಪುಲ್ಲಿಂಗವಂ
ಜ್ಞಾನಿಗಳ್ ಮಾರಣದೆ ಕತ್ತರಿಸಿ ಬಿಳ್ದುರುಳಿತೆಂದೂಳುತಿಹರದೇಕೆ ೩೨

ನನ್ನಿಯೇ ಗುರುನಾಥ ನಿರವಿಸೆನೆ ಬಿಡದೆ ಕೇ
ಳುನ್ನತ ಸ್ಕಂದಪೌರಾಣಿಕಕಥೆಯನೀಗ
ಮುನ್ನೊರ್ವ ಸಗರ ಶೂದ್ರಾರಂಭದಿಂದೆಯ್ದಿ ಯೋಚಿಸುತ ಪರರೊಡವೆಯಂ
ತನ್ನ ನಿಯಮಂಕೆ ಸಲ್ಲದೆನ್ನೊಡನೆಯನ್ಯರ್ಗೆ
ಇನ್ನೀಯೆನೆಂತೆಂದು ಎಂಭತ್ತುವತ್ಸರಂ
ಮನ್ನಣೆಯೊಳಿರುತೊಂದುದಿನ ಮಳೆಯ ಭಯಕಂಜಿ ದೇಗುಲಂ ಪೊಕ್ಕೊಡಲ್ಲಿ ೩೩

ನುತಬುಧ ಪುರಾಣನೀತಿಗಳ ಧರ್ಮವ ಶಿಷ್ಯ
ಪ್ರತತಿಗುಸುರುತ್ತಿರ್ದ ಪೇಷಣೀ ಖಂಡನೀ
ವಿತತ ಚುಲ್ಯುದಕುಂಭಿಕೆಯು ನೋಡೆ ಸಮ್ಮಾರ್ಜನಿಯು ಪಂಚಸೂನುಗಳಿವು
ಸತತ ಧರ್ಮಂಮಾಡದಿಹ ಗೃಹಸ್ಥಂಗೆಯು
ನ್ನತಪಂಚಪಾತಕಗಳಿವರಿಂದ ಘಟಿಸುವುದು
ಪ್ರತಿದಿನದೊಳವರಿಂದ ದೇವತಾರ್ಥಂಮಾಡಲಾ ದೋಷಮಿಲ್ಲವೆಂದು ೩೪

ಪೇಳುತಿರ್ದರು ಸಾಕ್ಷಿಹೀನನಾಗುಂಡ ನರ
ನಾಳುವಂ ನರಕದೊಳಗೆಂಬ ನುಡಿಯಂ ಕೇಳಿ
ಯಾಳೋಚಿಸುತ್ತ ಪರರೊಡವೆಯಂ ಮುಟ್ಟದೇ ತನ್ನಯನ್ನವನೆಯುಂಡು

ಬಾಳುತಿಹಗೆಲ್ಲಿಯದು ನರಕವೆಂಂದಾ ಸಗರ
ನಾಳಿಗೊಳುತಂ ಮ[1][ನೆ][1]ಗೆ ಬಂದಿರ್ದು ಸಾಯೆ ಯಮ
ನಾಳುಗಳು ಪಿಡಿತಂದು ಕಾಲನಿದಿರೊಳ್ ನಿಲಿಸೆ ಚಿತ್ರಗುಪ್ತರ್ ಕಾಣುತ ೩೫

ಎಲಲೆ ದೂತರಿರ ಇವನಿಗೆ ಹತ್ತು ದಿನದಾಯು
ಒಲಿದಿಹುದು ಬಿಡಿ ಸಗರನೆಂಬ ಕುಂಬಾರನಂ
ನೆಲೆಯಾಗಿ ತನ್ನಿ ನಗರದೊಳಿರ್ಪ ನಾಮಮಾತ್ರಕ್ಕಿವನ ತರಲಪ್ಪುದೆ
ಸಲೆ ನಗುತ ಯಮನಿವನ ಪುಣ್ಯಪಾಪಂಗಳಾ
ಫಲವನುಸುರೆನಲು ಕರಣಿಕರೆಂದರೆಲೆ ಜೀಯಂ
ಬಲುಪಾಪಿಯೆಂಬತ್ತು ವರ್ಷ ಪರಿಯಂತವಿವ ಬದುಕಿ ಧರ್ಮವ ಮನದೊಳು ೩೬

ನೆನದರಿಯನದರಿನಿಂದಿವನುಂಬುವನ್ನದಗು
ಳೆನಿತುಂಟುಮನಿತು ನರಕವನುಣಲ್ ಬೇಕಿವ
ನೆನುತಟ್ಟಲಾಗ ಸತ್ತಾತ ಬದುಕುತಲರಿದು ಶಿವಶರಣರತಿಕರುಣವಂ
ಘನವಾಗಿ ಪಡೆಯಬೇಕೆಂದರಸಿ ಬರುತಿರ
ಲ್ಕನಘಸುಖಮುನಿ ದೂರದಿಂ ಕಾಣುತೆಲೆ ಸಗರ
ನಿನಗಂತ್ಯಕಾಲವೈ ಹತ್ತು ದಿನದೊಳಗಖಿಳ ಪಾಪಂಗಳೆಂತಳಿವವು ೩೭

ಎಂಬ ನುಡಿಯಂ ಕೇಳಿ ಗುರುಂವೆ ನಿಮ್ಮಯ ದರ್ಶ
ನಂ ಬಹಂಳದೀಕ್ಷೆಯೆಂದಡ್ಡಬೀಳುತ್ತ ಮನೆ
ಗಂ ಬಂದು ಧನವ ಶಿವಧರ್ಮಕ್ಕೆ ಸಲಿಸಿ ಮುನಿವೇಷಮಂ ತೊಡುತಲಾತಂ
ನಂಬುಗೆಯೊಳಾಚಾರ್ಯದರ್ಶನಂ ದೀಕ್ಷೆಯೆಂ
ದುಂ ಬಗೆದು ಗುರುಪದಾಂಬುಜಚಿಂತೆಯಿಂದವಂ
ಕುಂಭಿನಿಯೊಳವ ಮರಣವಂಂ ಕಳಿದು ತಪವನೆಸಗುತ್ತಿರ್ದನಖಿಳವರ್ಷಂ ೩೮

ಅಂತವಂ ತಪಮೆಸಗುತಾಗ ಧರ್ಮವ ತಿಳಿಯ
ದೆಂತು ಶಿವಲಿಂಗದುರೆಧ್ಯಾನಮೆನುತಲ್ಲಲ್ಲಿ
ಭ್ರಾಂತಿನಿಂ ನುಡಿವರಾ ದಾರುವನದೊಳ್ ಶಿವನ ಶೇಫ ಕತ್ತರಿಸಿ ಬೀಳೆ

---

1 ಕೆ (ಕಗ)

ಅಂತದೇ ಲಿಂಗವೆಂದೊಳ್ವರದ ಕೇಳಿ ನಿ
ಶ್ಚಿಂತೆಯಿಂದದನೆ ಧ್ಯಾನಿಸಿ ತಪವನೊಡರ್ಚಲ್
ಕಂತುಂಹರ ಮೆಚ್ಚಿ ಗಣಪದವಿತ್ತೊಡವನೆ ಶಿಶ್ನಾಸ್ಯಗಣವರನಾದನು ೩೯

ಶ್ಲೋಕ ॥

ಯೇನ ಯೇನ ಹಿರೂಪೇಣ ಮನಸಾ ಸಂಸ್ಮರೇತ್ತಥಾ
ತಸ್ಯ ತನ್ಮಯತಾಂ ಯಶಾತಿ ಚಿನ್ತಾಮಣಿರಿವೇಶ್ವರಃ

ಹರನ ಪುಲ್ಲಿಂಗಮುಂ ಜ್ಯೋತಿಸ್ವರೂಪಮೆಂ
ದರಿಯದದನೇ ಜಾನಿಸಲ್ಕವನ ವಕ್ತ್ರದೊಳ
ಗರರೆ ಶಿಶ್ನಂ ನೇಲುತಿಂತಾಯ್ತು ನೀಚರಧಮರ ನುಡಿಯದೇಂ ಕುವರನೆ
ನೆರೆಯ ಲಿಂಗಂ ಏಕಮವ್ಯಕ್ತಮೆಂತೆಂದು
ಪರಮಲಿಂಗಂ ಬ್ರಹ್ಮಮೆಂದು ನಿಶ್ಚಿತಮಂಕ್ಕು
ಮುರುಸ್ವಯಂಜ್ಯೋತಿ ಪರತತ್ವಂ ಪರೆವ್ಯೋಮ್ನ್ಯವಸ್ಥಿತವೆನ್ನುತದಂ ನಿಗಮಂ ೪೦

ಶಿವನ ಲಿಂಗವನೆ ಶಿವಲಿಂಗಮೆಂದೆಂಬರೆಲೆ
ಭವಿಗಳಾದವರಂಗಳು ವೇದಮುಂ ಬಲ್ಲೆಮೆಂ
ದವಿತತದ ನುಡಿಯ ನುಡಿವರು ಸ್ವಪ್ರಕಾಶದೊಳಗಾ ಮಾತಂ ಸಲ್ಲದಣುಗ
ಅವಿರಳ ಪರಬ್ರಹ್ಮ ಸ್ವಪ್ರಕಾಶವೆ ಲಿಂಗ
ತವೆ ಸ್ವಯಂಜ್ಯೋತಿಯೋ ಶಿವ ಏವ ಲಿಂಗಮೆಂ
ದವಿತರಂ ಪೇಳುತಿಹದದರಿನೀ ನಿಂದಕರ ನುಡಿಯ ಲಾಲಿಸೆ ದೋಷವು ೪೧

ಶ್ಲೋಕ ॥

ಶಿವಸ್ಯ ಲಿಂಗಂ ಶಿವಲಿಂಗಮಂಧ್ಯೇ ಮುನೀಶ್ವರಾ ವೇದವಿದೋ ವದಂತಿ
ಸ್ವಯಂಪ್ರಕಾಶಸ್ಯ ನ ಯುಜ್ಯತೇ ಸ್ವಯಂ ಸ್ವಯಂಪ್ರಕಾಶಃ ಶಿವ ಏವ ಲಿಂಗಕಂ

ನೆಟ್ಟನೆ ಕೃಪಾಮೃತದ ದೃಷ್ಟಿಯಿಂ ನೋಳ್ಪಭವ
ಬಟ್ಟಬಯಲಾದನೇನಾದನೆನೆ ನಗುತ ಕೇ
ಳಷ್ಟ ಮೂರುತಿ ಶಿವಂ ಪೊಂದಗಡ ಪಳಿವ ಕಾಂತಿಯ ಜಟಾಮುಕುಟದಿಂದ
ಪಟ್ಟಿರ್ಪ ಚಂದ್ರಕಲೆಯಿಂ ಸ್ಮಿತಾಂಬುಜಮುಖದೆ
ಇಷ್ಟಭಸ್ಮಾಂಗರಾಗದೆ ಸರ್ಪಹಾರಮಂಳ
ವಟ್ಟು ರಂಜಿಸುತಿರಲ್ ಸುಂದರಿಯ ರೂಪು ಲೋಕಕೆ ತೋರಿತನ್ಯೋನ್ಯದಿಂ ೪೨

ಇಂತಖಿಳ ಲೋಕಮಾತೆಯುಂ ಹರನುಯೋರೊರ್ವ
ರಂತು ಸಮಂದರ್ಶನದಿ ಪ್ರೀತಿಯಿಂ ನಾಟ್ಯಕುರೆ
ನಿಂತು ನಟಿಸಲ್ ತಾಳ ಮುರಜ ಗೀತಾನುಕೂಲಸ್ತುತಿಗಳಿಂ ಗಗನದಿ

ಕಂತುಪಿತೃ ಬ್ರಹ್ಮಸುರಪಾದಿ ಸುಮನಸರು ಮಿಗೆ
ಸಂತಸದೆ ಜಯಜೀಯ ರವಿಕೋಟಿಸಂಕಾಶ
ಶಾಂತ ನಿರವದ್ಯ ನಿರ್ಮಳ ನಿರಾವರಣನೆನಲಂತು ಮುನಿಗಳು ಕಾಣುತ ೪೩

ಕೆಟ್ಟೆವಯ್ಯಯ್ಯೊ ಭ್ರಷ್ಟಾದೆನೆಮಗೇನುಗತಿ
ನೆಟ್ಟನೀಶನ ಕಾಣದಳಲಿ ಮಾರಣಮೆಸಗೆ
ಪುಟ್ಟಿದಪಸ್ಮಾರ ಮಂತಾದವಟ್ಟಲು ಲೆಕ್ಕಿಸದೆಯಿರಲ್ಕಂಡು ನಾವು
ಅಷ್ಟಮೂರ್ತಿಯು ಲಸದಜಾಂಡಮಯ ಕುಕ್ಷಿಯಂ
ತಿಟ್ಟನರಿಯದೆ ಮತಿಭ್ರಷ್ಟರಾದೆವು ದೇವ
ಕೆಟ್ಟರಂ ಕೈವಿಡಿದು ರಕ್ಷಿಸೆಂದಡ್ಡಬಿಳ್ದಿದ್ದು ಬದ್ಧಾಂಜಲಿಗಳಿಂ ೪೪

ನಿಂದು ನುತಿಸಿದರೋಂನಮಶ್ಶಿವಾಯ ಸುರೇಂದ್ರ
ವೃಂದ ವಿನುತಾಯ ವಾಚಾಮತೀತಾಯಂ ಗುಣ
ಮಂದಿರಾಯಾನಂದಮೂರ್ತಯೇ ಭೂಯೋ ನಮಸ್ತೇ ನಮಸ್ತೇಜಸೆ
ಇಂದಿರಾಪತಿಮುಖ್ಯ ಪೂಜ್ಯಸಚ್ಚರಣಾರ
ವಿಂದಾಯ ಮೃಗಶೂಲಪಾಣಿಯೇ ನಿತ್ಯಾಯ
ಕಂದರ್ಪ ಘನವಿಪಿನದಾವಾಯ ದೇವಾಯ ಮೂಲಭೂತಾಯ ಎನುತಂ ೪೫

ಶರಣು ಶರಣರಿತರಿಯಂದರಿಮುರುಳ್ಗಳಂ ದೇವ
ಶರಣು ಶರಣ್ಯೆ ಜ್ಞಾನಮಿರ್ದಧಿಕ ಮೂಢರಂ
ಶರಣು ಶರಣ್ಯೆ ಮೂರ್ಖರತಿ ಶಿರೋಮಣಿಗಳಂ ರಕ್ಷಿಸೈ ಸರ್ವೇಶ್ವರ
ಶರಣು ಶರಣದ್ರಿಜಾನಾಥ ವೃಷಭವರೂಥ
ಶರಣು ಶರಣಮಿತಾಕ್ಷ ಸಲಹೈ ವಿರೂಪಾಕ್ಷ
ಶರಣು ಶರಣಂಧಕರಿಗೀಗ ಸುಜ್ಞಾನೋಪದೇಶಮಂ ಪಾಲಿಸೀಶ ೪೬

ಎಂದುಂ ನಾನಾವಿಧದೆ ಸ್ತೋತ್ರಮಂ ಮಾಡೆ ನಲ
ವಿಂದಮಳ ದಕ್ಷಿಣಾಮೂರ್ತಿ ಮಣಿಮಕುಟದಿಂ
ದಂದಲಾ ಯಜ್ಞೋಪವೀತ ನಾನಾರತ್ನಭೂಷಣದಿ ರಾಜಿಸುತ್ತ

ಹೊಂದಿ ಚಿನ್ಮುದ್ರೆಯಿಂ ವಟಮೂಲದೊಳ್ ಕುಳಿ
ತ್ತಂದು ಸನಕಾದಿ ಮುನಿಗಳ್ಗೆ ವೇದಾಂತಾರ್ಥ
ಮಂ ದಯದೊಳಂ ಬೋಧಿಸುತ್ತ ಯಮಿಜನರ ವರಸತಿಯುರಂ ಸಲಹಿದಭವಂ ೪೭

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಂ ಮಹಾಲಿಂಗಪದಪದ್ಮಷಟ್ಪದೋ
ದಿತ ರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನವಹ ಕಾಂಡದೊಳ್ ನೋಡೆ ಪದಿನೈ[1]ದು[1]ಸಂಧಿ ಸಂಪೂರ್ಣವಾಯ್ತು ೪೮

# ಹದಿನಾರನೆಯ ಸಂಧಿ

ಸೂಚನೆ :

ಗರ್ವದಿಂದಜಹರಿಗಳತಿಕಿನಿಸಿನಿಂ ಪೆರ್ಚು
ತೊರ್ವರೊರ್ವರ ತುಮುಲಯುದ್ಧದಿಂ ಜಗಮಳಿಯೆ
ಸರ್ವೇಶನವರ ಮಧ್ಯದೊಳಗುರುಲಿಂಗವಾಗುದ್ಭವಿಸಿ ತಾಂ ಮೆರೆದನು

ಎರಡನುಷ್ಣಸ್ಪರ್ಶವೆರಡುತ್ರೀವ್ರಸ್ಪರ್ಶ
ವೆರಡನುಷ್ಣಾಶೀತಲಸ್ಪರ್ಶಮಸ್ಪರ್ಶ
ವೆರಡಿಂತು ಕೂಡಿಯೆಂಟಾದಂಗದಿಂ ವೆರೆದು ಪನ್ನೊಂದುರೂಪವಾಂತು
ನೆರೆಯಲೆಂತೊಂದರೆಯವ್ಯೈಯೊಳಂಜುವೆನೆನಲ್
ಮರೆಗೈದವಂ ಹಿರಣ್ಯಾಂಗಬಾಹುಗಳಾಂತು
ಗಿರಿಜೆಯೊಡನಪ್ಪಿ ನೀಲದ ಪದಕದಂತೆಸೆವ ಚನ್ನಮಲ್ಲೇಶ ಜಯತು ೧

ರಾಜಶೇಖರಿಯ ಗರ್ಭದೊಳುದಿಸಿದಮಲತರ
ರಾಜೀವವದ[ನೆ] ಸೌಂದರಿದೇವಿಯನ್ನು ಯತಿ
ರಾಜಗುರುಚಕ್ರೇಶನಹ ರೇಣುಕಾಧೀಶಗಿತ್ತು ಭಕ್ತಿಯೊಳು ದಿವಿಯ
ರಾಜನಹ ಶಚಿಯಾಣ್ಮನತಿಕುಟಿಲಮಂ ಜಯಿಸಿ
ರಾಜೇಂದ್ರಚೋಳಾಭಿಧಾನವಾಂತಾ ಬಳಿಕ
ರಾಜತಾಚಲಕೈದಿ ಗಣಪದವಿಯೊಳಗೆಸೆವ ರಾಜೇಂದ್ರಚೋಳ ಸಲಹ ೨

ಪರಶಿವನ ರಾಜಸದ ಗುಣದ ನೆನಹಿಂದಲವ
ತರಿಸಿ ವಿಧಿಯಂಡರಚನೆಯ ನಿಮಿತ್ತಂ ಪಂಚ
ಪರಮುಸನಕಾದಿಗಳ ಪುಟ್ಟಿಸವರಂ ಜಗವ ಪುಟ್ಟಿಸೆನ[ಲ]ವರ ರತಿಯಿಂ
ಸರಿಬಾರದೆಂದು ಬಯಲಾಗೆ ಕಮಲಜರುಗೀ
ಸರಸತಿಯಿನಾ ನವಬ್ರಹ್ಮಗಂ ಪುಟ್ಟಿಸು
ತ್ತಿರದೆ ಸೃಜಿಸೆಂದು ನೇಮಿಸಲವರು ನಾನಾಪ್ರಪಂಚವಮಂ ಸೃಷ್ಟಿಸಿದರು ೩

---

1 ನೆಯ (೧೮)

ಸಲೆಯೊಪ್ಪುತೊಂದುದಿನ ರತ್ನಸಿಂಹಾಸನದೊ
ಳೊಲಿದು ಮಂಡಿಸಿ ಮಹೋನ್ನತಿಯಿಂದಲಿರಲವನ
ಕುಲಪುತ್ರಪೌತ್ರ ಮನಂಮುನಿವಿಬುಧರಾಕ್ಷಸರ್ವೋಲಗಂಗೊಟ್ಟು ಮುದದಿ
ಪಲವುಜಗ ನಿನ್ನಿಂದಲಾಯಿತಾ ಜಗಕೆ [1]ನೀ[1]
ನಲವಿನಿಂದೊಡೆಯರಕ್ಷಕ ನಿನ್ನನುದಳಿನ್ನ
ರೊಳರೆ ಚೌಚಷ್ಟಿವಿದ್ಯಾಮಾತೆ ವಾಗ್ದೇವಿ ಮಾದೇವನಾ ರಾಣಿಯ್ಯೆ ೪

ಆವ ದೇವನ ಮಕ್ಕಳೀಗ ವೊವ್ಮೊಕ್ಕಳುಂ
ತೀವಿದ ಸುರಾಸುರರ್ ಮನುಮುನೀಶ್ವರರೆಲ್ಲ
ಸೇವಿಸುವರಾವ ದೇವನ ಪಾದಪಂಕಜವನಷ್ಟದಿಕ್ಪಾಲರಖಿಳ
ದೇವರ್ಕಳೆಲ್ಲರಿಗೆ ನಿನ್ನ ಬಿಟ್ಟಿನ್ನಾರು
ದೇವರುಂಟೈ ಜಗಜ್ಜೀವನಾಧಾರವಹ
ಜೀವಾತ್ಮವೇಎಂದು ಕೂಡಿದ ಸಭಾಜನರು ಕೂಡಿ ಕೊಂಡಾಡುತಿರಲು ೫

ಏನೆಂಬೆ ನಾನು ಸಾತ್ವಿಕರು ನುತಿಗಳುಕುವರು
ಹೀನ ರಾಜಸ ತಾಮಸರ್ ಮರೆದಹಂಕರಿಪ
ರಾನಧಿಕನೀ ಜಗದೊಳೆನಗಧಿಕನೊರ್ವನಿಲ್ಲೆಂದಜಂ ಗರ್ವಿಸಲ್ಕೆ
ನಾನಾವಿಧದ ಸೃಷ್ಟಿ ನಿಂದು ಲೋಕಂ ಲಯಮ
ನಾನುತಿರೆ ಕಂಡು ಹರಿಯಜನೆಡೆಗೆ ಬರಲವಂ
ಮಾನಗರ್ವದೊಳು ನೀನಾವನೆಲೆಯೆನಲಚ್ಯುತಂ ನಗುತಲಿಂತೆಂದನು ೬

ಯಾರ ನಾಭೀಕಮಲದಿಂದ ಪುಟ್ಟಿದೆಯವನ
ಸಾರೂಪ್ಯಮಂ ನೋಡಿ ಮರತೆಯಾಯೆನಲೆನ್ನ
ಸಾರಣೆಯ ದಾರಿಯೊಳ್ ಬಂದ ಭವಮುಂ ನೀನು ಮರೆದೆಯಾಯೆಂದೆನಲ್ಕೆ
ಈರುವರಿಗಾಗ ಕಣ್ಣಿನ ಕಡೆಗಳಲ್ಲಿ ಕೆಂ
ಪೇರಿದುದು ಮಿಸೆಯುಂ ಕೌರಿಡುತ ಕಾರ್ಬೊಗೆಯ
ಪೇರಣೆಯ ಸುಯ್ದಿನಟ್ಟುಳಿ ಮಸಗೆ ಹರಿ ಚಾರು ಸೈನ್ಯಮಂ ಸಂಸೃಜಿಸಿದಂ ೭

ದಿಕ್ಕುದಿಕ್ಕಿನೊಳೆಲ್ಲ ಹರಿಯ ಚತುರಂಗಬಲ
ಕಿಕ್ಕಿರಿಗಿರಿಯೆ ಕೋಟಿಭೇರಿ ದಂ ಧಣರೆನ
ಲ್ಕುಕ್ಕಿಕ್ಕತ್ತ ಭಟ್ಟಾಳಿಗಳ್ ಪೊಗಳೆ ಕೇಳಜಂ ಗರ್ದುಗೆಯ ಪೊಯ್ದೇಳುತ

ಮಿಕ್ಕ ಮಾತೇಂ ಸಭಾಜನರ ಮುಂರಿದೀಕ್ಷಿಸ
ಲ್ಕಕ್ಕುಮೆನುತಾ ಸಭಾಜನಸಮುದ್ರಂ ಕಲಕಿ
ಹೊಕ್ಕು ಹೊಡಕರಿಸಿ ಕೋಪಾನಳಂ ಪೆರ್ಚಿಪೊರೆಯುರ್ಚಿ ಕೈದುಗಳನಾಗ ೮

ಖಣಿಖಟಿಲು ಛಿಣಿಛಿಟಿಲೆನುತ್ತ ಕತ್ತಿಗಳಿಂದ
ಪೊಣರುತಿರೆ ನವಕೋಟಿಬ್ರಹ್ಮರುಂ ಮನುಮುನಿಗ
ಳೆಣಿಕೆಯಿಲ್ಲದೆಯುರ್ಬಿ ಕಾಳಗಕ್ಕಭಿಮುಖಗಳಾಗೆ ದನುಜಾಳಿ ಮೊರೆದು
ಹೊಣಕೆಯಿಂದೆದ್ದು ಆರ್ಭಡಿಸಿ ಯುದ್ಧಂಮಾಡ
ಲಣೆಯುರದೆ ಸುತ್ರಾಮ ಸುರರೊಡನೆ ಮುಂನಿದೇಳೆ
ಭಣಿತೆಯಿಂ ದಿಕ್ಪಾಲಕರ್ ವಾಹನಂಗಳಡರುವ ಸಮರವಂ ಮಾಡಲು ೯

ಭರದಿಂದಲಜಹರಿಗಳಿರ್ವರ ಮಹಾಬಲಂ
ಕೆರಳಿ ಘೂ[1]ರ್ಣಿ[1]ಸುತ ಚೂಣಿಯ ಸೈನ್ಯ ತಮತಮಗೆ
ಉರವಣಿಸಿ ಕಾಳಗವ ಕರ್ಚಿಯೆಚ್ಚಾಡಿದರ್ ಮಾಡಿದರ್ ಹೊಣಕೆಗಳನು
ತರತರದೊಳಿರಿದಾಡಿ ಕೂಡಿದರ್ ಕಾಡಿದರ್
ಮುರಿದೋಡಿಯೊರ್ವರೊರ್ವರ ತರಂಬು ತುರುಬಿನಿಂ
ಹರಿಬವಂ ಮಾಡಿದರ್ ಹಾಣಾಹಣಿಯನೆಸಗಿ ಪೇಳಲಳವಾರಿಗಹುದು ೧೦

ಜಗವ ಸೃಷ್ಟಿಸುವ ರಕ್ಷಿಸುವ ಕರ್ತರು [2]ತಾ[2]ವೆ
ಜಗಳಕನುವಾಗೆ ಲೋಕಕೆ ಸುಖಂ ಎಲ್ಲಿಯೆಂದು
ಭಗಣಾಳಿ ಶಶಿರವಿಗಳಾಮುಂಡಲಂ ಸಪ್ತಶರಧಿನದಿಗಳ್ ದೂಳಿಯಿಂ
ದಗಲದ ಧ್ರುವವನೈದಿದರು ಲೋಕಕೆ ಬಾಧೆ
ಮಿಗೆಯಾಯ್ತು ಇವರ ಜಗಳವ ನಿಲಿಸಿ ಸರ್ವರಂ
ಬಗೆಬಗೆಯನತಿಕರುಣದಿಂ ಸಲಹೆ ಶಿವನಲ್ಲದಿಲ್ಲೆಂದು ಮೊರೆಯಿಟ್ಟರು ೧೧

ಚರಣ ಹತಿಯಿಂದೊದರೆ ಬಿರಿಯೆ ಕುಲಗಿರಿ ಜರಿಯೆ
ತರಿಯೆ ಕಣೆಕಣೆಗಳಂ ಮೊರೆಯೆ ಭೂತಾಳಿಕುಲ
ಹರಿಯೆ ರಥರಥವರರೆ ತರಿಯೆ ಸುಭಟಾಳಿ ಶಿರವರಿಯೆ ಮುಂಡಗಳಂ ಪರಿಯೆ
ಕರಿಯ ರುಂಡಗಳು ಮೈಮರೆಯೆ ಏರಿರ್ದ ಬಲ
ಸರಿಯೆ ದೊರೆಗಳು ನೋಡಿಯುಲಿಯೆ ಕೋಪದೊಳಂ ಬಾ
ಯ್ದೆರೆದ ಪೆಣಗಳ ಕಂಡು ಹರವರಿಯ ಹರುಷದೊಳುಭಯಸೈನ್ಯ ಸೆಣಸಂತಿರಲು ೧೨

---

1 ರ್ಮಿ (ಗ) 2 ನಾ (ಗ)

ನೋಡಿರೇ ನವಬ್ರಹ್ಮರಾರ್ಭಟೆಗಳಂ ಮತ್ತೆ
ನೋಡಿರೇ ಸುರಪಾದ್ಯರಾಟೋಪಗಳನೆಯ್ದೆ
ನೋಡಿರೇಯೂದಿತ್ಯರುಲ್ಬಣವನಸುರರತಿ ಕೋಳಾಹಳಸ್ವನಗಳಂ
ನೋಡಿರೇ ಮುನಿಗಳುದ್ಧಟದ ದುರ್ವೇಷಗಳ
ನೋಡಿರೇ ಮನುಗಳಾಹ್ಲಾದನದ ಲಂಪಟವ
ನೋಡಿರೇ ಸಿದ್ಧಸಾಧ್ಯರ ಬಲಾಬಲಗಳಂ ನೋಡಿರಾಹವದ ಸೊಗಸ ೧೨

ನೋಡಿರೆಯಸಂಖ್ಯಾತ ಸೈನ್ಯ[1]ಚಕ್ರಂ[1] ಎನಗೆ
ಕೂಡಿಬಂದಿತ್ತು ಹರಿಗಾರುಂಟೆನಲ್ ಬ್ರಹ್ಮ
ನೋಡಿದೀಕ್ಷಣದೊಳೆಂದು ತನ್ನಗದೊಳ್ ಸುರಾಸುರಯಕ್ಷಗಂಧರ್ವರುಂ
ಕೂಡೆ ಕಿನ್ನರರ ಕಿಂಪುರುಷರಂ ಬ್ರಹ್ಮರಂ
ಬಾಡಬಾಗ್ನಿಯನು ಸಪ್ತಾಂಬುನಿಧಿ ಗಿರಿಗಳಿಂ
ನೋಡನೋಡಲ್ ಚಿತ್ರಚಿತ್ರಮಹ ವಿಶ್ವರೂಪಂ ತೋರ್ದನೇವೇಳ್ವೆನಂ ೧೪

ಗಂಧರ್ವಮಯವಾಗಿ ಗಾನರಸಮಿಲ್ಲಧಿಕ
ಸುಂದರದ ಭೋಗಿಗಳ ಕುಲಮಿರ್ದತಲವಿಲ್ಲ
ಕುಂದದುರೆ ಧೇನುಂಹಾವಳಿಯಿರ್ದು ಧೇನುಗಳೆಯಿಲ್ಲ ಮಿತ್ರರುಗಳಿರ್ದು
ಗೊಂದಣದ ಕಿರಣಂಗಳಿಲ್ಲ ಸುಗ್ರೀವಕಾ
ರ್ಯಂದೋರಿಯಾಂಜನೇಯನ ಸುಳಹದಿಲ್ಲ ತರು
ಟೊಂದದಿಹ ರಕ್ತವನಮಿರ್ದು ಪೊಸತಾಗಿರುವ ರಕ್ತವನಮಿಲ್ಲಸುಗೆಯ ೧೫

ಈ ಪರಿಯೊಳುಭಯಬಲ ಕಾದುತಿರೆ ಹರಿಯಜರು
ಚಾಪಮಂ ಪಿಡಿದು ಹೆದೆಯಂ ನೇವರಿಸಿ ಮಿಡಿದು
ರೋಪಮಂ ಬತ್ತಳಿಕೆಯಿಂದುಗಿದು ಬಲದ ಕೈಯಿಂದ ಬಿಡದೇ ತಿರುಹುತ
ಕೋಪದಿಂ ಕಾಲ್ಗೆರೆದು ಪಕ್ಕಂಗಳಂ ತಟ್ಟಿ
ಚಾಪಲಂ ಮಿಗಲು ಲಂಘಿಪ ಗರುಡ ಹಂಸಗಳ
ನಾಪಾದಮೂಲಮಾಗೇರಿ ಸಜೀಜಭೂತರಾಗಿ ನಿಟ್ಟಿಸುತ ಬಿಡದೆ ೧೬

ಬತ್ತಳಿಕೆಯಿಂದಂಬನುಗಿವುತನೆ ಬೆರಳ್ಗಳಿಂ
ತೆತ್ತಿಸುತೆಯಾಕರ್ಣಪರ್ಯಂತೆಸೆದಿಹವೀ
ಸತ್ಯಲೋಕೇಶನಿನಜನೆನುತ್ತುಳಿದಿರಲ್ಕರಿಯೊ ನೋಡೆನ್ನಂಬಿನ

1 ತಕ್ರ (ಕ)

ಬಿತ್ತರವನೆಂದು ಬೊಮ್ಮನನೆಸೆಯೆಲವ ತನ್ನ
ಕತ್ತರಿಯ ಕಣೆಯಿಂದ ಕಡಿದು ಮರಳಿಡೆ ಬ್ರಹ್ಮ
ಚಿತ್ರಜನ ಪಿತನ ವಕ್ಷಸ್ಥಲವ ತಾಗಲೀದಿಹ ಪುಲಿಯು ತೆರದಿ ಕೆರಳಿ ೧೭

ವನಜಾಕ್ಷನೆಲೆ ಬೊಮ್ಮ ಚೆನ್ನಾಗಿಕೇಳಂ ನೀಂ
ಘನಮೆಂದಂ ಎನ್ನೊಡನೆ ಕೈಗೈದಫಲವ ನಿನ
ಗನುವಿನಿಂದುಣಿಸುವೆನು ಕೋಯೆನುತ ಮಾರ್ಗಣವನೆಚ್ಚು ಬೊಬ್ಬಿಡೆ ವಿರಿಂಚಿ
ಕನಲಿಯಂತರದಲ್ಲಿ ತುಂತ್ತುಮುರದಂ ಮಾಡಿ
ಯನಂವಿನಿಂ ಪೊದೆಯಿಂದ ಬ್ರಹ್ಮಾಸ್ತ್ರಮಂ ಕೊಂಡು
ತನಯನೇ ಕಿವಿ[ಯ]ವರೆಗೆಸೆದೆಚ್ಚು ಬೊಬ್ಬಿರಿಯಲದು ವಿಲಯವಹ್ನಿಯಂತೆ ೧೮

ಘುಳುಘುಳಿಸಿ ಬ್ರಹ್ಮಾಂಡಮಂಡಳವ ಸುಡುತಮು
ಚ್ಚಿಳಿಸುತ್ತ ಬರಲೆ[1]ಲ[1]ಲೆ ಜಗ ಬೆಂದುದೀ ಮಹಾ
ಖಳ ಶರವ ಬಿಡಬಹುದೆ ಕೊಲೆಗಡಿಕನೀತ ವಿಧಿಯೆಂದು ಸರ್ವರು ಮೊರೆಯಿಡೆ
ಜಳಜಾಂಬಕಂ ನೋಡಿ ನಿಜಶಾರ್ಙ್ಗಕೋಶದಿಂ
ದೆಳೆದು ವೈಷ್ಣವಬಾಣಮಂ ಕರದೊಳಾನಲಂರಿ
ಬಳಗಂಗಳುಗುಳೆ ಲೋಕಗಳೆಲ್ಲ ಮೊಳಗೆ ಕಾರ್ಮುಕಕೆ ಹೊಂದಿಸುತಲಾಗ ೧೯

ಎಸೆಯ ಬೇಡೀಗ ನಿಲ್ಲೆಂಬಂತೆ ಲೋಕಜನ
ವಿಸರ ಬಾಯ್ಬಿಡುತಿರ್ದವಬ್ಧಿಗಳ ಬಾಣಾಗ್ನಿ
ಹೊಸೆದು ಪೀರುವದೆಂದು [1]ಬೇರಾ[1]ಗಿ ತಳಮಳಲು ಕಾಣಿಸಿತ್ತೇನೆಂಬೆನು
ಶಶಿರವಿಗಳಂಜಿ ಕರಗಳ ಮುಗಿವುತೆಡಬಲದೊ
ಳೊಸೆದು ನಿಂದವು ತಾರಕಾಳಿಯುದುರ್ದವು ಜಗಂ
ಸಸಿನೆಯಿರದೆಂದು ಭೂಜನನಿ ಬಾಯ್ದೆರೆವಂತೆ ಧರೆಬಿರಿಯಂತತಿಭಯದೊಳು ೨೦

ಸಿಂಜಿನಿಯ ಸೇದಿ ನಾರಾಚಮಂ ಬಿಡೆ ಘನ ಧ
ನಂಜಯನ ಪಾಂಗಿನಿಂ ಬರ್ಪ ಶರರೌದ್ರಮಂ
ನಂಜುಗೊರಲನೆ ನಿಲಿಸಬಲ್ಲನುಳಿದರ್ಗಳವೆ ಲೋಕಗಳ ಸಂಡುತಬರಲು
ಕಂಜಭವನಸ್ತ್ರಪ್ರತ್ಯಸ್ತ್ರಮಂ ಕಂಡದಂ
ಭಂಜಿಸುವೆನೆಂದಾರ್ದು ಬಂದು ಮಥಿಸಲ್ ಬಿಡದೆ
ಕಂಜನಾಭನ ಬಾಣ ವಿಧಿಶರವ ಕರ್ಚಿ ಪೆರ್ಗಿಡಿಯನುಗುಳಲ್ ಮರಳ್ಚುತೆ ೨೧

1. ಬ (ಗ) 2 ಬೆರಗಾ (ಕ) 3 ಪ್ರತಿ (ಕ)

ಸರಳಿಸುತೆ ಹರಿಶರವ ಬಡಿದುಂವಾರ್ಭಡಿಸೆ ರಿಪು
ಶರಗಳುನ್ನತದ ದನಿಯಿಂದೆ ಲಟಕಟಿಸಿ ನಿಂ
ದುರವಣಿಸಿ ಮಾರ್ಮಲತುವೊಂದನೊಂದಂ ಜರೆದು ಮತ್ಸರಿಸಿ ಪಲ್ಗಡಿವುತ
ಧರೆಗಗನತಳದಲ್ಲಿ ಕಾದುತ್ತಲುರಿಗಳಂ
ತಿರದೆಯುಗುಳಲ್ಕಜಾಂಡಂ ಧಗಧಗನೆ ಹೊತ್ತು
ತುರಿವುತಿರೆಯುಭಯ ಪತ್ರಿಯ ಯುದ್ಧಮಲ್ಲದುಳಿದಾಹವಂ ನಿಂದುದವಂಮ ೨೨

ಇದ ಕಂಡು ಕಮಲಭವ ಕಮಲಾಕ್ಷರಿರ್ವರಾ
ಗಧಿಕವಾಹನಮಿಳಿದಂ ಚಾಪಬಾಣಗಳುಳಿದು
ಗದೆಗಳಂ ಕೊಂಡು ಪರಿಪರಿದು ತಿರುಗಿಸುತಲಾಲಾಗಂಚೇಗುಗಳನೊಂದಿ
ಗದರಿ ಕೇಳುತ್ತ ಪೊಯ್ದಾಡಿ ತಳಮೇಲಾಗಿ
ಬೆದರದೇ ಪಿಂದಿಕ್ಕೆ ಸಾರಿ ಗದೆಗಳ ತಿರುಪಿ
ಪೊದಗಿ ಕೂಡುತ್ತ ಭಂಜಬಲದಿಂದ ಪೊಯ್ವೊಯ್ವುತಾನುತಂ ತಂತಮ್ಮೊಳು ೨೩

ಏನೆಂಬೆನವರಂ ಗದೆಗಳ ಕೊಂಡು ಬಹುಕಾಲ
ಮಾನಯುದ್ಧಂ ಮಾಡುತಿರೆ ವಡೆಯರಂ ನೋಡಿ
ವೈನತೇಯಂ ಹಂಸೆಗಳ್ ಕಾದಿ ಮಡಿಯೆ ಕಂಡವರುಗಳನೊತ್ತರಿಸುತ
ಮಾನದಿಂ ಕರ್ಪೂರವೀಟಿಕೆಯ ಕೊಂಡು ಬಿಡ
ದಾನಂದದಿಂ ಮಲ್ಲಯುದ್ಧಮಂ ಮಾಡಲೆಂ
ದಾ ನವ್ಯಭುಜಗಳಂ ತಟ್ಟಿ ದಂಡೆಯ ಹೂಡಿ ತೊಡೆಗಳಂ ಚಪ್ಪರಿಸುತ ೨೪

ಊರುದ್ವಯಂಗಳಿಂದೌಕಿ ಜುಟ್ಟಂ ಪಿಡಿಯೆ
ವಾರಿಜೋದ್ಭವ ಮುಷ್ಟಿಯಿಂ ತಿರುಪಿಯೂರಿ ಕೈ
ಯಾರ ಹಿಂದಕೆ ನಿಂದು ಲಂಘಿಸುತ್ತಾಲಿ ಮುಟ್ಟಿಯೊಳು ಪಣೆಯಂ ತಿವಿಯಲು
ಮಾರಪಿತನದ ಪಾಲಿಸುತ್ತ ಕೈವಿಡಿದಾಲಿ
ಹಾರಿಸಲ್ಕಂತರಿಕ್ಷದೊಳು ಲಾಗವ ಹಾಯ್ಕಿ
ಮೇರೆಯಂ ಮೀರದಾ ಕಡೆಯಲ್ಲಿ ನಿಂದು ಪಲ್ಲಟಿಸದೋಸರಿಸದಿರಲು ೨೫

ಭಲರೆ ಬೊಮ್ಮಾ ನೀನು ಛಲದಂಕನಹುದೆನು
ತ್ತಲಘು ಹರಿ ಕುಲಿಲಿಯೆಂದಾಲಿ ತೆಕ್ಕೆಯಲಿಕ್ಕಿ
ಬಲಿದು ಬಂಧಿಸೆ ಬೊಮ್ಮ ತನ್ನ ಕಾಲಿಂದವನ ಕಾಲ ತಡೆಗೈದು ಕೆಡಪಿ

ಒಲಿದಿರ್ದೆಯ ಮೇಲೆ ಕಂಳಿತಾಗ ಮುಸುಡಂ ತಿವಿಯ
ಲಳುಕದದ ತಪ್ಪಿಸುತೆ ಹರಿ ಚಮತ್ಕಾರದಿಂ
ದಲರಮಗನೆರ್ದೆಯ ಕಾಲಿಂದೊದ್ದು ಕೆಡಪಿ ಲಾಗಿಸಿ ನಿಂದ ಮಜ ಭಾಪುರೆ ೨೬

ಬೆಳೆವುತಿರ್ದರು ರತ್ನನೀಲದದ್ರಿಗಳಂತೆ
ಹೊಳೆಹೊಳೆದು ಮತ್ಸ್ಯಪುಟಗಳ ಪಾಯ್ಕೆಯಂತರದೊ
ಳಳಿಕಾಕ್ಷ ನೋಡುತಿರ್ದಂ ಉಳಿದ ನರಸುರೋರಗರುಂ ನೋಡಲ್ ದಕ್ಷರೆ
ಭಳರೆ ಭಳರೇ ಎಂದುಂ ಕೌಶಲ್ಯಸಮರಮಂ
ಬಲವಂತರುಗಳು ಖಣಿಖಟಿಲೆಂದು ಮುಷ್ಟಿಯಿಂ
ಸೆಲೆದಾಡೆ ವಿಸ್ಫುಲಿಂಗಗಳುದಿರಿಯಬುಜಾಂಡಕಾದುದಾಗೊಂದು ಕಾವು ೨೭

ಶಂಭುವಿಂತಿವರ ಯುದ್ಧವ ನೋಡಿ ನಿಲಿಸಲಿವ
ರಂ ಬಿಡದೆ ಯುದ್ಧದಿಂ ಮನಸಂದವರ ನಡುವೆ
ಬೆಂಬಲ್ಗಳೋ ಕಿಡಿಯ ಚಂಚಲದ ರಾಶಿಯೋ ಸರಸಿಜಾಪ್ತರ ಕೋಟಿಯಂ
ಬಿಂಬವೋ ಸಸಿಯ ಬೆಳ್ಳಿಯ ರಾಶಿಯೋಎನ
ಲ್ಕಂಬುಜಾಂಬಕನಂಬುಜಾಸನರ ಯುದ್ಧಭಯ
ಕಂ ಬಿಳ್ದು ಬ್ರಹ್ಮಾಂಡಕಂರೆನೆಟ್ಟು ಮಿಸುನಿಕಂಭವುಯೆನಲ್ ಜಗಜಗಿಸುತ ೨೮

ಧರಣಿ ನಿರ್ಭರಲಿಂಗಪೀಠಂ ಸಮಸ್ತಕುಲ
ಗಿರಿಗಳೇ ಭುಜಗಳಂತಂಬುಧಿಗಳೇ ಕುಕ್ಷಿ
ಮೆರೆವ ರವಿಶಶಿವಹ್ನಿನೇತ್ರಾಳಿ ಪಾದಪಂಕಜಮೆ ಪಾತಾಳಲೋಕಂ
ವರವದನ ವೇದ ತಾರಾಳಿ ಸುಮಮಾಲೆ ಬಂ
ಧುರದಿಶೆಯೆ ವಸನಾಭ್ರ ಜಲಕೇಶಗ್ರಹಗಣಂ
ಪರಮಪ್ರಮಥಾಳಿ ಪೂಜಕರಾಗಿಯಂರುಲಿಂಗಮುದ್ಭವಂ ಕಂಗೆಸೆದುದು ೨೯

ಕಂಡಧಿಕ ಭಕ್ತಿಯಿಂ ಹರಿನುಡಿದನಜ ನೀನಂ
ಮಂಡೆಯಂ ಕಾಣ್ಬೆಯೋ ಎನೆ ಬಡವನೇ ನಾನಂ
ಪುಂಡರೀಕಾಕ್ಷನಾಂ ಘನಮಸ್ತಕವ ನೋಳ್ಪೆನೆನೆ ನನಗೆ ಶಿವನ ಪಾದ
ಪುಂಡರೀಕವ ನೋಳ್ಪೆನೆನಲುಂ ಹರಿಯಜನುಮು
ದ್ದಂಡ ಕಿಟಿಗೃಧ್ರರೂಪಗಳಾಂತಧೋಭುವನ
ಷಂಡಗಳ ಬಗೆದಿಳಿದು ಕಾಣದೇ ಹರಿ ತಿರುಗಲೂರ್ಧ್ವ ಭುವನಂಗಳಜನು ೩೦

ಪಾರುತ್ತ ಕಾಣದತಿಬಳಲಿ ಪೋಗುತ್ತಿರಲ್
ದಾರಿಯೊಳ್ ಕೇತಕಿಯ ಕಂಡು ನೀನೆಲ್ಲಿಂದ
ಸಾರಿದೈ ಶರಣಾರ್ಥಿ ಗಮನಮೆಲ್ಲಿಂದೆನಲ್ ಶಿವನ ಮಂಕಂಟದೊಳಗಿರ್ದ
ನೀರೇಜಭವನೆಯಾಂ ಬಂದೆನೆನೆ ಮಕುಟವಂದು
ದೂರವೋ ಹತ್ತಿರವೊ ಪೇಳೆನಲ್ ನಸುನಗುತ
ಬೇರೊಂದಂ ನೆವದಿಂದ ಕಂಡೆನೆಂದಜಕಲ್ಪ ಗಮಿಸೆ ಕಾಣಿಸಬಾರದು ೩೧

ಪರಮಪುರುಷಾ ಸೋತೆ ಹರಿಗೆಯುಂ ಇನ್ನೇನು
ತೆರನಯ್ಯ ಕೃಪೆಯಿಂದೆ ಹರಿಯೊಡನೆ ಮಂಕಂಟಮಂ
ಭರದಿಂದ ಕಂಡನೆನೆ ಕೃತಕೃತ್ಯನಪ್ಪೆ ನಾನುಪಕಾರವಂ ಮಾಡಲಂ
ಪರರಿಗದರಿಂ ಪುಣ್ಯಮೆಂದು ಸಾಸಿರಗ್ರಂಥ
ಮೊರೆಯಲದರಿಂದಜಂಗಪಸಾಕ್ಷಿಯುಂ ನಂಡಿಯೆಂ
ಹರಿ ಕೆರಳಸತ್ಯಮಂ ನುಡಿದೆ ಕೇತಕಿ ಪಾಪಿ ಶಿವಗೆ ನೀಂ ಸಲ್ಲ ಬೇಡ ೩೨

ಎಂದು ಶಾಪವನಿತ್ತು ಎಲೆ ಮಹಾಲಿಂಗವೇ
ಇಂದುಧರ ನೀಂ ಬಲ್ಲೆ ಸರ್ವಜ್ಞನೆನೆ ಹರಂ
ಸುಂದರರದ ನನ್ನ ಸಮಪೂಜೆ ನಿನಗಕ್ಕು ಹರಿ ನಿನ್ನಿದಿರೆ ಹುಸಿಯಲಿಲ್ಲೈ
ಎಂದು ಮನ್ನಿಸಿಯಜನೆ ಪುಸಿದೆ ಕೆರೆಯೇರಿಯೊಳ್
ಗೊಂದಣದ ಹಾದಿಬೀದಿಯ ತೋಟಭಾವಿಯೊಳ್
ನಿಂದಂ ಗಂಡಿಗೋಪುರಂ ಪೂಜೆಯಿಲ್ಲದೆ ದರಿದ್ರತೆಯೊಳಿಹುದೈ ಸಂತತಂ ೩೩

ಇಂತಖಿಳ ಶಾಪವಂ ಬ್ರಹ್ಮಗೀವುತ ಹರಿಗ
ನಂತವರಗಳ ಕೊಡುತ ಭಯಂಕರದ ರೂಪವಂ
ತಾಂ ತೋರೆ ಹರಿಬ್ರಹ್ಮರೆಲೆದೇವ ದೇವೇಶ ಭೀಕರವನುಳಿದೆಮ್ಮನು
ಚಿಂತೆಯಿಲ್ಲದ ತೆರದಿ ಸಲಹು ಸರ್ವೇಶನೆನ
ಲಂತವರ ರಕ್ಷಿಸಲ್ ಘೋರಮೂರ್ತಿಯನುಳಿದು
ಕಂತುರಿಪು ಶಾಂತಿಮಯದಿಂದೆಸೆಯೆ ಕಂಡು ಹರಿಯಜರು ಸ್ತುತಿಸಂತೈರ್ದರಂ ೩೪

ಪಾಹಿ ಪರಮಾನಂದ ಸಾಗರಾಶ್ರಿತಚಿತ್ತ
ಪಾಹಿ ಭಕ್ತೌಘಜೀಮೂತ ರಘುಂರಘುಪವನ
ಪಾಹಿ ಪಾಷಂಡವನದಾವಾನಲಪ್ರಾಯ ದಿವ್ಯ ನಾಮಪ್ರಭಾವ

ಪಾಹಿ ತ್ರಿಪುರಕೂಟಕೋಟಿರಾಕ್ಷಸಕಾಲ
ಪಾಹಿ ನಾಗೇಂದ್ರವಿಷಸಂಲಗ್ನ ಗಳನೀಲ
ಪಾಹಿ ಪಿಂಗಲಜಟಾಪಟಲತಟಶೀತಾಂಶುರೇಖಯೆಂದಜ ನುತಿಸಿದಂ ೩೫

ಸೋಮಸಖ ನಿಟಿಲತಟಪಿಂಗಲಜಟಾಕಲಿತ
ಸೋಮ ಸುಖಮಯಮಹಾಕಾಯ ನಿರ್ಜಿತಮಾಯ
ಸೋಮನಖದಳಿದಗಿರಿನಂದನಾ ವಕ್ಷೋಜಕಲಶಕಲಶಜಸನ್ನುತ
ಸೋಮಯಾಗರ್ಚನೀಯಾದಿತ್ಯ ಗಣಗಣ್ಯ
ಸೋಮಯಾಗಾರ್ಚನೀಯವಲಗ್ನಸಂಲಗ್ನ
ಸೋಮಯಾಗಧ್ವಂಸನಪ್ರಶಸ್ತನೆ ಪಾಹಿಯೆಂದೆನುತ ಹರಿ ನುತಿಸಿದಂ ೩೬

ಈ ಪರಿಯೊಳಿರ್ವರಂ ಸ್ತುತಿಸೆ ಸದ್ಭಕ್ತಿಯಿಂ
ದಾ ಪರಮನವರ್ಗೊಲಿದು ಹರಿವಿಧಿಗಳಿರ ನಿಷ್ಟ
ಕೋಪರಾಗೆಂದಿನೊಲ್ ಸೃಷ್ಟಿಸ್ಥಿತಿಗಳನೆಸಗಿರೆಂದು ಕಳುಹಲ್ಕೆ ಮುದದಿಂ
ಸೋಪಾಧಿಯಿಂದಡ್ಡಬಿದ್ದು ಪೋಗಲ್ ಶಿವಂ
ದೀಪಿಸುವ ಗಣಸಹಿತ ಕೈಲಾಸಕೈದಿರ್ದ
ನೀಪರಿಯ ಕಲ್ಪಕಲ್ಪದಲಿ ಇಪ್ಪತ್ತೈದನೆಯೊ ಶಿವನ ಲೀಲೆಯೆಸೆಗುಂ ೩೭

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ಚತುರ್ಥ
ದತಿನೂತ್ನಮಹ ಕಾಂಡದೊಳ್ ನೋಡೆ ಪದಿನಾ[1][ರು][1] ಸಂಧಿ ಸಂಪೂರ್ಣವಾಯ್ತು ೩೮

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತ ಮಾಹೇಶ್ವರರ್ಗಿಷ್ಟಾರ್ಥವಹುದು ಸತ್ಯಂ ೩೯

---

1 ರನೆಯ (ಕಗ)

ಶ್ರೀಪರಮಕೈಲಾಸವಾಸಂ ಸ್ವಯಂಜ್ಯೋತಿ
ರೂಪನಭಿನವಪರಬ್ರಹ್ಮ ಸಂಪಾದನಾ
ದೀಪಿತ ಮಹಾಚೆನ್ನಮಲ್ಲಿಕಾರ್ಜುನ ತನ್ನ ಪದಪದ್ಮಭೃಂಗನೆನಿಪ
ಶ್ರೀಪರ್ವತಾರ್ಯನಿಂಗೊರೆದ ಗುರುಚಕ್ರೇಶ
ರೀಪೇಳ್ದ ಸತ್ಕಥಾಚಾರಿತ್ರದೊಳ್ ತಿಳಿಯ
ಲೇಪೇಳ್ವ [2][ಮು][2]ಗಿಯಿತ್ತು ನಾಲ್ಕನೆಯಕಾಂಡ ಸುಜ್ಞಾನಮೌಕ್ತಿಕಕರಂಡ ೪೦

1 ನಿಲ್ಲಿಮು (ಕಗ)

# ಒಂದನೆಯ ಸಂಧಿ

ಸೂಚನೆ :

ಸರಸದಿಂ ಭುವನಕೋಶದೊಳು ಪಾತಾಳಾದಿ
ಶರಧಿಗಳ ನವಖಂಡಧರೆಗಿರಿಗಳಂ ಚೆಲ್ವ
ವೆರೆವ [1]ವಿ[1]ಷ್ಕಂಭಗೋತ್ರಾವಧಿ[2]ಯ ಬಗೆಯ[2] ಬಿತ್ತರಿಸುವೆಂ ಕೇಳು ಮುನಿಪ

ದಾನಗುಣಶೀಲನೆಂದೆಂಬುದೈ ಶಾಸ್ತ್ರಾಳಿ
ಏನ ಹೇಳ್ವವೆ ನನ್ನಮರುವೆಯಂ ಕಾಣದತಿ
ದೀನನಾಗುತ್ತ್ಕಟ ಬಳಲಿಬಂದತಿ ನೂತ್ನವಸ್ತ್ರಮಂ ಬೇಡಿಕೊಳಲು
ಹಾನಿಯಿಲ್ಲದೆಯಿತ್ತ ದಾ[3]ಸ[3]ಮಯ್ಯಂ[4]ಬವನ[4]
ನೀನೆಯ್ದಿಯಂಬಲಿಗೆ ಹುಟ್ಟಿನಿಂ ಕಟವಾಯ
ಮಾನವಿಲ್ಲನೆ ತಿವಿಸಿಕೊಂಡೆ ನನಗೇಂ ಕೊಡುವೆ ಪೇಳು ಗುರುಚನ್ನಮಲ್ಲ ೧

ಇಂದುಧರ ಚರಮೂರ್ತಿಯಾಗೆಯ್ದಿ ರಾಜ್ಯ[5]ಮಂ[5]
ಸುಂದರಿಯರಂ ರಥಪದಾತಿಕರಿತುರಗಗಳ
ಗೊಂದ[6]ಣಾಭರಣ[6] ಬೊಕ್ಕಸಗಳಂ[7]ಸೆಳೆದು[7]ಕೊಂಡಟ್ಟ[8]ಲಾರಣ್ಯದೊಳಗೆ[8]
ಒಂದೆಮನದಿಂದೆಯ್ದುತಿರೆ ಬಂದು ಕೇಳೆ ತನು
ವಂದದಿಂ ಕೊಡೆ ಶಿರವ ಗರಗಸದೊಳರಿಸಿಕೊಂ
ಡಂದು ಶಿವನೊಳ್ ಬೆರೆದ ಸಿಂಘ[9]ಬಲ್ಲಾಳಂಗನಾರತಂ ವಂದಿಸುವೆನು[9] ೨

ಏಕ[10]ನಾಗಿಹ[10] ರುದ್ರನವತಾರಮೂರ್ತಿಯಹ
[11]ಏಕೆ ಪದಪೂರ್ವನಹ ರಾಮ[11]ಗುರುವೇ [12]ನನಗ[12]
ನೇಕ ಪುಣ್ಯದ ಫಲದ [13]ರಾಜಿಯಿಂ ನಿಮ್ಮ[13] ಸಂದರ್ಶನಂ ಲಭಿಸಿತಿಂ[14]ದು[14]
ಸ್ವೀಕರಿಪುದೆನ್ನ ಬಿನ್ನಪವನೆಲೆ ಜೀಯ ಈ
ಲೋಕೇಶನಂಡರಚನೆಯ ನಿರೂಪಿಸುವುದೆನೆ
ಜೋಕೆಯಿಂ ಕೇಳು ದೇವಲಮುನೀಶ್ವರನೆಂದು ನಿರವಿಸುತ್ತಿದ್ದನಾರ್ಯಂ ೩

---

1 ನಿ (ಜ) 2 ಯುವಾಗಿ (ಜ) 3 ಸಿ (ಜ) 4 ಭಲರೆ (ಜ) 5 ಮುವ (ಜ) 6 ಣಮನುಂ ಮೇಲು (ಕಗ) 7 ನೀಳ್ದು (ಜ) 8 ಲಾ (ಕಗ) 9 ವರಾಳಗನವರತವಿತನೊಂದಿಪೆ (ಜ) 10 ಏವೋ (ಜ) 11 ಏಕೋರಾಮಾರಾಧ್ಯ (ಜ) 12 ನಿಮ್ಮಂಘ್ರಿಯನ (ಜ) 13 ಸುಕೃತದಿಂ (ಜ) 14 ದುನಮಿಸಿ (ಜ)

ನಂದೀಶನಾ ಸುಖಾವಹ[1]ತೆಯೊಳ್[1] ದಾರುವನ
[2]ಮಂದಿರದ[2] ಮುನಿಜನಕೆ ಪೇಳ್ದ ಪರಮೇಶ ಗಿರಿ
ನಂದನಗೆ [3]ಮುಂದೊರೆದವಧಿ[3]ಯಿಂ ಮೃಗೇಂದ್ರದರ್ಪವನೆಯ್ದೆ ಗಿರಿಭೇದಿಯು
ಛಂದದಿಂದುಸುರ್ದ ಭಾರದ್ವಾಜಗದನೆಯ್ದೆ
ಪೊಂದಿ ಪೇಳುವದಮಲ ಲೈಂಗ್ಯದೊಳಗಲ್ಲದೆಯು
ಇಂದುಧ[4]ರನೇ[4] ಮತಂಗಾದಿಮುನಿಗ[5]ಳುಸುರ್ದ[5] ಪಾರಮೇಶ್ವರತಂತ್ರಮಂ ೪

ಪರತರಸ್ವಚ್ಛಂದ ಲಲಿತಭೈರ[6]ವ[6] ಮುಖ್ಯ
ಪರಿವಿಡಿಯ [7]ದಿವ್ಯಾಗಮಂಗಳೋತುಸುರ್ದುದಂ[7]
ಪೊರೆವನೈ ಭುವನಕೋಶವ ಕೇಳು ದೇವಲಮುನೀಶ ನೀತಿಪ್ರಕಾಶ
ಉರು[8]ತರದ ಚಿದ[8]ದ್ವಯಾನಗೋಚರಂ ಪರಶಿವಂ
ಪರನಾದಬಿಂದುಕಳೆ[9]ಯಿಂದಮೃತಕಲೆಗಳಿಂ[9]
ದುರಿವ ಚಿಚ್ಛಕ್ತಿಯಿಂದಮೃತಕಲೆಯಿಂ ಶಿವನ ಶಾಸನದೆ ಪ್ರಕೃತಿ ಜನಿಸಿ ೫

ಪರತರಪ್ರಕೃತಿಯಿಂದಂ ಮಹಾತತ್ವಮಂ
ದರಿಯದರಿನಿಂದಹಂಕಾರಮದರಿಂದ ಕೇ
ಳಂರೆ ತೈಜಸಂ ತಾಮಸಾದಿ ವೈಕಾರಿಕದೊಳುದಿಸಿದರು ದೇವತೆಯರು
ಪರಿಯದೆಂತೆನೆ ಭವನ ದಕ್ಷಿಣದ ಬಾಹುವಿಂ
ಸರಸಿಜಾಸನವಾಮಬಾಹುವಿಂ [10]ಗೋವಿಂದ
ಹರನು ಪೃಷ್ಠದಲಿ ಪುಟ್ಟಿದನು ರಜತತ್ವತಮವಾದವಿವರಿಗೆ ಗುಣಗಳು[10] ೬

ಅವರವರ ವೈಕಾರದಿಂದೆ ಶಬ್ದಸ್ಪರ್ಶ
ಮವಿರಳದ ರೂಪರಸಗಂಧಂಗಳಿಂ ಗಗನ
ಪವಮಾನ[11]ವಹ್ನಿ[11] ಜಲಧರೆಗಳಿಂದಂಡಮುದ್ಭವಮದರೊಳಾಕಾಶವು
ತವೆ ತೆರಪದಾಗೆ [12]ನೀಂ[12] ಚೈತನ್ಯವಹ ತತ್ತಿ
ಸವಿಶೇಷವಳಯ[13]ವರ್ಬುದ[13]ಕೋಟಿಗಾವು[14]ದವ
ನವಗವಿಸಿ[14]ದಂಡವೈವತ್ತುಕೋಟಿ[15]ಯ ಯೋಜನಂ ಪಟ್ಟುಟಕ್ಕೆಸೆವುದು[15] ೭

1 ಲೀಲೆಯೊಳ್ (ಜ) 2 ದಂದದುರೆ (ಜ) 3 ಮುನ್ನೊರೆದಪರಿ (ಜ) 4 ರ (ಜ) 5 ಳ್ಗೆ ಬೋಧಿಸಿದ (ಜ) 6 ವಿ (ಜ) 7 ಆಗಮಂಗಳೊಳುಸುರ್ವಪರಿಯಿಂದೆ (ಜ) 8 ಚಿರ್ರೈಕಾ (ಜ) 9 ಯಮೃತತತಿಯದರಿನಿಂ (ಜ) 10 ತೈಜಸದ ದಕ್ಷಿಣಭುಜದೊ। ಳರರೆ ರಾಜಸದಿಂದಜಂ ವಾಮ ಸಾತ್ವಿಕದೆ। ಹರಿಯೊಗೆದಭಾಳತಾಮಸ ಸ್ವಯಂರುದ್ರ ತಾಂ ಜನಿಸಿದನಲ್ಲೆ ಮುನಿವರಾ (ಜ) 11 ಮಗ್ನಿ (ಜ) 12 ನಿಲ (ಜ) 13 ದೈವತ್ತು (ಜ) 14 ದ। ಮವಗವಿಸಿ (ಜ) 15 ಯೋಜನದಳತೆಯಿಂದೆಸೆವುದೈ ಕುಮಾರ (ಜ)

ಅದ ಬಳಸಿಕೊಂಡು ಜಲ[1]ಹತ್ತುಮಡಿಯಾಗಿರ
ಲ್ಕುದಕಮಂ ಮುತ್ತಿ ಶುಚಿ ಹತ್ತುಮಡಿಯಾಗಿರ
ಲ್ಕದ ಮುಸುಕಿ ವಾಯು ದಶಗುಣಮಾಗಿರಲ್ಕದಂ ಮುಚ್ಚಿ ದಶಗುಣಮಾಗಿರೆ
ಪದುಳದಿಂ ಗಗನಮಂದನಾವರಿಸಿ ಹಮ್ಮುಮೇ
ಲೊದಗೆ ದಶಗುಣದಿಂದದಂ ಮಹತ್ತತ್ವದಶ
ವಿಧದೊಳೆಸೆಯಲ್ಕದಂ ಪ್ರಕೃತಿದಶಗುಣಮಾಗಿ ಬಳಸಲಾವರಣವೇಳು[1] ೮

ಈಶಾನನಾಧಾರದಿಂದ ಸಪ್ತಾವರಣ
[2]ಕೋಶಮಿರಲಲ್ಲಿ ವಿಧಿ ಶಿವನಾಜ್ಞೆಯಿಂ[2] ಪಿಡಿದು
ಲೇಸಾಗಿಯದನೊಡೆದಂ ಮನೆಯ ಮಾಡಲ್ಕಂಡಬ್ರಹ್ಮಾಂಡಮೆಂದಾದುದು
ಶಾಶ್ವತನೆಯದಕೆಯಾಧಾರಮೇನೆನೆ ಕೇಳು
ಈಶನಡಿಯಾಜ್ಞೆಯಿಂ ವಾಯುಮದಕಾಧಾರ
ದಾ ಶಕ್ತಿಯಿಂ [3]ಚಿನ್ನದೊಡ್ಡದರೊಳಗೆ[3] ಜಲಂ ಜಲದೊಳ್ ಹಿರಣ್ಯಪದ್ಮಂ ೯

ಜಲಜದೊಳ್ ದಿವ್ಯಸಿಂಹಾಸ[4]ನಮಂದಕ್ಕೆ[4] ಮೇ
ಲಳಿಕಾಕ್ಷದಿಂದೇಕಮುಖ[5]ದಿಂ ಚತುಃ[5]ಕರದೊ
ಳಳವಟ್ಟ ಕಲಶೋತ್ಪಲಂಗಳಿಂ ವರದಾಭಯುದೆ ಹಿರಣ್ಯಾಂಗದಿಂದೆ
ನೆಲಸಿರ್ಪಳಾಧಾರಶಕ್ತಿಯಂತವಳ ನಿಜ
ಲಲಿತ ಧಮ್ಮಿಲ್ಲದೊಳ್ ಮುಡಿದ ಕನಕದ ಪತ್ರ
ದೊಲು ಹತ್ತುಕೋಟಿಯೋಜನದಗಲದಿಂದಲ್ಲಿ ಕಮಂಠ ನೆಲೆಗೊಂಡಿರ್ಪುದು ೧೦

ಅದರ ಬೆನ್ನೊಟ್ಟೆಯೊಳಗಷ್ಟದಿಗ್ಗಜಗಳುಂ
ಸದಮಳನೆಯವರ ಕೊರಳ್ಗಳ ಬಂಧಿಸುತಲಷ್ಟ
ವಿಧದ ಸರ್ಪಗಳವರ ಮಧ್ಯದೊಳ್ ಶೇಷಸಾಸಿರಶಿರಗಳಿಂ ವಹಿಸಿ ತಾ
ನದ ಪೊತ್ತಿರಲ್ಕೆರಡುಂ ಹೋಳಾದ ಕೊಪ್ಪರಿಗೆ
ಯದರಯಡಿಯಣ ಹೋಳಿನೊಳಗೇಳುಪಾತಾಳ
ಮದಂ ಮುಚ್ಚಳಂತಿರಲ್ಕವರಡಿಯು ಲೋಕಗಳ ಪರಿಯದೆಂತೆನೆ ಪೇಳುವೆ ೧೧

---

1 ಮೈನೂರುಕೋಟಿಯಂತುದಕಮಂ ಬಳಸಿಯೈದರ್ಬುದದೊಳಂ ಪವನ।ನದ ಮುಸುಱಿ ಗಗನಮೈದುಖರ್ವಂತದ ಮಹಾಪದ್ಮ ಖರ್ವಮೈದುಂ। ಒದವಿದಾಹಂಕಾರನದ ಬಳಸೈದು ಪದ್ಮ। ಮದೆ ಮಹತತ್ವಂ ಬಳಿಕದ ಬಳಸಿಯವ್ಯಕ್ತಮಂ। ತದು ಮಹಾಪದ್ಮಮೈವತ್ತುಕೋಟಿಯಿಂತಾಮಡಿಯೆ ದಶ ದಶಗಳಾಗಿ (ಜ) 2 ತೋಪಾಂಡಮೆಲ್ಲ ಶಿವನಾಜ್ಞೆಯೈಸಲೆ (ಜ) 3 ಸ್ವರ್ಣಕರ್ಪರದರೊಳ್ (ಜ) 4 ನಂತದರ (ಜ) 5 ಚತುರ್ಭುಜ (ಜ)

ಕೆಳಗಳೋಡಿನ ಮೇಲೆ ಹೇಮಮಯಭೂಮಿ[1]ಯಂದ
ರ[1]ಳತೆಯೇ ಕೋಟಿಯೋಜನಮಲ್ಲಿ ಬ್ರಹ್ಮಾಂಡ
ದಲಘುಪತಿಯಾಗಿರ್ದ ಕಾಲಾಗ್ನಿರುದ್ರ ಪ್ರಳಯಾರ್ಕಕೋಟಿಪ್ರಭೆಗಳು
ಪಳಿವುತ್ತ ದೇಹಕಾಂತಿಯೊಳು ತನ್ನ ಸಮಾನ
ಮಳವಟ್ಟಸಂಖ್ಯಾತಗಣನಿಕರ ಓಲೈಸ
[2]ಲಳಿಕಾಕ್ಷದುರಿ ಪತ್ತುಕೋಟಿ ಮತ್ತಾಗೈದುಕೋಟಿ ಧೂಮದಿನೊಪ್ಪಿದಂ[2] ೧೨

ಪ್ರಳಯ[3]ಕಾಲದಿ ಮೇರುಪರ್ಯಂತ ಬಳೆದು ಕಂ
ಗಳ ತೆರೆಯಲೂರ್ಧ್ವಲೋಕಂ ಬೇವುದಿಂತುಯು
ಜ್ವಲಿಸುತಿರಲಂತರದ[3] ಮೇಲೈದೆ ಯಮನನರಕದ ಮಂಡಲಂ ನೋಡಲಂ
ನೆಲೆಯಾಗಿ ಮೂವತ್ತುಕೋಟಿಯೋಜನದ ಮೇ
ಲಳವಟ್ಟ ಲಕ್ಷಯೋಜನ[4]ದಗಲದಿಂದೊಪ್ಪಿ[4]
ಪಲವಿಧದ ನರಕನರಕದ ಬಾಧೆಯಿಂದೆ ಯಮಲೋಕಮಿಹುದದರ ಮೇಲೆ ೧೩

ಸುವಿಧಮೂವತ್ತುಮೂರು[5]ಸಹಸ್ರಗಾವುದ[5]ದೊ
ಳವನಿಯಿರೆ ತೊಂಭತ್ತುಲಕ್ಷಗಾವುದಮವಕೆ
ಭುವಿಯೊಳಗೆ ಎಂಭತ್ತುನಾಲ್ಕುವರೆ ಲಕ್ಷಗಾವುದಮಯಸ್ಕಾಂತಭೂಮಿ
ತವೆಸುವರ್ಣದ ಭೂಮಿ ನಾಲ್ಕುವರೆಲಕ್ಷದಿಂ
ದವಿರಳದೊಳಿರಲಲ್ಲಿ ಕೂಷ್ಮಾಂಡ[6]ನಾಮಕದ
ಭುವನಮಿಹುದಲ್ಲಿ[6] ಕೂಷ್ಮಾಂಡಗಣನಾಥನತಿ[7]ಶಕ್ತಿಯಿಂ ಮೆರೆದಿರ್ಪನು[7] ೧೪

ದಂಡಪಾಣಿಯ ಮೇಲಣಧಿಕಾರಿಯಾಗಿ ಕೋ
ದಂಡಶರಫಲಕಗಳನಾಂತು ರವಿಕೋಟಿಯು
ದ್ದಂಡ ಕಿರಣಂಗಳಿಂ ಬೆಳಗುತ್ತ ಕೂಷ್ಮಾಂಡ ಗಣನಾಥ ಮೆರೆಯಲವನ
ಮಂಡಲದ ಮೇಲೆ ನವಸಾಹಸ್ರಯೋಜನದ
ದಂಢದಿಂದಗ್ರಪಾತಾಳಲೋಕದ ನಿಲವು
ಮಂಡನದ ದಶಕೋಟಿವಿಸ್ತೀರ್ಣಮುನ್ನತಂ ಪತ್ತುಸಾಸಿರ ಭಾವಿಸೆ ೧೫

---

1 ಯೊಂ।ದ (ಜ) 2 ಕಳೆವರದ ಪ್ರಭೆಯೌವನತದೆ ದಶಕೋಟಿಯೋಜನ ಪ್ರಮಾಣದಿಂ ಘಳು ಘಳಿಸುತ (ಜ) 3 ಯಾನಳಂ ರುದ್ರನಾಕಾರ ರೌದ್ರಗಣ। ಬಳವಂತರೋಲೈಸೆ ಕಾಲಾಗ್ನಿಭುವನಮು। ಜ್ವಳಿಸುತ್ತಿರಲಂತವರ (ಜ) 4 ವಿಶಾಲದೆಯೊಪ್ಪಿ (ಜ) 5 ಸಾವಿರಗಾವುದಾಂತರ (ಜ) 6 ಭುವನ ಮಂ। ತವಿಗತದ (ಜ) 7 ಪರಾಕ್ರಮದಿಂದ ಮೆರೆವುತಮಮ (ಜ)

ಅದರಗ್ರದೊಳ್ ರಸಾತಳಲೋಕವದರ ಮೇ
ಲೊದವಿದತಳಾತ[1]ಳಂ ತನ್ಮಸ್ತಕದಿ ಕುತಲ
ಮದರೂರ್ಧ್ವದಲಿ ಸುತಲಮದರೊರ್ಧ್ವದಲಿ ವಿತಲಮದರೂರ್ಧ್ವದಲ್ಲಿಯತಲಂ[1]
ಗದಿತಮಾದೇಳಕ್ಕೆ ಪಿಂದೆ ಪೇಳ್ದಂದದಿಂ
ದೊದವಿದುನ್ನತ ವಿಶಾಲಂಗಳಂ ತಿಳಿವುದೈ
ಮುದದೆಯಂತವರ ವರ್ಣಗಳರಸುಗಳು [2]ಮೂವರರ್ಚಿ[2]ಸುವ ಲಿಂಗಂಗಳಂ ೧೬

ಲಲಿತವಾದ ಕ್ರಮದಿನುಸುರ್ವೆ ಬಲವತಿಬಲಂ
ಬಲವಂತ ಬಲವಿಕ್ರಮಂ ಬಲೇಶಂ ಮತ್ತೆ
ಬಲಶಾಲಿಯುಂ ಬಲಾಢ್ಯಂ ಕರ್ತರುಗಳು ಕೇಳ್ ಶಂಕುಕರ್ಣಂ ದೈತ್ಯರ
ಕುಲವಿಪ್ರಹ್ಲಾದ ಶಿಶುಪಾಲ ಕರ್ಕಂದು ನೋ
ಡಲು ಹಿರಣ್ಯಕಬ್ರಹ್ಮದರ್ಭಬಲಿಗಳ್ ಪತಿಗ
ಳೊಲಿವು ಕುಟಿಲಕ ವಾಸುಕಿಯು ಕುಂಬಳಾಂಕ ಕರ್ಕೋಟಕಂ ಕಾಲಾಂಗನು ೧೭

ಬಳಿಕ ದುರ್ದರ್ಶ ತಕ್ಷಕರೆ ಫಣಿಪತಿಗಳು
ಜ್ವಲರಾದ ವಿಕಟನುಂ ಲೋಹಿತಾಕ್ಷಂ ಯಮಂ
ತಿಳಿಯೆ ವಿಕಟಾನನ ಕರಾಳನಾಭೀಮನಿರ್ಹಾದಪಿಂಗಲರೆರಕ್ಷೊ
ಕುಲದೊಳರಸುಗಳಿವರು ಶಿವ ಶಂಭು ಶಂಕರರೆ
ನಲು ಕಾಲಕಂಧರನುಮಾಪತಿಯು ಸರ್ವೇಶ್ವ
ರ ಲಲಿತಂ ನೀಲಕಂಠಾಭಿಧಾನರ ಲಿಂಗಮೂರ್ತಿಶಿವರಂ ಯಜಿಪರು ೧೮

ಪರಮವಾಗಿಹ ಭಾವಭಕ್ತಿಯಿಂದತಳದಡಿ
ವರವಿತಳದೂರ್ಧ್ವದೊಳಗೊಂದು ನೆಲೆ ರಾಜಿಪುದು
ಯೆರಡು ಕೋಟೆಂಭತ್ತುಲಕ್ಷಗಾವುದ ದಟ್ಟಭೂಮಿಯೆ ಸುವರ್ಣಮಯದಿಂ
ಮೆರೆದಿರ್ಪುದಲ್ಲಿ ಸಾಸಿರಯೋಜನೋನ್ನತಾಂ
ತರವಿಶಾಲದ ಗೃಹದ ಮಧ್ಯದೊಳಗತ್ಯಧಿಕೆ
ತರದ ನವರತ್ನಸಿಂಹಾಸನಾರೂಢನಾಗಖಿಳಸುರಗಣನಿಕರದಿಂ ೧೯

---

1 ಳಾಂತರವೂರ್ಧ್ವಸುತಲಮಂ। ತದರೂರ್ಧ್ವಮಹೀತ್ತಳಂತದರಂತ್ಯವಿತಳ ಕೇಳದರ ತುದಿಯೊಳ ತಳಪು (ಜ) 2 ವರುಪೂಜಿ (ಜ)

• ಜ ಪ್ರತಿಯಲ್ಲಿ ೧೭, ೧೮, ೧೯ನೆಯ ಪದ್ಯಗಳಿಲ್ಲ. ಇವಕ್ಕೆ ಪರ್ಯಾಯವಾಗಿ ಬೇರೆ ಪದ್ಯಗಳಿವೆ. ಅವನ್ನು ಅನುಬಂಧದಲ್ಲಿ ಕೊಟ್ಟಿದೆ.

ಓಲ್ಯೈಸಿಕೊಳುತ ನಿಜದೇಹಕಾಂತಿಯೊಳೆಸೆವು
ತಾ ಲಲಿತಪಾಟಕೇಶ್ವರರುದ್ರ[1]ನಿರ್ಪರೊಡ
ನೇಳುಪಾತಾಳಂಗಳಂ ಪಾಸಿಸುತ್ತ ಭೂಪೃಷ್ಠಾಂತವಾಗಿರುತಿಹ
ಮೇಲಂಗಡೆಯೊಂದುಂಕೋಟಿಯುಂ ಯೋಜನಮಿದಕ್ಕೆ
ಮೇಲೆ ದಶಸಾಹಸ್ರಯೋಜನೋನ್ನತವಾಗಿ
ಪೇಳಲೇನಿಳೆಯಿರ್ಪುದಿಲ್ಲಿಗೆಯಧಃಕಟಾಹಾಂತಮೆಂದರಿವುದೊಡನೆ[1] ೨೦

ಆಲ್ಲಿಪ್ಪ ದ್ವೀಪಗಳ ನೃಪರಶರಧಿಗಳನಂ
ತಲ್ಲಲ್ಲಿಯಾಹಾರಗಳ ಮೇರುಗಿರಿಮು[2]ಖಮ
ನುಲ್ಲಾ[2]ಸದಿಂದೊರೆವೆ ಬ್ರಹ್ಮಾಂಡದಡಿಯ ಖರ್ಪರದರುಗದಕ್ಕೆದಪ್ಪಂ
ಸಲ್ಲಲಿತ ಕೋಟಿಯೋಜನಮದರ ಮೇಲೆ ಕೇಳ್
ಬ[3]ಲ್ಲವನೆ ಇಪ್ಪತ್ತೆರಡು[3]ಲಕ್ಷಗಾವು[4]ದ
ಕ್ಕೆ[4]ಲ್ಲಿಯೊಳವಳ[5]ಯ[5] ಲೋಕಾಲೋಕ ನಗಮವಧಿ[6]ಯಾಗಿ ರಾಜಿಸುತಿರ್ಪುದು[6] ೨೧

ಮೂರುಕೋಟಿಯು[7] ಮಂಡಲಾಂಕಲಕ್ಷಂ ಮೀರಿ
ತೋರಲ್ಕೆ[7] ಯೋಜನಪ್ರಮಾಣಾಂಧಕಾರದೊ
ಳಾರಯ್ಕಲೆಸೆದಿರ್ಪುದಂಡದೋಡಿನೊಳೊಂದುಕೋಟಿ[8]ತಾರಾಂಕಲಕ್ಷಂ[8]
ಧೀರಗರ್ಭೋದಕಾಂಬುಧಿಯೆಸೆವು[9]ದದರ[9]ಲ್ಲಿ
ಸಾರಕಮಠಂ ಶೈಲಸದೃಶವಾಗಿರೆ ಮಂದ
ಚಾರಿಯಂಹ ತಿಮಿತಿಮಿಂಗಿಲಗಳುಂ ಬಲಮುರಿಯ[10]ಶಂಖಂಗಳಿರುತಿರ್ಪವು[10] ೨೨

ಪ್ರಳಯಕಾಲಾಭ್ರದೊಳ್ ಘುಡುಘುಡಿಸಿ ಪೆರ್ದೆರೆಗ
ಳಳವಿಯಿಂದಿರೆಯಪರವಳಯ ಲೋಕಾಲೋಕ
ಸಲೆ ಗೋತ್ರದಶಕೋಟಿ ಷೋಡಶ ಸುಲಕ್ಷಯೋಜನಮದರ ಮೇಲೆ ಪರಿವ
ನೆಲೆಗಾಲಿಯೊಂದು ಮೇರುವಿನಗ್ರದೊಳ್ ಶಂಖ
ಮೊಲಿದಿರಲ್ ದಿನನಾಥನದ ಸುತ್ತಿ ಬರಲವನ
ಬಲದಂಡದಿಂದೆ ತತ್ತದ್ದಿಶಾಂತರದ ದಿಕ್ಪಾಲರಂತೆಸೆವುತಿರಲು ೨೩

---

1 ಕೋಟಿದುದ।ನಾಲಾವಣ್ಮಮಂ ಪಳಿವ ಶಿವನಿಹಃಪಗೆಯಾಂಡ ಸಿಂಧುಬಲ್ಲಾಳಗೊಲಿದು। ಸೂಳೆನಂಬ್ಯಕ್ಕ ಕಮಳವ್ವೆ ಸುರಮುನಿಸತಿಯರಾಳೋಕಿಸುತೆ ಮರುಳ್ಗೊಳಿಪ ಭಿಕ್ಷಾಟಣ ಸು। ಲೀಲಾ ವಿಲಾಸವರಮೂರ್ತಿಯೆಂದದ ಪಾಟಕೇಶ್ವರಗಣೇಶನಿರ್ಪಂ (ಜ) 2 ಖ್ಯ।ಮುಲ್ಲಾ (ಜ) 3 ಲ್ಲಿದ ನೆಯಪ್ಪತ್ತೇಳು (ಜ) 4 ದಂ।ತ (ಜ) 5 ಯ ಪರಿಗಣನೆಯಧಿಕ (ಜ) 6 ಯಾಗಿ (ಜ) 7 ನಾಲ್ವತ್ತೆಂಟು ಲಕ್ಷಮಿಗೆ। ಯಾರಯ್ಕ (ಜ) 8 ಯಿಪ್ಪತ್ತೇಳು ಲಕ್ಷ ಗಾವುದದಳತೆಯಿಂ (ಜ) 9 ದಂತ (ಜ) 10 ಶಂಖನಗದಾಕಾರದಿಂದೆಸೆವುತ (ಜ)

ಅದರ[1]ವೊಳಗಡೆಯಲ್ಲಿ ಕಾರ್ತಸ್ವರದ[1]ಭೂಮಿ
ಪದೆದು ಈರೈದು ಕೋಟಿ[2]ಯಂ ಸಪ್ತಲಕ್ಷಪದ[2]
ಮದರೊಳ[3]ಗೆ ಸುರರಿರ್ಪರದರೊಳಗೆ[3]ಯರುವತ್ತುನಾಲ್ಕು ಮೂವತ್ತುಮೆರಡು
ಪದಿನಾರು ಎಂಟು [4]ನಾಲ್ಕೆರಡೊಂದಪಡೆದ[4]ಗಾ
ವುದದಲ್ಲಿ ಜಲ[5]ದುರ್ಗ ದಧಿ ಗವ್ಯ[5] ಮಧುವಿಕ್ಷು
[6]ಉದಕ[6]ಲವಣಗಳಿಂ[7]ಬ ಸಪ್ತಾರ್ಣವಂಗಳದರೊಳಗೇಳುದ್ವೀಪಂಗಳು[7] ೨೪

ವರಪುಷ್ಕರಂ ಶಾಕ[8]ಮುಂ[8] ಕ್ರೌಂಚ[9]ಮುಂ ಕುಶ
ಸ್ಥಿರ[9] ಶಾಲ್ಮಲಿ[10]ಯು ಪ್ಲಕ್ಷಮುಂ ಜಂಬುವೆಂದು ಶು
ಚ್ಯ[10]ರುಣ ಕಪಿಲಂ ನೀಲಶ್ವೇತರಕ್ತಂ ಚಿ[11]ತ್ರಮೆಂಬ ವರ್ಣಂಗಳಿಂದ[11]
ಮೆರೆವ ಲಿಂಗಗಳೆ ಸೋಮೇಶ ವಿಶ್ವೇ[12]ಶ್ವರಂ
ಗಿರಿಶಭೀಮಸ್ಥಾಣುರುಂದ್ರಹರನಾಮದಿಂ
ಮೆರೆಯುತಿರಲಾಯಾ ಮಹಾದ್ವೀಪವಾಸಿಗಳ್ ಭಕ್ತಿಯಿಂ ಪೂಜಿಸುವರು[12] ೨೫

•ಸ್ವಾಯಂಭುವಾಖ್ಯಮನುವಿಂ ಪ್ರಿಯವ್ರತನುದಿಸಿ
ರಾಯನಾಗಿರುತ ಭೂವಲಯಕ್ಕೆ ಮಕ್ಕಳಂ
ನಾಯಕರ ಮಾಡಿದಂ ತನ್ನೇಳುಮಂದಿಯುಂ ಮೇಲೇಳು ದ್ವೀಪಗಳಿಗೆ
ಆಯಣುಗರೊಳು ಪಿರಿಯನೆನಿಸುವಗ್ನೀಧ್ರನಿಗೆ
ದಾಯಾದರೊಂಭತ್ತುಮಂದಿ ಜನಿಸಿದರವರಿ
ಗೀಯವನಿಯುಂ ನವವಿಭಾಗಮಂ ಮಾಡಿಕೊಡಲವು ತತ್ತದಭಿಧಾನದಿಂ ೨೬

ಭರತ ಕಿಂಪುರುಷಂ ಇಳಾವೃತಂ [13]ರಮ್ಯಕಂ
ಹರಿಹಿರಣ್ಯಕ ಕೇತುಮಾಲ ಭದ್ರಾಶ್ವಮು
ತ್ತರಕುರುಗಳೆಂದು ನವವರ್ಷಂಗಳಾದವಾ ಸೀಮಾನಗಂಗಳಿಂದ
ಅರಿಯೆ ನೀಲಶ್ವೇತಶೃಂಗಂಗಳೆಂಬ ಉ
ತ್ತರದಲ್ಲಿ ನಿಷಧಮಂ ಹೇಮಾದ್ರಿ ಹೇಮಕೂ
ಟ ರುಚಿರಾದ್ರಿಗಳೆ ದಕ್ಷಿಣದಲ್ಲಿ ಪೂರ್ವಭಾಗದಲಿಹುದು ಮಾಲ್ಯವಂತಂ[13] ೨೭

---

1 ವಳವಳಯದೊಳ್ ಸೌವರ್ಣಮಯ (ಜ) 2 ಯಾಂ ಮೆಟ್ಟರಳಕ್ಷ (ಜ) 3 ಮರರು ಮಿರ್ಪರೀಚೆ (ಜ) 4 ನಾಲ್ಕುಂ ಮೂರುಲಕ್ಷ (ಜ) 5 ದುಗ್ಧದಧಿಸರ್ಪಿ (ಜ) 6 ವೊದವಿ (ಜ) 7 ಬೇಳಾರ್ಣಗಳ್ ಬಳಸಿದೆಡೆಯಣ ಧರಣಿ ಸಪ್ತದ್ವೀಪಂ (ಜ) 8 ಮಾ (ಜ) 9 ಕುಶಕೇ। ಳುರೆ (ಜ) 10 ಪ್ಲಕ್ಷ ಮತ್ತೆ ಜಂಬುದ್ವೀಪ। ಮಿರದವರವರ್ಣಸುಚಿಯ (ಜ) 11 ತ್ರವು (ಜ) 12 ಷನಂ ತುರ ಸ್ಥಾಣುರುದ್ರಭೀಮೇಶ್ವರ ಹರನಾಮ ಪರಿವಿಡಿಯೊಳಲ್ಲಿ ಪ್ ಷ್ಕನಾದಿಗಳೆ ಕರಿನೃಪರ ತತ್ಕ್ರಮದೊಳು (ಜ) 13 ಮೆರೆವನೀ। ಹರಿರಮ್ಯಕಂ ಹಿರಣ್ಮಯ ಕೇತುಮಾಲ್ಯನುಂ। ಕುರುನು ಭದ್ರಾಶ್ವನೊಂಭತ್ತಕ್ಕೆ ಕೋಟಿಲಕ್ಷಾವನಿಯ ಹಂಚಿತ್ತೊಡೆ।ಮೆರೆವುತಿಹದವರ ಪರನಾಮದಿಂ ನವಖಂಡ।ಮರರೆಯಂತಲ್ಲಿ ಹಿಮಹೇಮನೈಷಧ ನೀಲ। ಗಿರಿಶ್ವೇತಶೃಂಗಮಾಂಗಲ್ಯವಾನ್ ಗಂಧಮಾದನ ಯಷ್ಟನಗಗಳೆಸೆಯೆ (ಜ)

•ಉತ್ತಮವಂತೆ ಪಶ್ಚಿಮದಿ ಗಂಧಮಾದನಮಿಹಂದು
ಮತ್ತೆ ಮೇರುವಿನ ಕೀಲಕಸಾನುಮಂತಗಳ
ನೊತ್ತರಿಸಿದುಪಪರ್ವತಂಗಳಲಿ ಹಿಮವಂತವೆಂಬ ಪರ್ವತದ ಕಡೆಯಿಂ
ಹತ್ತುಸಾವಿರಗಾವುದದ ಮಾನದಿಂ ಭಾರ
ತೋತ್ತುಂಗಖಂಡ ಮೇರುವಿಗೆ ದಕ್ಷಿಣವಾಗಿ
ಚಿತ್ತರದ ವರ್ಣಭೂಮಿಗಳಿಂದಲಿಂತೆಸೆವ ಚಿತ್ತದ ವಿಕಾರದಿಂದ ೨೮

•ಕೊಪ್ಪನೇರಿಸಿದ ಬಿಲ್ಲಿನ ತೆರದೊಳಿಹುದಲ್ಲಿ
ತಪ್ಪಿನಾಟವನಾಡಿದರು ಸಜ್ಜನರ ಕೂಡ
ಡೊಪ್ಪದಿಂ ನಡೆದರಾ ಫಲಗಳಿತರದ್ವೀಪ ವರ್ಷಲೋಕಂಗಳಲ್ಲಿ
ಮುಪ್ಪನೈದದೆ ಭುಂಜಿಸುವರಾಗಿ ಜಂತುಗಳ್
ತಪ್ಪಿದೀ ವರ್ಷಕ್ಕೆ ಕರ್ಮಭೂಮಿಯೆನುತ್ತ
ಲಪ್ಪವರ್ ಪೇಳುವರ್ ಕರ್ಮಭೂಮಿಯನೈದಿ ಸುಕೃತಮಂಗೈವುದೆಂದು ೨೯

ಬಳಿಕ ಹಿಮಗಿರಿಯಗಲ ಸಾವಿರದ ಗಾವುದವ
ದಳತೆಯಿಮ್ಮಡಿಯಲ್ಲಿ ಸುರರು ಸದ್ಭಕ್ತಿಯಿಂ
ದಳಿಕಾಕ್ಷನಂ ಪಾರ್ವತೀಶ[1]ನಂ ಯ[1]ಜಿಸಿ ಸೌಭಾಗ್ಯಸುಖದಿಂದಲಿಹರು
ಒಲಿದು ಹಿಮನಗದಿಂದಲುದಿಸಿ ದಕ್ಷಿಣಭಾಗ
ದೊಳಗೆ ಭಾಗೀರಥಿಯ ನಾಮದಿಂ ಗಂಗೆ ತಾಂ
ಸುಳಿದು ಸಾಗರಗಾಮಿಯಾಯ್ತುಲಾ ತತ್ರಿಯಂಬಕ ಗೋತ್ರದಿಂದುದಿಸುತ ೩೦

[2]ಆ ದೇವನದಿಯೆ ಗೋದಾವರೀಯೆನಿಸಿದುದು[2]
ಮಾದೇವನಾಜ್ಞೆಯಿಂ ಸಹ್ಯಗಿರಿಯೊಳ್ ಪುಟ್ಟಿ
ತಾದುದದು ಕೃಷ್ಣವೇಣಿಯು ಮತ್ತೆ ತುಂ[3]ಗೆ ನೇತ್ರಾವತಿಯು ಸಿದ್ಧವಾಗಿ[3]
ವೇದಗಿರಿಯಿಂದುದಿಸಿ ಪೂರ್ವಪಶ್ಚಿಮಮಾಗಿ
ಮೇದಿನಿಯೊಳವು ಚಲಿಸುತಿಹವು ನೀಲಾದ್ರಿಯೊಳ
ಗಾದುದೈ ಕಾವೇರಿಯಿನ್ನುಳಿದ [4]ನದಿಗಳಂ ಪೇಳಲ್ಕೆ ಗ್ರಂಥಬಹುಳಂ[4] ೩೧

---

1 ನಂದೆ (ಜ) 2 ಗೋದಾವರೀಗಂಗೆಯೆಂಬ ಪೆಸರಾಂತದದು (ಜ) 3 ಗಭದ್ರಾ ನೇತ್ರಾವತಿ ಗಳಧಿಕ (ಜ) 4 ನದಾನದಿಗಳಂ ಪೇಳೆ ಗ್ರಂಥಭಾರಂ (ಜ)

* ಜಪ್ರತಿಯಲ್ಲಿ ೨೬, ೨೮, ೨೯ನೆಯ ಪದ್ಯಗಳಿಗೆ ಬದಲಾಗಿ ಬೇರೆ ಪದ್ಯಗಳಿವೆ. ಅವನ್ನು ಅನುಬಂಧದಲ್ಲಿ ಕೊಟ್ಟದೆ.

[1]ಬಳಿಕ ವಿಂಧ್ಯಾಚಲಂ ಶ್ರೀಶೈಲ ಸಹ್ಯಗಿರಿ
ಮಲಯಪರ್ವತ ಕಾಲಹಸ್ತಿಯು ಕಕುದ್ಗಿರಿಯು
ಲಲಿತವೃದ್ಧಾಚಲಂ ರತ್ನಗಿರಿಯರುಣಾದ್ರಿಯೆಂ*[ಬ]* ಪರ್ವತಗಳಿಹವು
ಲಲಿತ ಪುಣ್ಯದಗಳಾ [1]ಹಿಮನಗದ ಬಡಗಲೊಳ್
ತಿಳಿಯೆ ಕಿಂಪುರುಷ ವರುಷಂ ಪೂರ್ವಪಶ್ಚಿಮಕೆ
ಯಳವಟ್ಟ ಮಾರ್ಗದಂತೆರಡಂಬುನಿಧಿಗಳಂ ಕೂಡಿ ರಾಜಿಸುತಿರ್ಪುದು ೩೨

ಪೀತಾಭಧರೆ ನವಸಹಸ್ರಯೋಜನದಗಲ
ವಾ ತಾಪನೀಯ[2]ನಿಭತನುಕಾಂತಿ ಜನರು ತಾ
ವೋತುದುಂಬರ ಫಲಾಹಾರದಿಂ ಮೇಲೆ[2] ಸಾಹಸ್ರಾಬ್ದ ಜೀವಿಸುವರು
ಖ್ಯಾತವರ್ಷಂ ಹೇಮನಗಮವಧಿಯಾಗಿ [3]ಜೀ
ಮೂತಮಂದು ಸಾಹಸ್ರಯೋಜನಾಯತಮುದ್ದ
ವಿೂತೆರದಲಿಮ್ಮಡಿಸಲೀಶಾನಲಿಂಗಮಂ ಭಜಿಪರಲ್ಲಿರುವ ಸುರರು[3] ೩೩

ಆದರುತ್ತರದ ಹರಿಯ ವರ್ಷನವಸಾಹಸ್ರ
ಮದು ರಜತವರ್ಣ ಧರೆ ರಜತಾಂಗದೇಹಿಗಳ್
ವಿದಿತೇಕ್ಷುರಸಪಾನದಿಂದ ಸಾವಿರವರ್ಷದಾಯುವಿಂದೀಶಾನನಂ
ಪದುಳದಿಂ ಭಜಿಸು[4]ತಿಹರ[4]ದರುತ್ತರದ ನಿಷಧ
[5]ಪದಕ ನಗದುನ್ನತಮದ್ಯೈದುಸಾವಿರವೆ ಗಾ
ವುದ[5] ಗಿರಿತ್ರಯಗಳಿರ್ಕೆಲದೊಳಬ್ಧಿಯ ಕೂಡಿ ರಾಜಿಸುತ್ತಿಹುದಲ್ಲಿಯೆ ೩೪

ಹೇಮವರ್ಣ[6]ವನೊಂದಿ[6] ಸ್ಥಾವರಚರಾಳಿಗಳ್
ಪ್ರೇಮದಿಂದಿರೆಯುಭಯವರ್ಷದಂತ್ರರಭಾಗ
ವಾ ಮಹದಿಳಾವೃತವೆ ಮೇರುವಿಹ ವರ್ಷಮದು ಷೋಡಶಸಹಸ್ರಮಾನಂ
ಹೇಮಾದ್ರಿಯೇಯಧಿಷ್ಠಾನಮಾ ನಾಲ್ದೆಸೆಯ
ಸೀಮೆ ನವಸಾಹಸ್ರಯೋಜನಪ್ರಮಾಣ ಕೇಳ್
ಧೀಮಂತಮಾಲ್ಯವನ್ನಗಪೂರ್ವಮಾಗಿಹುದು ಗಂಧಮಾದನ ಪಶ್ಚಿಮಂ ೩೫

---

1 ಉಳಿದ ಪರ್ವತಮಂತೆ ಮತ್ತೆ ಕಾಶಿಯಿನಧಿಕ। ಬಳವಂತದಾ ಕಕುದ್ಗಿರಿ ಹಿಮಾಚಲಸೇತು। ಕಳೆಯಾಂತ ಕಾಳಹಸ್ತಿ ಕಾಂಚಿ ಹಂಪೆ ಶ್ರೀಗಿರಿಮುಖ್ಯಕ್ಷೇತ್ರಂಗಳ। ಕುಳಮತಿಶಯಂ ಬಳಿಕ (ಜ) * ಬಭಿಧಾನ (ಕಗ) 2 ಕಾಂತಿಯುತ ದೇಹದಾತ್ಮ ಓತುವತ್ತಿಯ ಪಣ್ಗಳಾಹಾರದಿಂದೆ (ಜ) 3 ಗಿರಿ। ಸಾತಿಶಯದುದ್ದ ಸಾಯಿರ ಗಾವುದದರಗಲ। ಮೋತರ್ಧಮಾನವಿೂಶಾನಲಿಂಗವನಲ್ಲಿ ಭಜಿಸುವರು ಸುರರು ಸತತಂ (ಜ) 4 ವರುವ (ಜ) 5 ಗದಿತನಗದುನ್ನತಂ ಸಾಸಿರೈನೂರಗಲವೊದ।ವಿದ (ಜ) 6 ದೊಳಲ್ಲಿ (ಜ)

ಬಡಗಲದು ನೀಲಾದ್ರಿಜಂಬೂಫಲಾಹಾರ
ದೊಡನೆ ಪದಿಮೂರಂಸಾಸಿರವರ್ಷದಾಯುಂಷ್ಯ
ವೊಡವೆರದು ಭಜಿಪರೀಶ್ವರನಾಮಲಿಂಗವಂ ಹೇಮಾಭವರ್ಣದವರು
ಸಡಗರದ ನೀಲಾದ್ರಿಯಗಲ ದಶಸಾಹಸ್ರ
ವೊಡನುದ್ದವೊಂದುಸಾಸಿರ ಗಿರಿತ್ರಯಖಂಡ
ವಂಡರಿ ಮೂಡಣಪಡುವಣಂಬುಧಿಯ ಕೂಡಿಹವು ಮುಂತೆ ರಮ್ಯಕವರ್ಷವು ೩೬

ವಿದಿತ ನವಸಾಹಸ್ರಯೋಜನ ಮಿತಂ ನೈಲ್ಯ
ಮೊದವಿದತಿಗಂವಟಫಲಾಹಾರದಿಂ ಕಾಲ
ಕೊದಗಿದೀರ್ರೈದುಸಾಸಿರವರ್ಷದಾಯುಷಂ ಹರನಾಮ ಲಿಂಗದಲ್ಲಿ
ಪದುಳದಿಂ ಪೂಜಿಸುವರದರುತ್ತರದ ಶ್ವೇತ
ಕುಧರಸಾಸಿರ[1]ಯೋಜನೋನ್ನತಂ ಮತ್ತಲ್ಲಿ[1]
ಮದನಾರಿಯಂ ಪೂಜಿಸುತ್ತಮರರಲ್ಲಿರ್ಪರದರ ಬಡಗಣದೆಶೆಯೊಳಂ ೩೭

ವರಹಿರಣ್ಯಕವರ್ಷಮದುವೆ ನವಸಾಹಸ್ರ
[2]ಪರಿಮಾಣಯೋಜನಂ ಪೊಂಗಿತ್ತಳೆಯ ಫಲವ
ನುರೆ[2]ಸೇವಿಸುತ್ತ ದಶ[3]ಸಾಹಸ್ರಾ[3]ದಾಯು ಮತ್ತದರುತ್ತರಸ್ಥಶೃಂಗ
ಗಿರಿಯದು ಸಹಸ್ರಯೋಜನದಗಲಮುದ್ದಮ
ಲ್ಲಿರದೆ ರುದ್ರಾಹ್ವಯದ ಲಿಂಗಮಂ ಭಜಿಸುತ್ತ
ಸಂರರಿರ್ಪರದರ ಬಡಗಲದು ಕುರುವರ್ಷ ಯೋಜನನವಸಹಸ್ರ ಮತ್ತೆ ೩೮

ಕದ್ದಾ[4]ಳಿಯಂತೆ ಬಣ್ಣದಿ ಪೊಳೆವುತಿಹುದು ಲವ
ಣಾಬ್ಧಿಯಂ ಬಡಗಲಲ್ಲೈದಿ ಭಾರತದಂತೆ
ತಿದ್ದಿಯೇರಿಸಿದ [4]ಬಿಲ್ಲಂತಿರ್ಪುದಲ್ಲಿ ಪದಿನಾರು ಸಾಸಿರವರ್ಷದ
ಸದ್ಧರ್ಮದಾಯುತರು[5]ವಿಂ ಕಾಮ[5]ಫಲಗಳಂ
ಮೆದ್ದು ಜೀವಿಸುತ ಯಜಿಪರು ರುದ್ರನಂತದಂ
ಹೊದ್ದಿದಾ ಲವಣಾಬ್ಧಿ ಉತ್ತರದಯೆಡೆಯ ಭೂಮಿ[6]ಯ ಸುಪ್ರದೇಶದಲ್ಲಿ[6] ೩೯

---

1 ದುದ್ದವದರಗಲ ಮಂತಲ್ಲಿ (ಜ) 2 ವರಧವಳದೇಹಿಗಳೆಯಲ್ಲಿ ಕಿತ್ತಳಿಯಫಲ। ಮುರೆ (ಜ) 3 ಸಹಸ್ರಾಬ್ದ (ಜ) 4 ಳಸುಯವರ್ಣಮದು ಬಡಗಲದ ಪೀನದ್ದಾಲವಣಾಬ್ಧಿಪರಿಯಂತ ಭಾರತ ದವೋ। ಉದ್ಧತದ ಬಿಗಿದ (ಜ) 5 ಗಳಿನ್ನಿಚ್ಛಾ (ಜ) 6 ಯೊಳ್ ನೋಡೆ ಮುದದಿಂ (ಜ)

ವರಚಂದ್ರ[1]ಭದ್ರಾಂಕಪದಪೂರ್ವಕದ್ವೀಪ
ಮೆರಡುಶಶಿಕೈರವದ ಸುಮದಂಡವಲ್ಲೊಪ್ಪ
ತಿರಲಲ್ಲಿ[1] ಪುಂಡ್ರೇಕ್ಷುರಸಪಾನ [2]ಪದಿಮೂರುಸಾವಿರದ ಸಂವತ್ಸರಂ
ವರಮಾಯುವವರ್ಗೆ ನೆರೆಸುಖಿಗಳಾ[2] ರಂದ್ರನಂ
ದೊರೆವಡೆದಂ ಭಜಿಸುವರು [3]ಮಧ್ಯವೇಲಾವೃತದ
ವರುಷವಿಹುದದಕೆ ದಶಸಾಹಸ್ರಯೋಜನದಿ ಮಾಲ್ಯವಂತಂ ಪ್ರಾಗ್ಗತಂ[3] ೪೦

ಎರಡುಸಾಸಿರಗಾವುದಗಲ[4]ವಾಯುತಮುಳ್ಳ
ಗಿರಿಗಳೇ ನಿಷಧ ನೀಲಗಳೇಳುಮೂವತ್ತುಸಾ
ಸಿರಯೋಜನೋನ್ನತಗಳವರಗ್ರದಲ್ಲಿ ಪರಶಿವನಾಮಲಿಂಗವನ್ನು[4]
ಸುರರು ಪೂಜಿಪರದರ ಮೂಡಲೊಳಗಳವಟ್ಟ
ಧರಣಿ ಮೂವತ್ತುಮೂರ್ಥಾಸಿರಂ ಭದ್ರಾಶ್ವ
ವರುಷಸಾಗರಮವಧಿಯಾಗಿರ್ಪುದಲ್ಲಿ ಭದ್ರಾಶ್ವರಾಜಂ ಮೆರೆವನು ೪೧

ಅಲ್ಲಿರ್ಪ ದೇಹಿಗಳ್ ಚಂದ್ರಾತಪಂ ಪಳಿವ
ಸಲ್ಲಲಿತ ಮೆಯ್ಯವರು ಮಾದೇವಲಿಂಗಮ
ನ್ನಲ್ಲಿ ಭಜಿಸುತ್ತ ದಶಸಾಹಸ್ರವರ್ಷದಾಯುಷ್ಯದಿಂ ಕನ್ನೈದಿಲಂ
ಉಲ್ಲಾಸದಿಂ ಮೆದ್ದು ಜೀವಿಸುತ ಮತ್ತೆ ಮುಂದ
ದಲ್ಲಿ ಸುರಗಿರಿಗೆ ಪಶ್ಚಿಮಗಂಧಮಾದನಂ
ನಿಲ್ಲುತ್ತರಕೆ ದಕ್ಷಿಣಕೆ ನೀಲನಿಷಧಾದ್ರಿಯವಧಿಯಾಗಿರುತ ಸತತಂ ೪೨

ಮೆರೆವುದೈ ಮೂವತ್ತುಸಾವಿರದ ಮಾನದಿಂ
ಹರನಂಗ್ರ[5]ನಂ ಯ[5]ಜಿಪರದರ ಪಡುವಣದೆಸೆಯ
ವರಕೇತುಮಾಲ್ಯಧರೆ ಪಶ್ಚಿಮಾಂಬುಧಿಯವಧಿಯಾಗಿ ಮೂವತ್ತಮೂರು
ನಿರತಸಾವಿರಗಾವುದಮುದಾಗಿ ಕನ್ನೈದಿ
ಲರಲ ಹಬೆಯುವರು ಕಂಟಿಕೆಫಲಾಹಾರದಿಂ
ದಿರುವರೀರೈದುಸಾಸಿರವರ್ಷದಾಯುವಂತಲ್ಲಿಪ್ಪ ಕಂಲನಗಗಳಂ ೪೩

---

1 ದ್ವೀಪಭದ್ರಾಕರದ್ವೀಪಮಂ। ತೆರಡು ಶಶಿಯಂ ಪೋಲ್ವ ಕೈರವದ ಕುಸುಮಂದಂ। ತಿರಲೊಪ್ಪ ತಿರಲಲ್ಲಿ (ಜ) 2 ತ್ರಯೋದಶ ಸಹಸ್ರಾಬ್ದದ। ಪರಮಾಯುವರ ಜ್ಯೋತ್ಸ್ನಾಂಗಿಗಳ್ (ಜ) 3 ಮತ್ತೆ ಮಧ್ಯದಯಿಳಾ।ವರುಷವಾ ಪ್ರಾಗ್ದೆಸೆಯಮಾಲ್ಯವಾನ್ನಗದಶಸಹಸ್ರೋನ್ನತಂ ಭಾವಿಸೆ (ಜ) 4 ಬಳಿಕ ಯಮನು।ತ್ತರದವಳ ನಿಷಧ ನೀಲಗಿರಿಗಳ್ ಮೂವತ್ತು।ಮರರೆ ನಾಲ್ಸಾಸಿರಂ ಸುಗಾವುದುದ್ದದಗ್ರ ದೊಳ್ ಪರಶಿವನಾಮಲಿಂಗವನಿಶಂ (ಜ) 5 ನೆಂದೆ (ಜ)

ಕೇಳು ಭದ್ರಾಶ್ವದೊಳ್ ದೇವಕೂಟದ ಜಠರ
ಪಾಳಿಯಿಪ್ಪತ್ತೈದು ಸಾಹಸ್ರ ವಿಸ್ತೀರ್ಣ
ಮಾಳೋಕಿಸಲ್ಕೊಂದುಸಾಹಸ್ರಯೋಜನೋನ್ನತಮಲ್ಲಿ ಬಾಲರವಿಯ
ಹೋಲುವೆಯ [1]ತನಂವವರು ಯು[1]ಜಿಪರು ತ್ರಿಣೇತ್ರನಂ
[2]ಮೇಲೆ[2] ಹರಿವರ್ಷಮೈದೈದು ಸಾವಿರ[3]ಮಾನ
ಮೂಲದೊಳು[3] ಮೂರುಸಾಸಿರದಗಲ ಮೂರುಸಾಸಿರದುದ್ದ ರಜತಾಚಲಂ ೪೪

ಮೇಲೆ ಹದಿನಾರು ಸಾವಿರ ಹರಹಿನಲ್ಲಿ ಸುರ
ಜಾಲ ಭಜಿ[4]ಪುದು[4] ಮಹಾದೇವನಂ ಘನಕೇತು
ಮಾ[5]ಲ[5]ವರ್ಷಂ ಪಂಚವಿಂಶತಿ ಸಹಸ್ರಯೋಜನಮಲ್ಲಿ ಪಾರಿಯಾತ್ರಂ
ಮೂಲನಗ ಮೂರುಸಾವಿರದಗಲ[6]ವಿಂಮ್ಮಡಿಯ
ಮೇಲುಂಗಡೆ ಮರಕತಚ್ಛವಿ ತದಗ್ರದಿ ಸುರರು
ಶೂಲಪಾಣಿಯು ಪೂಜಿಪರು ಪಂಚವಿಂಶತಿಸಹಸ್ರಯೋಜನರಮ್ಯಕಂ[6] ೪೫

[7]ಹಿಂಗದ[7]ರುಣಾದ್ರಿ [8]ಮೂರಾರು ಸಾಸಿರದ ಘನ
ತುಂಗಯೋಜನಮಾಗಲಲ್ಲಿರುವವರು[8] ಕುಂಕು
ಮಾಂಗದಮರರು ಭಜಿಪರಭವನಾವಂ[9]ಕ[9]ಲಿಂಗವನ್ನಿಳಾವೃತವರ್ಷದ
ಮುಂಗಡೆಯ ಮೂಡಲೊಳ್ ಕನಕಾಭದಿಂ ಮಂದ
ರಂ ಗಾಡಿಯಿಂ ನಾಲ್ಕುಮರೆಸಾಸಿರ[10]ದ ಗಡಿಯ
ನಂ[10]ಗವಿಸಿ ಮೂರುಸಾವಿರದಗಲ ಪನ್ನೆರಳ್‌ಸಾಸಿರ[11]ದ ತುಂಗ[11]ದಲ್ಲಿ ೪೬

ಕಡವರದ ನೆಲ ಸಾಸಿರಂಗಾವುದಳತೆಯಿಂ
ವಿಡಿದಿಹುದು ಮತ್ತಧಿಕಚೈತ್ರರಥವನವೊಂದು
ಕಡೆಯಲ್ಲಿ ಸಾಹಸ್ರಯೋಜನ ವಿಶಾಲದಿಂದಲ್ಲಿಯರು[12]ಣಾಬ್ಜ[12] ಸರಸಿ
ಬೆಡಗಿನಿಂದೈನೂರು ಯೋಜನವಿರಲ್ ಸುರರು
ಮೃಡನ ತತ್ಪುರುಷಾಂಕನದೆ ಭಜಿಸುತಿಹರಲ್ಲಿ
ಯೊಡನಿರ್ಪನೀಶನುಮೆಂಯಿಂದಲಾ ಮಂದರಕೆ ತೆಂಕಲೊಳ್ [13]ವಿಷ್ಕಂಭದ[13] ೪೭

---

1 ದೇಹದವರೆ (ಜ) 2 ಪೇಳೆ (ಜ) 3 ಪ್ರಮಾಣಿ। ನೊಳುಯೊಳು (ಜ) 4 ಪರು (ಜ) 5 ಲ್ಯ (ಜ) 6 ಮಾವರರಿಯುದ್ದ। ದಾ ಲಲಿತ ಪಚ್ಚವಣ್ಣದರಗ್ರದೊಳ್ ಸುರರು। ಶೂಲಪಾಣಿಯನೀಶನೆಂದು ಪೂಜಿಪರು ರಮ್ಯಕ ಪಂಚಪಂಚಸಹಸ್ರಂ (ಜ) 7 ಶೃಂಗಾ (ಜ) 8 ತ್ರೈಸಾಹಸ್ರವಿಸ್ತೀರ್ಣ ಮುತ್ತುಂ ಗೋನ್ನತಂ ಷಟ್ಸಸಹಸ್ರಂಯೋಜನ (ಜ) 9 ದ(ಜ) 10 ಸೀಮೆಯೊ। ಳಂ (ಜ) 11 ದುದ್ದದಗ್ರ (ಜ) 12 ಣಾಂಬು (ಜ) 13 ನಿಷ್ಕಂಭವು (ಜ)

ಗಿರಿಯೆ ಚತುರರ್ಧಸಾಹಸ್ರ ಯೋಜನ[1]ಮಾನ[1]
ಪರಿಮಿತದೆ ಮೂರುಸಾವಿರದಗಲ ನಾಲ್ಕುಮಡಿ
ಯಿರದುದ್ದಮಲ್ಲಿ ಸಾಹಸ್ರಯೋಜನ ವಿಶಾಲೋನ್ನತದ ಜಂಬುವೃಕ್ಷಂ
ಇರೆಯದರ ಪಣ್ಗಳ್ ಮಹಾಕರಿಯ ಮಾನದಿಂ
ದಿರದುದುರಲಾಗೊಡೆವುತಾ ರಸಂ ಪಶ್ಚಿಮಕೆ
ಪರಿಯಲದು ವರಜಂಬುನದಿಯಾ[3]ದುದರಿಂ ಜಂಬೂದ್ವೀಪಮಾಯಿತಲ್ಲಿ[3] ೪೮

ತ್ರಿದಶರರ್ಚಿಪರಘೋರೇಶನಾಮದ ಶಿವನ
ಮುದದಿಂದ ಮತ್ತೆ ಕೇಳ್ ಗಂಧಮಾದನವನಂ
[4]ಪದದಿಂ[4] ಸಹಸ್ರಯೋಜನಮದರ ಪೆಸರಕೊಳಮೈನೂರುಗಾವುದಮಿರೆ
ಉದಿಸಿದತಿಸೌಂದರ್ಯಮುಳ್ಳ ಶುಭ್ರಾಬ್ಜಂಗ
ಳೊದವಿರಲಘೋರಮೂರ್ತಿಯ ವೀರಭದ್ರಾದ್ಯ
ರೊದಗಿ ಪೂಜಿಪರು ಮೇರುವಿನ ಬಡಗಲು ನಾಲ್ಕುವರೆಸಾಸಿರಂ ಗಾವುದಂ ೪೯

ಸೀಮೆಯೊಳ್ ವಿಷ್ಕಂಭಗಿರಿ ಮೂರುಸಾ[5]ವಿರದ
ಭೂಮಿಯಿಂದಿದರ[5] ನಾಲ್ಮಡಿಯುದ್ದ[6]ಮಾಗಿಹುದು[6]
ಹೇಮವ[7]ರ್ಣದ ಪತ್ರದಿಂದಿರ್ಪವಲ್ಲಿಯಶ್ವತ್ಥವೃಕ್ಷಂ ದೆಶೆಗಳಂ[7]
[8]ತಾಮುಟ್ಟಿ ಸಾಹಸ್ರಯೋಜನೋನ್ನತಮಾಗು
ತಾಮರದ ಬಳಿಯೊಳ್ ಸರಂ ಕಂಗೊಳಿಪುದದರ
ಧಾಮದಿಂದೊಸರ್ವ ನದಿಯೋ ಸುರಭಿಯದರ ಬಳಿಯಲ್ಲಿ[8] ವೈಭ್ರಾಜವೆಂಬ ೫೦

ವನಮಿರ್ಪುದಲ್ಲಿ ಸದ್ಯೋಜಾತಲಿಂಗಮಂ
ವಿನಯದಿಂ [9]ಯ[9]ಜಿಸುವರು ಸುರರು ಸುರಗಿರಿಗೆ ಕೇ
ಳನುವಿನಿಂದುತ್ತರದ ವಿಷ್ಕಂಭನಗ ನಾಲ್ಕುವರೆಸಾಸಿರ[10]ದ ಗಾವುದಂ
ತನಗಾಗಲಾರುಸಾಸಿರಯೋಜನೋಚ್ಚನಂ
ದನವನಂ ಕುಂಕುಮದ ಸರಸಿಯಿಂದೇಕಯೋ
ಜನಸಹಸ್ರದೊಳಿರಲ್ಕಲ್ಲಿ ಬೋಳೆಯರರ್ಚಿಪರ್ ವಾಮದೇವೇಶನಂ[10] ೫೧

---

1 ಸೀಮೆ (ಜ) 2 ಪ್ರಮಾಣಮುದುರಿ । ಧರೆಯೊಳೊ (ಜ) 3 ಯ್ತದರಿನಿಂ ಜಂಬುದ್ವೀಪದ ಪೆಸರು ಮತ್ತಾನದಿಯೊಳು (ಜ) 4 ಸದಮಳ (ಜ) 5 ಸಿರಂ। ತಾಮದರಗಲ (ಜ) 6 ಮರ್ದಮದು (ಜ) 7 ರ್ಣಂವರ್ದ ಶಶಿಕಾಂತಿಯದರಗ್ರದೊಳ್ ಅರಳಿಮರನದೊಂದು (ಜ) 8 ನೇಮದಿಂದೆಸೆವುದು ಸಹಸ್ರಯೋಜನದೊಳೆ ಮಗನೆಯಲ್ಲೊಂದು ಸರಸಿ ಸಾಸಿರದೊಳರ್ಧಮಾನದಿಂದಿರಲ್ಕಲ್ಲಧಿಕಸುರಭಿ ನದಿ ಯೆಸೆಯೆ (ಜ) 9 ದೆ (ಜ) 10 ಮಗಲಮೂರು। ತನಯನೀರಾರು ಸಾಸಿರದುನ್ನತದೊಳೊಂದು ಘನಸುಮನೆ ನಂದನವನಂ ತಾಂ ಸಹಸ್ರಯೋಜನ ಕುಂಕುಮದ ಛವಿಯ ಜಲಪೂರ್ಣಸರಸಿ ಸುರರು ವಾಮದೇವನ ಭಜಿಪರು (ಜ)

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತವೇದ ಪೌರಾಣಿಕಾಗಮಾದ್ಯಖಿಳ ವರ
ಮಂತಶಾಸ್ತ್ರ ಮಂಜುಳಸುಪುಂಜರಂಜಿತ ಪುರಾತನ ವಚನಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತ[1]ರೂಪರಹ ಚತುರ್ಗುರುಚರಿತದೊಳ್ ಪಂಚ
ದತಿನೂತ್ನವಹ ಕಾಂಡದೊಳ್ ನೋಡಲೊಂದನೆಯ ಸಂಧಿ ಸಂಪೂರ್ಣವಾಯ್ತು[1] ೫೨

•ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕೋರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರಿಗಿಷ್ಟಾರ್ಥಮಹುದಂ ಸತ್ಯಂ ೫೩

---

೯ಗ ಪ್ರತಿಗಳಲ್ಲಿ ೫೩ನೆಯ ಪದ್ಯವಿಲ್ಲ.

# ಎರಡನೆಯ ಸಂಧಿ

ಸೂಚನೆ:

ಕನಕಾಚಲಪ್ರಾಂತನಗರಗಳನಭ್ರಂಗ
ಳನುವ[1]ನಾಗಸದಿರವ ಮಂಡಲಾವಧಿಯಾಗ
ಲ[1]ನುವಿನಿಂ ಬಿತ್ತರಿಪೆನೆಂದು ದೇವಲಗೆ ಏಕೋರಾಮ ದೇವ ಪೇ[2]ಳ್ದಂ[2]

ಸೂರಿಜನ[3]ನುತಿಪಾತ್ರ ಶುದ್ಧಮುನಿವನಚೈತ್ರ[3]
ಶೌರ್ಯಜಸುರೇಂದ್ರಾ[4]ದಿವಂದ್ಯ ನಿರ್ಜಿತ[4]ನಿಂದ್ಯ
[5]ಮಾರಕೋದಂಡ ನಿರ್ಮುಕ್ತಬಾಣಾವಿಷಯ ಶುಕ್ಲಸಾತ್ವಿಕವಿಗ್ರಹ[5]
ಚಾರುನತಮಂದಾರ [6]ಚಂದ್ರಕಿರಣಾಕಾರ[6]
ತಾರಾದ್ರಿ ನಿಜವಾಸ ಮುನಿಜನಮನೋಲ್ಲಾಸ
[7]ಕಾರುಣ್ಯಕಲ್ಲೋಲಿನೀಧೀರ ಪೂರ[7] ಜಯ ಜಯತು ಗುರು ಚನ್ನಮಲ್ಲ ೧

ಮುಕ್ಕಣ್ಣನಧಿಕಚರರೂಪಿನಿಂದೈದಿ ತಾಂ
ತಕ್ಕುಲೂರಿಗೆ ಪೋಗಿ ಕೋಪಿನರುವೆಯ ಕೇಳೆ
ಪೊಕ್ಕು ನೇವುತ ನಾಳೆ ತೆಗೆವೆನೆನಲಾಗದಿಂದೇ ಕೊಡುವುದೆನಲು ನಲಿದು
ತಕ್ಕಂತೆಯೊಂದುಮೊಳನೆಯ್ದಿ ದುರ್ದರಿದೀಯ
ಲಕ್ಕರಿಂ ಚಿಗುರಿಸುತ ಶಿವ ಮೆಚ್ಚಿ ಕರೆಯ[8]ರೆ[8]ಮ
ಗೊಕ್ಕಮಿಕ್ಕಮಳ ಶಿವಶೇಷ ಶಿವಪದವೆಂದ ನೈಸರಡಿಯಂ ನೆನೆವೆನು ೨

ಪಿಂತಣಾವಿಷ್ಕಂಭನಗ[9]ಗಳೆರಡರ[9] ನಡುವ
ಣಂತರಾಳದ ಮೇರುಗಿರಿಯುಳತೆಭೂಮಿಯೊಳ್
ನಿಂತಿಹುದು ಪದಿನಾರುಸಾಸಿರಂ[10]ಯೆಂಭತ್ತುನಾಲ್ಸಾಸಿರಂ ಮೇಲಕೆ[10]
ಸಂತಸದೊಳದಂಲಕ್ಷಮದರಗ್ರವಿಸ್ತಾರ
ಮೆಂತೆನಲ್ ಬತ್ತೀಸಸಾಹಸ್ರಯೋಜ[11]ನಂ
ಸಂತಮಸವೈರಿಯುದಿಸುವ ದಿಕ್ಕಿನೊಳ್ ಪದ್ಮರಾಗಮಯವಾಗಿರ್ಪುದು[11] ೩

---

1 ಬಾಂಬೊಚ್ಚಮರ ಸುರಲೋಕಾವಧಿಯ। ನ (ಜ) 2 ಳ್ದಾ(ಕ) 3ಸ್ತುತಿ ಪಾತ್ರ ಸಕಲ ಸದ್ಗುಣ ಗಾತ್ರ (ಜ) 4 ದ್ಯವಂದ್ಯತನುಗುಣ (ಜ) 5 ದೂರಷಡ್ಭಾವ ವೈಕಾರ ಮದವಿಹಾರಸಾರ ಕಾರುಣ್ಯಪೂರ (ಜ) 6 ಗಧವನಜಮಂದಾರ ಸಿಂಧೂರ (ಜ) 7 ಹಾರಹೀರಾಭ ವರವೈರಿಮತ್ತೇಭ (ಜ) 8 ಲೇ (ಜ) 9 ವಿೂರೆರಡು (ಜ) 10 ಮೇಲಶೀತಿ ಚತುಸಾಹಸ್ರಯೋಜನವಲ್ಲೆ (ಜ) 11 ನದ। ತಿಂತಿಣಿಪ ಮೇರುಗಿರಿವರ್ಣಮದು ಪೂರ್ವದಿಕ್ಪದ್ಮರಾಗಂ ಶಿಖಿಯೇಳು (ಜ)

ನೋಡೆ [1]ವಹ್ನಿಯೊಳರುಣ[1]ಶಮನನೊಳ್ [2]ಘನನೀಲ[2]
ಕೂಡೆ ನಿಋುತಿಯೊಳು ಕೃಷ್ಣಂ ಪಾಶಿ[3]ಯೊಳ್ ಹಳದಿ
ಯಾಡುಬರದಿ ತೋರ್ಕು[3] ಹರಿಯೊಳ್ ಹರಿನ್ಮಣಿ ಕುಬೇರ[4]ನಲ್ಲಿ ಪ್ರವಾಳಂ[4]
ರೂಢಿ ಈಶಾನನೊಳ್ ಧವಳಾಯಿ ವರ್ಣದಿಂ
[5]ಕೂಡಿ[5] ಝಗಝಗಿಸಿ [6]ಪೊಳೆಯುತ್ತಿರುವ ಸುರಗಿರಿಯ
ನಾ[6]ಡಲೇನದು ಕನಕಕುಸುಮು[7]ವಂ ನೆಗಪಿದಂದದಿ ಕಹಳೆಯಂತೆಸೆವುದು[7] ೪

ತೆತ್ತಿಸಿದ ಹರ್ಮ್ಯದಂತಿರೆ ಭೂಮಿಯಿಂದಲಿ
ಪ್ಪತ್ತೈದು ಸಾಹಸ್ರಯೋಜನದೆ ಕಂಕಣಂ
ಮತ್ತೆರದಿ ಯೋಜನ ಸಹಸ್ರವಿಸ್ತಾರದಿಂ ತ್ರಿಸಹಸ್ರಸಾಂದ್ರದಿಂದ
ಸುತ್ತಿರಲ್ಕಲ್ಲಿ ದನುಜಾಮರರ್ ಗಂಧರ್ವ
ರುತ್ತಮರು [8]ತಮ್ಮತಮ್ಮಯ ಸತಿಯರಿಂ ಕ್ರೀಡಿ
ಸುತ್ತಹರಿದೆ ಪ್ರಮಾಣದ ಮಧ್ಯಭಾಗದೊಳಗಿರುತಿರುತ ಪೊಸತೆನಿಸುವ[8] ೫

ಕಂಕಣದೊಳಿಹರು ನವನಾಥಸಿದ್ಧರ್ ಸುರರ
ಶಂಕೆಯಿಂ ಮನುಮುನಿಗಳಲ್ಲಿ ಭಜಿಸುವರು ಮಂದ
ಮುಂ ಕೂಡಿ ಶ್ರೀಕಂಠನಂ [9]ಮತ್ತಮಿಾ ಪ್ರಕಾರದ ಯೋಜನಗಳ ಮೇಲೆ[9]
ಕಂಕಣಂ ಮೂರುಸಾವಿರಯೋಜನದ ದಟ್ಟ
ಮಂ [10]ಕೂಡಿ[10] ಪದಿನೆಂಟುಸಾವಿರದ ಹರವಲ್ಲಿ
ಬಿಂಕದಿಂದೆಂಟು ದೆಶೆಯಲ್ಲೆಂಟು ಶೃಂಗನಗ ನವಸಾಹ[11]ಸ್ರದ ಮಾನದಿಂ[11] ೬

ಮೆರೆದಿ[12]ರ್ಪುದಯ್ಯ[12] ಮೂರನೆಯ ಕಂಕಣದ[13]ಲ್ಲಿ
ಪರಿವಿಡಿಯೊಳಾಂತರಾಳಿಕ ಪಂಚಸಪ್ತತಿಯು
ವರಕಂಕಣಂ ನವಕ•ಮಿರ್ತ•ರಂಗೂಡಿಯೆಂಭತ್ತನಾಲ್ಕು ಸಾಸಿರಮಂದು[13]
ಮೆರಳಿ ಪರ್ವತದೆಂಟುಶೃಂಗಗಳ ತುದಿಯಲ್ಲಿ
ತರತರಂಗೊಂಡೆಸೆವ ಪತ್ತನಗಳಲ್ಲಿ ದಿ
ಗ್ವರರಪುರಗಳ ಪೇಳ್ವೆನೊಂದೊಂದು ನವಸಹಸ್ರಾಯತದೆ ರಂಜಿಸಿಹವು ೭

---

1 ಯಾಮ್ಯಾರುಣಂ (ಜ) 2 ನೀಲಮಾ (ಜ) 3 ಯೊಳ್ವಸು।ಮಾಡಂಬರದ ಪುಷ್ಯರಾಗ(ಜ) 4 ನೊಳುಪದವಳಂ (ಜ) 5 ನಾಡೆ (ಜ) 6 ಕೊಂಡಾಡೆ ಸುರಗಿರಿಯನಂ। ತಾ (ಜ) 7 ನೆಗಪಿದ ಕಹಳೆಯಂತೆಸೆಯೆ ನವರತ್ನಮಂ (ಜ) 8 ಬಿನದಿಸುತ್ತಿರಲು ಕಂಕಣದಂತ್ಯ। ಪತ್ತೆರಡುಮೈದುಸಾಸಿರ ಯೋಜನಾಂತ್ಯದೊಳಾ ಕಂಕಣದೊಳೆಸೆವ (ಜ) 9 ತವರಮೇಲೆ ಪಂಚಮಿಶ್ವಂ ಸಹಶ್ರಾಯುತಂ (ಜ) 10 ಕಣಾ (ಜ) 11 ಸ್ವಾಯುತದೊಳು (ಜ) 12 ರ್ಪವಯ್ಯ (ಜ) 13 ಮೇಲರರೆ ನಾಲ್ಕಿರ್ಪತ್ತು ಸಾಸಿರಂ ಮೇರುವಿನುರೆಯುಗ್ರಸಹಮೆಂಬತ್ತುನಾಲ್ಕು ಸಾಸಿರೋನ್ನತದೆ ರಾಜಿಸುತಿರ್ಪುದು (ಜ) ಸಿಮಿಾತೆ (ಗ)

ಶಿವನಿತ್ತ [1]ದಿವ್ಯಾಮೃತಂ ಕಲ್ಪಕುಜಜಲದೊ
ಳವತರಿಸಿ ಮೆರೆದ ಬೆಲೆವೆಣ್ಣುಗಳ ಕೇಳಿದುದ
ಸವೆಯದೊದಗಿಸುವ ಸುರಧೇನು ಚಿಂತಾರತ್ನಗಳ್ ದಿವ್ಯಭೋಗಂಗಳು[1]
ಪವಿಧರಂಗಮರಾವತಿಯ[2]ನಾಮ:ಕದ[2] ಕೋಟೆ
ಸವಿಶೇಷ ನೀಲ[3]ಗಳ ತೆನೆಗಳಿಂದೊಪ್ಪುತಿರೆ
ದಿವಿಜರಾಳಂಗಳು[3] ಬಿಳಿಯಾನೆ ರತ್ನದ ಲಿಂಗ[4]ಮಿಂದ್ರಂಗೆ ರಾಜಿಸುವುದು[4] ೮

ತೇಜೋವತಿಗೆ ಕಬ್ಬುನದ ಕೋಂಟೆ ತೆನೆ ವಜ್ರ
ರಾಜಾನ್ನದನ್ನಲಿಂಗವ ಯಜಿಪನಗ್ನಿ ವಿ
ಭ್ರಾಜ[5]ಮಾನದ ಶಕ್ತಿಯಂ ಪಿಡಿದಂ ಮರಕತದ ಕೋಟೆ ಪುಷ್ಯಕದ ಕದಿರಂ[5]
ರಾಜಿಸಲ್ ಸಂಯಮಿನಿಯೊ[6]ಳಗೆ ದಂಡವ ಪಿಡಿದು
ಮೋಜೆಯಿಂ ಮಹಿಷವಾಹನವೇರಿ ಯಮಧರ್ಮ[6]
ಸೋಜಿಗದ [7]ರೋಗದೂತರವೆರಸಿ[7] ಶಿವಲಿಂಗ[8]ಮಂ ಭಯದಿ[8] ಭಜಿಸುತಿರ್ಪಂ ೯

ನಿರುತಿ ನೀಲದ ಕೋಂಟೆ ತೆನೆ ಮುತ್ತು[9]ಗಳದಕ್ಕೆ[9]
ನರವಾಹನದೆ ಕುಂತಧರನಾಗಿ ರಾಕ್ಷಸರ
ಪರಿ[10]ವಾರವೋಲೈಸೆ ಮೃಗಶೃಂಗಲಿಂಗವನ್ನಾರಾಧಿಸುವ ವರುಣಗೆ[10]
ವರಶುದ್ಧವತಿ ಬೆಳ್ಳಿಕೋಂಟೆ ಪೊಂದೆನೆ ಪಾಶ
ಧರನಾಗಿ ನೆಗಳೇರಿ ಜಲದೇವತೆಯ[11]ರೆಲ್ಲ[11]
ಭರದಿಂದ ವೋಲೈಸೆ ರತ್ನಮಯಲಿಂಗ ಸೇವೆಯೊ[12]ಳಿರ್ಪ[12] ಗಂಧಾವತಿ ೧೦

ಕನಕಮಯಕೋಂಟೆ ವೈಡೂರ್ಯದ [13]ಕದಿರು ತನಗೆ
ಘನಮೃಗದ [13]ವಾಹನಂ ಧ್ವಜವ ಪಿಡಿದಿ[14]ಹ ವಾಯು
ವನಂ[14]ನಯದಿ ದೇವತೆಗಳೋಲೈಸಿ ಪಿತ್ತಳದ ಲಿಂಗಪೂಜೆಯೊಳಿಪ್ಪನು
ಧನದಂಗೆ ವಿದ್ರುಮದ ಕೋಂಟೆ ಮೌಕ್ತಿಕದ ತೆನೆ
[15]ಯೆನಲೊ[15]ಪ್ಪುವಳಕಾವತಿಯೊಳಶ್ವವಾಹ[16]ನಂ
ಮಿನುಗುವ ಗದಾಯುಧಂ[16] ಕಿನ್ನರರು ವೋಲೈಸೆ ಕನಕಲಿಂಗವ ಪೂಜಿಪಂ ೧೧

---

1 ಅಮೃತಭೋಜನ ಕಲ್ಪಕುಟಜವಮರ ಸವಿಶೇಷದಂಗನಾನಂದದಿಂ ನವರತ್ನದವಿರಳ ಪ್ರಭಾಮಯ ಪರಿಷ್ಕಾರದಮಳ ಭೋಗಗಳಿನಮರರ ಮೆರೆಯಲು (ಜ) 2 ಸುವರ್ಣದ (ಜ) 3 ಮಯತೆನೆ ಸುರರು ವಾಲೈಸೆ। ಯವಿರತಂ (ಜ) 4 ಪೂಜೆಯಿಂ ಇಂದ್ರ ಮೆಸೆವಂ (ಜ) 5 ದಿಂ ಧರಿಸೆ ಸೆವವಲ್ಲಿ ಪಚ್ಚೆಯ ಶಾಲ ಪುಷ್ಯರಾಗದ ತೆನೆಗಳಿಂ (ಜ) 6 ಳಿಮದಂಡದಿಂ ಮಹಿಷ।ನಾಜವದ ವಾಹನಮುಲುಂಬಲೆಯು ಮೃತ್ಯುಗಳ್ (ಜ) 7 ವ್ಯಾಧಿಧೂತರು ಸೇವಿಸಲ್ಕೆ (ಜ) 8 ಮಂ (ಜ) 9 ರಕ್ಷೋಧಿ (ಜ) 10 ವಿಡಿದು ವಾಲೈಸೆಮಗಲಿಂಗವನಾರಾಧಿಸುತ್ತಿರಲು ವರುಣಂ (ಜ) 11 ರರರೆ (ಜ) 12 ಳೊಪ್ಪೆ (ಜ) 13 ತಿತೆನೆ ವ:ರುತ। ಮಿನುಪಿರದೆ (ಜ) 14 ರೆ ಎಡೆಯೊ। ಳನು (ಜ) 15 ವಿನುತೊ (ಜ) 16 ನವ:ನವರತ ಖಡ್ಗಕರ (ಜ)

ಈಶಾನನಾ ಯಶೋವತಿಗೆ ಪಳುಕಿನ ಕೋಂಟೆ
[1]ವೈಸರಿಪ ರನ್ನದೆನೆ ವೃಷಪತ್ರ[1] ಶೂಲಧರ
ನೈ ಸಕಲಗುಣನಿವಹವೋಲೈಸೆ ಭೂತಿಲಿಂಗವ ಯಜಿಪನಾವಾಗಳುಂ
ಲೇಸಿನಿಂದೂರ್ಧ್ವಕಂಕಣದಪ್ಪುರಗಳ
ನ್ನಾ ಶಚೀಶಾದಿ ದಿಗ್ವರರ ವಿಸ್ತಾರಮಂ
ಪೋಸವಿಲ್ಲದೆ ಪೇಳ್ದೆನವರ ವಳಿತದ ಪುರಗಳಂ ಪೇಳ್ವೆ ನಲವಿನಿಂದೆ ೧೨

ಮೇಘ ವಿಘ್ನಾವತಿ[2]ಯುಂ ಸುಂದರದ ಕಾಮವತಿ
ಮೇಗೆ ಸೌವರ್ಣೆ ಕುಸುಮಾವತಿಗಳಿಂದ್ರಪುರ
ಕಾಗಲುಪಪುರಗಳಿವರಲ್ಲಿ ಸುರಸುರಗಣಿಕೆಯರು[2] ಸಿದ್ಧರಾದಿತ್ಯರು
[3]ಭೋಗದಿಂದಿರ್ಪರಾ ತೇಜೋವತಿಗೆ ವಳಿತ
ಮಾಗಿ[3] ತದ್ವಹ್ನಿ ರೈವತಿಯುಭಯಪಟ್ಟಣದೊ
ಳೀಗ ಮಯ ವಿಶ್ವಕರ್ಮಾದಿಮುಖ ಪರಿಪರಿಯ ದೇವಶಿಲ್ಪಿಗಳಿರ್ಪರು ೧೩

ವರಮಾತ್ರನಂದೆ ಲೋಹಿತೆ ಗಂಡಾವತಿ ಯಮನ
ಪುರದೊಳಿತ[4]ಮಾಗಿರುವ ಪುರ[4]ಗಳೊಳ್ ಕ್ರಮದಿಂದ
ಲಂರೆ [5]ಹಿತಾರರು ರುದ್ರರೇಕಾದಶಾಂಕರುದ್ರರಂ ನಿತ್ಯಮಿರುತಿರ್ಪರು[5]
ನಿರುತಿಯುಪನಗರ ಪಿಂಗಲೆಯುಂ ಕೃಷ್ಣಾವತಿಯುಂ
ಚಿರಸುಖಾವತಿಯುಂ ಗಾಂಧಾರಿ ಈನಾಲ್ಕರೊಳು
ನರಕರ್ಮದೇವತೆಯರಾ ಪಿಶಾಚಿಗಳಿರ್ಕು ವರುಣಪುರದುಪಪುರಗಳು ೧೪

ಸಲೆ ಸಿದ್ಧಸೇನೆ [6]ಹೈಮಿಯು ಸಿದ್ಧವತಿಯೆಂದು
ಜಲಪತಿಯ ಶುದ್ಧವತಿಗುಪಪುರಗಳಿವರಲ್ಲಿ
ನೆಲಸಿಹರು ಭೂತವಸು ವಿದ್ಯಾಧರಾಧೀಶರೆ ಕ್ರಮಂದಪ್ಪದಂತೆ[6]
ಬಳಿಕ ಸಿದ್ಧಿಯೆನಿಪ್ಪ ಗಂಧಾವತಿಗೆ ಬಂದ
ಪೊಳಲಲ್ಲಿ ಕಿನ್ನರರು ನೆಲಸಿಹರು ಯಕ್ಷೆ ಶ
ನಲಘುಪುರದೊ[7]ಳಿತಮಹ [7]ಗಂಧರ್ವ ಚಿತ್ರೆ ಶುಭೆ ಪ್ರಮದೆ[8]ಯುಂ ಚಿತ್ರವತಿಯಂ[8]೧೫

1 ಯಾ ಸಕಲ ರನ್ನದೆನೆ ವೃಷವಾಹ (ಜ) 2 ಸುಂದರಿ ಕಾಮವತಿಚೆಲ್ವ। ರಾಗ ಸೌವರ್ಣಿಯಾ ಸುಮತಿ ಕುಸುಮಾವತಿ। ಯೋಗಮಮರಾವತಿಯುಪಪುರದೊಳಮರಾಪುರ (ಜ) 3 ಚಾಗಿ ಸಾಧ್ಯರ್ ಕ್ರಮದೊಳಿರ್ಕು ತೇಜೋವತಿಯ ಯೋಗ (ಜ) 4 ದ ಮೂರುಪುರಂ (ಜ) 5 ಪಿತೃದೇವರ್ಕಳಾ ರುದ್ರರೇಕಾದಶಮಹಾರುದ್ರರಿಹರು ಮತ್ತೆ (ಜ) 6 ಯಾಹೇಮ ಸೌಜ್ಞೆಯು ಮತ್ತೆ। ನೆಲೆಸಿದ್ಧವತಿಯೆಂಬ ಪಟ್ಟಣತ್ರಯದೊ।ಳೊಲಮಿನಿಂ ಪರಿವಿಡಿದು ಭೂತಗಳ್ ವಸುಗಳಂ ವಿದ್ಯಾಧರರ್ ನೆಲಸಿರ್ಪರು (ಜ) 7 ಳೀತದ (ಜ) 8 ಚಿತ್ರವತಿಯೆನಿಪ್ಪ (ಜ)

ಪೊಳಲ್ಪೈದರೊಳ್ ವಿರಾಜಿಸುವರಾರಾರೆನಲ್
ಬಲವಂತನಹ ಚಿತ್ರರಥ[1]ನೊರ್ವ[1] ಶಾರದಾ
ತಿಲಕನುಂ ಗಾನಗಂಭೀರರಹ ತುಂಬುರರು ಕರ್ಮದೇವತೆಗಳಮಳ
ಲಲಿತಮಪ್ಪತುಳ ಗುಹ್ಯಕರೆಂಬ ದೇವರ್ಕ
ಳೊಲಿದು ನೆಲೆಗೊಂಡು ರಾಜಿಸುತಿಹರು ಮತ್ತೆ ಕೇಳ್
ಚಲುಪ ವೈಕುಂಠ ಪದ್ಮಾವತಿಯು ಕಾಮಶುಭೆಯೆನಿಪ ನಗರತ್ರಯದೊಳು ೧೬

ಪರಿವಿಡಿಯೊಳಾ ವಿಷ್ಣು ಬ್ರ[2]ಹ್ಮಾ[2]ಶ್ವಿನೀದೇವ
ರರಿದೆನಿಪ ಧನ್ವಂತರಿಯು ಮನೆಯ ಮಾಡಿರ್ಪ
ನೊರವೆನೀಶಾನಾಶೆಯೊಳಗೀಶ್ವರಕ್ಷೇತ್ರಮುಂಟಲ್ಲಿ ನಂದೀಶ್ವರಂ
ವರ [3]ಮಯೂಖೈಕಮುಖ ನೇತ್ರತ್ರಯಂಗಳಿಂ
ದುರು ಚತುರ್ಭುಜಶುಭ್ರ[3]ವಸನ ದಿವ್ಯಾಭರಣ
ಸರಸಚಂದನಗಂಧಪುಷ್ಪಮಾಲ್ಯಾದ್ಯಲಂಕೃತನಾಗಿ ಶೂಲವಾಂತು ೧೭

[4]ಒಲವಿಂ[4] ಸನತ್ಕುಮಾರಾದಿ ಶಿಷ್ಯ[5]ರ ಕೂಡಿ
ಕುಲಶೈಲಜಾಪತಿಯ ಪೂಜಿಸುತ್ತಿಹನು ನಿ
ರ್ಮಲಮತಿಯೆ[5] ಮಧ್ಯಕಂಕಣದಲ್ಲಿ ಸಿದ್ಧಮುನಿಗಳು ಮಹಾ[6]ಸೌಖ್ಯದಿಂದ[6]
ನೆಲಸಿರ್ಪರೈಯಧಃಕಂಕಣದಿ ದನುಜರ್ಕ
ಳಲಘುನಿರ್ಜರರು ಗಂಧ[7]ರ್ವರೊಂದಾಗಿ[7]ಹರು
ಬಳಿಕ ಸುರನಗಮೂಲಗುಹೆಯಂತರದೊಳಾ ಮರುದ್ಗಣರು ನೆಲಸಿರ್ಪರು ೧೮

ಬಳಿಕಲಾ ಮೇರುಗಿರಿಯಂತ್ಯದೊಳಗೀಶಪುರ
ಮೊಲಿದು ದಶಸಾಹಸ್ರಸೋಮಸೂರ್ಯರ ಪ್ರಭೆಯ
ನಿಳಿಕೈವುತಮೃತಪರಿಖಾವಳಯು ರತ್ನ[8]ಗಳ[8] ಕೋಂಟೆ ಮುತ್ತಿನ ತೆನೆಗಳಿಂ
ಥಳಥಳಿಪ ಪರುಷಸಿಂಹಾಸನಮನಾದರದೆ
ಬಳಸಿ ಕಾಯ್ದಿರ್ಪ ಸುರಗಣ[9]ದಿಂದಲಾ ಪುರಂ
ಪೊಳೆಯುತ್ತ ಋಗ್ಯಜುಸ್ಸಾಮಾದಿಗಳಿಗವಸ್ಥಾನಮಾಗಿರುತಿರ್ಪುದು[9] ೧೯

---

1 ನೆಂಬ (ಜ) 2 ಹ್ಮರ (ಜ) 3 ಸ್ವರ್ಣಮಯ ಶರೀರೇಕಮುಖ ತ್ರೈನೇತ್ರಮುರು ಚತುರ್ಭುಜ ಶ್ವೇತ (ಜ) 4 ಸಲೆ (ಜ) 5 ರೊಡಗೂಡಿ ನಿ। ರ್ಮಳ ಶಿವಾರಾಧನ ತತ್ಪರನಾಗಿ ಮೆರೆಯೆ ಮತ್ತೊಲವಿನಿಂ (ಜ) 6 ಸುಖದೊಳು (ಜ) 7 ರ್ವಾದಿಗಳು ನೆಲಸಿ (ಜ) 8 ದುರೆ (ಜ) 9 ಶ್ರೇಣಿಯಿಂದೆ ಪುರಮುಲಿದು ಪೇಳ್ವಡೆ ಯಜುಸ್ಸಾದಿಗಳಿಗಗಣಿತಾಸ್ಥಾನಯೋಗಿಗಳ ಧ್ಯಾನ (ಜ)

ಆ ಮೇರುಪರ್ವತಾಗ್ರದೊಳಮಳನಿಧಿಯೆನಿ[1]ಪ
ಧಾಮ ಪದಿನಾಲ್ಕುಸಾವಿರಯೋಜನಂಗಳಾ
ಯಾಮಂದಿಂ ನೈರುತ್ಯದಿಂದಲೈಶಾನಿಯಂ ಕೂಡಿ ತಾ ನೀಳಮಾಗಿ
ಆ ಮಹಾಮಂದಿರದ ನಡುವೆ ಮಣಿಮಯಪೀಠ
ಸೀಮೆಯಲಿ ಚಂದ್ರಾರ್ಧಶೇಖರಂ ಪ್ರೀತಿಯಿಂ
ದಾ [1]ಮಹಾದೇವನಿರೆಯುದ ಬಳಸಿ ಗಣನಿಕರಮಂತಗಳ್ ವಿರಾಜಿಸಿರ್ಕುಂ ೨೦

ಹರನ ಕಣ್ಮುಚ್ಚಲಗಜೆಯು ದಶಾಂಗುಲಿಯಿಂದ
ಪೊರಟ ದೃಗ್ಜಲಮೆ ದಶನದಿಗಳಾಗಲ್ ಮೂರು
ಹರಿ[2]ವಿಧೀಂದ್ರರಿಗೀಯಲುಳಿದ ಗಂಗೆಗಳಿಂದ ಲೋಕಕುಪಟಳಮಾಗಲು[2]
ಮೊರೆಯಿಡಲ್ ಶಿರದಲ್ಲಿ ಧರಿಸಲಾ ಗಂಗೆಯಂ
ವರಭಗೀರಥಮುಖರು ಕೇಳಿ ವಾಲಾಗ್ರದಿಂ
ದಿರದೀಯೆ [3]ಲೋಕವಂ ಪಾವನವ ಮಾಡುತ್ತ[3] ಮೇರುಮಧ್ಯವ ಸಾರುತ ೨೧

ಅಲ್ಲಿಂದಲಿಳಿದೊಂದೆ ಗಂಗೆ[4] ನಾಲ್ಭಾಗವಾಯಿ
ತ[4]ಲ್ಲಿ ಮೇರುವಿನ ಮೂಡಲು ಪಾವನಿಯಂ ಪಡುವ
ಲಲ್ಲಿ ನಂ[5]ದೆಯು ತೆಂಕಲೊಳ್ ಸುಪಕ್ಷೆಯು ಬಡಗಲಲ್ಲಿ ಭದ್ರೆಯು ರಾಜಿಕುಂ[5]
ಸಲ್ಲಲಿತ ಗಂಗೆಗಳ್ ನಾಲ್ಕುದಿಕ್ಕಿನೊಳಿಳಿದು
[6]ಸ [6]ಲ್ಲಾಸದಿಂದಿಳಾವೃತದಲ್ಲಿ [7]ಪರಿದು ಬಿಡ
ದಲ್ಲಿ[7] ಭೇದಿಸಿ ಬಂದು ಸರ್ವರಂ ಸಲಹುತ್ತಲಂಬುನಿಧಿಯಂ ಸಾರ್ದವು ೨೨

ಮೇರುಗಿರಿ ಪತ್ತನಗಳಂ ಗಂಗೆಯಂ ಪೇಳ್ದೆ
ನೀರನೇ ಭೂಲೋಕದೂರ್ಧ್ವಸ್ಥಿತಿ[8]ಯನುಸುರ್ವೆ[8]
ಧಾರುಣಿಗೆ ಲಕ್ಷಯೋಜನದಲ್ಲಿ ರವಿ ಮೆರೆವ ಭುವರ್ಲೋಕವೆಂಸೆದಿರ್ಪುದಂ
ಆರಯ್ಯೆ ದಶಸಹಸ್ರಕ್ಕೆಯೊಂದೊಂದು ಬಿಡ
ದಾರೈಕೆಯಿಂದಿರ್ಪ ವಾಯು[9]ಪ್ರಚಾ[9]ರಮಂ
ಸಾರಿಪೆ ಳುವೆನಾದಿಮರುತನೊಳ್ ಲೀಯವಹ ಧಾರಾಧರಂಗಳೆಯ್ದೆ ೨೩

---

1 ಪು। ದ್ಧಾಮ ಜ್ಯೋತಿಷ್ಕನಾಮ ನಗಮುಂಟು ಪದಿನಾಲ್ಕಾ ಮಹಾಸಾಸಿರೋನ್ನತ ವಿಶಾಲ ದೊಳು ಝಗಝಗಿಸುತಿರೆ ನೈರುತ್ಯನಾ। ಸೀಮೆ ಮೊದಲೀಶಾನ್ಯದವಧಿಯುರುತರ ಲಸದ್ಧಾಮಮಭಿಮುಖ ಚಿನ್ಮಯ ಕಾಂತಿಯುರಮನೆಯೊಳಾ (ಜ) 2 ಯಜೇಂದ್ರರರಿಗಿತ್ತುಳಿದೇಳು ಗಂಗೆಗಳುಪದ್ರಮಂ ಮಾಡೆ ಲೋಕಂ (ಜ) 3 ಜಗಪಾವನಾರ್ಥದಿಂದಿಳಿದು (ಜ) 4 ಚತುರ್ಭಾಗಮಾ। ಯ್ತು (ಜ) 5 ದಾ ಗಂಗೆ ತೆಂಕಲು ಸುಪಕ್ಷಿ ಬಡಗಲೊಳ್ ಭದ್ರಸಾಮೆ (ಜ) 6 ಮು (ಜ) 7 ಚರಿಸಿ ನಗಗ।ಳಲ್ಲಿ (ಜ) 8 ಯುಸುರ್ವೆನಾಂ (ಜ) 9 ವ್ಯವಹಾ (ಜ)

ಧರೆಯಿಂದಲೂರ್ಧ್ವವೈವತ್ತುಗಾವುದ ತನ
ಕ್ಕಿರದೆ ವ್ಯಾಪಿಸಿ ತ[1]ನುವೆನಿಸುವ ಪವಮಾನ[1]ತಾಂ
ಧರಣಿಯಖಿಳೌಷಧಿಗಳಂ ಬೆಳಸಂತಿಹುದು ಬಳಿಕದ ದಿವಾಹಂಸನೆಂಬ
ಮರುತಬುವಿಯಂ [2]ವ್ಯಾಪಿಸಿ[2] ಸಮಸ್ತರಿಗೆ ಪಚನ
ಕರಣಮಂ ಮಾಡಿಸುತ [3]ದನುಜರುಂ ಖಗಗಳುಂ
ಚರಿಸುವದ[ದ]ಕ್ಕೆ ಸಾಧನವಾಗಿ ಸಕಲರ್ಗೆ ಸುಖದವಾಗಿರುತಿರ್ಪುದು[3] ೨೪

ಮತ್ತಮಾ ಗಾಳಿಯಿಂದಲೆ ಪ್ರಚೇತಸವೆನಿ
ಪ್ಪುತ್ತಮದ ಪವಮಾನ ತಾನೊಂದು ಸಮಯದೊಳ
[ಗ]ತ್ಯಧಿಕ ಬಿರುಗಾಳಿಯಾಗಿ ಮರಗಳ ಮುರಿದು ಶಿಖಿಯನೆಬ್ಬಿಸಿ ವಂನೆಗಳ
ಮೊತ್ತಮಂ ದಹಿಸಿ ಬಡಬಾಗ್ನಿ ನೀರ್ಗಿಚ್ಚುಗಳ
ನೆತ್ತಿಪೋಗದ ತೆರದಿ ರಕ್ಷಿಸುವುದೈ ಮಗನೆ
ಮತ್ತದರಿನಿಂ ಮೇಲೆ ಶತಯೋಜನಾಂತರದ ಸೇಚಿನಿ[4]ಯೆನಿಪ್ಪ[4] ಮರುತಂ ೨೫

ಚಪಳವರ್ಣದ ಮೂಕನೆಂಬ ಮೇಘಂಗಳಂ
ವಿಪುಳಸ್ವಾದಂಬುನಿಧಿಗಾದೊಡಂ ಲವಣದಿಂ
ದಪರಿಮಿತ ಸಾಗರಕ್ಕಾದೊಡಂ ಕೊಂಡೊಯ್ದುತುದಕಮಂ ತಂಬ ನೆಗಪಿ
ಸಂಪಥ[5]ದೊಳ್ಸ ಶತಾರ್ಧ[5]ಯೋಜನಾಂತರದಿ[6] ಪ್ಲವ
ದ ಪದಪಿಂ ಮೇಘಂಗಳಂ ತಂದು ಕ್ರೋಶಮಾ
ತ್ರ ಪದದೊಳ್ ನಿಲಿಸಿ ಜಲಮಂ ಚಳೆಯಮಂ ಕೊಡುವ ತೆರದಿ[6] ಮಳೆಯಂ ಕರೆವುದು
೨೬

ಬಳಿಕಲಾ ಮೇಘಂಗಳಂ ಮುನ್ನಿನಂತೆ ಮೇ
ಲೆಳದೊಯ್ದು ಗಿರಿವನಕ್ಷೇತ್ರನ[7]ದ್ಯಾದಿಗಳ[7]
ನೆಲನ ಸರಿಸದೊಳು ಮೊದಲಂತೆ ಮೇಘವ ನಿಲಿಸಿ ಮಳೆಗಳಂ ಸುರಿಯಿಸುವುದು
ಸಲೆ ಮೇಘಕಾಂತಿಯೇ ಮಿಂಚು ಮಾರುತವಹ್ನಿ
ಜಲಗಳೇಕತ್ವದಿಂ ಜಲಶಿಲೆಗಳಹವು ಕೇ
ಳೊಲವಿನಿಂ ಸ್ವಾದಂಜಲ[8]ಮೇ ಮೊದಲು[8] ಚಿತ್ರಧರೆಯಿಂ ರಸ[9]ವಿಕಾರಗಳು[9] ೨೭

---

1 ನ್ವಮೆನಿಪ ಪವನನು (ಜ) 2 ವೇಡಿಸಿ (ಜ) 3 ಸರ್ವರಿಗೆ ಸುಖವೀವು। ತರರೆಯಸುರರ್ಗೆ ಖಗಗಳಿಗೆ ತೀವ್ರದ ಗಮನಮಿತ್ತವರ ಪೊರೆವುತಿಹುದು (ಜ) 4 ಯೆಂಬ (ಜ) 5 ದೇಳ್ನೂರು ವೈವತ್ತು (ಜ) 6 ಪರಿಮಿತಕೊಯ್ದು ತೇಲಿಸಿತಂದು ಭೂಮಿಯ ಮೇಲು ಪರಿಕ್ರೋಶ ಪ್ರಮಾಣದೆ ನಿಲಿಸಿ ಚಳಿಯು ಕೊಡುವಂತೆ (ಜ) 7 ದಿ ಗ್ರಾಮಾದಿ (ಜ) 8 ಮೆಂತಂತೆ (ಜ) 9 ಗಳಪ್ಪಂದದಿಂ (ಜ)

ಲವಣಾಂಬುವಾದೊಡಂತಾ ಮೇಘವಾಸನೆಯು
ಸವಿಶೇಷಸಂಪರ್ಕದಿಂ ವಾಯುವಶದಿಂದೆ
ತವೆ ಸ್ವಾದು[1]ಜಲ[1]ವಕ್ಕು ಮತ್ತಮಾ ನೂರಐವತ್ತುಯೋಜನದ ಮೇಲೆ
ಕವಲಿಲ್ಲದಾ ಸೇಚನಿಯೆನಿಪ್ಪ ಮರುತ ತಾ
ನವಿರತಂ ಸತ್ವವಹಮೆಂಬ ಮೇಘಂಗಳಿಂ
ಸವನಿಸುತ ದುರ್ದಿನ[2]ವ ಮಾಡಿಯುದಕದಲಿ ಜಲಚರಗಳಂ[2] ಬೀಳಿಸುವುದು ೨೮

ಅಲ್ಲಿಂದ ಮೇಲೆಯೈವತ್ತುಗಾವುದದಳತೆ
ಯಲ್ಲಿರ್ದ ಮೇಘ[3]ವೌಷಧಮೆಂಬ ಮೇಘಂಗ
ಳಲ್ಲಿರ್ದ ಜಲವ ಕೆಡಪಲ್ಕಾ ಕು[3]ಜಲವೃಷ್ಟಿಯಿಂದಖಿಲಜನರ್ಗೆ ಬಿಡದೆ
ಖುಲ್ಲತನದಿಂದಮಿತ ದಂಃಖಂಗಳೀವವೈ
ತಲ್ಲಣಿಸದಲ್ಲಿಂದ ಯೈವತ್ತುಯೋಜನ[4]ಗ
ಳಲ್ಲಿರುವ ಮೇಘವಾಯುವೆ ಮಾರಕಾಂಕ ಮೇಘೋದಕಲ ಕರೆಯಲದರ[4] ೨೯

ಮಳೆಯ ಜಲಪಾನಾದಿ[5]ಯಿಂ[5]ದಖಿಳಪ್ರಾಣಿಗಳಿ
ಗಳಿವಕ್ಕುಮಲ್ಲಿಂದಲೈವತ್ತುಯೋಜನಗ
ಳಳತೆಯಿಂ ಮೇಲೆ ವಜ್ರಾಂಗಮೆಂಬನಿಲ ತಾಂ ಪಲ[6]ಕಮೆಂಬಾಖ್ಯೆಯುಳ್ಳ[6]
ಜಲಧರಗಳಿಂ ತಂದುದಕವ ಭೂಮಿಗೆ ಕರೆಯೆ
[7]ಬೆಳವ ವೃಕ್ಷಗಳು ಪಲ್ಲವಿಸಿ ಕುಸುಮಿಸಿ ಫಲಿಸಿ
ನಲಿವವಲ್ಲಿಂದ ಮೇಲಕ್ಕೆ ನೋಡಲ್ಕೆ[7]ಯೈವತ್ತುಗಾವುದ ಮಿತದೊಳು ೩೦

ಇರು[8]ವ ವೈದ್ಯುತವಾಯು ವೈದ್ಯುತಪಯೋಧರಂ
ಬೆರಕೆಯಿಂದಾದ ನಾದವೆ ಕೇಳುತಿರ[8] ಗುಡುಂಗು
ಧರೆಗೆ ನಾನೂರುಯೈವತ್ತು ಯೋಜನದಳತೆಯಲ್ಲಿ ಜನಿಸುತ್ತಿರ್ಪುದಂ
ಅರರೆಯದರಿಂದಲೈವತ್ತುಗಾವುದದ ಮೇ
ಲಿರದಿರ್ಪ ರೈವತಕಮೆಂಬ ಮಾರುತ ತಾನಂ
ಭರದಿಂದ ಪುಟ್ಟುವಹಮೆಂಬ ಮೇಘಂಗಳಿಂ ತಂದ ಜಲಪಾನಾದಿಯಿಂ ೩೧

---

1 ಪಯ (ಜ) 2 ವನದರುದಕದೊಳ್ ಮತ್ಸ್ಯಾದಿ ಜಲಚರವ (ಜ) 3 ಮೆನಿಪ ನೀಲಂ ಕಾಶಮೆಂಬ। ಬಲ್ಲಿತಹ ಮೇಘಂಗಳಿಂ ತಂದ (ಜ) 4 ದುದ್ದದಲ್ಲಿಯಮೋಘಮೆನಿಪ ಮಾರುತ ಮೆಂಬ ಮೇಘಂಗಳೊಡನೆಯ್ದಿದ (ಜ) 5 ಯಂ (ಕಗ) 6 ಕಾಹ್ವಯದ ಮೇಘ (ಜ) 7 ಬೆಳೆದು ಶಶಿವೃಕ್ಷಾಳಿ ಪಲ್ಲವಿಸಿ ಸುಮಫಲಗಳೊಲವಿನಿಂದಪ್ಪವೈಯಲ್ಲಿಂದ ಮೇಲೆ (ಜ) 8 ತದ್ಯುತಮೆಂಬ ನೀಲ ವೈದ್ಯುತಮೆಂಬ ಮೇಘಂಗಳಿರದೊಂದರೊಂದ ಸಂಬಂಧ ಧ್ವನಿಯೆ (ಜ)

ಇಳೆಯ ಜನರೆಲ್ಲ ಪುಷ್ಟಿಯನ್ನೈದಿ ಬಾಳರೈ
ಬಳಿಕಲದರಿಂ ಮೇಲೆಯೈವತ್ತುಗಾವುದದ
ವಳಯದೊಳಗಿಹ ಸುವರ್ಣಕಮೆಂಬ ಮಾರುತಂ ರೋಷಧಕ ಮೇಘಂಗಳಿಂ
ಘಳಿಲನೇ ತಂದ ಜಲವೃಷ್ಟಿಯಾಗಲ್ಕೆ ತ
ಜ್ಜಲದ ಪಾನಾದಿಯಿಂ ಜನರ್ಗೆ ರೋಗಗಳಕ್ಕು
ತಿಳಿಯಲದರಿಂ ಮೇಲೆಯೈವತ್ತುಗಾವುದದೊಳಿಹ ವಿ[1]ಪಾ[1]ವರ್ತವೆಂಬ ೩೨

ಮರುತ ತಾಂ ಕ್ರೋಧಮೇಘಂಗಳಿಂ ತಂದುದಕ
ಧರೆಗೆ ಸೋನೆಯ ಧಾರೆ ತಜ್ಜಲದ ಪಾನದಿಂ
ನರರಧಿಕಕ್ರೋಧ ಯುದ್ಧಂಗಳೆಸಗುವರು ತದ್ವೃಷ್ಟಿಯಿಂದಸುರ ಪಡೆಗೆ
ಮರಣವಪ್ಪುದು ಗಡಾ ಬಳಿಕ ಧೂಮಂಜ್ಯೋತಿ
[2]ರುರುಸಲಿಲ ಪವನಂಗ[2]ಳೊಂದುಗೂಟವೆ ಮೇ[3]ಘ
ಸುರಪನಾಣತಿ ಸೂರ್ಯಕಿರಣಂಗಳೀ ಮೇಘ ಸೃಷ್ಟಿಯಲಿ ಕಾರಣಗಳು[3] ೩೩

[4]ಮರುತಮಾಧಾರವಾಗಿರುವ[4] ಮೇಘಾಶ್ರಯದ
ಪುರದಲ್ಲಿ ಮೂವತ್ತುಸಾವಿರ ಮಹಾರೌದ್ರ
[5]ತರಮೂರ್ತಿಯಾಂತು ಸ್ವೇಚ್ಛಾಚಾರದಿಂದಮಿತ[5] ಕಾಮರೂಪಿಗಳೆನಿಸುವ
ಚಿರಪರಾಕ್ರಮಿಗಳೆನಿಸುವ ಸಕಲ ಲೋಕಸಂ
ಚ[6]ರ ಪಿಶಾಚೇಶ್ವರರುಂ ಬಾಲಗ್ರಹಂಗಳುಂ
ಹರಕುಮಾರನ ಸುಪ್ರಸಾದದಿಂದಲ್ಲಿ ಮೇಣಾತನಂ[6] ಭಜಿಸುತಿಹರು ೩೪

ಎರಡನೆಯ ಮೇಘಪವನಾಧಾರ ಜಲಧರದ
ಪರಮಾಶ್ರಯದ ಪತ್ತನದಲಿ ಶ್ರೀರುದ್ರನಿಂ
ದಿರದುದಿಸಿ ನೀಲಾಂಜನಚ್ಛಾಯೆಯಿಂದೆ ಸ್ಥೂಲಾಂಗದತಿ ಕುಕ್ಷಿಯುಳ್ಳ
ಕರಿವದನದಿಂದ ಸರ್ಪಾಭರಣಮಂ ತಾಳ್ದು
ಮೆರೆವುತ್ತ ತ್ರಿಂಶತ್ಸಹಸ್ರ [7]ವೈನಾಯಕರ್
ಧರೆಯ[7] ದುರ್ಮಾರ್ಗಿಗಳ ಸತ್ಕರ್ಮ ಫಲವನಪಹರಿಸಿ ರಾಜಿಸುತಿರ್ಪರಂ ೩೫

---

1 ಷಂ (ಜ) 2 ಸರಮಾರುತಂಗ (ಜ) 3 ಘಂಗ। ಳರರೆಯಪ್ಪವು ಸಪ್ತಮಾರುತಂಗ ಳೊಳಿರ್ಪ ವಸ್ತುಸಂಕುಳವ ಪೇಳ್ವೆಂ (ಜ) 4 ವರಮೇಘವಾಹುವಾಧಾರ (ಜ) 5 ದೊರೆವಡೆದ ಮೂರ್ತಿಗಳ್ ಸ್ವೇಚ್ಛೆಯಿಂದಮಿತವರ (ಜ) 6 ರಿಗಳಹ ಧನದೇವ ವನದೇವಿ ಕುಂಟಣಿ ಮುಖ್ಯರುರೆ ಪಿಶಾಚಾಖ್ಯ ದೇವತೆಯರಾ ಷಣ್ಮುಖಸ್ವಾಮಿಯಂ (ಜ) 7 ಕೋಟಿಗಣೇ। ಶ್ವರರು (ಜ)

ಮಱಿಂತೆಯಲ್ಲಿಂಮೇಲೆ ವಜ್ರಾಂಗನೆಂಬನಿಲ
ನಿಂತ ಮೇಘಾಶ್ರಯಂದ ಪುರದಲ್ಲಿ ಭಿನ್ನಾಂಜ
[1]ನಾಂತ ಕಾಂತಿಯ[1] ಭೀಮಂಕಾಯ[2]ದಿಂ[2] ಕೋಟಿ [3]ವೀರರುಗಳಿರ್ದೀ ಭೂಮಿಯ[3]
ಅಂತ ಶ್ಮಶಾನದೊಳ್ ಭೂತವೇತಾಳಾದಿ
ಸಂತತಿಯ ಮಂತ್ರಸಾಧಕರೆಯ್ದಿತಿಹರು ಬಳಿ
ಕಂತವರೆ ಸುಡುಂಗಾಡ ವೀರಗಲ್ಲಿನೊಳಿರ್ದು ಭೂತಬಲಿಗಳ ಕೊಳ್ವರು ೩೬

ಬಳಿಕಮಲ್ಲಿಂದ ವೈದ್ಯುತಮೆಂಬ ಪವಮಾನ
ಬಲವಂತ[4]ಮಳ್ಳ ಮೇಘಾಶ್ರಯದಿ ರಂಜಿಸುವ
ಪೊಳಲಿನಲ್ಲಿಂದ್ರನಾಣತಿಯಿಂದ ವೀರದೇವತೆಗಳೆನಿಸುತ್ತಲಿಹರು[4]
ಛಲದೆ ಕಮ್ಮರಿಯಗ್ನಿ ಜಲಯುದ್ಧ ಗೋಗ್ರಹಣ
ದೊ[5]ಳಗಳಿದ[5] ನರರ್ಗೆಯಾ ದೇವಕನ್ನಿಕೆಯರೊಲಿ
ದೆಳಸಿ[6] ಪುಷ್ಪಕದಿ ಕೊಂಡೊಯ್ದಿಡಲ್ಕಾ ಬಳಿಯನೆಣಿಸೆ ವೀರಸ್ವರ್ಗವು[6] ೩೭

ಮತ್ತೆಯಲ್ಲಿಂ ಮೇಲೆ ರೈವತಕಪವನನಿಂ
ದಂತ್ರಮು ಬಲಾಹಕಾಶ್ರಯದ ಪಟ್ಟಣದಲ್ಲಿ
ಬಿತ್ತರ[7]ದ ಘನ[7]ಸಿದ್ಧರಿಹರಲ್ಲಿ [8]ಸಿದ್ಧಿಮಂತ್ರವ ಜಪಿಸಿದವರಿಳೆಯಲಿ[8]
[9]ಉತ್ತಮೈಶ್ವರ್ಯ ಸಂಪನ್ನರೆಂದಲ್ಲಿಗೆನಿ
ಸುತ್ತ ಸಂವರ್ತನೆಂಬನಿಲನ ಮಹಾ[9]ಸ್ಪದಂ
ಸುತ್ತಿ[10]ರ್ದ[10] ಜಲಧರಾಶ್ರಯದ ಪುರದೊಳಿಹ ವಿದ್ಯಾಧರರ್ ಮೂರುಕೋಟಿ ೩೮

ಅನುವಿಂ ವಿಸಂವರ್ತನೆನಿಪನಿಲನಾಧಾರ
ಘನವಾದ[11]ಪತ್ತನದೊಳು ವೇಣುಕಾನದ್ಧ
ಘನತತಗಳುಳ್ಳ ವಾದಿತ್ರದಿಂ[11] ಕಾಮರೂಪಿಗಳಾದ ಖಗಗಳಿರ್ಕುಂ
ತನಯಪವನಾಧಾರ ಮೇಘಾಶ್ರಯಂದ ಪುರವ
ವಿನಯದಿಂ ಪೇಳ್ದಿವಲ್ಲಿಂ ಮೇಲೆ ನೂರುಯೋ
ಜನದಲ್ಲಿ ಹತ್ತುಪವನಾಧಾರದಾಶ್ರಯಗಳುಂಟು ವಿಧಿಯಿಂದ ಜನಿಸೆ ೩೯

---

1 ನಾ। ಕಾಂತಿಯಿಂ (ಜ) 2 ದ (ಜ) 3 ಕೋಟಿವೀರರುಗಳಿರ್ದು ಭುವಿಯ (ಜ) 4 ಮಾಧಾರ ಮೇಘಾಶ್ರಯದಧಿಕ। ಪೊಳಲಲ್ಲಿ ಇಂದ್ರನಾಣತಿಯ ಅಪ್ಸರರೆನಿಸು ವೀರದೇವತೆಯರಿರ್ದು (ಜ) 5 ಳುಮಳಿದ (ಜ) 6 ರತ್ನೋಜ್ವಲ ವಿಮಾನದೊಳ್ ಕೊಂಡೊಯ್ವುದೆ ವೀರಸ್ವರ್ಗ ಮಕ್ಕು (ಜ) 7 ಮಹಾ (ಜ) 8 ಗೀ ಧರೆಯ ಕೆಲಸಿದ್ದಿ ಪ್ರಧಾನರೆನಿಪ (ಜ) 9 ಸತ್ಯಮಂತ್ರಾಭ್ಯಾಸರೆಯ್ದುವರು ಬಳಿಕಮುತ್ತರದ ಸಂವ ರ್ತಮೆಂಬನಿಲನಾ (ಜ) 10 ರ್ಪ (ಜ) 11 ಸ ಪತ್ತನ ದೊಳಂ ವೇಣುವೀಣಾದಿ ನಿನದ ತಂತ್ರಾಮೋದ ವಿದ್ಯಾಧರರ್ (ಜ)

ಮೊದಲು ಪವನಾಧಾರ ವಾರಿ[1]ದ[1]ಸ್ಥಲದಲ್ಲಿ
ವಿದಿತ ಕಶ್ಯಪಬ್ರಹ್ಮನಿಂದೊಗೆದ ಬೆಳೆ ಮಳೆಯುಂ
ಸದಮಳದ ಮಿಂಚುಸಿಡಿಲುಗಳೆ ಕಾರಣವಾದ ಸುರಪನಾಣತಿಯೊಳಿರ್ಪ
ಗದಿತ ಶತಕೋಟಿ ಮೇಘಂಗಳಾ [2]ಬಿಂಗಗಳ[2]
ಪದರದೊಲ್ [3]ವೊ[3]ರೆ ಹೊರೆಗಳಾಗಿರ್ಪ ಮೇಘಗಳ್
ಮುದದೆ ತಮ್ಮಿಚ್ಛೆಯಿಂ ಗಮಿಸಲರಿಯವು ವಾಯುಗಳೆ ಕೊಂಡು[4]ಪೋ:ಪವವರಂ[4] ೪೦

ಪೂರ್ವೋಕ್ತ[5]ರೀತಿಯಿಂದೊಪ್ಪಿರ್ಪ[5] ಮೇಘಾಳಿ
ಯರ್ಉರ್ವಿಗಂ ಮಳೆಗರಸಿ ಗಾಳಿಪಟದಂತೆತ್ತಿ
[6]ಗರ್ವದಿಂ[6] ಕೊಂಡೊಯ್ದು ಮೊದಲಂತೆ [7]ಸ್ವಸ್ಥಲದೊಳಿರಿಸಲಾ[7] ಧಾರಾಧರಂ
ಪರ್ವಿರ್ಪ [8]ಮೊದಲ ಬಳಿಯಿಾ ಪಾಂಗಿನಿಂ ನೋಡ
ಲುರ್ವಿಗಂ[8] ಪತ್ತುಸಾವಿರಯೋಜನಾಂತರಮ
ಪೂರ್ವಮದರಿಂ ಮೇಲೆ ಹತ್ತುಸಾಸಿರಗಾವು[9]ದದ ಎರಡನೆಯ ಪವನನ[9] ೪೧

ಆಧಾರವಾರಿ[10]ದ[10]ಸ್ಥಳದಲ್ಲಿ [11]ಘನಕಾಯ
ದಾ[11]ದ ಜೀಮೂತರೆಂದೆನಿಪ ವಿದ್ಯಾಧರರು
ನಾದರಸಭರಿತಗಂಧರ್ವರು ವಿಶಾಲತರಗೃಹಗಳಿಂದಿರ್ಪರಲ್ಲಿ
ವೇದಿಸಲ್ಕಲ್ಲಿಂದಮೇಲಯುಂ ತಯೋಜನದೊ
ಳಾದ ಪವನಾಧಾರ ಮೇಘಸ್ಥಲದಿ ಪೃಥ
ಕ್ಕಾದ ವಾಹನವಾಯುಧಂಗಳಿಂ[12]ದ[12]ಗ್ನಿಕನ್ನಿಕೆಯರಹ ಮಾತೃಕೆಯರು ೪೨

ಕೆಲವು ಕನ್ನಿಕೆಯರುಂ ಸಾಮಾ[13]ನ್ಯ[13]ಸಿದ್ಧರುಂ
ಬಲವಂತಚೌಷಷ್ಟಿಯೋಗಿಣಿಯರಲ್ಲಿರ್ಪ
ರೊಲಿದದರಿನಿಂ ಮೇಲೆ ಪತ್ತುಸಾವಿರಗಾವುದಳತೆ ನಾಲ್ಕನೆಯದೆನಿಪ
ಸಲೆಯನಿಲನಾಧಾರ ಮೇಘಸ್ಥಳ[14]ದಿ ನೋಡೆ[14]
ಚಲುವ ಖಡ್ಗಂ ಕರಾಚೂರಿ ಕಕ್ಕಡ ಸಬಳ
ಸೆಳೆಗತ್ತಿ ಕಡುಗತ್ತಿಯಿದುರುಗುತ್ತಿಯು ಉಲ್ಲಣಂ ಕಬ್ಬಿನದ ಪರಿಘವು ೪೩

---

1 ಧರ (ಜ) 2 ದೊಡೆ ಬಿಂಗ (ಜ) 3 ಹೊ (ಜ) 4 ಡೊಯ್ಯುವ್ವತ್ತಮಮ (ಜ)
5 ಮಾ ಪ್ರಕಾರದೆ ನಿಂದು (ಜ) 6 ಉರ್ವಿನಿಂ (ಜ) 7 ಸ್ವಚ್ಛಸ್ಥಲದೊಳಿರಿಸಿಯಾ (ಜ)
8 ಪ್ರಥಮಸ್ಥಾನಂ ಭುವಿಗೆ ನೋಡಲಖರ್ವಮಿಗೆ (ಜ) 9 ದಂತರದ ದ್ವಿತೀಯ ಪವನಾ (ಜ)
10 ಧರ (ಜ) 11 ಸ್ಥೂಲಾಂಗ। ರಾ (ಜ) 12 ರ (ಕಗ) 13 ರ್ಥ್ಯ (ಜ) 14 ದೊಳ್
ನಾಡೆ (ಜ)

ಪರಶು ಚಕ್ರಂ ಚಂಚು ಪರಿಬಲ್ಲೆಯಂ ಬಾಣ
ಕಿರಿ[1]ಸಿ ಬಾಕುಂ [1]ಶೂಲ ಚಿಲ್ಲೆಯಂ ನೇಜೆಯುಂ
[2]ಗರಗಸಂ ಮುಸಲ[2] ಚಿಕ್ಕರಿ ಚೂರಿ ಪಾಶ ಪಟ್ಟೆಯ ಶಿರಾಜಿಯುಂ ಕಠಾರಿ
ಪರಿವಿಡಿಯ ಮಟ್ಟೆಯಂ ಕುಶವಂಕಿ[3]ತಾಂಡೆಯುಂ
ಮೆರೆವ [3]ಜವದಾಡಿಟ್ಟೆಯೆಂಬ ಮೂವತ್ತೆರಡು
ಪರಿಯ ಶಸ್ತ್ರಗಳಾಂತು ಘನದೇವತೆಗಳಿರ್ಕುವಲ್ಲಿಂದ ಮೇಲಕೇಳು ೪೪

ದಶಸಹಸ್ರ[4]ದ ಯೋಜನದ ಮೇಲೆಯೈದನೆಯ
ವಿಶದಪವನಾ[4]ಧಾರ ಮೇಘಾಶ್ರಯಸ್ಥಲ[5]ದಿ[5]
ಜಸವೆತ್ತನಘಭೇದಿಯೈರಾವ[6]ತಾದಿ ದಿಗ್ಗಜಗಳಿರುತಿಹವು[6] ಮತ್ತೆ
ಎಸೆವಯುತಸಾಹಸ್ರಯೋಜನಾಂತರದ ಮೇ
[7]ಲೊಸೆದಾರನೆಯ ಗಗನಮಾರ್ಗ[7]ನಾಧಾರದಿಂ
ಪಸರಿಸಿದ ಮೇಘಸ್ಥಲದಿ ಖಗೇಶ್ವರನಾದ ಗರುಡ ರಾಜಿಸುತಿರ್ಪನು ೪೫

ಅಲ್ಲಿಂದಮೇಲೆ ದಶಸಾಹಸ್ರಯೋಜನದೊ
ಳುಲ್ಲಾಸದಿಂ ಸಪ್ತಮಾ[8]ನಿಲಾಧಾರದಿಂ[8]
ಸಲ್ಲಲಿತ ಜಲಧರಸ್ಥಾನದೊಳಮಳವಾಹಿನಿಯು ಪತ್ತುಗಾವುದದಲಿ
ನಿಲ್ಲದೆ ವಿಚಿತ್ರವರ್ಣದ ಕಮಲಕುಮುದ[9]ಮುಂ
ಟಲ್ಲಿ[9] ಹಂಸಾದಿಯಿಂ [10]ರಂಜಿಸುತ್ತಿರುವದದ
ರಲ್ಲಿ ಸುಸ್ನಾನಾದಿ ಕ್ರಿಯೆಯಿಂದ ನೋಡೆ[10] ಮನುಮುನಿ ಸಿದ್ಧ ನಿರ್ಜರರಿಗೆ ೪೬

ಸಕಲಸಂಪದವಿತ್ತು ರಕ್ಷಿಸುತ್ತಿರ್ಪುದೈ
ಯಕಂಟಿಲನೆಯಲ್ಲಿಂದಮೇಲೆ ದಶಸಾಹಸ್ರ
ಪ್ರಕಟಯೋಜನ[11]ದೊಳೆಂಟನೆಯ ಪವನಾಧಾರ[11] ಮೇಘಾಶ್ರಯಸ್ಥಾನದಿ
ಸುಕರಗಣನಿಕರ[12]ದಿಂ[12] ನಂದೀಶನಿರ್ಪನಂ
ತಕಳಂಕಮದರಿಂದ ಮೇಲಯುತಯೋಜನದೆ
[13]ಸುಕಲ ನವಮಾನಿಲಾ[13]ಧಾರ ಮೇಘಸ್ಥಳದೊಳಿರ್ಪನಾ ದಕ್ಷಬ್ರಹ್ಮಂ ೪೭

---

1 ಸೆ ಬಂಕು (ಜ) 2 ತರಿದಹ ನರಾದಿ (ಜ) 3 ಲಾಡಿಯಂ। ತರರೆ (ಜ) 4 ಯೋಜನೋನ್ನತದ ಪಂಚಮುಪವನ। ನಶವಶಾ (ಜ) 5 ದಲ್ಲಿ (ಜ) 6 ತಂ ಮುಖ್ಯದಿಗ್ಗಜಗಳಿಹವು (ಜ) 7 ಲಸಮ ಆರನೆಯ ಪವಮಾನ (ಜ) 8 ರುತಾಧಾರದ (ಜ) 9 ಮಂ। ತಲ್ಲಿ (ಜ) 10 ದಲಂಕೃತಮುಮಾಗಿ ಬಿಡ। ದಲ್ಲಿ ಸ್ನಾನಪಾನಾದಿ ದರ್ಶನದಿಂದ (ಜ) 11 ಮೆಂಟುಮಾರುತಾಧಾರ (ಜ) 12 ಸಹ (ಜ) 13 ಚಕಿತನವಮಾರುತಾ (ಜ)

ಬಳಿಕಲಿಂತಪ್ಪ ಮೇಘಾಶ್ರಯದೊಳಿರ್ದವರು
ಪೊಳೆವ ತಮ್ಮಂಗ[1]ರತ್ನಾಭರಣ ವಸನಗಳ[1]
ಬೆಳಗಿನಿಂದಖಿಳವಿಷಯಪ್ರಕಾಶಗಳಾಗೆ ಸೋಮಸೂರ್ಯಾಗ್ನಿಪ್ರಭೆಯಿಂ
ತಿಳಿಯ[2]ಲ್ಕಪೇ[2]ಕ್ಷಿಸಲ್ಕಿಲ್ಲಮದರಿಂ ಮೇಲೆ
ಘಳಿಲನೇ ಹತ್ತುಸಾಸಿರಗಾವುದಳತೆಯೊಳ್
ಕಳೆಯನಿಲನಾಧಾರವಹ ವಿಮಾನಸ್ಥಾನಮೆನಿಸುವ [3]ಭಂವರ್ಲೋಕದಿಂ[3] ೪೮

*ವೀರಭದ್ರಂ ಶಂಭುಗಿರಿಶನಜನೇಕಪಾ
ದಾರಯಲಹಿರ್ಬುಧ್ನನುಂ ಪಿನಾಕಿ ಸ್ಥಾಣು
ಭೂರಿಬಲರಹ ಪಶುಪತಿ ಭವತ್ರಿಷಾಂಪತಿಗಳೇಕಾದಶೇಶಾನರು
ಈರೀತಿಯಿಂದ ಧಾತ್ರಾದಿ ಪ್ರಭಾವಾಂತ
ಚಾರ್ವಷ್ಟವಸುಗಳುಂ ಹಂಸಾದಿ ವಿಷ್ರಾಂತ
ಸೂರರೆ ದ್ವಾದಶಾಂಕರ್ ವರ್ತಿಸುತ[4]ರಿ[4]ಲ್ಲಿಗದು ಲಕ್ಷಯೋಜನ ವಿಂತಂ ೪೯

ವರಚಕ್ರದಗಲ ಎಪ್ಪತ್ತುಸಾಸಿರಗಾವು
ದರಿಯದರ್ ನೇಮಿ ಸಾಹಸ್ರಯೋಜನಮೈದು
ತೆರದಿ ಮೊಳೆಗಂಬಿಯಾಗಾಲಿಯಗಲದೆ ಸಾಸಿರದ ಗಾವುದಂ ಭಾವಿಸೆ[5]
ತಿರುಗುವಾ ಮಧ್ಯದೊಳ್ ಪತ್ತುಸಾವಿರಗಾವು
ದರರೆ ಪರಿಮಿತ ವಜ್ರವೇದಿಕೆಯ ನೆಲಚಕ್ರ
ಮಿರದೆ ಪೂರ್ವೋಕ್ತಭೂಮಿಯಲಿ ಲೋಕಾಲೋಕಪರ್ವತದ ಮೇಲೆ ಚರಿಸಿ ೫೦

ಬರುತಿರ್ಪುದದರ ನಾಭಿಯೊಳು ವೇಧಿಸಿದಚ್ಚು
ನಿ[6]ರು[6]ತ ಶತಕೋಟಿ [7]ಮಿತ[7]ವಹುದಂ ಷೋಡಶಕೋಟಿ
ಪರಿಗಣನೆ ಯೋಜನದ ನಿಲವದರ ಚತುರಸ್ರವೆಂಟುಸಾವಿರಗಾವುದ
ದೊರೆವಡೆದ ಮುಂದಗಾಣದ ಕತ್ತರಿ[8]ಯ ಭಾವ
ವಿ[8]ರವಿನಿಂ ಮೇರುವಿನ ತಿರುಗಣೆಯಂ ಶಂಖಿಕ್ಕ
ಮರಿ[9]ಯಿರುವ ಮೇಲುವಲಗೆಯ[9]ದಟ್ಟವೆಂರಡುಸಾವಿರಯೋಜ[10]ನಂ ಭಾವಿಸೆ[10] ೫೧

---

1 ಭವಿರತ್ನಾಭರಣಗಳ ದ್ಯುತಿಯ (ಜ) 2 ಲಾಪೇ (ಜ) 3 ತಿ ದಿನನಾಥನು (ಜ) 4 ಲಿ (ಕ)
5 ಮ ಪತ್ತಿಗೆ ಸಹಪ್ರಯೋಜನಂ ಪರಿವಿಶಾಲ್ಯೈದು ಮೊಳೆಗಾಲಿಮುಂದಂ ಸಾವಿರಗಾವುದಾ ಚಕ್ರವು (ಜ)
6 ರ (ಕಗ) 7 ಮಯ (ಜ) 8 ಯಾಕಾರ।ದಿ (ಜ) 9 ರ್ಪುದಚ್ಚಿನುರೆಯಂಗ್ರಫಲಕದ (ಜ) 10 ನಂ (ಜ)

* ಜ ಪ್ರತಿಯಲ್ಲಿ ೪೯ನೆಯ ಪದ್ಯವಿಲ್ಲ.

ಅಚ್ಚಿನಾ ಮಂಧ್ಯಫಲಕಾಗ್ರದೊಳ್ ನೆರೆನೋಡ
ಲಚ್ಚರಿಯ ವಿಶ್ವಕರ್ಮನ ನಿಯಾಮಕದಿಂದ
ಹೊಚ್ಚಹೊಸ ಪುಷ್ಪಕವೆ ನವರತ್ನಮಯದ ಸ್ತಂಭಂಗಳಿಂ ಧ್ವಜಮುಖಾದಿ
ಪೆಚ್ಚುಗೆ ವಿಚಿತ್ರರಚನೆಗಳಿಂದ ಸಿಂಗರದೆ
ಮುಚ್ಚಿ ಕಂಗೊಳಿಪಮಳ ಪೊನ್ನರನ್ನದ [1]ಕೀಲ
ಬೆಚ್ಚುಗೆಯ ದಿವ್ಯತರಸಿಂಹಾಸನದಿ ಸೂರ್ಯಸಂಭ್ರಮದಿ[1] ರಾಜಿಸುತ್ತ ೫೨

ತಪಿನಿ ಕಾಪಿನಿ ಧೂಮ್ರ [2]ಜ್ವಾಲಿನಿ ಮರೀಚಿ[2] ರುಚಿ
[3]ನಿಪುಣನೆ ಸುಷುಮ್ನೆ ಭೋಗದೆ ವಿಶ್ವಬೋಧಿನಿಯುಂ
ವಿಪುಲಗುಣಧರಣಿಯುಂ ಕ್ಷಮೆ ಪ್ರಭೆಯುಯೆನಿಸುವೀ ದ್ವಾದಶಮಹಾಕಲೆಗಳಿಂ
ತಪಿತು ಕುಳಿಗೊಂಬ ಮಳೆಯುಂ ಕರೆವ ಕಿರಣಂಗ
ಳ ಪರಿಮಾಣಂ ಮೂರುಂಮೂರುಂಮೂರರ ಸಾಲು
ಸಫಲವಹಕರವೊಂದಿವಂತು ಸಾವಿರಕರಂಗಳು ಭಾಸ್ಕರಂಗೆಣಿಸಲು[3] ೫೩

[4]ವರಕುಸುಮ[4]ಕೇಶಂಗಳಿಂದ ಕಮಲಾ[5]ದಿಯಂ[5]
ಧರಿಸಿರ್ದ ಕರಚತುರ್ಭುಜಗಳಿಂ ಮಕುಟಮುಖ
ವರ[6]ಕಂಠಮಾಲಾದಿಭೂಷಣ ಸುವಸ್ತ್ರಚಂದನಗಂಧಮಾಲ್ಯಂಗಳಿಂ[6]
ಪರಿಪರಿಯಂ [7]ಸಿಂಗರಂಪಡೆದು[7]ಸಿಂಧೂರಮಯ
[8]ಸುರುಚಿಯಿಂದೊಂಬತ್ತುಸಾವಿರದ ಮಾನದಿಂ[8]
ದರರೆ ದೀರ್ಘ[9]ಸುಮಾಗಿ ತಾರಕಾಯೋಜನಸಹಸ್ರ ವಿಸ್ತಾರನಾಗಿ[9] ೫೪

ತನ್ನ ಪ್ರಭಾಮಂಡಲಂಗೂಡಿ ಷಟ್ತ್ರಿಂಶ
ದುನ್ನತಸಹಸ್ರಯೋಜನ ವಿಶಾಲದೊಳೆಸೆವು
ತಂ ನಿಜದ ತೇರಿನೀಷಾದಂಡದಗ್ರದುರೆನೊಗದ ನಡುವೊಂದಶ್ವಮಂ
[10]ಚನ್ನಾಗಿರಲ್ ನೊ[10]ಗದಯೆಡಬಲದ ಕಡೆಯೊಳಗೆ
ಭಿನ್ನವಿಲ್ಲದೆ ಮೂರುಮೂರು ಕುದುರೆಗಳ ಸಂ
ಪನ್ನನೇ ಸರ್ಪಪಾಶದೊಳು ಬಂಧಿಸಿ ಕುಲಾಲನ ಚಕ್ರಭ್ರಮಣದಂತೆ ೫೫

---

1 ದಿವ್ಯ। ದಚ್ಯುತವಿಶಾಲಮಯ ಸಿಂಹಾಸನದೊಳಾ ಸೂರ್ಯಸಂಭ್ರಮತೆತ್ತು (ಜ) 2 ಮರೀಚಿ ಜ್ವಾಲಿನಿ (ಜ) 3 ಯಪರಿಮಿತ ಸುಷುಮ್ನಾಭೋಗದಾ ಮತ್ತೆಯುಂ ಸುಪಥಮಯ ವಿಶ್ವಬೋಧಿನಿ ಧರಣಿಕ್ರಮ ಪ್ರಭಾದ್ವಾದಶಕಲೆಗಳಿಂದುಪಮಿಸಲ್ಕಾವರಣನಾಗಿ ಹಿಮೋಷ್ಣವರ್ಷಮುಪರಿಷ್ಟ ಬೀಜ ಭೂತಕಿರಣೊಂದಂ ಸಹಚಪಳದೇವಲನೆ ಸಾಹಸ್ರಕರನೆನಿಸಿ ಕಾಲಕ್ರಮಾತ್ಮಕನೆನಿಸುತ (ಜ) 4 ಹಿರಣ್ಮಯಸು (ಜ) 5 ಧಿಕಂ (ಜ) 6 ಕೇಯೂರಂ ಕುಂಡಲಾದಿ ಭೂಷಣ ವಸ್ತ್ರಗಂಧಮ ಮಾಲ್ಯಾದಿಯಿಂ (ಜ) 7 ಲಂಕೃತನುಮಾಗಿ (ಜ) 8 ಶರಿರು ದಿಂದೊಂಬತ್ತು ಸಾವಿರಗಾವುದಳತೆಯಿಂ (ಜ) 9 ನುಮಾಗಿಪ್ಪತ್ತೇಳುಸಾಹಸ್ರಯೋಜನದಗಲ ವಿಸ್ತಾರದಿಂ (ಜ) 10 ಪನ್ನತಿಯಿನಾನೊ (ಜ)

ಮೇರುಪ್ರದಕ್ಷಿಣಮುಮಾಗಿ ತಿರುಗುವ ರಥವ
ನಾರಯ್ಯೆ ಜನರೊಂದು[1]ಸುರ್ಗೆ ಇ[1]ಪ್ಪತ್ತೊಂದುಂ
ಸಾರಸಾಹಸ್ರಮರಂನೂರುಯೋಜನ ನಡೆವುದೀ ಕ್ರಮದೊಳಿರುಳುಂ ಪಗಲು
ವಾರವೊಂದಕ್ಕೆ ನಾಲ್ವತ್ತಾರುಕೋಟಿಯುಂ
ಭೂರಿಯಂರುವತ್ತೈದುಲಕ್ಷಸಾಸಿರ ಷಷ್ಟಿ
ಯಾರಯ್ಯೆ ಯೋಜನಪ್ರಮಾಣದಿಂ ನಡೆವುತ್ತಮಿಂತು ಪಗಲೊಂದರಲ್ಲಿ ೫೬

ಉದಯಾದ್ರಿಯಿಂದಸ್ತಗಿರಿಯಂನೈದಲ್ ಮೇರಂ
ಪೊದಗಿ ಮರೆಯಾಗೆ [2]ಪೂರ್ವಂತೊಡಗಿ ಪಶ್ಚಿಮದ
ಪದವಂಧಕಾರಮಯವಾಗಿರುಳುಪುಟ್ಟುವುದು ವಾಮಭಾಗದಲಂತ್ತರಂ[2]
ಪದೆದಲ್ಲಿ ಹಗಲಹುದು ಪೂರ್ವಾದ್ರಿಯೊಳ್ ನೋಡೆ
ವಿದಿತಮಾಗಿಲ್ಲಿ ಹಗಲಹುದು ಮೇರುವಿನಂತ್ತ
[3]ರದಲಿ[3] ಕತ್ತಲೆಯಹುದು ಬಳಿಕ ಪಗಲಿರುಳು ಕುರು[4]ಪೆಂತೆನಲದಂ[4] ಪೇಳ್ವೆನು ೫೭

ಪ್ರಥಮಸೃಷ್ಟಿಯೊಳಜ ತಮೋಮಯಶರೀರಮಂ
ವಿತತಮಾಗಳವಡಿಸಿಯಸುರರಂ ನಿರ್ಮಿಸು
ತ್ತಿತಿವೇಗದಿಂದಲಾ ತನುವ ಬಿಡೆ ಮರ್ತ್ಯರ್ಗೆ ರಾತ್ರಿಯಾಯ್ತುಂ ಬಳಿಕ್ಕಂ
ಚತುರಾಸ್ಯಸತ್ವಮಯತನುವ ತಳೆವುತಸುರರ
[5]ನುತಚರಿತ್ರರನು[5] ನಿರ್ಮಿಸುತಲಾ ತನುವ ಬಿಡೆ
ಸತತ ಮನುಜರ್ಗೆ ದಿವವಾಯ್ತು ಮತ್ತಾ ಸತ್ವದೇಹಮಂ ಧರಿಸಿ ಬ್ರಹ್ಮಂ ೫೮

ವರ ಪಿತೃಗಳಂ ಪಡೆವುತಾ ತ[6]ಮುವ ಕಳೆಯ[6]ಲದು
ನರರ್ಗೆ [7]ಪ್ರಾತಸ್ಸಂಧ್ಯೆಸಾಯಂತನಮದಾಯ್ತು[7]
ಪರಿಕಿಸಲ್ಕೀ ವಿಧದೆ [8]ಪಗಲಿರುಳ್ ಪುಟ್ಟಿ ತಾ ಪಗಲಿರುಳ ನಡಸುತ ರವಿ[8]
ಭರದಿಂದ ತನಗಡ್ಡಬರ್ಪ ಮಂದೇಹರೆಂ
ಬ[9]ರಿರಾಕ್ಷಸರ ಕೂಡೆ [9]ಕಾಳಗವನೆಸಗಂತ್ತ
[10]ತಿರುಗುತಿಹ ದೈವಾನುಕೂಲಮಿಂರೆ ವಿಘ್ನಂಗಳೇನಮಾಡಲ್ಕಾಪವು[10] ೫೯

---

1 ಶ್ವಾಸಕಿ (ಜ) 2 ಪಶ್ಚಿಮಪೂರ್ವಮಾದ್ಯಂತ ಗದಿತಾಂಧಕಾರಮಯವಾಗಿರುಳು ಸುರಗಿರಿಯ ಬಡಗಲೆಲ್ಲಂ ಪ್ರಕಾಶಂ (ಜ) 3 ರೊದಗಿ (ಜ) 4 ಹದೆಂತೆನೆ (ಜ) 5 ಮಿತಮಿಲ್ಲದವರ (ಜ) 6 ನುವತ್ಮಜಸ (ಜ) 7 ದಿವಸಂಧ್ಯಾಸ್ವರೂಪವಾಯ್ತು ಕೇಳ್ (ಜ) 8 ದಿವರಾತ್ರೆಯಾದವೀಗಳ್ ನಡಸುತಾ ಸೂರ್ಯನು (ಜ) 9 ಪಿರಿಯ ರಕ್ಕಸರೊಡನೆ (ಜ) 10 ರರೆ ದೈವಾನುಕೂಲದೊಳು ನಿರ್ವಿಘ್ನದೆ ನಿರಾಲಂಬದೊಳ್ ಚರಿಸುವಂ (ಜ)

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳ ಸುಪುಂಜರಂಜಿತ ಪುರಾತನ ವಚನ ಸಮ್ಮತವಹ
ಅತಿಶಯ ಮಹಾಲಿಂಗ ಪದಪದ್ಮಷಟ್ಪದೋ
ದಿತ[1]ರೂಪರಹ ಚತುರ್ಗುರು ಚರಿತದೊಳ್ ಪಂಚ
ದತಿನೂತ್ನವಹ ಕಾಂಡದೊಳ್ ನೋಡಲೆರಡನೆಯ ಸಂಧಿ ಸಂಪೂರ್ಣವಾಯ್ತು[1] ೬೦

ಇದು ಚತುರ್ಯುಗದೊಳಾಚಾರ್ಯರೂಪಂತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕೋರಾಮಾದ್ಯಧರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತ ಮಾಹೇಶ್ವರರಿಗಿಷ್ಟಾರ್ಥಮಹುದು ಸತ್ಯಂ ೬೧

---

1 ಸಚಾರಿತ್ರದೊಳ್‌ನೋಡೆ। ಯತಿನೂತ್ನಮಾದ್ಯೈದುಕಾಂಡದೊಳೆರಡನೆಯಸಂಧಿ ಸುಜ್ಞಾನಾನುಬಂಧಿ (ಜ)

# ಮೂರನೆಯ ಸಂಧಿ

ಸೂಚನೆ :

ವರಭುವರ್ಲೋಕ ಮುಖ್ಯೋರ್ಧ್ವಲೋಕಗಳ ನವ
ರಿರವನಂತವರೊಳಿಹ ಮಂಡಲಂಗಳಜಾಂಡ
ಪರಿರಕ್ಷಿಸುವ ರುದ್ರರಮಿತವರ್ಣಂಗಳಂ ನಿರವಿಸಿದ ಮುನಿಪೋತ್ತಮಂ

ಪೆರೆಗೊಡೆಯುವಗೆಯ ಸೊಡಬ[1]ಲಿ[1]ವನೆಯುಗಿನಿಗಣ್ಣ
ಪಿರಿತಿನಿಯರಾಳ್ಮ ಬಾಂಬೊಚ್ಚದಲೆಯಂ ಗನಹ
ನರಿಲ್ವಟ್ಟಿ ನವಿರಕಾರ್ಮಂಡುವಿನಯ್ಯಂ ಹಗ್ಗಿ ವಿಂಗಲಚ್ಚಣಚ್ಚಿ ಸಾಂತಂ
ಸಿರಿಯೊಡೆಯನಾಣ್ಮನುರೆ ರನ್ನದಪ್ಪಲವನೆಯ
ನರುವೋರೆ ಬಿಜ್ಜವಳರಯ್ಯನೆಲರುಣಿಹಚ್ಚ
ಯೆರಲೆಗುರುಪಂ ತಾಳ್ದ ಮುದಿಯನೊಡೆಯಂ[2]ನೋಡಿ ಪೊರಗೆಮ್ಮ[2] ಚನ್ನಮಲ್ಲ ೧

ದ್ವಾರಸಾಗರದಿಂದ ಹಂಪೆಗೆಯ್ದುತ್ತಮಂದ
ನಾರಿ ಹರಿಹರಲಿಂಗದಾಲಯದೊಳಿರುತ ಮ
ತ್ತಾರುವಂ ಪೊಗಲೀಯದಾ ಬೊಮ್ಮರಕ್ಕಸನ ಪೊರಮಡಿಸಿ ಶಿವನ ಭಜಿಸಿ
ಚಾರುವಿರುಪಾಕ್ಷನಿಂ ಪಡೆದ ಪೊನ್ನಿಂ ಜಂಗ
ಮಾರಾಧನಂಗೆಯ್ವುತಿರೆ ಪದ್ಮಿನಿಯುಂ ಬಯಸ
ಲಾ ರಮ್ಯಲಿಂಗದೊಳವ[3]ಳ ಕೂಡಿವೆರದಾ ಹರೀಶ್ವರಂಗಾನೆರಗುವೆಂ[3] ೨

ಧರೆಗೊಂದುಲಕ್ಷಯೋಜನ ಭುವರ್ಲೋಕದೊಳ್
ತರಣಿ ತಾವ್ಮ್ರದ ಲಿಂಗಮರ್ಚಿಸುತ ಸುಖಮಿರ್ಪ
ಇರುಳೊಡೆಯನೆರಡುಲಕ್ಷದ ಗಾವುದದಲಿ ಮೌಕ್ತಿಕದ ಲಿಂಗವ ಯಜಿಸುತ
ಪರಿಣಾಮ[4]ದಿಂದಿಹ ತ್ರಿ[4]ಲಕ್ಷಯೋಜನ[5]ಮಿತದೊ
ಳರಿಲು[5]ಗಳು ಬಹುವರ್ಣ ಲಿಂಗಪೂಜೆಯೊಳಿಹರು
ವರಮೌಕ್ತಿಕದ ಲಿಂಗಭಜನೆಯಿಂದ್ಯೆ[6]ಲಕ್ಕಗಾವುದದಿ ಬಂಧನಿಪ್ಪನು[6] ೩

---

1 ರಿ (ಗ) 2 ಪೊರೆಗೆಮ್ಮ ಗುರು (ಜ) 3 ಳು ಸಹವೆರೆದ ಹರೀಶ್ವರದೇವರಡಿಗೆರಗುವೆಂ (ಜ) 4 ದೊಳಿರ್ಪ ತ್ರೈ (ಜ) 5 ದೊ। ಳರಿಲು (ಜ) 6 ದು ಲಕ್ಷಯೋಜನದಲ್ಲಿ ಬುಧನಿರ್ಪನು (ಜ)

ಭೂವಿಗೇಳುಲಕ್ಷಯೋಜನದಲ್ಲಿ ಶುಕ್ರನುಂ
ತವೆಯುಯುಸ್ಫಾಂತಲಿಗವನರ್ಚಿಪಂ ಕುಜಂ
ನವಲಕ್ಷಯೋಜನದೊಳಾ ಪ್ರವಾಳದ ಲಿಂಗಭಜನೆಯಿ:ಂ[1] ಗುರುವಿಪ್ಪನು[1]
ಸವಿಶೇಷಮಾಣಿಕ್ಯಲಿಂಗಪೂಜೆಯ ಮಾಡು
[2]ತವರ ತ್ರಯೋದಶಸುಲಕ್ಷ[2]ಯೋಜನದೊಳಿಹ
[3]ಕವಿ ಮೇಲೆ[3] ದಶಪಂಚಲಕ್ಷದೊಳ್ ಶನಿ ತಾಮ್ರಲಿಂಗಮಂ ಭಜಿಸುತಿರ್ಪಂ ೪

ರಸೆಗೆ ಹದಿನೈಲಕ್ಕಯೋಜನಾಂತರದಲ್ಲಿ
ಪಸರಿಸಿದ ನವಗ್ರಹಗಳಪ್ಪವಸು[4]ಗಳು ಮತ್ತೆ[4]
ಸಸಿನೆಯಿರ್ಪತ್ತೆಂಟುಯೋಜನೋನ್ನತ ಮಾನಸಂಪನ್ನರಾ ನೇಸರ
ಜಸವೆತ್ತ ಪ್ರಭೆಗೆ ಸಮವಾಗೆಸೆವ ಪುರುಷರಂ
ತಸ[5]ಮಾನಕಾಂತಿಯ[5] ವಿಮಾನಂಗಳೊಪ್ಪುವವು
ಮಿಂಸುಪ ಭುವರ್ಲೋಕದಧಿಪತಿಯು ರವಿಯಾವರ್ಣನದ ಮೇಲೆ ಕೇಳ್ ದೇವಲ ೫

ಮುನಿಪ ಭೂವರ್ಲೋಕವೆಂಭತ್ತೈದಂಲಕ್ಷಯೋ
ಜನದೊಳಾ ಸ್ವರ್ಲೋಕವಿಹುದದರ ವೈಭವವ
ವಿನಂತಿಸಲ್ಕಳವಲ್ಲ ಧ್ರುವನಲ್ಲಿ ನೀಲಲಿಂಗವ ಭಜಿಸಿ ಸುಖಮಿರುತ್ತ
ಘನಮಾರ್ಗದೊಳ್ ಚರಿ[6]ಸುತರಿಲುಗಳ ಖೇಟಗಳ
ನ[6]ನಿಲಸೂತ್ರದೊಳಾಡಿಸುತ್ತಿಹಂ ಬುವಿಯಲ್ಲಿ
ಸನಯದಿಂ ಸದ್ಧರ್ಮಗಳನೆಸಗಿದವರೆಯ್ದಿ ಸ್ವರ್ಗದೊಳ್ ಭೋಗಂಗಳಂ ೬

ಭೋಗಿಸುತ್ತಾ ಸುಕೃತಪೂ[7]ರ್ವ[7]ಮಾಗಲ್ ಧರೆಗೆ
ಬೇಗದಿಂ ಬಂದು ಪುಣ್ಯವ ಘಳಿಸಿ ಸ್ವರ್ಗಕ್ಕೆ
ರಾಗದಿಂದೆಯ್ದುಮರಭೋಗಮದು ತೀರೆ ರಾಟಾಳಘಟದಂತೆ ಮರಳಿ
ಸಾಗಿ ಮರ್ತ್ಯಕೆ ಬರ್ಪರಾ ಧ್ರುವನ ಮೇಲೆ ದ್ವಿ
ಯೋಗಕೋಟಿಯೊಳಿಹ ಮಹರ್ಲೋಕಮಲ್ಲಿ ಬಿಡ
ದೇಗಳಂ[8] ಕೂಡಿ ಮಾರ್ಕಂಡೇಯನಿರ್ಪನು ಮರೀಚ್ಯಾದಿ ಮುನಿಗಳೊಡನೆ[8] ೭

---

1 ದಿಹ ಬೃಹಸ್ಪತಿ (ಜ) 2 ತವಿರಳ ತ್ರಯೋದಶಲಕ್ಷ (ಜ) 3 ನವಿರತಂ (ಜ) 4 ಮೆನಿಪರುಂ (ಜ) 5 ಮಾಂಗಭವಿ (ಜ) 6 ಸರಿಲುಗ್ರಗಳು ಮುಖ್ಯ।ಮ (ಜ) 7 ೞ (ಜ) 8 ಶಚಿಮುಖ್ಯದೇವರೊಪ್ಪ ವರು ಬಳಿಕಿರ್ಪನಾ ಮಾರ್ಕಂಡೇಯಂ (ಜ)

ಸ್ಥಾಣುನಾಮದ ಲಿಂಗಭಜನೆಯಿಂದಖಿಳಮುನಿ
ಶ್ರೇಣಿಯಿಂದೋಲೈಸಿಕೊಳುತಲಿಚ್ಛಾಪುರಣ
ದಾಣತಿಯಿನಿರ್ಪನು ಮಹರ್ಲೋಕದಿಂ[1]ದೆಂಟುಕೋಟಿಗಾವುದ ಮಾನದಿ[1]
ಮಾಣದೆ ಜನರ್ಲೋಕಮಿಹದದಲ್ಲಿಯೆ ವಸಿಷ್ಠ
ಮೌನಿಪ್ರಮುಖರೆಲ್ಲ ಕುಶಲಿಂಗಭಜನೆಯಿಂ
[2]ತ್ರಾಣದಿಂದೆಸಗುತ್ತಲಿ[2]ರ್ಪರಲ್ಲಿಂಮೇಲೆ ಪನ್ನೆರಳ್ಕೋಟಿಯಲ್ಲಿ ೮

•ಸನಕಂ ಸನಂದಂ ಸನತ್ಕುಮಾರಂ ಬುಭುವು
ಘನನಾ ಸನತ್ಸುಜಾತಂ ತಪೋಲೋಕದೊಳ್
ಮನೆಯ ಮಾಡಿರುತಂ ಸದಾಶಿವ ಸುಲಿಂಗಮಂ ಭಜಿಸುತಿರುತಿರ್ಪರಲ್ಲಿಂ
ಎಣಿಸಲ್ಕೆ ಪದಿನಾರುಕೋಟಿಯೋಜನದಲ್ಲಿ
ವನಜಾಸನನ ಸತ್ಯಲೋಕವಿಹುದಲ್ಲಿ ವಿಧಿ
ಯನುನಯದಿ ಶಿಲೆಯ ಲಿಂಗವ ಪೂಜಿಸುತ್ತ ಪರಮಾನಂದದಿಂದಿರ್ಪನು ೯

ವೇದಗಳ್ ಮೂರ್ತಿವತ್ತಾಗಿರ್ಪುವಲ್ಲಿ ಬಿಡ
ದಾದರದಿ ಗಾಯತ್ರಿ ಸಾವಿತ್ರಿ ವಾಣಿ[1]ಮೊದ
ಲಾದಂಗನೆಯರಿಂದ ಭೃಗುಮುಖ ನವಬ್ರಹ್ಮರಿಂದ ನಾರದಪರ್ವತ
ಆದಿಯಾದಮರಮುನಿವರ್ಗದಿಂದಲ್ಲಿಂದ
ವೇದಮಿತಕೋಟಿಯೋಜನದಿ ವೈಕುಂಠಮಿಹು
ದಾದಿ[1]ನಾರಾಯಣಂ ಇಂದ್ರನೀಲದ ಲಿಂಗಪೂಜೆಯಿಂ ರಾಜಿಸುತಿಹಂ ೧೦

ಅದರಿಂದ ಮೇಲಾರುಕೋಟಿಗಾವುದದಲ್ಲಿ
ವಿದಿತವಹ ರುದ್ರಲೋಕಂ ಮೆರೆವುದಂತಲ್ಲಿ
ಸದಮಳವಿಮಾನಂಗಳಿಂ ಕನಕರತ್ನಹರ್ಮ್ಯಪ್ರಭಾಗೃಹಗಳಿಂದ
ಉದಿತ ಸಾರ್ವರ್ತುಕಫಲಪ್ರದ ವನಂಗಳಿಂ
ಪದುಳದಿಂ ಸೇವಿಸುವ ದೇವಗಂಧರ್ವರಿಂ
ದಧಿಕಬ್ರಹ್ಮಾಂಡಕ್ಕೆ ಕಲಶಮೆಂಬಂತೆ ರಾಜಿಸುತಿಹಂದು ಮುಕ್ತಿಲೋಕಂ ೧೧

---

1 ಕ್ರತುಮೋದದೆ ಮರಿಚ್ಯತ್ರಿ ಭೃಗು ಪುಲಹ ದಕ್ಷ ಕಾಶ್ಯಪ ಪುಲಸ್ತ್ಯಾಂಗೀರಸಂ। ಭೇದನವ ಬ್ರಹ್ಮರಿರ್ಪರದರಿಂ ಮೇಲೆ ವೇದಿಸಿದ ನಾಲ್ಕೋಟಿಯೋಜನದಲ್ಲಿ ವೈಕುಂಠದೊಳಾದಿ (ಜ)

* ಜ ಪತ್ರಿಯಲ್ಲಿ ೯ನೆಯ ಪದ್ಯಕ್ಕೆ ಬದಲಾಗಿ ಬೇರೆ ಪದ್ಯವಿದೆ. ಅನುಬಂಧ ನೋಡಿ.

ಮತ್ತೆ ವರವರ್ಣಿನಿ ವರೇ[1]ಣ್ಯೆ ವರದೆ ವರಿಷ್ಠೆ[1]
ಬಿತ್ತರದ ಯಾಗರಿ[2]ಷ್ಠೆಯು ವರಾರೋಹಿಣಿ ಕೇ
ಳ[2]ತ್ಯಧಿಕ ವರಸುತೆಯೆನಿಪ್ಪ ಗಂಗೆಗಳಲ್ಲಿ ನೂರುಸಾಸಿರದಳಗಳ
[3]ಮೊತ್ತದಿಂ ನೀಲರುಚಿನಾಳದಿಂ ದಶಯೋಜ
ನೋತ್ತುಂಗದಿಂ ತನ್ನ ಕಂಪಿನಿಂ ಸಾವಿರಮೆ
ನುತ್ತ ಪೆಸರೊಡೆದ ದಿಕ್ಕುಗಳ ಮಘಮಘಿಸುತ್ತ ಕಮಲಂಗಳಿರ್ಪವಲ್ಲಿ[3] ೧೨

ಸುಂದರದ [4]ಭಾವದಲಿ ಕೋಟ್ಯಂಶದೊಳು ಲೇಶ[4]
ದಂದ[5]ಮದು ಮಿಕ್ಕವರೊಳಿಲ್ಲವೆನಿಸುವ[5] ರುದ್ರ
ಸುಂದರಿಯರಪರಮಿತ ಮೆರವುತಿಹರಘಟನಾಘಟನ ಸಾಮರ್ಥ್ಯರಾದ
ವಂದಮತಿ[6]ಯಂ ಮುಟ್ಟದಿರುತ[6] ಬ್ರಹ್ಮಾಂಡಗಳ
ಛಂದದಿಂ ಸೃಜಿಸಿ ರಕ್ಷಿಸುವ ನಾನಾರುದ್ರ
ರಂದ[7]ದಿಂದಿ[7]ಹರು ಶಿವಲೋಕದೊಳ್ ರಮ್ಯವಾದರಮನೆಯೊಳೀಶನಿರ್ಪಂ ೧೩

ಇಂತಹ ಮಹಾರುದ್ರಲೋಕದಿಂ ಮೇಲೆ ಕೇ
ಳಂತಕಾಂತಕ ದಂಡಪಾಣಿ ಗುದ್ರನ ಭಂವನ
[8]ಮಿಂತುದಿಗೆಯಿಂದಿರ್ಪರಾ[8] ರುದ್ರಬ್ರಹ್ಮಾಂಡ[9]ದೊಳಗಿರುವ ದುರ್ಮಾರ್ಗರಂ[9]
ತಾಂ ತವಕದಿಂ ಮುನಿದು ದಂಡಮಂ ಮುಟ್ಟಿಸ
ಲ್ಕಂತವರು ಲಯವಹರಖಂಡದೈಶ್ವರ್ಯದಿಂ
ದಿಂತು ರಾಜಿಸಲಿಲ್ಲಿ ದ್ರುಹಿಣಾಂಡಕಾರ್ಯ[10]ಮಾದುದು[10] ಮುಂದೆ ದೇವಲಮುನಿ ೧೪

ಇನ್ನು ಕೇಳ್ ಬ್ರಹ್ಮಾಂಡದಾ ಬಹಿರ್ಭಾಗಮಂ
ಚೆನ್ನಾಗಿ ರಕ್ಷಿಸುವ ಶತರುದ್ರರವರುಗಳ
[11]ಮುನ್ನುಳ್ಳ ನಾಮಮುಂ ಪೇಳ್ವೆನಾಲಿಸು ಕಪಾಲೀಶನಜಬುದ್ಧನೆಣಿಸೆ
ಚೆನ್ನಾಗಿ ವಜ್ರದೇಹಂ ಪ್ರಮರ್ದನಪ್ರಭೂ
ತ್ಯುನ್ನತಗುಣನೆಯುಪ್ಯಯಂ ಶಾಸ್ತ್ರವು ಪಿನಾಕಿ
ಸನ್ನೀತಿಶಾಲಿಯೇ ತ್ರಿದಶವಂದಿತರೆಂಬರಿಂದ್ರದಿಕ್ಕಿನೊಳಗಿಹರು[11] ೧೫

---

1 ಣ್ಯವರಿಷ್ಠಾವರದೆ (ಜ) 2 ಷ್ಠಾವರಾರೋಹಿಮಹಾ।ಅ (ಜ) 3 ಮತ್ತಿಂದ್ರನೀಲನಾಳ ಯೋಜನ ದಶಾಂಗುತ್ತಮವಿಶಾಲಮಯ ಕಮಲ ದೆಸೆದೆಸೆಗೆ ಪರಪುತ್ತ ಪರಿಮಳದಿಂದಿಹವುಮಿಾರೇಳ್ ಜಗದ ಸತಿಜನಕೆ ತಮ್ಮಂಗವ (ಜ) 4 ಚೆಲ್ವಿಕೆಯ ಕೋಟ್ಯಂಶದೊಳಣುಮಾತ್ರ (ಜ) 5 ಮಂಕೊಟ್ಟು ಲಾವಣ್ಯ ವೆಸಗುವ (ಜ) 6 ಹರಿಯಜೇಂದ್ರಾದಿ (ಜ) 7 ದೊಳಿ (ಜ) 8 ನಂತಪರಿಯಿಂದಿರ್ಪುದಾ (ಜ) 9 ಬಹಿರ್ವರ್ಣಮಂ (ಜ) 10 ಮುಕ್ತಂ (ಜ) 11 ಪನ್ನತಿಯ ನಾಮಂಗಳಾವಾವೆನಲ್ ಕ್ಷಿತಿಭೃತು ಸರ್ವತೋಮುಖನು ಬಳಿಕ। ಉನ್ನತೋಗ್ರಾಸನುಂ ಧೈರ್ಯನಾ ವೃಷಧೃತ್ ಸಂ। ಪನ್ನವ್ಯ ಷಪಾತಾಳ ಪತಿ ವೀರಭದ್ರನುಂ। ಚೆನ್ನೆಸೆವ ದಶರುದ್ರರಿವರೊಳನಂತರುದ್ರರು ರಕ್ಷಿಸುವರಾ ವಿಷ್ಣುವಂ (ಜ)

*ಜ್ವಲನರುದ್ರ ಹುತಾಸಿ ಪಿಂಗಲಂ ಬಾಧಕಂ
ಜ್ವಲನಂ ಹರಂ ದಹನ ಬಭ್ರು ಭಸ್ಮಾಂತಕಂ
ಲಲಿತನೆ ಕ್ಷಯಾಂತಕಂ ವಹ್ನಿದಿಕ್ಕಿನೊಳಿಹರುಂ ಮೃತ್ಯುಹರನು ವಿಕರ್ತಂ
ಎಲೆ ಕರ್ತೃ ಕಾಲ ಧಾತ್ರಂ ವಿಧಾತ್ರಂ ಧರ್ಮ
ನೊಲವಿಂದ ಧರ್ಮಸಂಯೋಕ್ತರ್ ವಿಯೋಕ್ತೃವೆಂ
ಬಲಘುರುದ್ರರ್ ಯಾಮ್ಯದಿಕ್ಕಿನೊಳಗಿಹರು ನೈಋತ್ಯದಿಕ್ಕಿನೊಳಗಿಹರು ೧೬

*ಕ್ರೂರದೃಷ್ಟಿಯು ಭಯಾನಕನೂರ್ಧ್ವಶೇಷನುಂ
ಮಾರಣಂ ಹಂತುಲೋಹಿತ ವಿರೂಪಾಕ್ಷರುಂ
ನೈರುತಂ ಧೂಮ್ರದಂಷ್ಟ್ರಿಗಳೆಂಬವರು ವರುಣದಿಕ್ಕಿನಲಿ ಬಲನತಿಬಲಂ
ಆರಯ್ಯೆ ಪಾಶಹಸ್ತಂ ಮಹಾಬಲ ಭೀಮ
ಗೌರರ್ಜಲಾಂತಕಂ ಜಯಭದ್ರನಂ ಮೌನಿ
ಪಾರಪ್ರಮುಖ ಕೇಳು ಬಡಬಾಮುಖಂ ದೀರ್ಘಬಾಹುವೆನಿಸುವ ರುದ್ರರು ೧೭

*ಪಂಚಾಂತಕಂ ಶೀಘ್ರಲಘುವಾಯುವೇಗಸ
ತ್ಪಂಚಶಿರ ಮೇಘವಾಹನ ಸೂಕ್ಷ್ಮತೀಕ್ಷ್ಣರು
ಪಂಚದೂರನೆ ಕ್ಷಯಾಂತಕ ಕಪರ್ದಿಗಳು ವಾಯುವ್ಯದೊಳ್ ಮಂಡಿಸಿಹರು
ವಂಚನಾರಹಿತನೆ ಜಟಾಮುಕುಟಧಾರಿಯುಂ
ಚಾಂಚಲ್ಯಹರನೆ ನಾನಾರತ್ನಧಾರಿಯುಂ
ಚಂಚನ್ಮನಸ್ಕನೆ ನಿಧೀಶ ಪ್ರಕಾಶಲಕ್ಷ್ಮೀವಂತರುಂ ಧನ್ಯನುಂ ೧೮

ರೂಪವಂತಂ ಸೌಮ್ಯದೇಹಂ ಪ್ರಸಾದಕೃ
ತ್ತ್ರೀ ಪಾಂಗಿನಿಂ ಕಾಮರೂಪನುತ್ತರದಿಕ್ಕಿ
ಗಾಪಣರ್ ಕಣಾ ಜ್ಞಾನಧರ ವೇದಪಾರಗಸುಖರ್ ಮತ್ತೆ ವಿದ್ಯಾಧರಂ
ತಾಪಸನೆ ಪಿಂಗಾಕ್ಷ ಸರ್ವವಿದ್ಯಾವಿಧಾ
ತ್ರಾಪಾಟಿಯಿಂ ಮಾತೃವೃತ್ತಂ ಬಲಿಪ್ರಿಯಂ
ಕೋಪರಹಿತನೆ ಭೂತಪಾಲ ದುಷ್ಕರರೆಂಬರೈಶಾನಿಯಲ್ಲಿರುವರು ೧೯

---

* ಜ ಪ್ರತಿಯಲ್ಲಿ ೧೬, ೧೭, ೧೮ನೆಯ ಪದ್ಯಗಳಿಗೆ ಬದಲಾಗಿ ಬೇರೆ ಪದ್ಯಗಳು ಬಂದಿವೆ. ಅನುಬಂಧ ನೋಡಿ.

ಪಾಲಕಾನಂತ ಪಾತಾಳೇಶ ಧೀರವೃಷ
ರಾ ಲೋಹಿತಗ್ರಸನ ಶುಭವೃಷಧರ ಸುವೀರ್ಯ
ರೀ ಲೋಕದಿಂ ಕೆಳಗೆ ವರ್ತಿಸುವರೂರ್ಧ್ವಭಾಗದಿ ಶಂಭು[1]ವಿ[1]ಷ್ಣುಸಭರು
ಕೇಳೈ ಗಣಾಧ್ಯಕ್ಷನು ತ್ರಿದಶವಂದಿತಂ
ವೇಲೆ ಸಂವಾಹನು ವಿವಾಹನು ವಿಚಕ್ಷಣಂ
ಪೇಳಲೇಂ ತ್ರ್ಯಕ್ಷವಿಭುಗಳ್ ವರ್ತಿಸುವರು ರಕ್ಷಿಸುವರಾ ದೇಶಂಗಳಂ ೨೦

ಸಲೆಯುಜಾಂಡದ ಪತ್ತುದಿಕ್ಕಿನೊಳ್ ಕಾದಿರ್ಪ
ರಲಘುವೀರೇಶ್ವರನೆಯೆಲ್ಲವಕೆ ಮಿಗಿಲಾಗಿ
ವೊಲಿದು ಶತರುದ್ರರ್ಗೆ ಬ್ರಹ್ಮಾಂಡದಂತರಾಳದ ಭುವನಪತಿಗಳಪ್ಪ
ಮಲಹರಾತ್ಮಕ ರುದ್ರಸಂಕುಳಕೆ ಪತಿಯಾಗಿ
ಚೆಲುವನಹ ವೀರಭದ್ರೇಶ್ವರಂ ಶರಶಾರ್ಙ್ಗ
ಫಲಕಾಸಿಗಳನಾಂತು ಭದ್ರಕಾಳಿಯ ಕೂಡಿ ರಾಜಿಸುವ ಸುಖಸಮುದ್ರಂ ೨೧

ಮತ್ತೆಯಜನಿಂದಖಿಳ ದೇವದಾನವ ಮುಖ್ಯ
ರಂತ್ಪತ್ತಿಕ್ರಮವದೆಂತೆನಲಾದಿಸೃಷ್ಟಿಯೊಳ್
ಬಿತ್ತರದ ವಿಧಿಯ ಕಣ್ಣೊಳ್ ಮರೀಚಿಯು ಹೃದಯದೊಳಗೆ ಭೃಗುವಾಂ[2]ಗಿರಸನು[2]
ನೆತ್ತಿಯೊಳುದಾನವಾಯುವಿನೊಳ್ ಪುಲಸ್ತ್ಯ[3]ನು
ತ್ಪತ್ತಿಯಾದುದು ವ್ಯಾನನಲಿ ಪುಲಹನ ಕ್ರತುವಿನು
ತ್ಪತ್ತಿಯಾ ಪ್ರಾಣವಾಯುವಿನೊಳಗೆ ದಕ್ಷಕರ್ಣದಲತ್ರಿಮುನಿ ಪುಟ್ಟಿದಂ[3] ೨೨

ವರ ಸಮಾನದೊಳು ಜನನಂ ವಸಿಷ್ಠಗೆ ಬಳಿಕ
[4]ಪರಮ[4]ಸಂಕಲ್ಪದೊಳ್ ಧರ್ಮದೇವತೆ[5]ಯರಿಂ[5]
ತಿರದೆ ನವಬ್ರಹ್ಮರವರೊಳ್ ಮರೀಚಿಗೆ ಕಶ್ಯಪಬ್ರಹ್ಮನಾದವನಿಗೆ
ಭರದೆ ದಕ್ಷನ ಸುತೆಯರದಿತಿ ದಿತಿ ದನುಕಾಲೆ
ಯರಿದಾದನಾಯುಸಿಂಹಿಕೆ ಮುನಿಪ್ರವಾಹೆ ಮ
[6]ತ್ತಿರದ[6]ರಿಷ್ಠೆ[7]ಯು ವಿ[7]ನತೆ ಕಪಿಲೆ ಕದ್ರು ಕ್ರೋ[8]ಧೆಯೆಂಬವರವರ್ಗಿ[8]ತ್ತೊಡವರ್ಗೆ ೨೩

---

1 ಷ್ಣು (ಗ) 2 ಗೀರಸಂ (ಜ) 3 ನುಂ। ಉತ್ತಮದ ಪುಲಹವ್ಯಾನುವಿನೊಳಪಾನದೊಳತ್ಯಧಿಕ ಕ್ರತುಪ್ರಾಣಪವನನೊಳ್ ದಕ್ಷ ಶ್ರೋತ್ರದೊಳತ್ರಿ ಪುಟ್ಟಿದರಲಾ (ಜ) 4 ಮರರೆ (ಜ) 5 ಯೊಗೆಯ (ಜ) 6 ತ್ತ (ಜ) 7 ವಿ (ಜ) 8 ಧಿಯ ರೆಂಬ ಹದಿಮೂರನಿ (ಜ)

ಅದಿತಿಗಾ ಧಾತೃ ಮೊದಲಾ ವಿಷ್ಣು ಕಡೆಯಾದ
[1]ಪದುಮದಾಳ್ಮರು ಶಚೀಪತಿಮುಖ್ಯ[1] ದೇವತೆಗ
ಳುದಯವಾ ಮೂವತ್ತುಮೂಕೋಟಿ ಮತ್ತಮಾ ಸೂರ್ಯನಾರಾಯಣಂಗೆ
ಒದಗಿ ವೈವಸ್ವತ[2]ಮನುವಿನಜನಿಯೊತಂಗೆ[2]
ಸದಮಳದ ಇಕ್ಷ್ವಾಕುಮುಖ್ಯ ಪಾರಂಪರೆಯೊ
ಳೊದವಿದಾ ರಾಮಾ ಲಕ್ಷ್ಮಣ ಭರತ ಶತ್ರುಘ್ನ ರಾಜವರ್ಗೋತ್ಪ[3]ತ್ತಿಯು[3] ೨೪

ಬಳಿಕಲಾ ವೈವಸ್ವತಮನುವಿನಾ ಪುತ್ರಿ
ಇಳೆಯೆನಿಪ್ಪಾಯಕಂಗಾ ಚಂದ್ರ ಸಂತನಾದ
ನೊಲವಿನಿಂದಾ ಬಂಧಂಗಾ ಪುರೂರವನೊಗೆದನಾತಂಗೆ ಆಯುಮುಖ್ಯ
ಬಲವಂತ[4]ರಾದ ಪಾಂಡವರಾದಿಯಾದರಸು
ಕುಲಮುದಯಿಸಿತ್ತು ದಿತಿಯೆಂಬಾಕೆಯುದರದಲಿ
ಬಲಶಾಲಿ ದೈತ್ಯರರವತ್ತಾರುಕೋಟಿ ಪುಟ್ಟಿದರು ಮತ್ತವರಲ್ಲಿಯೆ[4] ೨೫

•ಆದರೈ ಪ್ರಹ್ಲಾದ ಸಂಹ್ಲಾದ ಶಿಬ್ಯನು
ಹ್ಲಾದ ಬಾಷ್ಕಳರೆಂದು ಭೂರಿಕಶಿಪುವಿಗೈವ
ರಾದರಾ ಪ್ರಹ್ಲಾದನಿಗೆ ವಿರೋಚನನೆಂದು ಕುಂಭ ನಿಕುಂಭನೆಂದಂ
ಮೇದಿನಿಯ ಮಧ್ಯದಲಿ ಮೂವರಣುಗರಂ ಮತ್ತ
ಮಾದಂ ವಿರೋಚನಗೆ ಬಲಿ ಬಲಿಗೆ ಬಾಣನೊಡ
ನಾದನಿಂತೀ ದೈತ್ಯವಂಶದರಸುಗಳೊಳ್ ಪ್ರಸಿದ್ಧರನ್ವಾಗತರಲ್ಲೈ ೨೬

•ಮೂರನೆಯ ದನುವಿಂಗೆ ನಾಲ್ವರುದಿಸಿದರತಿ
ಕ್ರೂರಗರು ನಾಲ್ಕನೆಯ ಕಾಲೆಯೊಳ್ ಜನಿಸಿದರ
ಸಾರರು ನಿವಾತಕವಚಾಸುರರು ಪಂಚಮಾನಾಯುವಿಗೆ ವೃತ್ರಾಸುರಂ
ಆರನೆಯ ಸಿಂಹಿಕೆಗೆ ರಾಹುಮೊದಲಾದವರು
ತೋರಿದರಂ ಮುನಿಯೆಂಬ ಸಪ್ತಮಿಗೆ ಪುಟ್ಟಿದರು
ಚಾರುತರರತ್ನಂಗಳುಂ ದೇವಗಂಧರ್ವರುಂ ಕೇಳು ದೇವಲಮುನಿ ೨೭

---

1 ಧಿಕದ್ವಾದಶದಿತ್ಯರಿಂದ್ರಾದಿ (ಜ) 2 ಮನುಜನನೆವವನಿಗಾ (ಜ) 3 ತ್ಯವು (ಜ) 4 ಪಾಂಡವರೊಳಾ ಜನಮೇಜಯಂ ಕಡೆಯಾದಲಘು ಕ್ಷತ್ರಿಯರುದಿಸಿದರು ಬಳಿಕೆರಡನೆಯ ಚೆಲುವೆ ದಿತಿಗೈವತ್ತಾರುಕೋಟಿ ದೈತ್ಯೇಯರುದಿಸಿದರು ಮತ್ತವರೊಳು (ಜ)

• ಜ ಪ್ರತಿಯಲ್ಲಿ ೨೬, ೨೭ ನೆಯ ಪದ್ಯಗಳಿಗೆ ಪ್ರತಿಯಾಗಿ ಬೇರೆ ಪದ್ಯಗಳಿವೆ. ಅನುಬಂಧ ನೋಡಿ.

[1]ಕುವಲಯೇಕ್ಷಣೆಯೆನಿಸಿ ತೋರುವೀಯೆಂಟನೆಯ
ಯುವತಿ ಪ್ರವಾಹೆಯಲಿ ಚಿಂತಾಮಣಿಯಂ ಪುಟ್ಟ
ಲವತರಿಸುವಂತೆ ಚಿನ್ನವಗ್ಗೈವ ಸ್ಪರ್ಶಮಂ ಸಪ್ತಪುತ್ರಿಕೆಯರಂತೆ[1]
ತವೆ ದಶಕುಮಾರ[2]ರುಂ ಪುಟ್ಟಿದರು ಮತ್ತಮಾ
ನವಮಿಯಲರಿಷ್ಟೆಯೊಳ್ ಹತ್ತಪ್ಸರಸ್ತ್ರೀಯ[2]
ರವಿಕಲದ ತುಂಬುರಂ ಮೊದಲಾದ ಸುತ[3]ರ[3] ನಾಲ್ವರ ಜನನವೈ ಕುಮಾರ ೨೮

ಹತ್ತನೆಯ ವಿನತೆಗಾ ಗರುಡಾರುಣರ್ ವಜ್ರ
ಬಿತ್ತರದ ಸಿಡಿಲು ವರುಣಾದಿ ಜಲದೇವತೆಗ
ಳುತ್ಪತ್ತಿ ಸಿಡಿಲಾಗಿ ಗರುಡನೊಡಹುಟ್ಟಿದದರಿಂ ಸರ್ಪವೈರಿಯಾಯ್ತು
ಮಂತ್ತೆ ಬಲದೇವತೆಗಳೊಡನೆ ಹುಟ್ಟಿದ [4]ದೆಶೆಯೊ
ಳೊತ್ತಾಗಿ ಮಳೆಗಳಾಗುತ್ತಿರಲು[4] ಘರ್ಜಿಸಂ
ತ್ತೆತ್ತಲುಂ ವ್ಯವಹರಿಸುತಿಹುದು ಹನ್ನೊಂದನೆಯ ಕಪಿಲೆಯೆಂಬಾಯಕಂಗೆ ೨೯

ಕೀಲಾಲಮುಂ ಬ್ರಾಹ್ಮಣರು ಪುಟ್ಟಿದರು ಬಳಿ
ಕ್ಕಾ ಲಲಿತ ಪನ್ನೆರಡನೆಯ ಕದ್ರುವಿಗನಂತ
ಲೋಲ ತಕ್ಷಕ ವಾಸುಕಿ ಪ್ರಮುಖಸಾಹಸ್ರ ಸರ್ಪರಾಶಿಗಳೊಗೆದವು
ಕೇಳು ಹದಿಮೂರನೆಯ ಕ್ರೋಧೆಯೆನಿಪಳಿಗೆ ನಗ
ಮಾಲೆಗಳ್ಲೋಕಬಾಧಕರಾದ ಕ್ರೂರಾತ್ಮ
ಜಾಲ ದ್ವಿದಶಸುತೆಯರೊಗೆದರವರೊಳ್ ಭ[5]ದ್ರವೃದ್ಧಿಯೆಂ[5]ಬಾಯಕನೊಳು ೩೦

ಉದಿಸಿತ್ತೈರಾವತಂ ಶ್ವೇತೆಯೆಂಬವಳಲ್ಲಿ
ಯೊದವಿದವು ಉಳಿದ ದಿಗ್ಗಜಗಳ್ ಮತಂಗಿಯಾ
ಉದರದೊಳ್ ಸಾಮಾನ್ಯಗಜಗಳುದಿಸಿದವು ಗಾಂಧರ್ವೆಯೊಳಗಶ್ವದುದಯಂ
ಪದೆದು ಶಾರ್ದೂಲೆಯೊಳ್ ಸಿಂಹಂಗಳಾದವಾ
ಭ್ಯುದಯ ಹರಿಯೆಂಬಾಕೆಯೊಳ್ ಕೀಶಗಳ ಜನನ
ವಿದಿತ ಮೃಗೆಯಲ್ಲಿ ಮೃಗಗಳ್ ಜನಿಸಿದವು [6]ಮತ್ತೆ ಮೃಗಮದೆಯ ಜಠರದಲ್ಲಿ[6] ೩೧

---

1 ನವರತ್ನಗಳು ಬಳಿಕ ಗಂಧರ್ವರುದಿಸಿದರು।ಕುವಲಯೇಕ್ಷಣೆಯಾದೆಂಟನೆಯ ಪ್ರವಾಹೆಯೊ।ಳ ವಿರಳ ಸುಚಿಂತಾಮಣಿ ಪರುಷ ಸಕಲ ಲೋಹಗಳೇಳು ಸುತೆಯರಮಮ (ಜ) 2 ರುತ್ಪತ್ತಿಯೊಂಬತ್ತ ನೆಯ ಸವಿನಯದರಿಷ್ಟೆಯೊಳ್ಹತಪ್ಸರ ಸ್ತ್ರೀಯ (ಜ) 3 ರು (ಜ) 4 ಕಾರಣತ್ಕಂತಮಳೆಗಳಾ ಹಲ್ಲೈದಿ (ಜ) 5 ಧ್ರಾಮದ್ಧಿಯೊಂ (ಜ) 6 ಮೃಗಮದಿಯೆಂಬ ಪೆಣ್ಣಿನಲ್ಲಿ (ಜ)

ಕರಡಿ ಚಮರೀಮೃಗಗಳೊಗೆದವಾ ಸುರಸೆಯೊಳ್
ನರಸರ್ಪಜಾತಿ ಜನಿಸಿತ್ತನಲೆಯೆಂಬವಳೊ
ಳಿರವಿಲ್ಲದೇ ಫಲಿಸುವಶ್ವತ್ಥ ಮುಂತಾದ ವೃಕ್ಷಂಗಳಾದವಿನ್ನು
ಇರದೆ ಕುಹೆಯೊಳ್ ಪುಷ್ಪಫಲಗಳುಳ್ಳ ಕಂಜದ
ನೆರವಿ ಜನಿಸಿದವಾ ವಿರೋಧೆಯೆಂಬಾಕೆಯೊಳ್
ತರುಗುಲ್ಮವಲ್ಲಿ ಫಲತೃಣಮುಖ್ಯಮುದಿಸಿದವು [1]ಮತ್ತಿ[1]ವೆಲ್ಲಂ ನೋಡಲು ೩೨

ವರಮರೀಚಿಯ ಪುತ್ರ ಕಶ್ಯಪಬ್ರಹ್ಮ ಸತಿ
ಯರು ತ್ರಯೋದಶದಿಂದಲಾದ ಸಂತಾನವಿಾ
ಪರಿವಿಡಿಯೊ[2]ಳಾ ಭೃಗುವಿಗುದಿಸಿದಂ ಕವಿ ಕವಿಗೆ ಶುಕ್ರಂ ಜನಿಸಿ ಲೋಕದಿ[2]
ಗುರುವಾದನಸುರರ್ಗೆ ಮತ್ತಂಗಿರಸನಿಗಾ
ಸುರರ ಗುರುವಾದ [3]ವಾಚ[3]ಸ್ಪತಿಯೊಗೆದ [4]ಸತ್ಯ
ಭರಿತ ಮತ್ತಾ ಪುಲಸ್ತ್ಯಂಗೆ ವಿಶ್ರ್ವಾವಸುವೆ ಪುಟ್ಟಲಾತಂಗೆ ಮುದದಿಂ[4] ೩೩

ಜನನವಾದಂ ಕುಬೇರಂ ಕಿನ್ನರರು ಮತ್ತೆ
[5]ಜನಿಸಿದಳು[5] ಕೈಕಸೆಯು ಪುಷ್ಪೋತ್ಕಟಿ[6]ಯುಂ ವಂತೆ
ಜನಿಸಿದರ್ ಕ್ರಮದೊಳೀರ್ವರಿಗೆ ರಾವಣಕುಂಭಕರ್ಣರ್ ವಿಭೀಷಣಾಖ್ಯಂ
ಅನುವಾಗಿ ಖರದೂಷಣತ್ರಿಶಿರರೆಂಬವ
ರ್ಗನುಜೆಯಾಗಿಹ ಶೂರ್ಪಣಖಿಯುಂ ಮೇಣಾಯಕನ
ವಿನಹಿತ ದುರಾಲಾಪದಿಂದ ಲಂಕಾರಾಕ್ಷಸರ್ಗಂತವಾಗಾದುದು[6] ೩೪

ಪುಲಹಂಗೆ ಕಿಂಪುರುಷಜಾತಿಯುಂ ವ್ಯಾಘ್ರಾದಿ
ಬಲವಂತಮೃಗಗಳುದಿಸಿದವು ಮತ್ತಾ ಕ್ರತುವಿ
ಗೊಲವಿನಿಂ ಸೂರ್ಯಾಗ್ನಿತೇಜಸ್ಸನುಳ್ಳ [7]ಕೆಲಬರ್ ಮುನಿ[7]ಗಳುದಯಂ ಬಳಿಕಂ
[8]ಬಲವಂತ ದಕ್ಷ[8]ಗೈವತ್ತುಪುತ್ರಿಯರು ಬಿಡ
ದೊಲಿದು ಪುಟ್ಟಿದರವರೊಳಾ ಕೀರ್ತಿ ಲಕ್ಷ್ಮಿ ಧೃತಿ
ಸಲೆ ಮೇಧೆ ಪುಷ್ಟಿ ಶ್ರದ್ಧೆಯು ಕ್ರಿಯೆಯು ಬುದ್ಧಿ ಮತಿ ಲಜ್ಜೆಯೆನಿಸುವ ದಶವಿಧ ೩೫

---

1 ಮಿಂತಿ (ಜ) 2 ಳಿನ್ನಾ ಭೃಗುವಿಂಗೆ ಕವಿಯಾವನಾತಂಗೆ ಶುಕ್ರ ಜನಿಸಿ (ಜ) 3 ಬೃಹ (ಜ) 4 ಬಳಿಕ ಕೇಳೊರವೆ ಮತ್ತಾ ಪುಲಸ್ತ್ಯಂಗೆ ವಿಶ್ರ್ವಾವಸು ಪುಟ್ಟಿಲಾತಂಗೆ ಮುದದಿಂ (ಜ) 5 ಯನುವಿನಿಂದಾ ವಿಶ್ರ್ವಾವಸ್ವವಸುವಿಂಗೆ ರಾಕ್ಷಸತನಯರಹ (ಜ) 6 ಯರುಭಯಾ ಮಕ್ಕಳ ಕೈಕಸೆಯೊಳು ಜನನ ರಾವಣ ಕುಂಭಕರ್ಣರ್ ವಿಭೀಷಣಂ ವನಜಾಕ್ಷಿ ಪುಷ್ಪೋತ್ಕಟಿಗೆ ಖಷದೂಷಣರು ಮನವಿನಿಂ ತ್ರಿಶಿರನೆಂಬ ಮೂರುಸುತರಾ ಶೂರ್ಪನಖಿ ಸಮೇತಂ ಜನನವು (ಜ) 7 ಕೇಚಿದ್ ಋಷಿ (ಜ) 8 ಭಲರೆ ದಕ್ಷಂ (ಜ)

ಸುತೆಯುರಂ ಬ್ರಹ್ಮಸಂಕಲ್ಪ ಸಂಭವನಾದ
ಮತಿವಂತ ಧರ್ಮದೇವತೆಗಿತ್ತ ಸಪ್ತವಿಂ
ಶತಿಸುತೆಯುರೆನಿಪಶ್ವಿನೀ ಮುಖ್ಯರಾದವರನಿತ್ತಂ ಕಲಾಮಾಲಿಗೆ
ನುತಧರ್ಮದೇವತೆಗೆ ಶಮಕಾಮಹರ್ಷರೆಂ
ಬತಿಶಯದ ಮೂರುಮಕ್ಕ[1]ಳುಗಳವರೊಳ್ ಶಮಗೆ[1]
ಸತಿ ಪ್ರೀತಿ ಕಾಮಂಗೆ ರತಿ ಮತ್ತೆ ಹರುಷಂಗೆಯಾ ನಂದಿಯೇಂ ಭಾಮಿನಿ ೩೬

ಸತತ [2]ಧರ್ಮಕ್ಕವರ್ ಸಹಚರರೆನಿಪರತ್ರಿ
ಗತುಲ ದತ್ತಾತ್ರೇಯ ದೂರ್ವಾಸ ರಾತ್ರೀಶ
ಸುತ ಸುತ್ರಯಂ ಪುಟ್ಟಿತಾ ಪುತ್ರವರ್ಗದೊಳ್ ಕೂಡಲೇ ಚಂದಿರಂಗೆ[2]
ಸುತನು ಬುಧನಾದನವನಿಂ ಸೋಮವಂಶದು
ನ್ನತಿಯಾಯ್ತು ಮೇಣಾ ವಸಿಷ್ಠಂಗೆ ಶಕ್ತಿಯೇ
ಸುತನಾದನವನಿಗೆ ಪರಾಶರಂ ಮೇಣವಂಗುದಿಸಿದಂ ವ್ಯಾಸಮುನಿಪಂ ೩೭

ಮತ್ತಾದಿಬ್ರಹ್ಮನಿಗೆಯಾ ಪ್ರಜಾಪತಿಯೊಗೆದ
[3]ನತ್ತಣಿಂ ಧರನು ಧ್ರುವಂ ಸೋಮನಾಪಂ ಸ
ಮುತ್ತುಂಗನನಿಲನನಲಂ ನೋಡೆ ಪ್ರತ್ಯೂಷನುಂ ಪ್ರಭಾಸಂಜನಿಸಿದರ್
ಮಂತ್ತಾ ಧರಂಗೆ ದ್ರವಿಣಂ ಧ್ರುವಗೆ ಕಾಲನುಂ
ಮತ್ತೆ ಸೋಮಗೆ ಸುವರ್ಚಸ್ಕನಾಪಗೆ ಶಾಂತ
ನುತ್ತಮ ಪುರೋಚನನನಿಲಗೆ ಜ್ಯೋತಿಯೆನಿಪ್ಪ ತನಯುನನಲಂಗೊಗೆದನು[3] ೩೮

•ದೇವಲಂ ಪ್ರತ್ಯೂಷನಿಗೆ ಪ್ರಭಾಸಂಗೆ ಮಿಗೆ
ಜೀವನೊಡಹುಟ್ಟಿರ್ದ ಯೋಗಸಿದ್ಧಿಗೆ ಜನಿಸಿ
ದೇವಶಿಲ್ಪಿಯು ವಿಶ್ವಕರ್ಮನೆಸೆದಂ ಮೇಣವನ ಪುತ್ರಿ ವಡಬೆಯಲ್ಲಿ
ದೇವವೈದ್ಯರ್ ಜನಿಸಿದರ್ ಸೂರ್ಯನಿಂದವರ
ಭಾವದಿಂ ಗುಹ್ಯಕರ್ ಕೆಲಪೌಷಧಿಗಳಾದ
ವಾ ವಿಧಿಗೆ ಧಾತೃವೆಂದು ವಿಧಾತೃವೆಂದೀರ್ವರಾದರವರಿಂದಘವೃಷಂ ೩೯

---

1 ಳವರೊಳ್ ಶಮಂಗೆ (ಜ) 2 ಧರ್ಮಂಗಳಿಗೆ ಸಹಾಯರಾಗಿರ್ಪುಮುನ್ನತ ಬಳಿಕತ್ರಿಪ್ರಜಾಪತಿಗೆ ದೂರ್ವಾಪಜಿತಮಾದ ದತ್ತಾತ್ರೇಯಂ ಚಂದ್ರರೆಂಬ ತ್ರೈಸುತರವರೊಳಾ ಚಂದ್ರಗೆ (ಜ) 3 ನತ್ಯಧಿಕನಾತಂಗೆ ಧರನು ಧ್ರುಮಸೋಮಾಪನುತ್ತಮಾನಿಲಾನಲ ಪ್ರತ್ಯೂಷ ಪ್ರಭಾಪರೆಂಬಷ್ಟವಸುಗಳ್ ಜನನವು। ಮತ್ತವರೊಳಾ ಧರೆಗೆ ದ್ರವಿಣನೆಂಬಣುಗಮಾಯತ್ತದ ಧ್ರುವಂಗೆ ಕಾಲನೆಂಬಾತ್ಮಜಂ ಸತ್ಯದಾ ಸೋಮಗೆ ಸುವರ್ಚನೆಂಬ ಸುಖಾಪಂಗೆಸುನಶಾಂತರೆಂಬ (ಜ)

• ಜ ಪ್ರತಿಯಲ್ಲಿ ೩೯ನೆಯ ಪದ್ಯದಲ್ಲಿ. ಅದಕ್ಕೆ ಬದಲಾಗಿ ಬೇರೆ ಎರಡು ಪದ್ಯಗಳಿವೆ. ಅನುಬಂಧ ನೋಡಿ.

ಒಡಹುಟ್ಟಿದರ್ [1]ಕಮಲೆ[1] ಜ್ಯೇಷ್ಠೆಯೆಂ[2]ಬೀರ್ವರವ
ರೆಡೆಯೊಳಾ ಶಿರಿದೇವಿ[2]ಯಲ್ಲಿ ಜಾತ್ಯಶ್ವಗಳ್
ಬೆಡಗಿನಿಂದುದಯು ಜ್ಯೇಷ್ಠಾದೇವಿಯೊಳಗೆ ಶತ್ರ್ವಾದೇವಿಯೊಗೆದಳವಳಿಂ
ತಡೆಯದುದಿಸಿದವು ಗೌಡಿಯಾ ಪೈಚ್ಚಿ ಮಾಧ್ವಿಯೆಂ
ದೆಡವಿಡದೆ ತ್ರಿವಿಧಸುರೆಯವರಿಂದ ಧರ್ಮನೇ
ಪಡೆಯೆಪಟ್ಟಂ ತತ್ಸುತರ್ ಭಯ ಮಹಾಭಯಾಂತಂಕರೆಂಬಾಖ್ಯೆಯಿಂದ ೪೦

ಮಕ್ಕಳೊಗೆದರ್ ಕೆಲರಂ ಸುತೆಯರುದಿಸಿದರವರಿ
ಗಕ್ಕರಿಂ ಕ್ರೌಂಚ ವಾಯಸ ಪರ್ದು ಗಿಡಗ[4] ಕ
ಬ್ಬಕ್ಕಿ[4] ಹಂಸೆಯು ಕೀರ್[5]ಕೋಗಿಲೆಗಳುಂ[5] ಚಕ್ರವಾಕ ಖಗಮುಖ್ಯ[6]ವಾ[6]ದ
ಮಿಕ್ಕ ನಾನಾಪಕ್ಷಿಜಾಲಮುದಿಸಿದವು [7]ಸೊಗ[7]
ಮುಕ್ಕಿ ಕೇಳ್ಪೈದೆ ಬ್ರಹ್ಮನಿಂ ಬ್ರಹ್ಮಾಂಡ[ದಿಂ]
ದುಕ್ಕುವತಿ ಸೃಷ್ಟಿಪಾರಂಪರೆಯ ಪೇಳ್ದೆವಿಂತಖಿಳಾಂಡತತಿಗಳುಂಟು ೪೧

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮಂತಶಾಸ್ತ್ರ ಮಂಜುಳಸುಪುಂಜರಂಜಿತ ಪುರಾತನ ವಚನಸಮ್ಮತವಹ
ಅತಿಶಯ ಮಹಾಲಿಂಗ ಪದಪದ್ಮಷಟ್ಪದೋ
ದ್ದಿ[8]ರೂಪರಹ ಚತುರ್ಗುರುಚರಿತದೊಳ್ ಪಂಚ
ದಶಿನೊತ್ನವಹ[8]ಕಾಂಡದೊಳ್ ನೋಡೆ ಮೂರನೆಯ ಸಂಧಿ [9]ಸಂಪೂರ್ಣವಾಯ್ತು[9] ೪೨

•ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತಏಕರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರಿಗಿಷ್ಟಾರ್ಥಮಹುದು ಸತ್ಯಂ ೪೩

---

1 ಲಕ್ಷ್ಮಿ (ಜ) 2 ದೀರ್ವರೊಡನವರೊಳಾ ಲಕ್ಷ್ಮಿ (ಜ) 3 ಪುಟ್ಟಿತಾ ಸುರೆಯಿಂ।ದೊಡನೆಯುದಿಸಿದ ಧರ್ಮನಾಥಂಗೆ ಭಯಮಹಾಭಯಮಂತಕಂ ಮೂವರು (ಜ) 4 ನುಂ। ತಕ್ಕ (ಜ) 5 ಪರಪುಷ್ಪನಾ (ಜ) 6 ರಾ (ಕಗ) 7 ಮನ (ಜ) 8 ಮಯ ಚತುರ್ಗುರು ಸಚಾರಿತ್ರದೊಳ್ಪೈದುವತಿನೂತ್ನತರ (ಜ) 9 ಸುಜ್ಞಾನಬಂಧಿ (ಜ)

• ಕಗ ಪ್ರತಿಗಳಲ್ಲಿ ೪೩ ನೆಯ ಪದ್ಯವಿಲ್ಲ.

# ನಾಲ್ಕನೆಯ ಸಂಧಿ

ಸೂಚನೆ :

ವೀರಭಾಸ್ಕರರಾಜ ಮುಂತಾದ ವಾದಿಗಳಿ
ಗಾ ರಮ್ಯರಾಮನಾಥನ ನುಡಿಸಿಯಹುದೆನಿಸಿ
ಕ್ರೂರನಹ ವ್ಯಾಸದೀಕ್ಷಿತನ ಸೋಲಿಸಿಯೆ [1]ಏಕೋರಾಮಗುರುವೊಪ್ಪಿದಂ[1]

[2]ನಿನಗೈದುಮೊಗಮಿರ್ದು ನಿನ್ನಣುಗಗರುಮೊಗದ
ಘನತೆಯೇನೆಂದಗಜೆ ಹಾಸ್ಯಚತುರೋಕ್ತಿಯಂ
ಮನಸಿಜಾಂತಕನೊಡನೆ ಬಿತ್ತರಿಸಲೇಕಾಂತಭವನದೊಳ್ ಕಮಲಾಂಬಕಿ
ತನಯರಿಳೆಯೊಳ್ ತಾಯಿ ತಂದೆಗಳವೋಲದೇ
ಜನಿಸುವರೆ ಸತಿಯಲೌ ನೀನೆಂಬ ವಾಕ್ಯದಿಂ
ವಿನವಿಂತೆ ಭವಾನಿಯಾಗಲ್ ಮುಗುಳ್ನಗೆಯಾಂತ ಜಯ ಸುಗುರು[2]ಚೆನ್ನಮಲ್ಲ ೧

[3]ಚೋ[3]ಳಮಂಡಲದಲ್ಲಿ ಸುಮನೇಮದಿಂದ ಶಶಿ
ಮೌಳಿಯನ್ನಾರಾಧಿಸುತ್ತೆಡಹಿಬೀಳೆ ಶಿವ
ನೇಳಯ್ಯ ಭಕತನೆಂದೆತ್ತೆ ಮುನ್ನಂ ಕೆಡಹಂತೀಗೆತ್ತಬಹುದೆ ನೀನು
ಚಾಳಿಹೀನನಂಯೆಂದು ಬಡಿಯೆ ಕರಡಿಗೆಯಿಂದೆ
ಮೇಳದಿಂ ಮೆಚ್ಚಿ ನಿಜಮಂ ತೋರಿ ಕೈವಲ್ಯ
ಕಾಳೋಕಿಸುತ್ತೊಯ್ಯೆ ಗಣಪದವಿಯೊಳ್ ಮೆರೆವ ದಂಡಿ ಕೊಡು ಮನದಿಷ್ಟಮಂ ೨

ಶಂಕುಕರ್ಣಂ [4]ಶಂಭುವಿಂದ ಮುದ್ರಾಪುರಿಗೆ[4]
ಭೋಂಕನೈತಂದು ಶ್ರೀರಾಮೇಶ್ವರಾಲಯದ
ಮುಂಕಟ್ಟಿನಾ ಮಂಟಪಕ್ಕೈದಿಬರಲು ಏಕೋರಾಮದೇವನರಿದು
ಮುಂಕೊಂಡಿದಿರ್ವಂದು ಸಾಷ್ಟಾಂಗದಿಂ ನಮಿಸು
ತಂ ಕೂಡೆ ಗದ್ದುಗೆಯೊಳಿರಿಸಿ ಭಯಭಕ್ತಿಯಿಂ
ಶಂಕರ[5]ಗುಣಾ[5]ವತಾರನೆ ಕರುಣದಿಂ ಬಂದ ಕಜ್ಜಮಂ ಪಾಲಿಪುದೆನೆ ೩

---

1 ಮೆರೆದನೇಕೋರಾಮಗುರುತಿಲಕನು (ಜ) 2 ವನಜತನಯಾ ಮೌಲಿವಿನುತಕರ ಕೃಪಾಪಾತ್ರ । ಪನಶಯಾಲಯು ಮನೋರಮಣವಂದಿತಪಾತ್ರ ವನಜಸಂಭವಜಾತಜಾತಪ್ರಮದಾತನೂಭವವರದ ಧವಳಗಾತ್ರ। ವನಜಾಂಬಕಾಪುತ್ರಗೋತ್ರ ಶತಕೋಟಿಘನ। ವನಜವನರುಹಜೀವವೈಶ್ವಾನರನೇತ್ರ। ಧನದಾಪ್ತ ಮಧ್ಯಾಹ್ನ ರವಿಕೋಟಿ ಸಂಕಾಶ ಜಯತು ಜಯತು (ಜ) 3 ಕೋ (ಗ) 4 ರಜತಗಿರಿಯಿಂದ ಮುದ್ರಾಪುರಕೆ (ಜ) 5 ಪರಾ (ಜ)

ಎಲೆಲೆ ಘಂಟಾಕರ್ಣ ಗಣಪ ಹರನಾಜ್ಞೆಯಿಂ
ದಿಳೆಯು ಸಜ್ಜನರ ಪಾಲಿಸಲೆಂದು ಬಂದು ನಿ
ವರ್ಗಳ ವೀರಶೈವಮಂ ಮರೆದು ನೀಂ ಶುದ್ಧಶೈವವನಾಂತು ನಿಜಮೋಕ್ಷದ
ನೆಲೆಯನಿಳಿಕೈದನೆಂದಾನುಬಂದೆಂ ದೇವ
ಲಲನಾಧಿಪತಿ ರಾಮನಾಥನಿಂ ದೀಕ್ಷೆಯಂ
ಸಲೆಪಡೆದು ವೀರಶೈವೋದ್ಧರಣಮಂ ಮಾಡಲಚಲಪದವಪ್ಪುದೆನಲುಂ ೪

ಎಂಬ ನುಡಿಯಂ ಕೇಳಿ ಹರಣ ಹ[1]ವ್ವ[1]ನೆ ಹಾರಿ
ಕುಂಭಿನಿಯೊಳಂ ಬಿಳ್ದು ಹಮ್ಮನೇ ಹಾರಿ ಮಿಗೆ
ಕಂಬನಿಯೊಳಾಳುತೇಳುತ್ತ ಕಂಗೆಟ್ಟು ಪಂಬಲಿಪ ಏಕೋರಾಮರ
ಕಂಬನಿಯ ತೊಡೆದಂ ಕರವಿಡಿದೆತ್ತಿ ಕೇಳು ವಿ
ಶ್ವಂಭರೆಗೆ ಬಂದ ಕತದಿಂ ಮರೆದೆ ನಿಜವಲ್ಲ
ಶಂಭುಶಂಕರ ರಾಮನಾಥನೊಡನಾಡಿಗಂ ನಿನಗೆ ಭಯವೇನೆಂದೆನೆ ೫

ಎನಲವರ ಚರಣಕ್ಕೆ ಕಂಬನಿಬಿಡುತ್ತ ಬಂ
ದನಘ ರಾಮೇಶನಾಲಯದ ವಳಬಾಗಿಲಂ
ತನುವಿನಿಂ ಕದಗಳಂ ಮುಚ್ಚಿರಲ್ ಕಂಡಂ ನಸುನಗುತ ರಾಮಾಚಾರ್ಯರಂ
ವಿನಯದಿಂದೆಲೆ ದೇವ ಶುದ್ಧಶೈವವ ನೀನಂ
ವನುಕರಿಸಿದೈ ಮುಕ್ತಿಮಂದಿರಕವಾಟಮಂ
ಸನಯದಿಂ ತೆರೆಯಲಿಲ್ಲೆಂಬ ಮಾಳ್ಕೆಯೊಳಭವ ಕದಗಳಂ ಮುಚ್ಚಿಕೊಂಡೈ ೬

ದೇವ ಕರುಣಾರಾಮ ದೇವ ಸುರಗಿರಿಧಾಮ
ದೇವ ನತಮಂದಾರ ದೇವವಿನುತೋದ್ಧಾರ
ದೇವ ಕೈವಲ್ಯಕಾಂತಾಲೋಲ ಮುನಿಶೀಲ ವರಚಿದಂಬರಚೋಳನೆ
ದೇವವಿಶ್ವಾಲಂಬದೇವ ಭಕ್ತಕುಟುಂಬ
ದೇವ ಪಾವನನಾಮ ದೇವ ಘನನಿಸ್ಸೀಮ
ದೇವ [2]ವಿಶ್ವಾ[2]ಭೇದ್ಯ ದೇವ [3]ಸಜ್ಜನವೇದ್ಯ[3] ದೇವ ರಾಮೇಶ ಜಯತು ೭

---

1 ಮ್ಮ (ಜ) 2 ನಿಗಮಾ (ಜ) 3 ಮದ್ಬುದ್ವೈದ್ಯ (ಜ)

ಗುರುವೆ ತೆಗೆಯಯ್ಯಯಜ್ಞಾನ[1]ದಾವರಣಮಂ[1]
ಗುರುವೆ ತೆಗೆಯಯ್ಯ ಮಾಯಾಮಹಾವರಣಮಂ
ಗುರುವೆ ತೆಗೆಯಯ್ಯ ದೇವಾಸುರರ್ಗಳವಡದ ಮೋಹಕಾರಾಶರಣಮಂ
ಗುರುವೆ ತೆಗೆಯಯ್ಯ ಕೈವಲ್ಯದ ಕವಾಟಮಂ
ಗುರುವೆ ತೆಗೆ ಮೋಕ್ಷಮಂದಿರದ ಕಣ್ಣಡಕಮಂ
ದಿರದೆ ನುತಿಸಲ್ಕರ್ಗಳಂ ಕಳಚಿ[2]ಬಿದ್ದು[2] ಘುಡಘುಡಮೆಂದು ಕದ ಪೋಗಲು ೮

ವಿಷಜಧರ ವಿಷಜನೇತ್ರಾಬ್ಜಸಂಭವ ಸುರ
ಪ್ರಸರವಂದಿತ ಪಾದಪಂಕೇಜ ಗೋವಿರಾ
ಡಸಮವಹ ನವರತ್ನಕೋಟೀರ ದರಹಸನವದನದಾ ಸುಲಿಪಲ್ಲಿನ
ಪಸರಿಸಿದ ಬೆಳಗು ದೆಸೆದೆಸೆಗೆ ವಿಸಟಂಬರಿಯೆ
ಬಿಸಿಗಣ್ಣ ಕೆಂಜೆಡೆ[3]ಯ ಪೊಳಪಿಂ[3] ಚತುರ್ಭುಜದೊ
ಳಸಮ ನಂದೀಶಮುಖ ಪ್ರಮಥಗಣರೋಲೈಸೆ ಸುಪ್ರಸನ್ನನುಮಾದನು ೯

ಕಂಡೆನೆನ್ನಜ್ಞಾನಕುಮುದಮಾರ್ತಾಂಡನಂ
ಕಂಡೆನೆನ್ನಾನಂದವಾರ್ಧಿ[4]ಪೂರ್ಣೇಂದುವಂ[4]
ಕಂಡೆನಜಹರಿಸುರಪ ದಿಕ್ಪಾಲಪೂಜಿತ ಪದಾಂಭೋಜ[5]ನಂ ಧೀರನಂ[5]
ಕಂಡೆನರಿಷಡ್ವರ್ಗ ಗಿರಿವಜ್ರದಂಡನಂ
ಕಂಡೆನಡಿಮುಡಿಯಿಲ್ಲದಪ್ರತಿ[6]ಮರೂಪನಂ[6]
ಕಂಡೆ ಮತ್ಹೃತ್ಪುಂಡರೀಕದೊಳ್ ತೊಳತೊಳಗಿ ಬೆಳಗುವ ಪರಂಜ್ಯೋತಿಯಂ ೧೦

ಎಂದು ಮಂದಿಸಿದ ಏಕೋರಾಮುಗುರುಂವರನ
ಇಂದುಂಲೇಖಾವತಂಸಂ ಶಿರವ ಪಿಡಿದೆತ್ತಿ
ನಂದದಿಂ ಗರ್ಭಗೆಯೊಳಮಳಪ್ರಾಙ್ಮುಖವಾಗಿ ಕುಳಿತು ಗಣವರರ ನಡುವೆ
ಹೆಂದದತಿ ಸಪ್ತೋಪದೇಶಮಂ ಪಾಲಿಸು
ತ್ತಿಂದುಮೊದಲಾದಖಿಳ ಮಂತಗಳಂ ಪಳಿದಧಿಕ
ಸುಂದರದ ವೀರಶೈವದೊಳೆಸೆವುದೆಂದು ಹರನಂತರ್ಧಿಯಂ [7]ಪೊರ್ದಲು[7] ೧೧

---

1 ದುರೆ ಮುಚ್ಚಳವ (ಜ) 2 ಘಳಿ (ಜ) 3 ಯು ಪುಲಿಸಮ್ಮ (ಜ) 4 ಶಶಿಖಂಡನಂ (ಜ) 5 ರಿಪುಛಂಡನಂ (ಜ) 6 ಮಾಖಂಡನಂ (ಜ) 7 ಪೊಂದಲು (ಜ)

ಏಕ ಏ[1]ವ ಹಿ[1] ರುದ್ರನೆಂದು ನಂದಿಧ್ವಜವ
ನೇಕಪರಿಯಿಂ ಮೆರೆಯಿಸುತ್ತ ಬಹುವಂತವೆಂಬ
ಘೂ[2]ಕಕ್ಕೆ[2] ಚಂಡಕರನೆನಿಪವಮಳವೀರಶೈವಕೆ ಸಾಟಿಯಿ[3]ಲ್ಲ[3] ಶರಣಾ
ನೀಕದಿಂ ಡಂಗುರಂ ಪೊಯ್ಸಿ ಮುದ್ರಾಪುರದ
ಕಾಕಂವಿಪ್ರರ ಜರಿಯೆ ಪಾರ್ವರೆಲ್ಲರ್ ನೆರೆದು
ಭೂಕಾಂತ ವೀರಭಾಸ್ಕರರಾಜ ನಮಗೆ ಶಲವಿತ್ತಡೆಲ್ಲರ್ ಪೋಪೆವು ೧೨

ಎಂಬ ನುಡಿಯಂ ಕೇಳಿದೇನಂಪದ್ರವವು ನಮ್ಮ
ಬೆಂಬಳಿಯಂ ಮನುಜರಿಂದಲೆ ಮೇಣದಾರಿಂದ
ಕಂಭಿನಿಯ ಸುರರೆಲ್ಲ ಮಾಜದುಸುರೆನಲು ಏಕೋರಾಮಂನೆನಿಪೊರ್ವನು
ಪಂಬಲಿಸಿ ತಾನೆ ಲಿಂಗವ ಕೊಂಡು ಬಹುಳ ಹುಸಿ
ಯಂ ಬಿಡದೆ ಕೊಚ್ಚುತ್ತ ವರದೀಕ್ಷೆಯಂ ತನಗೆ
ಶಂಭುರಾಮೇಶನೆಸಗಿದನಂತೆ ತಾಂ ವೀರಶೈವನಂತಖಿಳಮತದ ೧೩

ಮೂಲಕಂದ್ದಾಲನೆಂದೀ ಪುರದ ವೀಧಿಯೊಳ್
ಮೇಲಾಗಿ ಡಂಗುರವ ಪೊಯ್ಸಿ ದೂಷಿಸುತಿಹಂ
ಯಾಲೋಕಿಸಲ್ಕೆ ನಿನ್ನಾಜ್ಞೆಯಿನಿಸಿಲ್ಲ ಸಾಕಯ್ಯ ಈ ಪೊಳಲ ಬಾಳು
ಲೀಲೆಯಿಂ ನೀನೇ ವಿಚಾರಿಸೆನೆ ಮಂತ್ರಿಗಳ
ಜಾಲವಂ ಕಳುಹಿ ಕೇಳಿಸೆ ಏಕರಾಮ ಶಶಿ
ಮೌಳಿಯಣುಗ[4]ನೆಯ[4]ಹುದಂ ಲಿಂಗಧಾರಣಕಮಳವೀರಶೈವದ ಮತಕ್ಕೆ ೧೪

ರಾಮನಾಥನೆ ಸಾಕ್ಷಿಯುಳಿದ ಶಾಸ್ತ್ರವದೇನು
ಭೂಮೀಶಗುಸುರೆನಲ್ಕೈತಂದು ವಾರ್ತೆಯಂ
ಶ್ರೀಮಹಾರಾಜ ಕೇಳಯ್ಯ ಶಿವನೇ ದೈವ ವೀರಶೈವಕ್ಕೆ ಸಮವು
ಭೂಮಿಯೊಳಗಿಲ್ಲ ಶಾಸ್ತ್ರವ ಕೇಳು ಪೇಳುವೆಂ
ಈ ಮಹಿಯೊಳಲ್ಲದೊಡೆ ಲಿಂಗವ ನಂಡಿಸುವೆನೆಂ
ದಾ ಮುದದೆ ನಿರವಿಸಿದಿರಿದಕೆ ದೃಷ್ಟವ ನೋಳ್ಪುದೈ ರಾಜರಾಜಾಗ್ರಣಿ ೧೫

---

1 ವೋ (ಜ) 2 ಕಂಗೆ (ಜ) 3 ಲ್ಲೆಂದು (ಜ) 4 ಹುದ (ಜ).

ಎನಲೊಡಂಬಟ್ಟಖಿಳ ವಿನಿಯೋಗವೆರೆಸಿಯರ
ಮನೆಯ ಪೊರಮಟ್ಟು ಮತ್ತೇಭವನಡರ್ದರಸ
ವನಮಾಲಿಯಾಣ್ಮ ರಾಮೇಶನಾಲಯಕೆ ಮುಖವಾಗೆ ಚತುರಂಗಬಲದ
ಘನಫೌಜು ಇಟ್ಟಣಿಸೆ ಕಹಳೆ ಹೆಗ್ಗಾಳೆಗಳ
ನಿನದ ದಿಕ್ಕಯ ತುಂಬೆ ಭೇರೀರವಂ [1]ಕೂ[1]ಡೆ
ವಿನಯದಿಂ ಧಾಂ ಧಣಂಧಣವೆಂನಲ್ ರಾಯನಭಿವಂದಿಸುತ್ತಿದಿರೆ ನಿಲಲು ೧೬

ನ್ಯಾಯವೈಶೇಷಿಕರ್ ಭಾಟ್ಟ ಪ್ರಭಾಕರರುಂ
[2]ಮಾಯಿ ಚಾರ್ವಾಕರ್ ತದುತ್ತಮರೆನಿಪ ಜೈನ
ರಾಯತದ ವೈಷ್ಣವದಿ ವೈಖಾನಸರು ಪಾಂಚರಾತ್ರಿಕರು ಘನಬೌದ್ಧರು
ದಾಯವಿಲ್ಲದ ನೀಲಪಟರು ಸಾಹಸ್ರಿಕ
ನ್ಯಾಯಮೀಮಾಂಸಕರು ಸಕಲವೆಲ್ಲವು ನೋಡೆ
ಮಾಯೆಯೆಂತೆಂಬ ವೇದಾಂತವಿದ್ವಾಂಸರಾ ಸಭೆಯೊಳಗೆ ನೆರೆದಿರ್ದರು[2] ೧೭

ವೀರಭಾಸ್ಕರಭೂಪರಾಲಿಸೈಯೆಂದಖಿಳ
ಚಾರು[3]ತರವಾದ ವರ[3]ಶಾಸ್ತ್ರಂಗ[4]ಳಂ ಕಂಡು[4]
ವಾರಿಜಭವಾಂಡ[5]ದೊಳ್ ವಿಜ್ಞಾನಿಯಪ್ಪ[5]ನೇಕೋರಾಮದೇವ ನಗುತ
[6]ಸಾರತರ ವೇದಾಗಮಂಪುರಾಣವಾಕ್ಯ ಸಂ
ಚಾರದಿಂ ಸಭೆಯೊಳಗೆ ನೆರೆದವರ[6] ಮತಗಳಂ
ತೂರಿ ಜಳ್ಳಂತೆ ಪಾರಿಸಿ ವೀರಶೈವಮಂತಬೀಜರಾಶಿಯ ನಿಲಿಸಲು ೧೮

ಕಂಡು ವಿಸ್ಮಯಗೊಂಡು ರಾಯನಭಿವಂದಿಸಲ್
ಲಂಡಿಮತದವರೆಲ್ಲ ರಾಯ ಕೇಳಿವ ವಾಕ್ಯ
ಚಂಡನೈ ಮತ್ತೆ ಜಿಹ್ವಾಸ್ತಂಭನಾದಿ ಕೌಟಿಲ್ಯಕರನಿವನ ನುಡಿಯಂ
ದಂಡಿಸುವರಾರು ಶಾಸ್ತ್ರದ ಮಾತದಂತಿರಲಿ
ಖಂಡಶಶಿಲೇಖಾವತಂಶ ರಾಮೇಶ ಭೂ
ಮಂಡಲಂ ತಿಳಿವಂತೆ ನುಡಿಯೆ ನಾವೆಲ್ಲರೀತನ ಶಿಷ್ಯರಪ್ಪೆವೆನಲು ೧೯

---

1 ನಾ (ಜ) 2 ನ್ಯಾಯದಾಚಾರ್ವಕೈಕದೇಶಿಗಳು ಜಿನರಾಯತದ ವೈಷ್ಣವರ್ ಬೌದ್ಧ ಶ್ರಾವಣರು ಕಾಪಾಲರಾ ಕೌಳಕುಳರು । ಕಾಯಜನಮತನೀಲಪಟರು ಸಾಹಸ್ರವಿಧ । ನ್ಯಾಯಮೀಮಾಂಸರಾ ತಾರ್ಕಿಕರ್ ಸಾರರಾ । ಮಾಯವಾದ ಮುಖ್ಯ ಬಹುಮತದ ವಿದ್ವಾಂಸರಾಹ ಸಭೆ ಮೆರೆವುತವರು (ಜ) 3 ತಂತಮ್ಮಮತ (ಜ) 4 ಳಿಂ ಮಥಿಸೆ (ಜ) 5 ಬಹುಕುಕ್ಷಿ ನಿಕ್ಷಿಪ್ತ (ಜ) 6 ಚಾರುತರ ವೇದ ಪೌರಾಣಾದ್ಯುಪನಿಪತ್ಸಾರಗೀರ್ವಾಣವಾಕ್ಯದೊಳವರ (ಜ)

•ಎಲ್ಲರೊಡಗೊಂಡು ರಾಮೇಶ್ವರನ ನವರಂಗ
ದಲ್ಲಿ ತಾನಿಂದಂ ರಾಯಂ ನೋಡುತಿರೆ ವೇದ
ದಲ್ಲಿ ಪೇಳಲ್ಪಟ್ಟ ಗುಣನಿಷ್ಟಕೀರ್ತನಂಗೈದು ಹರ ತೇ ನಮೋಸ್ತು
ಮಲ್ಲಿಕಾರ್ಜುನಮೂರ್ತಯೇ ಭಕ್ತಜನ ಭಕ್ತಿ
ವಲ್ಲೀವಿವರ್ಧನ ಕಲಾಶಾಲಿನೇ ಸೌಖ್ಯ
ಪಲ್ಲವೋತ್ಪಾದಕವಿಶುದ್ಧ ಚೈತ್ರಾಯ ಭೂಯೋ ನಮಃ ಶಂಕರಾಯ ೨೦

ಎಂದು ನುತಿಸುತ್ತ ರಾಮೇಶಲಿಂಗವೆ ಕೃಪಾ
ನಂದದಿಂದಿಷ್ಟಲಿಂಗವನಿತ್ತುದಂ[1]ಟೆ ನೀಂ
ಕಂ[1]ದದೇಕೋರುದ್ರ[2]ನೆನಿಸುತಿರುತಿರ್ಪೆಯಾ[2] ವೀರಶೈವಕ್ಕೆ ಸದೃಶಂ
ಸಂದ ಮತವುಂಟೆ ನಿರವಿಸು ಸರ್ವರುಂ ಕೇಳು
ವಂದದಿಂದೆನಲು ಮೇಘಂ ಘರ್ಜಿಪಂತೆ ಧರೆ
ಯಂದದಿಂ ಕಾಲ[3]ದೊಳಗಾ[3]ರ್ಭಡಿಪ ಪಾಂಗಿನಿಂ ಚಿನ್ನಾದವೊಗೆದು[4]ದಾಗ[4] ೨೧

ಸರ್ವಲೋಕದೊಳು ಸಂಪೂರ್ಣವಾಗಲ್ ನಾದ
ಗೀರ್ವಾಣರತಿಭಯಂಕರಗೊಂಡು ಹರ ಮುಳಿದು
ಸರ್ವಸಂಹಾರಮಂ ಮಾಳ್ಪಟ್ಟಹಾಸಮೊಂ[ದ]ಬ್ಧಿಗಳ ಪೀರ್ವನಲನ
ಕೊರ್ವಿದತಿರಾವವೋ ಪ್ರಳಯಪವಮಾನನಂರೆ
ಪರ್ವಿದಾ ಘೋಷವೋ[5]ಯೆಂದಖಿಳ[5]ಜನರಳ್ಕಿ
ಉರ್ವೀಸ ಮುಖ್ಯಮತದವರು ಶರಣಂಬೊಕ್ಕು ಸೈಗೆಡದರಾ ಗುರುವಿಗೆ ೨೨

ಇಂತಖಿಳ ಮಹಿಮೆಯಿಂದಿರೆ ಏ[6]ಕ[6]ರಾಮಾರ್ಯ
ರಂತಸ್ಥವಂ ತಿಳಿಯಲಾ ವ್ಯಾಸ[7]ಸರಯುವಿಂ[7]
ಕಂತು[8]ಗುರು[8]ಸೇವೆಯಂ ಕುರಿತು ತಿರುಮಲೆಗೆಯ್ದಿ ಮುದ್ರಾಪುರದ ವಾರ್ತೆಯಂ
ಮುಂತೆ ಕೇಳುತ್ತಧಿಕಕೋಪದಿಂ ಗುರುರಾಮ
ನಂ ತವಕದಿಂ ಜಯಿಪೆನೆಂದು ಮುದ್ರಾಪುರ
ಕ್ಕಂತು ಗಜಗಳ ಮೇಲೆ ಪೊತ್ತಗೆಯ ಹೇರಿ ವಿದ್ವಾಂಸರಂಗಣಗಳಲ್ಲಿ ೨೩

---

1 ಟುಂಟೆ।ಹೆಂ (ಜ) 2 ನದ್ವತೀಯನಕುದಹುದೆ (ಜ) 3 ವಶಕಾ (ಜ) 4 ದಮುಮ (ಜ)
5 ಯೆನೆ ಸಕಲ (ಜ) 6 ಕೋ (ಜ) 7 ನಯೋಧಿಯಿಂ (ಜ) 8 ಪಿತ (ಜ)

• ೨೦ನೆಯ ಪದ್ಯವಿಲ್ಲ. ಅದಕ್ಕೆ ಬದಲಾಗಿ ಬಂದಿರುವ ಪದ್ಯವನ್ನು ಅನುಬಂಧದಲ್ಲಿ ಕೊಟ್ಟಿದೆ

ಸಂದಣಿಸೆ ರತ್ನಪಲ್ಲಕ್ಕಿಯನಡರ್ದಲ್ಲಮಿತ
ಮಂದಿಗಳು[1]ಗಳುಂ ನಿಂದು ನೋಡುತ್ತಿರಲುಂ ನಿಜ[1]ಶಿಷ್ಯ
ರಂದದಿಂದಗಣಿತಜನಾಳಿವೋಲ್ಯೆಸಲೆಯ್ತುರುತ ಮುದ್ರಾಪುರದೊಳು
ನಿಂದು[2] ವರ್ಣಿಸುವ[2] ವಿದ್ವಾಂಸರಂ ಕರಸಿ ಹರ
ನಿಂದಧಿಕ ಹರಿಯೆ ಸರ್ವೋ[3]ತ್ಕೃಷ್ಟ[3]ನೆಂದಾಗ
ಮಂದಮತಿ ವ್ಯಾಸ ಪತ್ರಿಕೆಯ ಲೇಖಿಸಿ ಪೊಳಲ ಬಾಗಿಲೊಳ್ ಕಟ್ಟಿಸಿದನು ೨೪

ಈವಾರ್ತೆಯುಂ ರಾಯಗುರುಂಪೆ ವಿದ್ವಜ್ಜನರು
[4]ದೇವನಾಗದ ಕೇಳಿಯಾ[4]ರಾಮಗುರುಗಳ್ಗೆ
ತಾ ವಿನಯದಿಂ ಬಿನ್ನವತ್ತಳೆಯ ಕಳುಹಲದು ನೋಡಿಯಾನಂದಮುಣ್ಮೆ
ಸೇವಕನ ಕಳುಹಲದ ನೋಡಿ ಪತ್ರಿಕೆಯುಳಿಯೆ
ತೀವಿ ವೈಷ್ಣವರು ತಡೆಯಲ್ ವಾದದೊಳಗೀಗ
ನಾವು ಸೋತಡೆ ಕೇಳಿ ನಿಮಗೀವೆವೆಂದದಂ ಸೀಳ್ದುಕೊಂಡೊಯ್ಯಲರರೆ ೨೫

ಕೆರಳ್ದೀದಪುಲಿಯಂತೆ ಘುಡುಘುಡಿಸಿಯಾ ವ್ಯಾಸ
ತೆರಳ್ದ[5]ನಾ[5] ತೃಣಪುರುಷವಹ್ನಿಯೊಳ್ ಸೆಣಸಂವಂ
ತರಳಂಬ ಹರನೊಡನೆಯಿದಿರಿಪ್ಪೋಲ್ ಸಿಂಹಭೇರುಂಡನಂ ಕೆಣಕುವಂತೆ
ಮರೆದು ಸಿಂಹದ ಮುಂದೆ ಗಜಬೃಂಹಿತದೆ ನಿಲ್ವ
ಪರಿಯಂತೆ ಕೂಪೋದಪಾನದಿಂ ಭೇಕಬಿಡ
ದುರಗನಗ್ರದೊಳೊರಲುಪಂತೇ[6]ಕ[6]ರಾಮಾರ್ಯರಿದಿರೆ ವಾದಿಸಲೆಯ್ದಿದಂ ೨೬

ವೀರಭಾಸ್ಕರ ರಾಜ ಮಂತ್ರಿಪ್ರಧಾನರುಂ
ಸೇರುವೆಯ ಸಕಲವಿದ್ವನ್ನಿಯೋಗಿಗಳಖಿಳ
ಭೂರಿವಿನಿಯೋಗಪರಿವಾರಸಹ ಬಂದು ವಂದಿಸಿ ರಾಮಾನಾಥಾರ್ಯರ
ಸಾರವಾದಪ್ಪಣೆಯೊಳಂ ಕುಳಿತು ವ್ಯಾಸಭೂ
ಭಾರಕನ ಮುಖವ ನಿಟ್ಟಿಸಲವಂ ಶ್ರುಣು[7]ದೇವ[7]
ನಾರಾಯಣಾತ್ಪರಂ ನಾಸ್ತಿ ನಾರಾಯಣಾದ್ರು[8]ದ್ರಸ್ತ್ವಜಾಯತ ಎನೆ[8] ೨೭

---

1 ಪರಿವಾರಖಿಳ ಛತ್ರಚಾಮರ (ಜ) 2 ವಲ್ಲಿರ್ಪ (ಜ) 3 ತ್ಕರ್ಷ (ಜ) 4 ಭೂಮಿಯಾಣ್ಮಂ ಕೇಳಿಯೇಕೋ (ಜ) 5 ವಾ (ಕಗ) 6 ಕೊ (ಜ) 7 ರಾಜ (ಜ) 8 ದ್ರೋಜಾಯತೇತಿ (ಜ)

[1]ಈಗಾಡಿದಂತಿರ್ಪುದು[1] ಮಹೋಪನಿಪತ್ತಿನಲ್ಲಿ:

ಶ್ರುತಿಃ ॥

ತದಾ ಹರೇಕೋಹ ವೈ ನಾರಾಯಣ ಆಸೀತ್ ನ ಬ್ರಹ್ಮಾ ನ
ಈಶಾನೋ ನಾಪೋನಾಗ್ನಿ[2]ಷೋ[2] ಮೌನ ಇಮೇ ದ್ಯಾವಾಪೃಥ್ವೀತಿ

ಎಲೆ ವಾದಿ ಕೇಳು ಪ್ರಳಯದೊಳೊರ್ವ ಹರಿಯಾದ
ನಳಿನಭವನೀಶಾನನಾ ವಾರಿಯಗ್ನಿ ಶಶಿ
ಗಳ ಕು[3]ಲಮಿದಿಲ್ಲ[3] ದ್ಯಾವಾಪೃ[4]ಥವಿಯಿಲ್ಲಮಾತನ ಮಹಾಧ್ಯಾನದಿಂದ[4]
ನೆಲೆ[5]ಯಾದ ಪಣೆಯ ಭಾಗದೊಳುದಿಸಿದಂ ರುದ್ರ
ನುಲಿ[5]ವುದದರಿಂದಧಿಕತರ[6]ನಲ್ಲ[6] ಶಿವ[7]ನು[7] ಬಿಡ
ದೊಲವಿನಿಂದಂ ತ್ರ್ಯಕ್ಷ[8]ನಾಗಿ ಶೂಲವ ಪಿಡಿದು ಪುರುಷನುದಿಸಿರ್ದನೆಂದು[8] ೨೮

ಶ್ರುತಿಯರ್ಥಮೆಂತೆನಲ್ಕಾ ಧ್ಯಾನದೊಳಗಿರ್ದ
ಮತಿವಂತ[9]ನಾಥ ಹರಿಯ ಲಲಾಟಭಾಗದಿಂ
ಧೃತಶೂಲನಾಗಿ ಮುಕ್ಕಣ್ಣನಾಗೀಶ್ವರಂ ಪ್ರತ್ಯಕ್ಷವಾದನೆಂದು[9]
ಅತಿಹರುಷದಿಂ[10]ದಲ್ಲಿ[10]ತ್ಯಾದ್ಯುಪನಿಷತ್ತುಗಳು
ಸತತಮುಲಿವುತ್ತಿಹವು ಮತ್ತೆ ಪ್ರಳಯದೊಳು ಹರಿ
ಪ್ರತಿಯಿಲ್ಲದಾತನೇ ನಿತ್ಯನಾ ರುದ್ರನೆಯ್ನಿತ್ಯನೆಂದೆಂಬೆ ಕೇಳು ೨೯

[11]ವಾಕ್ಯಮಲ್ಲಿಯೇ[11]॥

ಸದಾ ನಾರಾಯಣಸ್ಯ ಹೃದ[12]ಯ[12]ಕಮಲಮಧ್ಯೇ ವಹ್ನಿಶಿಖಾನ್ತರಾಳೇ
ಪರಮಾತ್ಮಾ ರುದ್ರೋ ವ್ಯವ[13]ತಿಷ್ಠ[13]ತೀತಿ ಪ್ರಸಿದ್ಧಮ್॥ ತತ್ಕಥಮಿತಿ ಚೇತ್॥
ಶ್ರುತಿಃ ॥
ಸಹಸ್ರ[14]ಶಿರಸಂ[14]ದೇವಂ ವಿಶ್ವಾಕ್ಷಂ ವಿಶ್ವಶಮ್ಭುವಂ
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪ್ರಭುಮ್॥
ಇತಿ ನಾರಾಯ[15]ಣಂ[15] ಸಂಸ್ತುತ್ಯ [16]ತ್ರ[16]ತ್ಕಥಮಿತಿ ಚೇತ್
ರಾಜವದ್ರಾಜಪುರುಷೇತಿ ನ್ಯಾಯೇನೌಪಚಾರಿಕಾತ್

---

1 ಇತಿ ಹ್ರಸ್ವನಾರಾಯಣೋಪನಿಷಧಿ ಅನಂತರಂ (ಜ) 2 ಸೋ (ಜ) 3 ಲಂಇಲ್ಲ (ಜ) 4 ಥ್ವಿಯಿಲ್ಲಮೆಂತೆನೆ ತಸ್ಯಧ್ಯಾನಮೆಂದು (ಜ) 5 ಯಾಗಿ ತಸ್ಯಲಲಾಟಾತ್ತೆಂದುಯೆಂದುಮು (ಜ) 6 ಮಾದ (ಜ) 7 ನಂ (ಜ) 8 ಶೂಲಪಾಣಿ ಪುರುಷೋಜಾಯತೇತಿಯೆನಿಪ (ಜ) 9 ಹರಿ ಲಲಾಟದತ್ತಣಿಂ ತ್ರಿಣೇತ್ರನಾದತಿಶೂಲಹಸ್ತನಾದಮಳ ಪುರುಷಂ ಜನಿಸಿ ಪ್ರತ್ಯಕ್ಷವಾದನೆಂದು (ಜ) 10 ದೆಯಿ (ಜ) 11 ವಾಕ್ಯನನು॥ ಸತ್ಯಮೇವಮಹೋಪನಿಷಧಿ॥ ಉತ್ತರವಾ ಕ್ಯೇಷುಚ॥(ಜ) 12 ಯಂ (ಜ) 14 ಸ್ಥಿ (ಜ) 13 ಶೀರ್ಷಂ (ಜ) 15 ಣ (ಕಗ) 16 ಸ (ಕಗ)

ನನು ಶ್ರು[1]ತಿ[1]ಃ॥

ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಂ
ಇತ್ಯಾದಿ ವಾಕ್ಯೇ ಹೃದಯಸ್ಯ ನಾರಾಯಣಸಮ್ಬ[2]ನ್ಧಿತ್ವಮುಕ್ತ್ವಾ[2]
ನೀಲ[3]ತೋಯದ ಮಧ್ಯ[3]ಸ್ಥಾ ವಿದ್ಯುಲ್ಲೇಖೇವ ಭಾಸ್ವರಾ
ನೀವಾರ[4]ಶೂ[4]ಕವತ್ತನ್ವೀ ಪೀತಾಭಾಸ್ಯಾ[5]ತ್ಯಣೂ[5]ಪಮಾ
ತಸ್ಯಾಶ್ಶಿಖಾಯಾ ಮಧ್ಯೇ ತು ಪರಮಾತ್ಮಾವ್ಯವಸ್ಥಿತಃ॥

ಇತಿ ಪ್ರೋಕ್ತ್ವಾ॥
ತಸ್ಯ ಪರಮಾತ್ಮನಃ ಸಾಲಮ್ಬೋಪಾಸನಾರ್ಥಂ ರೂಪವಿಶೇಷಸಮರ್ಪ[6]ಣಮ್[6]

[7]ತತ್ರಶ್ರು[7]ತಿಃ[7]॥

ಋತಂ ಸತ್ಯಂ ಪರಂಬ್ರಹ್ಮ ಪುರುಷಂ ಕೃಷ್ಣಪಿಙ್ಗಳಂ
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯವೈ ನಮಃ
ಅಸ್ಮಿನ್ನರ್ಥೇ ಸ್ಕಾಂದಪುರಾಣೇ
ನಾರಾಯಣಸ್ಯ ಹೃತ್ಪ[8]ದ್ಮೇ[8] ತತ್ರವಹ್ನಿಶಿಖಾ ಪರಾ
ತಸ್ಯಾಃ ಶಿಖಾ[9]ಯಾ[9] ಮಧ್ಯೇ [10]ತು[10] ಪರಮಾತ್ಮಾವ್ಯವಸ್ಥಿತಃ

ಆಮಹೋಪನಿಷ[11]ತ್ತಿನುತ್ತರದ [11]ವಾಕ್ಯದೊಳ್
[12]ಶ್ರೀ[12]ಮಹಾವಿಷ್ಣುವಿನ ಹೃತ್ಕಮಲಮಧ್ಯಶಿಖಿ
ಯಾ ಮಧ್ಯದಲ್ಲಿ ಪರಮಾತ್ಮನಾ ರುದ್ರನೆಡೆಗೊಂಡಿರ್ಪನೆಂತೆಂದೊಡೆ
[13]ಭೂಮನಾಗುತ್ತಮಲಂತರ್ಯಾಮಿಲಕ್ಷ್ಯಕೃತ[13]
ನೇಮದಿಂ ಪರಬ್ರಹ್ಮ[14]ನಾ[14]ಪುರುಷನಾದಧಿಕ
ಸೋಮವಿಗ್ರಹ[15]ಮೂರ್ಧ್ವರೇತು ವಿರೂಪಾಕ್ಷನಾತಗೆ ನಮಸ್ಕಾರವು[15] ೩೦

ಗ್ರಂಥ॥

ಸ ಬ್ರಹ್ಮ ಬ್ರಹ್ಮಕತ್ವಾಚ್ಚ ಸಶಿವೋ ಮಙ್ಗಳಾಶ್ರಯಾತ್
ಸ ಹರಿರ್ದೋಷಸಂಹಾರಾತ್ ಸೇನ್ದ್ರೋವಿಶ್ವೇಶ್ವರ ತ್ವತಃ

---

1 ತಿಃ (ಜ) 2 ನಿತಮುಕ್ತ್ವಾ (ಕಗ) 3 ಮಧ್ಯೇ ವಹ್ನಿಶಿಖಾ ಅಣ ಯೋರ್ಧ್ವಾವ್ಯವಸ್ಥಿತಃ ನೀಲ ತೋಯತಮಧ್ಯಂ (ಜ) 4 ಶು (ಜ) 5 ತ್ವಣೋ (ಜ) 6 ಣಾಯ (ಜ) 7 ಶ್ರುತಿಮಂತ್ರಂ (ಜ) 8 ದ್ಮಂ (ಜ) 9 ಯ (ಜ) 10 ಸ್ಮಿನ್ (ಕಗ) 11 ಧಿಯ ಉತ್ತರ (ಜ) 12 ಆ (ಕ) ಸದಾಶ್ರೀ (ಜ) 13 ತಾಮಖಿಳದೊಳಗಂತರ್ಯಾಮಿ ಸತ್ಯಾದಿ ಲಕ್ಷ (ಜ) 14 ಮಾ (ಜ) 15 ಜಿತೇಂದ್ರಿಯ ತ್ರಿಲೋಚನ ವಿಸ್ವರೂಪನಹ ಶಿವಗೆ ಶರಣು (ಜ)

ಸೋ[1]ಗ್ನಿಃ ಚೈ[1]ತನ್ಯರೂಪತ್ವಾತ್ ಸೋಽಕ್ಷರೋ ನಿತ್ಯಭಾವತಃ
ರಾಜತೇ ಪರಮೋಸ್ವಸ್ಮಿನ್ ಸಂಪ್ರೋಕ್ತಃ ಪರ[2]ಮಃ[2] ಸ್ವರಾಟ್

ಪರಶಿವನೆ ದೊಡ್ಡ[3]ತನದಿಂ[3] ಬ್ರಹ್ಮಮಂಗಲ
ಕ್ಕಿರದಾ ಲ[4]ಯತ್ವದಿಂ[4] ಶಿವನಘವ ಸಂಹರಿಸೆ
ಹರಿ ವಿಶ್ವಕೊಡೆಯನಹತನದಿಂದ ಸರ್ವಚೈತನ್ಯನಾಗಲ್ಕಗ್ನಿಯು
ಚಿರನಿತ್ಯನದರಿನಿಂದಕ್ಷರಂ ತನ್ನನೇ
ನೆರೆ ವಿರಾಜಿಸೆ ಸ್ವರಾ[5]ಡಿಂ[5]ತು ನಾನಾಪರಿಯ
ತೆರದ ನಾಮವನಾಂತ ಪರಮಾತ್ಮನೇ ಪರಬ್ರಹ್ಮ ಪರಶಿವನೆಂದರಿ ೩೧

ವಂತ್ತೆ ವಾಮನಪುರಾಣಂ ಪೇಳ್ವುದೈ ವ್ಯಾಸ
ತಥ್ಯಂ ತ[6]ದ[6]ವ್ಯಯಾತ್ಮಂ [7]ಹರಿಯುಂ ತನ್ನಯಾ
ಹೃತ್ಪಂಕಜ[7]ಶಾಯಿನಂ ದರ್ಶಯಾಮಾಸ ದೇ[8]ವನಾಂ[8] ಮುರಾರಿಯೆಂದು
ಸತ್ಯಮಾ ಲಿಂಗಪ್ಪೈಶ್ವರಮರ್ಥವೆಂತೆನಲ್
ನಿತ್ಯನಾರಾಯ[9]ಣನ್[9] ಹೃತ್ಕಮಲಶಾಯಿಯಾ
ದತ್ಯಂತ [10]ಶಂಭು[10]ಲಿಂಗವನಪುರತಶಿಗೆ ತೋರಿಸಿದ ಪೌರಾಣಮರಿಯೊ ೩೨

ಕಿಞ್ಚ ನನು ಶ್ರುತಿಃ॥

[11]ಸ[11]ಯುಗಸ್ಯಾನ್ತಕಾಲೆ ಏಕಏವರುದ್ರೋ ನದ್ವಿತೀಯಾ
ಯತಸ್ಥನ ಬ್ರಹ್ಮಾನ ವಿಷ್ಣುರಿತ್ಯೇವಮಾ[12]ದಿ[12]ಪುರಾಣೇತಿಹಾಸವಾಕ್ಯೈರ್ನಾ
ರಾಯಣಸ್ಯಾಽ ನಿತ್ಯತ್ವಂ ರುದ್ರಸ್ಯ ನಿತ್ಯತ್ವಮುಕ್ತ್ವಾ ತಸ್ಮಾದವಾನ್ತರಜಳಪ್ರಳಯಂ
ಮಾತ್ರಾದೇವ ನಾರಾಯಣಸ್ಯ ನಿತ್ಯತ್ವಂ ವಿದ್ಯತೇ॥ ಮಹಾಗ್ನಿಪ್ರಳಯೆ
ನಾರಾಯಣಸ್ಯ [13]ಅನಿ[13]ತ್ಯತ್ವಂ ವಿದ್ಯತೇ

ಅತ್ಯಂತ ದೇದೀಪ್ಯನಾಗಗ್ನಿಪ್ರಳಯಂದೊಳ್
ನಿತ್ಯನಾಗೇಕವಿವಹಿರುದ್ರನೊರ್ವನೇ
ಮತ್ತೆ ಎರಡನೆಯಾತನಿಲ್ಲದಂದಕೋಸುಗಂ ತಾನಿರ್ಪನಾ ಕಾಲದೊಳ್
ಸತ್ಯಲೋಕೇಶನಜನಿಲ್ಲ ವಿಷ್ಣುವುಮಿಲ್ಲ
ಮತ್ತಾರುಮಿಲ್ಲವೆಂದಿತ್ಯಾದಿ ಶ್ರುತಿಸ್ಮೃತಿಯ
ಜತ್ತರದೆ ಪೇಳಲದರಿಂದನಿತ್ಯನು ವಿಷ್ಣು ನಿತ್ಯನೇ ರುದ್ರನೆಲವೊ ೩೩

---

1 ಗ್ನಿಶ್ಚೈ (ಜ) 2 ಮ (ಜ) 3 ಡ್ಡಿತದರಿಂ (ಜ) 4 ಯಂದರಿನಿಂ (ಜ) 5 ಟ್ಟಿಂ (ಕಗ) 6 ದಾ (ಜ) 7 ಸಹರಿಸ್ತ್ವ।ದ್ರೃಕ್ಪಂಕೇಜ (ಜ) 8 ವಂ (ಕಗ) 9 ಣಂ (ಜ) 10 ಈಶ (ಜ) 11 ಪ್ರತ್ಯಂಜದಸ್ಮಿಸ್ಮೃತಿ ಸಂ (ಜ) 12 ದಿಶ್ರುತಿ (ಜ) 13 ನಿ (ಕಗ)

ವಾಕ್ಯಮ್॥

ಪುನರೇಕೋರಾ[1]ಮಃ ವ್ಯಾಸಂ ಪ್ರತ್ಯಬ್ರವೀತ್ [1]ಶ್ರುತಿಃ

ನಾರಾಯಣಂ ಪರಂ ಬ್ರಹ್ಮ ತತ್ವಂ ನಾರಾಯಣಃ ಪರಃ

ನಾರಾಯಣ[2]ಣಂ ಪರಂ[2] ಜ್ಯೋತಿರಾತ್ಮಾ ನಾರಾಯಣಃ ಪರಃ

ಇತ್ಯಾದಿ ವಾಕ್ಯಾತ್ ನಾರಾಯಣ ಏವ ಪರ[3]ಮಾ[3]ತ್ಮೇತಿ ನಿ[4]ಶ್ಚೆ[4]ೀತವ್ಯಂ ಇತಿ [5]ಚೇತ್[5]

[6]ನನು[6]॥ ತದ್ವಿಷ್ಣೋಃ ಪರಮಂಪದಮಿತ್ಯತ್ರ ಯಥಾ ಪಂಚಮೀವಿಭಕ್ತಿಃ

ಶ್ರುತಿಪುರಾಣವಾ[7]ಕ್ಯೈ[7]ರ್ನಿಶ್ಚಿತಾ ತ[8]ದಾ[8]........ನಾರಾಯಣಾತ್॥ಪರಬ್ರಹ್ಮೇತಿ

ಪಂಚಮೀವಿಭಕ್ತಿ[9]ಸ್ಸ[9]ಮಾಸಮಧ್ಯೇ ನಿಶ್ಚೇತವ್ಯಾ।ತತ್ರ ತತ್ವಂ ನಾರಾಯಣಃ

ಪರಃಆತ್ಮಾ ನಾರಾಯಣಃ ಪರ ಇತಿ ಛನ್ದೋವಿಷಯೇವ್ಯತ್ಯಯೊ ಬಹುಳಮಿತಿ

ಸೂತ್ರಾತ್ ಪಂಚಮೀಸ್ಥಾನೇ ಪ್ರಥಮಾವಿಭಕ್ತಿ ಪರಿಣಾಮ ಏವೇತಿ॥

ಅತ ಏವೋಕ್ತಮ್ ಸ್ಕಾನ್ದೇ ಸನತ್ಕುಮಾರಸಂಹಿತಾಯಾಂ

ನಾರಾಯಣಾ[10]ತ್ಪರಂ[10]ಜ್ಯೋತಿರಾತ್ಮಾ ನಾರಾಯಣಾತ್ಪರಃ॥

[11]ಇಂತೆಂದು ಪೇಳಿದುದಾಗಿ[11]॥

ಹರಿಯೆ ಪರಬೊಮ್ಮ ಪರತತ್ವಂ ಪರಂಜ್ಯೋತಿ

ಪರಮಾತ್ಮನೆಂಬೆಯದು ಪುಸಿಯೆಂತೆನಲ್ ಕೇಳು

ಒರೆವೆ ತದ್ವಿಷ್ಣೋಃ ಪರಮ ಪದಂ ಎಂದು ಪಂಚಮಿಯ ವಿಭಕ್ತಿ[12]ಯೆ ನಿಜಂ[12]

[13]ಒರೆ[13]ವುದೈ ಸ್ಕಾಂದ ಹರಿಯತ್ತಣಿಂ ಪರಬ್ರಹ್ಮ

ಮಿರದೆ ಹರಿಯಂತ್ತಣಿಂ ತತ್ವವೆ ಪರಂಜ್ಯೋತಿ

ಯರರೆ ಹರಿಯತ್ತಣಿಂ ಪರಮಾತ್ಮನೆಂದು ಶ್ರುತಿಪೌರಾಣಮುಲಿವುದರಿಯ ೩೪

[14]ವಾಕ್ಯಮ್[14]॥

ಹೇ ಏಕೋರಾಮಾರ್ಯ ಪುನಃಶ್ರುಣು॥

ಶ್ರುತಿಃ॥

ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೆ ಶ್ರೂಯತೇಽಪಿ ವಾ

ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಃ ಸ್ಥಿತಃ

ವಾಕ್ಯಮ್॥

ಇತ್ಯಾದ್ಯುಪನಿಷದ್ವಾಕ್ಯೇ ನಾರಾಯಣ ಏವ ಸರ್ವಜಗದ್ವ್ಯಾಪಕಃ ಸ್ವತ ಏವೇತಿ

ನಿಶ್ಚೇತವ್ಯಂ ಇತಿ ಚೇತ್॥ ನನುವ್ಯಾಸಃ ಶಿವಾಜ್ಞಾಸಾಮರ್ಥ್ಯೇನ ನಾರಾಯಣಸ್ಯ

---

1 ಮಂ ಪ್ರತಿವ್ಯಾಸ ಅಬ್ರವೀತ್ (ಜ) 2 ಣ ಪರೋ (ಜ) 3 ಬ್ರಹ್ಮಪರತತ್ವಪರಂಜ್ಯೋತಿ ಪರಮಾ (ಜ) 4 ಶ್ಚಿ (ಜ) 5 ಚಂದೇ (ಕಗ) 6 ಹೇವ್ಯಾಸನನನು (ಜ) 7 ಕ್ಯೇಲ (ಜ) 8 ಥಾತ್ರ (ಜ) 9 ಸ (ಜ) 10 ತ್ಪರಂ ಬ್ರಹ್ಮತತ್ವಂ ನಾರಾಯಣ್ಣಾತ್ಪರಂ ನಾರಾಯಣಾತ್ಪರೋ (ಜ) 11 ಶ್ರುತಿ ಧರ್ಮವನೆಪುರಾಣ ಹೇಳುತ್ತಿಹುದು (ಜ) 12 ಯೆಂದು (ಜ) 13 ಮೊರೆ (ಜ) 14 ಗ್ರಂಥ (ಜ)

ವ್ಯಾಪಕತ್ವಂ॥ ಪ್ರಸಿದ್ಧಂ ತದುಕ್ತಂ ಭವಿಷ್ಯತ್ಪುರಾಣೇ ಜೈಮಿನಿಕೃತ ವೇದಪಾದಸ್ತೋತ್ರೇ ಶ್ರೂಯತಾವ್॥

[1]ಶ್ಲೋಕಃ[1]॥

ಹರಂ ಹರಿ ನಿಯನ್ತಾರಂ ಪರನ್ತಮಹಮಾನತಃ
ಯದಾಜ್ಞಯಾ ಜಗತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ

ಆವುದಾನೊಂದ್ವಿಷ್ಣು ಸರ್ವಲೋಕವು ಕಣ್ಗೆ
ತೀವಿ ಕಾಣಲ್ಪಡುವುದುಂ ಕೇಳಿಪಡುತಿಹುದು
ಭಾವಿಸಲ್ಕಾ ಸಮಸ್ತವನು ನಾರಾಯಣಂ ವ್ಯಾಪಿಸಿರುತಿರ್ಪನೆಂಬ
ಆ ವಚನಕುತ್ತರಭವಿಷ್ಯತ್ಪುರಾಣದೊಳ
ಗೋವಿ ಜೈಮಿನಿಕೃತಸುವೇದಪಾದಸ್ತುತಿಯೊ
ಳೀವೇಳ್ದೆ ವ್ಯಾಸದೀಕ್ಷಿತನೆ ಲಾಲಿಸುವುದೆಂದೊರೆವುತಿರ್ದಂ ಗುರುವರಂ ೩೫

ಮತ್ತಾವನೊರ್ವ ಪರಮೇಶ್ವರನ ಆಜ್ಞೆಯಿಂ
ದಂತ್ಯಮಂದ ಸರ್ವಲೋಕವನು ವ್ಯಾಪಿಸಿಯೆ ಕೊಂ
ಡತ್ಯಧಿಕ ನಾರಾಯಣಂ ಸಾರ್ವಕಾಲ ನೆಲಸಿರ್ಪನವಪೂರ್ಣ[2]ನಾಗಿ[2]
ಬಿತ್ತರದೊಳಾ ವಿಷ್ಣುವಿಗೆ ನಿಯಂತ್ರವೆಯಾಗಿ
ಸತ್ಯಾಧಿಲಕ್ಷಣಂ ಪರತತ್ವರೂಪನಹ
ಕೃತ್ತಿಧರನಾದ ಹರನಂ ಕುರಿತು ನಾ ನಮಸ್ಕರಿಪೆನೆಂದಂ ಜೈಮಿನಿ ೩೬

ವಾಕ್ಯವ್॥

ನನು ಪುನಃ ನಾರಾಯಣಾದ್ರುದ್ರೋಜಾಯತ ಇತಿ [3]ಹಾಸೇ[3]ನಾರಾಯಣವಾಕ್ಯಾತ್ ಲಲಾಟಾ[4]ತ್ರ್ಯಕ್ಷಃ[4] ಶೂಲಪಾಣಿಃ ಪುರುಷೋಜಾಯ[5]ತ ಇ[5]ತಿ ಮಹೋಪನಿಷದ್ವಾಕ್ಯಾನ್ನಾರಾಯಣಾದ್ರುದ್ರೋತ್ಪತ್ತಿರ್ನಿಶ್ಚಿತಾ ಇತಿ ಚೇತ್॥ ನ ತದ್ವೇದಾರ್ಥ ನಿಶ್ಚಯಃ ಪುರಾಣವಾಕ್ಯೈಃ ಶ್ರೂಯತಾಂ॥ ಕೂರ್ಮಪುರಾಣೇ॥ ನಾರಾಯಣಂ ಪ್ರತಿ ಶಿವವಚನವ್

ಗ್ರಂಥ॥

ಅಹಞ್ಚ ಭವತೋ ವಕ್ತ್ರಾತ್ಕಲ್ಪಾನ್ತೇ ಘೋರರೂಪಧೃಕ್
ಶೂಲಪಾಣಿರ್ಭವಿಷ್ಯಾಮಿ ಕ್ರೋಧಜಸ್ತವಪುತ್ರಕಃ

---

1 ಗ್ರಂಥ (ಜ) 2 ಭಲರೆ (ಜ) 3 ಹ್ರಸ್ವ (ಜ) 4 ತ್ರ್ಯಕ್ಷ (ಜ) 5 ತೇ (ಜ)

ಎಲೆ ಹರಿಯೆ ಕೇ[1]ಳಾನು[1] ನಿನಗೊಲಿದೆನ್ಯೆ ನಿನ್ನ
ಲಲಿತ ಮುಖದತ್ತಣಿಂ ಪ್ರಳಯಕಾಲದೊಳು ನಿ
ರ್ಮಳಭಯಂಕರರೂಪಧರಿಸಿದಾತನುಮಾಗಿ [3]ಶೂಲಮಂ ಕರದೊಳಾಂತಂ[2]
ಒಲವಿನಿಂ ಕೋಪದೊಳ್ ಹುಟ್ಟುತ್ತ ನಿನಗಧಿಕ
ಬಲವಂತ ಪುತ್ರನಾದಪೆನೆಂದು ತಪಸಿಗಂ
ದೊಲಿದು ಭ[3]ಕ್ತಗೆ ವ[3]ರವನಿತ್ತ ಕಾರಣ ಶಿವಂ ಸುತನಾದನೆಂದರಿವುದು ೩೭

ವಾಕ್ಯಮ್ ॥

ತಥಾ ಸ್ಕಾನ್ದೆ॥ ಅತ ಏವೋಕ್ತಂ ಭಾರ[4]ತಂ[4] ಶ್ರುಣು

ಗ್ರಂಥ ॥

ನಾರಾಯಣ ಸ್ಥಿತೋ ರಂದ್ರೋಧ್ಯಾನಾದ್ಬಹಿರದೃಶ್ಯತ
ರುದ್ರೊ ನಾರಾಯಣಾಜ್ಜಾತ ಇತ್ಯಾಹ ಶ್ರುತಿರಾದರಾತ್
ತತಃ ಪಾರ್ಶ್ವೆ ವೃಷಾಜ್ಕಸ್ಯ ಬ್ರಹ್ಮಚಾರೀ ವ್ಯವರ್ತತೆ
ಪಿಙ್ಗಾಕ್ಷ [5]ಸ್ತಪತಾಂ[5]ಶ್ರೇಷ್ಠೋ ಬಲವಾನ್ನೀಲಲೋಹಿತಃ

ನಾರಾಯಣನ ಹೃದಯ ಕಮಲ ವಹ್ನಿಯ ನಡುವೆ
ಮಾರಾರಿ ಕೃಷ್ಣಪಿಂಗಳದ ಮೂ[6]ರ್ತಿ[6]ತ್ವದಿಂ
[7]ಧೀರರಿಂದೊಡನುಪಾಸ್ಯತೆಯಾಂತ ರುದ್ರನಾ ಹರಿಯ ಹೃಚ್ಚಿಂತೆಯಿಂದ[7]
ಆರಯ್ಯಲಂತರಂಗದೊಳಿರ್ದ ವಸ್ತು ತಾಂ
ಸಾರಿ [8]ಪೊರಗಣ ಕಡೆಯ[8]ಪ್ರತ್ಯಕ್ಷಮಾದನೆನು
ತಾರಮ್ಯ ಶ್ರುತಿ ಪ್ರೀತಿಯಿಂ ಹೇಳುತಿಹುದೆಂದು ಪೌರಾ[9]ಣಿಕಂ ಮೆರೆವುದು[9] ೩೮

ಭಾರತಂ ಉಸುರ್ವುದೈ ಬಳಿಕಲಾ ಪರಶಿವನ
ಸಾರಿ ಪಾರ್ಶ್ವದೊಳಿರ್ದು ಬ್ರಹ್ಮಚಾರಿಯುಮೆನಿಪ
ಭೂರಿತಪ[10]ತಾಂ[10] ಶ್ರೇಷ್ಠನಾದರುಣವರ್ಣವಹ ಕಣ್ಗಳಿಂ ಪ್ರಜ್ವಲಿಸುವ
ಧೀರಬಲವಾನ್ನಾದ ನೀಲಲೋಹಿತ ರುದ್ರ
ನೀರೇಜನೇತ್ರ ನೀರಜಭವರಿಗೊಲಿದಂದು
ಚಾರುಲೀಲೆಯೊಳು ವರ್ತಿಸುತಿರ್ದನೆಂದು [11]ಪೇಳುವ ಗ್ರಂಥಗಳನು ತಿಳಿಯ[11] ೩೯

---

1 ಳಾಂ (ಜ) 2 ತ್ರಿಶೂಲ ಹಸ್ತದೊಳಾನುತ (ಜ) 3 ಕ್ತಂಗೊ (ಜ) 4 ತೇ (ಜ) 5 ಸತಪ ಸಾಂ (ಜ) 6 ರ್ತ್ಯ (ಜ) 7 ಸಾರಾಮಳೋಪಾಸ್ಯನಾದ ರುದ್ರನಾ ಹರಿಯ ಧ್ಯಾನತರದತ್ತಣಿಂದೆ (ಜ) 8 ಬಹಿರ್ಗತಮಾಗಿ (ಜ) 9 ಣಮುಲಿವುದಧಮ (ಜ) 10 ಸಾಂ (ಜ) 11 ಇತ್ಯಾದಿ ಗ್ರಂಥಗಳ ನರಿಯೊ (ಜ)

ಇತ್ಯೇಕ[1]ತ[1] ನೀಲಲೋಹಿತರುದ್ರಸ್ಯ ಬ್ರಹ್ಮಣೋ ನಾರಾಯಣಾದ್ಯುತ್ಪತ್ತಿರಪಿ
ತಸ್ಯ ರುದ್ರಸ್ಯ
ನನಿಕರ್ಷಾಪಾದಕ ಇತಿ ನಿಶ್ಚೀಯತೇ ಕರ್ಮಪಾರವಶ್ಯಂ ವಿನಾ ಸ್ವೇಚ್ಛಯಾ ಅವಿಮುಕ್ತಾ
ಭಿಧಾ[2]ನವತ್ ಪರಿಶುದ್ಧಸ್ಥಾನಾತ್ ಬ್ರ[2]ಹ್ಮಣೋ ನಾರಾಯಣಸ್ಯ ಲಲಾಟಾದಾವಿ
ರ್ಭಾವಾತ್ ಸ್ತ್ರೀಹತ್ಯಾದಿ ಕರ್ಮಪಾರವಶ್ಯೇನ ಭೃಗ್ವಾದಿ ಮುನಿಶಾಪಾ[3]ದ್ವಿ[3]ಷ್ಣೋರಿವ
ಮನುಷ್ಯ ಮಾತ್ರುನಾವಿರ್ಭಾವಾಭಾವಾಚ್ಚ ತದ್ವತ್ ಪುರುಷವೀರ್ಯ[4]ಕಣಾ[4]
ನುಶಕ್ತಿ[5]ಸ್ತ್ರೀ[5]ಗರ್ಭಾವಾಸಯೊ ನಿಜತ್ವಾದಿ ದುಃಖಾಭಾವಾಚ್ಚ ತದ್ವದ್ಬ್ರಹ್ಮ[6]ಣೌಧ್ರೋ[6]
ಧ್ವಾದಿ[7] ನಿಷ್ಕ್ರಾನ್ತಿತ್ವಾ[7]ಭಾವಾಚ್ಚ [8]ನಾರಾಯಣಸ್ಯ[8] ಭಕ್ತಿಹಿತಾಯ ಪ್ರಸನ್ನ[9]ಸ್ಯಾ[9]ವಿ
ರ್ಭಾವೋ ನಿ[10]ಶ್ಚೀ[10]ಯತೇ ॥

ಇಂತು ಈ ನೀಲಲೋಹಿತರುದ್ರಗಾದೊಡಂ
ಕಂತುಪಿತ್ರ ಬ್ರಹ್ಮನತ್ತಣಿನ[11]ದ ಸಂಭವವ[11]
ಮುಂತೆ ಕೇಳ್ ಹರಿಯಂತೆ ಕಶ್ಯಪ ದಶರಥಾದಿ[12]ದೇವನರರಿಂ ಜನನವ[12]
ಮುಂತುದಯಸಿದ್ಧಮಾಯ್ತುಜಹರಿಗಳಿಂ ರುದ್ರ
ನೆಂತು[13]ಪುಟ್ಟಿದ ಪುಟ್ಟಿದುದ ಕೇಡೆನಲ್ಕೇಳ[13]
ನಂತವಹ ಕರ್ಮಪರ[14]ನಾಗಿಯವಿಮುಕ್ತಮ[14]ನಿಪತ್ಯಂತ ಶುದ್ಧಮಾದ ೪೦

ಹರಿ ವಿರಿಂಚಿಗಳಮಳ ಭೃಕುಟಿ ಕಾಶಿಯೊಳೊರ್ವ
ಹರರುದ್ರನುದಿಸಲೇಂ ಭಂಗಮಿಲ್ಲೈ ಕೇಳು
ಹರಿಯಂತೆ ಕರ್ಮವಶದಿಂದೆ ಭೃಗ್ವಾದಿ ಮುನಿಶಾಪದಿಂದಾ ಮನುಜರ
ಪುರುಷವೀರ್ಯ[15]ಕಣಾನುಶಕ್ತಿಯಿಂ ಗರ್ಭದೊಳ
ಗಿರದುದಿಸಿ[15]ದಂತಲ್ಲ ಬಳಿಕಜನ ಗುದದಲ್ಲಿ
ಭರದಿಂದಲೊಗೆದ ಪರಿಯಲ್ಲ [16]ಹರಿಹರ[16]ಭಕ್ತಿಗೋಸುಗಾವಿರ್ಭವಿಸಿದಂ ೪೧

ವಾಕ್ಯಮ್॥

ಕಿಙ್ಚನನು॥ ಅಥ ಏವೋಕ್ತಂ॥ ಲಘುಜಾಬಾಲೇ॥ [17]ಅಯೆಷೂ ನನ್ತೋವ್ಯ[17]ಕ್ತ
ಆತ್ಮಾಸೋವಿಮುಂಕ್ತೆ ಪ್ರತಿಷ್ಠ[18]ತ ಇತಿ ಚೋ[18]ತ್ತಮಂ ಚಾಪಸ್ಯಸ್ಥಾನಂ ಭವತಿ
[19]ಭ್ರು[19]ವೋರ್ಘ್ರಾಣಸ್ಯಚಯಸ್ಸನ್ಧಿರಿತಿ ಅಸ್ಮಿನ್ನರ್ಥೇ ಮಾನವಪುರಾಣೇ

---

1 ಕ (ಚಗ) 2 ನಾತ್ ಬ್ರ (ಜ) 3 ಣವಿ (ಜ) 4 ಕರಣಾ (ಜ) 5 ಸ್ತ್ರೈಣ (ಜ) 6 ಣದ (ಜ) 7 ದ್ವಿನಿಷ್ಕ್ರಾನ್ತತ್ವ (ಜ) 8 ಇತ್ಯಾದಿ ವಾಕ್ಯಪ್ರಮಾಣಾತ್ ತಸ್ಯ (ಜ) 9 ತತಾ (ಜ) 10 ಶ್ಚ (ಜ) 11 ದೊಡಂ ಜನನ (ಜ) 12 ಗಳಿಂದ ಹೆಂಗೆ ಹಾಂಗೆ (ಜ) 13 ಉದಿಸಿದೊದೆನಿಕರ್ಷಮಲ್ತು (ಜ 14 ವಲ್ಲಿ ಅವಿಮುಕ್ತ ಕ್ಷೇತ್ರಮೇ (ಜ) 15 ಕಂಶಾನುಶಕ್ತ ಸ್ತ್ರೀಗರ್ಭದೊ। ಳಿರದುದಿಸಿ (ಜ) 16 ಹರ ಹರಿ (ಜ) 17 ಯಯೇಷಾನನ್ತ ಅನ್ಯ (ಜ) 18 ತೆಲೆಉ (ಜ) 19 ತಭ್ರು (ಜ)

ಶ್ಲೋಕ ॥
ಭ್ರುವೋ ರ್ಘ್ರಾಣಸ್ಯ ಯಸ್ಸನ್ಧಿ ಸ್ತತ್ರ ವಾರಾಣಸೀಸ್ಥಿತಾ
ತತ್ರಾ ವಿಮುಕ್ತಕಂ ಕ್ಷೇತ್ರಂ ತಸ್ಮಿನ್ರುದ್ರಸ್ಸದಾಸ್ಥಿತಃ
[1]ಲಿಂಗ[1]ಜ್ಯೋತಿಸ್ಸ್ವರೂಪೇಣ ಸಾಕ್ಷಾದ್ವಿಶ್ವೇಶ್ವರಾಹ್ವಯಃ

ವಾಕ್ಯಮ್ ॥
ಹೇ ವ್ಯಾಸ ॥ ನಾರಾಯಣಸ್ಯ ದಶಾವತಾರೇಷು ದಶವಿಧ ಮಾತಾಪಿತರೌ[2]ಸ್ತಃ[2]
ತತ್ಕಥಮಿತಿ ಚೇತ್ ॥ ಲಲಿತಾಗಮೇ ॥

ಶ್ಲೋಕ ॥
ಪೃಥೋರ್ಜ್ಜ್ವಾಪ್ಯಾಃ ಪಿತೃಭ್ಯಾಂಚ[3] ಮತ್ಸ್ಯರೂಪೋಽ ಭವದ್ಧರಿಃ
ಮತ್ಸ್ಯಕೇಶ್ವರ ಲಿಂಗಂ ಚ ಲಂಕಾಯಾಂ ಸುಪ್ರತಿಷ್ಠಿತಮ್ ॥
ದರ್ಭಾವತಿ ವಿದರ್ಭಾ[4]ಭ್ಯಾಂ[4] ಕೂರ್ಮರೂಪೋಽಭವದ್ಧರಿಃ
ಕೂರ್ಮೇಶ್ವರಾಖ್ಯಲಿಂಗಂಽಚ ದ್ವಾರವತ್ಯಾಂ ಸಂ ಪೂಜಿತಮ್ ॥
ಜಯನ್ತ್ಯಾ[5]ಖ್ಯ[5] ಜಯ[6]ನ್ತಸ್ಯ [6]ಕ್ರೋಡರೂಪೋಽ [7]ಭವದ್ಧರಿಃ[7]
ವರಾಹಕೇಶ್ವರಂ ಲಿಂ[8]ಗಂ [8]ಭಜತೆ ವೃದ್ಧಪರ್ವತೇ ॥
ಪತಿವ್ರತಾಕುಮುದಯೋಃ ಪುತ್ರೋ[9]ಹರಿನರಸ್ತಥಾ[9]
ನಾರಸಿಂಹೇಶಲಿಂಗಂ ಚಾಹೋಬಲೇ ಸುಪ್ರತಿಷ್ಠಿತಮ್ ॥
[10]ನರಸ್ಯ[10]ಚಿತ್ರಮಾ[11]ಲಾಯಾಂ[11] ಪುತ್ರೋವಾಮನರೂಪಕೃತ್
ಕುರುಕ್ಷೇತ್ರೇಽಪಿ ವಾಮೇಶಂ ಲಿಂಗಂ ಚಾಪಿ ಪ್ರತಿಷ್ಠಿತಮ್ ॥
ಜಮದಗ್ನಿಶ್ಚೈಕ ವೀರಾತಯೋಃ ಪುತ್ರೋಽಭವದ್ಧರಿಃ
ಲಿಂಗಂ ಪರಶುರಾಮಾಖ್ಯಂ ಕಪಿಲಾಯಾಂ ಸುಪೂಜಿತಂ ॥
ಕೌಶ[12]ಲ್ಯಾಯಾಂ ದಶರಥೆ[12]ರಘುರಾಮಾಹ್ವಯೋಽಭವತ್
ರಾಮೇಶ್ವರಾಖ್ಯಲಿಂಗಂ ಚ ಸೇತುಮಧ್ಯೇ ಪ್ರತಿಷ್ಠಿತಮ್ ॥
ತಲ್ಲಿಂಗೇಕ್ಷಣಮಾತ್ರೇಣ ವಿಪ್ರಹ[13]ತ್ಯಾ[13] ವಿನಶ್ಯತಿ
ದೇವಕೀ ವಸುದೇವಾಖ್ಯಂ ಹರಿಃ ಕೃಷ್ಣಾಹ್ವಯೋಽ ಭ[14]ವ[14]ತ್ ॥
ಕೃಷ್ಣೇಶ್ವರೋ ಹಿಮಗಿರೌ ಭಕ್ತ ನಿಷ್ಠೇನ ಪೂಜಿತಃ
ಬೌದ್ಧಸ್ಯಬುದ್ಧ ಮಾಲಿ[15]ನ್ಯಾಸ್ತಯೋಃ ಪುತ್ರೋಽಭವೇದ್ಧರಿಃ[15]

---

1 ಪರಂ (ಕ) 2 ಅಸ್ತಿ (ಜ) 3 ಥುರ್ಜಪಿರ್ಜಿತಾರಾಭ್ಯಂ (ಜ) 4 ಖ್ಯಾಂ (ಜ) 5 ಶ್ಯ (ಕಗ) 6 ನ್ತಿಭ್ಯಾಂ (ಜ) 7 ದ್ಬವೋಃ ಹರಿಃ (ಜ) 8 ಗಂಚ (ಜ) 9 ನರಹರಿಸ್ತಥಾಃ (ಜ) 10 ವರಾಖ್ಯ (ಜ) 11 ಲ್ಯಾಭ್ಯಾಂ (ಜ) 12 ಲ್ಯಾದಶರಥಾಭ್ಯಾಂ (ಜ) 13 ತ್ಯಂ (ಜ) 14 ವೇ (ಜ) 15 ನ್ಯೋತಯೋ ಹೋ ಪುತ್ರೋಭವ (ಜ)

ಬೌದ್ಧಕೇಶ್ವರಲಿಂಗಂ ಚ ವಾರಾಣಸ್ಯಾಂ ಪ್ರತಿಷ್ಠಿತಮ್
ದಾಸೀ ಭಗವತೋಶ್ಚಾಪ್ಯ ಭವತ್ಕಲ್ಕ್ಯಾಖ್ಯ ಮಾಧವಃ
ಕಲ್ಕೀಶ್ವರಾಖ್ಯಲಿಂಗಂಯದ್ವಾರಾಣಸ್ಯಾಂ ಪ್ರತಿಷ್ಠಿತಂ ॥

ಪೃಥು ಜನಕ ಜನನಿ ಜಪಿಗಂ ಮತ್ಸ್ಯರೂಪಿನಿಂ
ಸುತನಾಗಿ ಹರಿ ಮತ್ಸ್ಯಕೇಶ್ವರ ಸುಲಿಂಗಮಂ
[1]ಹಿತ[1]ಭಕ್ತಿಯಿಂ ಲಂಕೆಯೊಳು ಯಜಿಸಿದಂ ಸುದರ್ಭಾವತಿ ವಿದರ್ಭರೆಂಬ
ಪಿತಮಾತೆಯರ್ಗುದಿಸಿ ಕೂರ್ಮರೂಪಿಂ ದ್ವಾರ
ವತಿಯಲ್ಲಿ ಕೂರ್ಮೇಶಲಿಂಗಮಂ ಭಜಿಸಿ[2]ದಂ
ತತ[2]ಜಯಂತಗೆ ಜಯಂತಿಗೆ ವರಾಹಾ[3]ಕೃತಿಯ[3] ಮಗನಾಗಿ ಭಕ್ತಿಯಿಂದೆ ೪೨

[4]ಕಿರಿನಾಮ[4]ಲಿಂಗಮಂ ವೃದ್ಧಗಿರಿಯಲ್ಲಿ ತಾ
ನಿರದೆ ಸ್ಥಾಪಿಸಿದ [5]ಕುಮುದನಿಗೆ ಪತಿವ್ರತೆಗೆ ತಾ
ನಿರದೆ ನರಸಿಂಹನಾಮದಲಿ[5] ಮಗನಾಗಹೋಬಳದೊಳತಿನಿಷ್ಠೆ[6]ಯಿಂದ[6]
ವರನಾರಸಿಂಹೇಶಲಿಂಗಮಂ ಭಜಿಸಿದಂ
ವರನಿಗಂ ಮಾ[7]ಲೆಗಂ[7] ಮಗನಾಗಿ ವಾಮನಂ
ಕುರುಕ್ಷೇತ್ರದಲ್ಲಿ ವಾಮೇಶಲಿಂಗವ ಪ್ರತಿಷ್ಠಿಸಿದನತಿವಿಶ್ವಾಸದಿಂ ೪೩

ಜಮದಗ್ನಿಗೆ ಕವಿರಾಮತೆಗುದಿಸಿ ನಿಜ
ದಮದೆ ಕಪಿಲೆಯಂ ತೀರದೊಳ್ ಪರಶುರಾಮೇಶ
ನಮರ್ದು ಭಜಿಸಿದನಂದು ಕೌಸಲ್ಯೆ ದಶರಥರಿ[8]ಗೊಗೆದು ರಾಮೇಶ್ವರನು[8]
ಸುಮನಸದೊಳರ್ಚಿಸಿದ ವಸುದೇವದೇವಕಿಗೆ
ಪ್ರಮುದದಿಂದುದಿಸಿ ಕೃಷ್ಣೇಶ್ವರನ ಭಜಿಸಿದಂ
ಹಿಮಗಿರಿಯೊಳಾ ಬೌದ್ಧ ಬುದ್ಧಿಮಾಲಿನಿಗೊಗೆದು ಬೌದ್ಧೇ[9]ಶಲಿಂಗವನ್ನು[9] ೪೪

ವಾರಣಾಸಿಯಂಲಿ ಸ್ಥಾಪಿಸಿ ಭಜಿಸಿದಂ ಬಳಿಕ
ನಾರಾಯಣಂ ದಾಸಿ ಭಾಗವತರಿಂಗೆ ಬಿಡ
[10]ದೇ ರಮ್ಯಸುತ[10]ನಾಗಿ ಕಲ್ಕೀಶಲಿಂಗಮಂ ಕಾಶಿ[11]ಯೊಳ್ ಪೂಜಿಸಿದನು[11]
ಕ್ರೂರವ್ಯಾಸನೆ ಶಿವಂಗಿತ್ತು ತಾಯ್ತಂದೆಗಳ್
ಆರಯ್ಯಲಾವಶಾಸ್ತ್ರದೊಳುಂಟೆ ಪೇಳೆಲವೊ
ಮಾರಾರಿಯಂ ಭಜಿಸಿ ಮುಕ್ತನಾದನೆನುತ್ತ ಲಲಿತಾಗಮಂ ಪೇಳ್ದುದು ೪೫

---

1 ನುತ (ಜ) 2 ದು । ನ್ನತ (ಜ) 3 ರೂಪಿನಿಂ (ಜ) 4 ವರಾಹೇಶ 5 ನಂದಾ ಕುಮುದ ಪತಿವ್ರತೆಯೆಂಬುರುಮಾತೆ ಪಿತರಿಂಗೆ ನರಸಿಂಹ (ಜ) 6 ಯಿಂ (ಜ) 7 ಲ್ಯಗಾ (ಜ) 8 ಗಾವಿರ್ಭವಿಸಿ ರಾಮೇಶನಂ(ಜ) 9 ಶ್ವರ ಮಹಾಲಿಂಗಮಂ(ಜ) 10 ದಾರಕದ ಮಗ (ಜ) 11 ಯೊಳಿಜಿಸಿದನಲಾ(ಜ)

ಆವನಾನೊರ್ವನಾದ್ಯಂತರಹಿತಂ ತಿಳಿಯು
ಲಾವ ಪರಮನಲಿ ಮುಕ್ತಿಯು ಕ್ಷೇತ್ರದೊಳ್
ತೀವಿರ್ಪನಾ ಸ್ಥಲಂ ಭ್ರೂಘ್ರಾಣಗಳ ನಡುವೆಯದುಪವಿತ್ರಂ ಭಾವಿಸೆ
ಓವಿ ಶ್ರುತ್ಯರ್ಥವಂ ಪೇ[1]ಳ್ವುದು ಪುರಾಣವಿ[1]
ಸಾವಧಾನದೆ ಭ್ರುಕುಟಿಯೆನಿಪ ಕಾಶಿಯೊಳು ಬಿಡ
ದಾವಗಂ ವಿಶ್ವೇ[2]ಶ್ವರಂ ಪರಂ[2]ಜ್ಯೋತಿಲಿಂಗಾಕಾರ[3]ದಿಂ[3] ನೆಲಸಿಹಂ ೪೬

ವಾಕ್ಯಮ್ ॥ ವ್ಯಾಸಸ್ತಸ್ಮಾನ್ನಾರಾಯಣಸ್ಥಿತೊ ರುದ್ರೊಧ್ಯಾನಾದ್ಬಹಿರದೃಶ್ಯತ ಇತಿ ನಿಶ್ಚೇತವ್ಯಮ್ ॥
ಸ್ಕಾಂದಸನತ್ಕುಮಾರಸಂಹಿತಾಯಾಂ ಕಾಳಿಕಾಕಾಣ್ಡೇ
ಸ್ತ್ರೀಹತ್ಯಾಕಾರಿ ನಾರಾಯಣಂ ಪ್ರತಿಕುಪಿ[4]ತೊ[4]ಭೂತ್ವಾ ಶಾಪಹಸ್ತೇನ ಭೃಗುರುವಾ[5]ಚ[5]
ಶ್ಲೋಕ ॥

ಯದ್ಯಹಂ ತ್ರ್ಯಮ್ಬಕಾನ್ನಾನ್ಯಂ ದೇವಂ ವೇದ್ಮಿಮಹೇಶ್ವರಾತ್
ತೇನಸತ್ಯೇನ ಗೋವಿನ್ದ ನರಕಾ[6]ನ್ದಶ ಚಾಪ್ಯಸಿ[6]

ಭೃಗುವಾಕ್ಯದರ್ಥಮಂ ಲಾಲಿಸೈ ನುಡಿದನಾ
ಮೃಗಪಾಣಿ ತ್ರ್ಯಂಬಕಮಹೇಶ್ವರನ ದೆಸೆಯಿಂದ
ಮಿಗಿಲಾಗಿ ಮತ್ತನ್ಯದೈವಮಂ ಎತ್ತಲಾನರಿಯೆನೆನ್ನಯ ಸತ್ಯಮಂ
ಮಿಗೆ [7]ಕೇಳು ಎಲೆ ವಿಷ್ಣು ನೀಂ[7] ಸತಿದ್ರೋಹದಿಂ
ದಗ[8]ಲದೇ[8] ಹತ್ತಾದ ನರಕಜನ್ಮಂಗಳಂ
ಸೊಗಸಿನಿಂ[9]ದೆಯ್ದಧಿಕ ದುಃಖಮಂ[9] ಭೋಗಿಸೆಂದಾರ್ದು ಶಾಪವನಿತ್ತನು ೪೭

ವಾಕ್ಯಮ್ ॥
ಕಿಂಚ ॥ ತತ್ರಸ್ಕಾನ್ದೆ ॥ ಪುನ[10]ರಾಹಭೃಗುಃ[10] ॥ ಶ್ರೂಯತಾಂ ॥
ಮತ್ಸ್ಯಕಚ್ಛಪರೂಪಸ್ತ್ವಂ ಮಾಂಸಾಸೃಕ್ಪೂಯಭುಗ್ಭವ
[11]ತ್ರ[11]ಥಾಸೂಕರರೂಪೇಣ ಜಗದ್ವಿಷ್ಠಾಂ ಕ್ಷಯಂ ಕುರು
ನರಸಿಂಹಾದಿಭಿರ್ದೋಷೈಃ ಕುತ್ಸಿತೈಸ್ತ್ವಮಸ್ಯೈಸ್ತಥಾ
ಅನೇಕದುಃಖಬಹುಳೈ[12]ರ್ಯು[12]ಕ್ತೋ ಭವ ಚಿರಂ ಹರೆ

---

1 ಳ್ದುದ್ದೈಪೌರಾಣ (ಜ) 2 ಶಲಿಂಗ (ಜ) 3 ದಿಂದೆ ರುದ್ರಂ (ಜ) 4 ತಂ (ಜ) 5 ಚಾಗ್ರಂ (ಜ) 6 ನ್ವಶಯಾಸ್ಯನೀಪ (ಜ) 7 ಯೆಲೆ ಕೇಳು ವಿಷ್ಣುವಿನಿಂ (ಜ) 8 ಣಿತಂ (ಜ) 9 ದೈದಿ ನರಕಮಂ (ಜ) 10 ಹಾಭೃಗುವಾಕ್ಯಂ (ಜ) 11 ಕ (ಕಗ) 12 ದ್ಯು (ಜ)

ಎಲೆ ಹರಿಯೆ ನೀನು [1]ಬಲ್ಮೀ[1]ನಾವೆಗಳ ರೂಪ
ನೊಲವಿನಿಂ ಧರಿಸಿ ನೀಂ [2]ಬಾಡ[2] ನೆತ್ತರ ಕೀವ
[3]ನಳಂಕದೇ ಭುಂಜಿಸುವನಾಗು ಪಾರಾಹರೂಪವನಾಂತು ಧರೆಯೊಳಿರುವ
ಮಲರಾಜಿಯಂ ನಿವಾರಿಸು ನಿವಾರಿಪ ಕಾಲ
ದಲಿ ಹೇಯವಾದೊಡಂ ಬಿಡದಾಚರಿಸು ಮತ್ತೆ[3]
ಬಲುತಾಮಸಗಳಾದ ಬಹಳದಂಃಖಿಗಳುಳ್ಳ ಕುತ್ಸಿ[4]ತಗಳೆಂದ[4]ನಿಸುವ ೪೮

ನರಸಿಂಹವಮುಖ್ಯಾವತಾರಜನ್ಮಂಗಳೊಳ್
ಪರಿಭ[5]ವದ[5] ಬಹುವಿಧದ ದೋಷಂಗಳಿಂದಲೆ ವಿ
ಹರಿಸುತ್ತ ನೀನಲ್ಲಿ ಕೂಡಿರ್ಪುದೆಂದು ಶಾಪವನಿತ್ತೊಡಾಗ ಮರಳಿ
ಪರಮ ಪಾವನರೂಪ ಭೃಗುಮುನೀಶನೆ ಶಾಪ
ಪರಿಹರವದೆಂತೆಂದು ವಂದಿಸಲ್ಕಾ ಮುನಿಪ
ಪರಶಿವನ ಭಜನೆಯಿಂ ದಶಜನ್ಮ[6]ಮೇ ಸಾಕೆನಂತ್ತಂ ವಿಶಾ[6]ಪವಿತ್ತಂ ೪೯

ವಾಕ್ಯಮ್ ॥

ನನು ॥ ಹೇವ್ಯಾಸದೀಕ್ಷಿತ ॥ ನಾರಾಯಣೇನ ॥ ದಶವಿಧಾವತಾರ ನಿವೃತ್ತಯೆ
ದಶವಿಧಲಿಂಗೇ ಪ್ರತಿಷ್ಠಿತಮ್ ॥ ತತ್ಕಥಮಿತಿ ಚೇತ್ ॥ ಬಿಂಬಾಗಮೇ ಶ್ರೂಯತಾಂ

ಗ್ರಂಥ ॥

ದ್ವಾರವತ್ಯಾಂಚ ಕೂರ್ಮೇಶಂ ಲಂಕಾಯಾಂ ಮತ್ಸ್ಯಕೇಶ್ವರಂ
ವಾರಾಹೇಶಂ ವೃದ್ಧಗಿರೌ ಕಾಶ್ಯಾಂ ಬೌದ್ಧೇಶ್ವರಂ ತಥಾ
ತೀರ್ಥೇ ಕಪಿಲಸಂಜ್ಞೇಸ್ಮಿನ್ [7]ಪರ್ಶು[7]ರಾಮೇಶ್ವರಂ ತಥಾ
[8]ಕುರು[8]ಕ್ಷೇತ್ರೇಪಿ ವಾಮೇಶಂ ವಾಮನೇನ ಪ್ರತಿಷ್ಠಿತಂ
ಕೃಷ್ಣೇಶ್ವರಂ ಹಿಮಗಿರೌ ರಾಮೇಶಂ ಸೇತುಬಂಧನೇ
ಅಹೋಬಲೆ ನೃಸಿಂಹೇಶಂ ಕಾಶ್ಯಾಂ ಚ ಕಲಿಕೇಶ್ವರಂ
ತತ್ರತತ್ರಮಹಾದೇವಂ ಪ್ರತಿಷ್ಠಾಪ್ಯ ಹರಿಃ ಸ್ವಯಂ
ಪೂಜಯಾಮಾಸಸದ್ಭಕ್ತ್ಯಾಸ್ವಾವತಾರ ನಿವೃತ್ತಯೆಂ

---

1 ದುರ್ವಿರ್ಮಾ (ಜ) 2 ಪಿಸಿತ (ಜ) 3 ಮಳುಕಿಹಿಯೊ ಪಾಯಮಿಲ್ಲದವನೆ ಭುಂಜಿಸುವಾತನಾಗು ಹಾಂಗೆ ಕವಿವರಹರೂಪಿನಿಂ ಜಗದ ಮನಂಜರು ಬಿಟ್ಟು ಮಲಮೂತ್ರಮಂ ತಿಂದು ನಾಶಮಂ ಮಾಡು ನೀಂ (ಜ) 4 ತಂಗಳುಮೆ (ಜ) 5 ವಿಸಿ (ಜ) 6 ಮುಕ್ತನೆಂದಾಗ ನಿಶ್ಶಾ (ಜ) 7 ಪರಶು (ಜ) 8 ಮಹಾ (ಜ)

ಎಲೆ ವ್ಯಾಸದೀಕ್ಷಿತನೆ ಕೇಳ್ಬೆ ಮಹಾವಿಷ್ಣು
ನೆಲೆಯಾದ ದಶಜನ್ಮಶಾಪ[1]ದಳಿವಿಂಗೆ[1] ತಾಂ
ವೊಲಿದು ದಶವಿಧಲಿಂಗವಂ ಪ್ರತಿಷ್ಠಿಸಿದನೆಂದುಸುರ್ವುದಾ ಬಿಂಬಾಗಮಂ
ನೆಲವಿನಿಂ ದ್ವಾರಕಾಪುರಿಯಲ್ಲಿ ವಿಷ್ಣು ತಾ
ನೊಲಿದು ಕೂರ್ಮೇಶಲಿಂಗವ ಪ್ರತಿಷ್ಠಿಸಿದ ನಿ
ರ್ಮಳಮತ್ಸ್ಯಕೇಶ್ವರನೆನಿಪ್ಪ ಲಿಂಗವ ಲಂಕೆಯೊಳಗೆ ಸ್ಥಾಪಿಸಿ ಭಜಿಸಿದಂ ೫೦

ವೃದ್ಧಗಿರಿಯಲ್ಲಿ ವಾರಾಹೇಶಲಿಂಗವಂ
ಬೌದ್ಧೇಶಲಿಂಗವಂ ಕಾಶಿಯೊಳ್ ನಿಲಿಸಿದಂ
ಶುದ್ಧವಹ ಕಪಿಲೆಯೆಂಬಾ ತೀರ್ಥದಲ್ಲಿ ತಾಂ ಪರಶುರಾಮೇಶನೆಂಬ
ಉದ್ಧತದ ಲಿಂಗವಂ [2]ಕುರು[2]ಕ್ಷೇತ್ರದಲ್ಲಿ [3]ಸಂ
ಸಿದ್ಧ[3]ವಾಮೇಶಲಿಂಗವನಂ ಹರಿ ಬಿಡದೆಯಭಿ
ವೃದ್ಧಿಯಿಂ ಹಿಮಗಿರಿಯೊಳಾಕೃಷ್ಣ ಕೃಷ್ಣೇಶಲಿಂಗವಂ ಪೂಜಿಸಿದನು ೫೧

ಸೇತುಬಂಧನದೊಳಾ ರಾಮೇಶಲಿಂಗವಂ
ಪ್ರೀತಿಯಿಂ ರಾಮಚಂದ್ರ[4]ವಂನೆ[4]ಜಿಸಿ ದೋಷಗತ
ಭೀತಿಯಿಂ ನೀಗಿದಂ [5]ಕಲ್ಕೀಶನಂ ಕಾಶಿಯಲ್ಲಿ ಕಲ್ಕಿಯೆ ಭಜಿಸಿದಂ[5]
ಆತೆರದಹೋಬಲದೊಳಾ ನೃಸಿಂಹೇಶ್ವರನ
ಓತು ನಾರಾಯಣಂ ಭಜಿಸಿ ಸದ್ಭಕ್ತಿಯಿಂ
ಖ್ಯಾತವಹ [6]ದಶವಿಧಾವತರಣ ಕಿಲ್ಬಿಷಗಳಂ ಮೇಲಾಗಿ[6] ಕಳೆದನೆಂದು ೫೨

ವಾಕ್ಯಮ್ ॥ ಕಿಂಚ ನನು ॥ ಲೈಂಗೇ ।

ಶ್ಲೋಕ ॥

ಪದ್ಮಪುಷ್ಪಸಹಸ್ರೈಶ್ಚ ಪಾದಾವಭ್ಯರ್ಚ್ಯಭಕ್ತಿತಃ
ಪುರತಃ ಪರಮೇಶಸ್ಯ ಸ್ತುತವಾನ್ಮಧುಸೂದನಃ
ಏಕಂ ನ್ಯೂನಂ ಸಹಸ್ರಾ[7]ಣಾಂ[7] ಪುಷ್ಕರಾಣಾನ್ತುಪುಷ್ಕರಂ
ನಾರಾಯಣಃ ಸ್ವಕಂ ನೇತ್ರಮೇಕಮುದ್ಧ[8]ತ್ಯ[8]ವೈ ತತಃ

---

1 ಪರಿಹರಕೆ (ಜ) 2 ಮಹಾ (ಜ) 3 ಪಿ । ನದ್ದ (ಜ) 4 ನುಯ (ಕ) 5 ಯೆಂಬುದೀ ಲೋಕ ಪ್ರಸಿದ್ಧಮಿದು ನಿಶ್ಚಯಿವಲಾ (ಜ) 6 ಮತ್ಸ್ಯಾದ್ಯವತಾರಂಗಳ ಕಿಲ್ಬಿಷಗಳ (ಜ) 7 ಭ್ಯಾಂ (ಜ) 8 ಶ್ಯ (ಜ)

ತಥಾ॥ ಆದಿತ್ಯಪುರಾಣೆ ॥

ಶ್ಲೋಕ ॥

ಏವಂ ನಾಮ್ನಾಂ ಸಹಸ್ರೇ[1]ಣತುಷ್ಟ್ಯಾ[1]ವ ಗಿರಿಜಾಪತಿಂ
ಸಂಪೂ[2]ಜ್ಯ[2]ಪರ[3]ಯಾ[3] ಭಕ್ತ್ಯಾ ಪುಂಡರೀಕೇಣ ಚಕ್ರಕಂ

ತತ್ರೈವ ಜಿಜ್ಞಾಸಾರ್ಥ ಹರೇರ್ಭಕ್ತ್ಯೈಃ ಕಮಲೇಷುಶಿವಃ ಸ್ವಯಂ
ತತ್ರೈವಂ ಗೋಪಯಾಮಾಸ ಕಮಲಂ ಮುನಿಪುಂಗವ

ತತ್ರೈವ ಹೃತೆಪುಷ್ಪೇ ತದಾ ವಿಷ್ಣುರ್ಚಿನ್ತ್ಯಯನ್ಕಿವಿಂದಂತ್ವಿತಿ
ಜ್ಞಾತ್ವಾತ್ಮನೇತ್ರಾವುದ್ಧೃತ್ಯ ಪೂಜಯಾಮಾಸ ಶಂಕರಂ
ತದಾ ಪ್ರಭೃತಿತಂ ಪ್ರಾಹುಃ ಪದ್ಮಾಕ್ಷಮಿತಿ ಸೂ[4]ಕ್ತ್ಯ[4]ತಾ
ದತ್ತವಾನ್ನಯನಂ ಚಕ್ರಂ ವಿಷ್ಣುವೇ ನೀಲಲೋಹಿತಃ

ಮಧುಸೂದನಂ ಹರನ ಪಾದಗಳ ಭಕ್ತಿಯಿಂ
ಪದೆದು ತಾವರೆಯರಲ ಸಾಸಿರಗಳಿಂದಭವ
ಮೊದಲಾದ ಸಾಹಸ್ರನಾಮಂಗಳಿಂದ ಸ್ತೋತ್ರವ ಮಾಡಿ ಭಜಿಸುತಿರಲು
ಮದನಾರಿ ಹರಿಯ ಭಕ್ತಿಯ ನೋಡಲೋಸುಗಂ
ಒದವಿರ್ದ ಕಮಲಂಗಳೊಳಗೊಂದು ಕಮಲವಂ
ಪದಪಿನಿಂ [5]ಕಾಣದಂದದಿ[5] ಮಾಡೆ ಕಂಡು ಹರಿ ಹರಹರ ಎನುತ್ತ ನಲಿದಂ ೫೩

ತನ್ನ ಭಕ್ತ್ಯುದ್ರೇಕದಿಂದಾತ್ಮನೇತ್ರವಂ
ನನ್ನಿಯಿಂ ಕಿಳ್ತೊಂದನರ್ಪಿಸಲ್ಕಂದಿನಿಂ
ದುನ್ನತದ ಕಮಲಾ[6]ಕ್ಷನಾಮಧೇಯವು[6] ನಿನಗೆ ಸಲ್ವುದೆಂದಿತ್ತು ಮುದದಿಂ
ಚನ್ನಾಗಿ ಕೇಳಿರೈ ಮುನಿಗಳಿರ ಪರಶಿವಂ
[7]ಪ[7]ನ್ನತಿಯೊಳಾ ಹರಿಗೆ ನಯನಂ ಸಂದರ್ಶನವ
ಮನ್ನಿಸುತ ಕೊಟ್ಟು ವೈಕುಂಠಕ್ಕೆ ಕಳುಹಿ ಹರನಂತರ್ಧಿಯಂ ಪೊಂದಿದಂ ೫೪

1 ಣಾಂತುಷಾ (ಪ) 2 ಜ್ಯಂ (ಜ) 3 ಮಂ (ಜ) 4 ವ್ರ (ಜ) 5 ಗೋಪನೀಯಂ (ಜ) 6 ಕ್ಷಾಭಿಧಾನವು (ಜ) 7 ಸೂ (ಕಗ)

ವಾಕ್ಯಂ ॥ ಕಿಂಚ ನನು ॥ ಹೇ ವ್ಯಾಸ ॥ ಕಾಳಿಕಾ[1]ಖ[1]ಣ್ಡೆ ॥
ಈಶ್ವರ ವಾಕ್ಯಂ ಶೃಣು । ತಥಾ ಮಹಾನಾಟಕೆ [2]ಶ್ರೂಯಂತಾಂ[2] ॥

ಗ್ರಂಥ ॥

ಯಂ[3]ಸ್ಯೋರಸಿ[3]ಪರಾಮಾಲಾ ಗ್ರೀವಾ ಹಸ್ತಕಟಿಸ್ತಥಾ
ನಾರಾಯಣಸ್ಯ ತನವೊ ವಿನಷ್ಟಾಸ್ತು ಯುಗೇ ಯುಗೇ ।

॥ ಮಹಾನಾಟಕೆ ॥ ಆರ್ಯಾ

ಕಲ್ಪಾನ್ತೇಶವಿಂತತ್ರಿವಿಕ್ರಮ ಮಹಾಕಂಕಾಳಬದ್ಧ ಸ್ಫುರ
ಚ್ಛೇಷಸ್ಸೂತ್ರಮದೋನ್ನೃಸಿಂಹನಖರಪ್ರೋತಾದಿ ಕೋಲಾವಿಂಷಂ ॥
ವಿಶ್ವೈಕಾರ್ಣವ ಸಂವಿಹಾರಮುಂದಿತೌ ಯೌ ಮತ್ಸ್ಯಕೂರ್ಮಾವುಭೌ
ಕರ್ಷಂ ಧೀವರತಾಂಗತಃಸ್ಯತು ಸತಾಂ ಮೋಹಂ ಮಹಾಭೈರವಃ ॥

ಎಲೆ ವ್ಯಾಸ ಕೇಳ್ ಹರನ ಕೊರಲು ಕೈಕಟಿಯಲ್ಲಿ
ನೆಲಸಿರ್ದ[4]ವಾರವೆನೆ[4] ಕೆಲವು [5]ಶಿರ[5]ಮಾಲೆಗಳ್
ಸಲೆ ಯುಗಯುಗಾಂತರದೊಳಳಿದ ನಾರಾಯಣನ ತನುಗಳೈ ಮತ್ತೆಂತೆನೆ
ಪ್ರಳಯಕಾಲದೊಳು ಹರಿಸಿದ ತ್ರಿವಿಕ್ರಮನ ಬೆ
ನ್ನೆಲುವಿನೊಳ್ ಕಟ್ಟಿದ ಮಹಾಶೇಷಸೂತ್ರ[6]ದಲಿ[6]
ಬಲವಂತ ನರಸಿಂಹನಂ ಕೊಂದು ಸಮ್ಮಮಂ ಸುಗಿದವನ ಶಿರವನರಿದು ೫೫

ಕರೆದುಗುರುಕೊಂಕಿ[7]ಯುಲಿ ಚುಚ್ಚಿ ವಾರಾಹಮಹ[7]
ಪಿರಿದಾದ ಮಾಂಸ[8]ಖಂಡವ ತಗಿ[8]ಲಿಸುತ್ತ ಹರ
ಭರದಿಂದ ವಿಶ್ವವೊಂದಾದ ಪ್ರಳಯಾಬ್ಧಿಯೊಳ್ ಸಂಚರಿಸಲಲ್ಲುದಿಸಿದ
ಹರಿಯ ರೂಪಾದಾವೆ ಮೀನ್ಗಳೆರಡಂ ಸೆಳೆವ
ವರ ಧೀವರತ್ವವಾಂತಾ ಮಹಾಭೈರವಂ
[9]ಪುರುಷವರರ[9]ಜ್ಞಾನಮಂ ನಿವಾರಿಸಲೆಂಬ ಹನು[10]ಮದ್ವಚನವನರಿಯಂ[10] ೫೬

---

1 ಖಾ (ಜ) 2 ಶ್ರುತಂ (ಜ) 3 ಶ್ವಮೋರ (ಜ) 4 ಆವಲುಂ (ಜ) 5 ಈ (ಜ) 6 ಕತಿ (ಜ) 7 ಯಂ ಕಟ್ಟಾದಿವರಾಹನುರೆ (ಜ) 8 ದೆರೆಯಂತನಿ (ಜ) 9 ಚಿರಪುರುಷರ (ಜ) 10 ಮಾನ್ವಚನ ಮರಿಯೊ (ಜ)

ವಾಕ್ಯಮ್ ॥
ಕಿಂಚ ॥ ಋಗ್ವೇದೆ ॥ ಹರಿಃ ಪವಿತ್ರೆ ವ್ಯ[1]ಥಃ[1] ॥
ಅಸ್ಮಿನ್ನರ್ಥೇ ಶೈವಪುರಾಣೇ ॥ ವಾಯವ್ಯ ಸಂಹಿತಾಯಾಂ ॥

ಶ್ಲೋಕ ॥
ಅಥೈಕೇನೇಷುಣಾ ಶಾರ್ಙ್ಗಂ ದ್ವಾಭ್ಯಾಂ ಪಕ್ಷೌಗರುತ್ಮತಃ
ನಿಮೇಷಾದೇವ ಚಿಚ್ಛೇದ ತದದ್ಭುತಮಿವಾಭವತ್
ತಂ ದೃಷ್ಟ್ವಾ ಚಕ್ರಮುದ್ಯಮ್ಯಪುರತಃ ಸಮುಪಸ್ಥಿತಃ
ಸ್ಮಯನ್ನಿವಗಣೇಶಾನೋ ವ್ಯಷ್ಟಂ ಭಯದಯತ್ನತಃ

॥ ಅಸ್ಮಿನ್ನರ್ಥೇ ಕಾಳಿಕಾಖಿಣ್ಡೆ ॥

ಶಾರ್ಙ್ಗಕೋಟಿಪ್ರಸಂಗಾ[2]ಚ್ಚ[2] ಕೇಶವಸ್ಯ ಮಹಾತ್ಮನಃ
[3]ಶಿರಶ್ಚಿಚ್ಛೇ[3]ದಯಾಮಾಸ ವೀರಭದ್ರೋ ಮಹಾಬಲಃ

॥ ಅಸ್ಮಿನ್ನರ್ಥೇ ಲೈಙ್ಗೇ ॥

ತ್ರಿಭಿಶ್ಚ ಘರ್ಷಿತಂ ಶಾರ್ಙ್ಗಂ ದ್ವಿಧಾಭೂತಂ ಪ್ರಭೋಸ್ತದಾ
ಶಾರ್ಙ್ಗಕೋಟಿಪ್ರಸಙ್ಗಾಚ್ಚ ಚಿಚ್ಛೇದ ಚ ಶಿರಃಪ್ರಭುಃ
ತತ್ತುತ್ರುಘ್ನಮಿತಿ ಪಪಾತ ಶಿರಸ್ತಸ್ಯ ಧರಾತಳೇ
ವಾಯುನಾ ಪ್ರೇಷಿತಂ ಚೈವ ಘ್ರಾಣಚೇನ ಪಿನಾಕಿನಃ
ಪ್ರವಿವೇಶ ಕ್ಷಣಾದೇವ ತದಾಹ್ಯಾಹವನೀಯತೇ

ವಾಕ್ಯಮ್ ॥

ಅಸ್ಮಿನ್ನರ್ಥೇ ಶ್ರುತಿರಪ್ಯಸ್ತಿ ಯಜುರ್ವೇದೇ ತಥಾ ಶುಕ್ಲಯಜಂಷಿ ತಥಾ
ವಾಜಸನೇಯೇ ॥ ವಿಷ್ಣೋಶ್ಶಿರಃ ಪ್ರತಿಚ್ಛಿಂದ್ಯ ತತುಘ್ನಮಿತಿ ಪಪಾತ ॥

ಹರಿ ಯಜ್ಞದೊಳ್ ನೊಂದನೆಂದು ಋಗ್ವೇದ ಶ್ರುತಿ
ಒರೆವುದದರರ್ಥವನೆ ಪೌರಾಣಮುಲಿವವೈ
ಶರವೊಂದರಿಂ ಹರಿಯ ಸಿಂಗಾಡಿಯಂ ಗರುಡನಾ ರೆಕ್ಕೆಗಳ ನಿಮಿಷಕೆ
ಎರಡಂಬಿನಿಂ ಕಡಿಯಲಾ ಸಮರಮದ್ಭುತೋ
ತ್ತರಮಾಗಲದ ಕಾಣುತಂ ಚಕ್ರಮಾಂತು ಮುಂ
ದಿರುವ ಹರಿಯಂ ಕಂಡು ನಗುತ ವೀರೇಶ್ವರಂ ಚಕ್ರಮಂ ಸ್ತಂಭಿಸಿದನು ೫೭

1 ರ್ಥ (ಚ) 2 ಶ್ಚ (ಜ) 3 ಸವಿರದ್ಧೇ (ಜ)

ಬಳಿಕ [1]ಸದ್ಬಲ[1]ನಾದ ವೀರಭದ್ರೇಶ್ವರಂ
ಸಲೆ ಮಹಾತ್ಮನಹ ಕೇಶವನ ಪಂದಲೆಯಂನ
ತ್ಯಲಘು ಬಿಲ್ಗೊಪ್ಪಿನಾ ಕೂಟದಿಂ ಖಂಡಿಸಿದನಾಕ್ಷಣಂ ತುಘ್ನಮೆನುತ
[2]ಚಲನದಿಂದಾ[2] ಹರಿಯ ತಲೆ ಧರಾತಳದಲ್ಲಿ
ಸಲೆ ಬಿದ್ದು ವೀರೇಶನಾ ಘ್ರಾಣವಾಯುವೇ
ಬಲಿದು ನೋಂಕಲ್ ನಿಮಿಷಕಾಗಲಾಹವನೀಯವಹ್ನಿಯೊಳ್ [3]ಬಿದ್ದುದಾಯ್ತು[3] ೫೮

ಶ್ರುತಿಯೊಳಗೆ ವಿಷ್ಣೋಶ್ಶಿರಃ ಪ್ರತಿಚ್ಛಿಂದ್ಯಯೆಂ
ದತಿತತುಘ್ನಮಿ[4]ರೀಚಪಾತಯೆ[4]ನುತಂ [5]ಪೇಳ್ದ[5]
ಶ್ರುತಿಯರ್ಥಮೆಂತೆನಲ್ಕಾ ವಿಷ್ಣುವಿನ ಶಿರಂ ಕತ್ತರಿಸೆ ಭುವಿಯ ಮೇಲೆ
[6]ತತುಘ್ನಮಿಂತಿಯೆಂದೊಡೆದು[6] ದೊಪ್ಪೆಂದು ಬಿಳ್ದುದೈ
ಮತಿವಂತ ವೇದಪೌರಾಣಮಿಂತುಸಿರುತಿರೆ
ಖತಿಯವಾದ[7]ವ[7]ದೇಕೆ ನಿನ್ನ ದೈವದ ಭಂಗಮಿತವಲ್ಲ ಮತ್ತೊರೆವೆನು ೫೯

ವಾಕ್ಯಮ್ ॥
ಅಸ್ಮಿನ್ನರ್ಥೇ [8]ಆದಿತ್ಯಪುರಾಣೇ ॥ ಮಾನವೀಯ[8] ಸಂಹಿತಾಯಾಂ ॥
॥ [9]ವಿಷ್ಣುಪ್ರಣೀತ ಶಿವಸಹಸ್ರನಾಮಸ್ತೋತ್ರೇ ಶ್ರೂಯತಾಂ ॥
ಶ್ಲೋಕ ॥
ಅಂಧಕಾರಿರ್ಮಖದ್ವೇಷೀ ವಿಷ್ಣುಕಂಧರ ಪಾತನಃ[9]
ವಾಕ್ಯಂ ॥
ತಥಾ ಯಜುರ್ವೇದೇ ॥ ಯಜ್ಞಸ್ಯ ಶಿರಶ್ಛೇತ್ತಾ ॥ ವಾ[10]ಯುವೀಯ[10]ಸಂಹಿತಾಯಾಂ ॥
ಶ್ಲೋಕ ॥
ಶರಣಾರ್ಥೇಂದುವಕ್ತ್ರೇಣ ಸವಿರೋಧ್ವರ ಪೂರುಷಂ
ಮೃಗರೂಪೇಣ ಧಾವನ್ತಂ ವಿಶಿರಸ್ಕರಿ ತಥಾಕರೋತ್

ಆದಿತ್ಯಪೌರಾಣ ಮಾನವೀಯದೊಳು ಮ
ತ್ತಾದಿನಾರಾಯಣಂ ಪೇಳ್ದ ಶಿವಸಾಹಸ್ರ
ದಾದರದ ನಾಮಂಗಳೊಳಗಂಧಕಾರಿಯು ಮಖದ್ವೇಷಿಯೆಂದೆನುತ್ತಾ
ಮೋದದಿಂ ವಿಷ್ಣುಕಂಧರಪಾತನಯೆನುತ್ತ
ಲೋದುವದು ಶ್ರುತಿಯರ್ಥ[11]ಯಜ್ಞಕ್ಕೆ[11]ಯಜ್ಞಾತ್ಮ
ನಾದ ಹರಿಯಾ ಶಿರಶ್ಛೇತ್ತಾ ಎನಲ್ ಶಿರವನರಿದನೆಂದುಲಿವುತಿಹುದು ೬೦

1 ಮಹಾಬಲ (ಜ) 2 ಉಲಿಯುವುದೈ ಶ್ರುತಿ (ಜ) 3 ಪ್ರವೇಶವಾಯ್ತು (ಜ) 4 ತಿಪವಾಮೆ (ಜ) 5 ನಾಡೆ (ಜ) 6 ವಿತತ ತತುಘ್ನಮೆನೆ (ಜ) 7 ವಿ (ಜ) 8 ವಾಯುವೀಯ (ಜ) 9 ಶರಣಾರ್ಥೇಂದು ವಕ್ತ್ರೇಣಸವಿರೋಧರ ಪೂರುಷಂ ಮೃಗರೂಪೇಣ ಧಾವಂತಂ ವಿಶಿರತ್ ಕಂತದಾಕರೋತ್ (ಜ) 10 ಯುವ್ಯ (ಕ) 11 ಯಾಜ್ಞಸ್ಯ (ಜ)

ಮತ್ತೆ ವಾ[1]ಯಾವ್ಯ[1] ಸಂಹಿತೆಯೊಳುಸುರ್ವುದು ಭಯದೆ
ಬಿತ್ತರದ ಯಜ್ಞಪುರುಷನುಮಾದ ಹರಿಯು ತಾ
ನುತ್ತಮಂದ ಮೃಗ[2]ರೂಪದಿಂದೋ[2]ಡುತಿರೆ ಕಾಣುತರ್ಧೇಂದುಶರವ [3]ತೊಟ್ಟು[3]
ಕೃತ್ತಿಧರನವತಾರ ವೀರಭದ್ರೇಶ್ವರಂ
ಚಿತ್ತಜನ ತಂದೆಯಾ ಶಿರವ ಹೊಗುವಂತೆ ತಾಂ
ಸತ್ಯವಾಗೆಸಗಿದನೆನುತ್ತುಲಿವುದೈ ವ್ಯಾಸದೀಕ್ಷಿತನೆ ಕೇಳು ಬಳಿಕ ೬೧

ವಾಕ್ಯಮ್॥ ಕಿಞ್ಚ ನನು॥

ಅಥರ್ವಣವೇದೇ [4]ಶ್ರೂಯತಾಂ[4] ॥
ತ್ರಿಯಮ್ಬಕೋ ನಾಮ ರುದ್ರೋ ನಾರಾಯಣ ಶಿರಶ್ಚಿಞ್ಛಿನಾ ಚ ಕಥಃ
॥ಅಸ್ಮಿನ್ನರ್ಥೇ॥ ಸ್ಕಾಂದಪುರಾಣೇ॥

ಶ್ಲೋಕ॥

ತ್ರಿಯಮ್ಬಕಾಖ್ಯರುದ್ರಸ್ತು ಬಕಪಕ್ಷಿ ಸ್ವರೂಪಭೃತ್
ಮತ್ಸ್ಯಕೂರ್ಮಾವ[5]ತಾರ[5]ಸ್ಯ ಶಿರಶ್ಚಿಚ್ಛೇದ ಚಂಚುನಾ
ಅಸ್ಮಿನ್ನರ್ಥೇ ಸನತ್ಕುಮಾರಸಂಹಿತಾಯಾಂ॥ ಕಾಳಿಕಾಖಣ್ಡೇ॥

ವಾಕ್ಯಮ್॥ ಅಸ್ಥಿಭೂಷಣಾಧ್ಯಾಯೇ ॥

ಶ್ಲೋಕ॥

ಕೃತೇಽಪಿ ಮಂಥನೇ ಕೂರ್ಮಾಃ ಕ್ಷೋಭಯಾ ಮಾಸಸಾಗರಾನ್
ತೇಷು ಚ ಕ್ಷುಭ್ಯಮಾಣೇಷು ಕ್ಷುಭಿತಾಃ ಪ್ರಾಣಿನೋಽ ಖಿಲಾಃ
ತತಃ ಪ್ರಾಣ್ಯುಪಕಾರಾಯ ಕೂರ್ಮಂ ಸಂಹೃತ್ಯ ಗರ್ವಿತಂ
ತದಂಗಂ ಭೂಷಣತ್ವೇನ ಧಾರಯಾಮಾಸ ಶಂಕರಃ

ಎಲೆಯಥರ್ವಣವುಲಿವುದೈ ತ್ರಿಯಂಬಕನೆನ್ನು
ವಲಘು ಬಕರುದ್ರ ನಾರಾಯಣನ ಮಸ್ತಕವ
ನಲೆದು ಚಂಚುವಿನಿಂದೆ ಕಡಿದನದರರ್ಥಮಂ ಸ್ಕಂದ[6]ನಪು[6]ರಾಣಮುಸುರ್ಗುಂ
ಛಲದೆ ತ್ರ್ಯಂಬಕನೆಂಬ ಪೆಸರುಳ್ಳ ರುದ್ರ ತಾಂ
ನೆಲೆಯಾ[7]ದ[7] ಬಕಪಕ್ಷಿರೂಪಮಂ ತಳೆ[8]ದಾಗ[8]
ಬಲಮತ್ಸ್ಯಕೂರ್ಮಾವತಾರ ಹರಿಶಿರವ ಪಲ್ಲಿಂದೆ ಕತ್ತರಿಸಿದನಲ ೬೨

1 ಯವೀಯ (ಜ) 2 ಮಾಗೋ (ಜ) 3 ಮಂತೊಡುತ್ತ (ಜ) 4 ಶ್ರುತಾಯಾಂ (ಕಗ) 5 ರಾಹ (ಜ) 6 ಪೌ (ಜ) 7 ದ (ಕಜ) 8 ದಧಿಕ (ಜ)

ಕ್ಷೀರಸಾಗರವ ಮಥಿಸುವ ಕಾಲದೊಳ್ ವಿಷ್ಣು
ಕ್ರೂರಕಚ್ಛಪರೂಪಿನಿಂದೇಳುಕಡಲುಗಳ
ನೀರನೆಲ್ಲವ [1]ಕಲಕಿ ಕದಡುತಿರಲಾತನಿಂ ಸಕಲಜೀವರುಗಳೆಲ್ಲ
ವೈರೂಪ್ಯಮುಂ ತಾಳಿ ಬಾಳ್ಮೆಯುಂ ಕಾಣದೇ
ಪಾರಾಗುತಿರ್ಲದು ಪೆರ್ದೆರೆಯು ಪೊಯ್ಲಿನಿಂ
ದಾರಯ್ಯಲಾಳುತಿಹ ಜೀವರಂ[1] ರಕ್ಷಿಸಲ್ಕೋಸುಗಂ ಗರ್ವಿಸಿರ್ದ ೬೩

ಪಿರಿದಾದ ಕೂರ್ಮನಂ ಸಂಹರಿಸಿಯಂದರ [2]ತನು
ವ[2]ರದಸ್ಥಿಯುಂ ಧರಿಸಬೇಹುದೆಂದಾಗ ಹರಿ
ಯಿರದೆ ಸ್ತುತಿಸಲ್ ಶಂಕರಂ ಪದಕದಂತೆಯೆರ್ದೆಯಲ್ಲಿ ಧರಿಸಿದುದನರಿಯ
ಒರೆವೆನೈ ಮುಂದಧಿಕ ವಾ[3]ರಾಹರೂಪದಿಂ[3]
ಗ[4]ರುವಿಸುತ್ತಂ[4] ತನ್ನ ತಾನರಿಯದಿರುವ ಸೂ
ಕರನ ಪರಿಯೆಂತೆನಲ್ಕಿಲ್ಲಿಯೇ ಪೇಳ್ವುದೈ ಮುಂಗಡೆಯೊಳದನು ಕೇಳು[5] ೬೪

ವಾಕ್ಯಮ್॥ ತತ್ರೈವ॥ ಶ್ರುಣು॥

ಶ್ಲೋಕ ॥

ಪುರಾಽಭವನ್ಮಹಾಕಾಯೋ ಹಿರಣ್ಯಾಕ್ಷೋ ಮಹಾಸುರಃ
ಹಿರಣ್ಯಕಶಿಪೋರ್ಭ್ರಾತಾ ಚಕ್ರೇ ತ್ರೈಲೋಕ್ಯಮರ್ದನಂ॥
ತತೋ ಭೀತಾಃ ಸುರಾಸ್ಸರ್ವೇ ವಿಷ್ಣುಂ ಶರಣಮಾಶ್ರಯನ್
ಪೃಥಿವ್ಯುದ್ಧರಣಾರ್ಥಾಯ ವಾರಾಹಂ ರೂಪಮಾಸ್ಥಿತಃ॥
ಸ ನಿಹತ್ಯ ಹಿರಣ್ಯಾಕ್ಷಂ ತೇನ ಗರ್ವೇಣ ದುರ್ಮದಃ
ದಂಷ್ಟ್ರಯಾಪರ್ವತೇನ್ದ್ರಾಣಾಂ ಚಲನಂ ಕೃತವಾನ್ಮಹತ್॥
[6]ದ್ವೀ[6]ಪಾನಾಂಚೈವ ಸಪ್ತಾನಾಮರ್ಣವಾನಾಂ ಚ ಭೇದನಂ
ತತೋ ಜ್ಞಾತ್ವಾ ಮಹಾದೇವಃ ಪೃಥವೀಭೇದನಂ ಕೃತಂ॥
ಉತ್ಪಾಟ್ಯದಂಷ್ಟ್ರಾಂತ್ರ ಸ್ಯೈಕಾಂದಧಾರೋರಸಿಭೂಷಣಂ
ಕಪರ್ದಿಗತ ಚಂದ್ರಾಂಶಂ ಧ್ರಿಯಮಾಣಮಿವಾಪ[7]ರಂ[7]
ತತಸ್ತುಷ್ಟಾವ ತಂ ಪೋತ್ರಿ ಹ್ಯನ್ಯಶೃಂಗಸ್ಯ ಸಿದ್ಧಯೇ
ಏಕಶೃಂಗವರಾಹೋ ಭೂತ್ತಥಾಪ್ರಭೃತಿಮಾಧವಃ॥

---

1 ಷೋಭಯಾಮಾಸಮೆನೆ ಕಲಕಿದನು ಕ್ಷುಭ್ಯಮಾಣೇಷುಯೆನಲು। ಭೂರಿಕಲಕಲ್ಪಡುತ್ತಿರಲ ಖಿಳಪ್ರಾಣಿಗಳ್।ತಾರತಮ್ಯದೊಳು ಕ್ಷುಭಿತಾಯೆನಲ್ ಖ್ಯಾತನೆಯೊಳಾರಯ್ಯಲಾಳುತಿಹ ಜೀವಿಗಳ (ಜ) 2 ಕಳೆ।ಬ (ಜ) 3 ರಹಾವತಾರದಿಂ (ಜ) 4 ರ್ವಿಸುತೆ (ಜ) 5 ಯದೆಂತೆನಲುಮತಿಭಯದಿಂದ ಮುನ್ನು ಸುರ್ದ ಪೌರಾಣಮಂ ಲಾಲಿಸು (ಜ) 6 ದ್ವಿ (ಜ) 7 ರ (ಕಗ)

ಪೂರ್ವ[1]ದಿ[1] ಮಹಾಕಾಯನಾದಾ ಹಿರಣ್ಯಾಕ್ಷ
ನೊರ್ವಾಸುರೇಶಂ ಹಿರಣ್ಯಕಶಿಪುವಿಗನುಜ
ಗೀರ್ವಾಣಮುಖ್ಯಲೋಕಂಗಳಂ ಮರ್ದಿಸಲ್ಕಾ ಭಯದೆ ಸರ್ವಸುರರು
ಪಾರ್ವತೀಶನ ಭಕ್ತ ನಾರಾಯಣನ[ಂ] ಕುರಿ
ತುರ್ವಿನಿಂ ಶರಣಂಬೊಗಲ್ ಕೇಳಿ ಹರಿ ಮುದದಿ
ಉರ್ವಿಯಂ ಉದ್ಧರಿಸಲೆಂದಾಗ ಭೀಕರದ ಕಿಟಿಯ ರೂಪಂ ತಳೆವುತ ೬೫

ದನುಜರೊಳಗರಸನಿಸುವಾ ಹಿರಣ್ಯಾಕ್ಷನಂ
ಘನಪರಾಕ್ರಮದಿಂದ ಕೊಲುತಲಾ ಗರ್ವದಿಂ
ವನಮಾಲಿ ಮದವನಾಂತಾ ದಾಡೆಯಿಂದ ಶೈಲೇಂದ್ರಗಳ ಕಿಳ್ತಿಡುತ್ತ
ಹನನವಂಗೈವುತಬ್ಧಿಯನೇಳುದ್ವೀಪವಂ
ಮನಕೆ ಬಂದಂತಾಗ ಧರೆಯ ಸೀಳ್ದು ದ[2]ನರಿದು
ಮನದಿ[2] ಸರ್ವೇಶನಾ ದಂಷ್ಟ್ರವಂ ಕಿಳ್ತೊಂ[3]ದನಾ[3]ನಂದದಿಂ ಮೆರೆವುತ ೬೬

ವರಮುಕುಟದಲ್ಲಿರ್ದ ಶಶಿಯಖಂಡಕ್ಕೆ ಮ
ತ್ತೆರಡನೆಯ ಚಂದ್ರನಂ ತಾಳ್ದನಕ್ಕೈಯೆಂಬ
ಪರಿಯಿಂದೆ ಉರದಲ್ಲಿಯಾಭರಣವಾಗಿ ಧರಿಸಿದನು ತದನಂತರದೊಳು
[4]ಕಿರಿಪನಾಗ[4]ನ್ಯಶೃಂಗವನಂ[5]ರು[5]ಹಲೋಸಂಗಂ
ಹರನ ಸ್ತೋತ್ರವನು ಹರಿ ಮಾಡಲಂದಿಂದಲಾ
ಹರಿಯೇಕಶೃಂಗವುಳ್ಳಾದಿವಾರಾಹನಾದಂದು ಪುರಾಣಪ್ರಸಿದ್ಧಂ ೬೭

[6]ಕಿಂಚ[6]ನನು॥ ಶ್ರುಣು॥ ಪೈಪ್ಪಲಾದೋಪನಿಷದಿ॥
ಮಹಾಬಲಂ ನೃಸಿಂಹಂ [7]ಸಂಹೃತ್ಯ[7]ವೀರಃ॥
ಹರಿಂ ಹರನ್ತಮನುಯಾನ್ತಿದೇವಾಃ
ವಿಶ್ವಸ್ಯೇಶಾನಂ ವೃಷಭಂ ಮತೀನಾಂ॥
ಅಸ್ಮಿನ್ನರ್ಥೇ ಯಜುರ್ವೇದೇ॥
'ಹರಿಂ ಹರನ್ತಮನುಯಾನ್ತಿದೇವಾಃ ವಿಶ್ವಶ್ಯೇಶಾನಂ ವೃಷಭಂ ಮತೀನಾಂ
॥ತದಾ ನಾರಾಯಣೋಪನಿಷದಿ॥
ಹರಿಂ ಹರನ್ತವನುಯಾನ್ತಿದೇವಾಃ ವಿಶ್ವಸ್ಯೇಶಾನಂ ವೃಷಭಂ ಮತೀನಾಂ
ಅಸ್ಮಿನ್ನರ್ಥೇ ಕಾಳಿಕಾಖಾಣ್ಡೇ ॥ಶರಭಾಧ್ಯಾಯೇ॥

---

1 ದೆ (ಜ) 2 ಮರಿವು।ತನಘ (ಜ) 3 ದುವಾ (ಜ) 4 ವರಾಹನ (ಜ) 5 ಳು (ಜ) 6 ವಾಕ್ಯಂ (ಕ) 7 ಸಂಘಾನ (ಜ)

ಬಿಭೇದಪದ್ಭ್ಯಾಮಾಕ್ರಮ್ಯ ಹೃದಯಂ ನಖರೈಃ ಖರೈಃ
ಹರಿಂ ಹರಸ್ತುಶರಭಂ ವಿಶ್ವಸ್ಯೇಶಾನಮೀಶ್ವರಂ
ಅನಂಯಾನ್ತಿ ಸುರಾಸ್ಸರ್ವೇ ನಮೋವಾಕ್ಯೈಸ್ಸಹದ್ರುತಂ

॥ಅಸ್ಮಿನ್ನರ್ಥೇ ವಾಯುಪುರಾಣೇ॥

ವಿಷ್ಣೋರಪಿ ನೃಸಿಂಹಸ್ಯ ರಭಸಾಶಾರಭಾಕೃತಿಃ
ಬಿಭೇದ ಪದ್ಭ್ಯಾಮಾಕ್ರಮ್ಯಹೃದಯಂ ನಖರೈಃ ಖರೈಃ
॥ಅಸ್ಮಿನ್ನರ್ಥೇ ಲಿಂಗಪುರಾಣೇ॥

ಅಪಹೃತ್ಯ ತದಾ ಪ್ರಾಣಾನ್ ಶರಭಃ ಸುರಪೂಜಿತಃ
ಸಿಂಹಾಜಿನಾಮ್ಬರೋ ಭೂತ್ವಾ ಜಗಾಮ ಚ ಯಥಾಗತಂ
ಅಧಿಕಬಲ[1]ವಂತನಹ[1] ನರಸಿಂಹನಂ ವೀರ
ಸದರದಿಂ ಬಿಡದೆ ಪೊಡೆದಂ [2]ಮೇಣವನ ಕೊಲು
ತ್ತೊದಗಿದಾತನ ಕೂಡೆ ನಡೆಯುತಿರ್ಪನಂ ದೇವರಾತನೇ ಪತಿಗೆ ದೈವಂ
ಇದಕೇ ಜಗತ್ತಿಗೊಡೆಯಂ ಶರಭರೂಪದಿಂ
ಪದದುಗುರ್ಗಳಿಂದೌಂಕಿ ನರಹರಿಯ ಬೆಟ್ಟಿತಹ
ಎದೆಯ ಸೀಳಿದನಾತನುರುಚರ್ಮವಂ ಪೊರ್ದು ಬಂದಂತೆ ಪೋದನೀಶಂ[2] ೬೮

ವಾಕ್ಯಮ್ ॥

ಅಸ್ಮಿನ್ನರ್ಥೇ ಕಾಳಿಕಾಖಣ್ಡೇ ॥ ಶರಭಾಧ್ಯಾಯೇ ॥
ನೃಸಿಂಹಂ ಪ್ರತಿವೀರೇಶ್ವರ ಉವಾಚ ॥
ತದ್ವಾಕ್ಯಂ ಶ್ರುಣು ॥

ಶ್ಲೋಕ ॥

ನತ್ವಂ ಸ್ರಷ್ಟಾನಸಂಹರ್ತಾನಸ್ವತನ್ತ್ರೋಸಿ ಕುತ್ರಚಿತ್
ಕುಲಾಲಚಕ್ರವಚ್ಚಕ್ರ್ಯಾ ಪ್ರೇರಿತೋ[3]ಸಿ[3] ಪಿನಾಕಿನಃ
ಅದ್ಯಾಪಿ ತ[4]ತ್ಕೃಪ[4]ಶ್ಯತ್ವಂ ಕಪಾಲಂ ಕೂರ್ಮರೂಪಿಣಃ
ಹರಹಾರಲತಾಮಧ್ಯೇ ಮುಗ್ಧಃ ಕಸ್ಮಾನ್ನಬುಧ್ಯಸೇ॥
ವಿಸ್ಮೃತಂ ತತ್ತ್[5]ದನ್ತೇ ನ ದಂಷ್ಟ್ರೋತ್ಪಾಟೇನಪೀಡಿತಂ[5]

---

1 ವಾನಾದ (ಜ) 2 ಹರಿಂಹರಂತಮೆನೆ ವಿದಿತ ನರಹರಿಯು ಸಂಹತಿಸುತಿರ್ದಾತನಂ ಮತಿನಾಂ ವೃಷಭಮೆನಲು ಪದುಳದಿಂ ಬುದ್ಧಿಗಳೊಡೆಯನೆನಿಸುವ ಮಹಾಗಧಿಕ ವಿಶ್ವೇಶ್ಯಾನಮೆನೆ ವಿಶ್ವಕ್ಕೊಡೆಯನಾ ಮದನಾರಿಯಂ ದೇವರ್ಕಳನುಯಾಂತಿಯೆನೆ ಬಳವಿಡಿದೈದಿದರುಂ ಮತ್ತೆ (ಜ) 3 ಷಿ (ಜ) 4 ಮವ (ಜ) 5 ದಂಶೇನದಂಷ್ಟ್ರೋತ್ಪಾಟನ ಪೀಡಿತಃ (ಜ)

ವರಾಹವಿಗ್ರಹಸ್ತೇವ್ಯ [1]ಸಂಹೃತ[1]ಸ್ತ್ವಾರ ಕಾರಿಣಾ ॥
ಭೃಗುಣಾ ಶಪಿತಂ ಪೂರ್ವಂ ವಿಸ್ಮೃತಂ ತವ ದುರ್ಮತೇ
ಶಂಖುಕರ್ಣಗಣೇಶೇನ ಛಿನ್ನತ್ತಿ ಕೇಶಸಂಚಯಂ ॥

ಕಾಳಿಕಾಖಂ[2]ಡ[2] ಶರಭಾಧ್ಯಾಯ[3]ದೊಳಗಿಹುದ[3]
ಕೇಳ್ಳೈ ನೃಸಿಂಹನೇಯೆಂದು ಹರಿಯಂ ಕುರಿತು
ಪೇಳುತಿರ್ದಮಳ ವೀರೇಶ್ವರನ ವಾಕ್ಯಮಂ ಲಾಲಿಸ್ಯೆ ಎಲೆ ವ್ಯಾಸನೆ
ಪೇಳಲೇಂ ನರಹರಿಯೆ ಸೃಷ್ಟಿ ಸಂಹಾರಕ್ಕೆ
ಮೂಲಕರ್ತನೆ [4]ನೀನು ಪರತಂತ್ರನಾ ಶಿವನ[4]
ಲೀಲಾ[5]ದಿ[5] ಶಕ್ತಿ[6]ಯಿಂ[6] ಕುಂಭಕಾ[7]ರನ[7] ತಿಗುರಿಯೊಲ್ ಪ್ರೇರಿಸಲ್ಪ[8]ಡುತಿಹೆ[8] ೬೯

ವರ ಕೂರ್ಮರೂಪನಹ ನಿನ್ನಯ ಕಪಾಲವಾ
ಹರನ ಹಾರದ ಮಧ್ಯದೊಳ್ ಮೆರೆವುದೈ ಈಗ
ಇರದೆ ನೋಡೈ ಮುಗ್ಧನೇಯೇನುಕಾರಣಂ ಬುದ್ಧಿ ನಿನಗೇಕಿಲ್ಲವೊ
ಹರನಂ[9]ತು[9] ತಾರಕಾರಿಯ [10]ಹಸ್ತದಿಂ[10] ನಿನ್ನ
ಕಿರಿಯ ದಂಷ್ಟ್ರೋತ್ಪಾಟಣದ ಬಾಧೆಯಿಂ ದುಡಿದು
ಕೊರಗಿ ದೇಹಂ ಭಂಗಬಟ್ಟು ಮೊರೆಯಿಟ್ಟುದೀಗಂ ಮರೆದೆಯಾ ನರಹರಿ ೭೦

ಎಲೆ [11]ವಿಷ್ಣುವೇ ನಿನ್ನ ವಾಹನದ ಪಕ್ಕಗಳ
ನೆಳಲು ಬೀಳಲ್ ಶಂಕುಕರ್ಣನ ಶಿರಸ್ಸಿನೊಳ್
ಮಳಿಸನಾನಲ್ಯಾತನಪ್ಪರೊಳ್ ರಂಭೆಯಂ ಕಂಡು ಕರೆತರುವುದೆನಲು
ಎಲರ್ವಟ್ಟೆಯೊಳಗಾಯಕನ ನೆರೆದು ತಂದೀಯೆ
[ತಿಳಿ]ದದಂ ಕೋಪದಿಂ ಕೇಶಸಂಚಯುಗಳಂ
ನೆಲಕಿಳುಹಿಬಿಟ್ಟು ಬಿಟ್ಟದನೆಂದಿಗಾದರು[ಂ] ಮರೆವರೇ ಬುದ್ಧಿಯಲ್ಲಿ[11] ೭೧

ವಾಕ್ಯಂ ॥ ಕಿಂಚ ॥ ನನು ॥

ಶ್ಲೋಕ ॥ [12]ವಿದ್ಧೋ[12]ಪಿಯಂಸ್ಯ ಶೂಲಾಗ್ರೇ ವಿಷ್ವಕ್ಸೇನಚ್ಛಲಾದ್ಭವಾನ್
ದಕ್ಷಯಜ್ಞೇ ಶಿರಚ್ಛಿನ್ನಂ ಮಯಾ ತೇ ಯಜ್ಞರೂಪಿಣಂ ॥
ಅದ್ಯಾಪಿ ತವ ಪುತ್ರಸ್ಯ ಬ್ರಹ್ಮಣಃ ಪಂಚಮಂ ಶಿರಃ
ಛಿನ್ನಮೇವಾ[13]ತ್ರ[13]ಕೇನಾಪಿ ಸನ್ಧಿತಂ ಪಶ್ಯತೇ ಬಲಂ ॥

---

1 ಸಾಕ್ರೋಶ (ಜ) 2 ಡದತಿ (ಜ) 3 ದೊಳ್ (ಜ) 4 ಯಲ್ಲ ಸ್ವತಂತ್ರನು ಶಿವನ (ಜ) 5 ನು (ಜ) 6 ಯಂ (ಜ) 7 ರ (ಜ) 8 ಟ್ಟವನಲ್ಲೈ (ಜ) 9 ಶ (ಜ) 10 ಯತ್ನಣಿಂ (ಜ) 11 ದುರ್ಮತಿಯನುಳ್ಳ ನರಹರಿಯೆ ಕೇಳ್ ಮೊದಲು ಲಲನೆಯಂ ಹರಿಸಿದನೆನುತ್ತ ಭೃಗುಮುನಿಯಿಂದೆ ಮಲಮೂತ್ರ ರಕುತನೇಣ ಕೀವುಗಳ ಭುಂಜಿಸುವ ಹೀನಯೋನಿಯೊಳು ಜನಿಸಿ। ಜಲುಭಂಗಬಡುವು ದೆಂದಾಗ ಶಪಿಸಿದ ರಂಭೆ। ಗೊಲಿದು ಕತರಹುದೆಂದು ಕಳುಹೆ ಭೋಗಿಸಿ ತರಲ್ ಮುಳಿದಾಗ ಶಂಖು ಕರ್ಣಂ ವೊದೆದು ಮುಂದಲೆಯ ತರೆದುದಾ ಮರೆದೆ ಹರಿಯೆ (ಜ) 12 ದಗ್ಧೋ (ಜ) 13 ನ (ಜ)

ಹರನೇತ್ರಾನಲೆ ನೈವದಗ್ಧೋ ಭೂವುನ್ಮಥ ಕ್ಷಣಾತ್
ಸಮರ್ಥಶ್ಚೇದಹೋ[1]ಧ್ವಸ್ತಂ ತಸ್ಯಾಂಗಂ ಕಿಂ ನ ಭಾವಯೆ[1]

ಹರಿಯೆ ಕೇಳ್ ನೀನೊರ್ವ ರುದ್ರನ ತ್ರಿಶೂಲದೊಳ
ಗರರೆ ವಿಷ್ವಕ್ಸೇನ[2]ರೂಪದಿಂ ಜೋಲು[2]ತಿ
ರ್ಪಿರವುಳ್ಳ[3]ವನದಾ[3]ಗುತಿಹೆ ದಕ್ಷಯಜ್ಞದೊಳ್ ಯಜ್ಞ[4]ಮಯನಾದ ನಿ[4]ನ್ನ
ಶಿರ[5]ವು[5]ಯೆನ್ನಿಂ[6]ದ ತರಿಯ[6]ಲ್ಪಟ್ಟಿತೈ ನಿನ್ನ
ವರ ಪುತ್ರನಾದ ಬ್ರಹ್ಮನ ಪಂಚಮದ ಶಿರಂ
ಪರಿದುದಾವವನಿಂದಲಾದೊಡೀಗಂ ಕೂಡಿಸಲ್ಪಟ್ಟುದಿ[7]ಲ್ಲಮ[7]ರಿಯ ೬೨

ನಿನ್ನ ಸತ್ವವನು ನೀನೇ ನೋಡು ಎಲೆ ಹರಿಯೆ
ಪನ್ನಗಾ[8]ಭರಣ[8]ನೇತ್ರಾಗ್ನಿಯಿಂ ಕ್ಷಣಕೆ ಸ್ಮರ
ನನ್ನಿಯಿಂ ಬೆಂದುಹೋಗಲ್ಪಟ್ಟ [9]ನೀನೇ ಸಮರ್ಥನಾದರೆ ತೀವ್ರದಿಂ[9]
ಚೆನ್ನಾಗಿಯಾಯನಂಗನ ದೇಹಮಂ ಹರಿಯೆ
ಮುನ್ನಿನಂದ[10]ದಲಿ[10]ಸೃಷ್ಟಿಸಿ ಕಾಣ[11]ಲಾಪೆವೈ[11]
ಬನ್ನಬಡದಿರು ನೃಸಿಂಹನೆ ನನ್ನ ವಚನವಂ ಕೇಳಿ ಸುಖದಿಂದೆ ಬಾಳು ೬೩

ವಾಕ್ಯಂ ॥ ಕಿಂಚ ॥ ಶೃಣು ॥ಶ್ಲೋಕ ॥

ನಿರ್ಜಿತಸ್ತ್ವಂ ದಧೀಚೇನ ಸಂಗ್ರಾಮೇ ಮರುದ್ಗಣಃ
ಕಣ್ಡೂಯಮಾನಶ್ಶಿರಸಿ ಕಥಂ ತದ್ವಿಸ್ಮೃತಂ ತ್ವಯಾ ॥
[12]ಮ[12]ಹೇಶ್ವರ ಪದಾಸಕ್ತಂ ಸ್ಥಾನಂ ಭವತಿ ಸಂಪದಾಂ
ಪದಾಹ[13]ತಂ[13] ದಧೀಚೇನ ವಿಷ್ಣೋರ್ವಕ್ಷಃ ಶ್ರಿಯಃ ಪದಂ ॥
ಚಕ್ರಂ ವಿಕ್ರಮ ಸಾಹಾಯ್ಯಂ ಚಕ್ರಪಾಣೇ ತವ ಪ್ರಿಯಂ
ಕೃತಃ ಪ್ರಾಪ್ತಂ ಕೃತಂ ಕೇನತ್ವಯಾ ತದಪಿ ವಿಸ್ಮೃತಂ ॥

ಎಲೆ ಹರಿಯೆ ನೀನಂ ಕಾಳಗದೊಳ್ ಮರುದ್ಗಣ[14]ವ
ನೊ[14]ಲವಿನಿಂ ಕೂಡಿಕೊಂ[15]ಡಿರ್ದರು[15] ದಧೀಚಿಯಿಂ
ತಲೆಯೆರ್ದೆಗಳಂ ತಿವಿಸಿ ತುಳಿಸಿಕೊಂಡಧಿಕ ಭಂಗಂಬಟ್ಟುದಂ ಮರೆದೆಯಾ
ಎಲೆಲೆ ಚಕ್ರಸುಪಾಣಿಯೇ ನಿನಗೆ ಪ್ರೀತಿಯಾ
ದಲಘು ವಿಕ್ರಮನತಿಸಹಾಯವಹ ಚಕ್ರಮಂ
ತ್ರೊಲಿದೆತ್ತಣಿಂ ಬಂದಂದಾವಾತನಿಂದೆ ಮಾಡಲ್ಪಟ್ಟುದಂ ಮರೆವರೆ ೬೪

---

1 ಧ್ವಂ ಸಿಗಸ್ಯಾಂಗಂ ಕಿನ್ನಬಾಧಯೆ (ಜ) 2 ನೆಂಬಾ ನೆವದೆ ಸುಡು (ಜ) 3 ವಂ ಆ (ಜ) 4 ಮೂರ್ತಿಯಾದತ (ಜ) 5 ಸು (ಜ) 6 ದೆ ಛೇದಿಸ (ಜ) 7 ಲ್ಲಿದ (ಕಗ) 8 ಧರನ (ಜ) 9 ವನಾದ ನೀನೆ ಸಮರ್ಥನಹಡೆ (ಜ) 10 ದೊಳು (ಜ) 11 ಲರಿಯೆ ಹೋ (ಜ) 12 ಮಾ (ಕಗ) 13 ತಿ (ಜ) 14 ರಮೊ (ಜ) 15 ಡಪಜಯದೆ (ಜ)

ಕಿಂಚ॥

ತವಾನ್ಯೋನ್ಯವತಾರಾಣಿ ತಥಾ ಶೇಷಾಣಿ ಸಾಂಪ್ರತಂ
ಕೃತಾನಿ ಏನ ತೇನ್ಯೈವ ಕಥಾಶೇಷಂ ಭವಿಷ್ಯತಿ॥
ಅಂಶೋಹಂ ದೇವದೇವಸ್ಯ ಮಹಾಭೈರವರೂಪಿಣಃ
ತ್ವತ್ಸಂಹೃ[1]ತೇ ನಿ[1]ಯುಕ್ತೋsಸ್ಮಿ[2]ಲೀಲಯೈವ ಬಲೇನ ಹಾ[2]॥
ಇತ್ಥಂ ಸರ್ವಂ ಸಮಾಲೋಕ್ಯ ಸಂಹಾರಾತ್ಮನಮಾತ್ಮನಾ
ಸೋsಚೇದಿದಾನೀಂ ಕೃದ್ಧಸ್ಯ ಮಹಾಭೈರವರೂಪಿಣಃ॥
ವಜ್ರಾಶನಿರಿವ ಸ್ಥಾಣೌ ತ್ವಯಿ ಮನ್ಯುಃ[3]ಪ[3]ತಿಷ್ಯತಿ

ಆವನಾನೊರ್ವನಹ ರುದ್ರನಿಂದಾನಿನ್ನು
ಏವೇಳ್ವೆನುಳಿದಾವತಾರಗ[4]ಳ ನೋಡಲ್ಕೆ[4]
ಶೀವಿರ್ದ ಕಥೆಗಳೇ ಉಳಿದಂತವಾಗಿ ಮಾಡಲ್ಪಟ್ಟವಾ [5]ದೇವನಿಂ[5]
ಭಾವಿಸ[6]ಲ್ಕಾ ನೃಸಿಂಹಾವತಾರವು ನಿನಗೆ[6]
ಮಾವರನೆ ಕಥೆ[7]ಯೊಳಗೆ ಕೇಳಲ್ಪಡುವದಹುದಂ[7]
ಕೋವಿದನೆ ಎನ್ನ ನುಡಿಯಂ ಕೇಳೆನುತ್ತ ವೀರೇಶನುಸುರುತ್ತಿರ್ದನು ೭೫

ಅತಿಭಯಂಕರರೂಪನಾದಖಿಳದೇವರ್ಗೆ
ಸು[8]ತಿಪಾತ್ರನಾದ ಶಿವನಂಶವಾಗಿರುವಂತೆ[8]
ಪೃಥುಳ[9]ಬಲನಾದಾನು ವಿನಯಮಂ ಬಿಟ್ಟಧಿಕ[9]ಸಾಮರ್ಥ್ಯದಿಂದಾದೊಡು
ಖತಿಯಿಂದ ನಿನ್ನನುರೆ ಸಂಹರಿಸುವಲ್ಲಿ ಕೇ
ಳತಿವೇಗದಿಂ ಪ್ರಯೋಗಿಸ[10]ಲುಪಟ್ಟವನು ಸೂ[10]
ನ್ನತಿಯಿಂದಲಾಗುತಿಹೆ ನರಹರಿಯೆಂ ನೀಂ ತಿಳಿದು ಲಾಲಿಸೈ ಎನ್ನ ನಂಡಿಯಂ ೭೬

ಈ ವಿಧದೊಳಾ ಸಮಸ್ತವನು ನರಹರಿಯೆ ನೀಂ
ಸಾವಧಾನದೊಳರಿದು ನೋಡಿ ನಿನ್ನಿಂದ [11]ನೀ
ನೇ ವರಿಸಿ[11] ನರಸಿಂಹದೇಹಮಂ ತ್ಯಜಿಸ[12]ದಿರುತಿರ್ದರಾ[12] ಪಕ್ಷದಲ್ಲಿ
ಕೋವಿದನೆ [13]ವಹ್ನಿಯಂದದಿ[13] ಭಯಂಕರವಾದ
ಭಾವಜಾಂತಕನ ಕ್ರೋಧಂ ನಿನ್ನ ಮೇಲೆ ಬಿಡ
ದೇವೇಳ್ವೆ ಪತನವಾದೀತು ವಜ್ರಾಯುಧಂ ಕೊರಡಿನೊಳ್ ಬೀಳ್ವ ಪಾಂಗಿಂ ೭೭

---

1 ತಾನಿ (ಜ) 2 ವಿನಯೇನಬಲೇನವಾ (ಜ) 3 ಪ್ರ (ಜ) 4 ಳು ಸಾಂಪ್ರತಂ (ಜ) 5 ಶಿವನಿಂದವೆ (ಜ) 6 ಲೇತತ್ ಈ ನರಸಿಂಹಾವತಾರವು (ಜ) 7 ಯೆ ಉಳಿದಂತಹುದು ಆದಿತು (ಜ) 8 ತದೇವನಾದ ಪರಶಿವನಂಶವಾದಹುಂ (ಜ) 9 ವಹವಿನಿಯದಿಂದಾದೊಡಲ್ಲದೊಡಧಿಕ (ಜ) 10 ಲ್ಪಟ್ಟವನು ಬಿಡದು (ಜ) 11 ನಿಂ।ದಾವತಿಯ (ಜ) 12 ದಲ್ಲವಿರುತಿರ್ದ (ಜ) 13 ಈಗ ಕೋಪಿಸಿ (ಜ)

ಕಿಂಚ ಸೂತೋವಾಚ॥
ಇತ್ಯುಕ್ತೋ ವೀರಭದ್ರೇಣ ನೃಸಿಂಹೋ ಕ್ರೋಧವಿಹ್ವಲಃ
ನನರ್ಧೋರ್ತ್ ಪುಣ್ಯತ್ಯವೇಗೇನ ತಂ ಗೃಹೀತುಂ ಪ್ರ[1]ಚಂ[1]ಕ್ರಮೇ॥

ಅತ್ರಾನ್ತರೇ ಮ[2]ಹಾ[2]ಘೋರಂ ವಿಪಕ್ಷ ಕ್ಷಯಂಕಾರಕಂ
ಗಗನಂ ವ್ಯಾಪಿ ದುರ್ದರ್ಶಂ ಶಾರ್ವನ್ತೇಜೋ ಸಮುದ್ಭಭೌ॥

ವೀರಭದ್ರಸ್ತು ತದ್ರೂಪಃ [3]ಕ್ಷ[3]ಣಾರ್ಧೇ ವೈರದೃಶ್ಯತ
ತದಾ ತೇಜಾಂಸಿ ಸರ್ವಾಣಿ ತಸ್ಮಿನ್ ಲೀನಾನಿ ಶಾಂಕರೀ॥

ತದವ್ಯಕ್ತಂ ಮಹಾತೇಜೋ ವ್ಯಕ್ತಂ ಸಮ ಭವತ್ತತಃ
ರಂಧ್ರಸಾಧಾರಣೈಶ್ಚಿ[4]ಹ್ನೈಃ ಚಿಹ್ನಿ[4]ತಂ ವಿಕೃತಾಕೃ[5]ತಿ[5]॥

ತತಶ್ಶರಭರೂಪೇಣ ಸುವ್ಯಕ್ತಃ ಪರಮೇಶ್ವರಃ
ಪಶ್ಯತಾಂ ಸರ್ವದೇವಾ[6]ನಾಂ[6] ಜಯಶಬ್ದಾದಿಮಂಗಳೈಃ॥

ಸೂ[7]ತಂ ನುಡಿದನಿಂತು[7] ವೀರಭದ್ರೇಶನಿಂ
ದೋತು ನುಡಿಯಲ್ಪಟ್ಟ ವಾಕ್ಯಮಂ ಕೇಳಿ ಹರಿ
ಖಾತಿಯೊಳ್ ಕ್ರೋಧದಿಂ ಮುಂದುಗೆಟ್ಟವನಾಗಿ ಘರ್ಜಿಸುತೆ ನೆಗದುಹಾರಿ
ಮಾತೇನು ಬೇಗದಿಂದಾ ವೀರಭದ್ರನನು
ಭೀತಿಯಿಲ್ಲದೆ ಹಿಡಿಯಲುದ್ಯೋಗಿಸಲ್ ಬಳಿಕ
ಖ್ಯಾತಮಪ್ಪತಿಭಯಂಕರವಾದ ಶತ್ರುಗಳ ಸಂಹಾರಮಂ ಮಾಡುಂವ ೭೮

ಗಗನಮಂಡಲವ ವ್ಯಾಪಿಸಿಕೊಂಡಿರುತ್ತಿರ್ದ
ಸುಗಮದಿಂ ನೋಡಬಾರದ ಶಿವನ ಸಂಬಂಧ
ದಗಣಿತದ ತೇಜಸ್ಸು ಅತ್ಯಂತಮುನ್ನತಾಕಾರಮಾಗೆಸೆಯೆ ವೀರಂ
ಮಿಗೆಯಾ ಪ್ರಕಾಶರೂಪಾಂತು ಕ್ಷಣಮಾತ್ರದಿಂ
ಬಗೆಬಗೆಯ ಬ್ರಹ್ಮಾದಿ ದೇವರ್ಕಳಿಂದಭವ
ನಿಗಮದುರ್ಲಭ ನಿತ್ಯನುಮೆಯಾಣ್ಮನವತಾರದಿಂದೆ ತೋರಲ್ಪಟ್ಟನಂ ೭೯

---

1 ಚ (ಕಜ) 2 ದಾ (ಕಗ) 3 ಕ್ಷೌ (ಗ) 4 ನ್ವೈಶ್ಚಿನ್ವಿ (ಜ) 5 ತಿಃ (ಜ) 6 ನ್ಯಾ (ಕಗ)
7 ತಮುನಿವಾಕ್ಯೇತಿ (ಜ)

ಮತ್ತಾಗ ಸರ್ವತೇಜಸ್ಸುಗಳ್ ಶಿವನ [1]ಬಲ್[1]
ಬಿತ್ತರದ ಕಾಂತಿಯೊಳಗಡಗಿದ[2]ವದ[2]ವ್ಯಕ್ತ
[3]ದುತ್ತೇಜವೊಂದಾಗಿ ಬಳೆದು ಲೋಕಾತೀತ ರುದ್ರ[3]ಸಾಧಾರಣಮಹಾ
ವೊತ್ತ[4]ವಾ[4] ಚಿಹ್ನಂಗಳಿಂದ ಚಿಹ್ನಿತವಾ[5]ಗು
ತ್[5]ತ್ಯಂತಭೀಕರಾಕಾರದಿಂ [6]ಬೋಳೆಯರ
ವೊತ್ತದ ಜಯಧ್ವಾನದಿಂದ ಶರಭಾವತಾರವನಾಂತು ವ್ಯಕ್ತನಾದಂ[6] ೮೦

ಕಿಂಚ॥ ತದನಂತರಂ ಶೃಣು॥

ಹರಿಸ್ತದ್ದರ್ಶನಂ ದೇವ ವಿನಷ್ಟಬಲವಿಕ್ರಮಃ
ಬಭೂವೋದ್ಯತ್ಸಹಸ್ರನ್ಸು ಹತಖದ್ಯೋತದ್ಭೃಶಂ॥
ಅಥ ಪ್ರಹೃತ್ಯ ಪಕ್ಷಾಭ್ಯಾಂ ನಾಭಿಂ ಪದ್ಭ್ಯಾಂ ವಿದಾರಯನ್
ಪಾದಾವಾಬಧ್ಯ ಪುಚ್ಛೇನ ಬಾಹಂಭಿರ್ಬಾಹುಮಂಡಲಂ॥
[7]ಬಾಣಂ ಧನುಶ್ಚ[7] ಬಾಹುಭ್ಯಾಂತಂ ಜಗ್ರಾಹ ಹರೋ ಹರಿಂ
ತತೋ ಜಗಾಮ ಗಗನಂ ಸಹದೇವೈಸ್ಸಹರ್ಷಿಭಿಃ॥
ಸ[8]ಹಸ್ಸೈ[8]ವ ಹರನ್ ವಿಷ್ಣುಂ ಹರಶ್ಯೇನ ಇವೋರಗಂ
ಉತ್ಕ್ಷಿಪ್ಯೋತ್ಕ್ಷಿಪ್ಯ ತಂ ಗೃಹ್ಯನಿಪಾ[9]ತ್ಯ ಚ[9] ನಿಪಾತ್ಯ ಚ
ಉಡ್ಡೀಯೊಡ್ಡೀಯ ಭಗವಾನ್ ಪಕ್ಷಘಾತವಿ[10]ಮೋ[10]ಹಿತಂ
ಬಿಭೇದ ಪದ್ಭ್ಯಾಮಾಕ್ರಮ್ಯ [11]ಹೃದಯಂ[11] ನಖರೈಃ ಖರೈಃ
ಹರಿಂ ಹರನ್ತಂ ಶರಭಂ ವಿಶ್ವಸ್ಯೇಶಾನಮೀಶ್ವರಂ
ನೀಯಮಾನಃ ಪರವ[12]ಶೋ[12] ದೀನ[13]ವಕ್ತ್ರಂ[13] ಕೃತಾಂಜಲಿಃ
[14]ತು[14]ಷ್ಟಾವ ಪರಮೇಶಾನಂ ಹರಿಸ್ತಂ ಲುಠಿತಾಕ್ಷರಃ
ನಾಮಾಷ್ಟಕಶತೇನೈವ ಸ್ತುತ್ವಾಮೃತಮಯೇನ ತು॥
ಪುನಸ್ತಂ ಪ್ರಾರ್ಥಯಾಮಾಸ ನೃಸಿಂಹಃ ಶರಭೇಶ್ವರಂ
ಯದಾ ಯದಾ ಮಯಾ ಜ್ಞಾನಮತ್ಯಹಂಕಾರದೂಷಿತಂ
ತದಾತದಾಪನೋತ್ತವ್ಯಂ [15]ತ್ವ[15]ಯೈವ ಪರಮೇಶ್ವರ
ಏವಂ ವಿಜ್ಞಾಪ್ಯಸ್ಯ ವ್ರೀಳಃ ಶಂಕರಂ ನರಕೇಸರಿಃ
ತತ[16]ಸ್ಸನ್ತ್ಯಕ್ತ[16]ವಾನ್ ವಿಷ್ಣುರ್ಜೀವಿತಂ ಸ್ವಾಪರಾಧತಃ

---

1 ಧಿಕ (ಜ) 2 ವುಲಿ (ಜ) 3 ಮತ್ತೆಯುತ್ಕೃಷ್ಟವಹ ತತ್ತೇಜಬಳಿಕ ರುದ್ರಂಗೆ (ಜ) 4 ವಾ (ಜ) 5 ದ।ಅ (ಜ) 6 ಶಿವನಮರರತ್ಯಧಿಕ ಜಯಜಯ ಸುಮಂಗಳ ಧ್ವಾನಸಹ ಶರಭೇಶವ್ಯಕ್ತಮಾದಂ (ಜ) 7 ಬಿಂದನ್ನುರಶ್ಚ (ಜ) 8 ಹೈವೈ (ಜ) 9 ತ್ಯಂತೆ (ಜ) 10 ರೋ (ಕಗ) 11 ಪ್ರವಯಂ (ಕಗ) 12 ಚೋ (ಕಗ) 13 ಕ್ರಃ (ಜ) 14 ತ್ವ (ಜ) 15 ಸಂಪ್ರೀಳ (ಜ) 16 ಸನ್ತ್ಯಕ್ತ (ಜ)

ನರಸಿಂಹನಾ ಶರಭ ಮೂರ್ತಿಯುಂ ಕಾಣುತಂ
ತರ[1]ದೆ[1]ಯಾಕ್ಷಣದೊಳಾ ನಷ್ಟವಿಕ್ರಮನಾಗಿ
[2]ಕರಮುಗಿಸುತಿರ್ದ ಸಾಯಿರದೆ ಬಾನಿಂ[2] ಕೆಡುವ ಮಿಂಚುಬುಳುವೋಲಾದನು
ಮರಳಿ ಕೇಳ್ ಶರಭಪಕ್ಷಗಳಿಂದೆ ಒಡೆವುತಂ
ಚರ[3]ಣಿಂದೆ[3] ಪೊಡೆ ಪೊರ್ಕು[4]ಳಂ ಮೆಟ್ಟಿಯೊ[4]ಡೆವುತಂ
ತಿರದೆ ಸಾಲ್ತೋಳ್ಗಳಿಂ ಹರಿಯ ಕಾಲ್ತೋಳ್ಗಳಂ ಕಟ್ಟುತ್ತಲರರೆಯಾರ್ದು ೮೧

ವೀರನಂರೆ ಕೈಗಳಿಂ ನರಕೇಸರಿಯ ಎರ್ದೆಯ
ಡೋರಗೊರವಂತೆ ತಿವಿತಿವಿದು ಹರಿಯಂ ಪಿಡಿದು
ಕಾರಿಸುತ ರಕುತವಂ ಬೇಗದೆ ನೃಸಿಂಹನಂ ನಖಗಳಿಂ ಕೀಲಿಸುತ್ತ
ಸಾರ ಮುನಿಯುಮರರೊಡನಾಗಸಕ್ಕೈದಿದಾ
[5]ಪಾ[5]ರಪರಿಯಂತೆನಲ್ಕಾ ಗರುತ್ಮಂ ಬಿಡದೆ
ಕ್ರೂರಸರ್ಪಗಳ ಕೊಂಡೊಯ್ವ ಪರಿಯೆಂತಂತೆ ಮೆರೆ[6]ದುದಾ[6] ಸಮರಾಂಗಣಂ ೮೨

ಭಗವಂತನಾದ ಶರಭೇಶ್ವರಂ ಪಕ್ಕಗಳ
ಮಿಗೆ ಹೊಯ್ಲಿನಿಂದೆ ಮೂರ್ಛಿತನಾದ ನರಮೃಗವ
ನಗುತ ಮೇಲಕ್ಕೆ [ಸಲೆ]ಪಾಯ್ಕಿ ಮೇಲಕ್ಕೆಹಾಕಿ ಪಿಡಿಪಾಗವನ ಕೆಡಹಿ
ಸೊಗಸಿನಿಂ ಹಾರಿ ಸಾರಿಸಿ ಕಾಲ್ಗಳಿಂದವಚಿ
ಬಗೆದು ಕರ್ಕಶವಾದ ನಖಗಳಿಂ ಹೃದಯಮಂ
ಸುಗಿದು ಸಂಹರಿಸೆ ಪರವಶನಾಗಿಯೈದಿ ಹರಿದೈನ್ಯಮುಖಮುಂಟಾಗುತ ೮೩

ಕರಗಳಂ ಮುಗಿದಾತನಾಗಿ ಸೈತಿರದೆಯಾ
ಶರಭೇಶ್ವರನ ಮೂರ್ತಿಯುಂ ಕುರಿತು ಹರಿ ದುಃಖ
ದಿರವಿನಿಂ ಗದ್ಗದಾಕ್ಷರ[7]ವೆಂತುಟಹು[7]ದಾಗೆ ಮಾಡಿದಂ ಸ್ತುತಿಯ ಮತ್ತೆ
ಭರದಿಂದಲೀ ವಿಧದೆಯಮೃತಮಯವಾದ ನಿ
ರ್ಭರವದಷ್ಟೋತ್ತರ ಸುನಾಮಂಗಳಿಂದೆಯಾ
ದರದೆ ಸ್ತೋತ್ರವ ಮಾಡಿ ಮರಳಿ ನರಸಿಂಹನಾ ಶರಭನಂ ಬೇಡಿಕೊಂಡಂ ೮೪

---

1 ರೆ (ಜ) 2 ವರಮುರಿಸುತಿರ್ದ ಸಾಯಿರಗಯ್ಯನಿಂ (ಜ) 3 ಣಂಗಿಲಿಂದೆ (ಜ) 4 ಳಮನೊ (ಜ) 5 ಸಾ (ಜ) 6 ಯುತಾ (ಜ) 7 ವ್ಯಹಗಪು (ಜ)

ನರಸಿಂಹವಾಕ್ಯಮಂ ಲಾಲಿಸ್ಯೆಯೆಂತೆನಲು
ಪರಮೇಶ್ವರನೆ [1]ಯಾವಕಾಲದೊಳ್ ಚಿತ್ತದೊಳ
ಗಿರದೆ[1]ನಗೆಯತ್ಯಹಂಕಾರದಿಂ ನಿಂ[2]ದಿತಜ್ಞ್ಞತನಾಗುತಿಹನಹುದು[2]
ಕರುಣದೊಳಗಾವಾಗ ನಿನ್ನಿಂದವೇಯೆನ್ನ
ಮರವೆಯಂ ತೊಲಗಿಸಲು ಬೇಕಾದುದ್ಯೆ ದೇವ
ನಿರತಮಿಾ ಪ್ರಾಕಾರಮೆಂದಂ ನಾಚಿಕೆಯಿಂದೆ ಸಹಿತನಾದಾ ನರಹರಿ ೮೫

ಶಂಕರನ ಕುರಿತು ವಿಜ್ಞ್ಞಾಪನವ ಮಾಡಿ ಮಿೂ
ನಾಂಕಪಿತನಾದ ನರಸಿಂಹ ತದನಂತರದೆ
ಮುಂಕೊಂಡು ತನ್ನ ತಪ್ಪಿಂದೆ ನರಹರಿ [3]ರೂಪದ ಪ್ರಾ[3]ಣಮಂ ಬಿಟ್ಟನು
ಶಂಕರಾಕಾರ ಶರ[4]ಭೇಶ್ವರಂ ಸಕಲಕೆ[4] ಭ
ಯಂಕರದ [5]ರೂಪದಿಂದವನ[5] ಮೊಗಸಮ್ಮ್ರಗಳ
ತಾಂ ಕೊಂಡು ಕ್ಷಣದೊಳಗತೀಂದ್ರಿಯತ್ವವ ಪೊಂದಿ ಕೈಲಾಸಕ್ಕೈದಿದನಲ ೮೬

ಇಂತಖಿಳ ವೇದಪೌರಾಣಶಾಸ್ತ್ರಂಗಳೊಳ್
ಕಂತುಪಿತನವಿಂತಭಂಗಂಗಳಂ ಪೇಳುವಡ
ನಂತಾಬ್ದಪರ್ಯಂತ ತೀರದೆಲೆ ವ್ಯಾಸದೀಕ್ಷಿತನೆನಲ್ ಸೋ[6]ತು[6] ಬಳಿಕಂ
ಚಿಂತೆಯಿಲ್ಲದೆಯೆರಗ[7]ಲಾಗಲೇಕೋರಾಮ[7]
ನಂ[8]ತು ದಯೆಯಿಂ[8] ದೀಕ್ಷೆಯಂ ಮಾಡಿ ಶಿವಮಹಿಮೆ
ಯಂ ತಿಳುಹುತಾ ಶೈವ ವೀರಶೈವವನುಸರಿ ನಿಶ್ಚಿಂತನಂ ಮಾಡಿದಂ ೮೭

ಸತತೋಜ್ವಲಾನಂದ ಸಂದೋಹರೂಪಸ
ನ್ನುತ ವೇದಪೌರಾ[9]ಣಿಕಾಗ[9]ಮಾದ್ಯಖಿಳವರ
ಮತಶಾಸ್ತ್ರಮಂಜುಳ ಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತಮಯ ಚತುರ್ಗುರುಂ ಸುಚಾರಿತ್ರದೋಳ್ಯೆದಂ
ಮತಿನೊತ್ನಪಹ ಕಾಂಡದೊಳ್ ನೋಡೆ ನಾಲ್ಕನೆಯಸಂಧಿ ಸಂಜ್ಞ್ಞಾನಬಂಧಿ ೮೮

---

1 ಕೇಳಾವಾಗಾವಗ। ಮಿರದೆ (ಜ) 2 ದಿತಮಾದಜ್ಞ್ಞಾನವಾಗುತಿಹುದು (ಜ) 3 ಯಾಗಸ್ವಪ್ರಾ (ಜ) 4 ಭರೂಪಾಂತುಳ (ಜ) 5 ವೀರೇಶನವನ (ಜ) 6 ಮ (ಕಗ) 7 ಲೇಕೋರಾಮಗುರುವರ (ಜ) 8 ತಪರಿಯಂ (ಜ) 9 ಣಾಗ (ಜ)

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರಿಗಿಷ್ಟಾರ್ಥಮಹುದು ಸತ್ಯಂ ೮೯

## ಐದನೆಯ ಸಂಧಿ

ಸೂಚನೆ॥

ಕಾಶಿಯೊಳ್ ಕೇಶವನನೀಶ್ವರಂಗಧಿಕ ಸಂವಿ
ಲಾಸದಿಂದಡ್ಡ[1]ಬೀಳಿಸಿಯೆ[1] ಕಲ್ಯಾಣಕ್ಕೆ
ತೋಷದಿಂದೆಯ್ದಿಷ್ಟಲಿಂಗಪೂಜೆಯೊಳೊಪ್ಪುತಿರ್ದನಾ ಪಂಡಿತಾರ್ಯಂ

ಭೂರಿಶರಣಾಗಾರ ಸೂರಿಜನಮಂದಾರ
ತಾರಾಗವಾಸ ಸುಕ್ಷೀರಪೂರಾಭಾಸ
ಮಾರಾಪಹಾರ ವರ ಕ್ರೂರಸುರಸಂಹಾರ ಚಾರುಂಕಾರುಣ್ಯಪೂರ
ಧೀರ ಮಾಯಾದೂರ ಸಾರ[2]ಶಂಭ್ವಾ[2]ಕಾರ
ಧಾರಾಧ[3]ರವಂಯೂಖ ಚಾರುಕಂಧರಲೇಖ
ವಾರನುತ ಸೋಮ ರವಿ ಹವ್ಯವಾಹನನಯನ ಸಲಹೆಮ್ಮ[3] ಚನ್ನಮಲ್ಲ ೧

ಬಡಗದಿಕ್ಕಿನೊಳು ಶಿವಪುರದಲ್ಲಿ ಶಿವಲಿಂಗ
ಕೆಡೆವಿಡದೆ ಪುಷ್ಪವಂ ತಂದು ಭಜಿಸಲು ಜನರು
ಸಡಗರದೆ ಲಿಂಗಕ್ಕೆ ಮರೆಯಾಗಲವರಿರಿವೆನೆನಲು ಮರೆಯಂ ತೊಲಗಿಸೆ
ಮೃಡನನರ್ಚಿಸಿಯೆ ಮೃಷ್ಟಾನ್ನಮಂ ಉಣಿಸುತ್ತ
ಕಡೆಯಲ್ಲಿ ಕಲ್ಯಾಣಪುರಕೈದಿ ಲಿಂಗಕ್ಕೆ
ಷಡುರಸಾನ್ನದೆ ತಣಿಸಿ ಲಿಂಗದೊಳ್ ಬೆರೆದ ಸುರಗಿಯಂಚೌಡ ಶರಣು ಶರಣು ೨

ಸಕಲಕ್ಷೇತ್ರದೊ[4]ಳೆಲ್ಲ[4] ದಿವ್ಯತರವಾ[5]ಗಿರುವ[5]
ಮುಕುತಿಗಾಗಾರವಾದಾ ಕಾಶಿಯೇ ತನಗೆ
ಯುಕುತಿಯಿಂದತ್ಯಂತ ಪ್ರೇಮದಾವಾಸವಹಾದಾ ವಿಶ್ವನಾಥೇಶನ
ಸುಕುಮಾರನೆನಿಪ ಶಿವಲೆಂಕಮಂಚಣದೇವ
ನಕಳಂಕವೀರಶೈವೋಪದೇಶವನು ತಾಂ
ಭಕುತಿಯಿಂ ವಿಶ್ವೇಶಲಿಂಗದಿಂ ಪಡೆದು ತಾಂ ವೀರಶೈವಾಚಾರವಂ ೩

---

1 ಗೆಡಹಿಸುತ (ಜ) 2 ಕಾಯಾ (ಜ) 3 ರೋವಾಹ ನೀರೇಜನೇತ್ರಸಹ ತಾರಾಧಿಪತಿಶೂರ ಭೂರ ವೈಶ್ವಾನರ ನಯನಜಯ (ಜ) 4 ಳಧಿಕ (ಜ) 5 ದಮಳ (ಜ)

ಧರಿಸಿಯಾ ಪಂಡಿತಾಚಾರ್ಯರುಂ ಶಿವಗ[1]ಣರ[1]
ನೆರವಿಯಿಂದಖಿಳವಿನಿಯೋಗ[2]ದಿಂದೆ[2]ಸೆವುತಂ
[3]ಮೆರೆವ[3]ನ್ಯದೈವದರ್ಶನಮನ್ಯಸಮಯಿಗಳ ಮೂಗಿಗುರೆ ಕ್ಷುರಿಕೆಯೆನಿಪ
ಬಿರಿದಿನ ಮಹಾಧ್ವಜವನೆತ್ತಿಸುತೆ ಪುರದಲ್ಲಿ
ಗಿರಿವಜ್ರದಂಡಪಂಡಿತನೆಂದು ಪರವಾದಿ
ಬಿರಿದಿನತಿಬಳದ ಡಂಗುರವ ಪೊಯ್ಸುತ್ತಧಿಕ ಶಿವತೇಜದಿಂ ಮೆರೆವುತ ೪

ಮುಂದೆಯುಘೆಯುಘೆ ಚಾಂಗು ಭಲರೆ ಭಾಪುರೆಯೆಂದು
ಸಂದಣಿಸುವಖಿಳಮಾಹೇಶ್ವರರ ಗೊಂದಣದೆ
ಚಂದ್ರಮೌಳಿಯು ದೈವವೆಂದು ಸ್ಥಾಪಿಸುತ ಕೇತಾರಪ್ರಯಾಗಾದಿಯೊಳ್
ಸಂದ [4]ನಾನಾವಿಧದ[4] ದೇಶಂಗಳಂ ಚರಿಸಿ
ಬಂದು ತಾ ಜ್ವಾಲಾಮುಖಿಯನೈದಿ ಪ್ರೇಮದಿಂ
ಸೌಂದರಿಸಮೇತದಿಂ ಸರಸಿಯೊಳ್ ರಾಜಿಸುವ ನೀಲಕಂಠನ ನೋಡುತ ೫

ಮರಳಿ ಕಾಶಿಗೆ ಬಂದ ಪರಸಮಯಕರಿಸಿಂಹ
ಪರಮತೇಜಃಪುಂಜ ಪರಮೇಶ ಪರಮಾತ್ಮ
ನೆರಡನೆಯ ಶಂಕರಪ್ರತಿಬಿಂಬ[5]ನಿತರ ನೃ[5]ಭಯಂಕ[6]ರನೆನಿಸಿ ಒ[6]ಪ್ಪುವ
ಪರಮಶಿವಲೆಂಕಮಂಚಣಪಂಡಿತಾರಾಧ್ಯ
ರಿರಲು ಕಾಶೀಪುರದೊಳನ್ಯಸಮಯಿಗಳೆಲ್ಲ
ನೆರೆದೇಕದಂ[7]ಡಿ ತ್ರಿದಂಡಿ ಮುಂತಾದ ವೈಷ್ಣವಜೀಯರುಗಳೆಲ್ಲರು[7] ೬

ಕೂಡಿ ವೈಷ್ಣವರಖಿಳರಬ್ಜನೇತ್ರಂಗೆ ಶಶಿ
ಚೂಡನೇಂ ಸಾಟಿಯೇ ಎಂದು ಗಳಹುತ ನಿಂದೆ
ಯಾಡಂಬರದೊಳಾ ಗದಾಧರನ ಗುಡಿಯಲ್ಲಿರಲು [8]ಮಂಚಣಾರಾಧ್ಯನು[8]
ಕೂಡೆ ವಾದಿಗಳ ಎರ್ದೆಬಿರಿವಂತೆ ಬಿರುದಂಗಳ
ರೂಢಿಯಿಂ ಪೊಗಳಿಸಿಕೊಳುತ್ತ [9]ಬರಲೆಲ್ಲ ಮಾ
ತಾಡಿ[9] ಮುಂದಕೆ ಪೋಪುದಲ್ಲಮೆಂದಾಗಡ್ಡಕಟ್ಟಿ ತಡೆಯಲ್ಕೆ ನಗುತಂ ೭

---

1 ಣಂ (ಜ) 2 ಸಹಮೆ (ಜ) 3 ತರರ (ಜ) 4 ಕ್ಷೇತ್ರಾದ್ಯಮಿತ (ಜ) 5 ನಗಣಿತ (ಜ) 6 ರಂ ಎನಿಸೊ (ಜ) 7 ಡಿ ದ್ವಿದಂಡಿ ತ್ರಿದಂಡಿ ಮೊದಲಾದ ವೈಷ್ಣವ ಗುರುಗಳು (ಜ) 8 ಶಿವಲೆಂಕಮಂಚಣ್ಣನು (ಜ) 9 ಬರೆಸರ್ವರು।ಮಾಡಿ (ಜ)

ಏನಿರೈ ಕಾಗೆವಿಂಡುಗಳಂತೆ ನೆರೆದರುಚಿತ
ತೇನುಕಾರಣ ತಡೆದರೆಲೆ ಮಾಜದುಸುರಿ ನೀ
ವೇನಂ ಬಲ್ಲಿರಿ ಸಕಲವಿದ್ಯಾವಾರಾಶಿಯಂ ಪೀರ್ದ ಬಾಡಬರೆ ನೀವು
ಹೀನರಿರ ನಿಮಗೇ[1]ಕೆ[1] ಮಾತೆನ[2]ಲ್ಕೆಲ್ಲದ[2]
ಜ್ಞಾನದಿಂ ನುಡಿದರೆಮ್ಮಯ ದೇವರಿದಿರೆ ಬಹು
ಮಾನದಿಂ ಹೊಗಳಿಸಿಕೊಳಲ್ ಸಲ್ಲ ನಮ್ಮ ಸೋಲಿಸಿ ಪೋಪು[3]ದುಚಿತ ನಿನಗೆ[3] ೮

ಎಂ[4]ಬ[4] ಮಾತಂ ಕೇಳಿ ಸಂಭ್ರಮಂಗೊಂಡು ಶಿವ
ಶಂಭುಶಂಕರಲೆಂಕ ಮಂಚಣ್ಣನಂಸುರ್ದ ನಿ
ಕುಂಭಿನಿಯ ಭೂಸುರಾಧಮರಿರಾ ಕೆಡಬೇಡ ನಿಮ್ಮ ವಾದವದೇನೆನೆ
ಅಂಬುಜಾಂಬಕನಾದ ವಿಶ್ವಂಭರೆಯ ಪೊರೆವ
ಕುಂಭಿನಿಧರಾತಪತ್ರ ನಾರಾಯಣನೆ ಜಗ
ಕಂ ಬಿಡದೆ ತಾನೆ ಕರ್ತಂ ಭರ್ತನಲ್ಲ[5]ದಿನ್ನಾವ[5] ದೈವಗಳಿಲ್ಲವೈ ೯

ವಿಶ್ವಮಂ ಸೃಷ್ಟಿಪ ವಿರಿಂಚಿ ನಮ್ಮಯ ದೇವ
ರೈಶ್ವರ್ಯ ನಾಭಿಕಮಲದೊಳು ಪುಟ್ಟಿದನವಂ
ವಿಶ್ವ ಜಗಮುವ[6][ನಿಂದ][6] ನಿರ್ಮಾಣಮಾದುದಾತನ ಕೂರ್ಚದಲ್ಲಿ ಕೇಳು
ಈಶ್ವರನೆನಿಪ್ಪೊರ್ವ ರುದ್ರನುದಿಸಿದನಾತ
ನಶ್ವರದ ಕಾಶಿಯೊಳ್ ನೆಲಸಿಯೇ ವ್ಯರ್ಥದಿಂ
ವಿಶ್ವನಾಥಾಭಿಧೇಯಮನಾಂತು ನಿಂದೊಡೇನೀ ಮಹಾಕ್ಷೇತ್ರದಲ್ಲಿ ೧೦

ಮನೆಯೊಡೆಯನೊರ್ವನಿರ್ದಂತೆಯುಂದ್ರೇಕದಿಂ
ಕನಲಿ ಧೂ[7]ರ್ತಂ ಪೆರರ ಮನೆಯೊ[7]ಳಿರುವಂದದಿಂ
ವಿನಯದಿಂ ನೋಡಲೀಕ್ಷೇತ್ರ ವೈಷ್ಣವಮಯಂಮದೆಂತೆನಲ್ ಪಂಡಿತಾರ್ಯ
ಘನಮುಕ್ತಿಯುಹುದಿಲ್ಲಿ ಯಾರಿಂದೆನಲ್ ಮಹಾ
ಮನಸಿಜನ ಪಿತನ ಶ್ರೀರಾಮಮಂತ್ರದೊಳಲ್ಲ
ದನುವಿನಿಂ ನೋಡೆ ಶಿವಮಂತ್ರದಿಂದಿಲ್ಲವದರಿಂ ವಿಷ್ಣುವಧಿಕಮೆನಲು ೧೧

1 ಕೊ (ಜ) 2 ಲ್ಕವರುವ (ಜ) 3 ದಲ್ಲದೊಡೆ ಬಿಡೆವು (ಜ) 4 ದ (ಜ) 5 ದನ್ಯತ್ರ (ಜ)
6 ನಿಚ್ಛೆಂದ (ಜ) 7 ರ್ತನ್ಯರಾಲಯದೊ (ಜ)

ಎ[1]ಲೆಲೆ[1] ಹರಿ [2]ವ್ಯಾ[2]ಸ ವೈಷ್ಣವರು ಕೇಳಿರೊ ಮುನ್ನ
ಮಲೆತು ತಮ್ಮೊಳ್ ತಾವು ಹರಿಯಜರುಂ ಕಾದಿ ಬಹು
ಗೆಲವಿನಿಂದೋರ್ರೊರ್ವರೆಂದರೆಲೆ ಬ್ರಹ್ಮ ನನ್ನಯ ಪೊಡೆಯ ಪೊಕ್ಕು ನೀನು
ನೆಲೆಯಾಗಿ ವಿಶ್ವಮಂ ನೋಡೆನಲ್ಕೊಳಪೊಗುತ
ಭಲರೆ ಭಾಪೆಂದು ಘುಡುಗುಟ್ಟುತಂ ತನ್ನೊಳಗೆ
ಜಲಜಾಕ್ಷನುದರದೊಳ್ ವಿಶ್ವಮಂ ಕಂಡಜಂ ನಾಭಿಕಮಲದೊಳು ಪೊರಟಂ ೧೨

ಮತ್ತೆ ಕೇಳಾ ಬ್ರಹ್ಮಯೆಲೆ ಹರಿಯೆ ನೀನೆನ್ನ
ಬಿತ್ತರದ ದೇಹದೊಳು ಪೊಕ್ಕು [3]ನೋಡೆನೆ[3] ವಿಷ್ಣು
ಸತ್ಯಮಾಗೆಯ್ದಿ ನೋಡಲ್ ಸುರಾಸುರರು ನರನಾಗಕುಲ ಗಂಧರ್ವರ
ಮೊತ್ತ[4]ಮೋ ಹರಿ[4]ರುದ್ರಸಚರಾಚರಂ ಕಾಣು
ತತ್ಯಧಿಕ ದೇಹದಿಂ ಪೊರಮಡಲ್ಕಾಗದಿರೆ
ಚಿತ್ತಜನ ಪಿತನವನಧೋದ್ವಾರದಿ ಪೊರಮಡಲಾಗಧೋಕ್ಷಜನಾದನು ೧೩

ಶ್ಲೋಕ ॥
ಸಾಕ್ಷಿ ॥ ದಿವ್ಯವರ್ಷ ಸಹಸ್ರಾನ್ತೇ ಜಠರಾ[5]ತ್ತಸ್ಯ[5]ಬ್ರಹ್ಮಣ :
ಅಧೋದ್ವಾರಾದ್ವಿನಿಷ್ಕ್ರಾನ್ತೋ ಭವಾಮ್ಯಹಮಧೋಕ್ಷಜಃ ॥

ಕೇಳಿರೋ ವಿಪ್ರಾಳಿಕುಲಮೆಲ್ಲ ಹರಿಯಜರು
ಭಾ[6]ಳಾಕ್ಷ[6]ನಾದಭವನಂ ಕುರಿತಂ ತಪ[7]ವಿರಲ್
ಬಾಲದೊಳ್[7] ಭಜಿಸಿ ಧ್ಯಾನಿಸಲವರ ಭಕ್ತಿಗೋಸುಗಮವರ ಕೂರ್ಚದಲ್ಲಿ
ನೀಲಲೋಹಿತ ರುದ್ರ ಸುಪ್ರಸನ್ನನು ಮಾಗೆ
ಪೇಳಬಹುದೇನೆಲವೊ ಹರನ ಹರಿಸುತ[8]ನೆಂದು
ಮೇಲಾದ ವಸ್ತುವಂ ಕೀಳಾಗಿ ಭಾವಿಸಿದವರಿಗೆ ಸದ್ಗತಿಗಳುಂಟೆ[8] ೧೪

ಎಲೆ ವಾದಿ ಕೇಳ್ ಪ್ರಥಮದೊಳ್ ಬ್ರಹ್ಮನಾದೊಡಂ
ಜಲಜನಾಭನ ಸಂತನೆಯಲ್ಲ ಸಟೆಯಜನಿಂದ
ಮಲಹರಾತ್ಮಕರುದ್ರನುದಿಸಿದನೆ ಇಲ್ಲ ಸರ್ವಾಬದ್ಧಮಂ ಪೇಳ್ವರೆ
ಸಲೆ ಮತ್ತೆ ಕೇಳಿರೈ ಚತುರ್ಮುಖನ ದೆಸೆಯಿಂದ
ಬಲವಂತನಾದ ನಾರಾಯಣಂ ಪುಟ್ಟಿದನೆ
ನೆಲೆಯಲ್ಲದೊಂದೊಂದಂ ಕಾರಣದೊಳುದಿಸಿದರು ಶ್ರುತಿವಚನಮಂ ಲಾಲಿಸು ೧೫

---

1 ಲೈ (ಜ) 2 ವಾ (ಗ) 3 ನೆಂದೆನೆ (ಕಗ) 4 ಹರಿಯಜ (ಜ) 5 ತ್ತಪರಿ (ಗ) 6 ಳಾಂಬಕ (ಜ) 7 ವ। ದಾಳಿಯಿಂದ (ಜ) 8 ನೆನಲ್। ಬಾಲಹುಳುಹಿಗಳು ನಿನ್ನ ಬಾಯೊಳಗೆ ಸುರಿವವೈಕಳಾಧಮಾ ಬಿಡುಬಿಡು (ಜ)

ವಾಕ್ಯಮ್ ॥
ರುದ್ರಸ್ಯ ಸರ್ವದೇವತಾಜನಕತ್ವಂ ವಕ್ಷ್ಯಾಮಹೆ
ಯಜುರ್ವೇದೇ॥ ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ
ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ॥ ತತ್ರೈವ ॥

ಸೋಮಃ ಪವತೆ ಜನಿತಾ ಮತೀನಾಂ ಜನಿತಾ ದಿವೊ ಜನಿತಾ ಪೃಥಿವ್ಯಾ
ಜನಿತಾಗ್ನೇರ್ಜ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತಾಥ ವಿಷ್ಣೋಃ ॥
ಅಸ್ಮಿನ್ನರ್ಥೇ [1]ಸ್ಕಾಂ[1]ದಪುರಾಣೇ ಕಾಶೀಕಾಣ್ಡೇ ॥

[2]ದ್ಯಾವಾಪೃಥಿವ್ಯೋ ಬುದ್ಧೀನಾಂ[2] ವಹ್ನೇಃ ಸೂರ್ಯಸ್ಯ ವಜ್ರಿಣಃ
ಸಾಕ್ಷಾದಪಿ [3]ಮಹಾವಿಷ್ಣೋಃ[3] ಸೋಮೋ ಜನಯಿತೇಶ್ವರಃ ॥

ಆವ ದೇವನು ಹರಿಬ್ರಹ್ಮಾದಿ ಸುರ[4]ರಲ್ಲಿ[4]
ಭಾವಿಸಲ್ ಮೊದಲೊಳಿರ್ಪನು ವಿಶ್ವಕಧಿಕನಹ
[5]ದೇವನಾತನೆ ಮಹರ್ಷಿಯು ನೆರೆ ಹಿರಣ್ಯಗರ್ಭನ ಪುಟ್ಟಿಸಿದನಂ ಬಳಿಕ[5]
ಶೀವಿದಾ ವಾಯುಮತಿಯಾಕಾಶ ಭೂಸೂರ್ಯ
ಪಾವಕೇಂದ್ರ ಸುಚಂದ್ರ ನಾರಾಯ[6]ಣಾದ್ಯ[6]ಖಿಳ
ಜೀವಜಾಲಕ್ಕೆಲ್ಲ ತಂದೆಯಹ ಸೋಮನೇ ದೈವ ಮತ್ತನ್ಯಮಿಲ್ಲಂ ೧೭

ಸೋಮನೆನೆಯುಮೆಯಿಂ ಸಮೇತನೀಶ್ವರನೆನಲ್
ಶ್ರೀಮಹಾಪರಶಿವಂ ಮತಿಗ[7]ಳೇ ವಿಶ್ವಕ್ಕೆ[7]
ಭೂಮಿಗಂ ವೈಶ್ವಾನರಂಗಮಳ ಸೂರ್ಯಂಗೆ ರಾತ್ರೀಶನಾದ ಶಶಿಗಂ
ನೇಮದಿಂದಧಿಕ ದೇವೇಂದ್ರಂಗೆ ವಿಷ್ಣುವಿಗೆ
ತಾಮರಸಸಂಭ[8]ವ ಪ್ರಮುಖ[8] ಸಚರಾಚರಕೆ
ಪ್ರೇಮದಿಂ ಪ್ರತ್ಯಕ್ಷಜನಕನೆಂದುಲಿವ ಶ್ರುತಿಪೌರಾಣಗಳ ನೋಡಿರೊ ೧೮

ಹರಿವಿರಿಂಚಾದ್ಯಖಿಳ ಸುರರು ಧರೆ ಮುಂತಾದ
ವರಮಹಾಭೂತಂಗಳೀ ಜಂತುಜಾಲಗಳು
ಪರಶಿವನ ಲೀಲೆಯಿಂ ಜನಿಸಿದವು ಶಿವನವಕೆ ಕರ್ತ ಭರ್ತಂ ಹರ್ತನು

---

1 ಸ್ಕಂ (ಗ) 2 ಮತಿನಾಂ ದಿವಃ ಪೃಥಿವ್ಯೋ (ಜ) 3 ವಿಷ್ಣೋರ್ವೈ (ಜ) 4 ಗೆಲ್ಲ (ಜ)
4 ಓವಿ ಮಹಾಋಷಿಯಾವ ರುದ್ರನಾದಿಯೊಳು ಪುಟ್ಟಿಸಿದನಜನಂ ಬಳಿಕ್ಕಂ (ಜ) 6 ಣಂಗ (ಜ)
7 ಳ್ಗೆ ಸ್ವರ್ಗಕ್ಕೆ (ಜ) 8 ವಂ ಮುಖ್ಯ (ಜ)

ದೊರೆವಡೆದ ವೇದಪೌರಾಣಪ್ರಸಿದ್ಧ ಮೆಲೆ
ವೊರೆವುದಿನ್ನೇನು ಕಾಶೀಪುರಂ ಶಿವಕ್ಷೇತ್ರ
ದಿರವಲ್ಲ ರಾಮತಾರಕದಿಂದ ಮುಕ್ತಿ ಹರಿಗೃಹಮೆನಲದಕ್ಕೆ ಕೇಳು ೧೮

ಸ್ಕನ್ದಪುರಾಣೇ ॥ ಶ್ಲೋಕ॥

ರಕಾ[1]ರಃ[1] ಶಂಕ[1]ರಃ[1] ಪ್ರೋ[2]ಕ್ತೋ[2] ಮಕಾ[1]ರಃ[1] ಶಕ್ತಿರುಚ್ಯತೆ
ಶಿವಶಕ್ತಿಸಮಾಯೋಗೇ ರಾಮಶಬ್ದ[3]ಸ್ತಥೋ[3]ಚ್ಯತೆ॥
ರಮನ್ತೇ ಯೋಗಿ[4]ನೋ[4]ನನ್ತೇ ಸತ್ಯಾನನ್ದ ಚಿದಾತ್ಮನಿ
ಇತಿ ರಾಮಪದೇನಾಸೌ ಪರಬ್ರಹ್ಮಾಭಿಧೀಯತೇ॥
ಘೃತಕಾಠಿಣ್ಯವನ್ಮೂರ್ತಿಸ್ಸಚ್ಚಿದಾನಂದಲಕ್ಷ[5]ಣಃ[5]
ಶಿವಾದನ್ಯಸ್ಯ ನೈವಾಸ್ತಿ ಶಿವಯೆವಹಿ ಸಾ ಸದಾ

ಎಲೆ ವಾದಿ ವೈಷ್ಣವರ್ಕಳ್ ಕೇಳಿ ನೀವೆಲ್ಲ
ವೊಲವಿನಿಂ ರಾಮತಾರಕವಿಷ್ಣು ವಾಚಕ[6]ದೊ
ಳು[6]ಲಿವುದಕೆ ಪ್ರಾಮಾಣ್ಯಮಿಲ್ಲ ತತ್ಪ[7]ರವಸ್ತು ರುದ್ರನೋರ್ವನೆಯೆಂಬುದು[7]
ನೆಲೆಯಾಗಿ ಶ್ರುತಿಯುಸುರ್ವುದದುಕಾರಣಂ ಸ್ಕಾಂದ
ಮೊಲವಿನಿಂ ರಾಮತಾರಕಮಂತ್ರ ಪರಬ್ರಹ್ಮ
ಸಲೆ ಪರಬ್ರಹ್ಮವೇ ಪರಶಿವಂ [8]ತತ್ಕಾ[8]ರಣಂ ರುದ್ರಪರವೆಂದ[9]ನಂ[9] ೧೯

ಯೋಗಿ[10]ನೋ ಎನೆ ಯೋಗಿಗಳನಂತೆಯೆನೆ ಕೇಡ
ನಾಗದುದು ಸತ್ಯವೆನಲಾನಂದಮೆನೆ ಚಿತ್ತಿ
ನಾಗೆನೆ ತ್ರಿಕಾಲದೊಳ್ ಕೆಡದೆ ಸುಖವಾಗರಿವದೆನಿಸುವದನುಳ್ಳದಾತ್ಮಂ
ಯೋಗದಿಂ ರಾಮಪದವದರಲ್ಲಿ ರಮಿಸುತಿಹ
ರಾ ಗರುವರದರಿಂದ ಪರತರಬ್ರಹ್ಮವೇ
ವೇಗದಿಂ ಪೇಳೆಪಡುತಿಹುದಿದಂ ತಿಳಿಯದೇ ಮತ್ತೊಂದನೆಣಿಸಲಳವ[10] ೨೦

---

1 ರಂ (ಜ) 2 ಕ್ತಂ (ಜ) 3 ಪ್ರವಾ (ಜ) 4 ಯೋ (ಕಗ) 5 ಣಂ (ಜ) 6 ತ್ವಾಮು (ಜ) 7 ರಂ ಬ್ರಹ್ಮಸಯೇಕೋರುದ್ರನೆಂದು (ಜ) 8 ಅದು ಕಾ (ಜ) 9 ರಿ (ಜ) 10 ನಿಂ ಯೋಗಿಗಳ ನಂತಂಯೆಂದೊಡೇಗಳುಂ ಕಡೆಯುಮೊದಲಿಲ್ಲದತ್ಯಧಿಕತರವಾಗಿ ಸತ್ಯಾನಂದ ಚಿದಾತ್ಮನೀಯೆನೆ ಸಚ್ಚಿದಾನಂದಬ್ರಹ್ಮದಲ್ಲಿ ರಾಗದೆ ರಮಂತೆಯೆನೆ ರಮಿಸುತಿಹುದಿರಿಂತೆಂದುದಾಗಿ ತಾಂ ರಾಮಪದದಿಂದೆ ಕೇಳ್ಬೇಗದೊಳ್ ಸೌಪರಬ್ರಹ್ಮಸ್ಸಮಾಯೋಗೇ ರಾಮಶಬ್ದಃ ಪ್ರವುಚ್ಯತೇ (ಜ)

ಘೃತದ ಕಾಠಿನ್ಯದೋಲಾಂ ಸಚ್ಚಿದಾನಂದ
ಮಿಂತಮಾದ ಲಕ್ಷಣಂ ಶಿವಗಲ್ಲದುಳಿದಾದ
ಹತಮಪ್ಪ ಹರಿಸುರೇಂದ್ರಾದಿಗಳಿಗಿಲ್ಲ ಸಚ್ಚಿದ್ರೂಪ ಶಿವನೆ ಬ್ರಹ್ಮಂ
ನುತ[1]ದ[1]ಕಾರಂ ಶಂಕರಂ ಮಕಾರವೆ ಶಕ್ತಿ
ಸತತ ಶಿವಶಕ್ತಿಯೋಗಂ ರಾಮತಾರಕ
ಪ್ರತಿಯಿಲ್ಲವದರಿಂದೆ ಮುಕ್ತಿಯಿಾ ಕಾಶೀಪುರಂ ಶಿವಕ್ಷೇತ್ರಮಯುವು ೨೧

ಸಾಕ್ಷಿ॥
ಕಾಶ್ಯಾಂ ಮುಕ್ತಸ್ಯ ಶಿವತ್ವಂ ಬಹುಧಾ ಪ್ರತಿಪಾದಯನ್ತಿ ಶ್ರೂಯತಾಂ ॥

ವೃತ್ತ॥
ಕಾ[2]ಶ್ಯಾಂ ಚ ಯಸ್ಮಾ[2]ನ್ತ್ಯಜತಾಮಿಂಹಾಂಗಂ
ಶರೀರಿಣಾಂ ನಾಸ್ತಿ ಪುನಶ್ಶರೀರಂ
ಯದಸ್ತಿ ಕಂಠೇ ಗರಳಂ ಲಲಾಟೇ
ತ್ರಿಲೋಚನಂ ಚಂದ್ರಕಳಾಕಿರೀಟೇ ॥

ಕೇಳಿರೋ ಈ ಕಾಶಿಯೊಳ್ ಶರೀರವನಂಳಿದಂ
ಖೂಳದೇಹಿಗಳೆತ್ತಲಾನು ಬಳಿಕೊಂದಂ ತನು
ವಾಳೋಕಿ[3]ಸಲ್ ಧರಿಸಿದೊಡಮಾ ಶರೀರಕ್ಕೆ ಕಂಠದೊಳ್ ಗರಳಮಿಹುದು
ಫಾಲದೊಳಗೊಂದು [ಚಂದ್ರಕಲೆ]ಮಕುಟದೊಳಿಹುದು
ಬಾಲೇಂದುರೇಖೆಯಿಾ ಪಕ್ಷದೊಳ್ ಭಾರತಮು
ಖಾಲಾಪಮಿರ್ಕುಂ ಪುರಾಣಂಗಳಲಿ ವಿಷ್ಣುಚಿಹ್ನಮೇನಾದರುಂಟೆ[3] ೨೨

ಹರಿಕ್ಷೇತ್ರವಲ್ಲ ಕಾಶೀಪುರಂ ಹರಕ್ಷೇತ್ರ
ಮರಿಯಿರೋ ಪದ್ಮಪೌರಾಣದೊಳ್ [4]ಸಾರುತ್ತ
ಲಿರೆ[4] ಶಿವಸಹಸ್ರನಾಮದೊಳಾ ಶಿವಂಗೆಯಭಿರಾಮ ರಾಮೇಶನೆಂಬ
ವರನಾಮಮುಂಟು [5]ಶಿವಭಕ್ತನೆಂತೆಂದಂ ರಘು
ವರನೆನಿಪ್[5] ಪರಶುರಾಮೇ[6]ಶ ರಾಮೇ[ಶರೆಂ
ಬುರು]ಲಿಂಗಗಳ ವಿಷ್ಣು ತಾಂ[6] ಪ್ರತಿಷ್ಠಿಸಿ ಭಜಿಸಿದಂ ಜಗತ್ಸಿದ್ಧಮಾಗಿ ೨೩

---

1 ರ (ಜ) 2 ಶೀಮಯಶ್ಯಾ (ಜ) 3 ನಾಸ್ತಿ ಕೊರಲಲ್ಲಿ ಗರಳಂ ತ್ರಿಣೇತ್ರಂ ಕಿರೀಟದಲ್ಲಿ ಪೇಳಲೇಂ ಚಂದ್ರಕಲೆ ಮುಂತಾದ ಶಿವಚಿಹ್ನೆಯಂ ತಾಳಿ ಮುದಿಸುವರೆಂದು ಸ್ಕಂದಭಾರತ ಮುಖ್ಯಬಾಳ ಪ್ರಮಾಣಂಗಳುಂಟಲ್ಲದಿಲ್ಲಿ ನಾರಾಯಣನ ಲಕ್ಷಮಿಲ್ಲಂ (ಜ) 4 ವೇದಸಾ।ರುರೆ 5 ರಾಮಗೆ ಶಿವಂ ಕರ್ತನಹ।ಪರಿಯಿಂದೆ (ಜ) 6 ಶ್ವರಂ ರಾಮೇಶ್ವರನೆಂಬ ಲಿಂಗಗಳ ತಾಂ (ಜ) ಶರಾಮೇ।ಶರೆಂಬುದ್ರು ಲಿಂಗಗಳ ವಿಷ್ಣುತಾಂ (ಗ)

ಆದುಕಾರಣಂ ಹರನೆ ಕರ್ತ ಹರಿಯೇ ಭೃತ್ಯ
ನದರಿಂದೆ ಈನಮ್ಮ ನಂದಿಟೆಕ್ಕೆಯ ಮೇಲೆ
ಮೆರೆವ ವ್ಯಾಸನ ತೋಳು ಸಾಕ್ಷಿ ಹರಿನೇತ್ರ ಹರನಂಘ್ರಿಯೊಳಗಿಹುದೆ ಸಾಕ್ಷಿ
ಮಧುಸೂದನನ ದಶಾವತರಣಂಗಳಂ ಶಿವಂ
ವಧಿಸಿದುಂದೆ ಸಾಕ್ಷಿ ಕೂರ್ಮಾದಿಗಳ ಚಿಹ್ನೆಯದೆ
ಮೊದಲಂ ತಾಣಂಗಳೊಳಗೆಸೆವುದೇ ಸಾಕ್ಷಿಯಿನ್ನೇಕೆ ನಿಮಗೀ ವಿವಾದಂ ೨೪

ಇತ್ಯಾದಿ ಪ್ರಶ್ನೆಗಳ ಕೇಳುತ್ತ ಹರಿದಾಸ
ರತ್ಯಧಿಕಚಿಂತೆಯೊಳಗಾಳಿ ಪಂಡಿತಗುರುವಿ
ಗುತ್ತರವ ಕೊಡಲಾರ[1]ದೊದರುವೀ [1]ಶಾಸ್ತ್ರಪ್ರಮಾಣಮಲ್ಲ[2]ಲೆ ದೃಷ್ಟವ[2]
ಪ್ರತ್ಯಕ್ಷಮಾಗಿ ತೋರಿದೊಡೊಡಂಬಡುವೆನೆನ
ಲತ್ಯಧಿಕ ಹರುಷದಿಂ ನಂಡಿದರೀ ವಿಷ್ಣುವಂ
ಕೃತ್ತಿಧರಗಡ್ಡಗೆಡಹಿದರೆ ಸಮ್ಮತವೆನಲ್ಕಂತಾಗಲೊಡಬಟ್ಟರು ೨೫

ಎಂಬ ಮಾತಂ ಕೇಳಿ ಶಿವಲೆಂಕಮಂಚಣಂ
ಶಂಭುಸುತರಹ ಡುಂ[3]ಢಿಮೋದ ಪ್ರಮೋದರಂ
ಲಂಬೋದರಂ ವಕ್ರತುಂಡಂ ಮೃಗೇಂದ್ರತುಂಡಂ ಸಮುದ್ದಂಡದಂಡಂ
ಇಂಬಿನಿಂದೇಕದಂತಂ ಚತುರ್ದಂತನೂ
ಧ್ವಾಂಬಕಂ ಚಿತ್ರಘಂಟಂ ಸೂಷ್ಮದೇಹನು
ಜೃಂಭಿತಸ್ರಕ್ಪಾಣಿ ಸರ್ವಸಿದ್ಧಿಪ್ರದಂ ಮುಂಡಮಾಲಂ ಕರಾಲಂ[3] ೨೬

ವರಕೂಟದಂತ ಕೂಷ್ಮಾಂಡ ಭೀಮಂ ಚಂಡ
ನುರು ದೇವಮುಂಡನುಂ ರಾಜಪುತ್ರಂ ಪ್ರಣ[4]ಮ
ಪರನಿಭದ್ವೀಪಿ ಸಿಂಹಗೋಮಾಯು ಮಹಿಷ ಸಾರಂಗ ಶರಭೋಷ್ಟ್ರಾನನಂ
ಸ್ಥಿರದಂತ ಹಸ್ತನಾಥಂ ಪಿಚಂಡಿಯು ಚಂಡಿ
ದಂರಿತಹರಗಜಕರ್ಣ ಮೇಷಕರ್ಣ[4] ಕಪರ್ದಿ
ಹರಿ[5]ಚಂ[5]ದ್ರ ತಾಲುಜಂಘಾದಿಯೆಂಭತ್ತೆಂಟು ಶ್ರೀವಿನಾಯಕರ ಕರೆದು ೨೭

---

1 ದೆಂದರೀ (ಜ) 2 ಶಿಲೆದೃಷ್ಟದಾ (ಗ) 3 ಡುಭಿಯು ದೇಹಳಿ ವಿನಾಯಕಂ ಬಗೆಯಲಾಶಾ ವಕ್ರತುಂಡಂ ಸಿಂಹತುಂಡಮುದ್ದಂಡನವರ। ಬೆಂಬಳಿಯ ಏಕದಂತಂ ಮಹಾಚೌದಂತನುಂ ಬಹಳ ಚಿತ್ರ ಘಂಟಂ ದುರ್ಗಾ ಉಷ್ಟದೇಹನುಂ ಬಳಿಕ ಪಾಶಪಾಣಿಯು ಸರ್ವಸಿದ್ಧಿಯುಕ್ತರಾರ್ಕಂ ಮುಂಡನು (ಜ) 4 ಮ।ಮರಿದಾದ ಕಪಿಸಿಂಹ ದ್ವಿಪಾನನಂ ಪಂಚಾಯು ಏಕದಶ ನಂದಿತುಂಡಂ ಚಿರದಂತಹಸ್ತನಾದೇವ ಪಿಚಂಡಿಯು ಚಂಡಮರರೆ ಕಲಿಪ್ರಹಜೇಷ್ಟಕಜಕರ್ನ (ಜ) 5 ಶ್ಚಂ (ಜ)

ಕ್ಷೀರಸಾಗರಶಯನ ವಾರಿಜಾಕ್ಷನ ನೀವು
ಸಾರಿ ಕರತಹುದೆನಲ್ಕವರು ಸಂಕಲೆಯುನಾ
ಮಾರಪಿತಗಂ ಪಾಯ್ಕಿ ಎಳೆ[1]ದು ನೀಂ[1] ಪಂಡಿತಾರಾರ್ಯರ ವಾದ[2]ಕಾಗಿ ಬೇಗ[2]
ನಾರಾಯಣನೆ ನೀನು ಬರ್ಪುದೆನೆ ಹರಿ ತನ್ನ
ಸಾರವಾದಾ ಗದಾಧರನ ಪ್ರತಿಮೆಯೊಳು ಬಂ
ದಾ[3]ರೂಢಚಿಹ್ನದಿಂದಿರೆ[3] ಕಂಡು ಪಂಡಿತೇಶಂ ಭಕ್ತಜನರು ನಲಿದು ೨೮

ಎಲೆಲೆ ಹರಿ ನೀನು ಮುಮುಕರ್ತಂ ಮಹೇಶನೆಂ
ದುಲಿದು ಈಕಾಶಿಯೊಳ್ ವ್ಯಾಸಂಗೆ ಪೇಳ್ದ ನಿ
ನ್ನಲಘುವಾಕ್ಯಂ ಸತ್ಯಮಾಡಿದೆ ನಡೆಯೆನಲ್ಕೇಳುಗಜ[4]ದುದ್ದಮಾದ[4]
ಶಿಲೆಯು ವಿಗ್ರಹ ಗದಾಧರನಾದ ಹರಿ ಹಸ್ತ
ಗಳ ಮುಗಿದುಂ ನಡೆಯೆ ಮುಂದೆಸೆಯಲ್ಲಿ ಶಿವಶರಣ
ಕುಲವೆರಸಿ ಪಂಡಿತೇಶಂ ಗಮಿಸೆ ವೈಷ್ಣವರ್ ಪಿಡಿದೆಯ್ದೆ ಬಾವರಮಮ ೨೯

ವಿಶ್ವೇಶ ವಿಶ್ವಾತ್ಮ ವಿಶ್ವಕಾರಣನೆ ಲೋ
ಕೇಶ್ವರ ಸುರೇಶ್ವರ ದಿಗೀಶ್ವರ ವಿನುತನೆ ಜಗ
ದೀಶ್ವರ ಚಿದೀಶ್ವರ ಮದೈಶ್ವರ್ಯವರದ ಭುವನೇಶ ರುದ್ರಾದಿವಂದ್ಯ
ವಿಶ್ವಂಭರಾದ್ಯಷ್ಟತನುಮೂರ್ತಿ ಜಯ ಜಯ ವಂ
ದೀಶ್ವರನೆ ವಿಶ್ವನಾಥನೆ ಶರಣು ಶರಣು [5]ಸ
ಪ್ತಾಶ್ವಗಾತ್ರನೆ[5]ಯೆಂದಂ ವಿಶ್ವಾಂಬಕನ ಮುಂದೆ ಪೊಡೆಗೆಡೆದನಬ್ಜಾಂಬಕಂ ೩೦

ಭಲರೆ ಹರಿ ನೀನೆ ಭಕ್ತಂ ಭಕ್ತನಹುದು ಭೂ
ಲಲನಾಧಿಪಂ ನೀನು ನಿನ್ನ ಕರ್ತಂಗೆ ನೀ
ನೊಲಿದಡ್ಡಬಿಳ್ದುದು ಯಥಾರ್ಥ[6]ವಾದರೆ ಸರ್ವಜನರಿನ್ನು ಕಾಣುವಂತೆ[6]
ನೆಲೆಯಾಗಜಸ್ರ ನೀಂ ಪೊಡಮಟ್ಟಿರುವದೆಂದು
ಸಲೆ ನಿಯಾಮಿಸೆ ಪಂಡಿತೇಶನಾಜ್ಞೆಯೊಳಂತು
ಜಲಜಾಂಬಕಂ ಏಳದಿರೆ ಕಂಡು ವಾದಿಗಳ್ ಸೋತು ಶರ[7]ಣಂಬೊಕ್ಕರು[7] ೩೧

---

1 ದು (ಜ) 2 ಕೋಸುಗವುಹಾ (ಜ) 3 ರಥದೆ ಚಿಹ್ನದೋರಲ್ (ಜ) 4 ಪ್ರಯಾಣನ ಮಳ (ಜ) 5 ವೃಷದಶ್ವನೇತ್ರನೆ (ಜ) 6 ವಾದಿಗಳೀಗಳುಂ ನಾಚುವಂದದಿಂದೆ (ಜ) 7 ಣ್ಬೊಕ್ಕರಾಗ (ಜ)

ಇಂತು ಶಿವಲೆಂಕಮಂಚಣಪಂಡಿತಾರಾಧ್ಯ
ರಂತು ಮಹಿಮೆಯ ಮೆರೆವುತಂ ವಾದಿಗಳನೇ ಸ
ಮಂತಂ ಜಯಿಸಂತ್ತ ಕಲ್ಯಾಣಕೈತಂದು ಬಸವೇಶ್ವ[1]ರಪ್ರಮುಖ[1] ಶರಣ
ತಿಂತಿಣಿಯನಾನಂದವಾರ್ಧಿಯೊಳಗಾಳಿಸುತ
ಕಂತುಹರ ಶಿವಲಿಂಗನಿಷ್ಠೆಬಲಿವುತ ಭವದ
ಚಿಂತೆಯಿಲ್ಲದ ವೀರಶೈವ ಧರ್ಮವ ಪೊರಿದಿ ಶರಣ[2]ರಾಚರಣೆಯರಿದು[2] ೩೨

ನಿತ್ಯ ಗುರುಲಿಂಗ ಜಂಗಮದ ದಾಸೋಹಗಳ
ಚಿತ್ತಶುದ್ಧದೊಳೆಯ್ದೆ ಮಾಡುತಾ ಲಿಂಗದೊಳ
ಗತ್ಯಂತ[3]ಮಾವೇಗ[3]ದಿಂ ಪಂಡಿತಾರಾಧ್ಯ ಜಂಬೂರಮಾಕಾಳರ
ಸತ್ಯಶರಣೇಷ್ಟಲಿಂಗಕ್ಕಷ್ಟಪೂಜೆಗಳ
ಬಿತ್ತರದೊಳೆಸಗುತ್ತ ತ್ರೈಕಾಲದೊಳ್ ಶಿರವ
ನುತ್ತರಿಸಿಯಾರತಿಯ ಬೆಳಗಿಯೂ ಶಿರವ[4]ನೆಂದಿನೊಲೊಂದಿಸುವ ಚಂದಮಂ[4] ೩೩

ಈ ವಾರ್ತೆಯಂ ಕೇಳಿ ನಿರ್ಮಾಲ್ಯಶಿರವ ಶಿವ
ದೇವಂಗೆ ಮರಳಿ ಮರಳಿಂತು ಬೆಳಗುವದೆಂದು
ಗೋವಿಂದಭಟ್ಟಾರಕರ್ ನುಡಿದರಿದಂ ಭಕ್ತಿಯೇ ಎನಂತ ತಮ್ಮ ಶಿರವಂ
ತಾವೆಯರಿದಾರತಿಯನೆತ್ತಿ ತಲೆಯಂ ಬಿಸುಟಂ
ಭಾವಜಾಂತಕನಿಂದ ಮತ್ತೊಂದುಶಿರವನುರೆ
ಸಾವಧಾನದೆ ಮೂರುದಿವಸಕ್ಕೆ ಪಡೆದರಿದು ಬೆಳಗುವದು ಕೇಳಿ ನಗುತ ೩೪

ಹರ ಸತ್ತನೋ ಬದ್ದನೋ ಮೂರುದಿನತನಕ
ಶಿರವಿಾಯದೆಲ್ಲಿಯ ಮಹತ್ವಮೆಲ್ಲಿಯಂ ನಿಷ್ಠೆ
ಪರವಾದಿಗಳು ನಗರೆಯೆಂದು ಮೊರಟದ ಬಂಕಿದೇವ ತನ್ನಯ ಶಿರವನು
ತರಿತರಿದು ಬಿಸು[5]ಡುವಂ[5] ಮರಳಿ ತಲೆಗಳ್ ಚಿಗುರೆ
ಸರಸರನೆಯರಿದ ಕೋಟಾಕೋಟಿ ತಲೆಗಳವು
ಪರಮಮೊರಟದ ಮಲ್ಲಿಕಾರ್ಜುನನ ಗುಡಿ ತುಂಬೆ ಶಿವ ಸಂಕಟಂಗೊಳುತ್ತ ೩೫

---

1 ರಂ ಮುಖ್ಯ (ಜ) 2 ರ ನಿಷ್ಠೆಗಳ ನೆನೆವುತ (ಜ) 3 ಆವೇಶ (ಜ) 4 ಮರಳಿ ಪತ್ತಿಸು ವಂದಮಂ (ಜ) 5 ಟದಂ (ಜ)

ಎಲೆ ಶರಣ ಸಾಕು ಸಾಕೈ ಎನ್ನ ಹರಣಮಿದು
ತಳುಂವದೀಕ್ಷಣ ಪೋಗುತಿದೆ ವರವನೀವೆನೆನೆ
ಮಲಹರನೆ ಈಶಿರಗಳೆಲ್ಲವಂ ನಿನ್ನೊಳಗೆ ಇಂಬಿಡುವುದೆನಲು [1]ನಲಿ[1]ದಂ
ತಲೆಗಳೆಲ್ಲವನು ತಲ್ಲಿಂಗವೊಳಕೊಳಲಾಗ
ಛಲದಂಕ ಬಂಕಯ್ಯ ಮಾಕಾಳದೇವನು
ಜ್ವಲದ ಗೋವಿಂದಭಟ್ಟಾರಕರ್ ಸಹಿತ ಶಾಂಭವಲೋಕಮಂ ಸಾರ್ದರು ೩೭

ಇಂತಿವರು ಮೊದಲಾದ ಶರಣರಂ ಸ್ವಾಂತದೊಳ್
ಕಂತುಹರನವತಾರ ಶಿವಲೆಂಕಮಂಚಣ್ಣ
ನಂತರಂಗದೊಳು ಸ್ಮರಿಸುತ ಮಹಾಲಿಂಗ[2]ಕಂ ತನ್ನ[2] ಪ್ರತ್ಯಂಗಂಗಳಂ
ಚಿಂತೆಯಿಲ್ಲದೆ ದಿನಂಪ್ರತಿಯಲರ್ಪಿಸುವೆನಂ
ದಂತು ನೆವವಿಡಿದರ್ಚನೆಯನು ಮೇಣೆಸಗಿ ತದ
ನಂತರದೊಳಧಿಕತರನಿಷ್ಠೆಯಿಂದುತ್ತಮಾಂಗದ ಕುರುಳ್ಗಳಂ ಕೊಯ್ಯುತ ೩೭

ಕರದಿಷ್ಟಲಿಂಗಕ್ಕದಂ ಚವರಮಂ ಮಾಡಿ
ಸರಸದಿಂ ಢಾಳಿಸುತ ಕರದ ಬೆರಳ್ಗಳಿಗೆಯ್ದೆ
ಭರದೆ ಬತ್ತಿಯ ಸುತ್ತುತಾರತಿಗಳಂ ಬೆಳಗಿ ಮತ್ತಮಂ ಕಡಿದಿಡುತ್ತೆ
ಉರವ ಕೊಯ್ದುದರೊಳಾಜ್ಯವನೆರೆದು ರಜ್ಜುವಿಂ
ಗಿರಿದೆ ಜ್ಯೋತಿಯ ಮುಂಟ್ಟಿಸುತ್ತೆ ನೀರಾಜನವ
ಹರಹರಯೆನುತ್ತಲಾರತಿಯೆತ್ತಿ [3]ಈನೇಮ[3]ತಪ್ಪದೊಲ್ ನಡಸು[4]ತಿರ್ದಂ[4] ೩೮

ಒಂದೊಂದು ದಿನಕೆ ಮೂರವಸರಂ ತಪ್ಪದೋ
ಲಿಂದುಮೌಳಿಗೆ ತನ್ನ ಕುರುಳು ಬೆರಳುಗಂರುಗಳ
ಕುಂದದರ್ಪಿಸು[5]ತ ನೈರ್ಮಾಲ್ಯಮೆಂದವ ಹಿಂದುಗಳೆವುತ್ತಮಂ[5] ಪಡೆವುತ
ಛಂದಛಂದದೊಳಿಂತು ಬಹುಕಾಲ ಭಜಿಸುತಾ
ನಂದದಿಂ ಶಿವಲೆಂಕಮಂಚಣ್ಣ ಪಂಡಿತಂ
ಸಂದಶಿವಯೋಗಾನುಭಾವಶರನಿಧಿಯೊಳಾಳುತ್ತಿರ್ದನಾನಂದದಿಂ ೩೯

---

1 ನರಿ (ಕಗ) 2 ಕ್ಕಂಗ (ಜ) 3 ತ್ರೈಕಾಲ (ಜ) 4 ತಮಮ (ಜ) 5 ತನಿರ್ಮಾಲ್ಯದಂದವಂ ಹಿಂದುಗಳೆವುತ (ಜ)

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾ[1]ಣಿಕಾ[1]ಗಮಾದ್ಯಖಿಳವರ
ಮತಶಾಸ್ತ್ರಮಂಜುಳ ಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತಮಯ'ಚತುರ್ಗುರು ಸುಚಾರಿತ್ರದೊಳ್ ನೋಡ
ಲತಿನೂತ್ನಮಾದೈದುಕಾಂಡದೊಳಗೈದನೆಯ ಸಂಧಿ ಸುಜ್ಞಾನಬಂಧಿ ೪೦

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕೋರಾಮರಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರಿಗಿಪ್ಪಾರ್ಥಮಹುದು ಸತ್ಯಂ ೪೧

---

1 ಣಾ (ಗಜ)

# ಆರನೆಯ ಸಂಧಿ

ಸೂಚನೆ :

ಶಿವಲೆಂಕವಂಚಣ್ಣ ಪಂಡಿತಾರಾಧ್ಯರುಂ
ಭುವಿಯ ಸಲಹಲ್ಕೆ ಕಾಶಿಯೊಳುದಿಸಿ ಮೆರವುತಿರೆ
ಸುವಿಲಾಸದಿಂದ ವಾಮನ ಮುನೀಶಂ ಕೇಳೆ ಪೇಳ್ದನಾ ಗುರುಂಗಳಿರವಂ

ದಿಗ್ಭರಿತ ಕೀರ್ತಿ [1]ಚಂದನಚರ್ಚಿತ ಸಮಸ್ತ[1]
ಋಗ್ಯಜುಸ್ಸಾಮ ನಿಗಮಾ[2]ಗಮವಿನುತಿಪಾತ್ರ
ನಿಗ್ರಹಾನುಗ್ರಹಪ್ರದ ಮಹಾಶಕ್ತ್ಯಧಿಷ್ಠಾನ ಚೈತನ್ಯರೂಪ[2]
ದಿಗ್ರಮಣಪೂಜಿತಪದಾಬ್ಜ ಪವನಾಹಾರಿ
[3]ವಿಗ್ರಹಾಂಚಿತದಿವ್ಯವಿಗ್ರಹ ಸರೋಜಾಕ್ಷ
ರಾಗ್ರಾಸ್ವರಾಡಾದಿ ಸುರವಂದ್ಯ[3]ಚರಣಸರಸಿರುಹ[4]ನೇ[4] ಚೆನ್ನಮಲ್ಲ ೧

ರಾಚವಂಲ್ಲೈಯನಾ ಚಿಕರಾಚಮಲ್ಲೈಯ
ನಾಚಾರ್ಯ ಗಂಡಗತ್ತರಿಯ ನಾಚಯ್ಯಗಳ್
ಯಾಚಿಸಲ್ ಬರೆ ದಾಸ ಶಿವನಿಂದೆಯಂ ಮಾಡೆ ಕೇಳಿ ವೈಷ್ಣವನೆ ನಿನ್ನ
ನೀಚತಲೆಯರಿವೆನೆನೆ ನಿನ್ನ ತಲೆಯರಿದದಂ
ನೀ ಚಮತ್ಕಾರದೊಳ್ ಪತ್ತಿಸುತ ಮೆರೆಯೆನಲ್
ನಾಚಯ್ಯಗಳ್ ವೆಂರೆ[5]ಯೆ ಕೈಲಾಸಕೈದಿವರ್[5] ಸದೆದ ಬಂಕೈಯ ಶರಣು ೨

ವಾಮನಮುನೀಶ್ವರಂ ಜ್ವಾಲಾಮುಖಿಗೆ ಬಂದು
ಶ್ರೀಮಹಾಶಿವಲೆಂಕಪಂಡಿತಾಚಾರ್ಯಪದ
ತಾಮರಸಕೆರಗಿ ಕೃತಕೃತ್ಯನಾದೆಂ ದೇವ ನಿಮ್ಮ ದರ್ಶನಮಾತ್ರದಿಂ
ಈ ಮಹಿಗೆ ನೀವುಬಿಡದವತರಿಸಿದಿರ[6]ದೇಕೆ[6]
ಪ್ರೇಮದಿಂ ನಿಮ್ಮ ಪೂರ್ವಾಪರ ಪ್ರಶಂಸೆಯಂ
ನೇಮದಿಂದರುಹಬೇಕೆನಲು ಚತುರಾಚಾರ್ಯರಾದಿಯಂ ಪೇಳುತಿರ್ದಂ ೩

---

1 ಸಮ್ಯಗ್ಮಯಮಹಾಮೂರ್ತಿ (ಜ) 2 ಭೇದ್ಯಜಗನೆದ್ಯದುಗ್ರಮೇಸ್ಸಾಕ್ಷಿ ಪದಲಿಂಗ ಹೃತ್ಸಂಗ ವಾಗ್ವಸನ ಧವಳಾಂಗನೆ (ಜ) 3 ಸಗ್ರಚಿತ ಶಲ್ಯವರಭೂಷಭವನಾಶಯಮಿವಾಗ್ರಾಡ್ಸರಾಡಾಧಿ ಸುರ ವಂದ್ಯ (ಜ) 4 ಜಯ (ಜ) 5 ದೈದೆ ಕೈಲಾಸಕವರಂ (ಜ) 6 ವನಿಜ (ಜ)

ಲಾಲಿಸೈ ಭಸ್ಮಸಂಛನ್ನಗಾತ್ರವನುಳ್ಳ
ಲೋಲಮುನಿಶಾರ್ದೂಲ ವಾಮನಮುನೀಶ್ವರನೆ
ಶೂಲಾಯುಧಾಂಕ ತ[1]ನ್ನ[1]ರ್ಧಾಂಗಿಯಾದಗಜೆನಿರತ ಚತುರಾಚಾರ್ಯರ
ಪೀಳಿಗೆಯನಾ ವೀರಶೈವ ಗುರುಮುಖ[2]ದಿರವ
ಬಾಳಿಯಿಂ[2] ಬೆಸಗೊಳಲ್ ನಸುನಗುತ ಪರಶಿವಂ
ಪೇಳಿದಂ ವಾತೂಳವೀರಾಗಮಪ್ರಮಾಣದೊಳದಂ ಉಸುರ್ವೆ ನಿನಗೆ ೪

ಎಲೆ ಮುನಿ[3]ಯೆ[3] ವೀರಶೈವ[4]ರ[4] ದೀಕ್ಷೆಯಿಲ್ಲದಿಹ
ಮಲದೇಹಿಯಮಳಲಿಂಗವ ಮುಟ್ಟಬಾರದೆಂ
ದೊಲಿದು ಪರಶಿವನೆ ಗುರುವಾಗನುಗ್ರಹವೆಸಗಲೆಂದು ಪಂಚಾಚಾರ್ಯರ
ನೆಲೆಯನಾಂತುದಿಸಿದೆವು ಪಂಚಲಕ್ಷಣಕ್ರಮದೊ
ಳಲಘುಪಂಚಾರ್ಣಮಾರ್ಗದೊಳಾವೆ ತಿಳಿಯಲ್ಕೆ
ಬಲವಂತ ಪಾವನ್ನಮೂರ್ತಿ ಕೃತಯುಗದೊಳಿಂತೆಂದನಾ ಗುರುಪಂಡಿತಂ ೫

ಗುರುಪಂಚಕಂಗಳಾವಾವೆನಲ್ ಸಾದಾಖ್ಯ
ವರನೀಶ್ವರಂ ಮಹೇಶ್ವರ ರುದ್ರನುಂ ಮಹೋ
ತ್ಕರತ್ರ[5]ಯುಕ್ಕಂ[5] ಮೂರ್ತಿಪಂಚಕಂ ತದ್ಭಾಗಬಾವನ್ನತತ್ವಂಗಳು
ಪರಿಯೆಂತೆನಲ್ಕೆ ಪರಶಿವಶಕ್ತಿಗಳ ತೇಜ
ದಿರವೇ ಸದಾಶಿವನುಮೀಶ್ವರನುಮಾಮಃಹೇ
ಶ್ವರ ರುದ್ರನಾ ತ್ರ[5]ಯುಕ್ಕಂ[5] ಮೂರ್ತಿಪಂಚಕಮೆ ಪಂಚವಿಧದಾಚಾರ್ಯರು ೬

ಶ್ಲೋಕ ॥ ವೀರಾಗಮೇ ॥
ಪಂಚಾಕ್ಷರಾತ್ಪ್ರವರ್ತನ್ತೇ ಆಚಾ[6]ರ್ಯಾಃ ಪಂಚವಿಶ್ರುತಾಃ[6]
ಪಂಚವರ್ಣಕ್ರಮೇಣೈವ ಭಾವನಾತ್ಪಂಚಸಂಜ್ಞಿಕಂ
ಸದಾಖ್ಯಮೀಶ್ವರಂ ಚೈವ ಮಾಹೇಶಂ ರುದ್ರಮೇವ ಚ
ತ್ರಯಾವಯವಮೂರ್ತಿ[7]ಶ್ಚೊ ಭಾವನಾ[7]ಕ್ಷರ ತತ್ಕಲಾ

ಆ ಸದಾಶಿವ•ನಮಳ ಪಂಚಮುಖ ದಶಭುಜ ವಿ
ಶೇಷದಿಂ ದಶಪಂಚನೇತ್ರ ದಶಹೇತಿಯಿಂ
ಭಾಸುರ ಸ್ಫಟಿಕಸಂಕಾಶದಿಂದಿರುವನೀಶ್ವರನೆ ದ್ವಿಪಾದದಿಂದ

---

1 ನಮ (ಕಗ) 2 ಸ್ಥಳದ । ಆಳಿಯಂ (ಜ) 3 ಪ (ಜ) 4 ದ (ಗ) 5 ಯಾವಹ (ಜ)
6 ರ್ಯಾ ಪಂಚಕೋದ್ಭವಂ (ಜ) 7 ಚೈವಭಾವನ್ನಾ (ಜ)
• ಜ ಪ್ರತಿಯಲ್ಲಿ ಈ ಭಾಗವಿಲ್ಲ

ಲೇಸಾದ ಶಿರವೊಂದರಿಂ ಚತುರ್ಭುಜಗಳಿಂ
ಮಿಸಲಳಿಯದ ಕಾಂತಿಯುಳ್ಳ ತ್ರಿನೇತ್ರದಿಂ
ಭೂಷಣಗಳಿಂದೊಪ್ಪುವಂಗದಿಂ ಸಿಂಹಪೀಠದೊಳು ವಿಭ್ರಾಜಿಸುತಿಹಂ ೭

ಇನ್ನು ಕೇಳ್ಳೆ ಮುನೀಂದ್ರಾ ಮಹೇಶ್ವರನೆ ತಾಂ
ನನ್ನಿಯಿಂ ಶಿರ ಸಾಸಿರದೆ ಸಹಸ್ರಾಕ್ಷಿಯಿಂ
ದುನ್ನತದ ಪದಸಹಸ್ರಂಗಳಿಂ ಸಾಹಸ್ರಭುಜದಿಂದೆ ರೈಸುತಿಹನು
ಚೆನ್ನೆಸೆವ ಚಾತುರ್ಭುಜದೆ ತ್ರಿನೇತ್ರಂಗಳಿಂ
ದುನ್ನತಿಯಿನೇಕಾಸ್ಯದಿಂ ವರಾಭಯದೆ ಸಂ
ಪನ್ನ ಮಹಘನಕಾಂತಿಯಿಂದ ಥಳಥಳಿಸುತ್ತ ರುದ್ರಂ ವಿರಾಜಿಸುತಿಹಂ ೮

ಚತುರಾಸ್ಯದಿಂದೆ ದ್ವಾದಶನೇತ್ರದಿಂದಷ್ಟ
ನುತಭುಜಗಳಿಂದೆ [1]ತನ್ವೇಕದೆ[1] ದ್ವಿಪಾದದಿಂ
ದತಿಶಯಗುಣತ್ರಯಾತ್ಮಕನಾದ [2]ತಚ್ಚತು[2]ರ್ಮೂರ್ತಿಯಿಂತೊಪ್ಪುತಿರಲು
ನುತಿವೆತ್ತ ಈ ಚತುರ್ವಿಧದ ಮೂರ್ತಿಗಳ ಸ
ನ್ನುತಮಾದ ಏತತ್ಕಲಾ ವಿವರಮೆಂತೆನಲ್
ಪ್ರತಿಯಿಲ್ಲದಾ ಶಿವಾ[3]ಮೂರ್ತ್ಯ[3]ಮೂರ್ತಿಯುಂ ಕರ್ತೃಕರ್ಮಸಾದಾಖ್ಯೆದು ೯

ಸಾದಾಖ್ಯೆದಾ ಸದಾಶಿವ ಕಲಾಮೂರ್ತಿ
ಯಾದ ವಿವರವ ವರಮುನೀಶನೇ ಕೇಳು ಮ
ತ್ತಾದರದ ರಸೆಗೆ ಭವಜಲಕೆ ಶರ್ವಂ ವಹ್ನಿಗಾ ರುದ್ರ ಮಾರುತಂಗೆ
ಮೋದವಾ ಭೀಮನಂಬರಕೆ ಮಾದೇವ ತಾ
ನಾದಿತ್ಯ[4]ನುಗ್ರ[4]ಚಂದ್ರಂಗೆ ಸೋಮಾತ್ಮಂಗೆ
[5]ಬೋಧಿಸಲ್[5] ಪಶುಪತಿಯು ಈಶ್ವರಕಲಾಷ್ಟಮೂರ್ತಿಗಳೆಂದು ತಿಳಿವುದಣುಗ ೧೦

ಒರೆವೆ ಶರ್ವ ಶಿವಂ ಮಹಾದೇವ ನೀಲಕಂಠ
[6]ನುರೆವೃ[6]ಷಧ್ವಜ [7]ವರೇ[7]ಶಾನ ಶಂಕರ ಭೀಮ
[8]ಹ[8]ರ ಪಿನಾ[9]ಕೀಂದುಶೇಖರ ವಿರೂಪಾಕ್ಷನು ಕಪರ್ದಿ[9] ಮೃಡ ವಾಮದೇವಂ
ಪರಮಭೂತೇಶನಾ ಶೂಲಿ ಸರ್ವಜ್ಞನ
ತ್ಯುರುತರ ಸ್ಥಾಣು ಪಾರ್ವತಿಪ್ರಿಯ ಮಹಾಕಾಳ
[10]ಕರೆಗೊರಲ ತಾಂಡವೇಶ್ವರನು[10] ಗಂಗಾಧರಗಣೇಶ್ವರಂ ಗಜ[11]ದೈತ್ಯಹಂ[11] ೧೧

---

1 ತನುವೇಕ (ಜ) 2 ತ್ರಯಾವಹ ಸು (ಜ) 3 ಮೂರ್ತಿ (ಜ) 4 ಸದ್ರ (ಜ) 5 ಯಾದಧಿಕ (ಜ) 6 ವೃ (ಕಗ) 7 ನೀ (ಜ) 8 ಕ(ಜ) 9 ಕಿಯು ಚಂದ್ರಶೇಖರ ಕಪರ್ದಿ ವಿರೂಪಾಕ್ಷ (ಜ) 10 ನುರಿವ ಮಹಾಧೀರ್ಘತಾಂಡವನು (ಜ) 11 ಧ್ವಂಸಿಯು (ಜ)

ಎಲೆ ಮುನಿಪ [1]ಪೇಳಲಿಪ್ಪತ್ತೈದುಮೂರ್ತಿಗಳ್[1]
ಸಲೆ ಮಹೇಶ್ವರನಮಳ [2]ಸತ್ಕ[2]ಲಾಮೂರ್ತಿಗ[3]ಳ
ನೊ[3]ಲವಿನಿಂ ಶಿವಮಹೇಶ್ವರ ರುದ್ರ ಶ್ರೀಕಂಠ ಶಂಭುಂವೀಶ್ವರರತಿಶಯಂ
ಬಲವಂತ ಮಾದೇವ ಪಶುಪತಿಯು[4]ಮಿಾ ರೀತಿ
ಯಲಿ ನೋಡೆ[4] ನೀಲಕಂಠಂ ವೃಷಧ್ವಜ ಹರಂ
ನೆಲೆಯಾದ ರುದ್ರರೇಕಾದಶಂ ರುದ್ರನ ಕಲಾಮೂರ್ತಿಗಳ್ ಭಾವಿಸೆ ೧೨

ಜಗದಾದಿ ಸೃಷ್ಟಿಕಾರಣನೇ ಭವಂ [5]ಮತ್ತ
ಮೊಗು[5]ಮಿಗುವ ಸ್ಥಿತಿಗೆ ಕರ್ತಂ ಮೃಡಂ ಮತ್ತೆ ತಾಂ
ಬಗೆಬಗೆಯ ಸರ್ವಸಂಹಾರಕ್ಕೆ ಮೂಲಿಗಂ ಹರನೆಂಬ ಹೆಸರನುಳ್ಳ
ಗುರುಮೂರ್ತಿತ್ರಯಗಳಿಂತರಿದು ನೋಡಲ್ಕೆ ತಾಂ
ಯಗಣಿತ ಗುಣತ್ರಯಗಳುಳ್ಳ ತ್ರಯಾ[6]ವಯವ[6]
ಮಗನೆ ತಿಳಿಯಲ್ಕಿವೇ ಬಾವನ್ನ ವರಕಲಾಮೂರ್ತಿಗಳ್ ಜಗಕೆ ಮೊದಲು ೧೩

ಪೇಳುವೆಂ [7]ಕಲೆಯ[7] ತ್ರಯದ ತ[8]ತ್ವಗಳೊಳೊಪ್ಪ
ವಾ[8] ಲಲಿತ ಪಂಚತತ್ತ್ವಗಳ ಶ್ರೇಣಿಯೊಳು ಸ
ಲ್ಲೀಲೆಯಿಂ ಬಾವನ್ನಮೂರ್ತಿಯ ಕಲಾಭೇದಮದರೊಳುದ್ಭವಮೆನಿಸುವ
ಸ್ಥೂಲಬಾವನ್ನಾಕ್ಷ[9]ರದ ಕೂಡಲೊ[9]ಗೆದ ಗುರು
ಜಾಲ ಪಂಚಾಚಾರ್ಯರೀಶನಿಂ ದೀಕ್ಷೆ[10]ಯಂ[10]
ತಾಳಿಯಮಳೈಕ್ಯಾಂಗ ಕಕ್ಷ ಶಿರ ಕರದಲ್ಲಿ ಧರಿಸುತ್ತೆ ಶಿವಲಿಂಗಮಂ ೧೪

ಇವರಿಂದೆ ದೀಕ್ಷೆಯಂ ಪಡೆವರಾರೆನೆ ಸದಾ
ಶಿವನಿಂ ಭವಾನಿ ದೀಕ್ಷೆಯನಾಂತು ಮೌಕ್ತಿಕದ
ಸವಿಶೇಷಲಿಂಗಮಂ ಶಿರದಲ್ಲಿ ತಳೆದಳಚ್ಯುತನೆ ಈಶ್ವರನ ಕೈಯಿಂ
ತವೆ ದೀಕ್ಷೆಯಾಂತಿಂದ್ರನೀಲಲಿಂಗವ ತನ್ನ
ಯವಿರಳದಯೆರ್ದೆಯಲ್ಲಿ ಧರಿಸಿದಂ ಕಮಲಸಂ
ಭವ ಮಹೇಶ್ವರನಿಂ[11]ದ[11] ಪಡೆವುತಾ ಶಿಲಾಮಯ[12]ದ ಲಿಂಗಮಂ ಪ್ರೀತಿಯಿಂದ[12] ೧೫

1 ಈ ಪೇಳ್ದಿಪ್ಪತ್ತೈದು ತತ್ವಗಳ್ (ಜ) 2 ಕ (ಜ) 3 ಕೇ।ಟೊ (ಜ) 4 ವತ್ಯಧಿಕ।ಭಲದಂಕ (ಜ) 5 ಕೇ।ಳೊಗು (ಜ) 6 ಯಂ (ಜ) 7 ಲಯ (ಜ) 8 ತ್ವಂಗಳೊಳೊಪ್ಪುವ(ಜ) 9 ರಂಸಮೇತೊ (ಜ) 10 ಯಿಂ (ಜ) 11 ದುಪದೇಶಮಂ (ಜ) 12 ಲಿಂಗಮಂ (ಜ)

ಧರಿಸಿಧಂ ಕಕ್ಷೆಯೊಳೆ ಇಂದ್ರನತಿಭಕ್ತಿಯಿಂ
ದಿರದೆ ದೀಕ್ಷೆಯ ಪಡೆದು ರುದ್ರನಿಂ ವಜ್ರಮಯ
ಪರಮಲಿಂಗವ ಕರದೊಳಾಂತನಂತಖಿಳ ಸುರಗಣ ಮುನೀಶ್ವರರು ನೋಡೆ
ವರಸ[1]ತ್ಯ[1]ಗುಣಮುಖ್ಯ [2]ಮಹಲಿಂಗ[2]ಮೂರ್ತಿಯಿಂ
ದುರುಕಾಮ್ಯ ಇಷ್ಟಾರ್ಥಫಲಗಳಂ ಕೊಡುವಧಿಕ
ಪರಿಪರಿಯ ಲಿಂಗಗಳ ಪಡೆದಾಂತರೆಂದು ನಿಗಮಾಗಮಂ ಪೇಳುತಿಹವು ೧೬

ನಂದಿಮಾಕಾಳ ದೂರ್ವಾಸ ಕಳಶಜ[3] ಶತಾ
ನಂದಾ[3] ದಧೀಚಿ ಪಾಣಿನಿ ಕಣಾದಂ ಕಪಿಲ
ಸ್ಕಂದನಾ ಭೃಂಗಿರಿಟಿ ವೀರಭದ್ರಂ ಚಂಡಿಕೇಶ್ವರಂ ಪ್ರಮಥರ್ಕಳ
ಗೊಂದ[4]ಣಂ ಯಮಪಾಶಹಸ್ತ[4] ಬಾಣಾಸುರಂ
ಸಂದ ದಶಕಂಠ ವಾಲ್ಮೀಕಿ[5]ಯು ವಸಿಷ್ಠ ತೃಣ
ಬಿಂದು[5] ಭಾರದ್ವಾಜ ಮುಂತಾದವರು ಪರಮ[6]ವೀರಶೈವರ್ಕಳಹರು[6] ೧೭

ಇಂ[7]ತಾ[7] ಸುರಾಸುರ ಪ್ರಮಥಪುಂಗವರು ಬಿಡ
ದಂತು ಪಂಚಾಧಿದೇವತೆಗಳುಂ ವೇದಾಳಿ
[8]ಯುಂ ತರುಣ ಕೇಳು[8] ಹರಕಂಠಾದಿ ಮುನಿಮನಂ[9]ಗಳುಂ ಲಿಂಗಮಂ ಧರಿಸಿಯೆ[9]
ಸಂತತಂ ತತ್ಪ್ರಸಾದ[10]ದ ಸೇವೆಯಿಂ ಧ್ಯಾನ
ದಿಂ ತಿಳಿವಿನಿಂದರ್ಚಿಸುವದರಿಂ ಧಾರಣೆಯ
ನಾಂತಿರ್ಪ ಭಾವದಿಂ ದೀಕ್ಷ್ಯರಾಗೀ ಜಗವ ಪಾವನವ ಮಾಡುತಿಹರು[10] ೧೮

ಈ ತೆರದೆ ವಾತೂಳತಂತ್ರದಿವ್ಯಾಗಮಂ
ಖ್ಯಾತವೀರಾಗಮಂ ಮುಖ್ಯಾಗಮಂ ನಿಗಮ
ವ್ರಾತಗಳ್ ಸಿದ್ಧ ಗಂಧರ್ವ ಕಿನ್ನರ ಯಕ್ಷ ರಾಕ್ಷಸರ್ ದಿಕ್ಪಾಲರು
ಭೂತಗಳ್ ಮನುಮುನಿಗಣೇಶ್ವರರ್ ಹರ್ಯಜರು
ಸಾತಿಶಯಲಿಂಗಮಂ ಧರಿಸಿ ಭಜಿಸುವರೆಂದು
ಪ್ರೀತಿಯಿಂ ಪೇಳುತಿಹವಿದುವೆ ಕೃತಯುಗಧರ್ಮ ವಾಮನಮುನೀಶ ಕೇಳು ೧೯

---

1 ತ್ವ (ಜ) 2 ತ್ರಯಾವಯಸು (ಜ) 3 ನಾಮಿ।ಯಂದದ (ಜ) 4 ಣಜಹರಿಸಹಸ್ರಾಕ್ಷ (ಜ) 5 ವಶಿಷ್ಠಾತ್ರಿಮುದ।ಮೊಂದಿದಾ ಗೌತಮನು (ಜ) 6 ಶೈವರ್ಕಳು (ಜ) 7 ತಖಿಳ (ಜ) 8 ಯಂತ ಮಿತ (ಜ) 9 ಗಳ್ ಶಿವಲಿಂಗಧಾರಯಂತಿ ಯಜಂತಿ (ಜ) 10 ಸೇವನಾದ್ಧ್ಯಾನಾದಂತರ್ಚನಾಧಾರಣಾ ದಪಿಯಿಂತೆಂದು ಮುಂತೆ ಜಾತಾದರ್ಶನ ಕರ್ತಾರಹ ಶ್ರಾವಯಂತಿ ಜಗತ್ರಯಮೆನೆ (ಜ)

ದಿವ್ಯಾಗಮೇ ॥ ಶ್ಲೋಕ ॥

ಭವಾನೀಮೌಕ್ತಿಕಂ ಲಿಂಗಂ ನೀಲಲಿಂಗಂ ಹ[1]ರಿ[1]ಸ್ತಥಾ
ಶೈಲಜಂ ಪದ್ಮಪುತ್ರಶ್ಚ ವಜ್ರಲಿಂಗಂ ಸುರೇಶ್ವ[2]ರಃ[2]

ಸಾಕ್ಷಿ ॥
ಭವಾನೀಮಂಸ್ತಕೇ ಲಿಂಗಂ ವಿಷ್ಣುಶ್ಚೋರಸ್ಥಲೆ ತಥಾ
ಕಕ್ಷೇ ಕಮಲಪುತ್ರಶ್ಚ ಸುರೇಂದ್ರಶ್ಚ ಕರೇ ತಥಾ

ತತ್ರೈವ ॥
ಕಕ್ಷೇ ಬ್ರ[3]ಹ್ಮಾಂತ[3]ರೇ ವಿಷ್ಣುಃ ಕಣ್ಠೇ ಮಾಹೇಶ್ವರ[4]ಸ್ಸದಾ[4]
ವ್ಯೋಮಾತೀತಸ್ತು ಶಿರಸಿ ಮುಖೆ ರುದ್ರಶ್ಚ ಧಾರಯೇತ್
ಈಶ್ವರೋಪ್ಯಮ[5]ಳೈಕಂ[5] ಚ ಉತ್ತಮಾಂಗೇ ಸದಾಶಿವಃ
ಇತಿ ದೇವಾಸ್ಸದಾಧೃ[6]ತ್ವಾ ಯಜನ್ತೇ ಲಿಂಗಮುತ್ತಮಂ[6]

॥ಸಾಮವೇದೇ॥ ವಾಕ್ಯಮ್ ॥

ಜ್ಯೋತಿರೇವಸಮ್ಯಕ್ಸಂದಧಾತಿ ॥ಕಿಂಚ॥ ಅಥರ್ವಣವೇದೆ॥
ಚತುರ್ವೇದಾಃ ॥ ಲಿಂಗಂ ಧಾರಯಂತಿ ॥ ತತ್ರಯೋ ವೇದಾಃ ॥ ಲಿಂಗಂ ಧಾರಯಂತಿ॥
ಋಷಿಯಃ ಶಿವಲಿಂಗಂ ಧಾರಯಂತಿ ॥ ಅಜಹರಯಃ ಶಿವಲಿಂಗಂ ಧಾರಯಂತಿ॥
ಸುರೇನ್ದ್ರದೈತ್ಯಾಃ॥ ಶಿವಲಿಂಗಂ ಧಾರಯಂತಿ॥ ತಸ್ಮಾದ್ದೇವಾ ಶಿವಲಿಂಗಂ ಧಾರಯಂತಿ॥
ಕಿಂಚ॥ ವಾತೂಳತನ್ತ್ರೆ ಬ್ರಹ್ಮವಿಷ್ಣುಸುರೇನ್ದ್ರಾದಿದೇವತಾಃ ಪರಯಾಮುದಾ॥

ಶಿರೋಭಿರ್ಧಾರಯನ್ತ್ಯೇತೆ ಶಿವಲಿಂಗಮಹರ್ನಿಶಂ
ಅಕ್ಷಪಾದಾದಯಸ್ಸರ್ವಶಕ್ತ್ಯಯಸ್ಸರ್ವದಾ ಮುಂದಾ
ಧಾರಯನ್ತ್ಯಳಿಕಾಗ್ರೇಷಂ ಶಿವಲಿಂಗಂ ಚ ಸಾದರಂ
ವಿನಿರ್ಭಿದ್ಯ ತಥಾಗಾ[7]ತ್ರಂ[7] ವಿಮರೇ ಲೋಹಪಾತ್ರಕೇ
ಶಿವಲಿಂಗಂ ವಿನಿಕ್ಷಿಪ್ಯ ಪೂಜಯನ್ತಿ ಚ ರಾಕ್ಷಸಾಃ
ಕಣ್ಠೇಷಂ ಹರಕಣ್ವಾದಿ ಮುನಯೋ ವನವಾಸ್ತಥಾ
ಸರ್ವದಾ ಶಿವಲಿಂಗನ್ತು ಧಾರಯಂತಿ [8]ಪ್ರಯತ್ನತಃ[8]
॥ವ್ಯಾಸವಚನಂ ಶ್ರೂಯತಾಂ ॥

1 ರೆ (ಜ) 2 ರಂ (ಜ) 3 ಹ್ಮಕ (ಜ) 4 ಸ್ಥತಾ (ಜ) 5 ಳೋಕ್ಯ (ಜ) 6 ತ್ವಲಿಂಗಂಚ ಯಜತೆ ಸದಾ (ಜ) 7 ತ್ರ (ಗ) 8 ಯಜಂತಿಚ (ಜ)

ಶ್ಲೋಕ ॥

ಸುರಾಸುರೇನ್ದ್ರಸವ್ಯೌಳಿ ನಿರ್ಮಾಲ್ಯಚರಣಾಂಬುಜಂ
ಗಂಗಾಧರಂ ಪ್ರಣಮ್ಯಾಹಂ ಕಲಾನಿಧಿಕಲಾಧರಂ ॥

ಇತಿಹಾಸೇಷು ವೇದೇಷು ಪುರಾಣೇಷು ಪುರಾತನೈಃ
ಮಹರ್ಷೀಭಿರ್ವರ್ಣಹಾದೇವೋ ಮಹನೀಯಃ ಪ್ರತಿಷ್ಠಿತಃ ॥

ತಥಾಗಸ್ತ್ಯಾದಿಮುನಯೊ ದೂರ್ವಾಸಾ ನನ್ದಿಕೇಶ್ವರಃ
ಮಹಾಕಾಳೋ ದಧೀಚಿಶ್ಚ ಪಾಣಿನಿಶ್ಚ[1]ಕ[1]ಣಾದಕಃ ॥

ಸ್ಕನ್ದೊ ಭೃಂಗಿರಿಟಿ ವೀರಭದ್ರಶ್ಚ ಪ್ರಮಥಾದಯಃ
ಅಜೊ ಹರಿಸ್ಸಹಸ್ರಾಕ್ಷೊ ಬಾಣಾಸುರ ದಶಾನನೌ ॥

ವಸಿಷ್ಠ ರುರು ವಾಲ್ಮೀಕಿ ಭಾರದ್ವಾ[2]ಜೋ[2]ತ್ರಿ ಗೌತಮಃ
ಏತೇ ಪರಮಶೈವಾಶ್ಚ ಭಜನ್ತಿ ಪರಯಾ ಮುದಾ ॥

ಪ್ರಸಾದಸೇವನಾ ಧ್ಯಾನದರ್ಚನಾದ್ಧಾರಣಾದಪಿ
ಜಾತಾ ದರ್ಶನಕರ್ತಾರಃ [3]ಪಾ[3]ವಯನ್ತಿ ಜಗತ್ತ್ರಯಂ ॥

ಇಂತಾ ಸದಾಶಿವೇಶ್ವರ ಮಹೇಶ್ವರ ರುದ್ರರಂತು
ಕೃತಯುಗದೊಳುಪದೇಶಿಸಲ್ ಸರ್ವರು ಸ
ಮಂತು ಶಿವಲಿಂಗಧಾರಣ ಪೂಜೆಯಿಂದೆಸೆವುತಿರಲು ತ್ರೇತಾಯುಗದೊಳು
ಮುಂತಾ ಗಣೆ ಶ್ವರರ ಸಾಂಪ್ರದಾಯದೊಳುದಿಸಿ
ದಂತು ಚತುರಾಚಾರ್ಯರಾರಾರೆನಲ್ಕಮಳ
ಸಂತಸದೆ ಏಕಾಕ್ಷರಂ ದ್ವ್ಯಕ್ಷರಂ ಸುಪಂಚಾಕ್ಷರ ಷಡಕ್ಷರಾಖ್ಯಂ ೨೦

ಇವರು ತ್ರೇತಾಯುಗದೊಳಾಚಾರ್ಯರೆನಿಸಿ ಜಗ
ಕವಿರತಂ ಉಪದೇಶಮಂ ಮಾಳ್ಪರೈ ಕೇಳಂ
ಕುವರ ದ್ವಾಪರದೊಳಾ ರೇಣುಕಂ ದಾರುಕಂ ಗೋಕರ್ಣ ಶಂಖುಕರ್ಣಂ
ತವೆ ಗುರುಗಳೆನಿಸಿ ಲೋಕಕ್ಕೆ ದೀಕ್ಷೆಯ ಮಾಳ್ಪ
ರವಿರಳಾತ್ಮಕದ ಚತುರಾಚಾರ್ಯರಂತವರೊ
ಳಿವರೀರ್ವರುಂ ಮತ್ತೆ ಜಗದಿ ಗಜಕರ್ಣಘಂಟಾಕರ್ಣರೆಂದುಸಿರ್ವರು ೨೧

ಲಾಲಿಸೈ ದ್ವಾಪರದ ರೇಣುಕಗಣೇಶ ತಾಂ
ಲೀಲೆಯಿಂ ಕಲಿಯಲ್ಲಿ ರೇವಣೇಶ್ವರನಾದ
ಪೇಳಲೇಂ ದಾರುಕಗಣೇಶ್ವರಂ ಮರುಳೇಶನಾದನಾ ಕಲಿಯುಗದೊಳು

---

1 ರ (ಪ) 2 ಜಾ (ಜ) 3 ಶ್ರಾ (ಜ)

ಸ್ಥೂಲವಹ ಶಂಖುಕರ್ಣಾಚಾರ್ಯ ಕಲಿಯುಗದ
ಮೂಲದೇಕೋರಾಮನಾದ ಗೋಕರ್ಣ ಶಶಿ
ಮೌಳಿಯಪ್ಪಣೆಯಿಂದಲಾಂ ಪಂಡಿತಾರಾಧ್ಯರೆನಿಸಿ ಧರೆಗವತರಿಸಿದೆಂ ೨೨

ಕೃತಯುಗದ ನಾಲ್ವರಾಚಾರ್ಯರೊಳಗೀಶ್ವರನೆ
ಮತಿವಂತ ರೇವಣೇಶ್ವರನೆ ಸದಾಶಿವಂ
ನುತ ಮರುಳಸಿ[1]ದ್ಧನೀಶ್ವರ[1] ಮಹೇಶ್ವರನೆ ಏಕೋರಾಮ ರುದ್ರತತ್ವಂ
ಚತುರನೇ ಪಂಡಿತಾಚಾರ್ಯರಾಗುಂದಿಸಿ ಈ
ಕ್ಷಿತಿಯನುದ್ಧರಿಸಲ್ಕೆ ಬಂದೆವಾರಾಧ್ಯರು
ನ್ನತವಾದಿಯಾಗಮಪ್ರಮಾಣದಿಂ ಶಿವನು ಶಿವೆಗುಸುರ್ದಂದದಿಂ ಪೇಳ್ದವು ೨೩

ವೀರಾಗಮೇ ॥ ಶ್ಲೋಕ ॥

ಸರ್ವದಾ ದೇವದೇವೇಶಸ್ಸರ್ವೇಶೊ ರೇವಣಪ್ರಭುಃ
ಸದಾಶಿವಶ್ಚ ಲೋಕೇಶೊ ಮರುಳಶ್ಚ ದ್ವಿತೀಯಕಃ ॥
ಮಹೇಶ್ವರಃ ಶಿವಸ್ಸಾಕ್ಷಾತ್ ರಾಮದೇವೋ ಮುನೀಶ್ವರಃ
ರುದ್ರರೂ[2]ಪಃ[2] ಶಿವಸ್ಸಾಕ್ಷಾತ್ ಪಂಡಿತಾರಾಧ್ಯದೇಶಿಕಃ ॥

ಇಂತು ನೀವೊರೆದ ಚತುರಾಚಾರ್ಯರಾದಿಯನ
ನಂತಹರುಷದಿ ಕೇಳಿ ಧನ್ಯನಾದೆನುಯಿನ್ನು
ಮುಂತೆ ಗುರುಶಿಷ್ಯರ ಸುಲಕ್ಷಣವ ಪೇಳಿ ಮುಕ್ತನ ಮಾಳ್ಪುದೆನಲು ನಲಿದು
ಕಂತುರಿಪು ಶಿವಲೆಂಕಮಂಚಣಾರಾಧ್ಯರಾ
ಗಂತು ನಿರವಿಸುತಿರ್ದರಾಗ ಶಿವರೂಪವನ
ನಂತಮಂ ಗುರುಶಿವನ ಭಕ್ತಿತತ್ಪರವಾಗೆ ಗುರುಲಲಾಮಂ ಮುನಿವರ ೨೪

ಇದುವೆ ನಿತ್ಯಾನಿತ್ಯದವಿವೇಕಮಂ ಪಡೆದು
ಪದುಳದಿಂದಿಹಪರಾಪೇಕ್ಷೆಯಿಃಲ್ಲದನೆ ಗುರು
ವಿದಿತ ಶಮ ಮುಖ್ಯ[3]ಷಟ್ಸುಗುಣಮು[3]ಳ್ಳವನೆ ಸಚ್ಚಾರಿತ್ರಸಂಪನ್ನನೆ
ಮುದದೆ ಮೋಕ್ಷಾಪೇಕ್ಷೆ[4]ಯಲ್ಲಿ ರತಿ[4]ಯುಳ್ಳವಂ
ಗಧಿಕ ಗುರುಸಚ್ಚಿದಾನಂದ ಸ್ವರೂಪಮಂ
ಸದಮಳಪ್ರಕಾಶಮಂ ಮಾಡಿ ಪರಿಪೂರ್ಣಬೋಧಾಮಯಂ ಗುರುವಲ್ಲಭಂ ೨೫

---

1 ದ್ಧೇಶ್ವರಂ (ಜ) 2 ಪೋ (ಜ) 3 ಷಟ್ಸಮಾಧಿಯು (ಜ) 4 ಲವಲವಿಕೆ (ಜ)

ವಿಧಿ ನಿಷೇಧದ ವಿವರಮುಳ್ಳಾತ ಶ್ರೀಗುರುವು
ಮೃದುಳಮನದಿಂ ಕೃಪಾಮೂರ್ತಿಯಹ ಸದ್ಗುರುವು
ಮದನಾಗಮವ ನೋಡದಾಗಮಾಮ್ನಾಯ ಶ್ರುತ್ಯರ್ಥಂ ಷಡಂಗಂಗಳಂ
ವಿಧಿಸಬಲ್ಲವನೆ ಗುರು ಗುರುಸಂಪ್ರದಾಯದೊಳ
ಗುದಿಸಿ ದೀಕ್ಷಾತ್ರಯ ಸುಸಂಪನ್ನನೇ ಗುರುವು
ವೊದವಿ ಶಿವಪೂಜಾಪರಾಯಣಂ ಭಸ್ಮರುದ್ರಾಕ್ಷಧಾರಕ ಗುರುವರಂ ೨೬

ವರ ಜಟಾಮಕುಟ ಮುದ್ರಾ ಪಂಚಭೂಷಣಂ
ಹರನಾವತಾರ ಗುರು ಈಶ್ವರಕುಲೋದ್ಭವಂ
ಪರಮತರ ವೀರಶೈವಾಚಾರ ಸತ್ಕಲಾಸಂಪನ್ನ ಗುರುತಿಲಕನು
ನಿರತ ಶುದ್ಧಾಂಗಪೌರಾಣಜ್ಞ ವಾಗ್ಮಿ ಬಂ
ಧುರ ಶಾಂತಿಕೋವಿದಂ ಸದ್ಗುಣಕದಂಬ ವಾ
[1]ಗ್ಭರಿತ[1] ಶೈವಾನುಭವಸಂಪನ್ನ ರಾಗಾದಿ ದುರ್ಗುಣವಿಹೀನನಾರ್ಯಂ ೨೭

ವಿನಯ ವಿತರಣ ವಿದ್ಯೆ ವೈರಾಗ್ಯಮೈಶ್ವರ್ಯ
ಘನತೆಯುಳ್ಳವನೆ ಗುರುತ್ರಿಕರಣದಿ ಶುದ್ಧನಾ
ಗನುವಿನಿಂದಿರ್ಪಾತ ಗುರು ಮನದೆ ಮಂತ್ರಜಾಪಕನಾಗಿ ಕರಣೇಂದ್ರಿಯಂ
ಬಿನುಗೆಂದು ನೀಕರಿಸಿ ಚಿನ್ಮಾತ್ರಭಾವದೊಳ
ಗನವರತ ರಾಜಿಸುವ ಸದ್ಧರ್ಮರೂಪನಹ
ಮುನಿಜನೋತ್ತಮ ಗುರುವ ಮನವೊಲ್ದು ಭಕ್ತಿಯಿಂದೆಯ್ದುವನೆ ಶಿಷ್ಯನಣುಗ ೨೮

ಸ್ವಾನುಭವ ಸದ್ವಾಸನಾ[2]ಭಾವಯುತನಾಗ[2]
ನೂನವೇದಾಗಮೋಕ್ತಿಗಳಿಂದನಿ[3]ತ್ಯಮಂ
ದೀನವ್ಯಲೋಕಮಂ ನೇತಿಗಳೆದಾತ್ಮಸ್ವರೂಪಮಂ ತಿಳಿಯಲಾಗಿ
ಜ್ಞಾನವೆಂಬಾದರ್ಶದಲ್ಲಿ ಪ್ರತಿಬಿಂಬತೆಯ
ತಾನಾನುತಿರ್ಪ ಪರಮಾತ್ಮನೆಂತಿಹನೆಂದು
ಮಾನಸದಿ ತಿಳಿಯೆ ಶ್ರೀಗುರುವಂಘ್ರಿಯಂ ಸೇರಿ ಬಿಡದಾತನೇ[3] ಶಿಷ್ಯನು ೨೯

ಕಡೆಯ ಪಿಂಡವನಾಂತ ಜೀವನೇ ಪಿಂಡಪೈ
ತಡೆಯದಾತ್ಮಾನಾತ್ಮತತ್ವ[4]ವಿಜ್ಞಾನದಿಂ
ದೆ[4]ಡೆವಿಡದ ಪಿಂಡವಜ್ಞಾನಿಯೋ ಸಂಸಾರಕಲಸಿ ಶ್ರೀಗುರುವಿನಡಿಯಂ

1 ನ್ನಿರುತ (ಜ) 2 ತ್ಮದೇಹಿಯು ತಾ (ಜ) 3 ತ್ಯಾನಿತ್ಯ ನವ್ಯವಿವರವನುಳ್ಳವನೆ ಶಿಷ್ಯ ಕಣಾ ಅಂ ಬ್ರಹ್ಮಮೆನಿಸುವವು ಜ್ಞಾನೆ ತದ ರದರ್ಶದೊಳು ಪ್ರತಿಬಿಂಬಮಾನ ಭಾವಾಭಾವದಿಂದೆಸೆವನೆ ಶಿಷ್ಯನೇನೆಂಬೆನಿಂತೀತ ಗ ರುವಿನೊಳ್ ನಿಷ್ಠೆಯಿಂ ರಾಜಿಪಾತಂ (ಜ) 4 ಜ್ಞಾನಿಯೆ ತಾ । ನೆ (ಜ)

# ಒಂದನೆಯ ಸಂಧಿ

ಸೂಚನೆ :

ವರಪಂಡಿತಾರ್ಯ ಚತುರಾಚಾರ್ಯರಾದಿಯಂ
ಪರಮಗುರಂಶಿಷ್ಯರಿರವಂ ಮುನಿಪಗೊರೆದುದಂ
ನಿರವಿಸಿದಿರಿನ್ನು ದೀಕ್ಷಾಕಾಲ ಮಂಟ[1]ಪೋಪಕರಣಂಗಳ[1] ಪೇಳ್ವುದು

ಅಕ್ಷಪಾದಾದ್ಯಖಿಳ ನಿಷ್ಠಮುನಿಜನರಕ್ಷ
ಉಕ್ಷವಾಹನ ವಿಶ್ವಜನಕ ವಿ[2]ಶ್ವಂಭರನೆ[2]
ಕಕ್ಷ ಕರತಳ ಕಂ[3]ಠ ಕೂರ್ಚೋತ್ತಮಾಂಗ ಸಲ್ಲಿಂ[3]ಗಾಂಕ ಶರಣಪಕ್ಷ
ಲಕ್ಷ ನಿರ್ಲಕ್ಷ ಯಮದುಷ್ಟದಾನವ ಶಿಕ್ಷ
ಪಕ್ಷಿವಾಹನ [4]ಪದ್ಮ[4]ನೇತ್ರ ಪದ[5]ಯುಗ್ಮಾಂಕ
ಶಿಕ್ಷಮಯಕೇಶ ಭವಭಯಹರ[5] ವಿರೂಪಾಕ್ಷ ಜಯ [6]ದೇವ ಚ[6]ನ್ನಮಲ್ಲ ೧

ಜಾತಿವೈರದೊಳಂಗಹೀನ[7]ನಿವನೆಂದೆನಲು[7]
ಜ್ಯೋತಿರ್ಮಯನನೊಲಿಸಿ ಸೌಂದರಾಂಗವ ಪಡೆಯೆ
ಮಾತೇನೆನೆಲ್ ರಾಯ ಖತಿಯಿಂದ ಕರವ ಕಡಿದಾಗ ಪೂರ್ಣ್ಣತಿಮಂದದೊಳು
ಭೂತೇಶನಂ ನುತಿಸಂತಾಕ್ಷಣಂ ಕೈಬಡೆದು
ಖ್ಯಾತಿವೆತ್ತತುಳ ಶಿವಗಣಪದಕೆ ಸಂದ [8]ನಿ
ರ್ಣೀತ[8]ರಾದತಿಶಯ ಮಯೂರ ಬಾಣರ್ಗೆಯಾಂ ಪ್ರೀತಿಯಿಂ ನತನಪ್ಪೆನಂ ೨

ಎಲೆ ಗಿರೀಶ್ವರನೆ ನೀ ಕೇಳು ದೀಕ್ಷಾ ಕಾಲ
ಮಲಘುತರ ಮಂಟಪೋಪಕರಣಂಗಳನು ನಿನ
ಗೊಲವಿನಿಂ ನಿರವಿಸುವೆನುರೆ ಶರತ್ಕಾಲ ವೈಶಾಖ ಶೋಭನ ಮಾಸವು
ಸಲೆ ಮಾರ್ಗಶಿರ ಫಾಲ್ಗುನ ಜ್ಯೇಷ್ಠ ಮಧ್ಯಮಂ
ನೆಲೆ ಮಾಘಮಾಷಾಢಮಂವು ಕನಿಷ್ಠಂ ಚೈತ್ರ
ಮಲಘು ಶ್ರಾವಣ ಭಾದ್ರಪದ ಪುಷ್ಯ ನಾಲ್ಕು ನಿಂದ್ಯಂ [9]ನೋಡಲಿವರಲ್ಲಿಯೆ[9] ೩

---

1 ಪವನಾಚಾರ್ಯರುಪಕರಣಮಂ (ಜ) 2 ಶ್ವತಹ ಚಕ್ಷು (ಜ) 3 ಶೋತ್ರಮಾಂಗಾದಿ ಸ್ಥಳಲಿಂ (ಜ) 4 ಪಿತಾ (ಜ) 5 ಲಕ್ಷ್ಮಂತರಿಕ್ಷ ಮಹಾ ಕೇಶವಭಕ್ತ ವಿಷಮಾಕ್ಷ (ಜ) 6 ಚ (ಜ) 7 ನೆನೆ ನಿಸಿ ಯಲ್ಲಿ (ಜ) 8 ಪುನೀತ (ಜ) 9 ವಿವರ ಮಾಸಂಗಳಂ (ಜ)

ಅಷ್ಟಮಸ್ಥಾಗ್ರಹಾಸ್ಸರ್ವೇನ್ಯೈವೇಷ್ಟಾ ದ್ವಾದಶ ಸ್ಥಿತಾಃ
ಶುಕ್ರೇ ಲಗ್ನಗತೇ ಪ್ರೌಢೇ ಕೇಂದ್ರಸ್ಥಾನೇ ಬೃಹಸ್ಪತೌ
ನಶ್ಯಂತಿಸಕಲಾದ್ದೋಷಾ ಶಮ್ಭುನೈವಮುದಾಹೃತಂ ॥

ಪಿಂದೆ ಪೇಳ್ದುಪದೇಶಕಾಲಲಕ್ಷಣಮಂ ತಾ
ನಂದವಡೆದಾ ಪುರಾಣಪ್ರಮಾಣಂ ಕೇಳ್
ಮುಂದಂಸರ್ವ ವೀರಾಗಮೋತ್ತರದ ವೀರಮಾಹೇಶ್ವರ ಸುತಂತ್ರದಲ್ಲಿ
ಇಂದಂಧರನರ್ಧಾಂಗಿಗಂಸುರ್ದ ಪರಿಯೆಂತೆನ
ಲ್ಕಂದದಿಂ ರವಿಯುತ್ತರಾಯಣವನೆಯ್ದೆ ಗಣ
ವೃಂದ ಶಿಷ್ಯರಿಗೆ ದೀಕ್ಷಾಕಾಲಮೊನು ಶುಭಲಗ್ನತಿಥಿಯುಂ ಬಯಸುವರು ೮

ಶಶಿ ತಾರೆಗಳ ಬಲಂ ಕೂಡಿದರೆ ತಿಥಿ ವಾರ
ಪ್ರಸರ ತಾರಾಯೋಗ ಕರಣ ಪಂಚಕಮಿಶ್ರ
ವಿಷಮಂವಿಲ್ಲದೆ ಬೆರೆದ ಪಂಚಾಂಗ ಸುಪ್ರಸನ್ನತೆಯುಳ್ಳ ಗುರು ಶುಕ್ರರ
ಸಸಿ[1]ನೋದಯದ[1] ಸಮಯವೇ ಮಹಾಲಗ್ನ ವಂ
[2]ತ್ತ[2]ಸಮ ಸುರಗುರು ಕಾವ್ಯ[3]ಬುಧರು[3] ವಿಧುವೃಷ್ಟಿಯಿಂ
ದೊಸಗೆಯೊಳ್ ಕೂಡೆ ಶುಭ ದೋಷಾಲ್ಪಮಧಿಕಗುಣ [4]ಗುರುಗಳಿವ[4] ಶೋಧಿಸುವದು ೯

ಶುಭ[5]ಮೊವುದಶ್ವಿನಿಯು ಯಮತಾರೆಯುಂ ವಹ್ನಿ
ಯುಭಯಂವು ಸುಖಾಪ್ತಿಯುಂ ರೋಹಿಣಿಯು ಮೃಗಶಿರೆಯು
ಪ್ರಭುಗಳೀವಂತೆ ಸಂತುಷ್ಟರಾದವರೀವುದೈ ಪೂರ್ಣಶಶಿಯೋಗದಿ[5]
ವಿಭವದಿಂದಾಚಾರನಿಷ್ಠೆಯಂ ತೋರಿಸುಗು
ಪ್ರಭೆಯಾದ ರುದ್ರನಕ್ಷತ್ರಸಾಯುಂಜ್ಯವಂ
[6]ವಿಭವದಿಂದೀ[6]ವುದೆಲೆಯದಿತಿನಕ್ಷತ್ರ ತತ್ವಜ್ಞಾನವಂ ಲಭಿಪುದು ೧೦

ವರ ಪುಷ್ಯತಾರೆ ಗುರುಭಕ್ತಿಯಂ ಮಾಳ್ಪುದೆಲೆ
ಯುರಗನಕ್ಷತ್ರಮೊವುದು ತಮೋಜ್ಞಾನವಂ
[7]ಭರದೊಳಾಯು[7]ಕ್ಷೀಣವಂ ಮಾಳ್ಪುದಾ ಪಿತೃತಾರೆ ಬಳಿಕಾ ಫಲ್ಗುಣಿ
ಅರಿವು ವೈರಾಗ್ಯ ಭಕ್ತಿಗಳ ಕೆಡಿಸುವುದು ಉ
ತ್ತರೆ ತಾರೆ [8]ಶಿವಚಿಂತೆಯೊವುದೆ[8] ಭಗರ್ಕ್ಷಮಿಂ
ತಿರದೆ ತೈಜಸ[9]ಬುದ್ಧಿಯಂ[9] ಕೊಡುಗು ಚಿತ್ತೆ ಚೇತನವಿಕಾರವನೀವುದು ೧೧

1 ನುದಯ (ಗ) 2 ಲ್ಲ (ಗ) 3 ಚಾಂದ್ರಿಗಳು (ಗ) 4 ಮೆಂತೆಂತು (ಗ) 5 ಮಾದ ನಕ್ಷತ್ರಂಗಳಿಂ ಬೆರೆದ ಕವಿ ವಿಬುಧ ಗುರುಗಳ ದಿವಸದೆಳ್ ನೆರೆದಶ್ವಿನಿತಾರೆ ಶುಭವಾಗಿ ದುರಿತಮಂ ಹರಿಸುವುದು ರೋಹಿಣಿಯೆ ಶಶಿಪ್ರಭೆಯ ಮಾಡಿ ಬಳಿಕಂ (ಜ) 6 ತಭಯುಮೀ (ಜ) 7 ತರರಯಾ (ಜ) 8 ಜ್ಞಾನ ಮೊವುದೈ (ಜ) 9 ಜ್ಞಾನವಂ (ಜ)

ಪವನನಕ್ಷತ್ರದೊಳ್ ದೀಕ್ಷೆಯಂ ಮಾಡೆ ಬಾಂ
ಧವ ವಿಯೋಗಂ ಮಾಳ್ಕು ಪುತ್ರಮಿತ್ರಾದಿ ಪರಿ
ಭವವ ಮಾಳ್ಪುದು ಇಂದ್ರ ವಹ್ನಿತಾರೆಗಳು ಶಿವಲಿಂಗದ್ರೋಹವ ರಚಿಪವು
ಶಿವಜ್ಞಾನಕರ ಮೈತ್ರನಕ್ಷತ್ರ ಮತ್ತೇ ಕೇ
ಳವಿರಳದ ಇಂದ್ರನಕ್ಷತ್ರ ಶಿವಭಕ್ತಿಯನೆ
ತವೆ ತೋರ್ಪುದೈ ಮೂಲ ತನ್ನ ಭಾವವ ಕೆಡಿಸುವಜ್ಞಾನಮಂ ಕಾಣಿಕುಂ ೧೨

[1]ಜಲತಾರೆ ಶುಭವ ಕೆಡಿಸುವುದುತ್ತರಾಷಾಢೆ
ಫಲಸಿದ್ಧಿಯುಂಟುಮಾಡುವುದು ಶ್ರವಣಂ ದೀಕ್ಷೆ
ಗಳವಡದು ಕೇಡನೇ ತಂದೀವುದೈ ಧನಿಷ್ಠೆಯು ಮನೋವ್ಯಗ್ರಮಾದ[1]
ನಲವಿನಿಂ ಶತತಾರೆ ಸುಜ್ಞಾನಬೋಧೆಯಂ
ತಳುವದೇ ಮಾಳ್ಕು[2]ಮಾ ಪೂರ್ವಭದ್ರದ[2] ತಾರೆ
ಸಲೆ ಶಿವಾದ್ವೈತಜ್ಞಾನವ ಕೆಡಿಪುದುತ್ತರಾಭಾದ್ರ[3]ನಾಮಕದ ತಾರೆ[3] ೧೩

ವರ ಷಟ್ಸ್ಥಲಬ್ರಹ್ಮ ಸೂಚನೆಗೆ ಕಾರಣಂ
ಪರಮ ರೇವತಿ ತಾರೆ ಶಿವ[4]ಕಲಾ[4]ಸಿದ್ಧಿ[5]ಯ
ನ್ನಿ[5]ರದೀವುದೈ ಮತ್ತೆ ಜ್ಞಾನ ಮುಕ್ತಿಯ ಕೊಡುಗು ಸಪ್ತವಿಂಶತಿ[6]ಭಂಗಳ[6]
ಚಿರಫಲಾಫಲಗಳಿವು ರವಿವಾರ ವ್ಯಾಧಿಯಂ
ತ್ವರಿತದಿಂದೀವುದಾ ಸೋಮವಾರಂ ಮಹಾ
ಹರನ ಸಂಸ್ಕಾರಯುತ ಲಿಂಗಾಂಗಸಂಗ ಸುಜ್ಞಾನಫಲವಂ ಪಾಲಿಕುಂ ೧೪

ಕುಜದಿನಂ ಪ್ರಾಣಹಿಂಸಾಫಲವನೀವುವದು
[7]ನಿಜವಾದ[7] ಬುಧವಾರ ಸೋಮನರಿವೀವುದೈ
ರುಜುವಾದ ಗುರುವಾರ ವೀರಶೈವರ್ಗಮಳ ಭುಕ್ತಿ ಮುಕ್ತಿಯ ಕೊಡುವುದು
ನಿಜ ಶುಕ್ರವಾಸರಂ ಪಿಂದುಸುರ್ದ ಫಲಗಳಂ
ಯುಜಿಸುಗುಂ ಮಂದವಾ[8]ರಂ ಲೋಕದೊಳಗಿರುವ[8]
ರುಜೆದೋಷಮಂ ಕೊಡುಗು ಸಪ್ತದಿವಸಗಳ ಫಲಸಿದ್ಧಿಯಂ ತಿಳಿ ಕುವರನೆ ೧೫

1 ಸಲಿಲಭಂ ಶಯ್ಯುಮಿಯ ಸ್ವಸ್ವರೂಪದ ಬೋಧೆ। ಯಳಿವುದೆಲೆ ವಿಷ್ಣು ನಕ್ಷತ್ರ ಶಿವ ಸಮಯಕ್ಕೆ। ಸಲೆ ಸಲ್ಲದಾ ವಿಷ್ಣು ಭಕ್ತಿಯಂ ಕಂಡು ವಸುತಾರೆ ತಪಮಂ ಕ್ಷಯಿಪುದು (ಜ) 2 ಗಾ ಪೂರ್ವಭದ್ರಾ (ಜ) 3 ಪದಿತಾರೆಯುಮಮ (ಜ) 4 ದೀಕ್ಷಾ (ಜ) 5 ಯಂತಿ (ಜ) 6 ತಾರೆಯಂ (ಜ) 7 ತೆಜಮಾನ (ಜ) 8 ರಣವಾದ್ಯಖಿಳಮಳ (ಜ)

ಸಂತತಂ [1]ಸಾಧ್ಯಯೋಗಂ ಶುಭಂ ಶುಭಫಲವ
ನಾಂತು ಮೊಳ್ಪುದು[1] ಮುಂದೆ ಶುಕ್ಲಯೋಗಂ ಜನರ್ಗೆ
ನಂತ ತತ್ವೈಶ್ವರ್ಯಬುದ್ಧಿಯಂ ಮೊಳ್ಪುದಾ ಬ್ರಹ್ಮಯೋಗಂ ತಿಳಿದಡೆ
ಕಂತುಹರಭಕ್ತರ್ಗೆ ಲಿಂಗತತ್ವಾರ್ಥದ
ತ್ಯಂತಸಾಧನದ ಸದ್ಬುದ್ಧಿಯಂ ಪಾಲಿಪುದು
ಮುಂತೆ ತಿಳಿ ವೀರ್ಯವೃದ್ಧಿ[2]ಯ ಮುಖದಿ[2] ಸಂಸಾರಮತಿಯನೀವುದು ನಿಶ್ಚಯಂ ೨೪

ಇರದೈಂದ್ರಯೋಗವಾಯಾಮುಕ್ತತತ್ವಾರ್ಥ
[3]ದರಿವಿನಡಿಗಾಣದಿಹ ಮಾಯಾಂಧಕಾರಸಂ
ಭರಿತ[3] ಜೀವಜ್ಞಾನಮಂ ಕೊಡುಗು ವೈಧೃತಿಯೆನಿಪ್ಪ ಯೋಗಂ ಭಾವಿಸೆ
ಭರದಿಂದ ಭವಘೋರ[4]ದುಪಟಲಂಗಳ ಕೆಡಿಪ[4]
ವರವೀವ ಭಕ್ತರ ಮನಸ್ಸಿಂಗೆ ಬೇಕಾದ
ಪರಿಯ [5]ಚಿಂತೆಯ[5]ನೀವುದೈ [ಶಿವನ]ಯೋಗ[6]ಗಳ ಬಗೆಯ [ನೀ]ನಿಂತು ತಿಳಿಯೈ[6] ೨೫

ಮೇಷಲಗ್ನಂ ಮಹಾವ್ಯಾಧಿಯಂ ಕೊಡುವುದೈ
ಲೇ[7]ಸನೀವುದು ವೃಷಂ ಮಿಥುನಮಾ ಸಿದ್ಧಿಯಂ
ಲೇಸಾಗಿ ತತ್ವವಿಷಯದಲಿ ತಾಂ ಕೊಡುವುದಾ ಶುಭನಿರೀಕ್ಷಿತಮಾಗಿರೆ
ಆ ಸಸಿಯ ಮನೆಯು ನಿತ್ಯಾಚಾರ ಸಿರಿಯ ತಾಂ
ಮೋಸಮಿಲ್ಲದ[7] ಕೊಡುಗು ಸಿಂಹಲಗ್ನದ ದೀಕ್ಷೆ
ಭಾಸುರಾಕ್ಷರ ಬ್ರಹ್ಮವೇದಾಂಗ[8]ನಿಷ್ಠ[8] ಸತ್ಯಾನಂದಮಂ ಪಾಲಿಕುಂ ೨೬

[9]ಏನೆಂಬೆ ಕನ್ಯೆಯೇ ಕಾಮಪೀಡೆಯನುಳ್ಳ
ಮಾನಸವಿಕಾರಮ[9]ನ್ನೀವುದಂ ತುಲಾರಾಶಿ
ತಾನೆಯ್ದೆ ಜಸವೆತ್ತಿರುವ ಪರಾಕ್ರಮಫಲವನೀವುದು ಮಹಾವೃಶ್ಚಿಕಂ
ಧ್ಯಾನಿಸಲ್ ಷಟ್ಚಕ್ರನೆಲೆಯುಳ್ಳ ಪ್ರಾಣಲಿಂ
ಗಾ[10]ನಂದ[10]ತತ್ವಮಂ ಪಾಲಿ[11]ಕು[11] ಧನುರ್ಲಗ್ನ
[12]ಜ್ಞಾನಮೀವುದು[12] ಮಕರದೊಳ್ ದೀಕ್ಷೆ ಸಂಸಾರ[13]ಜಯವ ಸಂಪಾದಿಸುವುದು[13] ೨೭

---

1 ಯೋಗಗಳು ಶುಭಾಶುಭದಫಲಗಳ ಸಮಂತು ನೋಳ್ಪದು (ಜ) 2 ಯೆ ವಿಷಯ (ಜ) 3 ದುರಿಕಡೆಯಕಂಡ ಪ್ರಾಣೋಪಾನದಿಂ। ಬೆರೆದ ನಿರುತ (ಜ) 4 ಧೈರ್ಯಮಂ ಕೆಡಿಸುವತಿ (ಜ) 5 ತತ್ವವ (ಜ) 6 ಗಳ್ ಶಿವನ ಯೋಗಸಿದ್ಧಿಯೆನೆ ಲಭಿಕುಂ (ಜ) 7 ಸಾದ ವೃಷಭಲಗ್ನ ತತ್ವಾರ್ಥ ಸಾಧನಂ ನಾಶಮಿಲ್ಲದ ಮಿಥುನಲಗ್ನ ತತ್ತೈಶ್ವರ್ಯ ವಿದ್ಯೆಯಂ ಪಾಲಿಸುವುದು ಹೇ ಸಕಲ ಕರ್ಣಾಟಕಾಚಾರ ಶ್ರೀಯನುರೆ ಮೋಸಮಿಲ್ಲದೆ (ಜ) 8 ವಿದ್ಯಾ (ಜ) 9 ಮಾನಕನ್ಯಾಲಗ್ನಮಂಗಜಾಸ್ತ್ರದೇವೆರೆದನೂನಸ್ಮರ ಸಂಪತ್ತಿನರಿವ (ಜ) 10 ನವ್ಯ (ಜ) 11 ಪುದು (ಜ) 12 ವೇನೆಂಬೆ ಮಹಾಜ್ಞಾನಿ (ಜ) 13 ಮಾನಸಕಪ್ಪುದು (ಜ)

ಕುಂಭಲಗ್ನದೊಳಮಳ ವೀರಮಾಹೇಶ್ವರರ್
ಶಂಭುದೀಕ್ಷೆಯನೆಸಗುವರ್ ಶಂಭು ಮತ್ಸ್ಯಲ
ಗ್ನಂ ಬಿಡದೆ ತತ್ವನಾಶವ ಮಾಳ್ಪುದೆಂದು ಶಿವಶಿವೆಗುಸುರ್ದನಾನಂದದಿಂ
ಇಂಬಾದ ಭವಮೆಂಬ ಕರಣದೊಳ್ ದೀಕ್ಷೆಯದುಂ
ಬೆಂಬಳಿಯ ನಂಟಗಿಪ್ಪವ ಕೊಡುಗು ಬಾಲವಾ
ಯೆಂಬಾಕರಣ ಪುಷ್ಟಿ ಸಂಪತ್ತಿ[1]ಯೆಂ ಕೊಡುಗು ಕಾಲವಾಯೆಂದಿನಿಸುವ[1] ೨೮

ಕರಣಮಾ ಯತಿರಾಜ[2]ರಿಗ[3]ನಂಗವಿರಹಮಂ
ತರಹರಂ ಮಾ[3]ಳ್ಪುದು ಕಿಮುಸ್ತುಘ್ನ ಕರಣವ[3]
ಪರಮವೈರಾಗ್ಯಫಲಮಂ ಫಲಿಪುದೈ ಭ[4]ದ್ರೆ ಶುಭಫಲವನೇ ಕೊಡುವುದು[4]
ವರ [5]ತೈತಳೆಯುಭಯಕುಲವ ತಾಂ[5] ಸಲಹುವದು
ಗರಜೆ ವಣಿಜೆಗಳೆಂಬ ಕರಣವಾಣಿಜ್ಯ ಮುಖ
ಪರಿಪರಿಯ ಕರ್ಮಫಲಮಂ ಕೊಡುವುದೈ ಶಕುನಿಯೆಂಬ ಕರಣದಿ ನೋಡಲು ೨೯

ಶಿವತತ್ವಮಂ ಕೊಡುವುದೆಂದು ಶಿವಯೋಗವಂ
ತವೆ ಪೇಳ್ವ ಶರಣರುಸುರುವರೈ ಚತುಷ್ಪಾ[6]ತ್ತು
ವಿವರದಿಂ ಧರ್ಮಾರ್ಥಕಾಮಮೋಕ್ಷಗಳೆಂಬ ವರ[6] ಫಲಗಳಂ ಕೊಡುವುದುಂ
ಸವೆಯದಿರ್ಪಾನಾಗವಂ ನರರೊಳಧಿಕವಹ
ಸವಿಶೇಷ[7]ವಿಾಗೆ[7] ಮಿಥ್ಯಾತತ್ವಕರಣ[8] ತಾ
ನವಿರಳದ[8] ಮರವೆಯಂ ಬೆರೆದು ಧರ್ಮಜ್ಞಾನಹೀನ[9]ಸ್ಥಿತಿಯ[9]ನೀವುದು ೩೦

ಕರಣದ ಫಲಾಫಲಗಳರಿ ಮುಂದೆ ಗುರು ಬುಧರು
ಇರದಸ್ತಮಯವಾಗೆ ಮೂಢಮೆನುತಿಹರದಂ
ಪರಿಹರಿಸಬೇಕೊ[10]ರ್ವ ಗುರುವಸ್ತಮಿಸಲು[10]ವುಲವಾಸ[11]ವಾದಲ್ಲಿ[11] ಸೌಮ್ಯ
ಧರೆಯಣುಗ ಶನಿಗಳಸ್ತಂಗಳಂ ಬಿಡುವು[12]ದಿ
ನ್ನಿರದೆ[12] ರವಿ ಮೆ ಷರಾಶಿಯು ಸಾರೆ ಶುಭಕಾಲ
ಮರಿವುದಾ ಭಾಸ್ಕರಂ ಮೀನರಾಶಿಯನೆಯ್ದೆ ಚೈತ್ರಮೆಂದದ ಬಿಡುವುದಂ ೩೧

---

1 ನರಿವ ಫಲಿಸುವುದು ಕಾಲವಮೆನಿಸುವ (ಜ) 2 ರಾ (ಜ) 3 ಳ್ಪುದಾ ಕಿಂ ಸ್ತುಘ್ನಭಕ್ತಿ ಜಾನ (ಜ) 4 ದ್ರವಿಷ್ಟಿಶುಭಮಂ ಮಾತಾಪಿತಾ (ಜ) 5 ಸ್ವಾತ್ಮಕುಲಮೆಂಬ ಮೂಕುಲವ (ಜ) 6 ತ್ರೆಂಬವಿರಳದ ಕರಣಧರ್ಮಾರ್ಥಕಾಮ ಸುಮೋಕ್ಷ (ಜ) 7 ಫಲವ ಕೊಡುಗು (ಜ) 8 ಮವಿರತದ (ಜ) 9 ಮಲಗಳ (ಜ) 10 ದರ್ಾಗಿರಸನಸ್ತಮಿಸೆ (ಜ) 11 ಸಲ್ಲ (ಜ) 12 ದರರೆ (ಜ)

ಒಸಗೆಯಂ ಕೊಡೆ ಬಂಧನಿಂ ಬೆರಸಿ ರಾಹು ಬರೆ
ಕುಶಲನೇ ಸಲ್ಲದೈ ಶುಕ್ಲಸ್ಥಿರಲಗ್ನಗಳು
ಹಸನಾಗಿಯೈದಲ್ಕೆ ಗುರುದೀಕ್ಷೆ ಗತಿಗೆ ಲೇಸೆಂದನಗಜಾರಮಣನು ೪೦

ಚರಲಗ್ನಗಳ ಬೃಹಸ್ಪತಿ ಸಾರೆ ಶುಭಕಾಲ
ಮರರೆ ಸಂಕ್ರಾಂತಿಯಿಲ್ಲದ ಮಾಸದೋಷಮಂ
ದರಿದು ಪೇಳ್ವರು ತಾಂತ್ರಿಕರು ಮಲಯುತದ ಮಾಸಜಾಲಮಾವಾವೆಂದೆನೆ
ವರಜ್ಯೇ[1]ಷ್ಠ ಶುಚಿ[1] ಶ್ರಾವಣಂ ಭಾದ್ರಪದವೆಂಬು
ದಿರದೆ ವೈಶಾಖಾಶ್ವಯುಜಮಾರುಮಾಸ ಬಂ
ಧುರದ ದೀಕ್ಷೆಗಯೋಗ್ಯ ಚೈತ್ರ ಪುಷ್ಯಂಗಳವು ಮುನ್ನವೇ ಸಲ್ಲವಣುಗ ೪೧

ವೀರಶೈವೋಪದೇಶಕೆ ಸಲುವ ಮಾಸಂಗ
ಳಾರಯ್ಯೆ ಕಾರ್ತಿಕಂ ಮಾರ್ಗಶಿರಮಂ ಮಾಘ
ಚಾರು ಫಾಲ್ಗುಣ ನಾಲ್ಕು ಯೋಗ್ಯ ಸಂಕ್ರಮಣಮುಭಯಂ ಕೂಡಿದಾ ತಿಂಗಳಂ
ಕ್ರೂರಮಾಸಂ ನಾಶವೆನುತಿಹರವಂ ಬಿಡುವು
ದಾರೈದು ಮಾಸಶೋಧನೆಗಳಂ ಮಾಳ್ಪುದೆಲೆ
ಧೀರನೇ ವ್ಯತಿಪಾತ ವೈಧೃತಿಯನೊಂದಿದಾ ದಿನಮಶುದ್ಧಂ ದೀಕ್ಷೆಗೆ ೪೨

ವರ ವೀರಶೈವಸಂಪನ್ನ ಗುರುಗಳು ಲೋಕ
ದಿರವುಳ್ಳ ಶಿಷ್ಯರುಂ ಕುರಿತು ಪಂಚಾಂಗ[2]ವ ಸು
ಕ[2]ರವ ಶೋಧಿಸಿಕೊಳ್ಳಬೇಕಲ್ಲದವರು ಕಾಲಾತೀತನಿತ್ಯರವರು
ಭರದಿಂದ ಕಾಲಾದಿ ತತ್ವಗ್ರಹಗಳು ಭಂಟ
ರಿರವರಿಯದೇ ಕಾಲ ಗ್ರಹ [3]ರಾಶಿ ವಕ್ರಿಸಲ್[3]
ಒರಸಿ ಧೂಳಿಯ ಮಾಳ್ಪರಿದಕೆ ಕಲ್ಪಾಂತಭೈರವ ಮನೋಹರರೆ ಸಾಕ್ಷಿ ೪೩

ಮುನ್ನೀರ ಕರೆಯು ಪುಣ್ಯಾರಣ್ಯ ಸತ್ತೀರ್ಥ
ಪನ್ನಗಾಭರಣನಾಲಯ ಶಿವಕ್ಷೇತ್ರಮಂ
ಉನ್ನತ ಶಿವಾರಾಮಂ ಶುಭಗೇಹ ಗಿರ್‍ಯಗ್ರ ಗಿರಿಯ ತಪ್ಪಲೊಳಾಗಲಿ
ಸನ್ನುತದ ನದಿಗಳೊಳ್ ನದಿಯ ತೀರದೊಳಾಗ
ಳಿನ್ನಧಿಕ ದೇಶಿಕಾಶ್ರಮದೊಳಾಗಲಿ ಗುರುವಿ
ನುನ್ನತದ ಗೇಹದೀಶಾನದಿಕ್ಕಿನೊಳು ಭೂಶೋಧನಂ ಮಾಳ್ಪುದಣುಗ ೪೪

1 ಷ್ಠಾಷಾಢ (ಜ) 2 ದುರೆ ದಿ (ಜ) 3 ಗಳೊಕ್ಕಗಳಾಗೆ (ಜ)

ನೀಚಾಲಯಾಶೌಚಭೂಮಿ ಶ್ವಪಚರ ಕೇರಿ
ಯೇ ಚತುರ ಕೇಳ್ ಶ್ಮಶಾನಂ ಮುಖ್ಯ[1]ದೇಶ[1]ಗಳ
ನೀಚಮೆಂದಿವನುಳಿದು ಜಲಶಿಲಾಂತಮುಮಾಗಿ ಭೂಖನನಮಂ ಮಾಡುತ
ಗೋಚರಿಸುವಸ್ಥಿ ಮಣಿ ಹಂಚುಗುರ್ಕೂದಲುಗ
ಳಾ[2]ಚೇಳ[2]ಮಂಗಲದ ಗೊಬ್ಬರಮುಮಿಲ್ಲದೊಲ್
ಶೌಚಮಪ್ಪಂತೆ ಪರಿಶೋಧನಂಗೈದು ದಹನವಮಾಡುತಾ ಮಣ್ಣಿಗೆ ೪೫

ನೀರಚಳಯಂ ಕೊಡುತ್ತದನೆಯ್ದೆ ಮಣಿಗಳಿಂ
ದಾರ್ಕೆದು ನಿಮ್ನೋನ್ನತಂಗಳಿಲ್ಲದ ಪಾಂಗಿ
ಗಾ ರಮ್ಯಘಟ್ಟಣೆಯ ಮಾಡಿ ಲೇಪನವೆಸಗಿ ದರ್ಪಣದೊ[3]ಳೆಸಗುತಿರಲು[3]
ಸಾರ ಷಟ್ಕರ್ಮಂಗಳಿಂ ನಿಬದ್ಧಂಗೆಯ್ದು
ರಾರಾಜಿಪಮಳ ಭೂಮಿಯ ಗೋಮಯದೆ ಸುಗೋ
ಕ್ಷೀರ [4]ಗೋರೋಜನಾ ಗೋಮೂತ್ರ ಗೋಘೃತದೆ ಗೋದಧಿಯನೊಂದಿಸುವದು[4] ೪೬

ಸಾಕ್ಷಿ॥ ಗ್ರಂಥಾನ್ತರೇ॥ ಶ್ಲೋಕ॥
ಖನನಂ ಶೋಧ[5]ನಂ ದಾಹಂ [5]ಸೇಚನಂ ಘಟ್ಟನಂ ತಥಾ
ಲೇಪನಂ ಚ ತಥಾ ಪ್ರೋಕ್ತಂ ಕರ್ಮಷಟ್ಕಮುದಾಹೃತಂ
ಗೋಮಯಂ ರೋಚನಂ ಮೂತ್ರಂ ಗೋಕ್ಷೀರಂ ಚ ತಥಾಕ್ರಮಾತ್
ಗೋಘೃತಂ ಗೋದಧಿ[6]ಪ್ರೋಕ್ತಂ ಷಟ್ಕಂ ಸಮ್ಮಾರ್ಜನಾತ್ಮನಾ[6]

ವರಶೋಧನಾದಿ ಷಟ್ಕರ್ಮದಿಂ ಭೂಮಿಯಂ
ಪರಿಶುದ್ಧಿಯಂ ಮಾಡಿದಾಸ್ಥಾನದಲ್ಲಿ ಬಂ
ಧುರ ವಾಸ್ತುಲಕ್ಷಣಂಗೂಡಿ ಮಂಟಪರಚನೆಮಾಳ್ಪ ಪರಿಯೆಂತೆಂದೊಡೆ
ಪರಮದೀಕ್ಷಾಮಂಟಪ ಪ್ರಮಾಣಂ ನೋಡ
ಲರರೆ ಬತ್ತೀಸವಿಂಶತಿಹಸ್ತಮಾದೊಡಂ
ತಿರದೆ ಪಂಚಕ ಸಪ್ತ ನವಹಸ್ತಮಾನಂಗಳಿಂ ರಚಿಪುದುತ್ತಮವಲ್ಲೆ ೪೭

ವರ ಜನಾಶ್ರಯ [7]ದ ಕಂಭಕ್ಕೆ[7] ಪನ್ನೆರಡೆಟು
ಮಿರದ್ಯೆದು ಕೈಯುದ್ದಮಾದೊಡಂ ಪುಳಿಯದಿಹ
ಮರಗಳಂ [8]ಕೊಂಕಿಲ್ಲದೆಳೆ[8]ನೇರಮಾದ ಕಂಭಗಳ್ಯೆದುಗೇಣುದ್ದಮಂ

---

1 ಸ್ಥಾನ (ಜ) 2 ಚರಮ (ಜ) 3 ಲೆಸಗುತಮಮ (ಜ) 4 ರೋಜನ ಮೂತ್ರ ಘೃತದಧಿಗಳಿಂದೆ ಸಮ್ಮಾರ್ಜನಂ ಮಾಡುತ(ಜ) 5 ನದಗ್ಧಂ (ಜ) 6 ರ್ಯುಕ್ತಃ ಷಟ್ಕಸಮ್ಮಾರ್ಜನಾಸ್ಮೃತಾಃ(ಜ) 7 ಸ್ತಂಭೋನ್ನತಂ (ಜ) 8 ಡೊಂಕಿಲ್ಲದತಿ ( )

ಧರಣಿಯೊಳ್ ನೆಡಿಸುವುದು ತೆಂಗಿನಡಕೆಯ ಬಿದಿರು
ಪುರದಿ ವರ ದರ್ಭ ಸೋಗೆಗಳ ಪೊದಿಸುತ್ತ ನಾ
ಲ್ಕುರುದ್ವಾರದೊಳಗೆ ಮಾವಾಲತ್ತಿಗೋಣೆಯಾತೋರಣಂಗಳ ರಚಿಪುದು ೪೮

ಆಕಂಭಗಳ ದಪ್ಪವೈ ದಶಾಂಗುಲಮಾನ
ನೀ ಕೇಳ್ವುದೆಲೆ [1]ನಾಲ್ಕುಕಡೆ ಯ್ಯೈದರಂಗುಲಂ[1]
ಜೋಕೆಯಿಂ ನಾಲ್ದೆಸೆಯ ದ್ವಾರ ತೋರಣದ ಇರ್ಕೆಲದಲ್ಲಿ ತಿಸುಳಂಗಳಂ
ಬೇಕಾದವಂರದೆ ರಚಿಸೊಂದು ಕೈಯೆಂದ್ದಮಾ
ನೇಕಸಂತಸದೆ ಕಟ್ಟುವುದು ದಶದಿಕ್ಕಿನೊಳು
ಭೀಕರದ ಐರಾವತಂ ಪುಂಡರೀಕ ವಾಮನ ಕುಮುದ[2]ಮಂಜನಾಖ್ಯಂ[2] ೪೯

ಚಿರ ಪುಷ್ಪದಂತಮಾ ಸಾರ್ವಭೌಮಂ [3]ನೋಡು
ತಿರೆ[3] ಸುಪ್ರತೀಕಮುಂ ಕೂರ್ಮ ಹಂಸೆಗಳೆಂಬ
ಕರಿಗಳಡರುತ ಡಮರು ಶೂಲ ಪಾಶಾಂಕುಶಗಳಾಂತಮಳ ಕರ ನಾಲ್ಕರಿಂ
ಮೆರೆವ ಇಂದ್ರಾಣಿ[4]ಯುಂ ಸ್ವಾಹಾಖ್ಯೆಯುಂ ಸ್ವಧೆಯು
ಮರಳಿಯಠಾರಣೆ ಬಲಾವಿನಿ ರ್ಘುಂರ್ಷಿ[4] ರತ್ನಾಂಗಿ
ಸರಸ ಪಾರ್ವತಿಯುಮಾಪ್ಯಾಯಿನಿಯು ವ್ಯಾಪಿನಿಯುಯೆಂತೆಂಬ ಪೆಸರನುಳ್ಳ ೫೦

ದಶವಿಧದ ಶಕ್ತಿಯರ ಒಡಗೊಂಡು [5]ಪೊಳೆಯುತಿರು[5]
ವಸಮಕಾಪಾಲಿಯುಂ ಹುತಾಸಿ ಯಾಮ್ಯಂ ಮತ್ತೆ
ವಿಷವಂತರ ಕ್ರೂರದೃಷ್ಟಿಯುಬಲಂ ಶೀಘ್ರಂ ಜಟಾಮಕುಟಧಾರಿ ಚೆಲ್ವ
ಹಸನಾದ ವಿದ್ಯೇಶ್ವರನನಂತಶಂಭು ತಾಂ
ದಶವಿಧದ ರುದ್ರರಾ ಶಕ್ತಿಯರ ವಾಹನವ
ದಶಪಟಗಳೊಳ್ ಬರೆದಂ ಚಿತ್ರಪಟಗಳನು ದಶದಿಕ್ಕಿನೊಳ್ ಬಂಧಿಸಂವುದು ೫೧

ಎತ್ತಿ[6]ರುವ[6] ನಂದಿಧ್ವಜಂಗಳಿಂ ಸುತ್ತುವರೆ
ಪತ್ತಿಸಿದ ಪಲವು ದೀಪಂಗಳಿಂ ಮೆರೆವುತಿರು
ವತ್ತುರಂ ಚತುಸ್ತಂಭಮಧ್ಯದೊಳರತ್ನಿಮಾತ್ರೋನ್ನತದ [7]ಜಗಲಿಯಲ್ಲಿ[7]

---

1 ಯವರರ್ಧಸ್ಥೂಲಡ್ಡಗಳು (ಜ) 2 ಮಾ ಅಂಜನಂ 3 ಮುತ್ತುರೆ (ಜ) 4 ಯಾಸ್ವಾಹಾಸ್ವಧಾ ಬಳಿಕ್ಕರರೆ ಮಾರಣೆ ಬಲಾವಿರಘುಂರ್ಘೂ (ಜ) 5 ರಾಜಿಸುವ (ಜ) 6 ದುರೆ (ಜ) 7 ಪಸೆ ಜಗಲಿಯಂ (ಜ)

ಬಿತ್ತ[1]ರದ ಪಂಚಕಾರತ್ನಿ[ನಿಯ]ತ[1]ದೊಳೆಸಗು
ತುತ್ತಮೋತ್ತಮಮಾದರತ್ನಿಯನೆ ಗುದ್ದುಮೊಳ
ತಥ್ಯದಿಂ ಸ್ಥಂಡಿಲಂ ಮಂಡಲಕ್ಕೋಸುಗಂ ಮಾಳ್ಪುದಾಗಮಂಸಿದ್ಧರು ೫೨

ಚೌಕ ಶುದ್ಧದೊಳಾಗ ನೀಚ[2]ತರು[2]ಗಳನುಳಿದ
ನೇಕಮರಗಳಿನಖಿಳಸ್ತಂಭಗಳಿನಾದೊಡಂ
ಬೇಕಾದ ಷೋಡಶಸ್ತಂಭ[3]ದಿಂ ದ್ವಾದಶಾಷ್ಟಕ[3] ಚತುಸ್ತಂಭಂಗಳಾ
ನೀಕದಿಂದಾದೊಡಂ ಚತುರಸ್ರವಿವರಮಾ
ದಾಕಾರದಿಂ ಮೇಲೆ ಕಲಶ ಕನ್ನಡಿಗಳಿಂ
ಜೋಕೆಯಿಂ ಪರಿಪರಿಯ ಪಟಗಳಿಂ ಮಂಟಪವ ಸಿಂಗರಂ ಮಾಳ್ಪುದಣುಗ ೫೩

ಪಟ್ಟುಪಟ್ಟಾವಳಿಯ ಚಿತ್ರತರದಂಬರವ
ದಿಟ್ಟಿಗಚ್ಚರಿಯಹ ದುಕೂಲಂಗಳಿಂ ಮೇಲಂ
ಕಟ್ಟುಗಳನಳವಡಿಸಿ ಸಿಂಧ ಸೀಗುರಿ ಚಾಮರಂಗಳಲ್ಲಲ್ಲಿ ಮುದದಿಂ
ಕಟ್ಟುತಂತಾಮಳಕವಾಮ್ರಪಲ್ಲವ ಮುಖ್ಯ
ನೆಟ್ಟನ[4]ಣಿಯರಮಾದ[4] ತಳಿರ್ದೋರಣಂ[5]ಗಳಿಂ[5]
ಬಟ್ಟಮುತ್ತು[6]ಗಳಿಂ[6]ದ ನವರತ್ನಗುಚ್ಛಮಾಲೆಗಳಿಂದ ಸಿಂಗರಿಪುದು ೫೪

[7]ವಾಲಲಾಮಕದಧಿಕ[7]ಸುತ್ತುಮರೆ ನೆರಕೆಯಿಂ
ದಾ ಲಲಿತಕ[8]ಸ್ತುರಿಜವಾದಿಗಳ ಪಂಕದಿಂ
ದಾ[8]ಲೋಕಿಸಲ್ಕಷ್ಟಗಂಧಲೇಪನಗಳಿಂ ಪನ್ನೀರಚಳ[9]ಯಂಗಳಿಂ[9]
ಮೇಲೆ ವಿಚಕಿಲ ಕುಂದ ನವ[10]ಮಾಲಿಕಾದಿ ಸುಮ
ಜಾಲಗಳ[10] ದಂಡೆಯಿಂ [11]ಬಿಡು[11]ಮಾಲೆ ಸರಗಳಿಂ
ದಾ ಲಸದ್ಘಂಟೆ ದರ್ಪಣ ಚಾಮರಂಗಳಿಂ ಮಂಟಪವಲಂಕರಿಪುದು ೫೫

ಸಾರಮುತ್ತಿನ ತೋರಣಂ ರನ್ನದೋರಣಂ
ಚಾರು ಕನಕದ ತೋರಣಂ ಮಹಾರೌಪ್ಯ[12]ಮಯ[12]
ತೋರಣಂ ಕಾಂಸ್ಯಮಯ ತೋರಣಂ ಪಸುರ್ವಣ್ಣದೋರಣಂ ತಳಿರ್ದೋರಣಂ

---

1 ರಂ ಪಂಚರತ್ನಿ ಪ ಮಾಣ (ಜ) 2 ಮರ (ಜ) 3 ದ್ವಾದಶಸ್ತಂಭವರ (ಜ) 4 ತ್ಯಧಿಕವಹ(ಜ) 5 ಚೆಲ್ವ (ಜ) 6 ಗಳಾದಿ (ಜ) 7 ವಾಲಾಂಬುವಿ[illegible]ದ (ಕಗ) 8 ಸ್ತುರಿಜವಾದ್ಯಕ್ಷಕರ್ದಮಂ।ಆ (ಜ) 9 ಗಳಿಂದ (ಜ) 10 ಮಲ್ಲಿಕಾದಿಪೂ।ಜಾಲಂಗಳ (ಜ) 11 ಡೆಯಿಂ (ಜ) 12 ದುರೆ (ಜ)

ತೋರಣಂ ಪರಿಪರಿಯ ಫಲ ಬಿಂಬಫಲಗಳತಿ
ತೋರಣಂ ಮಕರತೋರಣ ಮುಕುರತೋರಣಂ
ಚಾರು ಚಾಂಪೇಯ [1]ಮೃದುಕುಟ್ಮಲಗಳಿಂಗೆಯ್ದ ತೋರಣಂಗಳ[1] ರಚಿಪುದು ೫೬

ಪರಿಪರಿಯ ಪುಷ್ಪಮಯಮಾಲೆ ತಳಿರ್ಮಾಲೆಯಿಂ
ಮೆರೆವ ದೂರ್ವಾಂಕುರದಮಾಲೆ ಕುಶಮಾಲೆಯಿಂ
ದರಿದಾದ ಮೌಕ್ತಿಕದ ಮಾಲೆ ಪವಳದ ಮಾಲೆ ರನ್ನ[2]ಗಳ[2] ಮಾಲೆಯಿಂದ
ಮಿರುಪ ಪೊಂಬಾಳೆಯ ಸ್ತಂಭ ಚಂದನ[3]ಗಂಭ
ಪ[3]ರಿವ ವಜ್ರಸ್ತಂಭ ಗೋಮೇಧಿಕಸ್ತಂಭ
ದಿರವಿನಿಂ ಹೊನ್ನರನ್ನದ ನೀಲವಿದ್ರುಮಸ್ತಂಭದಿಂದೆಸೆವುದಣುಗ ೫೭

ಮೊರೆವ ಪಂಚಮವಾದ್ಯ[4]ರವ[4]ದದಿಂ ಬಿನದದಿಂ
ಪರಿವಿಡಿದುವೋದುವತಿವೇದದಿಂ ನಾದದಿಂ
ಸರಸದಿಂದೆಸೆವ ಕಸ್ತೂರಿಕುಂಕುಮದಧಿಕ ಸಾರಣೆಯ ಕಾರಣೆಗಳಿಂ
ಭರಿತ ಸಂಗೀತರಸ ವೇಣುವಿಂ ವೀಣೆಯಿಂ
ಪರಿಪರಿಯ ಭಕ್ತಗಣವಿಸರದಿಂ ಪಸರದಿಂ
ತರತರದ ಕನ್ನಡಿಯ ಕಳಶದಿಂ ವಿಳಸದಿಂ ಮಂಟಪಂ ಮೆರೆವುದಮಮ ೫೮

ಉಚ್ಚೈರುದಾತ್ತಾದಿ ಸ್ವರದೊಳಾರಾಧ್ಯರುಂ
ಯಚ್ಚರಿಂ ಶಿವಸೂಕ್ತ ಶ್ರೀರುದ್ರ ಚಮಕಮುಮಂ
ನಚ್ಚರಿಯ ಪವಮಾನ ಪುರುಷಸೂಕ್ತ[ಂ] ರುದ್ರಸೂಕ್ತಾದಿ ರವಮುಣ್ಮಲು
ವೆಚ್ಚಿ ವಸ್ತುಕ ವರ್ಣಕಂಗಳತಿ ಶಿವಮಯದ
ಸ್ವಚ್ಛವಹ ಸ್ತುತಿಶಂಖ ಕಹಳಾದಿನಿನದ ದೆಸೆ
ಮುಚ್ಚುತಿರೆ ಮಂಗಳಮಹೋಪಾಠದಿಂದೆ ದೀಕ್ಷಾಮಂಟಪಂ ಮೆರೆದುದು ೫೯

॥ಶಾಂಕರಸಂಹಿತಾಯಾಂ॥
ಚತುರಸ್ರಂ ಚತುರ್ದ್ವಾರಂ ಚತುಸ್ತೋರಣಭೂಷಿತಂ
ಷೋಡಶಸ್ತಮ್ಭಸಂಯುಕ್ತಂ ದ್ವಾದಶಸ್ತಂಭಮೇವ ಚ॥
ವಿತಾನೈ ಶ್ಚಾರ್ಥಮಾಸಾಧ್ಯ ಘಣ್ಟಾಚಾಮರಭೂಷಿತಂ
ಧರ್ಭಮಾಲಾಪರಿಕ್ಷಿಪ್ತಂ ಪುಷ್ಪಮಾಲಾವಲಮ್ಬಿತಂ ॥

---

1 ಕಂಪಿನಿಂಪಿನ ಪುಷ್ಪತೋರಣಗಳಿಂ (ಜ) 2 ದುರೆ (ಜ) 3 ಸ್ತಂಭ।ದು (ಜ) 4 ನಿನ (ಜ)

ಫಲ ಪಲ್ಲವ ಗನ್ಧಾಢ್ಯಂ ಧೂಪ ದೀಪಸಮನ್ವಿತಂ
ಶಂಖ ದುನ್ದುಭಿ ನಿರ್ಘೋಷ ಬ್ರಹ್ಮಘೋಷ ಸಮನ್ವಿತಂ ॥

ಇಂದು ಚಾಮೀಕರಸ್ತಂಭದಿಂ ಬಿಂಬದಿಂ
ದಂತರಂತರ ಮೇಲುಕಟ್ಟಿನಿಂ ಪಟ್ಟಿನಿಂ
ದಂತು ಮಘಮಘಿಸುತಿಹ ಧೂಪದಿಂ ದೀಪದಿಂ ದುಂದುಭಿಧ್ವಾನದಿಂದ
ಮುಂತೆಯುಗ್ಘಡಿಸುತಿಹ ಪಾಠಕರ ನಾಟಕರ
ನಂತ ಮಾಹೇಶ್ವರ[1]ಸಮಾ[1]ಳಿಯಿಂ ಪಾಳಿಯಿಂ
[2]ದಾಂತು[2] ಕಂಗೊಳಿಸುತಿಹ ಚಿತ್ರದಿಂ ಪತ್ರದಿಂದತಿವಿಚಿತ್ರದೆ ರಂಜಿಕುಂ ೬೦

ಚೌಕಮಧ್ಯದ ಚತುಸ್ತಂಭಗಳ ನಡುವೆ ನೋ
ಡಾ ಕಳಶ[3]ಗಳನಿಡುವ[3] ನೆಲಗಟ್ಟು ಕನ್ನಡಿಯ
ಆಕಾರಮದರ ಹೊಟ್ಟೆಯೊಳು ನಿಮ್ನೋನ್ನತಗಳಿಲ್ಲದೊಲ್ ಪಸೆಜಗುಲಿಯಂ
ಜೋಕೆಯಿಂ ಪಲವಲಂಕಾರದಿಂ ರಚಿಸುತ್ತ
ನೇಕಮೌಕ್ತಿಕರತ್ನವಿದ್ರು[4]ಮಂದ ಚೂರ್ಣದಾ
ಲೋಕದಿಂ[4]ದಲ್ಲದೊಡೆ ರಾಜಾನ್ನಮುಖ್ಯಪಿಷ್ಟದಿ ರಂಗವಲ್ಲಿಯಿಡುತ ೬೧

ಶಾಂಕರಸಂಹಿತಾ ಯಾಂ ॥ ಶ್ಲೋಕ ॥
ದೇಶೇವಿಶೋಧಿತೇ ಶುದ್ಧೇ ತತ್ರ ಕುರ್ವೀತಮಂಟಪಂ
ಮಧ್ಯಸ್ತಮ್ಭಚತುಷ್ಕಂ ಸ್ಯಾತ್ತನ್ಮಧ್ಯೇ ವೇದಿಕಾಸಮಾ ॥
ದರ್ಪಣೋದರ ಸಂಕಾಶ ನಿಮ್ನೋನ್ನತ ವಿವರ್ಜಿತಾ
ಯಂಕ್ತವೇದಿಕಸಂಯು[5]ಕ್ತಂ[5] ಚತುಸ್ತಂಭವಿರಾಜಿ[6]ತಂ[6] ॥
ಏವಂ ಮಂಟಪಮಾಸಾದ್ಯ ಸಮ್ಭಾರಂ ಸರ್ವಮಾಹರೇತ್

ವರ ಶಿಷ್ಯನಂತರಂಗದ ಗುಣತ್ರಯದೋಷ
ನೆರೆ ಪಿಂಗಿ ಪಂಚವಿಧಗುರುಗಳಂಘ್ರಿಗೆ ಸಲ್ವ
ಪರಿಯಿಂದ ದೀಕ್ಷಾತ್ರಯಂಗಳಿಂ ಶುದ್ಧತೆಯನೆಯ್ದಿ ಲಿಂಗತ್ರಯಕ್ಕೆ
ನೆರೆಯಂಗಮಪ್ಪ ಚಿದ್ವಾಸನೆಯೆ ಪೊರಪೊಣ್ಮೆ
[7]ನೆ[7]ರೆವಂತೆ ಸಿತಕುಂಕುಮಂ ಕಸ್ತುರಿಯ ರಜದ
ವರ ಚಿತ್ರತರ ಪದ್ಮಕಳಶಬಂಧಾದ್ಯಖಿಳರಂಗವ[8]ಲಿಯಂ ಮಾಳ್ಪದು[8] ೬೨

---

1 ರ ಆ (ಜ) 2 ಸಮಂತು (ಜ) 3 ಸ್ಥಾಪಿತದ (ಜ) 4 ಮಂ ಮುಖ ಚೂರ್ಣಾ।ನೀಕದಿಂ (ಜ)
5 ಕ್ತೈ (ಜ) 6 ತಾಃ (ಜ) 7 ಮೆ (ಜ) 8 ಲ್ಲಿಗಳೆಸೆದವು (ಜ)

ಇಂತು ಮೃಗನಾಭಿ ಜಾಪರಕರ್ಪುರಂ ಬೆರೆದ
ನಂತವಿಧ ಚಿತ್ರತರ ರಂಗವಲ್ಲಿಗಳೆಸೆಯ
ಲಂತಪ್ಪದಳವ ನಿರ್ಮಿಸು[1]ವ[1]ಲ್ಲಿ ಚಿನ್ನ ಬೆಳ್ಳಿ[2]ಯ ಚಾರು[2]ಲೋಹ ಕಾಂಸ್ಯಂ
ಮುಂತೆ ಹಿತ್ತಾಳೆ ಸತ್ವಂ ತಾಮ್ರ ಧಾತುವಿಂ
ಮುಂತೆ ನವರತ್ನಮಯ [3]ವರನಾರಿಕೇಳಾಂಬು[3]
ವಿಂತಿವರ ಪಂಚಕಳಶಗಳ ಶಕ್ತ್ಯನುಸಾರದಿಂ ಮಾಡಿಸುವುದಳ್ಕರಿಂ ೬೩

ಆ ಕುಂಭಗಳ ನಡುವೆ ಶಿವಮುದ್ರೆ ಪೊಂಗಳನ
ನೇಕ ನವರತ್ನಗಳ ಗೋಸ್ತನ ಕೃಪಾಣಧನು
ರಾಕೃತಿಯ ಮೃಗಲಿಂಗ ಪ್ರಂಚಕರನ್ಯಾಸ ಮುದ್ರೆಗಳ ಭಸ್ಮಗಳ ಪಾಯ್ಕಿ
ಜೋಕೆಯಿಂ[4]ದವಟಾರ್ಕಪಕ್ಷಚೂತಕ ಬಿಲ್ವ
ದೇಕ[4]ಪತ್ರಗಳಿರಿಸಿ ಪಂಚವರ್ಣದೆ ರಚಿಸು
ವಾ ಕಮಲಪಂಚಕಾಗ್ರದ ತಂಡುಲದಮೇಲೆ ಪಂಚಬ್ರಹ್ಮಾತ್ಮಕವಹ ೬೪

ಪಂಚಕಳಶಂಗಳಂ ಸ್ಥಾಪಿಸಂತ ಗುರುಮೂರ್ತಿ
ಪಂಚಾಸ್ಯಜಾತರಹ ವೀರಶೈವಾಚಾರ
[5]ಪಂಚಾಢ್ಯ[5]ರಾದಮಳ ಸುಜ್ಞಾನಸಂಪನ್ನನೆನಿಪ ಚತುರಾಚಾರ್ಯರಂ
ವಿಂಚುವತಿಭಕ್ತಿಯಿಂ ವಂದನಂಗೆಯ್ದಧಿಕ
ಪಂಚಮಹವಾದ್ಯಘೋಷಣದಿಂದ ಕರತರು
ತ್ರಂ ಚದುರಿನಿಂದಪ್ಪವಿಧಪೂಜೆಯಿಂ ಯಜಿಸಿ ಸ್ವರ್ಣಾಂಬರವ ಪೊದಿಸುತ ೬೫

ನಲವಿನಿಂ[6]ದೀ ಪದ್ಮಗಳ ಲೆಕ್ಕಿಯಂ ನಾನಂ
ತಳಿವೆನೆಂಬೀ ಮಂತ್ರದಿಂ ಪದ್ಮಗಳ ಮೇಲೆ
ಸಲೆಪರಪಬೇಕಾ ಕಳಸ್ಯೆಂಬ ಮಂತ್ರದಿಂ ಕಳಶದಿರ್ಕೆಯ ಮಾಳ್ಪುದು
ಜಲವನಾ[6]ಪೋವಾಯಿದಂ ಎಂಬ ವಂತ್ರ[7]ದಿಂ[7]
ಕಳಶಂಗ[8]ಳಲ್ಲಿ[8] ತುಂಬುವದಂ ಇಪ್ಪತ್ತೇಳು
ಯೆಳೆಗಳಂ ಸುತ್ತುವುದು ಊರ್ಣನಾಭಿರ್ಯಂಬ ವಂತ್ರದಿಂದಾಚಾರ್ಯರು ೬೬

---

1 ತ (ಜ) 2 ಯುಪಂಚ (ಜ) 3 ನಾರಿಕೇಳಾಲಾಬು (ಜ) 4 ದೊಟಮರ್ಕಪ್ಲಕ್ಷ ಚೂತವ ಬಿಲ್ವ । ನೀಕ (ಜ) 5 ಸಂಭನ್ನ (ಜ) 6 ದಾಸ್ಮಿಲೋಕ ರುದ್ರಿಯೆನಿಸುವಾಮಳ ಮಂತ್ರದಿಂ ಪದ್ಮಗಳ ಮೇಲಿಕ್ಕಯಂ ಸಲೆ ಪರಸಬೇಕು ಕಳಸಸ್ಯ ಮಂತ್ರದೊಳು ಕಳಸಸ್ಥಾಪನಂ ಮಾಳ್ಪುದು ಕಲಿತಾ (ಜ) 7 ದಿಂದುದಕಮಂ (ಜ) 8 ಳನೆ (ಕಗ)

ಮತ್ತೆ ಸಹಿರತ್ನಾನಿದಾಶುಷೇ ಎಂದೆನಿಸು
ವತ್ಯಧಿಕ ಮಂತ್ರದಿಂ ಕಳಶಂಗಳೊಳ್ ರನ್ನ
ಥೊತ್ತಮಂ ಇರಿಸುವುದು ಸರ್ವವರ್ಣೇ ಮಹಾದೇವಿಯೆನಿಸುವ ಮಂತ್ರದಿಂ
ವಿತ್ತಸುಮಗಳನರವರೊಳಿರಿಸಿ ಪಲ್ಲವಗಳಂ
ಉತ್ತಮದ ಏಷರುದ್ರೋವಮಂತ್ರದಿಂ ಪಾಯ್ಕಿ
ಪೊತ್ತಿನುರೆ ಚಿತ್ರವಸನಗಳ ಕಳಶಕೆ ಯುವಂ ವಸ್ತ್ರಾಣಿಯೆಂದರ್ಪಿಸಿ ೬೭

ಸಾಕ್ಷಿ ॥
ಅಸ್ಮಿನ್‌ಲೋಕೇ ರುದ್ರೀಯಮಿ[1]ತ್ಯಾದಿ[1] ॥
ಈ ಮಂತ್ರದಿಂ ಪದ್ಮಗಳ ಮೇಲೆ ಅಕ್ಕಿಯುಂ ಪರಪುವುದಂ

ಶ್ಲೋಕ ॥
ಕಳಶಸ್ಯಮುಖೇ ವಿಷ್ಣುಃ ಕಣ್ಠೇ ರುದ್ರಸ್ಸಮಾಶ್ರಿತಃ
ಮೂಲೇ ತತ್ರಸ್ಥಿತೋ ಬ್ರಹ್ಮಾಮಧ್ಯೇ ಮಾತೃಗಣಾಸ್ಮೃತಾಃ ॥
ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾವಸುನ್ಧ[2]ರಾ[2]
ಋಗ್ವೇದಶ್ಚಯಜುರ್ವೇದೊ ಸಾಮವೇದೋಹ್ಯಥರ್ವಣಃ ॥
ಅಂಗೈಶ್ಚಸಹಿತಾಸ್ಸರ್ವೇ ಕಳಶಂತು ಸಮಾಶ್ರಿತಾಃ
•ಆಯಾನ್ತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ• ॥
ಗಂಗಾ ಗೋದಾವರೀ ಕೃ[3]ಷ್ಣಾ[3] ತುಂಗಭದ್ರಾ ಸರಸ್ವತಿ
ಮಲಪ್ರಹಾರೀ ಕಾವೇರೀ ಚನ್ದ್ರಭಾಗಾ ಕುಶಾವತಿ ॥
ಏತಾಃ ಪುಣ್ಯಮಹಾನದ್ಯಃ ಕಳಶನ್ತುಸಮಾಶ್ರಿತಾಃ
[4]ಎಂಬ ಮಂತ್ರದಿಂದ ಅಕ್ಕಿಗಳ ಮೇಲೆ ಕಳಶಂಗಳನ್ನಿಡುವದು[4] ॥

ಶ್ರುತಿಃ ॥
ಆಪೋವಾಯಿದಮಗ್ರೇ ಸಲಿಲಾಮಾಸೀತ್ತಸ್ಮಿನ್ಪ್ರಜಾಪತಿರ್ವಾಯಂಭೂರ್ತ್ವಾ
ಚರತ್ಸಯಿೂ ಮಮಪಶ್ಯತಾ ವರಾಹೋಭೂತ್ವಾ ಹರತಾಂ ವಿಶ್ವಕರ್ಮಾ
ಭೂತ್ವಾವ್ಯ[5]ಟತ್ ॥ ಈ ಮಂತ್ರದಿಂ ಕಳಶಂಗಳಲ್ಲಿಯುದಮಂ ಪೂರಿಸುವುದು[5] ॥

ಶ್ಲೋಕ ॥
ಊರ್ಣನಾಭಿರ್ಯಥಾ ತನ್ತೂನ್ ಸೃಜತೇ ಸಂಹರತ್ಯಪೀ
ಜಾಗ್ರತ್ಸ್ವಪ್ನೇ ತಥಾ ಜೀವೋ ಗಚ್ಛತ್ಯಾಗಚ್ಛತೇ ಪುನಃ ।

---

1 ತಿ ಸಚರಂ ಕುರ್ವಿತಾಗ್ನೆ ಘೃತಂ ವಿಷ್ಣೋಸ್ತಂಡುಲಾಸ್ತಸ್ಮಾತ್ (ಜ) 2 ರಾಃ (ಜ) 3 ಸ್ನಾಂ (ಜ) 4 ಅನೇನ ಮಂತ್ರೇಣ ಕಲಶಾನ್ ತಂಡುಲೋಪರಿಸ್ಥಾಪಯೇತ್ (ಜ) 5 ಮಯೇತ್ ಇತಿಮಂತ್ರೇ ಕಳಶೇಷೋದಕಮಂ ಪೂರಯೇತ್ (ಜ)

• ಈ ಪಾದ ಗ ಪ್ರತಿಯಲ್ಲಿಲ್ಲ

ಇತಿ ಮಂ[1]ತ್ರದಿಂ ಇಪ್ಪತ್ತೇಳು ತಂತುಗಳಂ ಕಳಶಂಗಳಿಗೆ ಸುತ್ತುವುದಂ[1] ॥
ಶ್ರುತಿಃ ॥
ಸ ಹಿರತ್ನಾನಿದಾಶುಷೆ ಸುವಾತಿ ಸವಿತಾ ಭಗಃ । ತಂ[2]ಭಾ[2]ಗಂ ಚಿತ್ರಮೀಮಹೇ
[3]ಈ ಮಂತ್ರದಿಂ ಕಲಶಂಗಳಲ್ಲಿ ರತ್ನಗಳನಿರಿಸುವುದು[3]

ಸರ್ವವರ್ಣೇ ಮಹಾದೇವೀ ಸಂಧ್ಯಾವಿದ್ಯೇ ಸರಸ್ವತೀ
ಓಜೋಸಿ। ಸಹೋಸಿ। ಬಲಮಸಿ। ಭ್ರಾಜೋಸಿ। ದೇವಾನಾಂ ಧಾಮನಾಮಾಸಿ
ವಿಶ್ವಮಸಿ। ವಿಶ್ವಾಯು। ಸರ್ವಮಸೀ ಸ[4]ರ್ವಾ[4]ಯುರಭಿಭೂರೋಂ
[5]ಈ ಮಂತ್ರದಿಂ ಕಳಶಂಗಳಲ್ಲಿ ಸುವರ್ಣಪುಷ್ಪವನಿಕ್ಕುವುದು[5]
ಏಷ ರುದ್ರೋಯದಗ್ನಿರೋಷಧಿಃ ಪ್ರಾಸ್ಯ[6]ಗ್ನ[6]ವಾದಿತ್ಯಂ। ಜುಹೋತಿ ರುದ್ರಾ
ದೇವಪಶೂ[7]ನ[7]ನ್ತರ್ದಧಾತ್ಯಧೋ ॥ ಓಷಧಿಶ್ಚೈವ ಪಶೂನ್। ಪ್ರತಿಷ್ಠಾಪಯತಿ॥
[8]ಈ ಮಂತ್ರದಿಂ ಕಲಶಂಗಳಲ್ಲಿ ಚಿಗುರ್ಗಳನಿಕ್ಕುವುದು[8] ॥
॥ ಯುವಂ ವಸ್ತ್ರಾಣಿ [9]ಪೀವಸಾವಸಾಥೆ ಯುವೋರಚ್ಛಿದ್ರಾಮನ್ತವೊ[9]ಹಾಸರ್ಗಾಃ ॥
[10]ಇತ್ಯಾದಿ ಮಂತ್ರದಿಂ ಕಳಶಂಗಳಿಗೆ ವಸ್ತ್ರಸಮರ್ಪಣೆಯ ಮಾಡುವುದು[10] ॥

ಮುಂತೆ ಋತ್ವಿಜರ ಕಳಶದ ಲ[11]ಕ್ಷಣಂ ತಿಳಿಯೆ
ಲಂ[11]ತಷ್ಟದಳ ಪದ್ಮದೊಳ್ ಹೇಮಕಳಶಮ
ತ್ಯಂತ ಸುರಗಂಗೆ ಮೇರುಗಿರಿ ಕಲ್ಪತರು ತತ್ವನಭಸುಮನೆಯೆ ಧೇನುವು
ಸಂತತ ಸಮಾನಾಸು ಪರಮಾತ್ಮಶಕ್ತಿ ತಾ
ನಂತು ಶಿವಸಾದಾಖ್ಯಮಾ ಲಿಂಗಮೀಶಾನ
ನಂತೆ ಮುಖಪ್ರಣವಾರ್ಣಮಾ ಯಕಾರಾಕ್ಷರಂ ಮೂಲಪಂಚಾರ್ಣಮಂತ್ರಂ ೬೮

ಆ ಕಳಶದೊಡೆಯ[ನೇ] ವಿ[12]ಶ್ವೇಶ್ವರಾ[12]ಚಾರ್ಯ
ರಾ ಕಾಯಕಾಂತಿಯೇ ತ[13]ಪ್ತ[13] ಕಾಂಚನವರ್ಣ
ಮಾ ಕಪಟರಹಿತಮನವಾಹನೋನ್ಮನಿಶಕ್ತಿ ಧ್ವಜಹಂಸ ವಿಸ್ತಾರಮೊ
ಆಕಾಶಕೇಶಮತ್ಯಾಶ್ರಯಂ ನವರತ್ನ
ಶ್ರೀಕರಸುಕೋಟೀರ ತತ್ವದಂಡಂ ಬೆಳಗು
ವಾ ಕರ್ಪರಂ ಗಗನವೇ ಮುದ್ರೆ ಶಾಂತಿ ಭಸಿತೋದ್ಧೂಳ[14]ನಂ[14] ಗುಣಮಣಿ ೬೯

---

1 ತ್ರೇಣ ಸಪ್ತವಿಂಶತಿ ತಂತೂನ ಕಳಶಾನ್ವೇಷ್ಟಯೇತ್ (ಜ) 2 ಭ (ಜ) 3 ಅನೇನಕಲಶೇಷು ರತ್ನಾನಿ ವಿಕ್ಷಿಪೇತ್ (ಜ) 4 ದಾ (ಜ) 5 ಅನೇನಕಲಶೇಷು ಸುವರ್ಣಪುಷ್ಪಂ ನಿಕ್ಷಿಪೇತ್ (ಜ) 6 ಗ್ನ್ಯಾ (ಜ) 7 ನಾ (ಜ) 8 ಅನೇನ ಕಲಶೇಷು ಪಲ್ಲವ ನಿಕ್ಷಿಪೇತ್ (ಜ) 9 ಪಿವಸಾವ ಸೊಡೆಯುರಚ್ಛಿದ್ರಾಣಮ (ಜ) 10 ಅವಾತೀರತಮ್ಮೃತಾನಿ ವಿಶ್ವರುತಸ್ಯಮಿತ್ರಾವರುಣಾಸತೆದೆ ಅನೇನ ಕಲಶೇಭ್ಯೋವಸ್ತ್ರಂ ಸಮರ್ಪಯೇತ್ (ಜ) 11 ಕ್ಷ್ಯಮೆಂತೆನಲ್ಕಂ (ಜ) 12 ಶ್ವನಾಥಾ (ಕಗ) 13 ತ್ವ (ಕಗ) 14 ನರ (ಜ)

ಭೂಷಣಂ ದಿಗ್ವಸನ ಪ್ರಾಣಲಿಂಗಂ ಮಹೋ
ಲ್ಲಾಸ ವರಸಚ್ಚಿದಾನಂದಮಯ [1]ರವಿಯ[1] ಸಂ
ಕಾಶಮದು ನಿರ್ಭಾವ ಸೆಜ್ಜೆಯೊಳಗಜರಂಧ್ರದಲ್ಲಿ ಧರಿಸುತ ಸಾಸಿರ
ಲೇಸಾದ ದಳದಿ ಭಜಿಸುತ್ತ ಶಶಿಕಾಂತ ತಳ
ದಾಸಕ್ತ ವೈರಾಗ್ಯಪೀಠದೊಳ್ ಭದ್ರಾಸ
ನಾಸೀನನಾಗಿರಲ್ ಪ್ರಮಥಮುನಿಗಣರೆಲ್ಲರೇಗಳುಂ ಪೂಜಿಸುತಿರೆ ೭೦

ಅದುವೆ ಪರತತ್ವ ಶ್ರೀಗುರುಕಳಶಬೀಜವಿ
ಲ್ಲದ ವೃಕ್ಷಮದರ ಶಾಖೆಗಳುಮಾವಾವೆನ
ಲ್ಕದರ ಈಶಾನದೊಳ್ ಲೋಹಘಟ ಪಾತಾಳಗಂಗೆ ನಕ್ಷತ್ರಗೋತ್ರಂ
ವಿದಿತ ಮಂದಾರಕುಜ [2]ಕಪಿಲೆ ಗೋ[2]ವಾಯು ಭೂ
[3]ತದಕನಾದಿಯ ಶಕ್ತ್ಯ[3]ಮೂರ್ತಿ[4]ಸಾ[4]ದಾಖ್ಯಮ
ತ್ತಧಿಕ ತತ್ಪುರುಷಮುಖ ಸುಪ್ರಸಾದಂ ಲಿಂಗ ಸಾಮವೇದದ ಶಾಖೆಯುಂ ೭೧

ವರ ವಕಾರಂ ಬೀಜ ಸ್ಥೂಲಪಂಚಾಕ್ಷರಂ
ಚಿರಮಂತ್ರಮಾಚಾರ್ಯ ರೇವಣೇಶ್ವರನಂಗ
ಮಿರುಗುವತಿ ಮಾಣಿಕ್ಯವರ್ಣ ವೃಷಕೇತು ವಾಹನ ಸಿಂಹಯತಿಯಾಶ್ರಮಂ
ಪರಮಾಷ್ಟಶಿಖಿ ಯೋಗದಂಡಮವಧೂತಮಾ
ರ್ಗರರೆಯಾಚಾರ ಖಪ್ಪರವು ಬಲಮುರಿಮುದ್ರೆ
ಯರಿದಾದ ಕ್ಷಮೆ ಭಸ್ಮ ರುದ್ರಾಕ್ಷೆ ಹಾರ ಕೇಯೂರ ಮುಖ್ಯಾಭರಣವು ೭೨

ಕಾರ್ಪಾಸ ಕಂಥೆ ಘನ ಪ್ರಾಣಲಿಂಗವೆಯುವರ
ಸರ್ಪಭೂಷಣ ಶಾಂತಮಲ್ಲಿಕಾರ್ಜುನ ಲಿಂಗ
ಮಿರ್ಪುದದು ಸುಜ್ಞಾನಕಾಂತಿ [5]ಸುಮನಸದ[5] ಸೆಜ್ಜೆ ಭ್ರೂಮಧ್ಯದಭ್ರದಲ್ಲಿ
ಒಪ್ಪಚ್ಚಿ ಬಿಡದೆಯವಧರಿಸಷ್ಟದಳವನಂ ಸ
ಮರ್ಪಿಸಾರಾಧಿಸುತ ವಜ್ರದ ಶಿಲಾತಳದೆ
ಮಾರ್ಪೊಳೆವ ಪೀಠದೊಳ್ ಪದ್ಮಾಸನದಿ ಮೆರೆವ ಗುರುವರನ ಪದಪದ್ಮಮಂ ೭೩

---

1 ರವಿಕೋಟಿ (ಜ) 2 ಸುಶೀಲದುಘ (ಜ) 3 ತುದಿತುದಾನಾದಿ (ಜ) 4 ಪಾ (ಗ) 5 ಯುತ ಸುಮ (ಜ)

ಸಾಕ್ಷಿ ॥
ಶ್ರೀಮತ್ಸಿದ್ಧ ದಯಾಧರ್ಮ ಶಿಕ್ಷಾಘೋಷಣಶೋಭಿತಂ

ಹರಿವಿರಿಂಚಿಗಳು ವಿದ್ಯಾಧರರು ಸಿದ್ಧರುಂ
ತರತರಂಗೊಂಡು ಕೋಟಾಕೋಟಿ ಭಜಿಪರಿಂ
[1]ದ[1]ರರೆ ಈಶಾನಕಳಶಂ ಮುಗಿದುದಾಗ ಗುರುಕಳಶಕಗ್ನಿಯ ದೆಶೆಯೊಳಂ
ಚಿರ ತಾಮ್ರಕಳಶಮಾ ಗಂಗಾವತೀ ಗಂಗೆ
[2]ಇರದೆ[2] ತ್ರಿಕೂಟ ಪರ್ವತಸುರಭಿಧೇನು ಬಂ
ಧುರವೃಕ್ಷ ಪಾರಿಜಾತಾಗ್ನಿಭೂತಂ ವ್ಯಾನವಾಯು [3]ಇ[3]ಚ್ಛಾಶಕ್ತಿ[4]ಯು[4] ೭೪

ವರ ಮೂರ್ತಿಸಾದಾಖ್ಯ ಚರಲಿಂಗ ಘೋರಮುಖ
ವಿರದೇ ಯಥರ್ವಣಸುಶಾಖೆ ಬೀಜಂ ಶಿಕಾ
ರರಿದೆನಿಪ ಸೂಕ್ಷ್ಮಕಂ ಚೂರ್ಣಮಲ್ಲಿಯ ಗುರುಗಳಾ ಮರುಳಸಿದ್ಧೇಶ್ವರಂ
ಶರಿರವೇ ನೀಲರತ್ನದ ಕಾಂತಿ ವ್ಯಾಘ್ರತಾ
ವರ ವರೂಥಂ ಶಿಖಿಯನಂತ ವಾನಪ್ರಸ್ಥ
ಸರಸಾಶ್ರ[5]ಮಂಥ[5]ದೂ[6]ತ[6]ಮಾರ್ಗಧೂಮಧ್ವಜಂ [7]ವರಕು[7]ಠಾರವೆ ದಂಡವು ೭೫

ಸಾಕ್ಷಿ ॥
ಸಿದ್ಧಆಚಾರಭಿಕ್ಷಾಸುಘೋಷಣಂ ಚ ಮನೋಹರಂ

ಅವಿಚಾರ ಖರ್ಪರೆಡಮುರಿ ಮುದ್ರೆ ದಯೆ ಧರ್ಮ
[8]ಮವಿರಳ[8] ದಯಾಭಸ್ಮ ಶಿವಯೋಗ ಮಣಿಭೂಷ
[9]ಣವು[9] ಜಜ್ಜುಗಂಧೆಯಾ ಪ್ರಾಣಲಿಂಗಂ ಕಪಿಲಸಿದ್ಧಮಲ್ಲೇಶನಮಲ
[10]ಪವನಸಖ[10]ಕಾಂತಿಯಾ ಶಿಂಶುಮಾರ ಸುಶಿಷ್ಯ
ನವಿರತದ ನಿರಹಂಕರಣ ಸೆಜ್ಜೆಯೊಳಗೆ ಮ
ತ್ತವಿಗತ ವಿಶುದ್ಧಿಚಕ್ರದ ಮೇಲೆ ಧರಿಸಿ ಷೋಡಶದಳದೆ ಪೂಜಿಸುತ್ತ ೭೬

ವಿನುತೇಂದ್ರನೀಲದ ಶಿಲಾತಳದೊಳಾ ರಾಗ
ದನುಪಮದ ಪೀಠಾಗ್ರದಲ್ಲಿ ಸಿದ್ಧಾಸನದೊ
ಳನವರತ ರಾಜಿಸುವ ಗುರುವರನ ಯಕ್ಷ ರಾಕ್ಷಸ ಮುನೀಶ್ವರರು ಪಾದ
ವನಜಮಂ ಭಜಿಸು[11]ತ್ತಿಲ್ಲಿಂ[11]ತಗ್ನಿದೆಶೆ ಕಳಶ
ವನುವಿನಿಂ ವಿವರಿಸಿದೆವಿನ್ನು ನೈಋತ್ಯನೊಳ್
ವಿನಂಗುತಿಹ ರತ್ನಕಳಶಂ ಸಿಂಧು ಗಂಗೆ ಕೌಮಾರಪರ್ವತಮೊಪ್ಪುವ ೭೭

1 ತ (ಜ) 2 ಯರರೆ (ಜ) 3 ಮಿ (ಜ) 4 ಯುಂ (ಜ) 5 ಮಾವ (ಜ) 6 ತದ (ಜ) 7 ಕು (ಜ) 8 ದವಿರತ (ಜ) 9 ತವೆ (ಜ) 10 ಜವಗಸುಖ (ಜ) 11 ತಿರಲಿಂ (ಜ)

ಸಂತಾನವೃಕ್ಷ ಭದ್ರಾಧೇನು ಭೂತಜ[1]ಲ
ಮಂತಪಾನಾ[1]ನಿಲಂ ಜ್ಞಾನಶಕ್ತಿಯು [2]ಕೇಳ
ಲಿಂತಂಗ[2]ಕರ್ಮಸಾದಾಖ್ಯ[3]ದೇವಂ[3] ವಾಮದೇವ ಯಾಜು[4]ಷವೆ ಶಾಖೆ[4]
ಮುಂತೆ ಮಾಕ್ಷರ[5]ಬೀಜ[5]ಪಂಚಾಕ್ಷರಂ ಮಂತ್ರ
ತಿಂತಿಣಿಪ ಭವತಿ ಭಿಕ್ಷಾಂದೇಹಿ ಚಿಹ್ನೆಯಿಂ
ದಂ ತೋರ್ಪ ಪಂಡಿತಾರಾಧ್ಯರವರಂಗವುರುಣಂ ಶಿಲಾಪಾದ ಶಿಷ್ಯಂ ೭೮

ಸಾಕ್ಷಿ ॥
ಭಸ್ಮಲೇಪನವತ್ಯಿದ್ಧ ಸದಾಭಿ[6]ಕ್ಷಾಂ[6]ಚ ತಂಡು[7]ಲಾಃ[7]

ಕರಿವಾಹನಂ ವ್ಯಾಸಪಾಳಿಯಾಶ್ರಮವೆ ಕೇ
ಳರಿವಹ ಗೃಹ[8]ಸ್ಥಭಾವಂ ಶಿಖಿಯ ಮೇಚಕಂ
ಸ್ಥಿರ[8]ಪಾಶುಪತಮಕುಟಮಾ ವೇಣುದಂ[9]ಡ[9]ಸುವಿಚಾರ ಕಪ್ಪರ ತಾಮ್ರದ
ಮುರಿಯು ಚಿದ್ಭಸಿತಾಕ್ಷಮಾಲೆಯಾಭರ[10]ಣಮಂ[10]
ಬರ ಗೈರಿಕಾ[11]ಶ್ರಯಂ ದೇವ ಚೈತನ್ಯಮಯಂ[11]
ವರ ಚನ್ನಮಲ್ಲಿಕಾರ್ಜನಲಿಂಗ ಸ್ಫಟಿಕಸಂಕಾಶಾಭದಿಂ ಮೆರೆವುದು ೭೯

ಅದಂ ಸುಬುದ್ಧಿಯ ಸೆಜ್ಜೆಯೊಳಗನಾಹತಚಕ್ರ
ಹೃದಯಕರ್ಣಿಕೆಯ ಮೇಲಲ್ಲೆ ಪನ್ನೆರಡುದಳ
ದೊದಗಿನಿಂದಾರಾಧಿಸುತ್ತ ವೈಡೂರ್ಯತಳದೊಳ್ ತ್ಯಾಗಪೀಠದಲ್ಲಿ
ಮುದದಿಂದ ಮಂಡಿಸಿಹ ಗುರಂಪ [12]ಖಗ[12]ಗಂಧರ್ವ
ರೊದಗಿ ಪೂಜಿಪರಿಂತು ಕೌಣಪನ ದೆಸೆ ಕಳಶ
ಪದಪಿನಿಂ ಮುಗಿದುದ್ದೈ ಪವನದಿಕ್ಕಿನಲಿ ರಾಜಿತಕಳಶಭಾಗೀರಥಿ ೮೦

ಗಂಗೆ ಹಿಮ[13]ವಂತಪರ್ವತವು[13]ಹರಿಚಂದ[14]ನಂ[14]
ಪಿಂಗದ ಕುಜಂ ಧೇನು ನಂದೆಯಾ ಧರೆ ಭೂತ
ಮಂಗಚೈತನ್ಯ ಮರುತ ಪ್ರಾಣಶಕ್ತಿಕ್ರಿ[15]ಯೆಯಾ[15]ಕರ್ಮಸಾದಾಖ್ಯವು
ಮಂಗಳದ ಗು[16]ರು[16]ಲಿಂಗಮುಖಮೆ ಸದ್ಯೋಜಾತ
ಪಿಂಗದೆ [17]ನ[17]ಕಾರ ಬೀಜಾಕ್ಷರಂ ಮಾಯಾಖ್ಯ
ತುಂಗ ಪಂಚಾರ್ಣಮಾಚಾರ್ಯರೇಕೋರಾಮರಂಗಶ್ಯಾಮಳಸುವರ್ಣಂ ೮೧

---

1 ಲಾನಂತಪಾರಾ (ಜ) 2 ಕೇಳ್। ಕಂತುಮಾ (ಜ) 3 ಮುಖ (ಜ) 4 ವಾಖೆಬೀಜಂ (ಜ) 5 ಶೇಷ (ಜ) 6 ಷ (ಜ) 7 ಲಂ (ಜ) 8 ಸ್ಥಾಂತಮಳಶಿಖಿಪಂಚಕಂ (ಜ) 9 ತ (ಕಗ) 10 ಣಾಂ (ಜ) 11 ಮಯುಂತವರಚೈತನ್ಯಶಿವ (ಜ) 12 ಗರುಡ (ಜ) 13 ವಾನ್‌ಪರ್ವತಂ (ಜ) 14 ನಸು (ಜ) 15 ಯಾ (ಜ) 16 ಣ (ಕಗ) 17 ವ (ಜ)

ಸಾರ ಋ[1]ಕ್ಕಾ[1]ಖಿಯಾರೀಕ್ಷಪಾದಂ ಶಿಷ್ಯ
ಚಾರುತರ ಪ್ರಾಣಲಿಂಗಂ ಭೋಗಮಲ್ಲೇಶ
ನಾ ರಮ್ಯಸೌಚಿತ್ತ ಸೆಜ್ಜೆ ಮಣಿಪೂರದೊಳ್ ಧರಿಸಿ ದಶದಳ[2]ದಿ ಯಜಿಪಂ[2]
ಧೀರನೆ ತುರಂಗವಾಹನ ಪ್ರಣಮಪಾಳಿ ಮ
ತ್ತಾರಯ್ಯೆ ಬ್ರಹ್ಮಚರ್ಯಾಶ್ರಮಂ ಶಿಖಿಯೇಕ
ತೋರುತಿಹ ಚಕ್ರಮಕುಟುಂ ಮುಳ್ಳುಗದ ಕೋಲುವಾ ಸ್ವಯಂಪಾಕ ಸತತಂ ೮೨

ಸಾಕ್ಷಿ ॥
ವಿಚಾರಭಿಕ್ಷಾ [3]ಚೇತ್ಯೇ[3]ತದ್ಭೋಷಣಂ ಚ ಮನೋಹರಂ

ಬೆಳ್ಳಿಮುರಿ ಭಸ್ಮರುದ್ರಾಕ್ಷೆ ಭೂಷಣ ಚೆಲ್ವ
ನಂಳ್ಳ ಶುಭ್ರಾಂಬರಂ ಗೋಮೇಧಿಕ ಶಿಲಾಗ್ರ
ದಲ್ಲಿ ಮಂಭಾಗ ಪೀಠದೊಳು ರಾಜಿಸುವ ಗುರುಪಾದಪದ್ಮವನು ಬಿಡದೆ
ಒಳ್ಳಿತಹ ಭಕ್ತಿಯಿಂ ಕಿನ್ನರರು ಕಿಂಪುರುಷ
ರಲ್ಲಿ ನರ ನಾಗರ್ಕಳರ್ಚಿಸಲ್ ಮರುತದೆಸೆ
ಯಲ್ಲಿ ರಾಜಿಸುತಿರ್ಪನಮಳನೇಕೋರಾಮ ಕಲಶವಿಸ್ತಾರಮಾಯ್ತು ೮೩

ಇಂತು ಋತ್ವಿಜರಮಳಪಂಚಕ್ಷಳಶದ[4]ಬಗೆಯ[4]
ನಂತಪರಿಯಿಂ ಮುಕ್ತವಾದನಂತರದೊಳು ಸ
ಮಂತು ಶ್ರೀಗುರುಮೂರ್ತಿ ಪಂಚಕಳಶಂಗಳಂ ಕಳಶಮಂತ್ರದೆ ಸ್ಥಾಪಿಸಿ
ಮಂಂತೆ ಕಲಶಾಚಾರ್ಯರೇಪರಿಯೆನಲೆ ಪೂರ್ವ
ದಂ[5]ತ[5] ರೇವಣಸಿದ್ಧ ಮರುಳೇಶ[6] ರಾಮಗುರು
ಸಂತಂಪ್ಪ ಪಂಡಿತಾರಾಧ್ಯರಾವಾಹನಂ ಮಾಳ್ಪದಾಯಾ ವಂಶದ[6] ೮೪

ಅಲ್ಲುದಿಸಿದಾಚಾರ್ಯಪೀಠಸ್ಥ[7]ದೊ[7]ಳಗಧಿಕ
ಸಲ್ಲಲಿತ ಪಾದಪೂಜೆಗೆ ಯೋಗ್ಯರಂ ಕಂಡು
ಖುಲ್ಲತನದಿಂದವರನುಳಿದ[8]ನ್ಯರಿಂ ದೀಕ್ಷೆ ಸಂಧಿ[8]ಕರಣಕ್ಕಯೋಗ್ಯಂ
ಬಲ್ಲ ಮಾಹೇಶ್ವರರ್ಗುರಂಶಿಷ್ಯರೆಲ್ಲರಂ
ಉಲ್ಲಾಸದಿಂದವರ ವರ್ಗದವರನೆಯರಸಿ
ಮೆಲ್ಲನೇ ಕರೆಯಬೇಕಿಲ್ಲದೊಡೆ ಜಂಗಮವ ಗುರುಗಳೆಂದೇ ಬಗೆವುದು ೮೫

1 ಕುಶಾ (ಗ) 2 ದೋಳಿಜಿಸಿ (ಜ) 3 ಯೆತ್ಯಾ (ಜ) 4 ವಿವರ (ಜ) 5 ತು (ಜ) 6 ನೇಕೋರಾಮನಂತಧಿಕ ಪಂಡಿತರನಾವಾಹನಂ ಮಾಳ್ಪುದತ್ತೂಡೆ ತತ್ತದಂಶ (ಜ) 7 ರೊ (ಜ) 8 ದೀಕ್ಷೆಯೆ ಸಲ್ಲಸಾಧಿ (ಜ)

ನಿರಧಿಕರಣದ ದೀಕ್ಷೆಗೆಂತಾದೊಡಂ ಯೋಗ್ಯ
[1]ನಿ[1]ರಧಿಕರಣೋಪದೇಶ[2]ಮದೆಂ[2]ತೆನಲ್ ಪ್ರಭುವೆ
ಚಿರಪಟ್ಟಸ್ಥಲಬ್ರಹ್ಮಿ ಚನ್ನಬಸವೇಶನುರಿಲಿಂಗಪೆದ್ದಿಗಳು ಮುಖ್ಯ
ಶರಣಾಳಿ[3]ಗಳ ಸಾಧುಚರ್ಯೆಯೆ[3]ನಿರಧಿಕರಣ
ದಿರವಿದುವೆ ಸಾಧಿಕರಣಕೆ ಸದಾಶಿವನೀಶ
ಪರಮೇಶರಂದ್ರತ್ರಯಾವಯವ[4]ವೆಂತೆಂಬ[4]ಸಾಂಪ್ರದಾಯದೊಳಂದಿಸಿದ ೮೬

ಪರಮಋತ್ವಿಜರೆ ಮಠದಸ್ಥಲದ ಗುರುಗಳ
ತ್ಯುರುತರದ ಭೂಲೋಕವಃಠಗಳಾವಾವೆನ
ಲ್ಕೊರೆವೆ ಚಂಪಾರಾಮ ಕಾಶಿಯುಜ್ಜನಿ ಕೊಲ್ಲಿಪಾಕಿ ನಾಲ್ಕುಂ ಮಠಗಳಂ
ಅರಿಯಲಾ ಮಠಪೀಠ ನಾಲ್ಕುತೆರದಾ ಭಿಕ್ಷೆ
ಗುರೆಯೋಗ್ಯರೇ ಕಳಶಕಧಿಕಾರಿಗಳು ನಾಲು
ವರು ತಿಳಿಯೆ ಘನಲಿಂಗ[5]ತೀತ ಸುವಿರಕ್ತಸುಮಹಂತರೆಂದೀ ಧರೆಯಲಿ[5] ೮೭

ಅಲ್ಲಿಯ ಮಹತ್ಪದದ ಚರಲಿಂಗ ಮೂರ್ತಿಗಳ
ಸಲ್ಲಲಿತ ಭಕ್ತಿಯಿಂದರ್ಘ್ಯಾರ್ಚಮನವಿತ್ತು
ಮುಲ್ಲಾಸದಿಂದ ಮೂರ್ತಂಗೊಳಿಸಿಯರ್ಚನೆಗೆ ಯೋಗ್ಯರಹ ಋತ್ವಿಜರಿಗೆ
ಬಲ್ಲ ಗುರುಭಕ್ತಿಯಿಂದಡ್ಡಬಿದ್ದೊಂದಿ ಕರ
ಪಲ್ಲವಂಗಳಂ ಪಿಡಿದನೇಕ ಸ ಭ್ರಮದಿ ದ
ಮೆಲ್ಲನಾಹ್ವಾನಿಸುತ ಕಳಶದೊತ್ತಿನೊಳು ಮೂರ್ತಂಗೊಳಿಪುದೆಂತೆಂದೊಡೆ ೮೮

ಎಲೆ ಗುರುವೆ ತದ್ವಂಶಜನರಿಲ್ಲದಿರಲೆಂತು
ನೆಲೆಯಾಗಿ ಪೆ ಳ್ವುದನಲಾಸವ ಯದೊಳಗೆ ಬ
ಲ್ಲಲಘುಜುಂಗಮವಸಾಪೂರ್ವದಾಚಾರ್ಯರೆಂದೇ ಬಗೆದಂ ನೆಲೆಗೊಳಿಪುದಂ
ಸಲೆ ಮರುತದಿಕ್ಕಿನೊಳ್ ರಜತಕಲಶಸ್ಥಾನ
ಕೊಲವಿನಿಂ ಪಡುವಣಾ ಬಿಳಿಯ ಗದ್ದುಗೆಯಲ್ಲಿ
ಲಲಿತ ಏಕೋರಾಮದೇವರಂ ಚಾರುಸದ್ಯೋಜಾತದಿಂ ಸ್ಥಾಪಿಸಿ ೮೯

ಸಾಕ್ಷಿ॥ ಶಿವರಹಸ್ಯೇ॥ ಮ[6]ನ್ತ್ರಮ್॥
ಆರ್ಯಾಶ್ಲೋಕ॥
ಚಂಚತ್ಸೌದಾಮನೀವತ್ಸ್ಫುರತಿ ಸತಿಯತ್ಸ್ಸರ್ವದಾ ಸೂಕ್ಷ್ಮರೂಪಂ[6]
ಜ್ಯೋತಿರ್ಜ್ವಾಲಾಮಯಂ ಯದ್ಯತಿ ಪತಿಹೃದಯೇದೀಪವದ್ವೇದಸಾರಂ

---

1 ವರನಿ (ಜ) 2 ಮೆಂ (ಜ) 3 ಕೆಳಿ ಚಿದ್ರೂಪ ದೇಶವೆ (ಜ) 4 ತತ್ವ (ಜ) 5 ತಿಥ್ಯ ವಿರಕ್ತರೆ ಮಹಾಮಹಂತ ಸತ್ಯಂ (ಜ) 6 ನ್ತ್ರ ಚಂಚತ್ ಸೌದಾಮಿನಿ ವತ್ಸರಚಿರಯತಿಯಸ್ಥತ್ಸದಾ ಸೂಕ್ಷ್ಮರೂಪಂ (ಜ)

ತತ್ವಾಘೋರಾದಿಬೀಜಂ ಶಿವಮಶಿವಹರಂ ಸರ್ವತೋ ವಕ್ತ್ರನೇತ್ರಂ
ಧ್ಯಾಯೇತ್ತ್ರಧ್ಯಾನಗಮ್ಯಂ ಶುಭದಮಭಯದಂ ಶೈವಸಾದಾಖ್ಯತತ್ವಂ

॥ವೇದಮನ್ತ್ರಮ್॥
ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯವೈ ನಮೋನಮಃ
ಭವೇಭವೇನಾತಿಭವೇ ಭವಸ್ವಂ ಭವೋದ್ಭವಾಯ ನಮಃ॥

ಓತು ಈಶಾನಲೋಹದ ಕಲಶದೊತ್ತಿನೊಳ್
ಖ್ಯಾತಯುತ್ತರದೆಸೆಯ ಕೃಷ್ಣಕಂಬಳಪೀಠ
ದಾ ತಾಣದಲ್ಲಿ ರೇಣುಕರಜ್ಯೋತಿಸ್ತಂಭ ವಾಮದೇವಾಯಯೆನಿಪ
ನೂತನಸುಮಂತ್ರಂಗಳೋದುತ್ತ ಕರಸರಸಿ
ಜಾತಮಂ ಪಿಡಿತಂದು ಉತ್ತರಾಶೆಯೊಳು ಪ್ರ
ಖ್ಯಾತವಹ ಗುರುಸಾರ್ವಭೌಮನಂ ಭೀಮನಂ ಮೂರ್ತಿಗೊಳಿಸುತ್ತ ಮುದದಿಂ ೯೦

ಮನ್ತ್ರಮ್॥
ಜ್ಯೋತಿಸ್ತಮ್ಭಾಯಮಾನ ಸ್ಫುಟತರದಿನಕೃತ್ಕೋಟಿಕೋಟಿಪ್ರಕಾಶಂ
ಮೂಲಸ್ತಂಭಾಭಿಧಾನಂ ಮುನಿಭಿರನುದಿನಂ ಮೃಗ್ಯತೇ ಹೃದ್ಗತಂ ಯತ್
ಇ[1]ಷ್ಟಾಪೂರ್ತಿ[1]ಪ್ರಯುಕ್ತಂ ಸಕಲ ಶುಭಕರಂ ಭುಕ್ತಿಮುಕ್ತಿಪ್ರದಂ ಯತ್
ಧ್ಯಾಯೇತ್ತದ್ಧ್ಯಾನಗಮ್ಯಂ ಶುಭದಮಭಯದಂ ಮೂರ್ತಿಸಾದಾಖ್ಯತತ್ವಂ

•॥ ವೇದಮನ್ತ್ರಮ್ ॥•
ವಾಮದೇವಾಯ ನಮೋ ಜ್ಯೇಷ್ಠಾಯನಮಃ ಶ್ರೇಷ್ಠಾಯನಮೋ
ರುದ್ರಾಯನಮಃ ಕಾಲಾಯನಮಃ ಕಲವಿಕರಣಾಯನಮೋ
ಬಲಾಯನಮೋ ಬಲ ವಿಕರಣಾಯನಮೋ ಬಲಪ್ರಮಥ[2]ನಾ[2]ಯ ನ[3]ಮಃ[3]

ಬಳಿಕಗ್ನಿದೆಶೆಯ ತಾಂಬ್ರದ ಕಳಶದೊತ್ತಿನೊಳ್
ನಳನಳಿಸುವರುಣೋದಯದ ದಿಕ್ಕಿನಲ್ಲಿ ನಿ
ರ್ಮಳಶೋಣವಸ್ತ್ರಗದ್ದುಗೆಯೊಳಾ ಕಳಶಕಧಿನಾಥ ಮರುಳೇಶನವರ
ತೊಳಪ ಹಸ್ತವ ಪಿಡಿದು ತಂದು ಲಿಂಗಾಕಾರ
ದಳವಟ್ಟ ಘೋರೇಭ್ಯೋ ಎಂಬ ಮಂತ್ರಗಳಿಂದ
ವಿಳಿ[4]ರ್ದ ಮಾಯಾಕರ್ಮದೂರನಹ ಗುರುವ ಮೂರ್ತಂಗೊಳಿಪುದಾನಂದದಿಂ ೯೧

---

1 ಇಷ್ಟೈಃ ಮೂರ್ತಿಃ (ಜ) 2 ನಾಥಾ (ಜ) 3 ಮಃ ಸರ್ವಭೂತದಮನಾಯನಮಃ (ಜ) 4 ರ್ವ (ಜ)

• ಜ ಪ್ರತಿಯಲ್ಲಿಲ್ಲ

॥ಮಂತ್ರ॥
ಲಿಂಗಾಕಾರಂ ಸಲಿಂಗಂ ಜ್ವಲದನಲಶಿಖಾಭಾಸುರಂ ಭಾಸಮಾನಂ
ತಸ್ಯಾ[1]ರ್ಥಾರ್ಧಭಾಗೇ[1] ಮುಖಕಮ[2]ಲಮರಂ[2]ಶೋಭತೇ ಶೋಭಮಾನಂ
ಸಾರ್ಥಂ ನೇತ್ರತ್ರಯಾಣಾಮವಯವವಿರತಂ ಬ್ರಹ್ಮತತ್ವಾಭಿಧಾನಂ
ಧ್ಯಾಯೇತ್ತದ್ಧ್ಯಾನಗಮ್ಯಂ ಶುಭದಮಭಯದಂ ಮೂರ್ತಿಸಾದಾಖ್ಯತತ್ವಂ
ಅಘೋರೇಭ್ಯೋಥಘೋರೇಭ್ಯೋ ಘೋರಘೋರತರೇಭ್ಯಃ
ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ

ಮುಂದೆ ನೈರುತ್ಯನೊಳಗೆಸೆವ ರತ್ನದ ಕಳಶ
ದಂದಮದರೊತ್ತಿ[3]ನ ಕೃತಾಂತನ ಸುದಿಕ್ಕಿನಲಿ[3]
ಸುಂದರದ ಪೀಠಾಗ್ರದಲ್ಲಿ [4]ತದ್ವಂಶ[4]ಜರ ಪಂಡಿತಾಚಾರ್ಯರೆಂದು
ವಂದಿಸುತ ಕರಕಂಜವಿಡಿ[5]ದು ರುದ್ರಾಷ್ಟಮಂ[5]
ದಂದದಿಂ ತತ್ಪುರು[6]ಷಪರವಾದ ಮಂತ್ರಗಳ[6]
ಛಂದದಿಂದೋದುತ್ತ ಮೂರ್ತಿಗೊಳಿಸುವುದು ಮಾಹೇಶ್ವರರು ಸಂಭ್ರಮದೊಳುಂ ೯೨

ಸಾಕ್ಷಿ॥
ದ್ರಾ[7]ಘಿಷ್ಟಂ[7] ದಿವ್ಯಲಿಂಗಂ ಸ್ಫಟಿಕಮಣಿನಿಭಂ ಸ್ಥೂಲಮಾಧ್ಯನ್ತಮಸ್ಮಿನ್
ಶಾನ್ತಂ ತದ್ವಿಶ್ವತೋಯಂ ಕಮಲಸ[8]ಮು[8]ಖೈಃ ಪಂಚಮೂರ್ಧ್ನಾಂ ಚತುರ್ಭಿಃ
ದಿವ್ಯಂ[9] ಕಲ್ಪಾಮ್ಬರಾಢ್ಯಂ ಚರಣಯುಗಯುತಂ ಸಾಷ್ಟಬಾಹೋರ್ಧ್ವದಣ್ಡೈಃ
ಧ್ಯಾಯೇತ್ತದ್ಧ್ಯಾನಗಮ್ಯಂ ಶುಭದಮಭಯದಂ ಕರ್ತೃಸಾದಾಖ್ಯತತ್ವಂ
ತತ್ಪುರುಷಾಯ ವಿದ್ಮಹೇ ವಾಮದೇವಾಯ ಧೀಮಹಿ
ತನ್ನೋರುದ್ರಃ ಪ್ರಚೋದಯಾತ್॥

ಆಯಾ ಸಂತತಿಜರ ಮೂರ್ತಿಗೊಳಿಸುತ್ತರ್ಘ್ಯ
ಮಾಯತ ಸುಪಾದ್ಯಾಚಮಾನಗಂಧಾಕ್ಷತೋ
ಚ್ಛಾಯಸುಮಧೂಪ ದೀಪಾರತಿಗಳಿಂ[10]ಯ[10]ಜಿಸಿ ಕರ್ಣಪತ್ರೋರುಹಾರ
[11]ಕೆ ಯೂರಘನಪವಿತ್ರಾಂಗುಲಿಯ ಕಳಗಳಿಂ
ಕಾಯಕದ ಕಂತೆ ನಡುಕಟ್ಟುತ್ತಲಿ ಯಕು
ಲ್ಲಾಯ[11] ಮುಂತಾದ ವಸ್ತುಗಳಿತ್ತು ಶಿಷ್ಯ ಮುಂತೆಡೆಗೆಯ್ವುದಾನಂದದಿಂ ೯೩

1 ದುರ್ಗೀದ್ವೈತಭಾಗೆ (ಜ) 2 ಲಂ (ಜ) 3 ನೆಮದಿಕ್ಕಿನೊಳ್ ಚಿತ್ರತರ (ಜ) 4 ದೃತ್ತಿ (ಜ) 5 ರುದ್ರನಿಷ್ಪಾಮೆಂ (ಜ) 6 ಪಾಯ ಮಂತ್ರಂಗಳಿಂ (ಜ) 7 ಸಿಷ್ಟಾಂ (ಜ) 8 ಯಯು (ಕಜ) 9 ವ್ಯಾ (ಕಗ) 10 ದೆ (ಜ) 11 ಮೀಯುವಿಲ್ಲದ ಪವಿತ್ರಾಂಗುಲಿಗಳಿಂ ಧೋತ್ರಮಾಯುಧಿಕ ನಡುಕಟ್ಟು ಬಹಿರ್ವಾಸಕಂಥೆ ಕುಲಾಯ (ಜ)

ಈ ತೆರದೆ ಗುರುನಾಥ ಋತ್ವಿಜರ ಕುಳ್ಳಿರಿಸೆ
ಯಾ ತೂರ್ಯದೂರ್ಧ್ವದೀಶಾನಮುಖ ತಾನಾದ
ಜಾತಗುರುವಿಂಗಡ್ಡಬೀಳಲ್ ಪರಾಂಬರಿಸಿ ಶರಣಾಳಿ ಜಯಜಯ ಎನೆ
ಸಾತಿಶಯ[1]ದಿಂದ ಹೈಮೇ ಎಂಬ ಪದವಾದಿ
ಗೋತ್ರ[1]ಮಂತ್ರಗಳೋದುತಾ ಗುರುವ ಕೈವಿಡಿದು
ಪ್ರೀತಿಯಿಂ ಪೂರ್ವಮುಖವಾಗಿ ಕುಳ್ಳಿರಿಸೆ ಶಿವಧ್ಯಾನದಿಂದಿರ್ದು ಮುದದಿಂ ೯೪

ಸಾಕ್ಷಿ॥
ಹೈಮೇ ಬ್ರಹ್ಮಾಣ್ಡಪೀಠೇ ದಶಭುಜಪರಿಘಂ ಪಂಚವಕ್ತ್ರಂ ತ್ರಿಣೇತ್ರಂ
ನಾನಾಲಂಕಾರ ಘೋರೋರಗ ಶಶಿ[2]ಕ[2]ಲಂ ಶಾರದೇನ್ದುಪ್ರಕಾಶಂ
ಚಂಚನ್ಮೂರ್ಧ್ನೈಕ ತತ್ವಾತ್ಮಕಮಿದಮುದಯಾದ್ಯನ್ತ[3]ವ[3]ದ್ದಿವ[3]ನಾದಂ
ಧ್ಯಾಯೇತ್ತದ್ಧ್ಯಾನಗಮ್ಯಂ ಶುಭದಮಭಯದಂ ಕರ್ಮಸಾದಾಖ್ಯತತ್ವಂ
ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿ ಬ್ರಹ್ಮಾ ಶಿವೋಮೇ ಅಸ್ತು ಸದಾಶಿವೋಂ

॥ಗ್ರನ್ಥಾಂತರೇ॥
ಕಕಾರಃ ಪೃಥ್ವಿಸಂಜ್ಞಶ್ಚ ಳಕಾರಂ ಗಗನಂ ತಥಾ
ಶಕಾರಶ್ಚಾಪಮಿತ್ಯುಕ್ತಂ ತ್ರ್ಯಕ್ಷರಃ ಕಳಶಸ್ಮೃ[4]ತಃ[4]

ವರ ಕಕಾರವೆ ಭೂಮಿಯಾ ಳಕಾರಾಂಬರಾಂ
ತರ ಸಲಿಲಮೀ ಶಕಾರಂ ಮೂರುತತ್ವದಿಂ
ದಿರದೆ ಕೂಡಿದುದೆ ಕಳಶಾಭಿಧಾನಂ ಪಂಚಕಲಶಕ್ಕೆ ರತ್ನಂಗಳು
ದೊರೆಯದಿರೆ ಗುರುಕಳಶಕಾದೊಡಂ ರನ್ನಮಂ
ಇರಿಸುಳಿದ ಕಳಶಕ್ಕೆ ಸ್ವರ್ಣಗಳ ಮಡಗಿ ಮೇ
ಲರರೆ ದೂರ್ವೋತ್ತರಣೆ ಚೂತಾ[5]ಲ್ಲ[5]ಬಿಲ್ವ ಪಲ್ಲವಗಳಿಕ್ಕುತ ಮುದದೊಳು ೯೫

ಕುಂಭಾವಗಹನ ತೀರ್ಥಾವಗಹನಂ ಬಳಿ
ಕ್ಕೀಬರದ ಮಂತ್ರಾವಗಹನ ಲಿಂಗಾವಗಹ
ನಂ ಬಿಡದೆ ವಕ್ತ್ರಾವಗಹನಮುಂ ರಚಿ[6]ಸಿತಿ[6]ರ್ಪುದು ಧೇನು[7]ಮುದ್ರೆಯನ್ನು[7]
ಕುಂಭಿಭಯ[8]ವಹ್ನಿಭಯ ಶೀತಭಯ[8] ಮುಂತಾದ
ಹಂಬಲವ ಕೆಡಿಸುವ ಷಡಕ್ಷರಿಯ ಮಂತ್ರದೆ ಸ್ವ
ಯಂಭು ಗುರುಕಳಶಮಭಿಮಂತ್ರಿಸುತ ಮತಿಪ್ರಕಾಶಂ ಮಾಡಿ ಶಿವಲಿಂಗದ ೯೬

1 ಹೈಮೆ ಬ್ರಹ್ಮಾಂಡ ಈಶಾನಮೆಂದೋತು (ಜ) 2 ಸಕ (ಜ) 3 ಯ (ಜ) 4 ತಾ (ಕಗ) 5 ದ್ಧು (ಜ) 6 ಸಿತೋ (ಜ) 7 ಲಿಂಗಮುದ್ರೆ (ಜ) 8 ರುದ್ರಜರಶೀತಸ್ವರ (ಜ)

ಸಾಹಿತ್ಯ[1]ಮಂ ರಾಜವಶ್ಯಂ[1] ವಶೀಕರಣ
ಮಾಹಿತಾಂಜನಮದೃಶ್ಯಾ[2]ಭ್ರಗತಿಸಿದ್ಧಿ ಸಂ
ದೋಹಗಳನೀವ[2] ಘನ ನವಮಾಕ್ಷರದೊಳಗೀಶಾನಕಳಶವ ಮಂತ್ರಿಸಿ
ಮೋಹ ಕಾಪಟ್ಯ [3]ಮುಂತಾದ ದುರ್ಗುಣಗಳಂ[3]
ತಾ ಹರಿಸಿ ನಿಷ್ಠೆಯಿಂ ನೆನೆವರ್ಗೆ ಬಹು[4]ಫಲ
ವ್ಯೂಹವೊಂದಿಪ [4]ಸೂಕ್ಷ್ಮಪಂಚಾಕ್ಷರಿಯ ಮಂತ್ರದಿಂದಘೋರ[5]ದ ಕಲಶಮಂ[5] ೯೭

ದಶದಿಕ್ಕುಗಳ ಕಟ್ಟಿ ಸರ್ವಾಘಕುಳ ಕುಜನ
ವಿಸರಘೋರಂ ಹರಿಸಿ ಕ್ರೂರರಾಜನ್ಯನಂ
ವಶನಾಗಿ ಮಾಳ್ಪ ಪ್ರಸಾದಮನುವಿಂ ನಿರುತಿಕಳಶಮಭಿಮಂತ್ರಿಸುತ್ತ
ಅಸ[6]ಮಾ[6]ಣಿಮಾದಿಸಿದ್ಧಿಗಳ ಷಟ್ಸ್ಥಲಫಲವ
ನೊಸಗೆಯಿಂ ಕೊಡುವ ಮಾಯಾಖ್ಯಮಂತ್ರದೆ ಮರುತ
ದೆಸೆಯ ಕಳಶವ[7]ನು ಮತ್ತಮಭಿಮಂತ್ರಿಸುತ ತೀರ್ಥೋದಕಂ[7] ಪೂರಿಸುವದು ೯೮

ಪಿಂದೆ ಪೇಳ್ದಾ ವೇದಮಂತ್ರದಿಂದಾದೊಡಂ
ಸುಂದರದ ಶ್ರೀಷಡಕ್ಷರಮಂತ್ರವೇ ಮೊದ[8]ಲೊ
ಳ್[8]ಂದವಹ ಮಾಯಾಖ್ಯಮಂತ್ರವೇ ಕಡೆಯಾದ ಮಂತ್ರಂಗಳಿಂದಾಗಲಿ
ಬಂಧುರದ ಪಂಚಕಳಶಂಗಳೊಳ್ ವಾರಿಯಂ
ತಂದು ಪೂರ್ಣಂ ಮಾಳ್ಪುದಾ ಮಂತ್ರವಾವೆನ
[9]ಲ್ಕಂದೋಂ ನಮಶ್ಶಿವಾಯಂ ಎನುತ್ತೆ ಪೇಳ್ವುದೇ ಕೇಳ್ಪೈ ಷಡಾಕ್ಷರಿಯದು[9] ೯೯

ವಿದಿತ ಓಂ ಹ್ರಾಂ ಹ್ರೀಂ [10]ಎನುತ್ತೆ ಹ್ರೂ ಎಂದೆನುವ
ಪದವ ಪಂಚಾಕ್ಷರಿಗೆ ಕೂಡಿಸಲ್ ಸ್ಥೂಲವ
ಪ್ಪುದು ನೋಡಲೀ ತೆರದಿ ಸೂಕ್ಷ್ಮಪಂಚಾಕ್ಷರಿಯ ರೀತಿಯಂ ಭಾವಿಸಲ್ಕೆ[10]
ಒದ[11]ಗಿ ತಾನೋಂ ಹ್ರೀಂ ನಮಶ್ಶಿವಾಯ ಎನಿಪುದು
ತದನಂತರದೊಳಗೋಂ ಹ್ರಾಂ ಹ್ರೀಂ ಎನಿಸುತಿರುವ
ಪದವಾದಿಗೊಂಡ ಪಂಚಾಕ್ಷರವೆ ಮಾಯಾಖ್ಯ ಪಂಚಾಕ್ಷರಂ ಭಾವಿಸೆ[11] ೧೦೦

---

1 ಸ್ತ್ರೀ ರಾಜ ವೈಶ್ಯಂ (ಜ) 2 ಕರಣಫಲ ಸಂದೋಹಗಳನೀವ (ಜ) 3 ಮಹ ಮಾರಿಮಯ ದುಷ್ಕರಂ (ಜ) 4 ಸಿಂಧಿಯಂ ಊಹಿಸುವ (ಜ) 5 ಕಲಶವ ಮಂತ್ರಿಸಿ (ಜ) 6 ಮ ಅ (ಜ) 7 ನಭಿ ಮಂತ್ರಿಸುತ ತೀರ್ಥೋದಕಂಗಳಂ (ಜ) 8 ಲಾ।ದಂ (ಜ) 9 ಲ್ವಂದಮನು ಓಂ ನಮಶ್ಶಿವಾಯ ಯೆಂಬುದೆ ಮೂಲಷಡಕ್ಷರಂ ಕಂದಕೇಳು (ಜ) 10 ಹ್ರೂಂ ನಮಃ ಶಿವಾಯದು ಕಣ ಸ್ಥೂಲ ನವ ಮಯಾಕ್ಷರ ಸುಮಂತ್ರ ಮತ್ತಿದುವೆ ಓಂ ಹ್ರೀಂ ಶಿವಾಯ ಎಂಬುದೆ ಸೂಕ್ಷ್ಮ ಪಂಚಾಕ್ಷರಂ ಭಾವಿಸೆ (ಜ) 11 ವಿ ಓಂ ಹ್ರಾಂ ಹ್ರೀಂ ನಮಶಿವಾಯ ಯೆನಿಪುದಷ್ಟಕ್ಷಷ್ಟ ಮಯೂಕ್ಷರ ಸು ಓಂ ಹ್ರಾಂ ಹ್ರಿಮುಂದುದಿತ ಹ್ರೂಂ ಹ್ರೈ ನಮಶಿವಾಯಯೆಂಬುದೆ ಪ್ರಸಾದ ದಶಕಂ ಕುವರನೆ (ಜ)

•ಪ್ರಣಮವೇ ಮೊದಲಾಗಿ ಹ್ರಾಂ ಹ್ರೀಂ ಎನುತ್ತಿರಿಸಿ
ಗುಣಶಾಲಿ ಹ್ರೂಂ ಹ್ರಾಂ ಎನುತ್ತಿರಿಸಿಯಾಮೇಲೆ
ಗಣಿಸೆ ಪಂಚಾಕ್ಷರವನದುವೆ ಪ್ರಸಾದಪಂಚಾಕ್ಷರಂ ಸೂಕ್ಷ್ಮವೆಂದು
ಎಣಿಸಲ್ಕೆ ಸ್ಥೂಲವೆಂತೆಂದು ಮಾಯೆಯೆನುತ್ತ
ಲಣಿಯಿಂ ಪ್ರಸಾದಮೆಂತೆಂಬ ಪೆಸರಿಂದಿರ್ಪ
ಘನಪಂಚವರ್ಣವೇ ಗಿರಿನಾಗರತ್ನದಶವರ್ಣಂಗಳೆಂದೆನಿಪವು ೧೦೧

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳ ವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂ[1]ಪರಹ[1] ಚತುರ್ಗುರು[2]ಚರಿತ[2]ದೊಳ್ ನೋಡ
ಲತಿನೂತ್ನ[3][ವಾರುಕಾಂಡದ][3] ನೋಡಲೊಂದನೆಯ ಸಂಧಿ [4]ಸಂಪೂರ್ಣವಾಯ್ತು[4] ೧೦೨

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವಮರ್ತ್ಯದೊಳ್ ಚರಿಸಿ ಪಾವನವ
ಮುದದೆ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರಿಗಿಷ್ಟಾರ್ಥಮಹುದು ಸತ್ಯಂ ೧೦೩

---

1 ಪ (ಜ) 2 ಸಚಾರಿತ್ರ (ಜ) 3 ವಹಕಾಂಡದೊಳ್ (ಕಗ) ವಾರುಕಾಂಡದೊಳ್ (ಜ)
4 ಸುಜ್ಞಾನಬಂಧಿ (ಜ)
• ಜ ಪ್ರತಿಯಲ್ಲಿ ೧೦೧ನೆಯ ಪದ್ಯವಿಲ್ಲ

# ಎರಡನೆಯ ಸಂಧಿ

ಸೂಚನೆ :

ಲಿಂಗವಿಧಿ ಭಸ್ಮಾಧಿವಾಸಮಂ ಶಿಷ್ಯನು[1]ರು
ವಂ[1]ಗದ ವಿಧಾನ[2]ವಷ್ಟಾಂಗದ ನಮಸ್ಕೃತಿಯ
ಸಂಗತಿಯ[2] ಗಣವರರ ಗುರುಂಭಜನೆಯಂದವಂ ನಿರವಿಸುತ್ತಿರ್ದನಾರ್ಯರ್ಗಂ

ವರ ಸದಾಚಾರವೆನಿಸುವ ನಿಬದ್ಧದ ಮೇಲೆ
ಪರಮಶೈವಾಚಾರದಾ ಕೆಸರುಕಲ್ಲಿನೊಳ್
[3]ಸರಸ[3]ಸದ್ಭಾವ ಕಂಭಗಳ ನಿಲಿಸುತ್ತವರಯಗ್ರದೊಳ್ ದೃಢಗಳೆಂಬ
ಉರುತರದ ಬೋದಿಗೆಗಳಳವಡಿಸಿಯೂರ್ಧ್ವದೊಳ
ಗರಿದೆನಿಪ ಭಕ್ತಿತೊಲೆ[4]ಯಲ್ಲಿ ವಂತಿಹಲಗೆಯೆಂ
ದಿ[4]ರದೆಯಾಚಾರಮಂದಿರವೊಸಗಿ ಸಲಹುವಾಚಾರ್ಯನೈ ಚೆನ್ನಮಲ್ಲ ೧

ಮಾರಹರ ನಿಂದಕರ [5]ಪಲತೆರದ ಹೇತಿಯಿಂ
ದಾರಯ್ಯದ[5]ರಿವುತಂ ಭವಿ ಸೋಂಕಬಾರದೆಂ
ಬಾ ರಮ್ಯನೇಮದಿಂದಿರೆ ಜೈನ ಸ್ವಪ್ನದೊಳ್ ಮುಟ್ಟಿದನೆನುತ್ತ ಘಟವಂ
ಸಾರಮೇಯಂ ಮುಟ್ಟೆ ಸುಡೆ ಶುದ್ಧಮೆಂತಂತೆ
ಧೀರ [6]ವಂಹಪಾಟಕೇಶ್ವರನಗ್ರಭಾಗದ[6]
ಕ್ರೂರವಹ್ನಿಯೊಳು ತನುವಿತ್ತು ಶಿವನೊಲಿಸಿದಾ ವೀರಶಂಕರಗೆ ಶರಣು ೨

ವರಶಿಲಾಸ್ವರ್ಣಸ್ಫಟಿಕರತ್ನಮುಖ್ಯಮಾ
ದುರು ಲಿಂಗಶ್ರೇಣಿಯೊಳ್ [7]ಶೈಲಮತ್ಯ[7]ಧಿಕಮೆಂ
ದರಿದ ಗುರು ತಾಂ ಶಿಲಾ[8]ಲಕ್ಷಣಂಗಳ[8] ನೋಡಿ ಶಿಲ್ಪಿಯಿಂ ಲಿಂಗತನುವಂ
ಪರಿರಚನೆಯಂ ಮಾಡುವಲ್ಲಿ ಶಿವಶಕ್ತಿಗಳು
ಸರಿಯಾಗೆ ಮೃತ್ಯುದಾರಿದ್ರನಾಶಂ ಲಿಂಗ
ಮಿರದಧಿಕವಾಗೆ ಮರಣಂ ಪೀಠದಧಿಕದಿಂ ದಾರಿದ್ರಮೆಂದುಲಿವುದು ೩

---

1 ರೆ ಯಂ (ಜ) 2 ಮಂ ಅಷ್ಟಾಂಗನಮಸ್ಕಾರದಿಂಗಿತವ (ಜ) 3 ಪರಮ (ಜ) 4 ಕ್ರೀಜ್ಞಾನ ಫಲಕಗಳಿ ನಿ (ಜ) 5 ಮೂವತ್ತೆರಡುಪಾಯುಧದೊಳಾರಯ್ಯದಿ (ಜ) 6 ಶ್ರೀಶೈಲ ಪಾಟಕೇಶ್ವರನಗ್ರದೊಳ್ (ಜ) 7 ಶಿವಲಿಂಗವು (ಜ) 8 ಸಲ್ಲೇಕ್ಷಣಂ (ಜ)

॥ ಸಾಕ್ಷಿ ॥
ಲಿಂಗಾಧಿ[1]ಕ್ಯಾದ್ಭ[1]ವೇನ್ಮೃತ್ಯುಃ ಶಕ್ತ್ಯಾಧಿ[2]ಕ್ಯಾದ್ದರಿದ್ರತಾ[2] ॥
ಲಿಂಗಶಕ್ತಿ ಸಮೋಪೇತಂ ಮೃತ್ಯು ದಾರಿದ್ರನಾಶನಂ ॥

ಶಿವಲಿಂಗದಾ ಪಂಚಲಕ್ಷಣವ ವಿವರಿಸುವೆ
ಸುವಿಲಾಸದಿಂ ಕೇಳು ವೃತ್ತಮಂ ಬಳಸಲದು
ಸವೆಯಂದಾ ಸೂತ್ರಮಂ ಗೋಮುಖದ ತುದಿಗೆ ಲಿಂಗದ ಮಸ್ತಕಕ್ಕೆ ಪಿಡಿದು
ತವೆ ಸಮಾನಂಗಾಣುತಾ ಸೂತ್ರದಿಂ ಕೆಳಗ
ಣವಿರಳದ ಪೀಠಪ್ರಮಾಣಸುತ ಪೀಠದಿಂ
ಶಿವಲಿಂಗ ಮಸ್ತಕಕ್ಕಳ[3]ವ[3]ರ್ಧಸೂತ್ರದಿಂ ಗೋಮುಖವ ನೋಳ್ಪುದಣುಗ ೪

॥ ಸಾಕ್ಷಿ ॥
ಲಿಂಗವೃತ್ತಸಮಂ ಪೀಠಂ ದೀರ್ಘಂ ವಿಸ್ತಾರಮೇವ ಚ
ತದರ್ಧಂ ಗೋಮುಖಂ ಜ್ಞೈ[4]ತದಿ[4]ತ್ಯೇತ್ತಲ್ಲಿಂಗಲಕ್ಷಣಂ ॥

ಲಿಂಗಶಕ್ತಿಗಳ ಶಿಲೆಯೊಂದಾಗಿ ಪೊಳೆಯಲಾ
ಭಂಗಲಿಂಗದ ಪೀಠಖಂಡಿಸದಧಕ್ಕಂಜ
ದಂಗ ದದ್ದಾಗದೇಯೂರ್ಧ್ವಕಂಜಂ ಹರಿಯದಬ್ಜಭೇದನೆಯಾಗದೆ
ಲಿಂಗದೂರ್ಧ್ವದ ಪಟ್ಟಿಕೆಯ ಸಾಣೆಯಿಂ ಸವೆಯ
ದಂಗವಿಸಿದಾಜ್ಯಪ್ರದಾರಿಕೆಯು ಹೊರ[5]ಯಲಿದ[5]
ಲಿಂಗಮೂರ್ತಿಯಂಲಿ ಶುಭಲಕ್ಷಣಂಗಳ ನೋಡಿಯಷ್ಟಬಂಧವ ಮಾಳ್ಪುದು ೫

ತೈಲ ಗುಡ ಗೈರಿಕಂ ಗುಗ್ಗುಳಂ ಸಣ್ಣಮಳ
ಲಾಲಸತ್ಪಿ[6]ಷ್ಟ[6]ಮುಂ ಸಜ್ಜರಸ ಲಾಕ್ಷೆಯಿಂವು
ಮೇಲಾದವೆಂಟುಂವಿಧ ಬಂಧನಂಗಳನು ಭಾಗೋತ್ತರಪ್ರಮಾಣದಿಂದ
ಮೇಳೈಸಿ ಲೋಹಪಾತ್ರೆಯೊಳು ಮೃದ್ವಗ್ನಿಯಿಂ
ದಾ ಲಲಿತಮಪ್ಪವೊಲ್ ಪಚ್ಚಿಸಿ ಜಲದೊಳಿಡು ೬
ತ್ತಾ ಲೋಹಮುದ್ಗರದೊಳಿಡಿದು ಪದ್ಮಿನಿನಾಳದಂತೆಸಗಿ[7]ಯಾ[7]ರಿಸುವುದು

ಶಿವಲಿಂಗನಾಳಮದು ಊರ್ಧ್ವಕಂಜವನಂಳಿದು
ಸವಿಶೇಷವಾಗಲದಂ ಲಂ[8]ಟಿ[8]ನಾಳಂ ಬಳಿಕ
ತವೆಯರ್ಧಪರಿಯಂತಮಿಲ್ಲದಂತರದೊಳಿರೆ ಹ್ರಸ್ವನಾಳಂ [9]ಬಲಿ[9]ಪುದು
ಅವಿರಳದ ತೃಪ್ತಿನಾಳವನಷ್ಟಬಂಧದಿಂ
ದವೆ ಬಂಧಿಸಲ್ಕುಷ್ಣಶೀತಬಂಧಗಳರಿದು ೭
ಶಿವಶಕ್ತಿಬಂಧನವ ರಚಿಸಲ್ಲದಿರೆ ಸಜ್ಜರಸಮುಖ್ಯಮಂ ಮಾಳ್ಪುದು

1 ಕಥ (ಜ) 2 ಕದರಿದ್ರತಾಂ (ಜ) 3 ಸೂತ್ರದ (ಕಗ) 4 ವಯಿ (ಜ) 5 ಯಿಲ್ಲದ (ಜ)
6 ದಕ್ಕ (ಜ) 7 ಪೂ (ಜ) 8 ಬ (ಜ) 9 ಬನಿ (ಜ)

ಇಂತಷ್ಟಬಂಧದಿಂ ಬಂಧಿಸುತ ತೀರ್ಥಾಂಬು
ವಂತು ಪಂಚಸುಗವ್ಯಭಸ್ಮಜಲಪೂರ್ಣಮಾ
ದಂತು ಕುಂಭತ್ರಯದೊಳೊಂದೊಂದುರಾತ್ರೆ ಪಂಚಾಕ್ಷರಿಯ ನೂರೆಂಟನು
ಸಂತಸದಿ ಜಪಿಸುತವಗಾಹವಿಂರಿಸುತ್ತ ಗುರು
ಮುಂತೆ ನಾಲ್ಕನೆಯ ದಿನದಲ್ಲಿಯಾ ಮೂರ್ತಿಯಂ
ಚಿಂತೆಯಿಲ್ಲದೆ ಮಹಾದೇವ ಮಹತೇ ಎಂಬ ಮಂತ್ರದೊಳಗೆತ್ತುತಾಗ ೮

ವರವಿಶ್ವ[1]ತಶ್ಚಕ್ಷು ಎಂ[1]ಬ ಶ್ರುತಿಮಂತ್ರದಿಂ
ದೊರೆವಡೆದ ಪಾಷಾಣಜಡಕುಲವ ಕಳಿದಾಗ
ಲರರೆ ವಿಶ್ವಾಧಿಕೋ ಎಂಬ ಶ್ರುತಿಯಿಂದಲೀಶಾನ[2]ಶಿವಂಕರಯಿತಿ[2]
ಚಿರಮಂತ್ರದಿಂದಲಾ ಪ್ರಾಣಪ್ರತಿಷ್ಠೆಯಂ
ನೆರೆ ಮಾಡುತಾಗಮಳ ಪಂಚಕಳಶಕೆ ಬಡಗ
ಣುರೆದಿಕ್ಕಿನೊಳ್ ಶುದ್ಧವಾದ ಭೂಮಿಯೊಳಷ್ಟದಳಪದ್ಮಮಂ ತುಂಬುತ ೯

ಸಾಕ್ಷಿ ॥

ಮಹಾದೇವಾಯ ಮಹತೇ ಜ್ಯೋತಿಷೇऽನಂತ ತೇಜಸೇ
ನಮಶ್ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ
ಓಂ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಸ್ಪಾತ್
ಸಂ ಬಾಹುಭ್ಯಾಂ ನಮತಿ ಸಂತ ತ್ರೈರ್ದ್ಯಾವಾಪೃಥಿವೀ ಜನಯನ್ ದೇವ ಏಕಃ ॥
ಓಂ ವಿಶ್ವಾಧಿಕೋರುದ್ರೋ ಮಹರ್ಷಿಃ ॥ ಸರ್ವೋಹ್ಯೇಷ ರುದ್ರಸ್ತಸ್ಮೈರುಂದ್ರಾಯ
ನಮೋऽಸ್ತು ರುದ್ರೋ ವೈ ಕ್ರೂರೋ ರುದ್ರಃ ॥ ಪಶೂನಾಮಧಿಪತಿಃ ॥ ತತೋಮೇ
ದೇವಾ ಊರ್ಧ್ವಬಾಹವೋ ರುದ್ರಂ ಸ್ತುನ್ವಂತಿ ಯಸ್ಮಾತ್ಪರಂ ನಾ ಪರಮಸ್ತಿ ಕಿಂಚಿದ್ಯಸ್ಮಾ
ನ್ನಾಣೀಯೋ [3]ನಜ್ಯಾಯೋऽಸ್ತಿ[3] ಕಶ್ಚಿತ್ ॥ ಓಂ ॥ ಈಶಾನಶ್ಶಿವ ಏಕೋಧ್ಯೇಯಶ್ಶಿ
ವಂಕರಃ ಸರ್ವಮನ್ಯಂ ಪರಿತ್ಯಜೇತ್॥

ಪವಳ[4]ವಾ[4] ಮೌಕ್ತಿಕಂ ಸ್ವರ್ಣ[5]ಗೌರಾ[5]ಭ್ರಕಂ
ನವಶುಭ್ರಪಾಷಾಣತಂಡುಲಾದಿಗಳಸಂ
ಭವದ ಚೂರ್ಣದೊಳಷ್ಟದಳದ ಸಮ್ಮಾರ್ಜನೆಯ ಮೇಲೆ ರಚಿಸುತ್ತ ಶಂಖಂ
ಸವಿಶಾಲ ಚಕ್ರ ಶೂಲಂ ಡಮರು ಪರಶು ಘಂ
ಟ ವಿರಳದ ರುದ್ರ ವೃಷಚರಣ ಚಾಮರ ಛತ್ರ
ತವೆ ವರ್ಣಕವ ತುಂಬುತದರಗ್ರದೊಳಗಕ್ಕಿಯುದ್ದು ಜೀರಿಗೆ ಗೋದುಮೆ ೧೦

---

1 ತಃ ಚಕ್ಷು ಎಂ (ಜ) 2 ಶ್ಶಿವವಿಕೋಎಂಬಂ (ಜ) 3 ನಾನಿಯೋಸ್ತಿತಃ (ಜ) 4 ದಾ (ಜ)
5 ಶ್ವೇತಾ (ಜ)

ಓಂ ॥ ಶ್ರೀ[1]ಪಯೋರಾಜ್ಞಯಾ[1] ಪ್ರವರ್ತಮಾ[2]ನಸ್ಯೇತಿ[2] ॥
ಅಪವಿ[3]ತ್ರ[3]ಃ ಪವಿತ್ರೋವಾ ಸ[4]ರ್ವಾವಸ್ಥಾ[4]ಂಗತೋಪಿ ವಾ
ಯಸ್ಮರೇತ್ಪರಮಾತ್ಮಾನಂ ಸಬಾಹ್ಯಾಭ್ಯನ್ತರಶ್ಶುಚಿಃ
ಪೃ[5]ಥ್ವೀತ್ವಂ ವೀರುಧಾ[5]ದೇವಿ ದೈವತ್ವಂ ವಿಷ್ಣುನಾಧ್ರುವಂ
ಪಂಚಧಾರಮಯಾದೇವಿ ಪವಿತ್ರಂ ಕುರು ಶಾಸನಂ ॥
ಸನ್ಮಾರ್ಜನಶತಂ ಪುಣ್ಯಂ ಸಹಸ್ರಮನುಲೇಪನಂ
ರೇಖಾಶತ ಸಹಸ್ರೇಷು ಚಾನನ್ತಂ ಪದ್ಮಮುಚ್ಯತೇ ॥
[6]ಬನ್ಧೋ[6]ಭವಹರಶ್ಚೈವ ಸ್ವಸ್ತಿಕಂ ಶತ್ರುನಾಶನಂ
ಪದ್ಮಂ ಪುಣ್ಯಫಲಂ ಚೈವ [7]ಮುದ್ರಾಸ್ಯಾನ್ಮೋ[7]ಕ್ಷ ಸಾಧನಂ ॥

ಇಂತೈದು ಧಾನ್ಯಂಗಳಾದೊಡಲ್ಲದೆ ಬರಿಯ
ನಂತತಂಡುಲವಾದೊಡೆಯುಂ ಬತ್ತೀಸಂಗು
ಲಾಂತ ಚತುರಸ್ರಮಾನದೊಳು ಹರವುತ್ತ ತೀರ್ಥಾಂಬು ಪರಿಪೂರ್ಣಮಾದ
ಸಂತಸದ ಸ್ವರ್ಣಾದಿ ಪಂಚ ನವಕಳಶಗಳ
ತಿಂತಿಣಿಸುವಾ ಮಂತ್ರದಿಂದಿರಿಸಿ ದೂರ್ವಾಂಕು
ರಾಂತ ಸಹಕಾರಪಲ್ಲವ ನಾಗವಲ್ಲಿ ಪೂಗ[8]ಗಳಿಂದ [8]ಶೃಂಗರಿಸುತ ೧೧

ಬಳಿಕೀಳುಮೊಳದ್ದುದಾ ನವೀನಮುಮೆನಿಸು
ತಳವಟ್ಟ ಶುಭ್ರವಸ್ತ್ರವನು ಪದ್ಮದ ಮೇಲೆ
ಮೊಳದುದ್ದ ಪರಪುತೊಂದಂಗುಲದ ದಟ್ಟಶಾ[9]ಲಿಯ[9] ಪರಪಿಯಪ್ಪದಳಮಂ
ಸಲೆ ಬರೆದದಂ ಮುಚ್ಚಿ ಮೇಲೆ ತಿಲಮಂ ಹರಹಿ
ನಳಿನಮಂ ಲಿಖಿಸಿ ವಸನವ ಪೊದಿಸಿಯಗ್ರದೊಳ
ಗಳವಡಿಸಿ ಗೋಧುಮೆಯನಷ್ಟದಳಮಂ ಬರೆವುತದ ಮರಸಿ ಮೇಲೆ ನೆಲ್ಲಂ ೧೨

ಪರಪಿ ಪದ್ಮಮನಂಕಿಸುತ್ತಮಂ ವಸ್ತ್ರದಿಂ
ಮರಸಿ ಮೇಲಕ್ಕಿಯಂ ಕಮಲಮಂ ರಚಿಸುತ್ತ
ಇರವದಂ ಬಾಸಣಿಸಿ ವಸ್ತ್ರದಿಂ[10]ದದರಮೇಲಾ[10]ಮಳಕ ಬಿಲ್ವ [11]ಕಂಶವಂಂ[11]
ಸರಸವಹ ಚೂತಮಂತ್ತರಣಿ ಪತ್ರೆಗಳೈದ
ನಿರದೆ ವಿಸ್ತರಿಸುತ್ತದಂ ಮುಚ್ಚಿ ಹಿಂಗೆಯಾ
ದರದಿಂದಲೇಳುನೆಲೆಯಂ ಕಲ್ಪಿಸುತ್ತದರ ಮೇಲೆ ಲಿಂಗದ ಮೂರ್ತಿಯಂ ೧೩

---

1 ವಾಶಿವಾರಾಜ್ಞಾ ವಿಮ್ನು (ಜ) 2 ನುಷ್ಯ (ಜ) 3 ತ್ರೋ (ಜ) 4 ರ್ವ ವಸ್ತು (ಜ) 5 ಥ್ವವಿತ್ತುರುಥಾ (ಜ) 6 ಬಂಧಂ (ಜ) 7 ಮುದ್ರಂತುಮೋ (ಜ) 8 ಸುಮಗಳಿಂ (ಜ) 9 ಮವ (ಜ) 10 ದುಪರಿಯೊಳ್ (ಜ) 11 ಚೂತಮಂ (ಜ)

ಇರಿಸವುದು ಗೋಮುಖೋತ್ತರ ಭಾಗವಾಗಿ ಗುರು
ಸರಸ ಸೀತ್ಕಾರ ಪ್ರಾಣಾಯಾಮದಿಂದೆ ಸಾ
ಸಿರಮೂಲಮಂತ್ರವಮಂ ಜಪಿಸಂತಾ ಲಿಂಗಸ್ಥಲಕ್ಕ[1]ತು[1]ಳತಾಂತ್ರಿಕವಹ
ಚಿರಮಾತೃಕಾನ್ಯಾಸವಾ ಕಲಾನ್ಯಾಸಮಂ
ಭರದಿ ಮಂತ್ರನ್ಯಾಸದಿಂ ಪ್ರಾಣಸ್ಥಾಪನೆಯಂ
ನಿರದೆಸಗಿ ಕಳಶೋದಕಸ್ನಾನಮಂ ಮಾಡುತಾಚಾರ್ಯನತಿಪ..ದದೊಳು ೧೪

ವರಸವ್ಯ[2]ದಿಂ[2] ಪಾದ್ಯಮಿಾವುತಾ ವಾಮದಿಂ
ದಿರದಾಚಮನಮಿತ್ತು ಘೋರದಿಂದರ್ಘ್ಯಮಿ
ತ್ತರರೆ ಪುನರಪಿ ಸವ್ಯದಿಂದ ಗೋಮೂತ್ರ ಗೋಮಯ ವಾಮದೇವನಿಂದೆ
ಇರದೆಯಾಘೋರದಿಂ ಕ್ಷೀರ ತತ್ಪುರುಷದಿಂ
ದುರೆ ದಧಿಯನೀಶಾನದಿಂ ಕ್ಷೀರವಾಯೊಯ
ಸರಸಮಂತ್ರದೊಳರ್ಘ್ಯಪಾದ್ಯಾಚಮನಸವಾ ಪಂಚಗವ್ಯಗಳ ಕೊಟ್ಟು ೧೫

ಕ್ಷೀರ[3]ದಿಂದಾ[3]ಜ್ಯೇಕ್ಷು ಮಧುಗಳಂ ಮಂತ್ರದಿಂ
ಧಾರಾಭಿಷೇಕಮಂ ಮಾಡಿ ಗೋಧುಂವೆ ಮುದ್ಗ
ದಾರೈದಂ ಚೂರ್ಣದುದ್ವರ್ತ[4]ನೆಯನುಂ ಶೀತಮಾದಾ[4] ಜಲಸ್ನಾನ[5]ಮಂ[5]
ಪೂರಿಸುತ ಪ್ರಸ್ಥಪಂಚಕ ನೀರ ಪಿಡಿವ ಪ್ರ
ದ್ವಾರಘಟದೊಳ್ ತರಂಗಿಣಿಯುದಕಮಂ ತಂದು
ಸಾರ[6]ವಸ್ತ್ರದೊಳೈ[6]ದುಶೋಧನವೆಸಗಿ ಭಸ್ಮಮಂ ಮಿಶ್ರಿಸುತ್ತ ಬಳಿಕಂ ೧೬

ಶಿವಮಂತ್ರದಿಂದೈದುವೇಳೆಯಭಿಮಂತ್ರಿಸುತ
ಶಿವಲಿಂಗದಗ್ರದೊಳಗಿರಿಸಿ ಕುಸುಮವನು ಮೇ
ಲವಧರಿಸಿ ಮಜ್ಜನವ ಮತ್ತೆ ಗಂಧೋದಕವ ಪುಷ್ಪೋದ ಕನಕ[7]ಮಣಿಯು[7]
ತವೆ ಮಂತ್ರಜಲಗಳಂ ಮೃತ್ತಾಂಬ್ರ ದಾರುವಿಂ
ದವಿರಳದ ರಾಜತ ಸುವರ್ಣ ಘಟಗಳಿನೆರೆದು
ತವೆಯದಾ ಭಸ್ಮಕಸ್ನಾನಮೆಸಗುತ ರುದ್ರದಭಿಷೇಕಮಂ ಮಾಳ್ಪುದು ೧೭

---

1 ಮ (ಜ) 2 ದ್ಯ (ಜ) 3 ವಂಸಾ (ಕಗ) 4 ನಾಸಿಕೋದಕದೆ ಶುದ್ಧ (ಜ) 5 ಮುಂ (ಜ)
6 ಮಾದರುವೆಯಿಂದೈ (ಜ) 7 ರತ್ನ (ಜ)

॥ ಸಾಕ್ಷಿ ॥

ಪಯಃ ಪೃಥಿವ್ಯಾಂ ಪಯ ಓಷಧೀಷು ಪಯೋ[1]ದಿವ್ಯಂತ್ರ[1]ರಿಕ್ಷೇ ಪಯೋಧಾಃ ಪಯಸ್ವತಿಃ [2]ಪ್ರದಿಶಸ್ಸನ್ತು[2] ಮಹ್ಯಂ ಸವಾಸೃಜಾಮಿ ॥ ಪಯಸಾಘೃತೇನ ಸಮಾಸೃಜಾವ್ಮ್ಯಪ ಓಷಧೀಭಿಃ ॥ ಓಂ ॥ ಗೋಕ್ಷೀರಾ[3]ಭಿ[3]ಸ್ವಾಹಾ ॥

ದಧ್ನಾಮಧುಂಮಿಶ್ರೇಣವೋ ಕ್ಷತಿ ॥ ಹುತಾದಶ್ಚ್ಯೈವ ದೇವಾನಹುತಾದಶ್ವಯಜಮಾನೆ ಪ್ರಣಾತಿ ಏತದನ್ನಂ ಯಂದ್ದಧ್ಯಾರಣ್ಯಂ ಮಧುದಧ್ನಾಮಧುಮಿಶ್ರೇಣಾವೋಕ್ಷಾತ್ಯು ಭಯಸ್ಯಾವರುಧ್ಯೈ ॥

ಓಂ ॥ ಗೋದಧಿಸ್ನಾನಂ ಸ್ವಾಹಾ ॥

ಘೃತಮಿತಿಕ್ಷೀರೇ ಘೃತಮಸ್ಯಾಯೋನಿರ್ಘೃತೆ ಶ್ರೀತೋಘೃತ[4]ಮ[4]ವ್ಯಸ್ಯಧಾಮ ಆ[5]ನ[5]ಷ್ಟಧಮಾವಹಾಮಾದಯ ಸ್ವಾಹಾಕೃತಂ ವೃಷ್ವಭವಂಕ್ಷೀಹವ್ಯಂ [6]ಗೋಘೃತಾ[6]ಭಿಷೇಕಂ ಸ್ವಾಹಾ ॥

ಮಂಧುವಾತಾಋತಾಯತೇ ಮಧುಕ್ಷರನ್ತಿ ಸಿಂಧವಃ
ಮಾಧ್ವೀರ್ನಸ್ಸನ್ತ್ವೋಷಧೀಃ
ಮಧುನಕ್ತಮುಂತೋಷ[7]ಸೋ[7] ಮಧುಮನ್ತ್ಪಾರ್ಥಿವಂ ರಜಃ
ಮಧುದ್ಯೌರಸ್ತ್ಯುನಃ ಪಿತಾ ॥

ಮಧುಮಾನ್ನೋವನಸ್ಪತಿರ್ಮಧುಮಾಂ ಅಸ್ತುಸೂರ್ಯಃ
ಮಾಧ್ವೀರ್ಗಾವೋ ಭವನ್ತು ನಃ ॥

ಓಂ ॥ ಮ[8]ಧ್ವಭಿಷೇಕಂ[8] ಸ್ವಾಹಾ
ಮಧ್ಯಮಾನಾತ್ಫೇನೊ ಭವತಿ ॥ ಭವತಿ ಫೇನಾತ್ಸಲಿಲಂ ಭವತಿ

ಸಲಿಲಾದ್ಬುದೋ ಭವತಿ ಬುದ್ಬದಾದಣ್ಡಂ ಭವತಿ
ಅನ್ಡಾದಾ[9]ತ್ಮಾ[9]ಭವತಿ । ಆ[10]ತ್ಮನ ಆ[10]ಕಾಶೋ ಭವತಿ ॥

ಆಕಾಶಾದ್ವಾಯುರ್ಭವತಿ । ವಾಯೋರಗ್ನಿರ್ಭವತಿ ॥ ಅಗ್ನೇರೋಙ್ಕಾರೋ ಭವತಿ ॥ ಓಂಕಾರಾದ್ವ್ಯಾಹೃತಿರ್ಭವತಿ ! ವ್ಯಾಹೃತ್ಯಾ ಗಾಯತ್ರೀಭವತಿ । ಗಾಯತ್ರ್ಯಾ ಸಾವಿತ್ರೀ ಭವತಿ ॥ ಸಾವಿತ್ರ್ಯಾ ಸರಸ್ವತೀ ಭವತಿ ॥ ಸರಸ್ವತ್ಯಾ ವೇದಾ ಭವನ್ತಿ ॥ ವೇದೇಭ್ಯೋ ಬ್ರಹ್ಮಾ ಭವತಿ ॥ ಬ್ರಹ್ಮಣೋ ಲೋಕಾ ಭವನ್ತಿ ॥ ತಸ್ಮಾಲ್ಲೋಕಾಪ್ರವರ್ತನ್ತೆ ॥ಓಂ ॥ ಶೀತೋದಕಂ ಸ್ವಾಹಾ ॥

---

1 ವ್ಯಾನ್ತ (ಜ) 2 ಪ್ರಶನ್ತು (ಜ) 3 ಭಿಷೇಕಂ (ಜ) 4 ವವ (ಜ) 5 ನು (ಜ) 6 ಓಂ ಗೋಕ್ಷೀರಾ (ಜ) 7 ಸಿ (ಕಗ) 8 ಧು (ಜ) 9 ತ್ಮಾನಂ (ಜ) 10 ತ್ಮಾನಾದಾ (ಜ)

ಮಯಿ ಮೇಧಾಂ ಮಯಿ ಪ್ರಜಾಂ ಮಯ್ಯಗ್ನಿಸ್ತೇಜೋ ದಧಾತು
ಮಯಿ ಮೇಧಾಂ ಮಯಿ ಪ್ರಜಾಂ ಮ[1]ಯಿ ಸೂರ್ಯೋಭ್ರಾಜೋ[1] ದಧಾತು ॥

ಓಂ ಕೋಷ್ಣೋದಕಂ ಸ್ವಾಹಾ ॥

[2]ನಾರಿಕೇಳಾಂಬುವ ಹಿರಣ್ಮಯೋ ಎನುತ ಸು
ಕ್ಷಾರಾಂಬುವೇಹ ವಕ್ತ್ರಯೆನಂತ್ತ ಮಾಂ ಎನುತ
ಸಾರ[2]ಗಂಧೋದಕವ ಮೇಧಾಂ ಮಯಿಾಂದ್ರೋ ಎನು[3]ತ್ತ ಪುಷ್ಪಕಬಂಧವಂ
ಚಾರುಕನಕಾಂಬುವ ಹಿರಣ್ಯವರ್ಣಾ ಎನು
ತ್ತಾ ರತ್ನಜಲವನಾಪೋಹಿಷ್ಠೆನಂತ್ತ ಮಂ
ತ್ರಾರಬ್ಧ ಜಲವ ಶ್ರೀರುದ್ರಪಂಚಬ್ರಹ್ಮಸೂಕ್ತಂಗಳಿಂದೆರೆವುದು[3] ೧೮

*ಓಂ ಭೂರ್ಭುವಸ್ಸುವಃ ಸ್ವಾಹಾ॥ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹೀ
ಧೀಯೋಯೋನಃಪ್ರಚೋದಯಾತ್ ॥ ಓಂ ॥ ಶರ್ಕರಾಭಿಷೇಕಂ ಸ್ವಾಹಾ ॥
ಮಧ್ಯಮಾನಾತ್ತೆಂಬುದ ಬರೆವುದು ॥*

। ಸಾಕ್ಷಿ ॥ ವೈದಿಕಮನ್ತ್ರಃ ॥

ಹಿರಣ್ಮಯೋ ವೇತಸೋಮಧ್ಯ ಆಸಾಂ ॥ ತಸ್ಮಿನ್ ಸುಪರ್ಣೋಮಧುಕೃತಂಲಾಯಿ ॥
ಭಜನ್ನಾಸ್ತೇ ಮಧುದೇವತಾಭ್ಯಃ ॥ ತಸ್ಯಾಃ ಸತೇ ಹರಯಃ ॥ ಸಪ್ತತಿರೆ ॥
ಸ್ವಧಾಂ ದುಹಾನಾ ॥ ಅಮೃತಸ್ಯಧಾರಾಂ ॥
ಓಂ ॥ ನಾರಿಕೇಳೋದಕಂ [4]ಸ್ವಾಹಾ[4] ॥
ಆಮಾಂ ಮೇಧಾಂ ಸುರಭಿರ್ವಿಶ್ವರೂಪಾ ಹಿರಣ್ಯವರ್ಣಾ ಜಗತಿ
ಗವ್ಯಾ ಊರ್ಜಪತಿಪಯಸಾಪಿನ್ವಮಾನಾ ಸಾಮಾಂ ಮೇಧಾಂ ಸುಪ್ರತೀಕಾ
ಮೇಧಾಂತೇ ದೇವಃ ಸವಿತಾ ಮೇಧಾಂ ದೇವೀ ಸರಸ್ವತೀ ।
ಮೇಧಾಂತೇ ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜಾ ॥
ಅಪ್ಸರಾಸು ಚ ಯಾಮೇಧಾಂ ಗಂಧರ್ವೇಸು ಚ ಯನ್ಮನಾಃ
ದೈವೀಂ ಮೇಧಾಂ ಸರಸ್ವತಿ ಸಾಮಾಂ ಮೇಧಾಂ ಸುರಭಿರ್ಜಷತಾಂ ॥
ಹಿರಣ್ಯವರ್ಣಾಶ್ಶುಚಯಃ ಪಾವಕಾ ಯಾ ಸುಜಾತಃ ಕಶ್ಯಪೋಯಾಸ್ವಿಂದ್ರಃ ॥
ಅಗ್ನಿಂ ಯಾ ಗರ್ಭಂ ದಧಿರೇ ವಿರೂಪಾಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ॥

---

1 ಯಿಂದ್ರಯಿಂದ್ರಿಯಂ (ಜ) 2 ಹಿರಣ್ಮಯೋವೇಯೆನುತ ನಾರಿಕೇಳೋದಕವ ಮುರಿವಯಹ್ಯ ವಕ್ರಮೆಂದು ಭಸ್ಮೋದಕವನಿರದೆ ಆಯಾಂ ಮೇಧಾಯೆಂದು (ಜ) 3 ತವರಪುಷ್ಪವಾರಿಯಂ ಹಿರಣ್ಯ ವರ್ಣಾಃ ಯೆಂದುರೆ ಕನಕಜಲವಯಾಪೋಹಿಷ್ಠಾಯೆನುತ ರತ್ನಸರವ ಹಂಸಹಾಯೆಂದು ಮನುಜಲವ ಪಂಚಬ್ರಹ್ಮದೊಳೆರೆದುಶುದ್ಧಪಯಮಂ (ಜ) 4 ಸ್ವಾಹಾ ಯಹ್ಯವತ್ರಯನ್ನಶಸ್ತ್ರುರುದ್ರಸ್ಯಗಾಣೌ ಪತ್ಯಾನ್ನಯೊಭೂರೇಹಿ ಅಗ್ನೇ ಭಸ್ಮಸ್ಯಗ್ನೇಪುರಿಷಯಸಿ ಸಂಜ್ಞಾನಮುಪಿಕಾಮಧರಣಂ ಮಯಿತೇ ಕಾಮಧರಣಂ ಭ ೂಯಾತ್ ಓಂ ಭಸ್ಮೋದಕಂ ಸ್ವಾಹಾ (ಜ) * ಈ ಭಾಗ ಜ ಪ್ರತಿಯಲ್ಲಿಲ್ಲ.

ಯಾ ಸಾಗ್ಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಂ ಜನಾನಾಂ।
ಮಧುಶ್ಚುತಶ್ಶುಚಯೋಯಾಃ ಪಾವಕಾಸ್ತಾನ ಆಪಶ್ಯಗ್ಂ ಸ್ಯೋನಾಭವಂತು ॥
ಯಾಸಾಂ ದೇವಾದಿ ವಿಕೃಣ್ವಂತಿ ಭಕ್ಷಂ ಯಾ ಅಂತರಿಕ್ಷೇ ಬಹುಧಾ ವದಂತೀ
ಯಾಃ ಪೃಥುವೀಂ ಪಯಸೋಂದಂತಿ ಶುಕ್ರಾಸ್ತಾನ ಆಪಶ್ಯಗ್ಗ್ಂ ಸ್ಯೋನಾ ಭವಂತು।
ಶಿವೇನಮಾ ಚಕ್ಷುಷಾ ಪಶ್ಯತಾಪಶ್ಶಿವಯಾ ತನುವೋಪಸ್ಪೃಶತತ್ವಚಂ ಮೇ ॥
ಸರ್ವಾಗ್ಂ ಅಗ್ನೀಗ್ಂ ರಪ್ಸುಪದೋ ಹುವೇವೋ ಬಲವೋಜೋನಿಧತ್ತ

॥ ಓಂ ಸ್ವರ್ಣೋದಕಂ ಸ್ವಾಹಾ ॥

ಆಪೋಹಿಷ್ಠಾ ಮಯೊ ಭವಸ್ತಾನ ಊರ್ಜೇ ದಧಾತನ ಮಹೇರಣಾಯ ಚಕ್ಷಸೆ
ಯೋವಶ್ಶಿವತಮೋರಸಸ್ತಸ್ಯ ಭಾಜಯತೇ ಹನಃ ಉಶತೀರಿವ ಮಾತರಃ
ತಸ್ಮಾ ಅರಂಗಮಾಮವೋ ಯಸ್ಯಕ್ಷಯಾಯ ಜಿನ್ವಥ ಆಪೋಜನ ಯಥಾಚ ನಃ

॥ ಓಂ ರತ್ನೋದಕಂ ಸ್ವಾಹಾ ॥

ಓಂ ॥ ಸದ್ಯೋಜಾತಾ ॥ ಓಂ ॥ ನಮುಸ್ತೇರುದ್ರಮನ್ಯವ ಎಂಬ ಪಂಚಬ್ರಹ್ಮ
ಶ್ರೀರುದ್ರಮನ್ತ್ರಗಳಿಂ ಶುದ್ಧೋದಕಸ್ನಾನವ[1]ಪಂ[1] ಮಾಳ್ಪುದು

ಆಪೋಯಿದಂ ಮಂತ್ರದಿಂ ಜಲವನಿತ್ತು ಮ
ತ್ತೇಪೇಳ್ವೆ ಗುಂಧದ್ವಾರಾಂ ಎಂದು ಗಂಧಮಂ
ತಾ ಪರಿಯನರ್ಚಿ[2]ತಯೆನುತ್ತ ಶುಭ್ರಾಕ್ಷ[2]ತೆಯಂದ ಹರಮೆಂದಾ ಪುಷ್ಪಮಂ
ಧೂಪಮಂ ವಸವ[3] ಎನ್ನುತ ಯದಾ ಎನ್ನುತ್ತ[3]
ದೀಪಮಂ ಭೂರನ್ನ[4]ಮೆಂದು[4] ನೈವೇದ್ಯಮಂ
[5]ನೋಪನಂ ದ್ವಾ[5]ಸಂಪರ್ಣಾ ಎನುತ ತಾಂಬೂಲ[6]ಮಷ್ಟ[6]ಪೂಜೆಯಂ ಮಾಡುತ ೧೯

ಸಾಕ್ಷಿ ॥
"ಆಪೋವಾ ಇದಂ ಸರ್ವಂ ವಿ[7]ಶ್ವಾ[7]ಭೂತಾನ್ಯಾಪಃ ಪ್ರಾಣೋ ವಾ ಆಪಃ
ಪಶವ ಆಪೋನ್ನಮಾಪೋಮೃತಮಾಪಃ । ಸಮ್ರಾಡಾಪೋ ವಿರಾಡಾಪಃ ಸ್ವರಾಡಾಪ
ಶ್ಛ[8]ನ್ದಾ[8]ಗ್ಂ ಸ್ಯಾಪೋಜ್ಯೋ[9]ತೀಗ್ಂ ಸ್ಯಾ[9]ಪೋಯುಜೂಗ್ಂಷ್ಯಾಪೋ ಸತ್ಯಮಾ
ಪಸ್ಸರ್ವಾ ದೇವತಾ ॥ ಆಪೋ ಭೂರ್ಭುವಸ್ಸುವರಾಪಃ ॥ ಓಂ ಜಲಂ ಸ್ವಾಹಾ ॥

---

1 ವ (ಕಗ) 2 ತಃ ಮಂತ್ರದಿಂದಕ್ಷ (ಜ) 3 ಸ್ಯಾಯೆಂದುಯದಾತ್ಮದಿಂ (ಜ) 4 ದಿಂದ (ಜ)
5 ಕೂಪನೆದ್ದು (ಜ) 6 ಮಿಂತಷ್ಟ (ಜ) 7 ಶ್ವೇ (ಜ) 8 ನ್ದಾಜುಂ (ಜ) 9 ತಿಜುಂಸ್ಯಾ (ಜ)

ಆರ್ಚತಃ ಪ್ರಾರ್ಚತಃ ಪ್ರಿಯಮೇಧಾ ಸೋ ಆರ್ಚತ

ಅರ್ಚನ್ತು ಪುತ್ರಕಾ ಉತ [1]ಪುರನ್ನದೃಷ್ಣದರ್ಚಿತಾ[1] *

ಗನ್ಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಪಾಂ ಕರೀಷಿಣೀಂ

ಈಶ್ವರೀಂ ಸರ್ವಭೂತಾ[2]ನಾ[2]ತಾಮಿಹೋಪಹ್ವಯೇ ಶ್ರಿಯಂ

॥ ಓಂ ॥ ಗನ್ಧಂ ಸ್ವಾಹಾ ॥

ಆಯನೇತೇ ಪರಾಯಣೇ ದೂರ್ವಾರೋಹನ್ತು ಪುಷ್ಪಿಣೀಃ

ಹ್ರದಾಶ್ಚ ಪುಣ್ಡರೀಕಾಣಿ ಸಮುದ್ರಶ್ಚ ಗೃಹಾ ಇಮೇ ॥

॥ ಓಂ ॥ ಅಕ್ಷತಂ ಸ್ವಾಹಾ ॥

ದಹರಂ ವಿ[3]ಪಾಪ್ಮಂ[3] ಪರವೇಶ್ಮ ಭೂತಂ ಯತ್ಪುಣ್ಡರೀಕಂ ಪುರಮಧ್ಯ ಸಂಸ್ಥಂ ।

ತತ್ರಾಪಿ ದ ಹ್ರಂ ಗಗನಂ ವಿಶೋಕಃ ತಸ್ಮಿನ್ ಯದನ್ತಸ್ತದುಪಾಸಿತವ್ಯಂ ॥

॥ ಓಂ ॥ ಪುಷ್ಪಂ ಸ್ವಾಹಾ ॥

ವಸವಸ್ತ್ವಾಪರಿಗೃಹ್ಣಂತು ಗಾಯತ್ರೇಣ ಛಂದಸಾಂಗಿರಸದ್ರುದ್ರಾಸ್ತ್ವಾ

ಪರಿಗೃಹ್ಣಂತು ತ್ರೈಷ್ಟುಭೇನ ಛಂದಸಾಂಗೀರಸ್ವದಾದಿತ್ಯಾಸ್ತ್ವಾ ಪರಿಗೃಹ್ಣಂತು

ಜಾಗತೇನ ಛಂದಸಾಂಗಿರಸ ದ್ವಿಶ್ವೇತ್ವಾ

ದೇವಾ ವೈಶ್ವಾನರಾ ಪರಿಗೃಹ್ಣಂತ್ವಾನುಷ್ಟುಭೇನ ಛಂದಸ್ಸಾರಸ್ಯ ದ್ವಿಷ್ಣುಸ್ತ್ವಾ

ಪರಿಗೃಹಂತ್ವಂಗಿರಸ್ವ ದ್ವರಣಸ್ತ್ವಾನ ಪರಿಗೃಹ್ಣಂತ್ವಂಗಿರಸ್ವತ್

ಓಂ ॥ ಧೂಪಂ ಸ್ವಾಹಾ ॥ ಯದಾತ್ಮ ತತ್ವೇನ ತು ಬ್ರಹ್ಮತತ್ತ್ವಂ ದ್ವೀಪೋಪಮೇ

ನೇಹಯುಕ್ತಃ ಪ್ರಪಶ್ಯತ್ ॥ ಅಜಂ ಧ್ರುವಂ ಸರ್ವತತ್ವೈರ್ವಿಶುದ್ಧಂ ಜ್ಞಾತ್ವಾದೇವೋ

ಮುಚ್ಯತೇ ಸರ್ವಪಾಪೈಃ ॥

ಓಂ॥ ದೀಪಂ ಸ್ವಾಹಾ॥

ಭೂರನ್ನಮಗ್ನಯೇ ಪೃಥಿವ್ಯೈ ಸ್ವಾಹಾ। ಭುವೋಽನ್ನವಾಯವೇಽನ್ತರಿಕ್ಷಾಯ

ಸ್ವಾಹಾ॥ ಸುವರ್ಣಮಾದಿತ್ಯಾಯ ದಿವೇ ಸ್ವಾಹಾ। ಭೂರ್ಭುವಸ್ಸುವರೋನ್ನಮೋಂ

ಚನ್ದ್ರಮಸೆ ದಿಗ್ಭ್ಯಃ ಸ್ವಾಹಾ। ನವೋ ದೇವೇಭ್ಯಃ। ಸ್ವಧಾ ಪಿತೃಭ್ಯೋ

ಭೂರ್ಭುವಸ್ಸುವರೋನ್ನಮೋಂ॥

ಓಂ ನೈವೇದ್ಯಂ ಸ್ವಾಹಾ॥

ನಮೋ ದೇವೇಭ್ಯಃ ಸ್ವಧಾ ಪಿತೃಭ್ಯೋ ಭೂರ್ಭುವಸ್ಸುವರೋನ್ನಮೋಂ

ಓಂ ನೈವೇದ್ಯಂ ಸ್ವಾಹಾ॥

---

1 ಪೂರ್ಣದೃಷ್ಟ ಅರ್ಚಿತಾಪ್ರದಾಶ್ವ (ಜ) 2 ನಾಂ (ಕಜ) 3 ಪಾಪಂ (ಜ)

• ಈ ಶ್ಲೋಕ ಜ ಪ್ರತಿಯಲ್ಲಿ "ಓಂಗನ್ಧಂಪ್ವಾಹಾ" ಆದ ಬಳಿಕ ಬಂದಿದೆ.

ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೆ
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಭಿಚಾಕಶೀತಿ॥
ಓಂ॥ ತಾಮ್ಬೂಲಂ ಸ್ವಾಹಾ॥

ವರ ಉಪಬೃಹ್ಮಶ್ರುಣಾ ಎನಿಪ್ಪ ಮಂತ್ರದಿಂ
ದಿರದಾಸನಮನಿತ್ತೆಮಾಶ್ಚತುರ್ಥೋ ಎನು
ತ್ತಿರದೆಯಾವಾಹನ[1]ವಗೈದು[1] ನಾಂತಃಪ್ರಜ್ಞಮೆಂದು ಧ್ಯಾನಮನೀವುತೆ
ಸರಸವಾಸಾಂಸಿ ಮಮಗಾವಶ್ಚಮನುವಿನಿಂ
ದುರೆ ವಸ್ತ್ರಮಿಾವುತೆ ಹಿರಣ್ಯಬಾಹವೆ ಎಂದುಂ
[2]ವರತಮಾ[2]ಭರಣಮುಂ ತೊಡಿಸಿ ಯಜ್ಞೋಪವೀತಂ ಪರ[3]ಮಮೆಂತೆನ್ನುತ[3] ೨೦

ಉಪವೀತಮಿತ್ತು ಆದಿತ್ಯೋ[4]ವೆನುವ ವೇದ[4]
ಸುಪಥಮಂತ್ರದೊಳಾತಪತ್ರವ ನಿವೇದಿಸುತ
ತಪನೀಯಮಯ ಚಾಮರವನು ದೇವಾವಸವ್ಯಾ[5]ಲಗ್ನಯೆಂ[5]ದೀವುತ
ಉಪ[6]ಧಿ[6]ಯಿಂ ಮಾರುತಮಸಿ ಎನುತ ವ್ಯಜನಮಂ
ತಪನೀಯಪತಿಗರ್ಪಿಸುತ ಚಿಣಿತಿಪ್ರಥಮಮೆಂ
ದಪರಿಮಿತ ಘಂಟಾದಿ ನಿನದಮಂ ಕೇಳಿಸುತ್ತಪಸಹೋವಾ ಚ ಎನುತ ೨೧

ದರ್ಪಣವನಿತ್ತು ಸೂರ್ಯಾಯ ಸೋಮಾಯ [7]ಎಂ[7]
ದರ್ಪಿಸಾರತಿಯಂ ತದೇವ ನಿಷ್ಕಳಮೆನು
ತ್ತರ್ಪಣಂಗೈದಾ ಪ್ರದಕ್ಷಿಣವ [8]ಸರ್ವಶ್ರುತೇ ರುಂದ್ರ ಎಂದೆ[8]ನುತ್ತ
ಸರ್ಪಧರಗೆರಗಿ ಏಕೋರುದ್ರನಯಮನೆಂ
ದರ್ಪಿಸುತ ಪುಷ್ಪಾಂಜಲಿಗಳನೀ ತೆರದಿಂದ
ಕೂರ್ಪಿನಿಂದಷ್ಟವಿಧ ಷೋಡಶಾರ್ಚನೆಗಳಿಂ ಮಾಡಿ ಬಳಿಕಾ ಶಿಷ್ಯನಂ ೨೨

ಲಿಂಗಲಕ್ಷಣ ಲಿಂಗವಿಧಿಯನಂತರದಲ್ಲಿ
ಕಂಗೊಳಿಪ ಶಿಷ್ಯನೆನಂಸಖಿಲಕರ್ಮಂಗಳಂ
ಪಿಂಗಿ ಸುಜ್ಞಾನಮಯನಾಗುಳಿಯೆ ಶಿಷ್ಯನೆಂಬಭಿಧಾನವಾಗಮದೊಳಂ
ಪಿಂಗದುಸುರುವದು ಕರಣತ್ರಯದೊಳಿರವಿಲ್ಲ
ದಂಗೈಸಿ ಗುರುಭಕ್ತಿಭೃತ್ಯಚೇತನಮುಳ್ಳ
[9]ಲಿಂಗಿಯೇ[9] ಶಿಷ್ಯನಹನವಗಧಿಕಶಾಂತಿಕರದೀಕ್ಷೆಯಂ [10]ಎಸಗುಂತಿಹುದು[10] ೨೩

---

1 ನಿವೇದಿಸುತೆ (ಜ) 2 ದುರಿವ ಆ (ಜ) 3 ಮಂ ಪವಿತ್ರಯೆಂದು (ಜ) 4 ವಾವಿಷ್ಣುವೆ ಎಂಬ (ಜ) 5 ಅಗ್ನೆಯೆಂ (ಜ) 6 ಮೆ (ಜ) 7 ಮೇ (ಜ) 8 ಸರ್ವೋವೈ ರುದ್ರಸ್ತಸ್ಮೈಯೆ (ಜ) 9 ಚಿದ್ವಂಗನೇ (ಜ) 10 ಪೊತ್ತಿಹುದು (ಕ) ಪೇಳುತಿಹುದು (ಜ)

ಸಾಕ್ಷಿ ॥
ಸರ್ವಕರ್ಮಬಹಿಷ್ಕೃತ್ಯ ವಿಶೇ[1]ಷಾ[1]ದೇಶಷ ಶಿಷ್ಯತೆ
ಶೇಷಶಿಷ್ಯಾಭಿಧಾನೇನ ಕುರುಶಿಷ್ಯಮನುಗ್ರಹೇತ್ ॥
ಪ್ರಹ್ವೀಭಾವಃ ಸಮಾಸಾಧ್ಯ ಮನೋವಾಕ್ಕಾಯ ಕರ್ಮಭಿಃ
ಗುರುಭಕ್ತಿಃ ಸದಾ[2]ಯಸ್ಯ[2] ಸಶಿಷ್ಯ ಇತಿ ಕಥ್ಯತೇ ॥

ಬಳಿಕ ಉಭಯೋರ್ಲೋಕ[3]ಯೋರೆಂಬ ಮಂತ್ರದಿಂ[3]
ದುಲಿವ [4]ಕೇಶದ[4] ವಪನವಂ ಮಾಡಿಸಂತ್ತ ಗುರು
ಚೆಲುವ ಶಿಷ್ಯಗೆ ಇಮಂ ಮೇ ಗಂಗೆ ಯಮುನೇ ಸರಸ್ವತಿ ಎನುವ ತೀರ್ಥದ
ಜಲದೊಳಘಮರ್ಷಣಸ್ನಾನಮಂ ಮಾಡಿಸು
ತ್ತೊಲವಿನಿಂ ಸಿತವಸನವಿತ್ತು ಆಯುರ್ದಾಯ
ದಲಘುಮಂತ್ರದಿ ಪಂಚಗವ್ಯಮಂ ಮೂರುದಿನ ಕೊಟ್ಟು ಮಂತ್ರಾ ಶಿಷ್ಯನಂ ೨೪

ಬಿಡದೆ ಭುಕ್ತೋಪವಾಸಮಂನಿರಿಸುತೇ ಬಳಿಕ
ವಡವಗ್ನಿರಿತಿಭಸ್ಮದಿಂ ಶಿಷ್ಯನಷ್ಟತನು
ಜಡವ ಶುದ್ಧವಮಾಡಿ ಆಸ್ಯಪ್ರಾಣಪ್ರತಿ[5]ಮಮೆಂಬ ಘನ[5]ಮಂತ್ರದಿಂದ
ಜಡಜೀವಶುದ್ಧಿಯಂ[6]ಗೈದು ನೇತ್ರೇ ಪಾತು
ವೊಡನೆ ತ್ರಿಯಂಬಕಂ ಎಂಬ ನಿಜಮಂತ್ರದಿಂ[6]
ಬೆಡಗಿನಿಂದಿಂ[7]ದ್ರಿಯಂಗಳನು ಬ್ರಹ್ಮಾ ಚ ವಿಷ್ಣುಶ್ಚೆಂದು ಶುದ್ಧಿಗೈದು[7] ೨೫

॥ ಸಾಕ್ಷಿ ॥
ಉಭಯೋರ್ಲೋಕಯೋರಭಿಜಿತ್ಯೈ ॥ ಕೇಶ [8]ಶ್ಮ[8]ಶ್ರು ವಪತೇನಭಾನಿ ॥
[9]ನಿಕೃಂತತ್ತೆ[9]ಮೃತಾಯೇ ಸಾತ್ವಗಮೇಧ್ಯಾಯತ್ಕೇಶಶ್ಮಶ್ರುಮೃತಾ ಮೇವ ॥
ತ್ವಚಮಮೇಧ್ಯಾಮಪ[10]ಹ[10]ತ್ಯ॥ ಯಗ್ನಿಯೋ ಭೂತ್ವಾಮೇಧವಮುಪೇತ್ಯಂಗೀರಸಃ ॥
ಸುವರ್ಗಂ ಲೋಕಂ ಯನ್ತೊಪ್ಸುದೀಕ್ಷಾತಪಸೀ ॥ ಪ್ರಾವೇಶಯನ್ನಪ್ಸುಸ್ನಾತೀ ॥
ಸಾಕ್ಷಾತ್ ದೇವ ದೀಕ್ಷಾತಪಸೀ ॥ ಅವರುನ್ಧೇ ತೀರ್ಥೇ ಸ್ನಾತೀ ತೀರ್ಥೇಹಿತೇ ॥
ತಾಂ ಪ್ರಾವೇಶಯನ್ತೀತೀರ್ಥೇ ಸ್ನಾತಿ ॥ ಅನೇನ ಮನ್ತ್ರೇಣ ವಪನಂ ಕಾರ[11]ಯದ
ಸ್ನಾನೇನ[11]ಮನ್ತ್ರೇಣಘಮರ್ಷಣಸ್ನಾ[12]ನಂ ಚ[12] ಕಾರಯೇತ್ ॥

---

1 ಷೋ (ಜ) 2 ಯಮುಷ್ಯ (ಜ) 3 ರಭಿಚಿತ್ಯೆ ಕೇಶಮೆಂ (ಜ) 4 ಮಂತ್ರದೆ (ಜ) 5 ಮಂತ ಸ್ಸಸು (ಜ) 6 ಓಂ ಶಿವಾತ್ಮಕಮೆಂದೊಡನಾತ್ಮಶುದ್ಧಿಯಂ ತ್ರಿಯಂಜಕಮೆಂಬ (ಜ) 7 ಕ್ರಿಯಂಗಳ ಬ್ರಹ್ಮವಿಷ್ಣುಶ್ಚಮೆಂದು ಗುರುವಂ ತೋರಿಸಿ (ಜ) 8 ತ್ಮನಿ (ಕಗ) 9 ವಿಕೃತನ್ತೆ (ಕಗ) 10 ಹಪ (ಜ) 11 ಯೇತ್ ಅಸ್ಯ (ಜ) 12 ನಂ (ಜ)

ಇಮಂ ಮೇ ಗಂಗೇ ಯಮುನೇ ಸರಸ್ವತೀ॥ ಶುತುದ್ರಿಸ್ತೋಮಗ್ಂ ಸಚತಾಪರುಷ್ಣಿ
ಯೇತಿ ॥
ಯನ್ಮಯಾ[1]ಭ[1]ಕ್ತಮಸಾಧೂನಾ ಪಾಪೇಭ್ಯಶ್ಚ ಪ್ರತಿಗ್ರಹಃ ॥ ಯನ್ಮೇ ಮನಸಾ ವಾಚಾ
ಕರ್ಮಣಾ ವಾ ದುಷ್ಕೃತಂಕೃತಂ ತನ್ನ ಇಂದ್ರೋ ವರುಣೋ ಬೃಹಸ್ಪತಿಸ್ಸವಿತಾಚ
ಪುನಂತು ಪುನಃ ಪುನಃ ಕೃತಂ ಇ[2]ನ್ದ್ರಾ[2]ವರುಣೋ ಬೃಹಸ್ಪತಿಸ್ಸವಿತಾ ಚ ಪುನನ್ತು ಪುನಃ
ಪುನಃ॥ ಆಯುರ್ದಾ ಅಗ್ನೇ ಹವಿಷೋಜುಷಾಣೊ ಘೃತಪ್ರತೀಕೋ ಘೃತಯೋನಿರೇಧಿ
ಘೃತಂ ಪೀತ್ವಾ ಮಧುಂಚಾರುಗವ್ಯಂ ಪಿತೇವ ಪುತ್ರಮಭಿರಕ್ಷತಾದಿಮಮ್ ॥
[3]ಅನೇನ[3]ಮನ್ತ್ರೇಣ ಪಂಚಗವ್ಯಂ ಪ್ರದಾಪಯೇತ್ ॥

ಓಂ॥ ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ವ್ಯೋಮೇತಿ
ಭಸ್ಮೇತಿ ಭಸ್ಮ ಸರ್ವಗ್ಂ ಹವಾ ಇದಂ ಭಸ್ಮ। ಮನ ಇತ್ಯೇತಾನಿ ಚ ಕ್ಷೂಗ್ಂ ಷಿ ಭಸ್ಮಾನಿ॥
ಭಸ್ಮ ಸೋಮೇತಿಭಸ್ಮ ಸೂರ್ಯೇತಿಭಸ್ಮ ಅನೇನಾಷ್ಟಭೂತಂ ಶುದ್ಧಿಂ ಕಾರಯೇತ್ ॥
ಅಸ್ಯ [4]ಪ್ರಾಣಪ್ರತಿಷ್ಠಾಪನಮಹಾಮ[4]ನ್ತ್ರಸ್ಯ ಬ್ರಹ್ಮಾವಿಷ್ಣು ಮಹೇಶ್ವರಾ ಋಷಯಃ ॥
ಋಗ್ಯಜುಸ್ಸಾಮಾಥರ್ವಣ[5]ಶ್ಛನ್ದಾಂಸಿ[5] ಮಮಪ್ರಾ[6]ಣ ಇಹ[6] ಪ್ರಾಣ ॥ ಮಮಜೀ[7]ವ
ಇಹಸ್ಥಿತಃ ಮಮ[7]ಸರ್ವೇಂದ್ರಿಯಾಣಿ ವಾಙ್ಮನಶ್ಚಕ್ಷು ಶ್ರೋತ್ರ ಜಿಹ್ವಾಘ್ರಾಣಪ್ರಾಣ
ಮನೋಬುದ್ಧಿ ಚಿತ್ತವಿಜ್ಞಾನ ಮಮ ಶರೀರೆ ಆಗತ್ಯ ಸುಖಂ ಚಿರಂ[8]ತಿಷ್ಠನ್ತು ಸ್ವಾಹಾ[8]
ಅನೇನ ಜೀವಶುದ್ಧಿಂ ಕುರ್ಯಾತ್

[9]ಓಂ ॥ ನೇತ್ರೇತ್ರಿ[9]ಯಮ್ಬಕಃ ಪಾತು ಮುಖೇ ಪಾತು ಮಹೇಶ್ವರಃ
ಕರ್ಣಯೋಃ ಪಾತು ಸಂಪೂರ್ಣೋ ನಾಸಿಕಾಂ ತು ಭವೋದ್ಭವಃ
ವಾಗೀಶಃ ಪಾತುಮೇ ಜಿಹ್ವಾಂ [10]ವಕ್ಷಃ ಪಾತ್ವ[10]ಮ್ಬಿಕಾಪತಿಃ
ಅನೇನ ಮನ್ತ್ರೇಣ ಇನ್ದ್ರಿಯಶುದ್ಧಿಂ ಕಾರಯೇತ್
ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ
ಏತೇ ಗರ್ಭಗತಶ್ಚೈವ ತಸ್ಮೈಶ್ರೀಗುರವೇ ನಮಃ॥

ಅನೇನ ಭೂತಶುದ್ಧಿಂ ಕೃತ್ವಾನನ್ತರಮ್
ಪಂಚಾಧಿದೇವತಾಧಿಷ್ಟ್ವಂತಂ ಶ್ರೀಗುರುದರ್ಶನಂ ಕಾರಯಿತ್ವಾ

---

1 ಭು (ಜ) 2 ನ್ದ್ರೋ (ಜ) 3 ಈಮಂ (ಜ) 4 ಪ್ರಾಣಪ್ರತಿಮ (ಜ) ಪ್ರಾಣ ಪ್ರತಿಷ್ಠಾಮ (ಗ) 5 ಣಂದಾಸಿ (ಗ) ಸದಾಶಿವ (ಜ) 6 ಣ ಪ್ರತಿಮಂತ್ರಸ್ಯ ಇಹಃ (ಜ) 7 ವ್ಯೋಹ ಸಾದಾಮಮ ಮಸ್ತ (ಜ) 8 ಶಿರಂ ತಿಷ್ಮತಿ (ಜ) 9 ಓಂ ಜೀ ಶಿವಾತ್ಮಕಂ ಸುಖಂದೇವಂ ಜೀವಾತ್ಮಕ ಸುಖಂಶಿವಂ ಶಿವಜೀವಾತ್ಮಸಂಯೋಗೆ ಪ್ರಾಣಲಿಂಗಂ ಯಥಾಭವೇತ್ ಅನೇನ ಮಂತ್ರಾಣತ್ಮಸುದಿಂ ಕಾರಏತ್ ಓಂ ನೇತ್ರತ್ರಿ (ಜ) 10 ಓಷ್ಮಪಾಕ (ಜ)

ಇಂದುಧವಳಾಂಬರ[1]ಶುಭಾ[1]ಭರಣಗಳ ಧರಿಸಿ
ಸುಂದರ ಸುವರ್ಣಸುಮವಿತ್ತಾನುಸಾರದೊಳ
ಗಂದದಿಂ ಗುರುಪೂಜೆಯಂ ಮಾಡಿ ಋತ್ವಿಜರನರ್ಚಿಸುತ ದಶದಿಕ್ಕಿನೊಳ್
ನಿಂದು ರುದ್ರರ್ಗೆ ಶರಣೆನುತೆನ್ನ ಪೊರೆಯಿರೆಂ
ದಿಂದಂಧರಭಕ್ತಮಾಹೇಶ್ವರನಿಕಾಯಕಾ
ನಂದದಿಂ[2][ದ ದಿವ್ಯಾಭರಣ][2]ಗಂಧಾಕ್ಷತೆ ವಿಭೂತಿ ವೀ[3]ಟಿಕೆಯಿ[3]ವುತೆ ೨೬

ಬಲವಂದು ಋತ್ವಿಜರನಖಿಲಗಣ ತಿಂತಿಣಿಯು
ನಲವಿನಿಂ ಗುರುನಿರೂಪಣವಾಂತು ಬಹುವಿಧದೊ
ಳೊಲಿದಲಂಕರಿಸಿರ್ಪ ದೀಕ್ಷಾಜನಾಶ್ರಯವ ನೋಡಿ ಬದ್ಧಾಂಜಲಿಗಳಿಂ
ಸಲೆ ಗುರುಸ್ತೋತ್ರಮಂ ಮಾಡುತ್ತ ಮೂರ್ಸೂಳು
ವೊಲಿದು ಶಿಷ್ಯಪ್ರದಕ್ಷಿಣವೆಂಸಗಿ ಸಂತಸದೊ
ಳಲಘು ಮಂಟಪದ ಪೊರವಳಯದೊಳಗಷ್ಟಾಂಗಪ್ರಣುತನಾಗುವದೆಂತೆನೆ ೨೭

ಪರಮಶುದ್ಧಾಂಗನಾದಾ ಶಿಷ್ಯ ಪರುಷದಿಂ
ದಿರದೆಯಾನಂತ್ಯಸಜ್ಜನ್ಮ ಸಂಪ್ರಾಪ್ತಿಯೆಂ
ದರರೆ ಚೈತ[4]ನ್ಯಂ ಹಿ ತಾ[4]ಶ್ವತಂ ಶಾಂತನೆಂದೋದುತ್ತೆ ಭಕ್ತಿಯಿಂದ
ಗುರುವಿಂಗೆ ಶಿರವುರೋದೃಷ್ಟಿ ಮನಶ್ರದ್ಧೆ ನುತಿ
ಚರಣದ್ವಯ[5]ದ ಕರದ್ವಯ[5]ಗಳಷ್ಟಾಂಗದಿಂ
ಭರದಿ ನಿರ್ಲಜ್ಜೆಯಿಂ ದಂಡಪ್ರಣಾಮವಂ ಮಾಡಿ ಗುರುವಂ ನುಡಿಸುತ ೨೮

ಅಷ್ಟಾಂಗದಿಂ ಪ್ರಣುತನಾದ ಶಿಷ್ಯನ ನೋಡಿ
ಶ್ರೇಷ್ಠವಹ ಗುರು[6]ವೆ ಮಾ[6]ತಾಗುರುಃ ಪಿ[7]ತನು[7] ಎಂ
ದಿಷ್ಟಮಸುಮಿಂ ಮಾತೃದೇವೋಭ[8]ವ ಎನಿಪ್ಪ[8] ಮಂತ್ರದಿಂದಂ ಶಿಷ್ಯನಂ
ಶಿಷ್ಟ ಗುರು ಕೈವಿಡಿದಂ ತಂದು[9] ಪೃಥಿವ್ಯಾನಿ ವಿ
ಶಿಷ್ಟ ಕೇಳ್ಕೆ ನಮೋರುದ್ರೇಭ್ಯ ಎಂಬ ಮಂ
ತ್ರೇಷ್ಟವಹ[9] ಸ್ವಸ್ತಿಕೆಯೊಳಂತ್ತರ ಸಂಮುಖನಾಗಿ ಶಿಷ್ಯನಂ ಕುಳ್ಳಿರಿಸುತ ೨೯

ಸಾಕ್ಷಿ ॥ ಶ್ಲೋಕ ॥
ಅನನ್ತಜನ್ಮಸಮ್ಪ್ರಾಪ್ತೇ ಕರ್ಮೇಂಧನ ವಿದಾಹಿನೇ
ಜ್ಞಾನಾನಲಪ್ರಭಾವೇನ ತಸ್ಮೈ ಶ್ರೀಗುರವೇ ನಮಃ॥

---

1 ಸುವಾ (ಜ) 2 ದಿವ್ಯಾಂಬರಾ (ಜ) 3 ಳ್ಯವನೀ (ಜ) 4 ನ್ಯವಯಶಾ (ಜ) 5 ಬಾಹುದ್ವಯಂ (ಜ) 6 ರ್ಮಾ (ಜ) 7ತಾ (ಜ) 8 ಮೇಯೆಂಬ (ಜ) 9 ನಮೋ ರುದ್ರೇಭ್ಯೋ ಸ್ಪಷ್ಟದಿಂ ಎ ಪೃಥು ವ್ಯಾಂ ಎಂಬ ಮಂತ್ರದೆಯಂತ್ಯ ೄಷ್ಟವಹ (ಜ)

ಚೈತನ್ಯಂ ಶಾಶ್ವತಂ ಶಾನ್ತಂ ವ್ಯೋಮಾತೀತಂ ನಿರಂಜನಂ
ನಾದಬಿಂದುಕಳಾತೀತಂ ತಸ್ಮೈಶ್ರೀ ಗುರವೇ ನಮಃ॥
ಪ್ರಣಮ್ಯದಣ್ಡವದ್ಭೂತೌ ವಿಪ್ರಮನ್ತ್ರೇಣ ಚಾರ್ಚಯೇತ್
ಗುರುಶ್ರೀಪಾದಪದ್ಮಗಂಧಪುಷ್ಪಾಕ್ಷತಾದಿಭಿಃ
[1]ಗುರರೇವ ಪರೋಬನ್ಧುರ್ಗುರುರ್ಮಾತಾ[1] ಗುರುಃಪಿತಾ
[2]ಗುರುರೇವ[2] ಪರಂ ನಾಸ್ತಿ ತಸ್ಮೈಶ್ರೀ ಗುರವೇ ನಮಃ॥
ನಮೋರುದ್ರೇಭ್ಯೋ ಶ್ರೀರುದ್ರೇಭ್ಯೋಯೇ ಪೃಥಿವ್ಯಾಂ ಯೇ ಅನ್ತರಿಕ್ಷೇ ಯೇ ದಿವಿಯೇ
ಷಾಮನ್ನಂ ವಾತೋವರ್ಷಮಿಷವಸ್ತೇಭ್ಯೋ ದಶಪ್ರಾಚೀರ್ದಶದಕ್ಷಿಣಾ ದಶಪ್ರತೀಚೀ
ರ್ದಶೋ ದೀಚಿರ್ದಶೋರ್ಧ್ವಾಸ್ತೇಭ್ಯೋ ನಮಸ್ತೇನೋ ಮೃಡಯಂತುತೇಯಂ
ದ್ವಿಷ್ಮೋ ಯಶ್ಚನೊದ್ವೇಷ್ಟಿತಂ[3]ವೋ[3]ಜಂ ಭೇದಧಾಮಿಂ ಮೇರುಪೃಷ್ಠೋ ಋಷಿಃ
ಕೂರ್ಮೋದೇವತಾ॥ಜಗತೀಚ್ಛನ್ದಃ॥ಆಸನೇ ವಿನಿಯೋಗಃ ಅನೇನ ಶಿಷ್ಯಂ ಉದಙ್ಮುಖಂ॥
ಸನ್ತಮುಪವೇಶಯೇತ್॥

ಮತ್ತೆ ಬ್ರ[4]ಹ್ಮಾ ಚ ದೇವಾನಾಂ ಪದವಿಯೆನಿ
ಪ್ಪು[4]ತ್ತಮದ ಮಂತ್ರದಿಂ ಶಿಷ್ಯನ ಬಲದ ಕೈಗೆ
ಬಿತ್ತರದ ದರ್ಭಕಂಕಣವ ಕಟ್ಟುವುದಮಲ ಋಜುಕಾಯನಾಗವಯವಂ
ಅತ್ತಿತ್ತ ಚಲಿಸದೇ ನಾಸಾಗ್ರಲೋಕನದೆ
ಚಿತ್ತದಲಿ ಶಿವಧ್ಯಾನಯುತನಾಗಿ ಮಂತ್ರದಿಂ
ದತ್ಯಧಿಕ ಮುಕುಳಿತ ಕರಂಗಳಿಂದಖಿಳ ಸಲ್ಲಕ್ಷಣದೊಳಿಹ ಶಿಷ್ಯನಂ ೩೦
ವೇದಮನ್ತ್ರಃ ॥
ಬ್ರಹ್ಮಾದೇವಾನಾಂ ಪದವೀಃ ಕವೀನಾಮೃಷಿರ್ವಿ[5]ಪ್ರಾಣಾಂ[5]ಮಹಿಷೋ ಮೃಗಾಣಾಂ।
ಶ್ಯೇನೋ ಗೃಧ್ರಾಣಾಗ್‌ಂಸ್ವಧಿತಿರ್ವನಾ[6]ನಾ[6]ಗ್‌ಸೋಮಃ ಪವಿತ್ರಮಂತ್ಯೇತಿ ರೇಭನ್॥
ಅನೇನ ದರ್ಭಕೌತುಕಂ ಧಾರಯೇತ್॥

ನೋಡೆ ಕರುಣಾವಲೋಕನದಿಂದ ಗುರುನಾಥ
ರೂಢಿಯ ಮಹೇಶ್ವರ[7]ರು ಮನವೊಲಿದು ಪರಕೆಯಂ[7]
ಮಾಡಂತಿರೆ ಶರಣರುಗ್ಘಡಿಸೆ ತಮ್ಮಟ ಭೇರಿ ಶಂಖ ಜಾಗಟೆ ಜರ್ಝರ
ಕೂಡೆ ಮರ್ದಳೆ ತಾಳ [8]ಮುಂತಾದ[8] ರವಮುಣ್ಮೆ
ಯಾಡುತ್ತ ನಚ್ಚಣಿಯರಾರತಿಗಳಂ ಬೆಳಗಿ
ಪಾಡೆ ಶೋಭನಗಳಂ ಶಿವಭಕ್ತರಂಗನೆಯರಾಗ ಹರುಷಂದಳೆಯಲು ೩೧

1 ಗುರುರ್ಮಾತಾ (ಜ) 2 ಗುರೂಣಾಂ ಬಂಧುಮೇವಚ ಗುರುದೇವ (ಜ) 3 ವೊಂ (ಜ)
4 ಹ್ಮದೇವನಾ ಪದವೀಯೆಂಬುಂ (ಜ) 5 ಪ್ರಾಣಾ (ಜ) 6 ನಾಜಂ (ಜ) 7 ರ ಆಶೀರ್ವಾದ ನೆರೆ (ಜ)
8 ಪಂಗಾದಿ (ಜ)

ಮಂಗಳಂ ಪ್ರಮಥಗಣ ರುದ್ರಗಣ ಮೊತ್ತಕ್ಕೆ
ಮಂಗಳಂ ವೃಷಭಯೋಗಾಚಾರ್ಯ ಸಂಕುಳಕೆ
ಮಂಗಳಂ ಅರವತ್ತುಮೂವರ್ಗೆ ಷೋಡಶಗಣಂಗಳ್ಗೆ ತೇರಸರ್ಗೆ
ಮಂಗಳಂ ದಶಗಣಕೆ ಬಸವಪ್ರಭು ಮಡಿವಳಗೆ
ಮಂಗಳಂ ಚೆನ್ನಬಸವಗೆ ಸಿದ್ಧರಾಮಂಗೆ
ಮಂಗಳಂ ಶರಣ ಋತ್ವಿಕ್ಕು ಗುರು ಶಿಷ್ಯರ್ಗೆ ಮಂಗಳಂ ಜಯಮಂಗಳಂ ೩೨

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರಮಂಜುಳ ಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗ ಪದಪದ್ಮಷಟ್ಪದೋ
ದಿತ ಮಯ ಚತುರ್ಗುರು ಸುಚಾರಿತ್ರದೊಳ್ ನೋಡ
ಲತಿನೂತ್ನಮಾದಾರುಕಾಂಡದೊಳಗೆರಡನೆಯ ಸಂಧಿ ಸುಜ್ಞಾನಬಂಧಿ ೩೩

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತ ಮಾಹೇಶ್ವರರ್ಗಿಷ್ಟಾರ್ಥಮಹುದು ಸತ್ಯಂ ೩೪

# ಮೂರನೆಯ ಸಂಧಿ

* ಸೂಚನೆ : *

ಕಳಶೋದಕಸ್ನಾನ ಭೂತಿ ರುದ್ರಾಕ್ಷಿಗಳ
ನಳವಡಿಸು[1]ವದನು[1] ಮಂತ್ರನ್ಯಾಸವಿಧಿಗಳಂ
ತೊಳಪ ವೇ[2]ಧಾ[2]ದೀಕ್ಷೆಗಳ ಭೇದವನು[3]ನೈಜಮುಸುರ್ವೆ ನಾಂ[3] ಲಾಲಿಸುವುದು

ಸುರಭಿಪತಿ ದರ್ಪಾಪಹರಣ ಸುರಪತಿಪೂಜ್ಯ
ಸುರಭಿಮುಖ ಸಾರ್ವಕಾಲಾತೀತ ಪದಯು[4]ಕ್ತ[4]
ಸುರಭಿಕಾಂತೇಶ ವರಸುರಭಿವನಮಾಲಿ ದಶಜನ್ಮಪಾಲನ ಸುಶೀಲ
ಸುರಭಿಸುರಭೂಜಾದ್ಯಮರಪದವಿನತಪಾಲ
ಸುರಭಿಮಂದರಕುಸುಮಹಾರ ಸುಜನಾಧಾರ
ಸುರಭಿಶರಣಾಳಿಹೃಜ್ಜ್ಯೋತಿಪ್ರಭಾರೂಪ ಜಯತು ಗುರು ಚೆನ್ನಮಲ್ಲ ೧

ತಕ್ಕುಲೂರೊಳಗೆ ಗುರು ಲಿಂಗ ಜಂಗಮಭಕುತಿ
ಯಕ್ಕರಿಂ ನೆಯ್ಗೆಕಾಯಕದಿಂದ ಮಾಡುತಿರೆ
ಮುಕ್ಕಣ್ಣ ಚರಮೂರ್ತಿಯಾಗಿ ಬಂದೆಲೆ ಭಕ್ತ ಕೌಪೀನ ಬೇಹುದೆನಲು
ಮಿಕ್ಕು ನಾಳೀವೆನೆನಲೀಗ ಕೊಡುಯೆನೆ ದೇವ
ಗಕ್ಕರಿಂ ನೆಯ್ವ ವಸ್ತ್ರವ ಪರಿದು ಕೊಡೆ ಶಿವಂ
ನಕ್ಕು ಕೈಲಾಸಕ್ಕೆ ಕರೆದೊಡಲ್ಲದೆ ಮೆರೆವ ನೈಸರಡಿಗಳ್ಗೆರಗುವೆಂ ೨

ಬಡಗಮುಖವಾಗಿ ಕುಳ್ಳಿರ್ದ ಗುರು ತನ್ನ ಬಲ
ಗಡೆಯೊಳಿಹ ಶಿಷ್ಯಂಗೆ ತಾನು ಖುತ್ವಿಕ್ಕುಗಳ್
ಕಡುವೇಗದಿಂ[5]ದ[5] ತಂತಮ್ಮ ಕಳಶಗಳೆತ್ತಿ ದೂರ್ವೆ ಕುಶ ಮಾಂದಳಿರ್ಗಳಿಂ
ಬೆಡಗಿನಿಂ ಕಲಶೋದಕಂಗಳಿಂ ಓಂ ಶಿವೆಂ
ದೊಡನೆ ಈ ಮಂತ್ರದಿಂ ತಳಿವುತೀ ತೆರದಿಂದೆ
ಎಡವಿಡದೆ [6]ಎತ್ತಿ ಮೂರಾವರ್ತಿ[6] ತಳಿವುದೇ ಕಳಶೋದಕಸ್ನಾನವು ೩

---

1 ವಂದ (ಜ)  2 ದಾದಿ (ಜ)  3 ವಿಸ್ತರಿಸುವೆನು (ಜ)  4 ಜ್ಯ (ಜ)  5 ದ್ದು (ಕಗ)
6 ಯೆತ್ತಿತ್ತಿಮೂರುಸೂಳು (ಜ)  * ರಾಗ ಗುಂಡಕ್ರಿ (ಜ)

ಸಾಕ್ಷಿ ॥

[1]ತತಃ[1]ಪಂಚಕಳಶಾಂಭೋಭಿಜಾಯಃ ಶಿಷ್ಯಮೂರ್ಧನೀ
ಅಭಿಷಿಂಚೇತ್ಸ್ವಯಂ ಪ್ರಾ[2]ಜ್ಞೋ ಉದ್ಧೃತ್ಯಕಲಶಾನ್[2]ಗುರುಃ ॥
ಉದ್ಧೃತ್ಯವಾ[3]ತ್[3]ತಃ ಕುರ್ಯಾ[4]ತ್ಪ್ರೋ[4]ಕ್ಷಣಂ ಶಿಷ್ಯಮೂರ್ಧನಿ
ಸಮ್ಪ್ರೋಕ್ಷ್ಯಪಂಚಕಲಶಾನ್ ದೂರ್ವಾಂಕುರಸಪಲ್ಲವಾನ್ ॥
ಸ್ವಸ್ವಸ್ಥಾನೇಷಂ ಕಲಶಾನ್‌ವಿಧಾಯಾಥ ಪ್ರಯತ್ನತಃ
ಉದ್ಧೃತ್ಯ ಚ ಯಥಾಪೂರ್ವಂ ಕುರ್ಯಾತ್ ಸಂಪ್ರೋಕ್ಷಣಂ ಪುನಃ ॥
ಇದಂ ತ್ರಿವಾರಮಾಚಾರ್ಯಃ ಕೃತ್ವಾತಸ್ಯಾಘಮರ್ಷಣಂ
ಶಿವಹಸ್ತಂ ವಿಧಾಯಾಥ ಶಿಷ್ಯಸ್ಯ ಶಿರ[5]ಸಿ ನ್ಯ[5]ಸೇತ್ ॥

ಓಂ ಶಿವೋ [6]ಅಪ[6]ಶ್ಶಾನ್ತಿ ಶಿವೋ ಸಾದೃಶ್ಯತೇ ॥ ಅಹೋರಾತ್ರೇ ಶಿವಸನ್ನಿಧೌ ॥ ಕಾಮೇ[7]ನಾನು[7]ಪ್ರಯುಜ್ಯತೇ ॥ ಸರ್ವೇಭ್ಯೋಹಿ ಕಾಮೇ ಭ್ಯೋ[8]ನಾ[8] ಪ್ರಯುಜ್ಯ[9]ತೇ[9] ॥ ಸರ್ವೇಭ್ಯೋಹಿಕಾಮೇಭ್ಯೋ ಅಗ್ನಿಃಪ್ರಯುಜ್ಯತೇ ತ್ರೈಧಾತಾ ಮಿಯೋನಾಂ ಯೋ[10]ಜ[10]ತಾಂ ಅಭಿಚಾ[11]ರ[11] ಇತಿ ಸರ್ವೆವೈ ಯೋಷಾಂ ॥ ಯಜ್ಞಾಯ ತ್ರೈಧಾತಾ ವಿಘ್ನಂ ಸರ್ವೇಣಾಪ್ಯೈ ಸಯಜ್ಞೇನ ಯಂಜ[12]ತೇ[12]ನ ದೇವತಾಭ್ಯಾಂ ಉಚ್ಯತೆ ದ್ವಾದಶಕಪಾಲ ಪುರುಷಾಭವನ್ತಿ ॥ ತತ್ರಯಚಃ ॥ ತತ್ಕಾಪಾಲ ತ್ರಿಶ್ಯಾಮೃರ್ಗಧ್ಯತ್ಯಯ ತ್ರಯೆ॥ ಇಮೇ ಲೋಕಾಯೇಷುಲೋಕಾನಾಂ ಮಾಷೇ ಉತ್ತರಾ .ಉತ್ತರಾಜ್ಞೇಯಂ ಭವತಿ ॥ ಅನೇನ ಅಗ್ನೋದಕಸ್ನಾನಂ [13]ಕಾ[13]ರಯೇತ್

ಮತ್ತೆ ಓಂ ಹ್ರೋಂ ಮಹೇಶಾನಾಯ ನ[14]ಮ[14] ಎನು
[15]ತ್ತ[15]ತ್ಯಧಿಕ ಭಸ್ಮಜ್ಯೋತಿ ಸ್ವರೂಪಾಯ ಎಂ
ದುತ್ತಮ ಪುನಾತಿಹಿ ಜಗತ್ಸರ್ವಮೆಂದು ಭಸ್ಮಕೆ ನಮಸ್ಕಾರಮೆಸಗಿ
[16]ನಿ[16]ತ್ಯದಿಂದಗ್ನಿರಿತಿಯಿಂದಾದೊಡಂ ಮೂಲ
ಬಿತ್ತರದ ಮಂತ್ರದಿಂದಾದೊಡಭಿಮಂತ್ರಿಸುತ
ತಥ್ಯದಿಂ ಮಾನೋಮಹಾಂತಮಾನೊ[17]ಎನಂತೆ[17] ಜಲದಿಂ ಮರ್ದಿಸಿ ೪
ಜ್ಞಾನನಿಧಿ [18]ಕೇಳು[18] ಮಾನ[19]ಸ್ತೋಕಯೆಂಬ ಸುವಿ
ಧಾನವಾಗಿಹ ವೇದ•ಮಂತ್ರ•ದೊಳಗ[19]ಮಳವಾ
ದಾ ನವ್ಯಭಸ್ಮಮಂ ಬೆರಲಿಂದಲೆತ್ತಿ ಮೇಧಾವಿ[20]ಯಾಗುವೆನೆನುತ್ತ[20]

---

1 ತ್ಪಂ (ಕಗ) 2 ಜ್ಞುಉದ್ಧೃತ್ಯರ್ಕ (ಗ) 3 ಚಾಶ (ಜ) (ಜ) 4 ತ್ಯೋ (ಕಗ) 5 ಸೇನ. (ಜ) 6 ಆಪ್ಯ (ಜ) 7 ನಾ (ಜ) 8 ಅನಾ (ಜ) 9 ತೇಘಮರ್ಷಣಂ ಶಿವಹಸ್ತಂ (ಜ) 10 ಜಿ (ಜ) 11 ರಾಜಂ (ಜ) 12 ರೇ (ಕಗ) 13 ಸ್ವಾಹಾಕಾ (ಜ) 14 ಮೊ (ಜ) 15 ತಃಲ (ಜ) 16 ಸ (ಜ) 17 ಯೆಂದು (ಜ) 18 ಲಾಲಿಸೈ (ಜ) 19 ಸ್ತೋಕೆ ತನಯೆ ಮಾನ ಆಯುಷಿಮಾನ ಮಂತ್ರದೊಳ(ಜ)
• ಮಾತ್ರ (ಗ) 20 ಭೂಯಾಸಮೆಂದು (ಜ)

ಸಾನುರಾಗದೆ ಶಿಖಿ ಶಿರೋ ಲಲಾ[1]ಟ ಶ್ರುತಿ
ಸ್ನಾನಕರ[1]ಕಂಠಭುಜ[2]ಯುಗ[2] ಹೃದಯನಾಭಿ[3]ಯಂ
ಲ್ಲೀನೆಂಬೆ ಮೂವತ್ತೆರಡು ಬಳಿಯೊಳಾ ಚಾರುಭಸ್ಮಮಂ ಧರಿಪುದಣುಗ[3] ೫

ಸಾಕ್ಷಿ ॥
ಭಸ್ಮಜ್ಯೋತಿಸ್ವರೂಪಾಯ ಶಿವಾಯ ಪರಮಾತ್ಮನೇ
ಷಟ್ತ್ರಿಂಶತತ್ತ್ವಬೀಜಾಯ ನಮಶ್ಶಾಂತಾಯ ತೇಜಸೇ ॥
ಪುನಾತೇ ಯಜ್ಜಗತ್ಸರ್ವಂ ತ್ರೈಪುಣ್ಡ್ರಾತ್ಮಾ ಸದಾಶಿವಃ
ಐಶ್ವರ್ಯಪ್ರಾಪ್ತಿಬೀಜಾಯ ತಸ್ಮೈಶ್ರೀ ಭಸ್ಮನೇ ನಮಃ ॥

ಅನೇನ ಭಸ್ಮನೇ ನಮಸ್ಕಾರಂ ಕುರ್ಯಾತ್ ॥ ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ
ಜಲಮಿಂತಿ ಭಸ್ಮ ಸ್ಥಲಮಿತಿ ಭಸ್ಮವ್ಯೋಮೇತಿ ಭಸ್ಮ ಸರ್ವಗ್ಂ ಹವಾ ಇದಂ ಭಸ್ಮಮನ
ಇತ್ಯೇತಾನಿ ಚಕ್ಷೂಗ್ಂ [4]ಷಿ[4]ಭಸ್ಮಾನಿ ಅನೇನ ವಿಭೂತಿಮಭಿಮಂತ್ರ ಯೇತ್
ಮಾನೋಮಹಾನ್ತಮುತಮಾನೋ ಅರ್ಭಕಂ ಮಾನ ಉಕ್ಷನ್ತಮುತಮಾನ ಉಕ್ಷಿತಂ ।
ಮಾನೊವಧೀಃ ಪಿತರಂ ಮೋ ತಮಾತರಂ ಪ್ರಿಯಾಮಾನಸ್ತನ್ವೋರುದ್ರರೀರಿಷಃ ॥

ಅನೇನ ಜಲ ಭಸ್ಮಮರ್ದಯೇತ್
ಮಾನಸ್ತೋಕೇ[5]ತನಯೇ[5]ಮಾನಆಯುಷಿಮಾನೋ[6]ಗೋಷುಮಾನೋಅ[6]ಶ್ವೇಷುರೀ
ರಿಷಃವೀರಾನ್ಮಾನೋ ರುದ್ರ ಭಾಮಿತೋಽವಧೀರ್ಹವಿಷ್ಮನ್ತೋ [7]ನಮಂಸಾವಿಧೇಮಹೇ[7]

॥ ಅನೇನ ಭಸ್ಮೋದ್ಧಾರಯೇತ್ ॥

ಮೇಧಾವೀ ಭೂಯಾಸಂ ತೇಜಸ್ವೀ ಭೂಯಾಸಂ ವರ್ಚಸ್ವೀ ಭೂಯಾಸಂ
ಬ್ರಹ್ಮವರ್ಚಸ್ವೀ ಭೂಯಶಾಸಂ ಆಯುಷ್ಮಾನ್ ಭೂಯಾಸಂ ಅನ್ನಾದೋ ಭೂಯಾಸಂ
[8]ಸರ್ವ[8]ಸಮೃದ್ಧೋ ಭೂಯಾಸಂ ।।ಅನೇನ ಭಸ್ಮೋದ್ಧಾರಯೇತ್ ।।
ತ್ರಿಯಾಯುಷಂ ಜಮದಗ್ನೇಃ ಕಶ್ಯಪಸ್ಯತ್ರಿಯಾಯುಷಂ ಅಗಸ್ತ್ಯಸ್ಯ
ತ್ರಿಯಾಯುಷಂ । ಯದ್ದೇವಾನಾಂ ತ್ರಿಯಾಯುಷಂ । ತನ್ಮೇ ಅಸ್ತು ತ್ರಿಯಾಯುಷಂ ॥
ತ್ರ್ಯಂಬಕಂ ಯಜಾಮಹೇ ಸುಗನ್ಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿಂವ ಬನ್ಧನಾನ್ಮೃತ್ಯೋರ್ಮುಕ್ಷೀಯಮಾಮೃತಾತ್

।। ಅನೇನ ತ್ರಿಪುಂಡ್ರಂ ಧಾರಯೇತ್ ।।

---

1 ಟೆರಡು ಕಿವಿ ತಾನಧಿಕ (ಜ) 2 ದ್ವಯ (ಜ) 3 ಪದುಹೀನಮಿಲ್ಲದ ದ್ವಾತ್ರಿಂಶತಸ್ಥಾನಗಳಲ್ಲಿ ಭಸ್ಮಮಂ ಧರಿಪುದಣುಗ (ಜ) 4 ಜುಸಿ (ಜ) 5 ತಯೆ (ಗ) 6 ಅ (ಗ) 7 ಸದಮಿತ್ವಾಹ ವಾಮಹೇಶಿ (ಕಗ) 8 ಯಶಸ್ವೀ ಭೂಯಾಸಂ ಸರ್ವಂ (ಜ)

ಆದಿಯೊಳ್ ಷಣ್ಮುಖಂ ಭಗವಾನವಾದಮಳ
ಮಹಾದೇವನಂ ಕೇಳ್ದ ರುದ್ರಾಕ್ಷಿಯಯುತ್ಪತ್ತಿ
ಯಾದ ಭೇದವನು ತದ್ಧಾರಣದ ಫಲವೆನಗೆ ನಿರವಿಸೆನೆ ರುಂದ್ರ ಪೇಳ್ದಂ
ಆದಿಯಂಲಿ ತ್ರಿಪುರಸಂಹಾರಕ್ಕೆ ನಯನಂಗ
ಳಾದರದೆ ತೆರೆಯಲುದಿಸಿದ ಜಲಕಣಂಗಳವು
ಈ ಧರೆಗೆ ಬೀಳೆಯುದಿಸಿದವು ರುಂದ್ರಾಕ್ಷಿ ಸರ್ವಾನುಗ್ರಹಾರ್ಥವಾಗಿ ೬

ಇಂದ್ರ್ವಗ್ನಿ ರವಿ ನೇತ್ರಜಲಕಣಗಳಿಂದ ಕೇ
ಳಂದವಹ ಶ್ವೇತಾರುಣ ಸುಕೃಷ್ಣಮಯಂದಧಿಕ
ಸುಂದರದ ರುದ್ರಾಕ್ಷಿ ದಶ ದ್ವಾದಶ [1]ಸುಷೋ[1]ಡಶಕಲೆ[2]ಗಳ ಕೂಡುಂ[2]ದಿಸಲಂ
ಇಂದುಧರ ಹರಿಯಂಜೇಂದ್ರಾದಿಗಳು ತಳೆದರೇ
ನೆಂದುಸುರ್ವೆ ಗೋ ಸ್ತ್ರೀ ದ್ವಿಜವಧಾದಿದೋಷಮನ
ಮಂದದಿಂ ಕೆಡಿಸಿ ಯಾಗದಿ ಫಲಂಗಳನಿತ್ತು ಪೂಜ್ಯ[3]ಮಂ ಮಾಳ್ಪ[3]ವಣುಗ ೭

ಎಲೆ ಕುವರ ರುದ್ರಾಕ್ಷಿವೃಕ್ಷನಾಮೋಚ್ಚರಣೆ
ಸಲೆ ಜಿಹ್ವೆಯೊ[4][ಳಗು][4]ಸುರೆ ಸಹಸ್ರಗೋದಾನಫಲ
ನಲವಿನಿಂ ದರ್ಶನಸ್ಪರ್ಶನಗಳಿಂ ದ್ವಿಗುಣ ತ್ರಿಗುಣ ಸತ್ಫಲಗಳಹವು
ಬಳಿಕಲದರಿಂ ಮೇಲೆ ಧಾರಣ ಜ[5]ಪಾ[5]ದಿಗಳ
ಫಲವ ಪೇಳಲ್ಕಸಾಧ್ಯಂ ಮಗನೆ ಕೇಳ್ ಮುಂದೆ
ನೆಲವಿನಿಂದಾಯಾಯ ಮಂತ್ರದೊಡಗೂಡಿ ಗುರು ಧರಿಪಂದಮಂ ಪೇಳ್ವೆವು ೮

[6]ಪರಮಂಶಿಷ್ಯನ ಶಿಖಿಯೊಳೇಕಮುಖದಕ್ಷಿಯಂ
ಹರನೊಂದ ಶ್ರೀಸದಾಶಿವಗೆ ನಮಯೆನುತಲಾ
ದರದಿಂದ ಧರಿಸಿ[6] ದ್ವಿ ತ್ರಿ ದ್ವಾದಶಮುಖಿ[7]ಗಳ ಮೂರುಮಣಿ[7]ಗಳ ಶಿರಪೊಳು
ವರ ವಹ್ನಿಸೂರ್ಯಸೋಮಾಧಿಪಾ[8][ಯಾ ಎನುತ][8]
ಧರಿಸಬೇಕೇಕಾದಶಮುಖಿ[9]ಗಳತಲಸಗ್ನಿ
ಚಿರಮಣಿಯಮೂರ್ಧ್ವದೊಳ್ ಷಟ್ತ್ರಿಂಶದಾತ್ಮಕಾಯ ನಮೋ ಎನುತ್ತ[9]ಧರಿಸಿ ೯

---

1 ಷೋ (ಜ) 2 ಸಮೇತು (ಜ) 3 ನಂ ಮಾಳ್ಪು (ಜ) 4 ಳು (ಕಗಜ) 5 ಟಾ (ಜ) 6 ಭರದಿಂದ ಧರಿಸಿ (ಜ) 7 ದ ಮೂರುಮ ಪರಮಶಿಷ್ಯನ ಶಿಖೆಯೊಳೇಕಮುಖದಕ್ಷಿಯಂತಿರದೊಂದ ಶ್ರೀಸದಾಶಿವಾಯ ನಮೋಯೆನುತಣಿ (ಜ) 8 ಯನಮ (ಕಗ) ಯನಮೋಯೆನುತ (ಜ) 9 ದ ಮೂವತ್ತಾರು ಶಿರುಮಣಿಯ ಮೂರ್ಧ್ನಿಯೊಳ್ ಷಟ್ತ್ರಿಂಶ ತತ್ವಾತ್ಮಕಾಯ ನಮೋಯೆಂದು (ಜ)

ಐದೇಳು ದಶಮುಖದ ದ್ವಾತ್ರಿಂಶ[1]ದಕ್ಷಮ
ನ್ನೈ[1]ದೆ ಕೊರಲೊಳ್ ತ್ರಿಯಂಬಕ ಕಲಾತ್ಮನೆ [2]ಎನು
ತ್ತಾದರದಿ[2] ಧರಿಸಿ ನಾಲ್ಮೊಗದಯ್ವತ್ತು ಮಣಿಗಳನು ಉದರದಲಿ ಮುದದಿಂ
ದಾದ ಶ್ರೀಕಂಠಮೂರ್ತ್ಯಾತ್ಮಕಾಯ ನಮೊ ಎಂ
ದಾದರಣೆಯಿಂ ಧರಿಸಿ ತೋ[3]ಳ್ಗಳೊಳ್ ಹತ್ತುಮೂ
ರಾದ ವಕ್ತ್ರದ[3] ಷೋಡಶ[4]ವ ಧರಿಸುವದು ಷೋಡಶಘನ[4]ಮೂರ್ತ್ಯಾತ್ಮಕಾ[5]ಯ[5] ೧೦

ಎಂಬ ಮಂತ್ರದೊಳು ಎಡಗಡೆ ತೋಳಿನೊಳ್ ಧರಿಸು
ತಂ ಬಿಡದೆ ಶ್ರೀಶಶಿಕಲಾತ್ಮನೆ ನಮೋ ಎನುತ
ಲುಂ ಬಲದ ತೋಳಿನೊಳಗೊಂಭತ್ತು ಮೊಗದ ಮಣಿಗಳನೆರಡುಮುಂಗೈಯೊಳು
ಇಂಬಾದ ದ್ವಾದಶಾದಿತ್ಯಾತ್ಮನೇ ಎಂದು
ಶಂಭವೇ ಶ್ರೀಮಹಾದೇವಾಯ ನ[6]ಮ ಎನು
ತ್ತಂ[6] ಬಿಗಿದು ಬಲದಲ್ಲಿ ಕೇಶವಾ[7]ದ್ಯಮಲಮೂರ್ತ್ಯಾತ್ಮಕಾಯಂ ನಮ ಎನುತ[7] ೧೧

ಎಡದ ಮುಂಗೈಯಲ್ಲಿ ಧರಿಸಿ ತದನಂತರಂ
ಸಡಗರದ ಪದಿನಾಲ್ಕುಮೊಗದ ಮಣಿ ನೂರೆಂಟ
ನೊಡನೆ ಶತರುದ್ರ ವಿದ್ಯೇಶ್ವರಾತ್ಮಕನೆ ವಿಶ್ವೇಶ್ವರಾಯ ಎನುತ್ತಲೆ
ತಡೆಯ[8]ದುಪವೀತಕ್ಕೆ ಮಣಿಯಂನರ[8]ವತ್ತುನಾ
ಲ್ಕೊಡನೆ [9]ಸಂ[9]ಚತಂಃಷಷ್ಟಿ[10]ಕಲಭೂಸಮೇತಯೆಂ[10]
ದೆಡೆವಿಡದೆ ಓಂ ಹ್ರೀಂ ಜನಿಸ್ಥಾನ ಭೂತಯೇ ಸರ್ವಾತ್ಮನೇ ಎನುತ್ತ ೧೨

ಧರಿಸುವುದು ರುದ್ರಾಕ್ಷಪುಂಜಮಂ ವಸ್ತ್ರದೊಳ
ಗಿರಿಸಿ ಓಂ ಹ್ರಾಂ ಎನಂತ ಲಾಂ ಜ್ರಾಂ ಎನು[11]ತ್ತ ಹ್ರೀಂ
ಮರಳಿ ಹ್ರೂಂ ಹ್ರಾಂ ಶ್ರೀಂ ಎನುತ್ತ ಹ್ರೌಂ ಮಂ ವಂ ಎನುತ್ತ ಕ್ಷೋಂ ಕ್ಷಾಂ ಎನುತ್ತ[11]
[12]ತಿರಿಗಿ ಊಂ ಎನುತ ಹದಿನಾಲ್ಕುಬೀಜವನು ತಾ
ನಿರಿಸುವದು ಹದಿನಾಲ್ಕುಮುಖದ ಮಣಿಪರ್ಯಂತ
ಪರಿವಿಡಿಯೊಳಾಯಾ ಮುಖಂಗಳಲಿ ರುದ್ರಾಕ್ಷವೃಕ್ಷಬೀಜವೆ ಶಿವನಲಾ[12] ೧೩

---

1 ಮಣಿಗಳಂ। ತ್ರ್ಯ (ಜ) 2 ನಮೊ। ಯೆಂದಾದರದೆ (ಜ) 3 ಳಲೊಳದಿ ಮೂರು ಮೊಗ ಮೊದ (ಜ) 4 ಸುಖಾಸನಾದಿ ಷೋಡಶ (ಜ) 5 ಯನಮೊ (ಜ) 6 ಮೋಯೆಂ।ದಂಂ (ಜ) 7 ದಿ ಮೂರ್ತ್ಯಧಿಪಾಯಮೋಯೆನುತ್ತ (ಜ) 8 ದೆಜ್ನೋಪವೀತುದರದೊಳರು (ಜ) 9 ಓಂ (ಜ) 10 ಕಲೋಪೇತಮೆಂ (ಜ) 11 ತ್ತಿರದೆ ಪ್ರಾಂ ರೂರೂಮಪಿ ಸ್ರಿಂ ಮಂ ಶಾಂ ಕ್ಷಮಪಿಕ್ಷೋ ಹ್ರೂಂ ನಮೊ (ಜ) 12 ಪರಿವಿಡಿಯ ಮಂತ್ರದಿಂದಭಿಮಂತ್ರಿಸುತ ಬಳಿಕ ಮೆರೆವ ರುದ್ರಾಕ್ಷರುಕ್ಷ ಬೀಜಾಯ ಇತಿ ಚಿರಮಂತ್ರದಿಂದ ರುದ್ರಾಕ್ಷಯೆ ರುದ್ರನೆಂದೋದಿಸುವುದತಿ ಪ್ರೀತಿಯಿಂ (ಜ)

ಸಾಕ್ಷಿ ॥

ರುದ್ರಾಕ್ಷವೃಕ್ಷಬೀಜಾಯ ಭೂತಿಸಂಭೂತಿ ಹೇತವೇ
ನೇತ್ರತ್ರಯಾಯ ರುದ್ರಾಯ ನಮೋ ಲೋಕಹಿತಾರ್ಥಿನೇ ।

॥ ಉದರಬಂಧಮಂತ್ರ ॥

ಓಂ ಚತುಷ್ಪಷ್ಟಿಕಲೋಪೇತಂ ಯುಕ್ತಾಯಾಂ ಓಂ ಹ್ರೀಂ ಜನನಸ್ಥಾನಭೂತಯೇ ॥
ಸರ್ವಾತ್ಮನೇ ಸರ್ವಕಾಲರೂಪಾಯ ಉಮಾಪತಯೇ ನಮಃ ॥

ಶಿರದಲ್ಲಿ ರುದ್ರಾಕ್ಷಿಯಂ ತಳೆಯೆ ಕೋಟಿಫಲ
ಮಿರದೆ ದಶಕೋಟಿ ಕಿವಿಯೊಳಗಾನೆ ಕಂಠದೊಳ್
ಧರಿಸೆ ಶತಕೋಟಿಫಲ ಸಾಹಸ್ರಕೋಟಿಬಾಹುಗಳಲ್ಲಿಯಾಂತೊಡನಿಶಂ
ಎರಡುಮುಂಗೈಯಲ್ಲಿ ತಳೆಯಲ್ಕನಂತಫಲ
ಮಿರದಹುದಂ ರುದ್ರಾಕ್ಷಿ ಮೋಕ್ಷಕಾರಣಕರ್ಣಾ
ಮೆರಡರೊ[1]ಳಗೇಕಮೇಕಂ ಸಬ್ರಹ್ಮಣೇ[1] ನಮೋ ಎಂದಂ ಧರಿಸಿ ೧೪

ಇಂತು ನಾನಾವಿಧದೆ [2]ಬ್ರಹ್ಮ[2]ರುದ್ರಾಕ್ಷಿಗಳ
ನಂತಮತ್ರಂಗಳಿಂ ಧರಿಸಿ ಶಿಷ್ಯಂಗಮುಳ
ಮುಂತೆ ಷಟ್ಕೃತಿಗಳಿಂ ಪೂರ್ಣಮಾದೋಂಕಾರಮಂ ನಾಗವಲ್ಲಿಯಲ್ಲಿ
ಕಂತುಹರ ಶ್ರೀಭಸಿತದಿಂ ಲಿಖಿಸಿ ಗುರಂಕರದೊ
ಳಂತಿರಿಸಿಯಾಚಾರ್ಯ[3]ರೊಂದೆ[3]ಗುರುಶಿಷ್ಯನ ಸ
ಮುಂತು ಶಿರದೊಳ್ ನೀಲತೋಯದ[4]ವಲಗ್ನಸ್ಥಮೆಂ[4]ಬ ಮಂತ್ರದೊಳಿರಿಸುತ ೧೫

ಮತ್ತೆ ಓಂ ಪ್ರಣವು ಪಂಚಾಕ್ಷರೀಮಂತ್ರಕ್ಕೆ
ಬಿತ್ತರದ ವಾಮದೇ[5]ವ ಋಷಿ[5]ಪಂಕ್ತಿಚ್ಛಂದ
ಮತ್ತಧಿಕ ಪರಶಿವನೆ ದೇವತೆಯು ಓಂ ಬೀಜ ನಮಶ್ಶಕ್ತಿ ಕ್ರೀಂ ಕೀಲಕಂ
ಸತ್ಯದಿಂ ಶಿಷ್ಯ ಜನ್ಮಾಂತರದ ಪಾ[6]ಶ[6]ವಂ
ವೃ[7]ತ್ತಿ[7]ಯಂ ಕೆಡಿಸಲೋಸ್ಕರ ತನುತ್ರಯಗಳಂ
ಪಥ್ಯದಿಂ [8]ಬೆಳಗಲ್ಕೆ ಶಿವತುಂಷ್ಟಿಗೋಸುಗಂ ಜಪದಿ[8] ವಿನಿಯೋಗಮೆಂದಂ ೧೬

---

1 ಳೇಕಮೇಕಂ ಷಟ್ಟದ್ವಾಷಡ್ಬ್ರಹ್ಮಣೇ (ಜ) 2 ಭಸ್ಮ (ಜ) 3 ರೆಜಿಸೆ (ಜ) 4 ಮಧ್ಯಸ್ಥಯೆಂ (ಜ) 5 ವನೆಋಷಿಃ (ಜ) 6 ಪ (ಜ) 7 ತ್ರ (ಕಗ) 8 ಶುದ್ಧ್ಯರ್ಥ ಶಿವ ಪ್ರೀತ್ಯರ್ಥ ಜಪೆ (ಜ)

ಈ ತೆರದಿ ಜಪಿಸುತ್ತ ಪ್ರಣವಪೂರ್ವಕದಿಂದ
ಸಾತಿಶಯಭಸ್ಮದಿಂ[1]ದೋಂಕಾರವಂಖಿವಾಗ[1]
[2]ಲೋತಂ ಪಂಚಾಕ್ಷರವ ಬಿಂದೂತ್ಕರಂಗೊಂಡು ಹೃದಯ ಮಸ್ತಕ ಶಿಖಿಗಳಂ
ಈತೆರದಿ ನೇತ್ರ ಭುಜ ಕರತಲ ಕರ ಸುಪೃಷ್ಠ
ಜಾತಗಳ ಕುರಿತಂ ನವಂಮಂ ಸ್ವಾಹೆಯಂ ವಪ
ದ್ಭ್ಯಾತ ಹುಂ ವೌಷಟ್ಪದೆಂಬಾರುಪದಗಳಂ ವಿನ್ಯಾಸವಂ ಮಾಳ್ಪದು[2] ೧೭

ವರ ಕರದ್ವಯಕರತಳಂಗಳಲಿ ಕರಮಧ್ಯ
ದಿರವಿನೊಳ್ ಕರ ಪೃಷ್ಠಕಲಗಳಲಿ ಮಣಿಬಂಧ
ಮೆರಡರಲಿಯಾ ಕ[3]ಪೋ[3]ಲ[4]ದಿ[4] ಷಡಕ್ಷರಿ[5]ಯನುಂ[5] ಷಟ್ಪ್ರಸಾದೋಂಕಾರಮಂ
ವೆರಸಿ ನ್ಯಾಸಂಗೆಯ್ಯೆ ಕರನ್ಯಾಸಮಂಗುಷ್ಠ
ಚಿರ ತರ್ಜನಿಯನಾಮಿಕೆ ಕನಿಷ್ಠಾಸ್ತ್ರಂಗ
ಳಿರದರಿದಂ ಷಡ್ಬೀಜಷಟ್ಪ್ರಸಾದೋಂಕಾರಮಿರಿಸೆಯಂಗುಲಿನ್ಯಾಸವು ೧೮

ಚರಣಯುಗ್ಮಂ ನಾಭಿಹೃನ್ಮುಖಂ ಮಸ್ತಕಗ
ಳಿರವಿನಲಿ ಹ್ರಾಂ ಹ್ರೀಂ ತಥಾ ಚ ಹ್ರೋಂ ಹ್ರೈಂ ಹ್ರೌಂ ಚ
ಚರಮೇ ಹ್ರ ಎಂಬ ಷಡ್ಬೀಜಂಗಳಂ ಪಿಡಿದು ಷಟ್ಪ್ರಸಾದೋಂಕಾರಮಂ
ಇರಿಸೆಯಂಗನ್ಯಾಸ ಶಿರ ಲಪನ ಹೃದ್ಗುಹ್ಯ
ಚರಣಂಗಳೊಳ್ [6]ಷಡ[6]ಕ್ಷರಪ್ರಸಾದೋಂಕಾರ
ವೆರಸಿಯಾಯಾ ಮಂ[7]ತ್ರದಿಂದಲಾಯಾ ಬ್ರಹ್ಮಗಳಿಗೆ ತಾ ಶರಣೆನುತ್ತ[7] ೧೯

ಓತೈದು ನಾಲ್ಕೆಂಟು ಹದಿಮೂರರೆಂಟುಸೂ
ಳಾ ತೆರದಿ ಭಸ್ಮಮಂ ತಳೆಯೆ ಬ್ರಹ್ಮನ್ಯಾಸ
ರೀತಿಯಿಂ ಮಂತ್ರಕಾಯವ ಮಾಡಿ ಮಾಂಸತನುವಂ ಕಳೆದ ಗುರುನಾಥನು
ಜ್ಯೋತಿಮಯಭೂತಿಯ ಲಲಾಟದೊಳ್ ಧರಿಸುತ್ತ
ಖ್ಯಾತದುರ್ಲಿಖಿತಮಂ ಕಳೆದನೆಂತೆನಲಾಯು
ಭೂತೇಶಲಿಂಗ[8]ವೆ ಮಹಾದೇವ ಸತ್ಕ್ರಿಯೈಶ್ವರ್ಯವೇ ವರ[8]ಜಂಗವಂ ೨೦

---

1 ಓಂ ಹೃದಯಾಯ ನಮೊ (ಜ) 2 ಪ್ರೀತಿಯಿಂ ಓಂ ನಂ ಶಿರಸೇ ಸ್ವಾಹ ಓಂ ಮಂ ಶಿಖಾಯೈ ವೌಷಟ್ ಬಳಿಕ ಓತು ಓಂ ಶಿಂ ಕವಚಾಯ ಹುಂ ಎನುತಮಾ ತೆರದೆ ಓಂ ವಾಂ ನೇತ್ರತ್ರಯಾಯ ವೌಷಟ್ ಖ್ಯಾತವಹ ಓಂ ಯಂ ಅಸ್ತ್ರಾಯ ಪಾಟ್ ಓಂ ಕರತಳಕರ ಪೃಷ್ಠಾಭ್ಯಾಂ ನಮೊ (ಜ) 3 ಟೋ (ಗ) 4 ದ್ವಯದೆ (ಜ) 5 ಯ (ಜ) 6 ವರಾ (ಕಗ) 7 ತ್ರಂಗಂಗಳಿಂದಾಯಾಯಾ ಬ್ರಹ್ಮಕ್ಕೆ ನಮಸ್ಕರಿಸುತ (ಜ)8 ಕರ್ಮವೆ ಶಿವಕ್ರಿ ಐಶ್ವರ್ಯವೆ (ಜ)

ವಿದ್ಯವೇ ಶಿವಮಂತ್ರ ಲಿಂಗೈಕ್ಯನೇ ನಿಧನ
ತದ್ಭೇದವೇ ಮತ್ತೈಯಾಯು[1]ಪ್ಯನಾಕೃತಿಯು[1]
ಹೊದ್ದಿದಾ ಕರ್ಮವೆ ಮಕಾರವಮಾ ಸಿರಿ ಶಿಕಾರವದುವಾಕಾರ ಮಂತ್ರಂ
ವಿದ್ಯವಾ[2]ನ[2]ಧನವೆಯಕಾರಮಯವಾಗಿಂತು
ಚಿದ್ಗುರಂ ಕೃಪಾಮೃತದಿ ಮಿಂದು ಶುಚಿಯಾದುದೇ
[3]ಶುದ್ಧಿ ತಾನೋನ್ನಮಂ ಧಾರಾಯ ನಮಯೆಂದು ಪರಿವಿಡಿಯ ನೆರೆ ತಪ್ಪದೆ[3] ೨೧

ಆಧಾರಚಕ್ರಾದ್ಯ ಪಶ್ಚಿಮಶಾಂತಮುಮವಾದ
ಶ್ರೀದಿವ್ಯಚಕ್ರಂಗಳೊ[4]ಳಗೆ[4] ಷಡ್ವರ್ಣಗಳ
ನಾದರದೆಯಿರಿಸಿ ನೆನೆವುದೆಯಂತರಧ್ಯಾನ ಗುರು [5]ತನ್ನ ಸಿರಿಹಸ್ತವಂ[5]
ವೋದದಿಂ ಶಿಷ್ಯಮಸ್ತಕಕಿಟ್ಟು ಶಿರವಿಂಪನ
[6][ನಾದ][6]ಸಿಂಹಾಸನವಿದೇಳುಸೂ[7]ಳರ್ಚಿಸಿದ
ನೈ[7] ದೇವ ಈ ತಾಣದಿಂದಗಲದಿರು ಎಂದು ವಚಿಸಿ ಶಿಷ್ಯನ ಪರಸುತ ೨೨

ಸಾಕ್ಷಿ ॥ •ವೇದಮನ್ತ್ರಃ • ॥
ಗಾಯತ್ರ್ಯಾ ಗಾಯಂತ್ರೀಛ್ಚಂದೋ ವಿಶ್ವಾಮಿತ್ರೋ ಋಷಿಃ ಸವಿತಾದೇವತಾ
ಅಗ್ನಿರ್ಮುಖಂ ಬ್ರಹ್ಮಾ ಶಿರೋ ರುದ್ರಃ ಶಿಖಾ ವಿಷ್ಣುರ್ಹೃದಯಂ ಪೃಥಿವೀಯೋನಿಃ
ಪ್ರಾಣಾಪಾನ ವ್ಯಾನೋದಾನ ಸಮಾನಾ ಸಪ್ರಾಣ ಶ್ವೇತವರ್ಣ ಸಾಂಖ್ಯಾಯನ
ಗೋತ್ರ ಗಾಯತ್ರೀಚತು[8]ವಿಂಶ[8]ತ್ಯಕ್ಷರಾ ತ್ರಿಪದಾ ಷಟ್ಕುಕ್ಷಿಃ ಪಂಚ ಶಿರ್ಷೋಪ
ನಯನೇ ವಿನಿಯೋಗಃ ॥ ಓಂ ಭೂಃ ॥ ಓಂ ಭುವಃ ॥ ಓಂ ಸುವಃ ॥ ಓಂ ಮಹಃ ॥
ಓಂ ಜನಃ ಓಂ ತಪಃ ॥ ಓಂ ಸತ್ಯಂ ॥ ಓಂ ತತ್ಸವಿತುರ್ವರೇಣ್ಯಂ ಭರ್ಗೋ
ದೇವಸ್ಯಧೀಮಹಿ ಧೀಯೋಯೋನಃ ಪ್ರಚೋದಯಾತ್ ಓಮಾಪೋಜ್ಯೋತಿರಸೋ
ಮೃತಂ ಬ್ರಹ್ಮ ಭೂರ್ಭುವಸ್ಸುವರೋಂ

ವರ ಷಡಕ್ಷರಿಮಂತ್ರಮನಂತೇವಾಸಿಯಶಾ
ಮೆರೆವ ದಕ್ಷಿಣಕರ್ಣದೊಳುಪಾಂಶುಶುಕಕರಣ
ದಿರವಿನಿಂದೇಳುಸೂಳುಚ್ಚರಿಸಿಯಾವಾಗ ಮರೆಯದಿರು ಎಂದು ತಿಳುಹಿ
ಉರಿವ ಸಂಜೀವನೆದಿ ಶವಕೆ ಜೀವಂ ಬರ್ಪ
ಪರಿಯಂತೆ ಗುರುಹಸ್ತದಿಂದಳಿದ ಶಿಷ್ಯನಂ
ಸರಸಮಂತ್ರಾಮೃತದಿ ಸಂಜೀವನಂ ಮಾಡಿ ನಿತ್ಯವೆಂದುಪದೇಶಿಸಿ ೨೩

---

1 ಪ್ಯಾಂ ನಕಾರಮಯ (ಜ) 2 ನಿ (ಜ) 3 ಸದಾಹಧ್ಯಾನ ಓನ್ನಂ ಆಧಾರಾಯ ನಮೋಯೆನುತ್ತ ಲಿಂತು(ಜ) 4 ಳಿವು(ಜ) 5 ಹಸ್ತ ಗಾಯತ್ರಿಯಂತ್ರ (ಜ) 6 ಸಾರ (ಕಗ) ನಾರ (ಜ) 7 ಳಿಜಿಸಿಹೆ(ಜ) 8 ರ್ವಿಜುಂಸ (ಜ) • ಗ ಪ್ರತಿಯಲ್ಲಿಲ್ಲ

ಪಂಚವಿಧಬ್ರಹ್ಮ ಪಂಚಾಚಾರ್ಯರವರಧಿಕ
ಪಂಚಲಿಂಗಂಗಳಾ ಪಂಚಾಕ್ಷರಂ ನಿನ್ನ
ಸಂಚಿತದ ದೇಹಯುತ ಪಂಚತತ್ವವೆ ಪಂಚಬ್ರಹ್ಮ ಪಂಚಾಚಾರ್ಯರುಂ
ಪಂಚಲಿಂಗಕ್ಕೆ ಪಂಚಾಕ್ಷರಿ ಮನು ಪ್ರಾಣ
ಮಿಂಚುತಿಹ ಪರಬ್ರಹ್ಮ ಪರಶಿವನೆ [1]ಪರಮ[1]ಲಿಂ
ಗಂ ಚ[2]ಟು[2]ಪ್ರಣಮಮಯ.ವಾಗೆಸೆದ[3]ನಾಗಿ ದೇಹಂ ಲಿಂಗಪ್ರಾಣವಣುಗ[3] ೨೪

ಬಳಿಕ[4]ಯಂ ಮೇಹಸ್ತವೆಣಿಸೆ ಭಗವಾನ್ನುವೆಂ
ದೊಲಿದಿದೇ ಭಗವತ್ತರವೆನಿಪ್ಪುದಂಬ[4] ನಿ
ರ್ಮಳಮಂತ್ರದಿಂದ ಶಿಷ್ಯನ ವಾಮ ದಕ್ಷಿಣದ ಕರಗಳಂ ಕೂಡಿಸುತ್ತ
ಲಲಿತ ಜಲ ಗಂಧಾಕ್ಷತೆ ಸುಪತ್ರಪುಷ್ಪದಿಂ
ದಳವಡಿಸಿ ಪೂಜೆಯಂ ಸಪ್ತವಾರಂ ಮರಳಿ
ಕಳೆಯಲಕ್ಷಣದಾ ಕುಮಾರಮೂರ್ತಿಯೊಳು ಕಳೆ ಪುದಂಗೊಳಿಪುದಂತೆಂದೊಡೆ ೨೫

॥[5]ಸಾಕ್ಷಿ[5]॥
ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ
ಅಯಂ ಮೇ ವಿಶ್ವಭೇಷ[6]ಜೋs[6]ಯಂ ಶಿವಾಭಿಮರ್ಶನಃ॥
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತು [7]ರಾ[7]ಗಮತ್
ಇದಂ ತವ ಪ್ರಸರ್ಪಣಂ ಸುಬಂಧವೇಹಿ ನಿರೂಹಿ॥

ಜ್ವಲಿತ[8]ವಿಲಯಾ[8]ನಲಸ ಕಾಂತಿ ವಿದ್ಯುಲ್ಲತಾ
ಲಲಿತಕೋಟಿಯ ಬೆಳಗಿನಂತೂರ್ಧ್ವಶಿಖಿಯಲ್ಲಿ
ಬೆಳಗುತಿಹ ಚಿನ್ಮೂರ್ತಿ ಶಿಲೆ ಕಾಷ್ಠ ತೃಣಗಳೊಳಗಗ್ನಿ ತಿಲದೊಳಗೆ ತೈಲಂ
ಫಲದೊಳಗೆ ರಸ ಪುಷ್ಪದಲ್ಲಿ ಸೌರಭವಿರಂವೊ
ಲಳವಟ್ಟು ಪೂರ್ಣಬ್ರಹ್ಮದ ಕಳೆಯದೆಂತಂತೆ
ಸಲೆ ಭಾವಗರ್ಭಗೃಹದೊಳಗೆ ಪುದುಗೊಳಿಸೆಂತು ಮನ ಸುಖಾ[9]ಸನದೊ[9]ಳಿರಿಸಿ ೨೬

ಅಲ್ಲಿಂದ ದೃಗ್ದ್ವಾರದೊಳ್ ತಂದು ಹಾಂಗಧಿಕ
ಸಲ್ಲಲಿತ ತನುರಂಗಮಂಟಪದ ಕರಪೀಠ
ದಲ್ಲಿರ್ದ ನಾದ ಬಿಂದುಗಳೊಂದುಗೂಡಿ ಶಿವ[10]ಶ[10]ಕ್ತಿಮಯಮೆನಿಸುತಿರ್ಪ

---

1 ಮಹಾ (ಜ) 2 ದುರ (ಜ) 3 ವಾಗ್ನಿದೇಹ ಪಾಣವಿಲ್ಲಂ ಅಣುಗ (ಜ) 4 ಕೇಳಯಂ ಮೇ ಹಸ್ತೋ ಭಗವಾನೆಂದು। ಹೊಳೆವಯೇಂ ಮೇ ಭಗವತ್ತರೊಯೆನಿಪ (ಜ) 5 ವೇದಮಂತ್ರಃಸಾಕ್ಷಿ (ಕ) 6 ಜಃ ಅ (ಜ) 7 ರಂ (ಜ) 8 ಪ್ರಳಯಾ (ಜ) 9 ಸಿನಿಯೊ (ಜ) 10 ಭ (ಜ)

ತಲ್ಲಿಂಗ ತನುವಿನೊಳ್ ಪರಿಪೂರ್ಣ ಚಿತ್ಕಳೆಯ
ಮೆಲ್ಲನೇ ಸ್ಥಾಪಿಸು[1]ತಖಂಡಪರವಸ್ತುವಂ[1]
ಸಲ್ಲೀಲೆಯಿಂ ನಾದ ಬಿಂದುಕಳೆ[2]ಗಂತವಹ ಶೂನ್ಯಪರಬೊಮ್ಮವೆಂದು[2] ೨೭

ಸಾಕ್ಷಿ॥
ನಾದಬಿನ್ದುಕಳಾತೀತಂ ವ್ಯೋಮಾತೀತಂ ನಿರಂಜನಂ
ಧ್ಯಾನಜ್ಞಾನಮನೋಹೀನಂ ಶೂನ್ಯಲಿಂಗವಂನಾಶ್ರಯಂ॥

ಶ್ರುತಿವಂನ್ತ್ರಂ॥
ಅಯಂ ಮೇ ಹಸ್ತೋಭಗವಾನ್ ಅಯಂಮೇ ಭಗವತ್ತರಃ
ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ॥
ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮಾತ್
ಇದಂ ತವ ಪ್ರಸರ್ಪಣಂ ಸುಬನ್ಧವೇಹಿನಿರೂಹಿ ॥

ಗಾಯತ್ರ್ಯಾ ಗಾಯತ್ರೀಚ್ಛನ್ದೋ ವಿಶ್ವಾಮಿತ್ರಋಷಿಃ ಸವಿತಾದೇವತಾ ಅಗ್ನಿರ್ಮುಖಂ ಬ್ರಹ್ಮಾಶಿರೋರಃ ರುದ್ರಃ ಶಿಖಾ ವಿಷ್ಣು ಹೃದ[3]ಯಂ[3]ಪೃಥಿವೀ ಯೋನಿಃ ಪ್ರಾಣಾಪಾನ ವ್ಯಾನೋದಾನ ಸಮಾನಾ ಸಪ್ರಾಣಾ ಶ್ವೇತವರ್ಣಾ ಸಾಂಖ್ಯಾಯನಸಗೋತ್ರಾ ಗಾಯತ್ರೀ ಚತು[4]ರ್ವಿಂ[4]ಶತ್ಯಕ್ಷರಾತ್ರಿಪದಾ ಷಟ್ಕುಕ್ಷಿಃ ಪಂಚಶೀರ್ಷೋಪನಯನೇ ವಿನಿಯೋಗಃ ॥ ಓಂ ಭೂಃ । ಓಂ ಭುವಃ । ಓಂ ಸುವಃ। ಓಂ ಮಹಃ। ಓಂ ಜನಃ। ಓಂ ತಪಃ। ಓಂ ಸತ್ಯಂ। ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹೀ ಧೀಯೋ ಯೋನಃ ಪ್ರಚೋದಯಾತ್ ಓಮಾಪೋಜ್ಯೋತೀರಸೋಮೃತಂ ಬ್ರಹ್ಮಭೂರ್ಭುರ್ವ[5]ಸ್ಸುವರೋಂ[5]

ಇಂತಪ್ಪ ಪರಿಪೂರ್ಣ ಶೈವಲಿಂಗಂ ಮುದದಿ
ಅಂತರ ಪ್ರಾಣಲಿಂಗಂ ವೀರಶೈವರ್ಗ
ಪ್ಪಂತೆ ಪ್ರಾಣಕ್ಕಮನ್ನೋದಕಾಧಾರವಾಗಿರ್ಪವೊಲ್ ಶಿವಲಿಂಗಕಂ
ಕಂತುಹರಚರಪಾದತೀರ್ಥ ಚೈತನ್ಯಮೆಂ
ದಂತು ತೀರ್ಥಾಂಬುಪ್ರಸಾದಮಿಲ್ಲದ ಲಿಂಗ
[6]ಮಂತೆ[6] ಶಿಲೆಯೆಂದು ವೇದಾಗಮಪುರಾ[7]ಣಾಳಿಯುಲಿವುತಿಹವೆಂದರಿವುತೆ[7] ೨೮

---

1 ತ್ರಖಂಡವ ಮಾಡಿ (ಜ) 2 ಗತೀತವಹ ಶೂನ್ಯಬ್ರಹ್ಮವಿದೆಂದುದು (ಜ) 3 ಯಂ (ಜ) 4 ರ್ವಿಜುಂ (ಜ) 5 ವಃ (ಜ) 6 ಮಂ ತಿಳಿಯೆ (ಕಗ) 7 ಣಂಗಳುದ್ಘೋಷಿಸುತ್ತಿಹವೆಂದರಿ (ಕಗ)

ಚಾರುಶಿಷ್ಯನ ಶಿರೋಗತವಾದ ಕಳೆಯು ಗುರು
ವೋರಂತೆ ಭಾವ ಮನ ದೃಷ್ಟಿ[1]ಯಂ[1] ಬರಸೆಳೆದು
ಸಾರಲಿಂಗದೊಳಿರಿಸಿ ತಲ್ಲಿಂ[2]ಗಕಾಗ[2] ರಾಗಾದಿ ದುರ್ಗುಣವಿಲ್ಲದ
ಭಾರವಾದಾಣವಮಲತ್ರ[3]ಯಗಳಳಿದ ಸಂ
ಸಾರ[3]ಪಾಶಾದಿಗಳ ಹಿಡಿಯದಿಹ ಮುಕ್ತಸಂ
ಸಾರಿ ಜಂಗಮ[4]ದ ತೀರ್ಥಾಂಬುವವಿ[4]ಶೇಷ ಸಲುವಳಿಯೊಂದಂ ಭಕ್ತಿಯಿಂದಂ ೨೯

ಪಡೆದಷ್ಟಪೂಜೆಯಂ ಕಾಣ್ಕೆಯು ಸಮರ್ಪಿಸುತ
ಜಡದ ತೀರ್ಥಾಂಬುವಂ ಲಿಂಗದೇವಂ[5]ಗಾಗ[5]
ಬೆಡಗಿನಿಂದರ್ಪಿಸುತ್ತಳಿದಂ ಜಂಗಮ ಶೇಷ[6]ಮಂ ಲಿಂ[6]ಗಕಿತ್ತು ಮತ್ತೆ
ಸಡಗರದೆ ತತ್ತೀರ್ಥಶೇಷಮಂ ಶಿಷ್ಯನಿಂ
ಗೆಡವಿಡದೆ ಇತ್ತು ಶಿವಮಂತ್ರದಿಂ ಸಲಿಯಿಸುತ
ದೃಢದಿಂದರಿದು ಮೊದಲು ದೇಹಾಂತ ತೀರ್ಥಪ್ರಸಾದಮಂ ಕೊಳ್ವುದಣುಗ ೩೦

ಚರಪಾದತೀರ್ಥಪ್ರಸಾದವಿಲ್ಲದ ಲಿಂಗ
ಹರಣಗತ ಮೃತದೇಹದಂತೆ ಪೂಜೋಪಚಾ
ರರತಿಯಿಂ ಪೆಣಕಲಂಕಾರಮಂ ಮಾಡಿದಾ ಕ್ರಿಯೆಗಳೆಲ್ಲಂ ನಿಷ್ಫಲಂ
ಚರಣಜಲಶೇಷವಿಲ್ಲದ ಭಕ್ತ ಬದ್ಧ ಭವಿ
ಯರಿದದರಿನಿಂದತುಳತೀರ್ಥಪ್ರಸಾದಮಂ
ಪರಮಭಕ್ತಿಯೊಳಜಸ್ರಂ ಸೇವಿಸುವುದೆಂದು ವೇದಪೌರಾಣಮುಲಿಗುಂ ೩೧

ಸಾಕ್ಷಿ॥ ಆಥರ್ವಣಶಿರಸಿ॥

ಭ್ರುವೋರ್ಮಧ್ಯೇ ಮಮರೂಪಂ ಸಹಸ್ರಾಬ್ಜಲಿಂಗಂ ಸ್ಥಿತಂ ಪಶ್ಚಿಮೇ ಶಿಖಾಯಾಂ ಜಂಗಮಃ ಶೂನ್ಯಃ । ವಿಶ್ವಾನುಗ್ರಾಹಕೋ ಜಂಗಮಃ । ಜಂಗಮಸ್ಯ ಪಾದಾಂಬುನಾ ಶಿವಲಿಂಗಸ್ಯ ಸ್ನಪನಂ॥ ತತ್ಪ್ರಸಾದಂ ಭೋಜಯೇತ್ ತೈತ್ತಿರೀಯೋಪನಿಷದಿ॥

ವೇದಮನ್ತ್ರಃ॥

ಚರಣಂ ಪವಿತ್ರಂ ವಿತತಂ ಪುರಾಣಂ ಯೇನ ಪೂತ ಸ್ತರತಿ ದುಷ್ಕೃತಾನಿ
ತೇನ ಪವಿತ್ರೇಣ ಶುದ್ಧೇನ ಪೂತಾ [7]ಅತಿಪಾಪ್ಮಾನಮರಾತಿಂತರೇತಿ[7]
ಪ್ರಕ್ಷಾಲಿಯೇತ್॥

---

1 ಯಿಂ (ಜ) 2 ಗಾಕಾರ (ಜ) 3 ಯಂಗಳಳಿದಭವಪಾ।ಗಾರ (ಜ) 4 ಪಾದತೀರ್ಥಾಂಬುವ (ಜ) 5 ಗಧಿಕ (ಜ) 6 ಮಲ್ಲಿಂ (ಜ) 7 ಧಿಪ್ಪಾ...ರಾತಿಂತರಮೇತಿ (ಕಗ)

ವೀರಾಗಮೇ॥
ನಿರಂಜನಸ್ಯ ಶಂದ್ಧಸ್ಯ ನಿಸ್ಥಲಸ್ಯ ಚರಸ್ಯ ಚ
ಪಾದಾಂಬುನಾಲಿಂಗಮೂರ್ತೇಃ ಸ್ನಾನಂ ಕುರ್ವೀತ ಭೋಜಯೇತ್॥
ತತ್ಪ್ರಸಾದೇ[1]ನ ಸಪವಿಶ್ಯಾಚ್ಛಿಷ್ಯ ಪ್ರಾಣೇ[1]ವಿನಿಕ್ಷಿಪೇತ್
ಶಿವೇ ಚ ಪರಮಂ ಭಕ್ತ್ಯಾ ಶಿಲಾಲಭ್ಯಾಚ ದೇವತಾ॥
ಸ್ವಯಮೇವ ಚರೋ ಲಿಂಗಂ ಸತ್ಯಮೇವ ನಸಂಶಯಃ

ಸ್ಕಾನ್ದೇ॥
[2]ಗುರುಲಿಂಗಸಮಾದಾಯ ಶಿ[2]ಷ್ಯಸ್ಯ ಮಸ್ತಕೇ ಕಲಾಂ
ನಿಜಸದ್ಭಾವಮಾತ್ರೇಣ ವಿಲೋಕ್ಯಾಕ್ಯಕೃಷ್ಯತೇ ಕಲಾಂ
ಲಿಂಗೇ ಸುಸ್ಥಾಪ್ಯಪಾದಾಂಬುಸ್ನಾನಂ ಕೃತ್ವಾ ಚರಸ್ಯ ಚ
ತಲ್ಲಿಂಗಸ್ಯ ಪ್ರಸಾದೇನ ಭೋಜಯಿತ್ವಾ ವಿಧಾನತಃ
ಪಶ್ಚಾಚ್ಛಿಷ್ಯಕರೇ ದತ್ವಾ ಮೂಲಪಂಚಾಕ್ಷರಂ ಸ್ಮರೇತ್
ಚರಲಿಂಗಪ್ರಸಾದೇನ ಭುಂಜಿಯಾತ್ಸ ದಿನೇದಿನೇ
ಲಿಂಗಸ್ಯ ಚೇತನಂ ಕೃತ್ವಾ ಜಂಗಮಸ್ಯ ಪ್ರಸಾದತಃ
ಚರೋಚ್ಛಿಷ್ಟವಿನಾವತ್ಸ ನ ಚ ಲಿಂ[3]ಗಂ[3] ನ ಚ ಕ್ರಿಯಾ
ಪಂಚ[4]ತ್ವಂ ಪ್ರಾಪ್ತಜೀವಸ್ಯ [4]ವಸ್ತ್ರಾಲಂಕಾರಕಾರಣಾತ್
ವಿನಾ ಜಂಗಮಲಿಂಗಸ್ಯ ಪ್ರಸಾದಂ ಮ[5]ವಂ ಚಾ[5]ರ್ಪಯೇತ್

ಇಂತಧಿಕ ಚರಪಾದತೀರ್ಥಪ್ರಸಾದಮ
ನಂತಶ್ರುತಿಪೌರಾಣಿಕಾಗಮಪ್ರಮಾಣದಿಂ
ದಂತು ಶಿವಲಿಂಗಕ್ಕೆ ಶಿಷ್ಯಂಗೆ ಕೊಟ್ಟು ಗೋಮುಖ ವಾಮ[6]ಮಪ್ಪಂದದಿಂ[6]
ಮುಂತೆ ಶಿಷ್ಯನ ವಾಮಕರಕಿತ್ತು ಎಲೆಲೆ ನಿ
ನ್ನಂತರಂಗದ ಜ್ಯೋತಿ[7]ಯ[7] ಮಹಾಲಿಂಗ[8]ಮಿದ[8]
ನಂತಬ್ರಹ್ಮಾಂಡಗಳನೊಳಕೊಂಡಖಂಡಪರಿಪೂರ್ಣಪರಶಿವಲಿಂಗವು ೩೨

ಇದುವೆ ನಿನ್ನಾತ್ಮಮಯಲಿಂಗಮಾ ಲಿಂಗಕಂ
ವಿದಿತ ನಿನ್ನಯ ಪ್ರಾಣಕಂ ತತ್ತುಗೊತ್ತೆಲ್ಲೆ
ಸದಮಲನೆ ಈ ಲಿಂಗಮುಖದಿಂದ[9]ಲಂ[9]ಗಕ್ರಿಯೆಗಳನೆಲ್ಲ ಮಾಳ್ಪುದನಿತಂ
ಮುದದಿಂದ ಈ ಲಿಂಗವೇ ಪತಿಯು ಸತಿ ನೀನೆ
ಯೊದವಿ ಈ ಲಿಂಗಮಂ ಬಿಟ್ಟನ್ಯದೈವಗಳ
ಪದಫಲಂಗಳ ಕುರಿತು ಭಜಿಸದೊಡೆಯದು ನಿಷ್ಫಲಂ ನಿರ[10]ಯಂ[10]ಮಭಿಚಾರವು ೩೩

1 ಸಪಶ್ಚಾಚಿಷ್ಯಪ್ರಾಣ (ಜ) 2 ಪೂಜಯಿತ್ವಾವಿಧಾನತಃ ಪಶ್ಚಾಚ್ಛಿ (ಕಗ) 3 ಗ (ಜ)
4 ತ್ವಾಪ್ಯತೇದೇಹಿ (ಜ) 5 ರ್ಮಲ (ಜ) 6 ದೊಳಂಗಮಾಗಿ (ಜ) 7 ಯಹ (ಕ) ರ್ಮಯ (ಜ)
8 ಮು (ಜ) 9 ಲಿಂ (ಗ) 10 ಮಯ (ಗ)

ಈ ಲಿಂಗ[1]ದಂ[1]ಗದಿಂದಗಲದಿರುವನವರತ
ಈ ಲಿಂಗ ಪೂಜೆಯಂ ಮಾಡು ದೇಹಾಂತ ಬಿಡ
ದೀ ಲಿಂಗವಂ ಜಾಗ್ರ[2]ತ್ಸ್ವಪ್ನಂ[2]ಗಳಲ್ಲಿ ನಡೆವುತ್ತ ಕುಳಿತಿರುವಾಗಳುಂ
ಈ ಲಿಂಗ ನಿಮಿಷನಿಮಿಷಾರ್ಧಮಾತ್ರದೊಳಾಗ
ಲೀಲಿಂಗನಿರ್ಮಲಾ[3]ಖಿಲ[3]ಕಾಲದೊಳ್ ಬಿಡದೆ
ಈ ಲಿಂಗ ಧನವಿಯೋಗಂ ಪ್ರಾಣದ ವಿಯೋಗಮಾದೊಡೆಯುಂ ಬಿಡಲಾಗದು ೩೪

ಈ ಲಿಂಗ ಸಚ್ಚಿದಾನಂದ ಪರಿಪೂರ್ಣಮಯ
ಮಿಾ ಲಿಂಗ ಚಿನ್ನಾದ ಚಿದ್ಬಿಂದು ಚಿತ್ಕಳೆ[4]ಯಿ
ದೀ[4] ಲಿಂಗ ವರಪರಂ ಗೂಢಂ ಶರೀರಸ್ಥಲಿಂಗ ಸುಕ್ಷೇತ್ರವೆಂದು
ಈ ಲಿಂಗ ತತ್ವತತ್ವಾತೀತ ಹರಿಬ್ರಹ್ಮ
ರೀ ಲಿಂಗದಡಿಮುಡಿಯ ಕಾಣರ[5]ಣುವಿಂದಣುವು[5]
ಈ ಲಿಂಗ[6]ವೇ ಮಹತ್ತಿಗೆ ಮಹತ್ತೆಂದು ಪರಿಭಾವಿಸುವುದೈ ಸಂತತಂ[6] ೩೫

ಈ ಲಿಂಗವೇ [7]ನಿನಗನಿಷ್ಟಮಂ ಪರಿಹರಿಪು
ದೀ[7]ಲಿಂಗಮಿಷ್ಟಾರ್ಥಸಿದ್ಧಿಯಂ ಪಾಲಿಸುವು
ದೀ ಲಿಂಗ ನಿನ್ನ ಕೈಸಾರಿದಾಕ್ಷಣ ಭೋಗ ಮೋಕ್ಷಂಗಳಹವು ನಂಬು
ಈ ಲಿಂಗದೊಳಗಖಿಳ ತೀರ್ಥಕ್ಷೇತ್ರಗಳಿಹವು
ಈ ಲಿಂಗದೊಳಗಮಿತ ತತ್ವಮೂರ್ತಿಗಳಿರ್ಪ
ಈ ಲಿಂಗದಿಂದ ಪರವಿ[8]ಲ್ಲ ದುಃಖಮ[8] ಬಿಟ್ಟು ನಿತ್ಯಸುಖಿಯಾಗಿರ್ಪುದು ೩೬

ಎಂದು ಈ ಲಿಂಗದಾದ್ಯಂತಮ ವಿವರಿಸುತಾ
ನಂದದಿಂದೀ ಲಿಂಗಧ್ಯಾನ[9]ದೊಳಗಿ[9]ರಂ ಬಳಿಕ
ಸಂದೇಹಮಾದಖಿಳ ನಾದ ಬಿಂದು ಕ[10]ಳಾದಿ[10] ಲಕ್ಷ[11]ಚಿಂತೆ[11]ಗಳ ತ್ಯಜಿಸು
ಇಂದುಧರ ಹಸ್ತಗತವಾದ ಬಳಿಕಿನ್ನೊಂದು
ಸಂದೇಹ ಬೇಡೆಂದಂ [12]ಪೇಳಿ ಬ್ರಹ್ಮಣೆ ನಮೋ[12]
ಯೆಂದು ಮಂತ್ರವನೋದಿ ವಸ್ತ್ರದೊಳಗಿಟ್ಟು ಶಿಷ್ಯನ ಕಂಠದೊ[13]ಳಗಿ[13]ರಿಸಂತ ೩೭

---

1 ವಂ (ಜ) 2 ಸೊಪ್ನ (ಕ) 3 ಮಲ (ಜ) 4 ಯು ಮಿಾ (ಜ) 5 ಣೋರಣೀಯಾನ್ (ಜ) 6 ಮಹತೋ ಮಹೀಯಾನ್ ಚಕಿತಮಭಿದತ್ತೆಯೆನಿಸುವಲಿಂಗವು (ಜ) 7 ನಿನ್ನಿಷ್ಟಪಂಚಕ ಹರಿಸು ತೀ (ಜ) 8 ಲ್ಲಖಿಳ ದುಃಖಮಂ (ಜ) 9 ದಿಂದಿ (ಜ) 10 ಳಾ (ಜ) 11 ಚಿಹ್ನೆ (ಕ) 12 ಓಂ ನಮೋ ಬ್ರಹ್ಮಣೇ (ಜ) 13 ಳ್ದ (ಜ)

॥ ಸಾಕ್ಷಿ ॥

ಓಂ ನಮೋ ಬ್ರಹ್ಮಣೇ ಧಾರಣಂ ಮೇ ಅಸ್ತು ಅನಿರಾಕರಣಂ ಧಾರಯಿತ್ವಾ ಭೂಯೋಸಂ ಕರ್ಣಯೋಃ ಶ್ರುತಂ ಮಾ[1]ಚೋರ್ಧ್ವಂ[1]ಮಾಮಾಮುಷ್ಯ ಓಂ ಅನೇನ ಲಿಂಗಧಾರಣಂ ಕುರ್ಯಾತ್ ॥

ಲಿಂಗಮಂ ಧರಿಸಬೇಕೆಂದಖಿಳ ವೇದಗಳ್
ಹಿಂಗದೇ ಪೇಳುತಿಹವವಕೆ ಬ್ರ[2]ಹ್ಮಾ[2]ಮಾಗಿ
ಲಿಂಗವನೆ ಧರಿಸವೇಳ್ಕೆಂದು ಪೌರಾಣಾಗಮಂಗಳುಲಿವುತ್ತಲಿಹವು
ಲಿಂಗಧಾರಣ[3]ದೊಳು[3]ಚ್ಛಿಷ್ಟಾದಿ ಸೂತಕಗ
ಳಂಗವಿಸಿ ನಿಲಲರಿಯವಶುಚಿ ಪಾಪಗಳಳಿಗು
ಲಿಂಗಧಾರಣದಿ ದೇಹಾದ್ಯಖಿಳ ಶುದ್ಧಿ ಸಿದ್ಧಿಗಳಹವು ಸತ್ಯಸತ್ಯಂ ೩೮

॥ ಸಾಕ್ಷಿ ॥

ಯಜುರ್ವೇದಾರಣ್ಯಕೇ ॥ ನಾರಾಯಣಪ್ರಶ್ನೇ ॥ ನಾರಾಯಣೋಪನಿಷದೇ

ಓಂ ನಮಸ್ತೇ ಅಸ್ತು ಭಗವಾನ್ ಓಂ ಮಹಾದೇವಾಯ ಓಂ ತ್ರಿಯಂಬಕಾಯ ಓಂ ತ್ರಿಪುರಾಂತಕಾಯ ಓಂ ತ್ರಿಕಾಲಾಗ್ನಿಕಾಲಾಯ ಓಂ ಕಾಲಾಗ್ನಿರುದ್ರಾಯಂ ಓಂ ನೀಲ ಕಂಠಾಯ ಓಂ ಮೃತ್ಯುಂಜಯಾಯ ಓಂ ಸರ್ವೇಶ್ವರಾಯ ಓಂ ಸದಾಶಿವಾಯ ಓಂ ಶ್ರೀಮನ್ಮಹಾದೇವಾಯ ನಮೋನಮಃ ಓಂ ನಿಧನಪತಯೇನಮಃ ಓಂ ನಿಧನಪತಾಂತಿ ಕಾಯನಮಃ ಓಂ ಊರ್ಧ್ವಾಯ ನಮಃ ಓಂ ಊರ್ಧ್ವಲಿಂಗಾಯ ನಮಃ ಓಂ ಹಿರ ಣ್ಯಾಯ ನಮಃ ಓಂ ಹಿರಣ್ಯಲಿಂಗಾಯ ನಮಃ ಓಂ ಸುವರ್ಣಾಯ ನಮಃ ಓಂ ಸುವರ್ಣ ಲಿಂಗಾಯ ನಮಃ ಓಂ ದಿವ್ಯಾಯ ನಮಃ ಓಂ ದಿವ್ಯಲಿಂಗಾಯ ನಮಃ ಓಂ ಭವಾಯ ನಮಃ ಓಂ ಭವಲಿಂಗಾಯ ನಮಃ ಓಂ ಶರ್ವಾಯ ನಮಃ ಓಂ ಶರ್ವಲಿಂಗಾಯ ನಮಃ ಓಂ ಶಿವಾಯ ನಮಃ ಓಂ ಶಿವಲಿಂಗಾಯ ನಮಃ ಓಂ ಜ್ವಲಾಯ ನಮಃ ಓಂ ಜ್ವಲಲಿಂಗಾಯ ನಮಃ ಓಂ ಆತ್ಮಾಯ ನಮಃ ಓಂ ಆತ್ಮಲಿಂಗಾಯ ನಮಃ ಓಂ ಪರ ಮಾಯ ನಮಃ ಓಂ ಪರಮಲಿಂಗಾಯ ನಮಃ ಏತತ್ಸೋಮಸ್ಯ ಸೂರ್ಯಸ್ಯ ಸರ್ವ ಲಿಂಗ್ಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ ಯಜ್ಞೋಪವೀತಂ ಪರಮಂಪವಿತ್ರಂ ಪ್ರಜಾಪತೇಯತ್ಸಹಜಂ ಪುರಸ್ತಾತ್ ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತುತೇಜಃ ತಥಾ ಸ್ಕಾಂದೇ

---

1 ಜ್ಯೋಢಂ (ಜ) 2 ಹ್ಮಣ (ಜ) 3 ದಿಂದು (ಜ)

ಸೋಮಸ್ಯ ತಚ್ಛಕ್ತಿರೂಪಂ ಸೂರ್ಯಸ್ಯೇ ತಚ್ಛಿವಾತ್ಮಕಂ
[1]ಪಾ[1]ಣೌ ಚ ಮನನ[2]ತ್ರಾಣಾತ್[2] ಲಿಂಗಂ ಸರ್ವೇ ಶಿಲಾಮ[3]ಯಂ[3] ॥
ಸಂಸ್ಥಾಪಯೇತ್ ಸದಾ ದೇಹೇ ಪವಿತ್ರಮುಪವೀತವತ್
ತಥಾ ಶತರುದ್ರೀಯೇ
ಯಾತೇ ರುದ್ರ ಶಿವಾತನೂರಘೋರಾ ಪಾಪಕಾಶಿನೀ ।
ತಯಾನಸ್ತನುವಾಸನ್ತಮಯಾ ಗಿರಿಶಂತಾಭಿಚಾಕಶೀಹಿ ॥ ಏತಸ್ಯೋದಾಹರಣಂ ॥

ಸ್ಕಾನ್ದೇ ॥
ಲಿಂಗಂ ಶಿವಾಃ ತನೂಃ ಪ್ರೋ[4]ಕ್ತಾ[4] ಮೂರ್ತಿರ್ಘೋರಾತನಂಸ್ಮೃ[5]ತಾ[5] ।
ಅಪಾಪೇಷುಚ ಭಕ್ತೇಷು ತಯೋರ್ಮಧ್ಯೇ ಶಿವಾತನೂಃ ॥
ಕಾಶತೇ ಪರಮೇಶಸ್ಯ ಶಿಷ್ಯಾಸ್ತೇ ಲಿಂಗಧಾರಿಣಃ
ಅಥ ಋಗ್ವೇದೇ ॥ ಸಪ್ತಮಾಷ್ಟಕೇ ॥
ಪವಿತ್ರನ್ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪ[6]ರ್ಯೇಷಿ[6]ವಿಶ್ವತಃ ।
ಅತಪ್ತತನೂ[7]ರ್ನತದಾಮೋ ಅ[7]ಶ್ನುತೇ ಶ್ರುತಾ ಸ ಯಿದ್ವಹಂ ತಸ್ತತ್ಸಮಾಸತಃ
॥ ಅಸ್ಮಿನ್ನರ್ಥೇ ಸ್ಕಾನ್ದಪುರಾಣೇ ॥

ಬ್ರಹ್ಮಣಸ್ಪತಿರೀ[8]ಶೋವೈ[8] ಬ್ರಹ್ಮತಲ್ಲಿಂಗಮುಚ್ಯತೇ
ಪವಿತ್ರಂ ತದ್ಧಿ ವಿಖ್ಯಾತಂ ತತ್ಪ್ರಭುರ್ವಿಶ್ವತ ಸ್ಸ್ವಯಂ ॥
ತತ್ಸಮ್ಪರ್ಕಾತ್ಪವಿತ್ರತ್ವಂ ಗಾತ್ರಾಣೇ ಕುರುತೇ ಸ್ವಯಂ
ಅತಪ್ತತನುರಜ್ಞೋವೈ ಆಮಃ ಸಂ[9]ಸ್ಕಾ[9]ರ ವರ್ಜಿತಃ ॥
ದೀಕ್ಷಯಾ ರಹಿತಸ್ಸಾಕ್ಷಾನ್ನಾಪ್ನು[10]ಯಾ[10]ಲಿಂಗಮುತ್ತಮಂ
ಶಿವಧರ್ಮಾಶ್ರಿತಾ ಶಾನ್ತಾಃ ಶಿವಾರ್ಚನಪರಾಯಣಃ ॥
ಏವಹನ್ತಸ್ಸದಾಲಿಂಗಂ ತೇಯಾನ್ತೀ ಪರಮಂ ಪದಂ
ಅನ್ಯಥಾ ನಹಿ[11]ಮಾನಂ ವೇತ್ತು[11] ಶಕ್ಯಂ ದೇವೀ ತಥಾ ಶ್ರುತಿಃ ॥

॥ ಕಾಶೀಕಾಣ್ಡೇ ॥
[13]ಸುಸ್ಥ ವಿಪಾಪ್ಮಂ[12] ಪರಮಂ ಗಗನಂ ದೇಹಸಂಸ್ಥಿತಂ
ಜನ್ಮಮೃತ್ಯುಜರಾತೀತಂ ತ[13]ತ್ಪವಿತ್ರಂ[13] ಪ್ರಚಕ್ಷತೇ ॥
ಮನನಾತ್ತ್ರಾಯತೇ ಯಸ್ಮಾದತೀವ ನರಕಾರ್ಣವಾತ್
ಯತ್ಪವಿತ್ರಂ ಪವಿತ್ರಾಣಾಂ ತಲ್ಲಿಂಗಂ ಜ್ಯೋತಿರೈಶ್ವರಂ ॥

---

1 ಪಾಂ (ಗ) 2 ತ್ರಾತ್ (ಜ) 3 ಯ (ಕಗ) 4 ಕ್ತಂ (ಜ) 5 ತಃ (ಜ) 6 ದ್ಯೇಷ್ಟಿ (ಜ) 7 ರ್ವತದಾಮೋ (ಜ) 8 ಶಾನ್ಯೆ (ಕ) 9 ಸಾ (ಜ) 10 ಯಾತ್ (ಜ) 11 ಮಾಂ ಪ್ರಾಪ್ತಂ ಕಾಶಿಕಾಂಡೇ (ಜ) 12 ಶಸ್ತ್ರಂ ವಿಪಾಪ್ಮಂ (ಜ) 13 ತ್ಪತ್ರಂಚ (ಜ)

॥ ಸ್ಕಾನ್ದೇ ॥
ಅಪವಿತ್ರಂ ಪವಿತ್ರಂ ಚ ಶಿವಪಾತ್ರಂ ಪವಿತ್ರಕಂ
ಶಿವಮನ್ತ್ರಂ ಪವಿತ್ರಂ ಚ ಲಿಂಗದೇಹೀ ಸದಾಶುಚಿಃ ॥

ಖ್ಯಾತವಾದಾ ಪಾಪವಾದ ಉತ್ಕೃಷ್ಟವಾ
ದಾತಿಶಯಂ ಗಗನಮಯವಾದಖಿಳದೇಹದೊಳ
ಗೋತಿರ್ದಂ ಜರೆ ಮರಣವಿಲ್ಲದುದೆ ಪವಿತ್ರವೆಂದುಲಿವುತಿಹುದು
ಭೀತಿನರಕಾಂಬುಧಿಗೆ ಬೀಳದೊಲ್ ದಾಂಟಿಸುವ
[1]ನೀ[1]ತಿಯಿಂ [2]ರಕ್ಷಿಪುದು[2] ಪಾವನಕೆ ಪಾವನಂ
ಜ್ಯೋತಿರೈಶ್ವರ್ಯ[3]ಮಾ ಲಿಂಗಮಾ ಲಿಂಗದೇಹಿಯೆ ಸದಾ ಶುದ್ಧನಪ್ಪಂ[3] ೩೯

ಅಷ್ಟವಸುಗಳು ದೇಹದೊಳಗಿಂದ್ರ[4]ನಗ್ನಿಯುಂ
ಶ್ರೇಷ್ಠ[4]ದೇವತೆಗಳುಂ ದ್ವಾದಶಾದಿತ್ಯರು
ತ್ಕೃಷ್ಟ ಹರ್ಯ್ಯಜ ವಿಶ್ವದೇವತೆಗಳುಂ ಸದಾಲಿಂಗಮಂ ಧರಿಸಿ ಮನದ
ಭೀಷ್ಟಗಳ ಪಡದರೆಂದೇಯಥರ್ವಣಪ್ರಥಮ
ದಿಷ್ಟದುಭಯಾನುವಾಕ[5]ದ ಯುಗ್ಮ[5]ವರ್ಗದೊಳು
ದಿಷ್ಟಿಸಲ್ ಸರ್ವರಿಗೆ ಲಿಂಗಧಾರಣೆ ಮೋಕ್ಷಕಾರಣಂ ಭವತಾರಣಂ ೪೦

ಅಥರ್ವಣೇ ॥ ಪ್ರಥಮಕಾಣ್ಡೇ ॥ಉಭಯಾನಂವಾಕೇ ॥ ದ್ವಿತೀಯವರ್ಗೇ ॥ ಶ್ರುತಿಃ ॥
ಯತ್ರೈಷಾಮಂಗ್ನೇ ಜನಿಮಾನಿವೇ[6]ಥ[6] ಗುಹಾಸತಾಮ ತ್ರಿಗುಣಾ ಜಾತವೇದಾಃ
ತಾ[7]ಸ್ಮಂ[7] ಬ್ರಹ್ಮಣಾ ವಾ ವೃಥಾನೋರ್ಜಂ ಹೇಷಾಂ ಶತತರ್ಹಮಗ್ನಿ ಅಸ್ಮಿನ್ ವಸವೋ
ಧಾರಯನಿನ್ದ್ರಃ ಪುರು[8]ಷೋ[8]ವರು[9]ಣೋ[9]ಮಿತ್ರಾಗ್ನಿಃ॥ ಇಮಂಮಾದಿತ್ಯಾ [10]ಉ[10]ತ
ವಿಶ್ವದೇವಾ [11]ಉರಸ್ಯಸ್ಮಿನ್[11] ಜ್ಯೋತಿ[12]ರಧಾರಯತ್[12]

ಶಿವಲಿಂಗಮೂರ್ತಿಯುಂ ಕರದೊಳಾವಾಗಲುಂ
ತವೆ ಧರಿಸಲಾತಂಗೆ ಸಕಲಸಂಪದಗಳ್ಗೆ
ಯವಿರಳದ ಸ್ಥಾನಮೆನಿಸುವ[13]ಸರ್ವ[13]ಸಂಪದಂ ಕರಗತಂ ತಿಳಿ ಪಾರ್ವತಿ
ಶಿವಲಿಂಗ ಪೂರ್ಣಬ್ರಹ್ಮವೆಯೆನಗೆ ಶರಣಾಗು
ಸವಿಶೇಷಲಿಂಗಮಂ ಧರಿಪೆನೆಡೆವಿಡದೆನು
ತ್ತವೆ ಭಕ್ತಿಯಿಂದೆಜುರ್ವೇದ ಪೇಳ್ವುದರಿಂದ ಲಿಂಗಧಾರಣ ವಿಶೇಷಂ ೪೧

1 ರೀ (ಜ) 2 ತ್ರಾಯತೆ (ಜ) 3 ಲಿಂಗಂ ತಲ್ಲಿಂಗದೇಹಮೇಲಾಗಶೌಚಂ (ಜ) 4 ಮುಗ್ನಿವರಂ। ಶ್ರೇಷ್ಟ (ಜ) 5 ದೆರಡನೆಯ (ಜ) 6 ತ್ಥ (ಜ) 7 ಸ್ಥಂ (ಜ) 8 ಣಾ (ಜ) 9 ಣಾ (ಜ) 10 ಹಜವು (ಜ) 11 ಹ ಉರಸ್ಮನ್ (ಜ) 12 ಪೇಧಾರಮತ್ (ಜ) 13 ಎನ್ನ (ಜ)

॥ ಸಾಕ್ಷಿ ॥ ವಾತೂಳೇ ॥ ॥ ಶ್ಲೋಕ ॥
ಧಾರಯೇದ್ಯಸ್ತುಹಸ್ತೇನ ಲಿಂಗಾಕಾರಂ ಶಿವಂ ಸದಾ
ತಸ್ಯ ಹಸ್ತಸ್ಥಿತಂ [1]ವಿ[1]ದ್ಧಿ ಮತ್ಪದಂ ಸಂಪದಾಂ ಪದಂ

॥ ಯಜುರ್ವೇದೇ ॥
ನವೋ ಬ್ರಹ್ಮಣೇ ಧಾರಣಂ ಮೇ ಅ[2]ಸ್ತ್ವ[2]ನಿರಾಕರಣಂ ಧಾರಯಿತಾ ಭೂಯಾಸಂ

ಲಿಂಗವಂ ಧರಿಸಿದೆನ್ನೆಡದ ಕರ ಭಗವಾನ್
ಲಿಂಗಪೂಜೆಯು ಮಾಳ್ಪ ಕರವೆ ಭಗವತ್ತರಂ
ಲಿಂಗಾಭಿಮರ್ಶನವ ಮಾಳ್ಪೆನ್ನ ಕರವೆ ಭವರೋಗವೈದ್ಯಮಿದೆನ್ನಯ
ಹಿಂಗದೇ ತಾಯ್ತಂದೆ ಜೀವನೌಷಧವಾಯ್ತು
ಇಂಗಿತದ ಈ ನಿನ್ನ ಲಿಂಗಬಂಧುವೆ ಬಾಯ
ನಂಗೈಗೆ ವಶವಾಗಿ ಯಾವಾಗ ತೊಲಗಬೇಡೆಂದು ವೇದಂ ಪೇಳ್ವುದು ೪೨

॥ ಸಾಕ್ಷಿ ॥ ಅಯಮೇ ಹಸೆಹಸ್ತೇತಿ ಶ್ರುತ್ಯರ್ಥಸ್ಯೋಪಬೃಹ್ಮ[3]ಣಂ[3] ಪುರಾಣಾನ್ತರೇ
॥ ಗ್ರಂಥ ॥
ಅಯಂವೇ[4]ಹಸ್ತೋ ಭ[4]ಗವಾನ್ನಯಮೇ ಭಗವತ್ತರಃ
ಶಿವಾಭಿಮರ್ಶನಾನ್ನಿತ್ಯಂ ಶಿವಲಿಂಗಂ ಮುದಾ ಧರೇತ್ ॥

ಸ್ಥಿರ ಪರಬ್ರಹ್ಮಮಂತದಂ ಸೂತ್ರಮದನೆಯ್ದೆ
ಧರಿಸುವದು ಸತ್ಸೂತ್ರಲಿಂಗವಂ ಸೂಚಿಸುವು
ದರರೆಯದರತ್ತಣಿಂ ಸೂತ್ರಮೆಂದುಸುರುವರು ಸೂತ್ರಮೆನೆ ಪರಬ್ರಹ್ಮವು
ಕುರುಹಿಲ್ಲದಿಹ ಲಿಂಗಮೇಕಮವ್ಯಕ್ತಮದು
ಪರಮಲಿಂಗಂ ಬ್ರಹ್ಮಮೆಂದು ನಿಶ್ಚಿತಮುಮೆಂ
ದಿರದಕ್ಷರಂ ಪರಂಜ್ಯೋತಿ ತದ್ವಿಷ್ಣೋಃ ಪರಮಂಪದಮೆನುತ್ತುಲಿವುದು ೪೩

॥ ಸಾಕ್ಷಿ ॥ ಪರಬ್ರಹ್ಮೋಪನಿಷದಿ ॥
ಯದಕ್ಷರಂ ಪರಂಬ್ರಹ್ಮ ತತಸ್ಸೂತ್ರಮಿತಿ ಧಾರಯೇತ್
ಸೂಚ[5]ನಾತ್ಸೂ[5]ಸ್ಸೂತ್ರಮಿತ್ಯಾಹುಃ ಸೂತ್ರಂ ನಾಮ ಪರಂ ಪದಂ ॥
ಧಾರಣಾದಸ್ಯ ಸೂತ್ರಸ್ಯ ನೋಚ್ಛಿಷ್ಟಂ ನಾऽಶುಚಿರ್ಭವೇತ್
ತಲ್ಲಿಂಗಮೇಕಮವ್ಯಕ್ತಂ ಲಿಂಗಂ ಬ್ರಹ್ಮೇತಿ ನಿಶ್ಚಿತಂ ।
ತದಕ್ಷರಂ [6]ಪರಂಜ್ಯೋತಿಃ ತದ್ವಿ[6]ಷ್ಣೋಃ ಪರಮಂ ಪದಂ

---

1 ವಾ (ಜ) 2 ಸ್ತಿ (ಜ) 3 ಣ (ಜ) 4 ಹಸ್ತನ (ಜ) 5 ನಾತ್ (ಜ) 6 ಜ್ಯೋತಿರ್ವಿ (ಕಗ)

॥ ಅಸ್ಮಿನ್ನರ್ಥೇ ಕಾರಣಾಗಮೇ ॥

ಸಂ[1]ಸೂತ್ರಿತತ್ವಾತ್ಸ[1]ಮಸ್ತೇಷು ವಸ್ತುಷ್ವಪಿ [2]ಚ[2] ಸಂತತಂ
ಸೂಚನಾತ್ಪರಮೇಶಸ್ಯ ಸೂತ್ರಂ ಲಿಂಗಮಿಂತೀರಿತಂ ॥
ಯದಕ್ಷರಂ ಪರಂಬ್ರಹ್ಮ ತತ್ಸೂತ್ರಮಿತಿ ಧಾರಯೇತ್
ಧಾರಣಾದಸ್ಯ ಸೂತ್ರಸ್ಯ ನೋಚ್ಛಿಷ್ಟಂ ನಾSಶುಚಿರ್ಭವೇತ್ ॥

ಕಾರಣಾಗವಂದುಪಬ್ರಹ್ಮಣಂ ಪೇಳ್ವುದಂ
ತಾ ರಮ್ಯವಾದಖಿಳ ವಸ್ತುಗಳೊಳನವರತ
ನೀರನೇಯಧಿಕತರವಾಗಿ ಮಣಿಗಣಸೂತ್ರದೊಲ್ ವ್ಯಾಪಿಸಿರ್ಪ ದೆಶೆಯಿಂ
ಸಾರ ಪರಮೇಶ್ವರನ ಸೂಚಿಪುದರತ್ತಣಿಂ
ದಾರಯ್ಯೆ ಸೂತ್ರವೇ ಲಿಂಗವಾ ಲಿಂಗವಂ
ಧಾರಣಂಗೆಯ್ಯಲುಚ್ಛಿಷ್ಟದೋಷಾಶುಚಿಗಳಿಲ್ಲವೆಂದುಗ್ಘಡಿಪ್ಪುದು ೪೪

ಓಮಿಂತಿ ಪರಬ್ರಹ್ಮವಹ ಮಹೇಶ್ವರನಾಗಿ
ಹಾ ಮಹಾಲಿಂಗಮ[3]ನ್ನಖಿಲ ಕಾಲಿಕದಲ್ಲಿ[3]
ಪ್ರೇವಂದಿಂ ನಿಮಿಷಾರ್ಧಮಂ ಬಿಡದೆ[4]ಯಾ[4] ಲಿಂಗದಲ್ಲಿ ಮನ ಬೆರಸಿ ಭುಕ್ತಿ
ತಾ ಮುಕ್ತಿಯಂ ಬಯಸುವ [5]ಬ್ರಾ[5]ಹ್ಮಣೋತ್ತಮಂ
ನೇಮದಿಂ ಪಂಚಸ್ಥಾನಗಳಲ್ಲಿ ಧರಿಸುತ್ತ
ಧೀಮಂತ ಗುರಂ ಪೇಳ್ದ ಮನುರಾಜಮೂಲಮಂತ್ರವ ಸದಾ ಜಪಿಸುತಿಹುದು ೪೫

॥ ಅಸ್ಮಿನ್ನರ್ಥೇ ಶ್ರುತಿಃ ॥

ಧಾರಯಿತಾ ಭೂಯಾಸಂ ॥ ಅಸ್ಮಿನ್ನರ್ಥೇ ಶ್ರುತಿವಾಕ್ಯಂ ॥
ಓ[6]ಮಿತ್ಯೇವ ಪರಂ[6]ಬ್ರಹ್ಮ [7]ಲಿಂ[7]ಗಾಕಾರಂ ಮಹೇಶ್ವರಂ
ಸರ್ವಾವಸ್ಥಾಸು ಸರ್ವೇಷಂ ಕಾಲೇಷು ನಿಮಿಷಾರ್ಧಕಂ ॥
[8]ಆಯೋ[8]ಗೇನ ಭುಕ್ತಿಂ ಚ ಮುಕ್ತಿಮಿಚ್ಛನ್ ದ್ವಿಜೋತ್ತಮಃ
ಧಾರಯೇತ್ಪಂಚಸುಸ್ಥಾನೇಷ್ವಸ್ಮಿನ್ ಸಂಲಗ್ನಮಾನಸಃ ॥
ಉಪದಿಷ್ಟಂ ಚ ಗುರುಣಾ ಕರ್ಣೇ ತದ್ದಿವ್ಯರೂಪಭಾಕ್
ವೇದಸಿದ್ಧಂ ಮಂತ್ರರಾಜಂ ಜಪೇತ್ ಪಂಚಾಕ್ಷರಂ ಸದಾ ॥

---

1 ಸ್ಯೂತತ್ವಾಸ್ತಮ (ಜ) 2 ತು (ಜ) 3 ಅಖಿಳವಸ್ಥೆಗಳಲ್ಲಿ (ಜ) 4 ಯಾ (ಜ) 5 ಬ್ರ (ಹಗ)
6 ಮಿತಿ (ಜ) 7 ಪರಮಲಿಂ (ಜ) 8 ಅವಿಂ (ಜ)

ವರ ಉತ್ತಮಾಂಗ ಗಳ [1]ಕಕ್ಷೆಯುಂ ವಕ್ಷತಳ[1]
ಕರತ[2]ಳಮುದಮಳ್ಳೈಕ್ಯ[2]ವೆಂಬಾರು ತಾಣದೊಳ್
ಚಿರಪ್ರಾಣಲಿಂಗಮುಂ ಧರಿಸುವುದುಂ ಧೀಮಂತರೆಂದುಂ ಹರಿಬ್ರಹ್ಮ ಸುರಪಾ
ಸುರರುಮತ್ಯಂತ ಸಂತೋಷ[3]ದಿನಹ[3]ರ್ನಿಶಂ
ಶಿರಗಳೊಳ್ ಶಿವಲಿಂಗಮುಂ ಧರಿಸಿಯಿರ್ಪರಂ
ದಿರದೆ [4]ವಾತೂಲತಂತ್ರಂ ಒರೆವುದೆಂದಾರ್ಯ[4] ಶಿಷ್ಯಂಗೆ ಬೋಧಿ[5]ಸಿದನು[5] ೪೬

[6]ಎಲೆ[6] ಕೇಳನಾದಿಸಂಸಿದ್ಧ ನಿತ್ಯ[7]ತ್ವಮಾ[7]
ದಲಘುರೌದ್ರಂ ರುದ್ರಸಂಬಂಧಶಿವಲಿಂಗ
ಮೊಲವಿನ ತಪಸ್ಸಿನಿಂದಿಷ್ಟಮೂರ್ಜವನೀವುದೀ ವ್ರತಂ ಪಾಶುಪತವು
ಸಲೆಯಿದಕ್ಕಂ ಸಾಕ್ಷಿ ತನ್ನ ಭಕ್ತರ್ಗಿಷ್ಟ
ವೊಲಿದೀವು[8]ದಿ[8]ಹುದು ಬಳಿವಿಡಿದದರಿನಿಂ ವೇದ
ವುಲಿವುತಿಹದದರಿಂದೆ ಇಷ್ಟಲಿಂಗವುವೆಂದು ಸ್ಕಾಂದವಂದ್ಘೋಷಿಸುವುದು ೪೭

॥ ಅಥರ್ವ ಶಿರಸಿ ॥
ರೌದ್ರಂ ಶಾಶ್ವ[9]ತಂ[9] ಪುರಾಣಮಿಷ್ಟಮೂರ್ಜಂ ತಪ[10]ಸಾನುಯು[10]ಚ್ಛದ್ವ್ರತಮೇ
ತತ್ಪಾಶುಪತಂ
॥ ಸ್ಕಾನ್ದೇ ॥
ಇಷ್ಟಮೂರ್ಜಂ ಸ್ವಭಕ್ತಾ[11]ನಾಮಿಂಷ್ಟಂ ಯಿಚ್ಛತಿ[11] ಸರ್ವದಾ
ಇಷ್ಟಲಿಂಗಮಿತಿಪ್ರಾ[12]ಹುಸ್ತಸ್ಮಿನ್ನಾಥರ್ವಣೀ[12]ಶ್ರುತಿಃ ॥

ಪರಮ ಶಿವಲಿಂಗಮುಂ ಧರಿಸದೇ ಇರ್ದವನು
ಭರದಿಂದ ಮಾಡಿದಾ ಸಂಧ್ಯಾದಿಕರ್ಮ ಜಪ
ವರಹೋಮ ಸ್ವಾಧ್ಯಾ[13]ಯ[13]ಪಿತೃತರ್ಪ[14]ಣ ಪ್ರ[14]ಮುಖ್ಯ ತತ್ಸರ್ವ[15]ಸತ್ಕರ್ಮವು[15]
ಇರದೆಲ್ಲ ಭಸ್ಮವಪ್ಪವು ಬಳಿಕ ವೇದಾಳಿ
ಚಿರಶಾಸ್ತ್ರ ಪೌರಾಣಿಕಾಗಮಂಗಳ ಬಲ್ಲ
ಪರಮಂಸರ್ವಜ್ಞನಾಗಲಿ ಲಿಂಗಹೀನನಂ [16]ಶೂದ್ರನಂದದಿ ತಿಳಿವುದು[16] ೪೮

॥ ಸಾಕ್ಷಿ ॥ ॥ ಶಿವರಹಸ್ಯೇ ॥
ಸಂಧ್ಯಾಧ್ಯಾನಂ ಜ[17]ಪೋ[17]ಹೋ[18]ಮಃ[18] ಸ್ವಾಧ್ಯಾಯಃ ಪಿತೃತರ್ಪಣಂ
ಭ[19]ಸ್ಮೀ[19]ಭವತಿ ತತ್ಸರ್ವಂ ಮಲ್ಲಿಂಗಂ ಯ ನ ಧಾರಯೇತ್

---

1 ವಾಕಕ್ಷಿವಕ್ಷಸ್ಥಳ (ಜ) 2 ಳಂ ಅಮಳೋಕ್ಯ (ಜ) 3 ದಿಂದಹ (ಜ) 4 ವರೆವುದಾವಾತೂಲ ತಂತ್ರಯೆಂದಾ (ಜ) 5 ಸುತಲಾಗುತ (ಜ) 6 ಬಳಿಕ (ಜ) 7 ಮುಮಾ (ಜ) 8 ತಿ (ಜ) 9 ತಂವೈ (ಜ) 10 ಸ್ವಾನುಯಿ (ಜ) 11 ನಾಂ ಮನುಯಿಚ್ಛಪ್ಯತಿ (ಜ) 12 ಹತಸ್ಮಾದಾಥರ್ವಣ (ಜ) 13 ಯನಂ (ಜ) 14 ಣಂ (ಜ) 15 ಕರ್ಮಂ (ಜ) 16 ಶುನಿಯಂತೆ ಮನ್ನಿಸುವುದು (ಜ) 17 ಪೇ (ಜ) 18 ಮಂ (ಜ) 19 ಸ್ಮೇ (ಜ)

॥ ವೀರತನ್ತ್ರೇ ॥
ಸರ್ವಜ್ಞೋ ವೇದಶಾಸ್ತ್ರೇಷು ಸರ್ವಜ್ಞಸ್ತು ಶಿವಾಗಮೇ
ಲಿಂಗಧಾರಣಹೀನಶ್ಚೇ [1]ಚುನಿವನ್[1] ಮಜ್ಯತೇ ಮಯಾ ॥

ಲಿಂಗಧಾರಣವಿಲ್ಲದವ ಸಕಲದೈವಗಳ
ಇಂಗಿತವ ತಿಳಿದರುಂ [2]ಚಂ[2]ಡಾಲನಂತಹನಂ
ಲಿಂಗಾರ್ಚನೆಯನುಳ್ಳ ಚಂಡಾಲ[3]ನಾದೊಡಂ ದ್ವಿಜರಿಂದ ಕೋಟಿಗಧಿಕಂ[3]
ಪಿಂಗದತ್ಯಂತನೀಚರಗೂಡಿದವರಾದ
ರಂಗೈಸಿಯಭಿಚಾರವಮಾಂತ ಪಾಪಿಗಳಾಗೆ
ಲಿಂಗಧಾರಣ[4]ವಂಳ್ಳ ನರಗೆ ಯಮ[4]ಲೋಕಮಿಲ್ಲೆಂದುದಾ [5]ಸತ್ಪು[5]ರಾಣಂ ೪೯

॥ ಲಿಂಗಸಾರೇ ॥
ನ ಲಿಂಗೀ ಸರ್ವದೈವಜ್ಞೋ ಯಸ್ತು ಚಂಡಾಲವದ್ಭವೇತ್
ಲಿಂಗಾರ್ಚಕಸ್ತು ಶ್ವಪಚೋ ದ್ವಿಜಕೋಟ್ಯಾಂ ವಿಶಿಷ್ಯತೇ ॥
॥ ಶಾಂಕರಸಂಹಿತಾಯಾಂ ॥
ಅಧಮಾಧಮಯುಕ್ತಾನಾಂ ಪಾಪಿನಾಂಚಾಭಿಚಾರಿಣಾಂ
ಯಮಲೋಕೋ ನ ವಿದ್ಯೇತ ಸದಾ ವೈ ಲಿಂಗಧಾರಿಣಃ ॥

ವರ ನಾಲ್ಕುವೇದ[6]ಗಳು[6] ಶಾಸ್ತ್ರಪೌರಾಣತತಿ
ಪರಮಕಾಮಿಕ ವಾತುಲಾಂತಮಾದಾಗಮಂ
[7]ಸ್ಥಿ[7]ರದುಪನಿಷದ್ವಾಕ್ಯ ಮುಂತಾದವೆಲ್ಲವುಂ ಲಿಂಗಧಾರಣವಿಧಿಯನೆ
ಒರೆವುತಿಹವದರಿನಿಂ ಲಿಂಗಧಾರಣವ ನಿಸ
ಗಿರದುಸುರಿದೆವು ವೀರಶೈವಂಗೆಯಾಗಳುಂ
ವರ ಲಿಂಗಧಾರಣವೆ ಕಾರಣವನಾದಿಸಂಸಿದ್ಧವಾ ವೀರಶೈವಂ ೫೦

॥ ಸಿದ್ಧಾನ್ತಶಿಖಾಮಣೌ ॥
ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

ಶಿವಸದಾಚಾರಕನುಸರಿಸೆ ಶಿವನಿಂ ಶಿಕ್ಷೆ
ತವೆಯಪ್ಪುದೆನಲುಮಾಜ್ಞಾದೀಕ್ಷೆ ಪೌರಾತ
ನವಿರಳಮಹಾಸಮಯದಾಚಾರಕಂ ಸಾಟಿಗೆಯ್ಯಲುಪವಮಾದೀಕ್ಷೆಯಂ

---

1 ಚ್ಯುನಕೋ (ಕಗ) 2 ಚಾಂ (ಕ) 3 ದ್ವಿಜಕೋಟ್ಯಂಶದಿಂದಧಿಕನು (ಜ) 4 ಸದಾವುಳ್ಳ ವಂಗೆಮು (ಜ) 5ಪು (ಜ) 6 ವಿಳ (ಜ) 7 ಚಿ (ಜ)

ಜ ವಿಶೇಷ ಸ್ವಸ್ತಿಕೆಯ ಮೇಲೆ ಶಿಷ್ಯನನಿರಿಸಿ
ಸುವಿಶಾಲವಂಂತ್ರನ್ಯಾಸದೆ ಮಾಂಸತನುವಳಿದು
ಶಿವಮಂತ್ರಕಾ[1]ಯವಮಂ[1] ಮಾಳ್ಪುದೇ ಸ್ವಸ್ತಿಕಾರೋಹಣಂ ತಾ ಶಿಷ್ಯನ ೫೧

ಶಿರಕೆ ಕಳಶೋದಕವ ದರ್ಭೆ ದೂರ್ವೆಗಳಿಂದ
ಲಿರದೆ ಸ್ನಪನಂಗೆಯ್ಮೆ ಕಲಶಾಭಿ[2]ಷಿಕ್ತ[2] ನಿ
ರ್ಮಲದಾಗವೋಕ್ತ ವರಸ್ನಾನಂಗಳೊಳ್ ಭಸ್ಮಧಾರಣ ಸುಭೂತಿಪಟ್ಟಂ
ಗುರುಂಶಿಷ್ಯಗಂ ಕೊಡಲ್ತಕ್ಕ ಲಿಂಗವ ಯಜಿಸಿ
ಚಿರಲಿಂಗವುಂ ತೋರಿಸಲ್ಕೆ ಲಿಂಗಾಯುತಂ
ಇರದೆಯಾ ಲಿಂಗವಮಂ ಕಂಠಾದಿ ತಾಣದೊಳ್ ಧರಿಸೆ ಲಿಂಗಸ್ವಾಯತಂ ೫೨

ಪಿಂದೆ ಪೇಳ್ದೇಳಂದೀಕ್ಷೆಗಳ ತನುವಿಂಗೆ ನಲ
ವಿಂದಲಳವಡಿಸಿ ಭಕ್ತರ ಕುಲಗಳಂ ನೋಡ
ದಂದದಿಂ [3]ವಂದಿಪುದ[3] ಸಮಯಂ ಬಹಂಸಂಸಾರವಂ [4]ಪಳಿದು ಗಂರು[4]ಲಿಂಗದ
ಸಂದ ಶುಶ್ರೂಷೆ[5]ಯೇ[5] ನಿನಗೆ ಸಂಸಾರವೆಂ
ಬಂದವದು ನಿ[6]ತ್ಯಸಂಸಾರತ್ರಿಮಲವುದಂ
ಪೊಂದದಾ[6]ಮುದವೆ ನಿರ್ವಾಣ ಮೂವತ್ತಾರು ತತ್ವವಮಂ ವಿವರಿಸುತ್ತ ೫೩

ಪರಮಶಿವತತ್ವೈಕ ತತ್ಪದಂ ಮತ್ತೆ ಕೇ
ಳುರೆಯಾತ್ಮ ಪಂಚವಿಂಶತಿ ತತ್ವ ತ್ವಂ ಪದಂ
ಭರದೆ ವಿದ್ಯಾತತ್ವ [7]ತತ್ವ[7]ಮಸಿಪದಮಿವೇ ಲಿಂಗಾಂಗಸಂಗವೆಂದು
ಒರೆವುದೇ ತತ್ತ್ವೋಪದೇಶ ಶಿವನಂಶ ನಾ
ನಿರದೆ ಸ್ವ[8]ಯಂ ಶಿವನೆನುತ್ತಲಿಪುದ[8]ಧ್ಯಾತ್ಮ
ಮುಂರು[9]ಭಾವದಿಂದಾ[ರ]ಲಿಂಗವಾಗವರೊ[9]ಳಾರಂಗವಹಾದುದನುಗ್ರಹಂ ೫೪

ಸತ್ತುಚಿತ್ತಾನಂದ ಬ್ರಹ್ಮಾತ್ಮ ನೀನೆನ
ಲ್ಕುತ್ತಮಂದ ಸತ್ಕಶುದ್ಧಂ ಏಳುದೀಕ್ಷೆಗಳ
ಮತ್ತೆ ಪ್ರಾಣಕ್ಕೆಯುಪದೇಶವಮಂ ಮಾಡಿಪ್ಪಲಿಂಗಮಲ್ಲದೆಯನ್ಯಥ

---

1 ಮನಂ(ಕಗ) 2 ಷೇಕ (ಜ) 3 ತಪ್ಪುದೆ (ಕಗ) 4 ಪಲರು (ಜ) 5 ಪೂಜೆ (ಜ) 6 ಸ್ಸಂಸಾರ ತ್ರೈಮಲಮನ।ಪೊಂದದೀ (ಜ) 7 ದಶಕ (ಜ) 8 ಯ ಶಿವನೆಂಬುದ (ಜ) 9 ಲಿಂಗಮಿರದಾರು ಲಿಂಗಮಾಗಲ್ಕವರಜಳಿಯೊ (ಜ)

ಮತ್ತೊಂದು ಲಿಂಗವರಿಯದ ನಿಷ್ಠೆಯೇಕಾಗ್ರ
ಚಿತ್ತವದು ಶೀಲವ್ರತಾಚಾರನಿಯಮಂಗಳ್
ಸತ್ಯದಿಂ ದೇಹಾಂತ ತ್ಯಜಿಸದಿರೆ ದೃಢವ್ರತಂ ಶರಣನೇ ಸತಿ ಲಿಂಗವೆ ೫೫
ಪತಿಯೆಂಬ ಭಾವದಿಂ ಪಂಚೇಂದ್ರಿಯವಿಷಯ[1]ದ[1]
ನುತ ಪಂಚಲಿಂಗಾರ್ಪಣಂಗೆಯ್ಯೆ ಪಂಚೇಂದ್ರಿ
ಯ ತತ್ವಾರ್ಪಿತ, ಸಕಲಜೀವಹಿಂಸೆಯನುಳಿವು[2]ದೇಯಹಿಂಸೆಯೆನಿಪ್ಪುದು[2]
ಪ್ರತಿಯಿಲ್ಲ[3]ದಿಹ ವಸ್ತುವೇ ಶಿವನೆನಲ್ಕೆ ಸಂ
ಪ್ರತಿಯಾಗಿ[3] ನಿಜದೀಕ್ಷೆ ತಲ್ಲಿಂಗದೊಳ್ ಮನದ
ಗತಿ[4]ವಿಡಿದು ಮನವಡಗಲಾಯವಸ್ಥೆಯನು ಸದ್ಯೋವೋಕ್ಷವೆಂದೆಂಬರು[4] ೫೬
ಉರುತರದ ಈ ಏಳುದೀಕ್ಷೆಯಂ ಭಾವಕ್ಕೆ
ಭರದಿಂದಲುಪದೇಶಿಸುತ್ತ ಶ್ರೀಗುರುವು ತಾ
ನಿರದೆ [5]ಸಂತೋಷದಿಂ ಕೈವಿಡಿದು ತಂದು ನಿರ್ಮಳದ ತ[5]ಟ್ಟೆಯೊಳಕ್ಕಿಯಂ
ಉರೆ ತುಂಬಿ ತನ್ನಾ[6]ವಂದ[6]ಕ್ಷರಂಗಳ ಲಿಖಿಸಿ
ಶಿರದ ಮೇಲಿಟ್ಟಾಗ ನಾಮಕರಣವ ಪೇಳಿ
ಪರಮಶಿವಭಕ್ತಿಯಿಂದುದಿಸಿದವ[7]ನೈ ತಾಯಿತಂದೆಯರು[7]ಮಾಪತಿಗಳು ೫೭

॥ ಸಾಕ್ಷಿ ॥

ಪಾತ್ರೇ ತಣ್ದುಲಮಾಪೂರ್ಯ ನಾಮ ಸ್ವರ್ಣೇನ ಲಿಖ್ಯ ಚ
ಸ್ಪೃ[8]ಷ್ಟ್ವಾ[8]ಶಿಷ್ಯಸ್ಯ ಮೂರ್ಧ[9]ನಂ[9]ಮಂಗಾದಂಗಾದುದೀರಯೇತ್ ॥
ಅಂಗಾದಂಗಾತ್ಸಂಭವಸಿ ಹೃದಯಾದಧಿ ಜಾಯಸೇ
[10]ಆತ್ಮಾ[10]ವೈ ಪುತ್ರನಾಮಾಸೀ ಸಜೀವ ಶರದಶ್ಶತಂ ॥
ಎಂದು ಪೇಳುತ್ತಲವಭೃತವ ಯಜು[11]ವಿಂಗೈವು
ಗೆಂದು ಪೇಳುವ ಮಂತ್ರವು[11]ಚ್ಛೈ ಸ್ವರಂಗಳಿಂ
ಛಂದದಿಂದೊಂದುತಾ ನಾ[12]ಮ[12]ದಿಂ ವೇದದಿಂದಿಷ್ಟಕಳಶೋದಕಗಳಿಂ
ಹೆಂದ[13]ದಗ್ರದ[13] ದೂರ್ವೆಯಿಂದಂತ್ಯಸ್ನಾನಮಂ
ಕುಂದದೆಸಗುತ್ತ ಮುಸುಗುತ್ತ ಜಯಜಯರಾವ
[14]ದಂದದಿಂದ[14]ಖಿಳ ಶರಣಾಳಿಯುಘೆಯುಘೆಯೆಂದು ಪಾಡಂತಾಡುತೆ ಕೊಡುತ್ತೆ ೫೮

---

1 ಗಳ(ಜ) 2 ದಹಿಂಸೆಯೆಂದೆನಿಪದೀಕ್ಷೆ(ಜ) 3 ದಾದಿ ಮಧ್ಯಾಂತಮಿಲ್ಲದ ಶಿವನೆನುತ ಲಿಂಗ(ಜ) 4 ಪಾಶವೆಮನೋಲಯಜೀವಶಿವಭಾವವಳಿಯೆ ಸದ್ಯೋನ್ಮೋಕ್ಷವು (ಜ) 5 ಪಾತ್ರೆ ತಂಡುಲ ಮಾಪೂರ್ಯಮೆಂದಮಳದ (ಜ) 6 ಮಾ (ಜ) 7 ನೈ ತಾಯಿತಂದೆಗಳು (ಕ) ನೀ ನಿನಗೆ ತಾಯೆಂದು ಮಾ (ಜ) 8 ಷ್ಟ (ಜ) 9 ನ(ಕಗ) 10 ಆತೋ(ಕಗ) 11 ಪಾಯೆಂಬುದದುರೆ ಮಂತ್ರಮಂ ಉ (ಜ) 12 ದ (ಜ) 13 ದುರ್ವಿಂ (ಜ) 14 ದಿಂದ (ಕಗ)

॥ ಸಾಕ್ಷಿ ॥
ಅವಭೃಥಂ ಯಾಜುಷೇ ಜುಹೋತಿ ಯದೇವಾಜಿನಮೇಕಹಾಯನಾದೇನಃ ಕರೋತಿ ತದೇವ ತೈರವಯಜತೇ[1]ಸಾವಭೃಥಮ[1]ವೈತಪ್ಯವೈವರುಣಃ ಸಾಕ್ಷಾದೇವವರುಣಮವ ಯಜತೇ ಅನೇನ ಶಿಷ್ಯಸ್ಯ ಮೂರ್ಧ್ನಿಪ್ರತಿಷ್ಠಿತ ಪಂಚಕಳಶೋದಕೇನಾಂತೇ ಪ್ರೋಕ್ಷಣಂ ಕುರ್ಯಾತ್ ॥

ವರ ಹಿರಣ್ಯಾದಿಗಳಿಗಾನದಿರೆ ಕೈಯಲ್ಲಿ
ಧರಿಸುವುದು ಲಿಂಗಮಂ ಮಾಹೇಶ್ವರಂ ಕಾಂಕ್ಷೆ
ಗೆರಗ[2]ದೇ[2] ಕಕ್ಷೆಯೊಳ್ ಧರಿಸವೇಳ್ಕು ಭಕ್ತಸತಿಯಪ್ಪುದೇ ಉರದೊಳು
ಧರಿಸಬೇಕಾ ಪ್ರಾಣಲಿಂಗಿಯೋದನ ಪಾನ
ದಿರವಿಲ್ಲದಿರಲೈಕ್ಯನಮಳೈಕ್ಯದೊಳ್ ತಳೆವು
ದಿರ‌ದನ್ಯಶಬ್ದಮಂ ನುಡಿಯ[3]ದಿರ[3] ಮುಖಸೆಜ್ಜೆಯೊಳಗೆ ಲಿಂಗವ ಧರಿಪುದು ೫೯

ಲೋಕಕ್ಕೆ ಶಿವಶರಣನೆರಗದಿರೆ ಶಿರದಲ್ಲಿ
ಜೋಕೆಯಿಂ ಧರಿಸಬೇಹುದು ಗಳದೊಳಖಿಳರಸ
ನೀಕಮಿಳಿಯದರಿಂದೆ ಗಳವಂಧಿಕವೆಂದು ಶ್ರೀಚನ್ನಬಸವೇಶ್ವರನೊಲು
ಸ್ವೀಕರಿಪುದೆಲೆ ಸುಪ್ರಸಾದಿಯಿಂತೀ ಸ್ಥಲಗೆ
ಳೇಕವೆಂದೊಂದುಸ್ಥಲದಲ್ಲಿ ಧರಿಪುದು ನಿಜಂ
ನೀ ಕೇಳು ನಾಭಿಯಿಂ ಕೆಳಗೆ ಧರಿಸಲ್ಕಾಗದಂಲ್ಲಿ ತಳೆಯಲ್ಕಯೋಗ್ಯಂ ೬೦

ಇಷ್ಟಲಿಂಗೋತ್ಪತ್ತಿ ಸ್ಥಿತಿ ಲಯಂಗಳ ಕೆಡಿಪು
ದಿಷ್ಟಲಿಂಗಾನಿಷ್ಟಪಂಚಕಂಗಳ ಪಳಿವು
ದಿಷ್ಟಲಿಂಗ[4]ವಿದು[4] ತನ್ನಯ ಭಕ್ತಜನಕೆ ಮನದಿಷ್ಟಭೀಷ್ಟವನೀವುದು
ಇಷ್ಟಲಿಂಗಂ ಸಕಲರೊಳೆ ಶ್ರೇಷ್ಠನಂ ವಠಾಳ್ಪ
ದಿಷ್ಟಲಿಂಗಾನಂದ ಮೋಕ್ಷಸಂಪದವಿಾವು
ದಿಷ್ಟಲಿಂಗದೆ ಶಿಷ್ಟತರಮಿಲ್ಲವೆಂದರಿದು ಸಾವಧಾನದಿ ತಳೆವುದು ೬೧

ಲಿಂಗವಿಲ್ಲದ ಭವಿಯೊಳನ್ನ ನರಕದ ಬನ್ನ
ಲಿಂಗವಿಲ್ಲದ ಭವಿಯ ಕೂಟ ನಿರಯದವೂಟ
ಲಿಂಗವಿಲ್ಲದಳಂಗಸಂಗ ದುಸ್ಸಂಗ ಭವಭಂಗ ದೀಪದ ಪತಂಗ
ಲಿಂಗವಿಲ್ಲದ ಪ್ರೀತಿ ಯಮಲೋಕದತಿ ಘಾತಿ
ಲಿಂಗವಿಲ್ಲದ ನಂಟುವಾಚಾರಕದು ಕಂಟು
ಲಿಂಗವಿಲ್ಲದ ಕಾಯ ಭಕ್ತಜನಕತಿಹೇಯ ನಾ[5]ಮಧೇ[5]ಯಂ ಮಾಯವು ೬೨

1 ಪಾರ್ವಭ್ರುದಮ (ಜ) 2 ದಿರೆಂ (ಜ) 3 ದೊ (ಗ) 4 ಖಿಳ (ಜ) 5 ಯಪೇ (ಜ)

ಸಾರಶಿವಲಿಂಗವೇ ಪ್ರಾಣವಾಗಿಹ ಭಕ್ತ
ನಾರೈದು ವ್ರತಲೋಪ ಲಿಂಗಲೋಪಂ ಕಂಡು
ತಾರತಮ್ಯದೆ ತಥ್ಯಮಿಥ್ಯದಿಂ ಮನಗದ್ದು ಜೀವಚೋರಕನಾಗದೆ
ಮೀರಿ ಪ್ರಾಯಶ್ಚಿತ್ತವಿಲ್ಲ[1]ವ[1]ತಿನಿಷ್ಠೆಯಿಂ
ಸಾರ ಶಿವಲಿಂಗವ್ರತಲಿಂಗದೊಳಗೈಕ್ಯಮಂ
ಸಾರಲವ ಶಿವಭಕ್ತನಲ್ಲದೊಡನಾಚಾರಿ ಶಿಶಂಮರನೆ ಕೇಳೆಂದನಂ ೬೩

ವೃದ್ಧಾನಂಕ್ರಮದಿಂದ ಶಿಷ್ಯಗಂ ಮುದದಿಂ ಪಿ
ನದ್ಧ ಗುರುದಂಡ ಚೋಟಿಕೆಯನೀಯಲ್ಕಲ್ಲಿ
ಇದ್ದ ಭಕ್ತಾಳಿಯಂ ಗುರಂಧರ್ಮಭಿಕ್ಷೆಯಂ ತಂದು ಗುರುಮಿಂಗೊಪ್ಪಿಸೆ
ಸಿದ್ಧರಹ ಋತ್ವಿಕ್ಕುಗಳ್ ಮಹತ್ವದವೆಲ್ಲ
ತಿದ್ದಿಕೊಳುತೆಲ್ಲರಂ ತಂತಮ್ಮ ಕಳಶಗಳ
ಶುದ್ಧವಹ ಕರಗಳಿಂ[2]ದಂ ತ್ರಿವಾರದಲಿ[2] ಮತ್ತೆ ತಿಳಂಹುತ್ತಾನಂದ[3]ದಿಂ[3] ೬೪

ಜಯಜಯತು ಜಾಹ್ನವೀ[4]ಧರ[4] ಜಗತ್ಪ್ರಖ್ಯಾತ
ಜಯಂಜಯತುಮಾವರ ಕಳತ್ರ ಮಂಗಳಗಾತ್ರ
ಜಯಜಯಂತು ಸತ್ಕೃಪಾಪಾಂಗ ಸಪ್ತಸುಕೋಟಿ ಮಂತ್ರ ಬಹಿರಂತರಂಗ
ಜಯಜಯತು ಕಮನೀಯ ಶರಣಜನ [5]ಸದುಹೃದಯ[5]
ಜಯಜಯತು ಜಂಗಮಾಕಾರ ಜಗದಾಧಾರ
ಜಯಜಯತು ಜಯತೆಂದು ಕಳಶಗಳ ಋತ್ವಿ[6]ಜರ್ ಸಾ[6]ನಂದದಿಂದೆತ್ತಲು ೬೫

ಬಳಿಕ ದೇವಾನ್ನ ದಿವ್ಯಾನ್ನ ಮುಖ್ಯಾನ್ನಗಳ
ಪಲವಿಧದ ಶಾಕಗಳಪೂಪವಸ್ತುಗಳಂ ನಿ
ರ್ಮಳ ಮಹಾಗಣಕೆಯುಣಬಡಿಸಿ ತಾಂಬೂಲ ಕಾಣ್ಕೆಯನಿತ್ತು ಋತ್ವಿಜರ್ಗೆ
ನಲವಿನಿಂ ಕುಸ್ತರಿಸಿ ಕಳುಹೆ ಶಿವಗಣಮೊತ್ತ
ನಲಿವು[7]ತ್ತ ರಾಜಮಾನಂದಳೆವುತದ ಮನೆಯ
ನಲ[7]ವಿನಿಂ ಪೊರಮಡುವೊಲುಪದೇಶಮಂಟಪವ ಪೊರಟೆಯ್ದಿ ಸುಖಮಿರ್ದರು ೬೬

---

1 ದ (ಜ) 2 ತ್ರೈವಾಗದೆ (ಜ) 3 ದಿಂದ (ಜ) 4 ನಾಥ (ಜ) 5 ಹೃತ್ಸಯ (ಜ) 6 ಜರುವಾ (ಜ) 7 ತ ಮುಖ್ಯಾಂಗನಾ ಪಾಣಿಗ್ರಾಣದರಮನೆಯ। ಒಲ (ಜ)

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾ[1]ಣಿಕಾ[1]ಗಮಾದ್ಯಖಿಳ ವರ
ಮತಶಾಸ್ತ್ರ ಮಂಜುಳಸುಪುಂಜರಂಜಿತ ಪುರಾತನವಚನ ಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತಮಯ ಚತುರ್ಗುರು ಸಚಾರಿತ್ರದೊಳ್ ನೋಡ
ಲತಿನೂತ್ನಮಾದಾರುಕಾಂಡದೊಳ್ ಮೂರನೆಯಸಂಧಿ [2]ಸಂಪೂರ್ಣವಾಯ್ತು[2] ೬೭

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವಮರ್ತ್ಯದೊಳ್ ಚರಿಸಿ ಪಾವನವ
ಮುದದೆ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಳಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀ ಚೆನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತಮಾಹೇಶ್ವರರಿಗಿಷ್ಟಾರ್ಥಮಹುದು ಸತ್ಯಂ ೬೮

---

1 ಣಾ (ಗಜ) 2 ಸುಜ್ಞಾನಬಂಧಿ (ಜ)

# ನಾಲ್ಕನೆಯ ಸಂಧಿ

ಸೂಚನೆ :

ವರ ಲಿಂಗಧಾರಣಾನಂತರಂ ಶಿವಪೂಜೆ
ಮೆರೆವ ಮಂಟಪಮಾರ್ಜನೆಯುಂ ರಂಗವಲ್ಲಿ ಪರಿ
ಪರಿಯ [1]ಪೂಜಾದ್ರವ್ಯಜಾಲಂ[1]ಗಳಿರವ ಗುರುಚಕ್ರೇಶ ನಿರವಿಸಿದನು

ರಾಜರಾಜಸುಮಿತ್ರ[2] ರಾಜೀವದಳನೇತ್ರ
ರಾಜಸಂಭೃತಶೂಲ ರಮ್ಯಲೋಚನಫಾಲ
ರಾಜಶೇಖರ ಧೀರ ವಾರ ಸನ್ನುತದೇವ ರಾಜ ಸನ್ನುತಿಪಾತ್ರನೆ
ರಾಜಕುಲಕುಮುದಭಾಸ್ಕರ ಪರಶುರಾಮಕೃತ
ರಾಜತ್ಸಪರ್ಯಾನುಮೋದವಚ್ಚಿತ ನಟ
ರಾಜ ಗೋರಾಜವಾಹನ ರಾಜತಾವಾಸ[2] ಜಯತು ಗುರು ಚೆನ್ನಮಲ್ಲ ೧

ಜಿನಭಜನೆಯುಳಿದು ಶಿವಭಜನೆಯಿಂ ಹುಲಿಗೆರೆಯೊ
ಳನುವಿನಿಂದಿರೆ ಕಣ್ಣಬೇನೆಯಿಂದುಪವಾಸ
ಸನಯದಿಂದಿರೆ ಇದೇ ಲಿಂಗವೆಂದಾಗ ಜಿನಪ್ರತಿಮೆಯಂ ತೋರೆ ಜೈನಂ
ಘನಲಿಂಗಭಾವದಿಂ ಮಂಡೆಯೊಳ್ ಹಸ್ತಮಂ
ವಿನಯದಿಂದಿರಿಸೆ ಲಿಂಗಾಕಾರವಾಗೆ ಬಿಡ
ದನುವಿನಿಂ ಯಜಿಸಿ ಮಹಿಮೆಯ ಮೆರೆದ ಸೋವಣ್ಣನಡಿಗಳಿ[3]ಕ್ಕೆನ್ನೆದೆ[3]ಯೊಳು ೨

ಎಲೆ ಗುರುವೆ ಲಿಂಗಪೂಜಾವಿಧಿಯ ಕರುಣದಿಂ
ದೊಲಿದು ನಿರವಿಸುವುದೆನೆ ಕೇಳು[4]ತಾ[4]ನಂದದಿಂ
ಮಲಹರಂ ಮುನ್ನ ಚತುರಾನನಂಗೊರೆದಾ ಕ್ರಿಯಾಸಾರಗ್ರಂಥದಲ್ಲಿ
ಪೆಲೆಯಾಗಿ ಪೇಳಿದುದನುಸುರ್ವೆ ಗೃಹ[5]ವೀ[5]ಶಾನ
ದೊಳಗೆ ಪೂಜಾಗಾರವಂ ರಚಿಸಬೇಕದಂ
ಸಲೆ ಹಸ್ತಬತ್ತೀಶಮಾನದಿಂ ಹಸ್ತವಿಂಶತಿಮಾನದಿಂ ರಚಿಪುದು ೩

---

1 ಶಿವಪೂಜೆದ್ರವ್ಯಂ (ಜ) 2 ಪತ್ರಗೋರಾಜನುತರಾಜಗೋರಾಜ ರಾಜಸುರವಂದ್ಯಗೋರಾಜ ವರನಂದನಾಲಪನ ರಾಜೀವರೋಲಂಬ ಕೀನಾಶಕುಮುದ । ರಾಜಗೋರಾಜಶಿರಪಾತ್ರ ಪಾಂಡುರಗಾತ್ರ ರಾಜಗ್ರಹರಾಜಬಹುತೇಳಗೋಗೋಚಾಪ ರಾಜತ್ಸುಭೋಜನಕರಾಜತನಯಾವರದ (ಜ) 3 ಕೆನ್ನೆರ್ದೆ (ಜ) 4 ವಾ (ಜ) 5 ಕೀ (ಜ)

ಮಘಮಘಿಪ ಪೂ[1]ವುಗಳ[1] ಪಸರದಿಂ ವಿಸರದಿಂ
ಪೊಗರೊಗುವ ಮೇಲಂ[2]ಗಡೆ ಪಟ್ಟುಗಳ ಕಟ್ಟುಗಳ[2]
ಝಗರಝಗಿಪ ಸ್ವರ್ಣಮಯ ದೀಪದಿಂ ಧೂಪದಿಂ [3]ಧೂಪಿಸುವ[3] ಕೂಟದಿಂದ
ಸೊಗಸುವತಿ ಮುಡಿವಾಳ ಝಲ್ಲರಿಯ ವಲ್ಲರಿಯ
ಮಿಗೆ ಮೌಕ್ತಿಕದ ರನ್ನಗೊಂಡೆಗಳ ಚೆಂಡಂಗಳ
ಬಗೆಬಗೆಯ ಗಂಧ[4]ದಿಂ[4] ಪನ್ನೀರ [5]ತಣ್ಣೀರ ಚಳಯದಿಂ[5] ನಳನಳಿಸುತ ೪

ಆಲವಟ್ಟಗಳಿಂದ ಧಾವಲ್ಯದಂಬರದ
ಮೇಲಾದ ಧ್ವಜದಿಂದ ತೀವಿ [6]ಪ[6]ತ್ರದ ಪತಾ
ಕಾಳಿಯಿಂ ಕರ್ಪೂರ ಕುಂಕುಮ ಚಳಯದಿಂದ [7]ತಾ[7]ಣದೀವಿಗೆಗಳಿಂದ
ಶ್ರೀಲಲಿತ ಕನ್ನಡಿಯ ಬೆಳಗಿನಿಂದೆಸೆವುತಿಹ
ಶೂಲಧರಪೂಜಾಗೃಹಂ ನೋಟಮಾತ್ರದಿಂ
ಪೇಳಲೇಂ ಭುಕ್ತಿಮುಕ್ತಿಯ[8]ನಿತ್ತು[8] ಸರ್ವರಿಂ ಸ್ತುತಿಸಿ[9]ಕೊ[9]ಳ್ವುದು ಸಂತತಂ ೫

ವರ ಶಿವಾಲಯವಿಧಾನೋಕ್ತದಿಂದಮೃತ[10]ದಂ
ತುರೆ[10] ಧವಳಮಾಗಿ ಮಾಡುತ್ತ ಕುಟ್ಟಿಮಂಭುವಿಯಂ
ಚಿರದರ್ಪಣೋದರದ ಪಾಂಗಿನಿಂ [11]ಬಹು[11]ವರ್ಣ ಪಂಚಲೋ[12]ಹವ ರತ್ನಮಂ[12]
ಪರಿಪರಿಯ ಧಾನ್ಯಂಗಳಂ ಚಿ[13]ನ್ನದ ತಗಡುಗ
ಳಿ[13]ರಿಸುವುದು ಸರ್ವಕಾರ್ಯದ ಸಿದ್ಧಿಗೋಸುಗಂ
ಭರದೆ ನಾನಾವಿಧದ ಪುಷ್ಪಜಾಲಂಗಳಂತಲ್ಲಿಗಲ್ಲಿಗೆ ರಚಿಸುತ ೬

ಸಾಕ್ಷಿ ॥ ಶ್ಲೋಕ ॥

ರತ್ನಂ ಚ ಪಂಚಲೋಹಂ ಚ ಧಾನ್ಯಾನ್ಯಪ್ಯಾದಶಾನ್ಯ[14]ಪಿ[14]
ಪೂಜಾಸ್ಥಲೇ ಚ ಸ್ಥಾಪ್ಯಾನಿ ಸರ್ವಸಿದ್ಧಿ[15]ರ್ನ[15]ಸಂಶಯಃ ॥

ರಚನೆಯಂ ಮಾಡುತ್ತ ನೆಲಗಟ್ಟನೀ ವಿಧದೆ
ಪ್ರಚುರಶೋಭಾ[16]ಢ್ಯ[16]ದಿಂದೆಸೆವಂತೆ ಮಾಡೆ ಶಿವ
ನಚಲಾಲಯದ ಭೂಮಿಯೆಷ್ಟು ದಂಡಪ್ರಮಾಣ[17]ಮೊ ನೋಡಲಷ್ಟು ಯುಗಮಂ[17]

---

1 ಜಾಲ (ಜ) 2 ಕಟ್ಟುಗಳ ಪಟ್ಟುಗಳಿಗಳ ಪಟ್ಟುಗಳಿಂದ (ಜ) 3 ಗೊಯ್ದನೆ (ಜ) ಚಂದನದ (ಜ) 5 ಮಹಚಳೊಗಳಿಂ (ಜ) 6 ಛ (ಜ) 7 ಶಾ (ಜ) 8 ನಿತಂ (ಜ) 9 ಕೇ (ಜ) 10 ದೊಲ್ ಕರ (ಜ) 11 ನಾನಾ (ಜ) 12 ಹಂ ರತ್ನಮುಖಂ (ಜ) 13 ನ್ನ ತಗಡುಮಂ ಇ (ಜ) 14 ಚ (ಜ) 15 ನ (ಜ) 16 ನ (ಜ) 17 ನಿತುಸಾಯಿರಜಾಗಂಗಳಿಂ (ಜ)

ಶಂಚಿಯಾಗಿ ಶಿವಪದವನನುಭವಿಪ ಹರಭವನ
[1]ದಚಿರ[1]ರಜಗಳನಧಿಕಭಕ್ತಿಯಿಂ ಗುಡಿಸಂವವ
ನಚಲಿತದ ಪಾಪಗಳನಳಿದು ದೇಹಾಂತ್ಯದೊಳ್ ಪುಣ್ಯಾತ್ಮನಪ್ಪನಣುಗ ೭

ಹರಭವನದಲ್ಲಿ ಗುಡಿಸಿದ ಧೂಳಿಕಣಿಕೆಗಳ
ಪರಿಗಣನೆಯೆಷ್ಟುಂಟು ಅಷ್ಟುದಿನ ಸ್ವರ್ಗದೊಳ
ಗಿರುತಿಹಂ ಗುಡಿಸಿದವ [2]ಚರ್ಮಮಾತ್ರದ ಭೂಮಿಯು ಶಿವಾಲಯದ ನಡುವೆ[2]
ನೆರೆಯುಡುಗಿದವನಃ ದಿನದಿನದಲ್ಲಿ ಮಾಡಿದತಿ
ದುರಿತಂಗಳಳಿವ ಮತ್ತಾವ ಮೃದು ಕಸಕಿಲದೊ
ಳಿರದೊಂದಂ ತಿಂಗಳಂ ಗುಡಿಸೆ ಚಾಂದ್ರಾಯಣಸಹಸ್ರ ಫಲವಂ ಪಡೆವನಂ ೮

ಮತ್ತೊಂದುಪಕ್ಷ ಪರಿಯಂತ ಹರನಾಲಯದ
ಚಿತ್ತರದ ಸಮ್ಮಾರ್ಜನಾದಿ ಸೇವೆಯ ಮಾಡೆ
ಯತ್ಯಧಿಕ ರುದ್ರಲೋಕದೊಳು ಶತಕೋಟಿಯುಗ ಸೇವ್ಯನಾಗಿರ್ಪ ಮುಂದದಿಂ
ಮತ್ತೆ ಪೂಜಾಂತ್ಯದೊಳ್ ಶಿವಲಿಂಗಮಸ್ತಕದೆ
ಹೊತ್ತಿರ್ಪ ಮಾಲೆ ತೆಗೆದಿರಿಸುವುದು ಕಸಗುಡಿಪು
ದುತ್ತಮದ ಸೇವೆಯೊಂದಂದರಿಂದಹಂದು ನೂರಾರು ಚಾಂದ್ರಾಯಣಫಲಂ ೯

ಬಳಿಕ ರಜಮುಡುಗುವರು ಶಿವಭವನಮಾ[3]ರ್ಗವಂ[3]
ವೊಲವಿಂ ಮನೋಹರವ ಮಾಡುಂವರು ಸುರರ ಸರಿ
ನೆಲದಾಣ್ಮರಹರದಕ್ಕಿತಿಹಾಸಮುಂಟು [4]ಸ್ವ[4]ಯಂಭುಂಮನ್ವಂತರದೊಳು
ಸಲೆ ಪುರಿಕಪತ್ತನಂ ಉಂಟದಕೆ ನರವರ್ಮ
[5]ಇಳೆಯಾಳ್ವ[5] ರಾಜನಾ[6]ತ[6]ಗೆ ದ್ವಾದಶಸಹಸ್ರ
ನೆಲೆಯುಳ್ಳ ಸತಿಯುಂಟವರ್ಗೆ ಪಿರಿಯರಸಿಯಾಗಿರ್ಪಳಂ ಸುದೇವಿ ಮುಂದದಿಂ ೧೦

ಮುನ್ನಿನಂರೆ ಜಾತಿಸ್ಮರತ್ವ ತನಗುದಿಸಲ್ಕೆ
ತನ್ನ ಪತಿಗದನರುಪಲವನು ಜಾತಿಸ್ಮರಣ
ದುನ್ನತಿಯಿಂನಭವಪದಸೇವೆಯೊಳಗಿರೆಯಂರಸ ಸಾಧ್ವಿಯಪ್ಪಾ [7]ದೇವಿಯಂ[7]
ಪನ್ನಗಾಭರಣನಾಲಯಂದ ರಜಮಂ ಗುಡಿಸು
ತುಂ ನಿಜದೆ ಮಾರ್ಗದೊಳಗಣ ರಚನೆಯಂ ಮಾಡು
ವುನ್ನತದ ದಾಸ್ಯಭಾವವ ನೋಡಿ ಗಾಲವಪುರೋಹಿತಂ ನುಡಿದನಾಗ ೧೧

---

1 ದುಚಿತ (ಜ) 2 ಬಳಿಕಗೋಮರ್ಮಮಾತ್ರದ ಶಿವಾಲಯ ಭುವಿಯಂ (ಜ) 3 ಗಮಂ (ಗ)
4 ಸ್ವಾ (ಜ) 5 ನೆಲೆಯ ದಿನ (ಜ) 6 ತಂ (ಜ) 7 ಸುದೇವಿ (ಜ)

ಲಾವಣ್ಯರಸ[1]ವೊಸರುವಂಗದ[1] ಸುದೇವಿ ನೀ
ನಾವಕಾರಣ ದೇಹಶೃಂಗಾರಕರಣದುರೆ
ಭಾವಮಿಲ್ಲದೆಯುಳಿದ ವ್ಯಾಪಾರಗಳ ಬಿಟ್ಟು ಹರನ ಮಂದಿರದ ರಜದ
ಸೇವೆಯೇ ಪರವಾಗಿ ಏನುಕಾರಣಮಿಪ್ಪೆ
ಯೋವಿಯತಿಪ್ರೀತಿಯಿಂದೆನಗುಸುರು ತಾಯೆಯೆಂ
ಬೀ ವಚನವಂ ಕೇಳಿ ಸುಲಿಪಲ್ಲ ಬೆಳಗು ವೊಗದುಂಬಿದ ವಿಶಾಲನಯನೆ ೧೨

ದರಹಸನವದನದಿಂದೆಂದಳು ತಪೋಧನನೆ
ಹರಭಜನೆ ಮುಖ್ಯ ಸೇವೆಗಳೆನಗೆ ಪ್ರಿಯವಿಲ್ಲ
ನಿರುತವೆಲ್ಲಾಗ ಶಿವಮಂದಿರಾಂಗಣದ ರಜಮುಡುಂಗುವತಿಭಕ್ತಿಯೆನಗೆ
ದೊರಕೊಂಡ ಪರಿಯಾವುದೆನೆ ಪೂರ್ವಜನ್ಮದೊಳ
ಗಿರದೆ ಮಾಡಿದ ಕರ್ಮವಂ ಪೇಳ್ವೆನೈ ಪೂರ್ವ
ವರ ವ್ಯೋಮಚಾರಿಣಿಯೆನಿಪ್ಪ ಪೆಣ್ವಕ್ಕಿಯಾನಂದದಿಂ ಸಂಚರಿಸುತ ೧೩

ಬರಬರಲು ಕಿಷ್ಕಿಂಧಗಿರಿಯಂನೆಯ್ದಿದೆನಲ್ಲಿ
ಸುರಪ ಕಿನ್ನರ ಸಿದ್ಧ ವಿದ್ಯಾಧರಾಕೀರ್ಣ
ದಿರವಿನಿಂದೆರಡನೆಯ ಹೇಮಕೂಟವದೆಂಬ ಹಾಂಗಿರಲು ಸ್ವರ್ಲಿಂಗದ
ಚಿರನಿಳಯಮಿರಲಿಕಾ ಲಿಂಗದರ್ಶನದಿಂದ
ಸುರಲೋಕವಂ ಪಡೆದನಾ ಲಿಂಗಪೂಜೆಯಂ
ಪರಮಭಕ್ತಿಯೊಳೆಸಗಿ ನೈವೇದ್ಯದನ್ನ ಲಿಂಗದ ಪಾರ್ಶ್ವದೊಳ್ ಬದ್ದಿರೆ ೧೪

ಏನ ಹೇಳುವೆಯೆನ್ನ ಹಸಿವಿನಾಪೇಕ್ಷೆಯಿಂ
ದಾ ನವೀನಾನ್ನಮಂ ಕಂಡು [2]ಪಿಂಗದೆ [2]ಬಳಸು
ತಾನಧಿಕ ಪಕ್ಷಂಗಳಂ ಕೊಡಹುತನ್ನಮಂ ತಿನುತ ಕೊಡಹುತ ಬಳಸುತ
ಸಾನುರಾಗದೊಳಿರಲ್ ಪೂಜಕಂ ಕಂಡಧಿಕ
[3]ಮಾ[3]ನಕೋಪದೊಳಾಗ ಕೊಲಲು ಸಾಯಲ್ಕೆನ್ನ
ನೂನಕರ್ಮವ ಕೇಳೆ ಲಿಂಗದೊತ್ತಿನೊಳು ರಜಮಂ ತೆಗೆದ ಫಲಮಂಟೆನೆ ೧೫

ಇಂತಧಿಕ ಲಿಂಗಸನ್ನಿಧಿಯ ರಜಮಾರ್ಜನಮ
ನಾಂತು ಪಕ್ಷದೊಳೆಸಗಲೀಪಕ್ಷಿ ಮುದದಿ ಧರೆ
ಗಿಂತೇಕ[4]ಚ್ಛತ್ರಪತಿಗೀಗ[4] ಪಟ್ಟದ ರಾಣಿಯಾಗವೇಳ್ಕೆನೆ ವಸುವಿನ

---

1 ಪರಿಜದಳದೆತಿ (ಜ) 2 ಲಿಂಗವ (ಜ) 3 ಹೀ (ಜ) 4 ಛತ್ರೇಶನಮಲ (ಜ)

ಅಂತರಂಗದೊಳುದಿಸಿ ನರವರ್ಮರಾಜಂಗೆ
ಸಂತಸದ ವಧುವಾದೆ ಪೂಜೆ ಜಪ ಹೋಮಾದ್ಯ
ನಂತ ಸತ್ಕ[1]ರ್ಮವಿಶಾ ಸೇವೆಗಿನ್ನೆ[1]ಣೆಯಿಲ್ಲ ಕೇಳು ಮುನಿಶಾರ್ದೂಲನೆ ೧೬

ವರ ಗುರುವೆ ಸಮ್ಮಾರ್ಜನಾಂತರದ ವಿಧಿಯನಗೆ
ಕರುಣದಿಂದೊರೆವುದೆ[2]ನಲಾಗಲನು[2]ಲೇಪನದ
ಪರಿಯ ಪೇಳುವೆನು ಕೇಳುತ್ತಮದ ಭೂಮಿಯೊಳಗಿರುವ ಗೋಮಯದ ಕೆಳಗಂ
ಪರಿಹರಿಸಿ ಮೇಲುಳಿದ ಮಧ್ಯದೊಳಗಿರ್ದುದಂ
ಒರೆದು ಹುಳುವಿಲ್ಲದುದ ಹೊಸತಾದ ಗೋಮಯವ
ಪರಿಗ್ರಹಿಸಬೇಕು ಕರು ಸತ್ತುದಂ ಬಂಜೆಯಂ ರೋಗ[3]ದಿಂ ಬಡವಾ[3]ದುದಂ ೧೭

ಬಿಡಬೇಕು ಇತ್ಯಾದಿ ದುರ್ಗುಣದ ಗೋವುಗಳ
ಗಡಣದಾ ಸಗಣಮಂ ಕ್ಷೀರವತ್ಸಗಳುಳ್ಳ
ಸಡಗರದ ಗೋವುಗಳ ಗೋಮಯಂಗೊಂಡು ನೀರಂ ಬೆರಸಿ ಕ್ರಿಮಿಯ ನೋಡಿ
ಬೆಡಗಿನಿಂದನುಲೇಪನಂಗೆಯ್ಯಲವರ್ಗಧಿಕ
ದೃಢದೆ ಚಾಂದ್ರಾಯಣ ಸುಫಲವಹುದುಂ ಲೇಪನದೊ
ಳೊಡನೆ ಪ್ರಾಣಿಗಳಳಿಯೆ ದಾನ ಪೂಜಾ ಹೋಮ ಸತ್ಕರ್ಮಫಲವಂಳಿವವು ೧೮

ಹರನಾಲಯದೊಳವಂಳವಸ್ತ್ರದಿಂ ಶೋಧಿಸಿದ
ವರಜಲದೊಳಂಪಲೇಪನಂ ಮಾಡಬೇಕು ಕೇ
ಳಿರದುದಕವಂ ಶೋಧಿಸಿದೊಡಾತನ ಸುಕುಲವನುದ್ಧರಿಸುತಿಹವು ಸತತಂ
ನೊರೆಯುಳ್ಳ ಜಲದೆ ಶಿವಲಿಂಗಕಭಿಷೇಕವಂ
ಎರೆವುದೇ ಸಲ್ಲ ಲಿಂಗದ ಸಕಲವಿನಿಯೋಗ
ಕಿರದೆ ಶೋಧಿಸಿದುದಕ ಯೋಗ್ಯ [4]ಫಲ[4]ಸಿದ್ಧಿಗೋಸುಗ ಬಿಡದೆ ಯಾವಾಗಳುಂ ೧೯

ಸಲೆ ಶೋಧಿಸಲ್ಬೇಕು ಸೂಕ್ಷ್ಮಜಂತುಗಳಂ ತಾಂ
ಜಲಮಿಶ್ರಮಾಗಿಹವಲಾ ಜಲಮಪೂತ ಮ
ತ್ತಲಘುಜಲದೊಳ್ ಬೆರೆದ ಸೂಕ್ಷ್ಮಪ್ರಾಣಿಗಳ ಕೊಲೆ ನಿಖಿಲ ಪಾಪಂಗಳಹವು
ಬಳಿಕ ಸಮ್ಮಾರ್ಜನಂ ಮಾಳ್ಪಲ್ಲಿ ಮಂಡಲವ
ನೆಲೆಯಾಗಿ ಮಾಡುವೆಡೆಯಲ್ಲಿ ಒಲೆಬೆಂಕಿಯೊಳ್
ಬಲುಶಾಖಿವಂ ಹತಿಸುವಲ್ಲಿ ಕಡಿವಲ್ಲಿ ಉದಕವ ತುಂಬುವಲ್ಲಿ ನರರ್ಗೆ ೨೦

---

1 ರ್ಮಂಗಳೀಸೇವೆಯೆನಗೆ (ಜ) 2 ನೆ ಕೇಳುವನು (ಜ) 3 ಹೊಸತಾಗೀ (ಜ) 4 ಖಿಳ (ಜ)

ಅತಿಶಯದ ಪ್ರಾಣವಧೆಯಹುದಾದಕಾರಣಂ
ಹತವ ಮಾಡಲ್ಬಾರದ ವಧೆಯೇ ಪರಧರ್ಮ
ನಂತ ಸರ್ವಪ್ರಾಣಿಗಳ ಹಿಂಸಕನ ರಕ್ಷಿ[1]ಸರು ಸರ್ವಲೋಕಂಗಳಲ್ಲಿ[1]
ವಿತಮಿಲ್ಲದಖಿಳಬಾಧೆಗಳಿಂದ ಕೊಲುತಿಹರು
[2]ಹತಿ[2]ಕರ್ಮವಿಲ್ಲದವ ತ್ರೈಲೋಕ್ಯ ದಾನದು
ನ್ನತಕೋಟಿಫಲವನೆಯ್ದುವನು ಪ್ರಾಣಿಗಳೊಡೆಯನೊಲ್ ಪುತ್ರಪೌತ್ರರಂತೆ ೨೧

ಪರಿರಕ್ಷಿಸಲ್ಕವಂ [3]ಸ್ವರ್ಲೋ[3]ಕಮಂ ಪಡೆವ
ಹರನ ಮಂದಿರದಲ್ಲಿಯೊಂದು ಪ್ರಾಣಿಯ ಕೊಲಲ್
ನೆರೆ ಮೂರುಲೋಕದೊಳ್ ಸರ್ವಪ್ರಾಣಿಗಳ ಸಂಹರಿಸಿದತಿಪಾಪವಹುದು
ಅರಿದಾವ ವಿಧದಿಂದ ಪ್ರಾಣಿಗಳ ತೊಲಗಿಸು
ತ್ತಿರದೆ ವಸ್ತ್ರದೊಳುದಕಮಂ ಶೋಧಿಸುತ್ತಾಗ
ಭರದಿಂದ ಚಳೆಯವಿವುದು ಲೇಪನಂ ಮಾಳ್ಪುದಮಲ ಗೋಮಯದಿಂದವೆ ೨೨

ಶಿವಲಿಂಗದಾಲಯುವನೊಂದೊಂದುದಿನ ಬಳಿಯಂ
ಲವಗೊಂದುವರ್ಷ ಚಾಂದ್ರಾಯಣದ ಫಲವಹುದು
ವಿವರಿಸಿದೆವಿನ್ನು ವರ್ಣದ ಭೇದಮಂ ಪೇಳ್ವೆನಾಲಿ[4]ಸೈ[4] ಸತ್ಕುವರನೆ
ಸವಿಶೇಷಮಂತ್ರಮಂ ಬಲ್ಲ ಮನುಜೋತ್ತಮಂ
[5]ಸುವಿಧಿಯಿಂ[5] ಗೋಚರ್ಮಮಾತ್ರ ಭೂಮಿಯನಂ ತಾ
ನವಿರಳಮದಪ್ಪಂತೆ ಗೋಮಯಂದೆ ಮಂಡಲಾಕಾರದಿಂ ಚತುರಸ್ರದಿಂ ೨೩

॥ ಸಾಕ್ಷಿ ॥ ಶ್ಲೋಕ ॥
ಜಂತುಭಿರ್ಮಿಶ್ರಿತಾಹ್ಯಾಪಃ ಸೂಕ್ಷ್ಮಾಭಿ[6]ಸ್ತ್ವಾನ್ನಿ[6]ಹತ್ಯತು
ಯತ್ಪಾಪಂ ಸಕಲಂ ಚಾದ್ಭಿರಪೂತಾಭಿಶ್ಚ[7]ಲಭ್ಯತೇ[7] ॥
ಅಹಿಂಸೇಯಂ ಪರೋಧರ್ಮಃ ಸರ್ವೇಷಾಂ [8]ಪ್ರಾಣಿ[8]ನಾಂ ಯತಃ
ಯದ್ದಾನಮಭಯಂ ಪುಣ್ಯಂ ಸರ್ವದಾನೋತ್ತಮಂ ಶುಭಂ ॥
ಮನಸಾ ಕರ್ಮಣಾ ವಾಚಾ ಸರ್ವದಾಽಹಿಂಸಕಂ ನರಂ
ರಕ್ಷಂತಿ ಜಂತವಸ್ಸರ್ವೇ ಹಿಂಸಕಂ ಬಾಧಯಂತಿ ಚ ॥
ಮನಸಾ ಕರ್ಮಣಾ ವಾಚಾ ಸರ್ವಭೂತ ಹಿತೇ ರತಾಃ
ದಯಾದರ್ಶಿತ ಪಂಥಾನೋ ರುದ್ರಲೋಕಂ ವ್ರಜಂತಿ ತೇ ॥

---

1 ಪ್ರಹಿಂಸಕನ ವೈರದಿಂದೆ (ಜ) 2 ಗತ (ಜ) 3 ಶಿವಲೋ (ಜ) 4 ಸೆಲೆ (ಜ) 5 ತವಿಯದೇ (ಜ) 6 ಸ್ವಾಗ್ನಿ (ಜ) 7 ತಲ್ಲಭೇತ್ (ಜ) 8 ಮತಿಪ್ರಾಣಿ (ಜ)

ತ್ರೈಲೋಕ್ಯಮಖಿಲಂ ಹತ್ವಾ ಯತ್ಪಾಪಂ ಪರಿಕೀರ್ತಿತಂ
ಶಿವಾಲಯೇ ನಿಹತ್ಯೈಕಮಪಿ ತತ್ಸಕಲಂ [1]ಲಭೇತ್[1] ॥

ಸಾರಿಸುತ ಸಂಪ್ರೋಕ್ಷಣವ ಮಾಡಿಯಂಗ್ರದೊಳ
ಗಾ ರವ್ಯಮುಕ್ತೇಂದ್ರನೀಲ[ಮಣಿ] [2]ಮಾಣಿಕ್ಯ
ಗಾರುತ್ಮತ ಸ್ಫಟಿಕ ವೈಡೂರ್ಯ[2]ಕನಕ ರೌಪ್ಯದ ಪುಡಿಗಳಿಂದಾಗಲಿ
ಸಾರತರ ರಂಗವಲ್ಲಿಗಳ ರಚಿಸುತ್ತಲ್ಲಿ
ನೀರೇಜಕುಸುಮಮಂ [3]ರಚಿ[3]ಸುವುದು ನಿರ್ಧನಿಕ
ಭೂರಿ ಗೋಧುಮೆಯಕ್ಕಿ ಬೆಣಚುಗಲ್ಲಿನ ಪಿಷ್ಟದಿಂದಾದೊಡಂ ರಚಿಪ್ಪುದು ೨೪

ಹರನ ಮುಂದೆಸೆಯಲ್ಲಿ ರಂಗವಲ್ಲಿಯು ರಜಗ
ಳಿರದೆಷ್ಟು ಪತಿತ[4]ಮಾಗುವದ[4]ನಿತು ಸಾಹಸ್ರ
ವರುಷ ಶಿವಲೋಕದೊಳಗಿರುವ ಮುತ್ತಿನ ರನ್ನರಂಗವಲ್ಲಿಯು ನಿರ್ಮಿಸೆ
ಚಿರಸಪ್ತಲೋಕೇಶನಹನು ಪೂರ್ವದೊಳೊರ್ವ
ಧರಣೀ[5]ಶ[5] ಚಿತ್ರರಥನೆಂಬ ರಾ[6]ಜೇಂದ್ರ ಪುರ[6]
ಹರನ ಮಂದಿರದಲ್ಲಿ ರಂಗವಲ್ಲಿಯ ರಚಿಸಿ ಸಾಯುಜ್ಯಮಂ ಪಡೆದನು ೨೫

ಲಿಂಗದಗ್ರದೊಳಂ ರಚಿಸಲ್ಕೆ ಭೂದಾನಫಲ
ಹಿಂಗದಹುದೈ ಲಿಂಗಪೌರಾಣಮುಸುರುತಿಹ
ದಂಗೈಸಿ ಮಾತ್ಸ್ಯಪೌರಾಣ ಪೇಳ್ವುದು ಕಡಗಮುದ್ರೆ[7]ಯಂ[7] ಕೂಡಿದಂಥ
ಕಂಗೊಳಿಪ ಶಂಖಮುದ್ರೆಯು ಚಕ್ರಮುದ್ರೆಯು
ತ್ತುಂಗ ಸ್ವಸ್ತಿಕಮುದ್ರೆಯಂಕುಶದ ಮುದ್ರೆ ಚೆ
ಲ್ವಂಗದಿಂದೆಸೆವ ಚಾಮರ ಛತ್ರಮುದ್ರೆಗಳ ರಂಗವಲ್ಲಿಯು ರಚಿಪುದು ೨೬

ಪರಿಪರಿಯ ಕಮಲಮಂ ವಿಮಲಕುಮುದಾ[8]ವಳಿಯ[8]
ಬರೆವುದೆಲೆ ಬಿಲ್ವದಳಮಂ ಪದ್ಮದಳಗಳಂ
ಮೆರೆವ ತ್ರಿಶೂಲಮಂ ಡಮರುಗದ ಜಾಲಮಂ ಕಳಶಬಂಧದ ಜಾಲಮಂ
ಸರಸವೃಷಪಾದಮಂ ರುದ್ರಪದಮೋದಮಂ
ತರತರದ ದಂಡಾಳಿಗಳ ಪತ್ರಕಳೆಗಳಂ
ಚಿರತರೋನ್ನತ ನಂದಿಧ್ವಜಗಳಿಂ ಕುಜಗಳಿಂ ರಂಗವಲ್ಲಿಯ ರಚಿಪುದು ೨೭

---

1 ಭವೇತ್ (ಕ) 2 ವಾಮದ್ಮರಾ।ಗಾರಯ್ಮೆ ಸ್ಫಾಟಿಕಂ ಮರಕತಂ (ಜ) 3 ಲಿಖಿ (ಜ) 4 ಮಪ್ಪವುದು (ಜ) 5 ಶನಹ (ಜ) 6 ಜಪುರಂ (ಜ) 7 ಯಿಂ (ಜ) 8 ಳಿಯಂ (ಜ)

ವರ ನೈಮಿಷಾರಣ್ಯ ಮೌನಿಗಳ್ ನಂದೀಶ
ಗೆರಗಿ ವರ್ಣಕ ರಂಗವಲ್ಲಿ ಮಹಿಮೆಯಂ ಕೇಳೆ
ಪರಮ ಸಂತೋಷದಿಂ ಋಷಿಗಳಿರ ಕೇಳಿ ಹಿಮಶಿಖರಿ ಶೃಂಗಾಗ್ರದಲ್ಲಿ
ಗಿರಿಜೆ ತಪಿಸಲ್ಕೆ ರೋಮಶಮೌನಿ ಎಲೆ ತಾಯೆ
ಉರಿವ ತಪನಿಯಮದಿಂದೀಗ ಲಭಿಸನು ನಿನಗೆ
ಹರನಗ್ರದೊಲ್ ವರ್ಣಕವನೆಸಗಲೊಲಿವನೆನೆ ರಚಿಸಿ ಪತಿಯಂ ಪಡೆದಳು ೨೮

ತಂಡುಲದ ಪಿಷ್ಟಮಂ ಪಲಗೆಯೊಳ್ ಶೋಧಿಸುತ
ಘುಂಡನದ ಗೋಕ್ಷೀರದೊಳ್ ಶೋದಿ ಒಣಗಿಸುತ
ಗುಂಡಕಲ್ಲೊಳಗರೆದು ಹಾರಿದ್ರ[1]ಹಿಂಗುಲ ಹರಿನ್[1] ಮುಖ್ಯವರ್ಣಂಗಳಂ
ಕೊಂಡು ಬೆರಸಿದ ಪಂಚವರ್ಣಕಂ ಹರ ಪಂಚ
[2]ಖಂಡಮಯ[2]ಮೂರ್ತಿಗಳೆನುತ್ತ ಭಾವಿಸಿ ಬಿಡದ
ಖಂಡಶಿವಲಿಂಗಹೆಗ್ರದೊಳಮೊಳ್ಬಕ್ತಿಯಿಂ ರಂಗವಲ್ಲಿಯ ಬರೆವುದಂ* ೨೯

॥ಸಾಕ್ಷಿ ॥ ಶ್ಲೋಕ ॥
ಯಾವನ್ತಃ ಪತಿತಾ ಭೂಮೌ ರಂಗವಲ್ಯಾಶ್ಚ ರೇಣವಃ
ತಾವದ್ವರ್ಷಸಹಸ್ರಾಣೀ ಶಿವಲೋಕೇ ಮಹೀಯತೇ॥
ಸಮ್ಮಾರ್ಜನಂ ಶತಂ ಪುಣ್ಯಂ ಸಹಸ್ರಮನುಲೇಪನಂ
ರೇಖಾಶತಸಹಸ್ರಾಣೀ ಚಾನನ್ತಂ ಪೂರಣಂ ಸ್ಮೃತಂ ॥
ಬನ್ಧೋ ಭವಹರಶ್ಚೈವ ಸ್ವಸ್ತಿಕಂ ಶತ್ರುನಾಶನಂ
ಪದ್ಮಂ ಪುಣ್ಯಫಲಂಚೈವ ಮುದ್ರಾಲೋಕೈಕಸಾಧನಂ ॥

ಶ್ರೀಶಿವನ ಸನ್ನಿಧಿಯೊಳಂಪಲಿಪ್ತ ಭೂಮಿಪ್ರ
ದೇಶದಲಿ ರಂಗವಲ್ಲಿಯ ಪಿಷ್ಟರೇಣುಂಗಳ
ವೇಸು ಬಿದ್ದಿಹವದರ ಸಂಖ್ಯಾನಿಯುಮ್ಮ ಸಾಹಸ್ರಾಬ್ದಮತಿವಿಭವದಿಂ
ಈಶ ಸನ್ನಿಧಿಯಲ್ಲಿ ರಾಜಿಸುವ ರಾಜೀವ
ಕೋಶದಂದದಲಿ ಬರೆದವಗನಂತಂ ಫಲಂ
ದೋಸಮಿಲ್ಲದ ರಮ್ಯಬಂಧಮಂ ಬರೆದವಂಗಹುದು ಭವಬಂಧವಿಲಯಂ ೩೦

ಅರಿಗಳ[ಳ]ಮಂ ಪಡೆವರ್ಶೈ ಸ್ವಸ್ತಿಕಾಕೃತಿಯ
ಬರೆಯೆ ದಂಡಾವಳಿಯ ಪತ್ರಪುಷ್ಪಂಗಳಿಂ
ಬರೆಯೆ ದುರಿತಂ ನಾಶಮೈದುವದು ಮುದ್ರೆಗಳ ಲಕ್ಷಣೋಕ್ತಂದಪ್ಪದೆ

1 ಮರಿದಳ ಸುರಿಯಲೆಹಿಂ (ಜ) 2 ತುಂಡನದ (ಜ)
* ೨೯ನೆಯ ಪದ್ಯದಿಂದ ಮುಂದಕ್ಕೆ ಜ ಪ್ರತಿಯಲ್ಲಿ ಗ್ರಂಥಲೋಪವಾಗಿದೆ.

ಬರೆಯೆ ಮೋಕ್ಷಕ್ಕೆ ಸಾಧನಮಕ್ಕುಗೀ ತೆರದಿ
ಪರಿಕಿಸಲ್ ಘಂಟೆಯಂ ಜಯಘಂಟೆಯಂ ಬಳಿಕ
ಮೆರೆವಾ ಕಹಳೆಯುಂ ಸುಪಟಹಮಂ ಶಂಖಮಂ ದುಂದುಭಿಯನರ್ಪಿಸಿದಗೆ ೩೧

ಶೋಕಕರಮಾದ ಕೇಳ್ಕೆಯ ಕೇಳದಿಹ ಸಾಂಬ
ಲೋಕಸಂಪ್ರಾಪ್ತಿಯಾಗುಂಪದು ಘಂಟಾಕರ್ಣ
ಶ್ರೀಕಂಠಗರ್ಪಿಸಿ ಕೃತಾರ್ಥನಾಗಿಹನೆಂಬ ಪೂರ್ವಕಥೆಯಂ ಲಾಲಿಸು
ಲೋಕದೊಳಗಿವು ಪಂಚವಾದ್ಯಂಗಳೆನಿಪವು ಪಿ
ನಾಕಿಗತ್ಯಂತಸಂತೋಷಜನಕಂಗಳಹ
ವಾ ಕಾಂತಿಯಿಂದರ್ಪಿಸಿದ ಪುರುಷಗಿಂತೆಂದು ಫಲವನಾವಂ ಬಣ್ಣಿಪಂ ೩೨

ತಂತಿಗಳ ಕಟ್ಟಿ ಬಾಜಿಸುವ ವಾದ್ಯಂ ತತಂ
ಸಂತತಂ ತೊವಲ ಮುಚ್ಚುಳಮುಳ್ಳದಾನದ್ಧ
ಮಿಂತು ತೂತುಗಳಲ್ಲಿ ಗಾಳಿಯಂ ತುಂಬಿ ಬಾಜಿಸುವ ವಾದ್ಯಂ ಶೌಷಿರಂ
ಸಂತಾಳದಲ್ಲಿ ನಂಡಿಸುವದುಂ ಘನಕಾಯಿಕರ
ವಂ ತಾನ ಮಾನದಿಂ ವರ್ತಿಸಲ್ ಗೀತವಿದ
ಸಂತರೆಂ[1]ಬ[1]ರು ಮಹಾವಾದ್ಯಪಂಚಕವೆಂದು ಸರ್ವಶಾಸ್ತ್ರಂಗಳೊಳಗೆ ೩೩

ಅವರವರೊಳಿನಿತಿನಿತು ಮೋಸಮಾಗದ ಹಾಗೆ
ವಿವರದಿಂ ವಾದ್ಯಶುದ್ಧಿಯನೈದಿ ಕೇಳಿಸಲ್
ಶಿವನ ಸನ್ನಿಧಿಯಲ್ಲಿ ಭಕ್ತನಾದವನವಗೆ ಪರಲೋಕದೊಳಗೆ ಬರುಪ
ವಿವಿಧಫಲರಾಜಿಯಂ ಪರಿಗಣನೆಯಿಂ ಪೇಳೆ
ಶಿವನೊಬ್ಬನೇ ಬಲ್ಲನಲ್ಲದೇ ಮಿಕ್ಕವರಿ
ಗವಗಾಹಿಸಲ್ ಸಾಧ್ಯಮೆಂದರಾತನ ಬಾಯೊಳಾಗದೇ ಕ್ರಿಮಿಸಂಕುಲಂ ೩೪

ಚಂದನಾಗರು ಚಂದ್ರಕುಂಕುಮಂಗಳು ನಾಲ್ಕಿ
ಮಿಂದುಧರಗಂ ಶೈವನಾಮಕಪುರಾಣದೊಳ
ಮಂದಸಂತೋಷಪ್ರದಂಗಳೆಂದುಸುರಿದುದು ಶಾರದಾತಿಲಕದಲ್ಲಿ
ಚಂದನಾಗರು ಹಿಮ ತಮಾಲದಳ ಕುಂಕುಮ ಕ
ಬಂಧನಖಿಕೋಷ್ಠಂಗಳೆಂಟುಪ್ರಿಯತಮಂಗಳಿಂ
ತೆಂದುದಾ ಕಾಮಿಕಾಗಮದಿ ಗಂಧವ ನೋಡಿ ಚಂಡನಂ ದ್ವಿಗುಣಮಹುದು ೩೫

---

1 ಬ (ಗ)

ಇದರಿಂದಲೆಂಟುಮಡಿಯಗರು ಕೃಷ್ಣಾಗರುವೆ
ಯಿದರಿಂದ ಮೂರುಮಡಿಯಸಿತಾಗರವ ನೋಡ
ಲದರಿಂದ ಪತ್ತುಮಡಿ ಕುಂಕುಮಾಗರು ಕುಂಕುಮಾಗರುವಿಗೆಂಟುಮಡಿಯು
ಸದಮಲದ ಕೇಸರಗಳಿಂದಿವರ ನವ್ಯಚೂ
ರ್ಣದಲಿ ಶಂಕರಗೆ ಗಂಧಾನುಲೇಪನವೊಡ
ರ್ಚಿದವನೈದುವನಖಿಲಭವಭವಾಂತ[ರ]ದ ಪಾಪವನು[1]ಳಿ[1]ದು ಶಿವಲೋಕವಮಂ ೩೬

ಬೆಲ್ಲವತ್ತವು ದೇವದಾರು ಕಕ್ಕೆಯ ಕೊರಡು
ಪೊಳ್ಳಿತ್ತೆನಿಪುದು ಕೇಸರದೊಡನೆ ಗಂಧಮಂ
ಮೆಲ್ಲಿತ್ತೆನಲ್ ತೇಗೆದು ಶಿವನಿಗರ್ಪಿಸುವಲ್ಲಿ ಕಸ್ತೂರಿಯಂ ಕೂಡಿರೆ
ವಿಲ್ಲವಾಸನೆಗೆ ಮೇಲೆನಿಸುವಂಬರದೊಡನಿ
ವೆಲ್ಲಮಂ ಕೂಡಿ ಪಿಷ್ಟಾತಕ[ಂ]ಮಾಡಿಯುದ
ರಲ್ಲಿ ನಿಶೆಯಂ ಬೆರಸಿದುಂಟೆಯನುಲೇಪನಂ ಶಿವನಿಗತ್ಯಂತ ಸುಖದಂ ೩೭

ಇನ್ನಕ್ಷತದ ವಿಧಾನವ ಕೇಳು ಸಿತವಾಗಿ
ಸಣ್ಣನಾಗಗ್ರದೊಳ್ ಕೊರತೆಯಿಲ್ಲದ ಶಾಲಿ
ಯನ್ನು ಶಿವಗರ್ಪಿಸಂವುದುತ್ತಮಂ ಕಲ್ಪಾಂತರದಲಿ ಪೇಳಲ್ಪಟ್ಟುದು
ಚೆನ್ನಾಗಿ ರಕ್ತಾಕ್ಷತಗಳುತ್ತಮಗಳೆನ್ನು
ತಿನ್ನಿದಕೆ ಶುದ್ಧ ನಿರ್ಮೃಷ್ಟ ತಿಲಮಂ ಬೆರಸಿ
ಪನ್ನಗಾಭರಣಗರ್ಪಿಸಿದರದರಿಂದಪ್ಪ ಫಲವನೆಣಿಸುವನಾವನು ೩೮

ಮೇಚಕ ಚತುರ್ದಶಿಯ ರಾತ್ರಿಯಲಿ ಮತ್ತಮಾ
ಮೇಚಕಾಷ್ಟಮಿಯ ರಾತ್ರಿಯಲಾರ್ದ್ರೆಯಲ್ಲಿ ಬಿಡ
ದಾಚರಿಸಿಯಕ್ಷತೆಯನರ್ಪಿಸಲ್ಕಧಿಕಫಲಮೆಂದಂದಾ ಶಿವರಹಸ್ಯ
ಸೂಚಿಸುವೆ ಪುಷ್ಪಾರ್ಚನೆಯಂದಿ ದಾನವ ಶಾಸ್ತ್ರ
ಗೋಚರವನಾಲಿಸೈ ಚಂಪಕಂ ದತ್ತೂರ
ಮೇಚಕೋತ್ಪಲ ಪಲಾಶಂ ಪಾಟಲಿಯ ಪಂಚಪುಷ್ಪಂಗಳುತ್ತಮಮಿವು ೩೯

ಪುಳಂಗಡಿತವಂಟದಿಹ ಮೊರಟಾಗದಿಹ ಕಂದಿ
ಬಳಲದಿಹ ಕಾಯಿ ಮೊಗ್ಗಾಗದಿಹ ಪೂವಿನಲಿ
ಬಿಳಿಯದಾವರೆಯ ಸುರಹೊನ್ನೆಯಂ ಶಂಖಪುಷ್ಪವನು ನಂದ್ಯಾವರ್ತಮಂ

1 ತಳಿ (ಕ)

ಬಿಳಿಯೆಕ್ಕೆಯಂ ಶ್ರಿಯಾವರ್ತಮಂ ಪೊಲ್ಲೆಯಂ
ಬಿಳಿಯನ್ನೈದಿಲ ಕಂಚಿಯಾಲಮಂ ಕುರವಕಂ
ಗಳ ಜಾಜಿಗಳ ವಕುಳಗಳ ಬಿಳಿಯ ಗುಳ್ಳಗಳ ಬಿಳಿದೆನಿಸುವುಮ್ಮತ್ತ[1]ವಾ[1] ೪೦

ದ್ರೋಣ ಗಿರಿಕಂಜಮಲ್ಲೀ ಲೋಧ್ರಮರ್ಪಿಪುದು
ಸ್ಥಾಣುವಿಂಗಿವು ಪುಷ್ಪಜಾಲದೊಳ್ ಧವಳಂಗ
ಳಾ ನೀಲಮಾದ ಚೆಂಗಣಿ[2][ಗಿಲುಂ] [2]ಕೆಂಗಣಿಗಿಲುಂ ಮುನಿಕುಸುಮರಾಜಿಯುಂ
ಶೋಣಾರವಿಂದಮುಂ ವ್ಯಾಘ್ರಪ್ರಸೂನಮುಂ
ಆಣಕಾನ್ಮತ್ತೋಡು ಪುಷ್ಪಂಗಳಿವು ಜಗದಿ
ಶೋಣಪುಷ್ಪಂಗಳಿವು ಹೇಮ ದುತ್ತೂರ ಚೋರಾರಗ್ವದ್ವಾಂಕೋಲಕಂ ೪೧

ಗಿರಿಕರ್ಣಿಕಾ ಖಿರಂಟಂ ವನ್ಯಚಂಪಕಂ
ಹರಿಚಂಪಕಂ ಪೀತಪುಷ್ಪಂಗಳಿವು ನೈಲ್ಯ
ಭರಮಾಂತ ಕುಸುಮಂಗಳ ಸಸಿಯುಂ ನೀಲೋತ್ಪಲಾಪರಾಜಿತೆಗಳಿಂತು
ಪರಿಪರಿಯ ಪುಷ್ಪಂಗಳೊಳ್ ಮನೋಹರವಾಗಿ
ಕರಕೆ ಮೃದುವಾಗಿ ದುರ್ಗಂಧಮಿಲ್ಲದೆ ಸುಕೇ
ಸರವಾದ ಕುಸುಮಂಗಳಾವಾದೊಡಂ ಶಂಭುವಿಂಗರ್ಪಿಸಲ್ ಯೋಗ್ಯವೈ ೪೨

ಬಿಳಿಯ ಕುಸುಮಗಳಿಂದ ಶಾಂತಿಯಾಗುವದು ಪಿಂ
ಗಲಕುಸುಮಜಾಲದಿಂದ್ಯೆಶ್ವರ್ಯರಾಜಿಯೊ
ಬ್ಬುಳಿಯಪ್ಪುದೈ ರಕ್ತಕುಸುಮದಿಂ ದುರ್ದೋಷ ವಾರಕ್ಕೆ ನಾಶಮಹುದು
ಮಲಿನವರ್ಣದ ಕುಸುಮದಿಂದಾಭಿಚಾರಮದು
ಫಲಿಸುವದು ಸಂಕೀರ್ಣಪುಷ್ಪದಿಂ ಸಂಕೀರ್ಣ
ಫಲಮೆಂದು ಯೋಗ್ಯತೆಯನರಿದವರ್ ಪೇಳುವರು ಶಿವರಹಸ್ಯದಲಿ ತಿಳಿದು ೪೩

ವರ ಪತ್ರ ಫಲಗಳಿಂದರ್ಚಿಸಲು ಯೋಗ್ಯವಾ
ಗಿರುವುದೊಂದೇ ಧರಿತ್ರಿಯಲಿ ಶಿವಭಕ್ತರಿಂ
ಸುರಪೊನ್ನೆಯೆಲೆಗಳಿಂದರ್ಪಿಸಲ್ ಜಾಲವೊಂದೇ ಯೋಗ್ಯವಾಗಿರ್ಪುದು
ಸರಸಿಜಂ ನಾಳದಿಂ ಬೆರಸಿ ಸೌಗಂಧಿಕಂ
ಹರಗೆ ಯೋಗ್ಯಂ ಸಮರ್ಪಿಸೆ ಮಿಕ್ಕ ಪೂವಿಂಡು
ತಿರಿದು ತಂದರ್ಪಿಸಲ್ ಯೋಗ್ಯಂ ಸವೃಂತಸಹ ಕೇಸರಂ ಪ್ರೀತಿಯಿಂದ ೪೪

---

1 ವಾ (ಗ) 2 ಲು (ಕಗ)

ನೀಲೋತ್ಪಲಕ್ಕೆ ಬೆಳ್ದಾವರೆಗೆ ಪಳಿತಿಲ್ಲ
ಮೇಲಾದ ಕುಸುಮಂಗಳಿಗೆ ಪೊಸತನುಳ್ಳಿರಿಯೆ
ನಿಲಲೋಹಿತಗಾಗದೆಂದಾಗಮಂಗಳುಸುರ್ವವು ಶೈವದಂತ್ರರವಹ
ಮೇಲಾದ ಘನತತ್ತ್ವಸಾರಸಂಗ್ರಹದಲ್ಲಿ
ಪೇಳಿಹುದು ಕಮಲವೊಂದಕೆ ಚಿರತ್ನತೆ ತಾರ
ಕಾಳಿ ಗಗನದೊಳಗಿರಂವನ್ನೆಗಂ ತೋರದೆಂದುದು ಶಿವಗದೇನಿಷ್ಟವೊ ೪೫

ಪಳಿದಾದೊಡಂ ಪಲಾಶಂಗಳಂ ಬಿಲ್ವಮಂ
ತೊಳಚಿಯಂ ಹೇಮಂಪುಷ್ಪಂಗಳಂ ಪ್ರತಿದಿನಂ
ತೊಳೆದು ಶಂಭುವಿಗರ್ಪಿಸುವುದೆಂದು ಪೇಳ್ವುದೈ ಸ್ಕಾಂದದಲಿಯೊಂದೊಂದರಿಂ
ಫಲವನೆಣಿಸಲ್ ಸಹಸ್ರಾಧಿಕವೆನುತ ಕುಸುಮಂ
ಗಳನು ಮಾರ್ಕಂಡೇಯ ಸುಪುರಾಣದೊಳಗೆ ಕೆಲ
ಕೆಲವ [1]ಪೇ[1]ಳಿಹಂದಾ ಪ್ರಸೂನಂಗಳಾವಾ[2][ವು ಎಂ][2]ದು ಮನವೊಂದಿ ಕೇಳು ೪೬

ಕರವೀರವದರಿಂದ ಸೇವಂತಿಕಾಕುಸುಮ
ಮರವಿಂದಮದಕಿಂದ ಶತಪತ್ರಮದಕಿಂದ
ಸರಸಿರುಹದೊಳಗೆ ಕಮಲಂ ನೋಡಲದಕಿಂದ [illegible]ಯದಕಿಂದ ವಕುಳಂ
ಪರಿಕಿಸಲ್ಕದಕಿಂದ ಮಲ್ಲಿಗೆಯಂದಕ್ಕಿಂದ
ವರ ಬಿಲ್ವಮದಕಿಂದ ಬಿಳಿಯಕ್ಕಿಯದಕಿಂದ
ಹೊರವಾದ ತುಂಬೆ ಸಾವಿರಮಡಿಯ ಫಲವಿಾವುದರ್ಪಿಸಲ್ಕಿಂದಂ[3]ಧರಗೆ[3] ೪೭

ಬಕಪುಷ್ಪಮರವಿಂದೀಂದಧಿಕಮದಕಿಂದ
ಸುಕಿತವಂ ಮತ್ತಮದಕೆ ಬೃಹತಿ ಮಂದಾರವೆಯ
ಧಿಕ ಮತ್ತದಕ್ಕದಕೆ ತುಂಬೆಯದಕುತ್ತರಣೆಯದಕೆ ಕುಶಪುಷ್ಪಮದಕೆ
ಸುಕರದಿಂ ಶಮಿಯಂದಕೆ ವೈಯಾಘ್ರಮದಕೆ ಶಂ
ಖಕಮದಕೆ ನಂದೀಶ್ವರಾವರ್ತಮದಕೆ ಮೇ
ಚಕದಳೀಂದ್ರಾಣಿಯದಕಂ ಸುವರ್ಣಪ್ರಸವಮದಕಿಂದ ನೀಲೋತ್ಪಲಂ ೪೮

ಗುರುತರಮಿದಕ್ಕಿಂದ [4]ಕುಸು[4]ಮವರ್ಗಂಗಳಲಿ
ಪರಿಕಿಸಲ್ಕಾವುದಾನೊಂದು ಕುಸುಮಂಗಳಿಲ್ಲ
ಪರತರಂ ಶಾಸ್ತ್ರಜಾಲಂಗಳಲಿ ಕೆಲರಿಲ್ಲ ನೀಲೋತ್ಪಲಕ್ಕೆ ನೋಡೆ

1 ಕೇ (ಕ) 2 ವೆಂ (ಕಗ) 3 ಶರಕೆ (ಕ) 4 ಸು (ಗ)

ಸರಿಯೆಂದುಡುಪ್ರಸವ [1]ಶಾಂಭವ[1]ಕದಂಬವಂ
ಸುರಹೊನ್ನೆಯಂ ತುಂಬೆಗಂ ಮರುಗ ದವನಮಂ
ಸರಿಯೆಂದು ಪೇಳುವರದಂತಿರಲಿ ನವರತ್ನಪೂಗಮುತ್ಪಲಸನ್ನಿಭಂ

ಇಂತೆಂದ ಶಿವಧರ್ಮದಲಿ ನಂದಿಯುಸುರ್ದಂ ನಿ
ರಂತರಾನಂದದಿಂ ಲೈಂಗ್ಯದೊಳಗಂಬಿಕೆಗೆ
ಕಂತುಹರನಂಸುರ್ದಂದವಂ ಕೇಳ್ವುದಂತುರಿತಮಾದುದು ಕಠಿಳಮಹುದು
ಚಿಂತಿಸದ ಬಳಿಯಲುದಿಸಿದುದು ಖರಗಂಧಂ ಜ
ನಾಂತರಾಘ್ರಾತಮಾದುದು ಭೂಪರೆತಮಾದಂ
ದಂತು ಪರ್ಯುಷಿತ ಯವನ ಸ್ಪೃಷ್ಟಮಾದುದು ಶಿವಾರ್ಚನೆಗಯೋಗ್ಯವೈಸೆ ೫೦

ಕಾಲಭೇದಗಳುಂಟು ಸಕಲ ಕುಸುಮಂಗಳಿಗೆ
ಯಾಲೋಕಿಸಲ್ಕೆ ಕರವೀರಕ್ಕೆ ಭೂಮಿಯಲಿ
ಕಾಲಭೇದಮದಿಲ್ಲ ಸರ್ವರ್ತು ಸಂಪುಷ್ಪಿತಮಿದಾಗಿ ರಾಜಿಸುವದು
ನೀಲೋತ್ಪಲಕ್ಕಿದನು ಸರಿಯೆಂದು ಕೆಲರಿಲ್ಲಿ
ಪೇಳುವರಿದೇ ಕುಸುಮದಿಂದೇಕಮಾಸವಾ
ನೀಲಲೋಹಿತನ ಪೂಜಿಸಿದವಗೆ ಭೋಗಮೋಕ್ಷಂಗಳಾಗುವದು ಸಿದ್ಧಂ ೫೧

ಕೆಂಗಣಿಗಿಲಿಂದರ್ಚಿಸಲು ಭೋಗ ಸಿದ್ಧಿಪುದು
ಪಿಂಗಲದ ಹಯಮಾರಕದಲೀಶತೆಯುಂ ಬಹುದು
ತಿಂಗಳಿನ ಧಾಳದಂದದಲಿರುವ ಚಂಡಾತಕದಲಿ ಹರನಂ ಯಜಿಸಲು
ಮಂಗಲ ಸದಾಶಿವಸ್ಥಾನದೊರಕುವದೆರಡು
ರಂಗಿನಲಿ ಮೆರೆವ ಕರವೀರದಿಂದರ್ಚಿಸಲು
ಗಂಗಾಧರನದಿಲ್ಲ[ದ]ಂತಿಯುತನಾಗುವಂ ಸ್ಕಾಂದೋಕ್ತಮಿದಂ ಭಾವಿಸೆ ೫೨

ಪಟ್ಟೆ ಕಾರ್ಪಾಸ ರಂಭಾಸೂತ್ರದಿಂದ ನೆರೆ
ಕಟ್ಟಿ ಮಲ್ಲಿಗೆ ಜಾಜಿ ಮೊಲ್ಲೆಯಿರುವಂತಿಗಳ
ಕಟ್ಟಾಣಿ ಸಂಪಿಗೆಗಳಂ ದಿವ್ಯಹಾರದಂದದಿ ಮಾಲೆಯಂ ಶಿವನಿಗೆ
ಕೊಟ್ಟರಾತಂಗೆ ಸಪ್ತದ್ವೀಪದಿಂ[2] [ದಮಳ
ವ][2]ಟ್ಟ ಭೂಮಿಯನಾಳ್ವ ಸಾಮ್ರಾಜ್ಯಪತ್ಟಕನಕ
ಪಟ್ಟಮಾತನ ಲಲಾಟದಿ ರಾಜಿಸುವದೆಂದು ಪೇಳ್ದುದು ಹಲಾಯುಧಮತಿ ೫೩

---

1 ಶಂಭಕ (ಗ) 2 ದ (ಕ) ದಲ (ಗ)

ಪತ್ರಂಗಳಾವಾವೆನಲ್ಕೆ ಹರನಿಗೆ ಬಿಲ್ವ
ಪತ್ರೆಯೇ ಮುಖ್ಯಮಂದರಂದದಿಂ ಯೋಗ್ಯಮಹ
ಪತ್ರಮಾವಾವುದೆನಲಂಕೋಲೆ ತೊಳಲಿ ಮರುಗಂ ಬನ್ನಿ ದವನ ಮಾವು
ಉತ್ತರಣೆ ಗರಿಕೆ ಗೌರಿಯದರ್ಭೆಯುಂ ಮಂಚಿ
ಪತ್ರೆ ಸೇವಂತಿಗೆಯು ಗರುಗ ನೇರಿಲುಯಸುಗೆ
ಧಾತ್ರಿಯಂ ಧಾತಕಿ ಸದಾಭದ್ರಮುಂ ತವಸಿ ಇಂದ್ರಾಣಿಯಪರಾಜಿತೆ ೫೪

ಇವನುಳಿದಂ ವನದೊಳಗೆ ನೇತ್ರಕೌತಂಕಮಾಗಿ
ನವಮಾಗಿ ನಳನಳಿಕೆಯಿಂದೊಪ್ಪಿ ಪುಳುವಿನಿಂ
ವಿವರವಾಗದೆ ದುಷ್ಟಗಂಧವಿಲ್ಲದೇ ಮುರಂಗಟ್ಟಿ ಮೊರಟಾಗದಿರುವ
ನವ ಪಲಾಶಂಗಳಾ[ವಾ]ವಾದೊಡಂ ಪಿಡಿದು
ಶಿವನ ಪೂಜಿಸತಕ್ಕುದೆಂದಂ ಪೂರ್ವಾಚಾರ್ಯ
ರು ವಿಶೇಷಮಾಗಿಯಂಗೀಕರಿಸಿ ನಡೆಸುತಿರ್ಪರು ಮೇಣಿದೇ ಪ್ರಮಾಣಂ ೫೫

ಕರಮರ್ದ ಶಂಖಿನಿ ಕಪಿತ್ಥ ನಿರ್ಗುಂಡಿಯುಂ
ಗಿರಿಚೂತಮುಂ ಪಂಚಬಿಲ್ವಮೆಂದೆನಿಸುವದು
ಹರನರ್ಚನೆಗೆ ಯೋಗ್ಯಮಿದಂ ಬೇರ್ಗಳೊಳಗೆ ಲಾವಂಚ ಮುಂಡಿವಾಳ ಯೋಗ್ಯಂ
ದೊರಕದಿರಲಿವು ಪುಣ್ಯಧಾನ್ಯನಾಳಂಗಳಿಂ
ಹರನ ಪೂಜಿಪುದೆಂದು ಪೇಳಿರ್ಪುದಾಗಮದಿ
ಪರಮ ತಾತ್ಪರ್ಯಮಿದಕಾವುದೆನಲೆಂತಾದಲೀಶನಂ ಪೂಜಿಸುವದು ೫೬

॥ ಸಾಕ್ಷಿ ॥ ಶ್ಲೋಕ ॥

ಪಶುಬನ್ಧ ಸಹಸ್ರಾಣೀ ವಾಜಪೇಯ ಶತಾನಿ ಚ
ಕೋಟಿಕನ್ಯಾ ಮಹಾದಾನಮೇಕಪುಷ್ಪಂ ಶಿವಾರ್ಪಣಂ ॥
ಪುಷ್ಪಂ ವಾ ಪತ್ರಮೇಕಂ ವಾ ಶಿವಸ್ಯೋಪರಿ ನಿಕ್ಷಿಪೇತ್
ಅಮನ್ತ್ರೋ ವಾ ಸಮನ್ತ್ರೋ ವಾ ಕುಲಕೋಟಿಂ ಸಮುದ್ಧರೇತ್ ॥

ಪೇಳಿಪಟ್ಟಂದದಿಂ ಧೂಪಪಾತ್ರೆಯ ಮಾಡಿ
ಕಾಲಾಗರುವ ಗಂಧಸಾರಮುಂ ಗುಗ್ಗುಲಂ
ಮೇಲೆ ಬಿಳಿಯಂಗಿಲರಗು ಬೆಲ್ಲವತ್ತಂ ಗೋಘೃತಂ ಸಜ್ಜರಸವು ಜೇನು
ಪ್ರಾಲೇಯಮಿವು ದಶದ್ರವ್ಯಂಗಳಿವರಿಂದ
ಪಾಲುಗೊಂಡೊಂದುಗೂಡಿದ ಪಿಷ್ಟಧೂಪದಿಂ
ಬಾಲೇಂದುಮೌಳಿ ಸಂತೃಪ್ತನಾಗುವನೆಂದು ಶಿವರಹಸ್ಯಂ ಪೇಳ್ವುದು ೫೭

ವೀರತಂತ್ರದಿಂ ಜಟಾವಶಾಂಸಿ ಗುಗ್ಗುಲ ಗಂಧ
ಸಾರ ಕೃಷ್ಣಾಗರುವಿವಂ ಕೂಡಿ ಸಮೆದ ಕ
ರ್ಪೂರ ಶೈಲೇಯ ನಖಿಕೋಷ್ಠ ಗೋಘೃತ ವೀರಣಂಗಳಂ ಭಾಗಮರಿದಂ
ಆರೈದು ಬೆರಸಲ್ ದಶಾಂಗಮೆಂದೆನಿಪುದು ಪು
ರಾರಿಗೀ ಧೂಪದಿಂದತ್ಯಂತಸಂತೋಷ
ಮೋರುಗುಡಿಸುವುದಿದಂ ಕೃಷ್ಣಾಷ್ಟಮೀ ಚತುರ್ದಶಿರಾತ್ರಿಯೊಳಗೀಯಲು ೫೮

ಗಿರಿಜಾಧವಂಗಾ ಫಲವನಾರಂ ಗಣಿಪರೆಂ
ದರು ಪುರಾತನರು ದೀಪಾರಾತ್ರಿಕೆಯ ಶಾಸ್ತ್ರ
ಮೊರೆದಂತೆ ಚಿನ್ನದಿಂ ಬೆಳ್ಳಿಯಿಂ ಹಿತ್ತಾಳೆಯಿಂ ತಾಮ್ರದಿಂಗೈವುದು
ದೊರೆಕೊಳ್ಳದಿರಲಿವು ಸುಧಾನ್ಯಪಿಷ್ಟಂಗಳಿಂ
ವಿರಚಿಪುದದೆಂತೆನಲ್ ನಾಗಾಕೃತಿಯೊಳೆಸೆಯೆ
ಕರಿ ತುರಗ ರಥ ಗೋಪುರಚ್ಛತ್ರ ಪದ್ಮಂಗಳಾಕೃತಿಯಿನಿಂಬುಗೊಂಡು ೫೯

ಒಂದು ಮೂರೈದುಯೆಂಟಾದಿಯಾಗಿಹ ಪಲವು
ಛಂದದಿಂದೆಸೆವ ಮೊಗಗಳಲಿ ಶುಭವರ್ತಿಗಳ
ಹೊಂದಿಸುತ ಶೈಲವಾಧುಷ್ಟಿಲ್ಯೆ[1]ರಂ[1]ಡ ತೈಜಸಂಗಳ ತೋಯಿಸುತ್ತಂ
ಇಂದುಶೇಖರನ ನಿಜಭಕ್ತಿಯಿಂ ಬೆಳಗಿದನ
ತಂದೆಯಿಂ ತಾಯ ಜಠರಕ್ಕೆ ಬರನೆಂತೆಂದು
ನಂದೀಶ್ವರಂ ಶಿವರಹಸ್ಯದಲಿ ಶಿವನೆ ಲೈಂಗ್ಯದಲಿ ಚೆನ್ನಾಗಿ ಪೇಳ್ದಂ ೬೦

ಕಪ್ಪುರವ ಪೊಂದಟ್ಟೆಯೊಳಗಿಟ್ಟು ಬೆಳಗಲಾ
ಕಪ್ಪುಗೊರಳನ ಸಕಲದಿಕ್ಕುಗಳೊಳೊಡೆಮೆರೆದ
ಕಪ್ಪುಗಳ ತಂತಮ್ಮ ನಿಜದೇಹಕಾಂತಿಯಿಂ ಕಡೆಗಣಿಪರೆಂದುಸುರ್ದುದಂ
ಮುಪ್ಪುರವಗೆಯುನ ಬೋಧಿಸುವ ವಿಮಳಾಗಮಂ[ಗ]
ಳೊಪ್ಪಚ್ಚಿ ಚೌರ್ಯಮಂ ಹಂಚಿಕೊಳಬೇಕೆಂದಂ
ದುಪ್ಪಟಿಯ ಸೆರಗವರ್ತಿಯ ಮಾಡಿ ಕತ್ತಿಸಲ್ಕವಗಾದುದೀಶ್ವರಪದಂ ೬೧

ಇನ್ನು ನೈವೇದ್ಯರೀತಿಯ ಕೇಳು ಶ್ವೇತಶಾ
ಲ್ಯನ್ನತವ್ರೀಹಿ ಶೋಣಾಸಿತವ್ರೀಹಿಗಳು
ಚೆನ್ನಾದ ನೀವಾರ ಗೋಧೂಮ ವೇಣುಪ್ರಿಯಂಗುಮೇ ಎಂತೆಂಬವೆ

---

ದಂ (ಕ)

ಪನ್ನಗಾಭರಣನಾರೋಗಣೆಗೆ ನವವಿಧದ
ಧಾನ್ಯವಿವು ಮತ್ತಮಿವರೊಳು ದೋಷಮೆಂಬುದಂ
ತ್ಪನ್ನಮಾಗದ ತೆರದಿ ಶೋಧಿಸಿದ ತಂಡುಲವನಿಬ್ಬಳ್ಳದಿಂ ಕಡಮೆಯಂ ೬೨

ಮಾಡಲಾಗದು ಶಿವನ ನೈವೇದ್ಯಕಿದರಲ್ಲಿ
ನೋಡೆ ಪರಮಾನ್ನಂ ಹರಿದ್ರಾನ್ನ ದಧ್ಯನ್ನ
ಕೂಡೆ ಕೃಶರಾನ್ನಂ ಗುಡಾನ್ನ ಮುದ್ಗಾನ್ನವೆಂದಾರುವಿಧಮಿಶ ನಿನಗೆ
ಗಾಢ ಸಂತೋಷಜನಕಂ ಸೂಕ್ತರೀತಿಯಿಂ
ಮಾಡಿಯರ್ಪಿಸಲವಂಗಪ್ಪುದಭಿಮತವೆನು
ತ್ತಾಡಲೇನಿನ್ನನ್ನಮಯಶರೀರಂದಾಳಿಬರನಿಳಿಗೆನುವದೇ ಸತ್ಯಂ ೬೩

ಸೂಪಕ್ಕೆ ತುವರಿ ಚಣಕ ಮುದ್ಗಂಗಳಿಗೂಡ
ಲಾಪವು ವಿಮ್ಮೃಷ್ಟಂಗಳಾಗಬೇಕಿವು ವರಾ
ಪೂಪಂಗಳಿಗೆ ರಾಜಶಾಲಿ ಗೋಧೂಮ ಸನ್ಮಾಷ ಮುದ್ಗಂಗಳಹವು
ಓಪ ಪಣ್ಗಳಲಿ ಇವಮ್ರಾವು ನೇರಿಲು ಹಲಸು
ಕಾಪಿತ್ಥ ದಾಳಿಂಬ ತೆಂಗು ಜಂಬೀರ ಲಿಕು
ಚಾ ಪಾಂಡು ರಂಭಾದಿ ಯೋಗ್ಯಫಲರಾಜಿಯೇ ಶಿವನಿಗರ್ಪಿಸೆ ಸಲ್ಲುದು ೬೪

ಶಾಕವರ್ಗದಲಿ ಸೂರಣಮುಖ್ಯಕಂದ ವೃಂ
ತಾಕದಲಿ ಬಿಳಿದಾಗದಿಹುದು ಪಡವಲವು ಮ
ತ್ತಾಕಾರದಲ್ಲಿ ಯುದ್ದ [ಮು]ರುಕಂ ತದ್ಭೇದಮುಂ ಬೃಹತಿಕಾ ಭೇದಮುಂ
ಜೋಕೆಯಿಂ ಹೀರೆ ಕುಂಬಳಗಳಿವು ಮುಂತಾದ
ನೇಕ ಫಲರಾಜಿಗಳ ಶಾಸ್ತ್ರೋಕ್ತಮಾರ್ಗದಿಂ
ಸ್ವೀಕರಿಪುದೀಶನರ್ಚನೆಗೆ ಪರಿಶುದ್ಧತೆಯನೆಲ್ಲದರೊಳಾರೈವುದು ೬೫

ಲವಣಾಮ್ಲ ಮರಿಚಂಗಳಂ ಪುರಸ್ಕರಿಸಿಕೊಂ
ಡವು ಧರಿತ್ರಿಯಲಿ ಸಂಭಾರವಸ್ತುಗಳಂ ಸಾ
ಸುವೆ ಜೀರಕಂ ಜಾತಿಫಲ ಜಾಯಿಪತ್ರ ಕುಸ್ತುಂಬುರು ಲವಂಗಪುಷ್ಪಂ
ಇವರೊಳಗೆ ರಾವಂತಂಗೂಡಿದೆಣ್ಣೆಗಳ ಕಾ
ರವನಾಂತ ಸದುಪದಂಶಂಗಳಂ ಶಿಖರಿಣಿಯ
ಸವಿಯ ಕೆನೆಹಾಲು ಕೆನೆಮೊಸರು ಪೊಸಬೆಣ್ಣೆಯಂರೆಗಡೆದ ಮಜ್ಜಿಗೆ ಪಾನಕಂ ೬೬

ಗಿರಿಜಾ ಸಹಾಯಂಗೆ [1]ಕೊಡಲಪ್ಪ ವಿಪ್ಪಾರ[1]
ಕರಣವೆಪ್ಪೆರದೊಡಾ ಪಾಕದಲಿ ತೈಲದಿಂ
ಮರುತಸಖನಿಂ ನೀರಿನಿಂ ಕ್ಷೀರದಿಂ ಗುಡವಿಶೇಷದಿಂದ್ಯೆದೆನಿಪುದಂ
ಧರೆಯೊಳಗೆ ನೈವೇದ್ಯಮಿಂತು ಶಾಸ್ತ್ರೋಕ್ತದಿಂ
ಹರಗಿತ್ತವಂಗೆ ಭಕ್ತಿಯೊಳಾವ ಫಲವೆನಲ್
ಹರನೆ ತಾ ಬಲ್ಲನೆಂದೆನಬೇಕು ಮಿಕ್ಕವರ ಕೇಳಲೇನೀ ವಿಷಯಂದಿ ೬೭

ಮುತ್ತಿನಿಂದಾದ ಸುಣ್ಣವನು ಪೊಂದಾವರೆಯ
ಪತ್ರದಂತೆಸವ ಫಣಿವಲ್ಲಿಯಂ ನಿರ್ದೋಷ
ರತ್ನದಂತೆಸೆವ ಪೂಗೀಫಲವನರ್ಪಿಪುದು ಚಂದ್ರಾರ್ಧಶೇಖರಂಗೆ
ಉತ್ತಮ ಲವಂಗ ತಕ್ಕೋಲ ಜಾತೀಫಲಂ
ಮತ್ತೆ ಸೌಗಂಧಿಕ ಸಿತಾಭ್ರಂಗಳೆಂಬ್ಯೆದು
ವಸ್ತುವಂ ಖಾದಿರಂಗೂಡಿ ಮುಖವಾಸನವುನರ್ಪಿಸುವದೀಶ್ವರಂಗೆ ೬೮

ರಾಗಾದಿ ದೋಷಂಗಳಳಿದು ಸಾಂಸಾರಿಕ[2]ದ[2]
ಭಾಗವಾಸನೆಯ ಪೊಂದಡೆ ಪರಮಶಿವನ ದಿ
ವ್ಯಾಗಾರವುಂ ಸೇರಿ ಗಣಪದವನ್ಯೆದಿ ಸುಖದಿಂದಿರ್ಪರಾ ಭಕ್ತರುಂ
ಆಗುವದು ಗಂಧದಿಂದಾಯುಷ್ಯಮಂಕ್ಷತದೊ
ಳಾಗುವದಂ ಶತ್ರುಹತಿ ಧೂಪದಿಂದಘನಾಶ
ಮಾಗುವದು ದೀಪದಿಂ ಮೃತ್ಯುಹತಿ ನೈವೇದ್ಯದಿಂದ ಸಾಮ್ರಾಜ್ಯಮಕ್ಕುಂ ೬೯

ಕೇಡಿಲ್ಲದಿಹ ಪದವಿ ತಾಂಬೂಲದಿಂದಲೊಡ
ಗೂಡುವದು ಪರಮೇಶ್ವರಂಗೆ ಕಾರ್ಪಾಸದಿಂ
ಮಾಡಿರಲಿ ಸೂಕ್ಷ್ಮತಂತುಗಳಿಂದ ಸಾಂದ್ರತೆಯನೊಡಗೊಂಡು ಗೋಕ್ಷೀರದ
ಬೀಡಿನಂದದಿ ಧವಳವಾಗಿರ್ದ ವಸ್ತ್ರಮಂ
ನಾಡಿಗುತ್ತಮವನರ್ಪಿಪುದಂ ಸರಿಗೆಯ ಕೆಲಸ
ವೀಡಿರಿದಿರಲ್ಕಂಚುಗಳಲಿ ಸೆರಗಿನಲಿ ಗರ್ಭದಲಿ ಮೇಣತ್ಯುತ್ತಮಂ ೭೦

ರಾಂಕವಂ ಸ್ವರ್ಣಬಿಂದುಗಳಿಂದ ಕೂಡಿರಲ್
ಶಂಕರಂಗತಿಹಿತಂ ಪಟ್ಟುವಸ್ತ್ರಂ [3]ನುಣು[3]ಪ
ನುಂ ಕೂಡಿ ಮೇಲಾದ ಪಂಚವರ್ಣಂಗಳಿಂದೊಪ್ಪಿ ಮಂತ್ರಾವರ್ಣದ

---

1 ಇಡಲಪ್ಪವಿಪ್ಪರಲಿ (ಕ)2 ದೆ (ಗ) 3 ನಣಿ (ಗ)

ಸಂಕರದ ರಂಗಿನಿಂ ಕಣ್ಗೆ ಮಂಗಳವೆನಿಪು
ದಂ ಕಪರ್ದಿಗೆ ಸಮರ್ಪಿಪುದು ಸುಕ್ಷಾಮುಮಂ
ಪಂಕಜಾಹಿತ ಕಲಾಚೂಡಂಗೆ ಕೊಡಲಿವರ ಫಲಮಾವಮಂ ಬಣ್ಣಿಪಂ ೭೧

ಅಪರಂಜಿಯಿಂದಲೇ ಸರಿಗೆಯಂ ತೆಗೆದು ಗೈ
ದು ಪವಿತ್ರಮಂ ಭವಾನೀಧವಂಗರ್ಪಿಪುದು
ಕಪಟಮಿಲ್ಲದ ಚೊಕ್ಕಬೆಳ್ಳಿಯಿಂದಾದೊಡಂ ಮಾಡಿ ಸಮರ್ಪಿಸುವುದು
ನಿಪುಣನಾದವ ಕೃಷ್ಣಕಾರ್ಪಾಸದಿಂದ ಗೈ
ದು ಪವಿತ್ರಮಂ ಪಾರ್ವತೀಪತಿಗೆ ಕೊಡುವು[1][ದಪ
ಲಪಿಸದೇ][1] ಸಕಲವೇದಂಗಳುಂ ಬರುವದೇ ಬೀಜವೆಂದರು ಮುನಿಗಳು ೭೨

ಹೇಮಮಯ ದಂಡದಿಂ ರತ್ನಮಯ ಕಳಶದಿಂ
ಸೋಮನಂತೆಸೆವ ಪಟ್ಟಾಂಬರದ ಬಟ್ಟಿನಿಂ
ಸೋಮನಿನಿಯಕ್ಕಳನ್ನಿಳಿಕ್ಕೈವ ಪೊಸಮುತ್ತಿನೊತ್ತರದ ಕಂ[ಡರಣೆ]ಯಿಂ
ರಾಮಣೀಯಕಮಾದ ದಿವ್ಯಾತಪತ್ರಮಂ
ಸೋಮಶೇಖರನಿಗೆ ಸಮರ್ಪಿಸಿದವಂ ಸಾರ್ವ
ಭೌಮನಾಗುವನೆಂದು ಪೇಳಲೇಂ ಸಿದ್ಧಕ್ಕೆ ಸಾಧನಾಂತರಮಕ್ಕುಮೆ ೭೩

ರತ್ನಮಯದಂಡದಿಂ ಕಾಶಸನ್ನಿಭಮೆನಿಸು
ವುತ್ತಮ[ದ] ಚಮರೀಮೃಗದ ವಾಲಮಂ ಪೊಂದಿ
ಸುತ್ತ ಶಂಕರನಿಗರ್ಪಿಪುದ ಚಾಮರವನುಭಯುವ ಮರಳಿ ಪೊಸತೆನಿಸುವ
ಕಾರ್ತಿಕೇಯನ ವಾಹನದ ಗರಿಯ ಕಣ್ಗಳೇ
ಬಿತ್ತರಿಸಿ ಮೊದಲಿಂದ ಕಡೆತನಕಲೆಸೆಯಲು
ಮೃತ್ತ ಪೂಮಾಳ್ಕೆಯಿಂದಿರ್ಪ ಚಾಮರಯುಗವನರ್ಪಿಪುದುಮಾಧವನಿಗೆ ೭೪

ಬಹುಳಪಕ್ಷದ ತದಿಗೆಯಿಂದುವಾಕಾರಮಂ
ವಹಿಸುತಿಹ ರನ್ನಗೈಪಿಡಿಯಿಂದ ರಾಣಿಸಂವ
ವಿಹಿತ ಹೈರಣ್ಮಯ ಪೃಷದ್ಗರ್ಭಮಾಗಿಯಂಚಿನಲಿ ಚಂದ್ರಕರಾಜಿಯಂ
ಆಹಹ ನೋಳ್ಪರ ನೋಟಮಂ ಸೆಳೆವ ವ್ಯಜನಮಂ
ಮಹಿತ ಸಿಂಹಾಸನಾಸೀನಂಗುಮೇಶನಿಂ
ಗಹರಹಂ ಪೂಜಾವಸಾನದೊಳಗರ್ಪಿಪುದು ಸಮ್ಮೋದಭಕ್ತಿಯಿಂದ ೭೫

---

1 ದ...ರಿಸದ (ಕಗ)

ಪಾರಿಜಾತಪ್ರಸೂನಗಳಿಂದ ಸುತ್ತುವರಿ
ಗೋರಣಿಸಿದ ವ್ಯಜನಮಂ ಪಿಡಿದು ಶಾಂಭವದ
ನಾರಿಯರು ಬೀಸುತ್ತಲಿರಲಿಕ್ಕೆಲದಿ ಶಾಂಭವೀಸಖಿನ ಪುಷ್ಪಗಣದಿಂ
ಮಾರುತಂ ತೀಡೆಯೆಡೆದೆರಹಿಲ್ಲದೆರಗಂತಿರು
ವಾರಡಿಗಳಂ ಬೀಸಿ ಕರೆದರೋ ಪೊರಬೀಸಿ
ನಾರಂಭದಿಂದಲಟ್ಟಿದರೊ ತಿಳಿಯಲ್ಕಾಪರಾರೆಂದು ಚಿಂತಿಸುವುದಂ ೭೬

ಉತ್ತಮಂದ ಕೆಂಪುಗಳ ಸಾಲಿಂದಲೊಡಗೂಡಿ
ಮಂತ್ತುಗಳ ನಾಲ್ದೆಸೆಯ ಚೌಕಗಳ ಪಟ್ಟಿಯಲಿ
ಕೆತ್ತಿದ ಸುದರ್ಪಣವನರ್ಪಿಸುವುದೀಶ್ವರಗೆ ಮಿಗೆ ಯಥಾಮುಖಬಿಂಬಮಂ
ಮಂತ್ರಿದರೊಲೆಣಿಸುವರ್ ಕೆಲರು ಬಟ್ಟೆನ ರೂಪ
ಮೆತ್ತಿರುವುದಾವುದಾ ದರ್ಪಣಕೆ ಪೃಷ್ಠದೊಳ್
ಬಿತ್ತರದ ವೃಂತಮುಳ್ಳದನಾಗಿ ನಿಷ್ಕಳಂಕೆಂದು ಸಂಕಾಶಮಾಗಿ ೭೭

ಆಮೇಲೆ ಶಂಕರನ ಲೀಲಾಚರಿತ್ರಯಂ
ಪ್ರೇಮದಿಂದುಚ್ಚರಿಪ ಶುಭತರಪುರಾಣಗಳ
ರಾಮಣೀಯಕ ವರ್ಣಸಂದರ್ಭಮುಳ್ಳ ಶಯ್ಯಾರೀತಿಯಿಂದೊಪ್ಪುವ
ನೇಮದಿಂ ತೊಲಗದಾ ಛ್ಲೇಕ ಯಮಕಾದಿಗಳ
ಕೌಮಾರದೆಸೆಯನೊಳಕೊಂಡ ಸುಶ್ಲೋಕಗಳ
ಹೈಮವತ್ಯರ್ಧಾಂಗನಿದಿರಿನೊಳ್ ವಾಚಿಪುದು ಲಯಮಾರ್ಗಮಂ ತಪ್ಪದೆ ೭೮

ಹಗಲಿನಾರಾಧನೆಯ ಕಾಲದೊಳ್ ಪಾಡುವುದು
ಪಗಲಾಣ್ಮನಂಶುಸಂಭೂತ ರಾಗಂಗಳಿಂ
ಪಗಲೋಸರಿಸಿದ ಕಾಲದಲಿ ಮುನ್ನೀರಕೂಸಿನ ಕದಿರಿನಿಂ ಪುಟ್ಟಿದ
ಬಗೆಬಗೆಯ ರಾಗಂಗಳಿಂದ ಪಾಡುವುದು ಗ್ರಾ
ಮಗಳನಾರ್ೈದು ಕಳೆಗಳನು ಸಂಚರಿಪಾಗ
ತಗಲದಂದದೊಳನ್ಯಕಲೆಗಳಲಿ ಶಬ್ದಾಮೃತವನು ಸಂಪಾದಿಸುತ್ತ ೭೯

ಆರಭಿಯ ನಾಟಿಯ ವರಾಳಿಯಂ ಗೌಳಮಂ
ಭೈರವಿಯ ತೋಡಿಯಂ ಶಂಕರಾಭರಣಮಂ
ಸಾರಂಗಮಂ ನಾದ[1]ನಾ[1]ಮಕ್ರಿಯೆಯ ಗುಂಭಕಾಂಬೋಧಿಯಂ ಕಾಪಿಯಂ

---

1 ರಾ (ಗ)

ಗೌರಿಯಂ ಮಲಹರಿಯ ದೇಶಾಕ್ಷಿಯನ್ನು ಕೇ
ತಾರ ಗೌಳವನು ಮಧುಮಾಧವಿಯ ಗುಜ್ಜರಿಯ
ಮಾರವಿಯನಾಹರಿಯ ಪೂರ್ವಕಲ್ಯಾಣಿಯಂ ಸಾವೇರಿಯಂ ಸಾಧಿಸಿ ೮೦

ಉಳಿದ ರಾಗಂಗಳಂ ಮೇಳೈಸಿ ವೀಣೆಯಂ
ಲಲಿತಮೆಂತಂತೆ ಪಾಡುವುದಂ ಶ್ರೀಕಂಠನಿದಿ
ರಲಿ ಕಂಬಲಾಶ್ವತರರೀಗಾನ ಸೇವೆಯಿಂ ಕರ್ಣಾಭರಣಪದವಿಯಂ
ಸಲೆ ಪಡೆದಲೀಶ್ವರನ ಸಕಲವಾದಿಂದ್ರಿಯಂ
ಗಳಲಿ ಕರ್ಣೇಂದ್ರಿಯವೆ ಮುಖ್ಯಮದು ಶಬ್ದಮಂ
ಬಲಘು ವಿಷಯಮನುಳ್ಳ ಕಾರಣಂ ತದ್ಬೀಜಮಾಕಾಶಮಾದ ದೆಶೆಯಿಂ ೮೧

ಪಾದುಕಾದ್ಯಖಿಲೋಪಕರಣಂಗಳಂ ಕಿರೀ
ಟಾದಿ ಭೂಷಣಗಳಂ ಪಟ್ಟಮಯ ಪೀತಾಂಬ
ರಾದಿ ವಸ್ತ್ರಂಗಳಂ ಮಾಲಮಾಲಿ[ಕ್ಯಾದಿ]ಮುಖ್ಯಮಾಲಾರಾಜಿಯಂ
ಕೈದುಮಂ ರತ್ನಖಚಿತವಹ ವಾಹನಗಳನ
ತ್ಯಾದರದೆ ಪತ್ರಂಗಳಂ ತಂಪಿನಿಂಪಿನಾ
ಮೋದಮುಳ್ಳ ಸುಗಂಧಪಂಕಮಂ ಪರಮೇಶ್ವರಾಂಘ್ರಿಗೆ ಸಮರ್ಪಿಸುವುದು ೮೨

ಕಾಲದೇಶಂಗಳಾರಯ್ಯಲಾಗದು ಧನಂ
ಮೇಳೈಸಿದಾಗಲೇ ಪರಮೇಶ್ವರಂಗಾವ
ಲೀಲೆಗಾವಾಭರಣ ವಸ್ತ್ರವಾಹನ ಮಹೋತ್ಸಾಹಂಗಳಾವಶ್ಯಮೊ
ನಾಲಿಗೆಯು ತನಗೆ ನಡೆವಷ್ಟರೊಳ್ ಮಾಡುವುದು
ಶೂಲಪಾಣಿಯ ಪೂಜೆಯಂ ನೆಂಟನಪ್ಪನೇ
ಕಾಲತನುವೇ ತನ್ನ ಕೈಯಡಕದೊ[1]ದ[2]ವೆಯೇ ತಿಳಿದು ನೋಡೈ ಮುನೀಂದ್ರ ೮೩

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದಪೌರಾ[3]ಣಿಕಾ[3]ಗಮಾದ್ಯಖಿಳ ವರ
ಮತಶಾಸ್ತ್ರಮಂಜಳಸುಪುರಂಜರಂಜಿತ ಪುರಾತನ ವಚನಸಮ್ಮತವಹ
ಅತಿಶಯಂ ಮಹಾಲಿಂಗ ಪದಪದ್ಮ ಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ನೋಡ
ಲತಿನೂತ್ನ ವಾ[ದಾ]ರುಕಾಂಡದೊಳು ನಾಲ್ಕನೆಯ ಸಂಧಿ ಸಂಪೂರ್ಣವಾಯ್ತು ೮೪

---

1 ಶಾ (ಕಗ) 2 ಡ (ಕ) 3 ಣಾ (ಗ)

# ಐದನೆಯ ಸಂಧಿ

ಸೂಚನೆ॥

ಗುಣಮೂರರೊಳಗೆ ಸಿಲುಕದ ಮಹಾದೇವನಂ
ಮಣಿಪೀಠದೊಳಗೆ ಕುಳ್ಳಿರಿಸಿ ಜಾನಿಸಿ ಪೂರ್ವ
ದಣಿಯರದ ಮೂರ್ತಿಯಂ ಪ್ರತ್ಯಂಗಪೂಜೆಯಂ ವಿಸ್ತರಿಸಿದಂ ದೇಶಿಕಂ

ಯಾವನೀಕ್ಷಣಮಾತ್ರದಿಂದ ಪೃಥ್ವ್ಯಾದಿ ಭುವ
ನಾವಳಿಗಳೊಂದಾಗಿ ಪುಟ್ಟುವವು ಕಣ್ಣೆವೆಯ
ನೋವಿ ಮುಚ್ಚಲ್ಕೆ ಮುನ್ನಿದ್ದವೇ ಭುವನಂಗಳೆನಿಸು__ ರೂಪವುಳಿದು
ಈ ವಿಭುವೆ ಸಕಲಶಾಸ್ತ್ರಗಳ ಸಂಘದಿ ಮಹಾ
ದೇವನೆಂದೆಣಿಕೆವೆತ್ತಂ ಮಹತಿ ಬಲುಮಹಾ
ದೇವೋಂ ಮಹೀಯಸೇ ಎಂದುದಾಥರ್ವಣಂ ನೀನವಂ ಚೆನ್ನಮಲ್ಲ ೧

ಧರೆಯೊಳಗೆ ದುರ್ಭಿಕ್ಷವೊತ್ತರಿಸಿ ನರರೆಲ್ಲ
ಕೊರಗುತಿರೆ ದೃಢವ ನೋಡುವೆನೆಂದು ಹರನಾಗ
ಕುರುಬನಾಗೈದಿ ಪೊಂಗುಳಗಳಂ ಕಬ್ಬಿಣದ ಗುಳವೆಂದು ಕೈಯಲೀಯೆ
ಕೆರದುಳಿಯ ಬಾಯಿಂದ ನಾನೊಲ್ಲೆನಿದನಂ ಕ
ತ್ತರಿಸಿ ಕೊಟ್ಟಪೆ ಕೊಂಡುಪೋಗೀ ಮ[ರೆಯ]ದದಂ
ಕರಕಿತ್ತು ಮರಳಿ ನೋಡದ ದಿಂಡುಗೂರನಾಗಾ ಭಕ್ತಿಲಿಂಗೆರಗುವೆ ೨

•ಉಕ್ತಲಕ್ಷಣದಂಡದಂಡಮರವಿಾರೆ ಮೆರೆಸು
ವ್ಯಕ್ತಾಷ್ಟಭೈರವರ ಕಾಯ್ಪುನಷ್ಟದ್ವಾರ
ದತ್ತಳಿಂದೊಳಗೆ ನಂದ್ಯಾದಿಗಣಪಾಶ್ರಿತ ಚತು [ಳಂ] ?
ಮತ್ತೆ ಕಡೆಗಣಿಸಿಯೊಳಪೊಗಲಾಗಿ ಶತಸಹ
ಸ್ರಾಬ್ದಯೋಜನವಿಶಾಲೋನ್ನತ್ತಮೃಗೇಂದ್ರ ಫಲ
ಕೋತ್ತುಂಗ ಭಾಗದಲಿ ಹಿಮಮಹೀಧರಕನ್ಯನಾಥನೊಪ್ಪುತಿಹನು (?) ೩

---

• 2 ನೆಯ ಪದ್ಯದಲ್ಲಿ ಛಂದೋಭಂಗವಾಗಿದೆ.

ಗುಣಗಳಂ ವಿಾರಿ ಘೃತಕಾಠಿಣ್ಯದಂತೆಸೆದು
ಪ್ರಣವದೊಳ್ ಪ್ರತಿಪಾದಿಸಲ್ಪಟ್ಟಿರುವನಾಗಿ
ಗಣಾವಮೂರ್ತಿತೆಯ ನಾಂತ ವಿಧಿ ಹರಿ ಗಿರೀಶರಿಂ ಧ್ಯೇಯನಾಗಿರುತ ಮತ್ತೆ
ತನಗೊಂದು ವಸ್ತ್ವಂತರ ಧ್ಯಾನವಿಲ್ಲದೇ
ಜನನಾದಿ ಪಂಚಕ್ರಿಯೆಯ ರಚಿಸಿ ತುರ್ಯನೆಂ
ದೆನಿಸಿ ಶಿವ ರುದ್ರಪಶುಪತಿ ಮಹಾದೇವನಿಂತೆಂಬ ಪರಿಯಾಯಾಂಕದಿಂ ೪

ಸತ್ಯಕಾಮನೆನಿಪ್ಪ ನಾಮಂದಿಂ ಚಿಂತಿಸಿದ
ವಸ್ತುಗಳನೆಲ್ಲವಂ ಪಡೆದು ನಿರ್ಭರದಿಂದ
ಸತ್ಯಸಂಕಲ್ಪನೆಂದೆನಿಪ ನಾಮವನಾಂತು ತಾನಾಚರಿಸಿದ ಬಗೆಗೆ
ಮತ್ತಾರು ಬೇರೊಂದು ರೂಪದಿಂ ಮಾಡಲು ಸ
ಮರ್ಥರಿಲ್ಲೆಂದೆನಿಸಿ ಕಲ್ಯಾಣಗುಣವೆಂಬ
ಮುತ್ತುಗಳ ತೊಡಿಗೆಯಂ ಕೊಟ್ಟು ನಾನಾದೇವತಾ ಶೀಕರಗಳಿಗೆಣಿಸೆ ೫

ಜಲನಿಧಿಸ್ಥಾನೀಯನೆಂದೆನಿಸುತಂ ನಿಜದ
ತಿಳಿವಿನಿಂದುಚ್ಚರಿಸಿದಾನಂದದಿಂದ ಮಂ
ಡಳಿಸಿ [1]ವ[1]ರ್ತಿಪನಾಗಿ ಸರ್ವತತ್ತ್ವಗಳೊಳಂತರ್ಯಾಮಿಯಾಗಿ ಮತ್ತೆ
ಪಲವು ವಿಧವಾದ ತತ್ತ್ವಂಗಳಿಗೆ ಬೀಜವಾ
ಗೊಲಿದು ಮಾಯೋಪಾಧಿಯಿಂದ ಮಾಯಾವಿಯಾ
ಗಲಘು ನಾಮಸ್ಮರಣೆ ಮಾತ್ರದಿಂ ಜಂತುಗಳ ಭವವ ಸಂಹರಿಪನಾಗಿ ೬

ಇರಂವ ಶ್ರೀಮತ್ಸಾಂಬ ಶಿವನೆಸೆವ ಕಪ್ಪುರದ
ಕರಣೆಯೋ ಪಾಲ್ಗಡಲ ಮಧ್ಯಮೋ ಕೈಲಾಸ
ಗಿರಿಯ ಘನಕೂಟವೋ ಬೆಳ್ದಾವರೆಯ ಬನವೊ ಬೆಳ್ದಿಂಗಳಿನ ಥಾಳವೊ
ಶರದಂಬುದಾಳಿಯೋ ಪ್ರಾಸಾದವಾದ ಬ
ಜ್ಜರದ ಪರಳೋ ದೇವಗಂಗಾತರಂಗವೋ
ಮೆರೆವ ತನ್ನಂಗಕಾಂತಿಯೊ ಎನಲ್ ದಿವ್ಯಸಿಂಹಾಸನಾಸೀನನಾಗಿ ೭

ಕುಮುದಿನೀಜಾರರೇಖಾಭೂಷಿ[2]ತಾಂಬ[2]ಕಂ
ಕಮನೀಯಕಂಠಲಂಬಿತ ವಿಷಶ್ಯಾಮಲಂ
ಕಮಲಪ್ರ[3]ಸೂನ[3]ವದನಂ ಕೋಟಿಕಂದರ್ಪ ಲಾವಣ್ಯರಸಬಂಧುರಂ

---

1 ನ (ಕ) 2 ತಾಲ (ಗ) 3 ಸನ್ನ (ಕ)

ಉಮೆಯೊಡನೆ ಕೂಡಿ ರಾಜಿಸುವ ವಾಮಾಂಗದಿಂ
ವಿಮಲ ಯಜ್ಞೋಪವೀತಂಗಳಿಂ ಪೊದೆದುಟ್ಟ
ಸಮೆದ ಗಜ ಶಾರ್ದೂಲ ಚರ್ಮಂಗಳಿಂ ವರಾಭಯಪಾಣಿಯುಗ್ಮದಿಂದ ೮

ದೇವಗಂಗಾವಿಕಸಿತ ಶ್ವೇತಕಮಲವಂಂ
ಭಾವಿಸಲ್ ಸನ್ನಿಧಿಯಡರ್ದ ಕಾಲ್ಯೋದ್ಧರಾ
ಜೀವಸಖನಂದದಿಂದೆಸೆವ ರತ್ನಕಿರೀಟದಿಂದ ಫಣಿಕುಂಡಲಗಳಿಂ
ದೇವಗಿರಿ ವಜ್ರಕೂಟವ ಬಳಸಿಯಿಳಿವ ಗಂ
ಗಾ ವಿಮಲ ಧಾರೆಯಂದದಿ ಪೊಳೆವ ಪೊಸಮುತ್ತ
ನೋವಿ ಪವಣಿಸಿದ ಗಂದಿಸರಗಳಿಂದುತ್ತಮವನನುಕರಿಪ ಪೂಮಾಲೆಯಿಂ ೯

ಕಾಮದಿಂ ದೋಷಂಗಳಂಟದಿಹವೀ ಹೃದಯ
ಸೀಮೆಯಲಿ ನೆಲೆಗೊಂಡ ನಿಜತಾರಕೋತ್ಪಲದ
ಭೂಮಿಯಲಿ ಕಳೆಯ ಸಿಂಹಾಸನವ ತಳಿಯೆ ಕಂದುವದೊ ಕಂದದೊಯೆನಿಸುವ
ಕೋಮಲಾಂಘ್ರಿದ್ವಯಗಳಿಂ ಸುರೇಶ್ವರ ಸಿದ್ಧ
ಸೀಮಂತಿನೀ ಶಿರೋಭಾಗಮಂಡಿತ[ಂ] ಮ
ತ್ಸೌಮನಸ್ಯ ಭ್ರಮರ ಸಂಪರ್ಕವೆಂತೊಡಂಬಡುವುದೆಂದಮರರೆಣಿಸೆ ೧೦

ರಾಜಿಸಂತ್ತಿರೆ ಶಂಭು ಶಂಭುವಿನ ಭದ್ರಾಸ
ನಾಜಿರದ ಕೀಳ್ಗಡೆಯೊಳೆಡಬಲದಿ ಪೊಂದಗಡಿ
ನೋಜೆಯಂ ಪಳಿವಂಗಕಾಂತಿಯಿಂ ಶಕ್ತಿಹಸ್ತಂ ಕುಮಾರಂ ವರ್ತಿರ್ಪಂ
ಮೂಜಗದೊಳಾವನರ್ಚಿಸನೆನ್ನನೆಂಬ ಘನ
ತೇಜದಿಂ ಸಿಂಧೂರವರ್ಣದಿಂ ಸೃಣಿ ಪಾಶ
ಭಾಜನ ವರಾಭಯಾಂಕಿತ ಚತುಃಕರಗಳಿಂದಾನೆಮೊಗನೊಪ್ಪುತಿರ್ಪಂ ೧೧

ಸೂಳರಿದು ಬಿಡದಿಕ್ಕೆಲದೊಳಿಕ್ಕುತಿಹ ಚಾಮ
ರಾಳಿಯಂ ಸೀಗುರಿಯ ಪಾಳಿಯಿಂ ನಿಜಕೀರ್ತಿ
ಜಾಲಮಂ ಪೊಗಳಿ ಮತ್ತೊಮ್ಮೆ ಪೊಗಳುವ ಕಾಲದಲ್ಲದಂ ಪೊಸತೆನಿಸುವ
ಮೇಲಂಪಾತಿನ ಚಂಡಕೀರ್ತಿ ವಂದಿಗಳಿಂ ವಿ
ಶಾಲ ವಚನಗಳುಳ್ಳ ವೇದಶಾಸ್ತ್ರಂಗಳಿಂ
ಸಾಲು ಸಾಲಿಗೆ ನಿಂದು ಕೈವಾರಿಸುವ ಮಹಾಮುನಿಗಳಿಂ ಸಿದ್ಧರಾದ ೧೨

ತಮ್ಮ ತಮ್ಮಯ ಭುವನಗಳ ನಿರಾತಂಕದಿಂ
ಕೆಮ್ಮದಾರ್ರೈವ ಹರಿಕಮಲಾಸನಾದಿಗಳ
ಸಮ್ಮುಖದ ಸಾಷ್ಟಾಂಗ ದಂಡಪ್ರ[1]ಣಾಮಂ[1]ಗಳಿಂ ಕೂಡೆ ಪರಸುತಿರುವ
ಸಮ್ಮತಿಯನುಳ್ಳ ಪ್ರಸೂತ್ಯಾದಿ ಸಾಧ್ವಿಯರ
ಸಮ್ಮರ್ದದಿಂ ಬಾರಿ ಬಾರಿಗಭವನ ಸಿರಿಯ
ಸಮ್ಮೋದದಿಂದ ಮುದ್ದಿಸುವ ನವವಿಧಭಕ್ತಿಕಾಂತೆಯರ ಸಾಂತತ್ಯದಿಂ ೧೩

ಇದೆಬಂದರಾಶೆಯುಂ ತೊರೆದವರು ತೀವ್ರದಿಂ
ದಿದೆಬಂದರೀಷಣತ್ರಯದಿ ಮೊಗದಿರುಹಿದವ
ರಿದೆಬಂದರೀ ಭುವನಗಳ ಭೋಗಜಾಲವುಂ ಪುಲ್ಲಿನಂತೆಣಿಸಿದವರು
ಇದೆ ಬಂದರನ್ಯರಾಪತ್ತಿಂಗೆ ಸಹಿಸದವ
ರಿದೆಬಂದರವ್ಯಾಜಕರುಣಾಸುಧಾನಿಧಿಗ
ಳಿದೆಬಂದರೆಂದು ಶರಣರ ಮುಂದುಗ್ಗೈವ ಸಾವಿತ್ರ್ಯಾದಿ ಶಕ್ತಿಗಣದಿಂ ೧೪

ಕಾಲಕಾಲದೊಳುಚಿತವರಿದು ಪರಿಚರ್ಯೆಯುಂ
ಮೇಳೈಪ ಸಿರಿ ಸರಸ್ವತಿ ಶಚಿಪ್ರಮುಖರಿಂ
ಕಾಲಮಾನಕ್ರಿಯೆಯ ಕಂಡು ಪಾಡುವ ನಾರದಾದಿ ವೈಣಿಕವರ್ಗದಿಂ
ತಾಲಮಾನವನರಿದು ರಸಗಳೋಸರಿಸದಂ
ತಾಲಾಪಿಸುತ್ತಲರ್ಥವ ಕರಗತ[ಂ] ಮಾಡಿ
ಮೇಲಾಗಿ ನಟಿಪ ರಂಭಾದಿ ನರ್ತಕಿಯರಿಂ ಚಿತ್ರತರ ತದುಪಾಂಗದಿಂ ೧೫

ಕದಳಿಕಾಕುಸುಮ ಪತ್ರಾವರಣದಂದದಿಂ
ಪುದುಗಿ ಪರಿವೇಷ್ಟಿಸಿ ಸಮಂತು ರಾಜಿಸುತಿರುವ
ತ್ರಿದಶಗಣ ರುದ್ರಗಣ ಭಕ್ತಗಣ ಪಾರಿಷದ ಗಣಗಳಿಂ ಮಿಕ್ಕಸುರರಿಂ
ಒದಗಿ ಕಿಕ್ಕಿರಿಗಿರಿದು ಕೋಲಾಹಲಂಬೆತ್ತು
ಸದರವಾಗದೆ ಮನೋಹರವಾಗಿ ನಂದ್ಯಾದಿ
ಪದಿಗ[2][ರಿಂ][2] ಚಂದ್ರಶೇಖರನೋಲಗಂ ಮೂಡದೆಶೆಯೊಳೊಪ್ಪುತ್ತಿರುವದು ೧೬

ಕಳಿವೆತ್ತ ಕೆಂಬರಲ ಪುಂಜಮೋ ಕಿಂಶುಕದ
ದಳಗಳಿಂಗೈದಾಲವಟ್ಟಮೋ ಸಿಂಧೂರ
ದೊಳಗೆ ರಚಿಸಿದ ವೇದಿಕೆಯೊ ಕೋಕನದದೊಳಗೆ ಪೊಳೆವ ಎಳೆವಿಸಿಲಿನಳವೊ

---

1 ಮಾಣಂ (ಕ) 2 ಕ್ಯರಿಂ (ಕ) ಕರಿಂ (ಗ)

ಬಳವೊಂದುಗೂಡಿಸಿದ ಸಂಜೆಗೆಂಪಿನ ಕದಿರೊ
ಜಲಜಾಸನನಯಜಾಂತರದುತ್ತರೀಯವೊ
ಪಳುಕಿನ ಜಪಾರಾಗವೋ ಎನಲ್ ಶಂಭುವಿನ ಕಾಯದೀಧಿತಿಯೊಪ್ಪುಗು ೧೭

ಆ ತನುವಿಗಳವಟ್ಟ ಕುರುಂಳದರೊಳೊಪ್ಪುತಿಹ
ನೂತನ ಕಿರೀಟವಾ ಕೀಳ್ಗಡೆಯೊಳಿಹ ಫಣಿತ
ದಾತಿಶಯಮುಂಟುಮಾಡುವ ಮಗಿದ ನೊಸಲ ಕಣ್ಣಿನ ತಿಲಕತಾಂಗಲಿಂಗಂ
ಆತೀರನಂಗೀಕರಿಪ ಕೊರಳಕಪ್ಪು ಮೇ
ಣಾ ತಾಣ ತನಕ ಲಂಬಿಪ ಕುಂಡಲಗಳಲಿ
ಖ್ಯಾತಿಯಿದಕನುವಾದ ಹಾರ ಗಂಧಾದಿಗಳ ತತಿಯಿನೀಶಂ ರಾಜಿಪಂ ೧೮

ಪೂರ್ವೋಕ್ತರೀತಿಯಿಂ ವಿನಿಯೋಗಪರರೆಸೆಯೆ
ಶರ್ವನೋಲಗದಿ ಕಮಲಾಸನಂ ಮುನಿಗಣಂ
ಪರ್ವಿರ್ದ ಕಾಲಾಗ್ನಿರುದ್ರ ವೀರೇಶರ್ ಪಿನಾಕಿಯು ಕಾಲಕಂಠಂ
ದುರ್ವಿಭಾವಾಂಘ್ರಿಕೇಶಾಸ್ಯನೇತ್ರಶ್ರೋತ್ರ
ದುರ್ವಿಯಂಲ್ಲಿ ಕರಾಳರುಂ ಮುಂಡಗುಣಧರಂ
ಸರ್ವಮಾಲಾ ಪತಿಯು ಮುಂಡಾಧಿನಾಥ ತ್ರಿಶೂಲಿಯುಂ ಕಾಲಾಂತಕಂ ೧೯

ಅಕುಲೀಶನುಂ ಮಯೂರಾನನಂ ಗಣಿಸಲ್ಕೆ
ಸಕಲರಂ ಪದಿನೆಂಟು ಮುಖ್ಯಗಣರಿಂ ಕೂಡಿ
ಶಕಲೇಂದುಧರನೋಲಗಂ ದಕ್ಷಿಣದಲಿ ನಾನಾವಿಭವದಿಂದೊಪ್ಪುಗುಂ
ವಿಕರಿಸದೆ ಮುನ್ನಿನಂದದೊಳೆಸೆವ ಮೃಗಪತಿಘ
ಲಕದೊಳಾಯಾ ಚಟುಲ ಸಾಂಗೋಪಚಾರದಿಂ
ಭಕತಜನಮಂದಾರ ಕಾರುಣ್ಯರಸಪೂರ ಶಂಕರಂ ವಿಭ್ರಾಜಿಪಂ ೨೦

ಕಾರವೋಡದ ಮಾಲೆಯೋ ವಜ್ರಹತಿಯಿಂದ
ವೀರಾದ ನೀಲಾಚಲದ ಗಂಡಶೈಲವೋ
ಕಾರಿರುಳ ಕಡೆಯೊಳರಳಿದ ಹೊರೆದ ಕನ್ನೈದಿಲಿಂದುಗಿದ ಮರಿದುಂಬಿಯೊ
ಸಾರಂಗದೊಬ್ಬುಳಿಯೊ ಯಮುನಾ ಸರಸ್ವತಿಯು
ಪೂರವೋ ಮುಂಗಾರ ನವಿಲ ಕಂಠಚ್ಛವಿಯೊ
ಶಾರದಾನೇತ್ರಾಂಜನವೊಯೆನಲ್ ಚಂದ್ರಮೌಳಿಯ ಕಾಂತಿ ಕಣ್ಗೆಸೆವುದು ೨೧

ಆ ಕಾಯಕಳಿವಟ್ಟ ಜಡೆಯು ಮುಡಿಯಾ ಮುಡಿಗೆ
ಬೇಕಾದ ಮಕುಟವಾ ಮಕುಟಕ್ಕೆ ಕೀಲ್ಗಡೆಯೊ
ಳೀ ಕೆತ್ತಿರುವ ಚಂದ್ರರೇಖೆಯಾ ಚಂದ್ರರೇಖೆಯು ಸುಧಾಬಿಂದು ಗಣಮಂ
ಮೇಕೊಂಡು ಚುರುಚುರನೆ ಮಿಸುಕುತಿಹ ಪಣೆಗಣ್ಣಿ
ನಾಕಾರಮುದರ ಕಿರುಗಿಡಿಗಳಂತೊಪ್ಪುವ ಪೃ
ಥಾಕು ಕುಂಡಲಮಣಿಪ್ರಭೆಗಳಿಂ ಭೇದಮೊಂದೆಸೆಯದಿಹ ವಿಷಕಂಠದಿಂ ೨೨

ಮೊರೆವ ಸರ್ಪಗಳ ಫೂತ್ಕಾರದಿಂದೊಗೆದ ಪೊಗೆ
ತಿರುತಿರುಗಿ ಮರಿದುಂಬಿಗಳ ಮಿಂಡಿನಂತೆಸೆಯೆ
ಭರದಿಂದ ಬೊಬ್ಬಿಡುವ ರುಂಡಮಾಲೆಯು ದನಿಗೆ ಮಾರ್ದನಿಯು ಹಂಸರಥನ
ಕರಡಿಗೆ ಕೊಡುತ್ತಿರಲ್ ಕೋರೆದಾಡೆಯ ಥಾಳ
ಮರರೆ ಕಲ್ಪಾಂತ ಮೇಘದುದಂಚ ಬೆನ್ನಟ್ಟಿ
ತರಿದೊಟ್ಟುತಿರಲ್ ಸುತ್ತ ಛವಿಯನನುಕರಿಸುತಿರೆ ಕಣ್ಣಿನ ಪ್ರಕಾಶಂ ೨೩

ದಂಡಧರವರ [1]ಪ್ರ[1]ಮಥ ಬಲರಿಂ ಕೂಡಿದಂ
ದಂ[2]ಡಾಂ[2]ಘ್ರಿಜಲವಿಕೀರ್ಣಸುಮಾಲ್ಯರಿಂ ಕೂಡಿ
ದಂಡಬಾಹುಪ್ರಚಂಡ ಪ್ರಚಂಡಾರ್ಚಿತ ಮನೋನ್ಮನರ ಗಣದಿ ಕೂಡಿ
ದಿಂಡಾದ [3][ಸರ್ವ][3]ಭೂತದಮನಪ್ರಚಂಡಕರ
ಮಂಡಲಂಗೂಡಿ ಪಶ್ಚಿಮದಿಕ್ಕಿನೋಲಗಂ
ಖಂಡೇಂದುಧರನ ರಾಜಿಪುದು ದುರಿ[ತ]ಧ್ವಾಂತಪಟಲ ಕಲ್ಪಾದಿತ್ಯನ ೨೪

ಎಳಮಿಂಚಿನೆರಕವೋ ಪೊಂದಾವರೆಯ ನವ್ಯ
ದಳವೋ ವಿಡೂರದೇಶದಲಿ ಮೊಳತಿಹ ಕಲ್ಲ
ಮೊಳೆಗಳೋ ಜಾಂಬೂನದದ ಮಧ್ಯದೇಶವೋ ಸುರನಿಳಯದೊತ್ತಿಲಿರುವ
ಇಳೆಯ ವೈವರ್ಣ್ಣವೋ ಚಾಂಪೇಯಮಾಲಿಕಾ
ವಲಯಿತ ವಸಂತವೈತಾನವೋ ಸಿರಿಮೊಗದ
ಕಳೆಯೋ ಎನಲ್ಕೆ ಹಿಮಂಶೈಲಾತ್ಮಜಾಪ್ರಾಣಪತಿಯ ದೀಧಿತಿಯೆಸೆವುದು ೨೫

ಆವರ್ಣ್ಣಕಳವಟ್ಟ ನವಿರದಕ್ಕನುವಾದ
ದೇವತಾಸಂಭಾವ್ಯಮಾನಮಕುಟಂ ಮೇಣ
ದಾವರಸದಿಂ ಮೆರೆಯಲದನೊಡಂಬಡಿಸುವ ಶಶಾಂಕರೇಖಾವತಂಸಂ

---

1 ಬಲಪ್ರ (ಕ) 2 ಡಾ (ಗ) 3 ಸರ್ವಸರ್ವ (ಕಗ)

ಆ ವಿಲಾಸವನು ನೆರಪೇರಿಸುವ ನಗೆವೊಗ[ಂ]
ಪಾವನದ್ಯುತಿ ನಾಗಕುಂಡಲಂ ವಿಷ ನೀಲಿ
ಮಾವಾಸ ಕಂದರಂ ಪೊಳೆವಲ್ಲು ಚೆಂದುಟಿಯೊಳೊಪ್ಪಿದಂ ಕಪ್ಪುಗೊರಲಂ ೨೬

ಹರಿಯಂ ದಿಕ್ಪಾಲಕರು ರಂದ್ರರಾದಿತ್ಯರೊ
ತ್ತರಿಸಿರುವ ವಸುಗಳುಂ ಬಳಿಕಂ ಪ್ರಭಾವ ಪು
ಷ್ಕರರುವಷಾಷಾಢಿಯುಂ ಡಿಂಡಿಯುಂ ವಿಬುಧೇಶನ್ಯೆಮಿಪರ್ ಮಿಗೆ ನಾಕುಲಂ
ಪರಿವಿಡಿಯೊಳಿವರಾದಿಯಾದ ನಾನಾಸಂಠವಿ
ಸರದಿಂದ ಕೂಡಿಯೋಲೈಸಲ್ಪಡುತ್ತಿಹುದು
ಪರಮೇಶ್ವರನ ದಿವ್ಯಭದ್ರಾಸನದ ಸಭಾಸ್ಥಾನ ಬಡಗಣದೆಸೆಯೊಳು ೨೭

ಇಂತು ನಾಲ್ದೆಸೆಯೊಳಗೆ ನಾಲ್ಮೊಗಂ ರಾಜಿಸಲ
ನಂತ ವಿಭವದೊಳದಕೆ ವಂಧ್ಯವರ್ತಿಯೆನಿಪ್ಪ
ಕಂತುಹರನೀಶಾನವಕ್ತ್ರವೊಪ್ಪುವದು ಪರಮಾಕಾಶರೂಪವಾಗಿ
ಅಂತದನಂ ವಿಜ್ಞಾನಿ ಕೇವಲರುಚಿದೃಕ್ಕಿ
ನಿಂ ತಿಳಿದು ತಮ್ಮ ಕರಣಂಗಳಂ ಬೆಳಗುವ ನಿ
ರಂತರಾನಂದವೇ ತದ್ವಸ್ತುವೆಂದನಾರತಮಲ್ಲಿ ರಮಿಸುತಿಹರು ೨೮

ಈತನಿಂದಹುದು ಸಕಲರ್ಗಿಷ್ಟಫಲಸಿದ್ಧಿ
ಈತನಿಂದಹುದು ಸಕಲರ ಭವಂಗಳ ವಿಲಯ
ಮೀತನಿಂದೆನಿಸಲುತ್ತರದೊಳಗೆ ತಿಳಿಯಲಾರಿಲ್ಲ ಪರದೇವತೆಗಳು
ಈತನೇ ಸರ್ವಕ್ಕಧಿಷ್ಠಾನ ಚೈತನ್ಯ
ಮೀತನಿಂ ಪೂರ್ವಕಾಲದೊಳುದಿಸಿದವರಿಲ್ಲ
ಈತನಿಂದರಿಯಲ್ಪಡದ ಕಾರ್ಯಮಿಲ್ಲ ಸಕಲಾಂಡಗಳ ಮಂಡಲದಲಿ ೨೯

ಕೇಳಯ್ಯ ಭೂಮ್ಯಾದ್ಯಚೇತನ ಮಹಾಭೂತ
ಜಾಲಮುಂ ನೋಡೆ ಚೇತನಜಂತುವರ್ಗಮೇ
ಮೇಲದಕೆ ಕರ್ಮದೇವತೆಗಳಧಿಕರು ಮತ್ತವರ್ಗೆ ಕಲ್ಪಾದಿಯಲ್ಲಿ
ಕೀಲಾಲರುಹಪೀಠನಿಂದಾದ ವಿಬುಧರೇ
ಮೇಲವರಿಗಿಂದಿಂದ್ರನಾತನಿಂದಂ ಗುರು ವಿ
ಶಾಲಮತಿಯಾತನಿಂದಂ ಹಂಸವಾಹನಂ ಮೇಲಾತನಿಂದ ವಿಷ್ಣು ೩೦

ಪರತರನೆನಿಪ್ಪ[1][ನಾ][1]ತನ ನೋಡೆ ರುದ್ರನೇ
ಪರತರಂ ಮೇಣಾತಗಿಂದುಮಾನಾಥನಹ
ಪರಮೇಶ್ವರನೆ ಮಹೋತ್ತಮನಾತನಿಂ ನೋಡೆ ಪರಮರಿನ್ನೊಬ್ಬರಿಲ್ಲ
ಪರಿಕಿಸಾ ದೈವಂಗಳಿಗೆ ದೈವತಂ ಲೋಕ
ಕರಣದಲಿ ಕಾರಣಂಗಳಿಗಾತನೇ ಬೀಜ
ಮಿರುವ ಪರವಸ್ತುವೊಂದದರಿಂದ ಬೇರಿಲ್ಲ ಮತ್ತೊಂದು ವಸ್ತ್ವಂತರಂ ೩೧

ಶಿವನೊರ್ವನೇ ಧ್ಯೇಯನೆಂದು ಬೋಧಿಸುತಿಹುದು
ಶಿವನೊರ್ವನೇ ಶಿವಂಕರನೆಂದುಸುರುತಿಹುದು
ಶಿವನೊರ್ವನೇ ಸಮಾರಾಧ್ಯನೆಂದಾರೈದು ವಾಚಿಸುತ್ತಿಹುದು ನಿಗಮಂ
ಶಿವನೆ ಲೋಕಹಿತಾರ್ಥಮಾಗಿ ರೂಪವನಾಂತು
ಯುವತಿಯಂ ವಾಮಭಾಗದಿ ತಾಳಿ ವೀರಭೈ
ರವ ಗುಹ ಗಣೇಶಾದಿ ಗಣನಾಥರಿಂ ಕೂಡಿ ಕೈಲಾಸದೊಳ್ ರಾಜಿಪಂ ೩೨

ಕನ್ನಡಿಯೊಳೆಸೆವ ಮಾರ್ಪೊಳಪಿನಂದದಿ ರೂಪ
ವನ್ನೈದಿದರು ಧಾತು ವಿಕೃತಿಯಾದಂಗಮಂ
ಮನ್ನೊಂದಿದವನಲ್ಲ ತದ್ರೂಪದಸ್ತಿತ್ವಕಾವುದು ಪ್ರಯೋಜನಮೆನೆ
ಇನ್ನೀ ಜಗತ್ತಿನಲಿ ಭವಭವಾಂತರದೊಳ್ ವಿ
ಪನ್ನರಹ ಜಂತುಜಾಲಗಳ ದುಃಖವನಳಿದಂ
ತನ್ನ ಸಂಕೀರ್ತನಾ ಧ್ಯಾನಪೂಜಾದಿಯಿಂ ಪೊರೆವುದೇ ಪರಮಕಾರ್ಯಂ ೩೩

ಯಾರಿಗಾಗುವದು ಪ್ರತಿಜನ್ಮದಿಂದಾರ್ಜಿಸಿದ
ಸಾರಸತ್ಕರ್ಮಫಲವವರಾತ್ಮತತ್ತ್ವವ ವಿ
ಚಾರಿಸಿ ಪಡೆವರು ಪರಮೋಕ್ಷಮಂ ಮೇಲಪ್ಪುಯೋಗ್ಯತೆಯನೈದದವರ್ಗೆ
ವಿರೂಪದಿಂದ ಮೋಕ್ಷಂ ಬರ್ಪುದೆಂದು ತಾ
ನಾರೈದು ನಿಷ್ಕಲ ಪರಬ್ರಹ್ಮವೇ ನೋಡ
ಲೀ ರೂಪನಾಂತುದಲ್ಲದೆ ನಿತ್ಯತೃಪ್ತಂಗೆ ಕಾರ್ಯಾಂತರಂಗಳುಂಟೆ ೩೪

ಆತನಂ ಪೂಜಿಸುವುದೇ ಪರಮಫಲವೆಂದು
ವಾತೂಲ ಮುಖ್ಯಾಗಮಂಗಳುಂ ನಿಗಮಂಗ
ಳೋತು ಪೇಳುವವೆನ್ನುತಂ ಕ್ರಿಯಾಸಾರದಲಿ ನೀಲಕಂಠಾಚಾರ್ಯರಂ

---

1 ಕಾ (ಕಗ)

ಸೂತನಪದೋಪದ[ವ]ರುಸುರಿದರು ವೀರಶೈ
ವಾತಿಶಯಂವಂ ಪ್ರತಿಷ್ಠಿಸಲಾಗಿ ತತ್ತ್ವಪಿ
ಖ್ಯಾತಿಯಿಂ ಬ್ರಹ್ಮಸೂತ್ರಪ್ರಕಾರದಲಿ ಭಾಷ್ಯವ ಮಾಡಲಿಚ್ಛೈಸಿರೆ ೩೫

ದ್ವಾತ್ರಿಂಶದುಪದೇಶವಮಂ ವಿಕರಿಸಿಯೆ ಪೇಳೆ
ವೇತ್ರದಿಂ ಕನಸಿನೊಳ್ ಸಾನಿಧ್ಯಮಂ ಸಾರಿ
ದ್ವಾತ್ರಿಂಶದಾವೃತ್ತಿ ಮೈಬಾಸುಳೀಳುವಂದದಿ ಬಡಿಯೆ ನಂದೀಶ್ವರಂ
ನೇತ್ರಮಂ ತೆರೆದು ಪುಲಕಂಗಳಿಡೆದೆರಪಿಡದೆ
ಗಾತ್ರದೊಳ್ ತೋರುತಿರೆ ಗದ್ಗದಧ್ವನಿಯಿಂದ
ಸ್ತೋತ್ರಮಂ ಮಾಡಿಯಭಿನವನೀಲಕಂಠನಾಮಾಚಾರ್ಯರಿಂತೆಂದರು ೩೬

ಅದರಿಂದ ಶಿವನ ಪೂಜಿಸುವದೇ ಸತ್ಕರ್ಮ
ವದರಿಂದ ಶಿವನ ಪೂಜಿಸುವದೇ ಸದ್ಯೋಗ
ವದರಿಂದ ಶಿವನ ಪೂಜಿಸುವದೇ ಸುಧ್ಯಾನ ವಂದನೆಗಳೊಂದಿ ತಿಳಿಯೆ
ಅದರಿಂದ ಶಿವನ ಪೂಜಿಸುವದೇ ಸ್ವಾಧ್ಯಾಯ
ವದರಿಂದ ಶಿವನ ಪೂಜಿಸುವದೇ ಘೋರತಪ
ವದರಿಂದ ಶಿವನ ಪೂಜಿಸುವದೇ ವಿಜ್ಞಾನ ನೋಡಲಿನ್ನನ್ಯವಿಲ್ಲ ೩೭

ಎಳೆಹರೆಯದವನಾಗಿ ನಿಟ್ಟೆಸಳುಂಗಂಗಳಿಂ
ಚೆಲುವನಾಂತವನಾಗಿ ಚಂದ್ರಾವತಂಸದಿಂ
ಕಳೆವೆತ್ತ ಮೊಗವನುಳ್ಳವನಾಗಿ ಕನ್ನಡಿಯ ಪೊಳಪಿನ ಕಪೋಲಂಗಳಿಂ
ತಿಲಕುಸುಮಗಂಧವಹದಿಂ ವಿದ್ರುಮಂಗಳಂ
ಪಳಿವಾಧರಂಗಳಿಂ ತೊಳೆದ ಪೊಸಮುತ್ತುಗಳ
ನಿಳಿಕೈವ ದಂತಪಂಕ್ತಿಯಿನೆಸೆವ ಶಂಭುಲಿಂಗವ ಚಿತ್ತದೊಳ್ ನೆನೆವುದು ೩೮

ಇಂಬಾದ ಭುಜಚತುಷ್ಟಯರಂತರಾಳದಿಂ
ಕಂಬು[1]ವಂ[1] ಪಳಿವ ಗತಮೃಗಮದಗ್ರೀವದಿಂ
ದಂಬುಜದ ಸಿರಿಯನೋಡಿಸುವ ಹಸ್ತಂಗಳಿಂ ಪೊನ್ನಪೂಮಾಲೆಗಳನು
ಚುಂಬಿಸುವ ಭುಜಗಳಿಂ ಮೃಗರಾಜನಂ ಬಿಡದೆ
ಬೆಂಬೊತ್ತುತಿಹ ಮಧ್ಯ[2]ದಿಂ[2] ಕದಳಿಕಾಸ್ತಂಭ
ಮಂ ಬಿಡದೆ ಜಯಿಸು ಊರುದ್ವಯತೆಯಿಂ ಚಾರುಜಂಘೆಯಿಂದಾರೀಕ್ಷಿಸೆ ೩೯

---

1 ರೂ (ಕ) 2 ಮಂ (ಕ)

ಮೃದುವಾಗಿ ಸರಳಾಂಗುಲಿಯ ರಾಜಿಯಿಂದೊಪ್ಪಿ
ಪದುಳದಿಂದುಪಮಿಸಲ್ಬಾರದಿಪ ನಖರಗಳ
ಕದಿರಿಂದೆಸೆವ ವಿರೂಪಾಕ್ಷನಡಿದಾವರೆಯ ಬಣ್ಣಿಸುವ ಕವಿಯಾವನಂ
ಇದಕಿದುಪಮಾನವೆಂದೆನಿಸುವ ದ್ರವ್ಯಂಗ
ಳಿದ ನೋಡಲಪ್ಪ ಉಪಮೇಯಂಗಳಾದವಿ
ನ್ನಿದಕಾವುದೆಣೆಯೆನಿಪ ಪಾವಂಗಳಿಂದೆಸೆವ ಮೂರ್ತಿಯಂ ಭಾವಿಸುವದಂ ೪೦

ಆ ಮೂರ್ತಿಯಂ ಪುರಸ್ಥಿತವಾದ ತನ್ನಿಷ್ಟ
ಸೋಮಶೇಖರ ಲಿಂಗದೊಳಗೆ ಭಾವಿಸಿ ಮತ್ತ
ಮಾಮೂರ್ತಿಯಂಗಪೂಜೆಯ ಮಾಡುವ ವಿಧಾನಮಂ ಕೇಳು ಸಂತೋಷದಿಂ
ವಾಮನಮುನೀಶ್ವರನೆ ಪರಮೇಶ್ವರನ ಪಾದ
ತಾಮರಸ ತಲಗಳಿಂ ಮೇಲಣ ತಲಂಗಳಿಗೆ
ಪ್ರೇಮದಿಂದಂ ನಮೋ ಎನುತ ಪುಷ್ಪಂಗಳಂ ಬಿಡದೇ ಸಮರ್ಚಿಸುವದಂ ೪೧

ತ್ರಿಪುರಾಂತಕನ ಶುಭಾಂಗುಷ್ಠಕ್ಕೆ ಬೆರಳುಗಳ
ಸುಪರುಲಿಂಗಂ ಬೆರಳ್ಗಳಿಗಂ ನಖಂಗಳಿಗೆ
ಚಪಲತೆಯನುಳಿದೋನ್ನಮೋ ಎಂದು ಭರ್ಗನಾ ಗುಲ್ಫಂಗಳಿಗೆ ಮೂರರ
ನಿಪುಣಾಂಕಕಳವಟ್ಟ ನೇತ್ರಂಗಳವನ ರಾ
ಜಿಪ ಜಂಘೆಗಳಿಗೆ ಪಶುಪತಿಯ ಜಾನುದ್ವಯ
ಕ್ಕಪರಿಮಿತ ಬಲಶಾಲಿ ಜಯನನೂರುದ್ವಯಂಕೆ ಭೀಮನಾ ಪಾಯುವಿಂಗೆ ೪೨

ಕಟಿಗೆ ಧೂರ್ಜಟಿಯ ಗಜಕೃತ್ತಿವಾಸನ ವೃಷಣ
ತಟಕೆ ಶಿವಲಿಂಗಕ್ಕೆ ವಸ್ತಿಗುಗ್ರನ ಸಮು
ತ್ಕಟವಾಗಿ ನಾರಾಯಣಪ್ರಿಯನ ನಾಭಿಗಂ ವಕ್ಷಸ್ಥಲಕ್ಕೆ ಹರನ
ಪ[1]ಟು[1]ವಾಗಿ ಹೃದಯ ಮಧ್ಯಕೆ ಸದಾಶಿವನ ವಿ
ಸ್ಫುಟ ಪಯೋಧರಯುಗಕ್ಕಂ ಪಾರ್ವತೀಪತಿಯ
ಚಟುಲಾಗ್ನಿರೇತಸ್ಕನುವರಕ್ಕೆ ದಕ್ಷಾಧ್ವರಾಂತಕನ ಕಕ್ಷೆಗಳಿಗೆ ೪೩

ನೀಲಕಂಠನ ಕಂಧರಕ್ಕೆ ತ್ರಿಯಂಬಕನ
ಮೇಲಾದ ಲಂಬಿಕೆಗೆ ಭುಜಗಳಿಗೆ ವಿಜಯನ ವಿ
ಶಾಲ ಕರ್ಪರಕೆ ಶಶಿಶೇಖರನ ಮಣಿಬಂಧಗಳಿಗಂ ಮಹಾದೇವನ

---

1 ಟ (ಗ)

ಲೀಲೆಯಿಂ ತಾಳ್ದ ಕರಮಧ್ಯಕ್ಕೆ ಶಂಕರನ
ಕಾಲಿಕಾಪತಿಯ ಕರಗಳಿಗೆ ಕರಪೃಷ್ಠಕ್ಕೆ
ಶೂಲಮಂ ಪಿಡಿದ ಭೈರವನ ಸ್ಪಷ್ಟವ ವರಾಂಗುಷ್ಠಾಂಗುಲಿಗಳಿಗೆ ಕರಂ ೪೪

ಶರದಿಂದುಧವಳ ನಖಗಳಿಗೆ ಸ್ಥಾಣುವಿನ ನಿ
ರ್ಭರವಾದ ದಕ್ಷಿಣದ ಪಾರ್ಶ್ವಕೆ ತ್ರಿಶೂಲಿಯು
ತ್ತರದ ಪಾರ್ಶ್ವಕೆ ಪಿನಾಕಕರನಾ ಪೃಷ್ಠಕೀಶ್ವರನ ವಯಂ[1]ಗಡೆಗೀಶನ[1]
ಗಿರಿಶನಾ ಚುಬುಕಕ್ಕೆ ಶಂಭುವೋಷ್ಠದ್ವಯ
ಕ್ಕಿರುವಂತಿಕೆಯ ಸಾಲಿನಂತೆಸೆವ ದಂತದ ನಿ
ಕರಕೆ ಭವನಾದಂ ತದಗ್ರಕ್ಕೆ ಕಾಲಾಂತಕನ ನವೋ ಎಂದಳ್ಕರಿಂ ೪೫

ವದನಕ್ಕೆ ಸರ್ವಜ್ಞನಾ ಮೇಘವಾಹನನ
ಸದಮಲಾಸಂಗಳಿಗಘೋರದಕ್ಷಿಣಕರ್ಣ
ಪದಕೆ ವಾಮಶ್ರುತಿಗೆ ವಾಮದೇವನ ವ್ಯೋಮಕೇಶ ದಕ್ಷಿಣ ಹನುವಿಗೆ
ಪದುಳದಿಂ ವಾಮ ಹನುವಿಗೆ ಕಪಾಲಿಯ ವಾವಂ
ಪದದಾ ಕಪೋಲಕ್ಕೆ ಕಾಮಾಂಗನಾಶನನ
ಮುದದಿಂದ ದಕ್ಷಿಣಕಪೋಲಕ್ಕೆ ರುದ್ರನ ಮಹೇಶ್ವರನ ನಾಸಿಕಕ್ಕೆ ೪೬

ಭ್ರೂಮಧ್ಯಕಂ ಹಂಸನಾ ಭ್ರೂಯುಗಕ್ಕೆ ಸು
ಪ್ರೇಮದಿ ಕಪರ್ದಿಯಾ ಶಂಕರನ ನೇತ್ರಗಳ
ಸೀಮೆಗಂ ಪಕ್ಷ್ಮಗಳಿಗಂ ನೀಲಲೋಹಿತನ ವೃಷಭಧ್ವಜನ ಫಾಲಕಂ
ಸೌಮನಸ್ಕದಿ ಶಂಖಕಂ ದೇವದೇವನ ಮ
ಹಾ ಮುಖಕ್ಕಂ ತತ್ಪುರುಷನ ಸುಶಿರಸ್ಸಿಗಂ
ತಾ ಮಣಿಯುತೀಶಾನನೋನ್ನಮೋ ಎಂದು ಪುಷ್ಪಂಗಳಂ ವಿಕರಿಸುವುದು ೪೭

ಬಲದಲಿ ಗಣೇಶನಂ ದೂರ್ವಾಂಕುರಗಳಿಂದ
ಲಲಿತವಾಗಿಹ ರುದ್ರಜಟೆಯಿಂ ಕುಮಾರನಂ
ಹರಿಪ್ರಿಯಪ್ರಸವದಿಂದಂಬಿಕೆಯ ನಂದಿವಟ್ಟಲ ಕುಸುಮದಿಂ ನಂದಿಯಂ
ಚೆಲುವಿನಿಂದರ್ಚಿಪುದಹರ್ನಿಶಂ ಸೂಕ್ತ ಶುಭ
ಫಲ ಕುಸುಮರಾಜಿ ದೊರಕೊಳ್ಳದಿರೆ ಪೂಜೆಯಂ
ನಿಲಿಸಲಾಗದಂ ಶಂಕರನ ದೊರಕಿದಪ್ಪರಿಂ ತೃಪ್ತನಾಗುವನೀಶ್ವರಂ ೪೮

---

1 ಗಃ ಶನಾ (ಕ)

ಮೂವತ್ತೆರಡು ಸದುಂಪಚಾರಂಗಳಾದೊಡಂ
ದೇವಂಗೆ ಸಾಂಗವೆನಲಾರಾಧಿಸಿದ ಪುರುಷ
ಗಾವ ಫಲದೊರಕೊಂಬುದಾ ಫಲವ ಭಕ್ತಿಯಿಂ ಲೋಕದಿ ಯಥಾಶಕ್ತಿಯಿಂ
ಸಾವಧಾನದಲಿ ಇಪ್ಪತ್ನಾಲ್ಕರಿಂದಾಗ
ಲಾ ವೇಳೆಗನುಕೂಲಮಾದ ಹದಿನಾರರಿಂ
ತೀವಿರ್ದ ಪತ್ತರಿಂದೆಂಟರಿಂದೈದರಿಂ ಮೂರರಿಂದಾಗಲೀಶಂ ೪೯

ಆರಾಧಿಸಿದ ಜನರ್ಗಂ ಮುಕ್ತಿಯೊಂದೇಪು
ಕಾರದಿಂ ಕೊಡುವ ಕಾರಣದಿಂದಲರ್ಚಿಪುದೆ
ಕಾರಣಮದಲ್ಲದೇ ದ್ರವ್ಯಾನುಕೂಲಮಾಗದಿರೆ ಚಿಂತಿಸಲಾಗದು
ಆರೈದುಂ ನೋಡು ಬೇಂಟೆಗೆಯೊರ್ವ ಶಬರ ತಾಂ
ಘೋರಕಾನನಕೆ ನೆರೆಪೋಗಿ ಮಿಗಹಕ್ಕಿಗಳ
ನೋ[1]ರೋ[1]ಕಿಣಿಕೆಗೊಂಡು ಹುಡುಕಿ ನೋಡುತ್ತ ಕಾಣದೆ ಬಳಲಿ ಚಿಂತಿಸುತಿರೆ ೫೦

ಅಪರಾಂಬುನಿಧಿಗೆ ರವಿಯಿಳಿಯಲಾ ಸಮಯದೊಳು
ಕುಪಿತಮಾಗಿಯೆ ಘೋರಮೃಗಗಳಂ ಬೆನ್ನಟ್ಟಿ
ವಿಪರೀತಮಂ ಮಾಳ್ಪವೋ ಎಂಬ ಭೀತಿಯಿಂ ಬೆಲ್ಲವತ್ರವನಡರ್ದು
ಚಪಲದೃಷ್ಟಿಯಲಿ ನೋಡುತ್ತಿರಲ್ ಕಾರ್ಮುಗಿಲಿ
ನುಪಟಳಂ ಮಿಂಚು ಗುಡುಗಂ ಕೂಡಿ ಬಲುಮಳೆಯೊ
ಳಪರಿಮಿತವಾಗಿ ತೋಯಲ್ ನೆನೆದು ಗಡಗಡನೆ ನಡುಗುತ್ತ ಮರದ ಮೇಲೆ ೫೧

ಇರುತಿರಲ್ ಪರೆಯಲಾಗಾ ಮಳೆಯ ಮೋಡ ಮುಂ
ಬರಿವ ಚುಕ್ಕಿಗಳ ನಸುಬೆಳಕು ಪಸರಿಸೆ ಈಗ
ತಿರುಗವೇ ಕಾಡಮಂದಿಗಳೆಂದು ಮೂಡದಿಕ್ಕಿನ ಕೊನೆಗಳಡ್ಡಲಾಗೆ
ಪರಿದವರ ಪರ್ಣಂಗಳಂ ಬಿಸಾಡುತ್ತ ಸಂ
ಚರಿಸದಿರಲಾ ಭಾಗದೊಳ್ ಮೃಗಂಗಳು ಬಲಕೆ
ತಿರುಗಿ [2]ಟೆಂ[2]ಕಲಪರ್ಣಜಾಲಮಂ ಕಿತ್ತು ಕೆಳಗೀಡಾಡುವಾ ಕಾಲದಿ ೫೨

ನೋಡುತಿರಲಾ ಕಡೆಯೊಳಿಡೆಯಾಡದಿರೆ ಮೃಗಗ
ಳೀಡಿರಿದ ಚಿಂತೆಯಿಂ ಪಡುವಮೊಗನಾಗಿ ತಾಂ
ನೋಡಲ್ಕೆ ಮರೆಯುಪ್ಪ ಪತ್ರಂಗಳಂ ಕಿತ್ತು ಬಿಸುಟು ಮೃಗಗಳ ಕಾಲ್ನಡೆ

---

1 ರಾ (ಕ) 2 ಪಂ (ಕ)

ಕೊಡದಿರಲಾ ಮುಖದಿ ಬಡಗದಿಕ್ಕಿಗೆ ತಿರುಗಿ
ನೋಡುತಿರೆ ಮರೆಯಪ್ಪ ಸುಪಲಾಶಜಾಲಮಂ
ಕೊಡೆ ಕೆಯ್ಯಿಂ ಪರಿದಂ ಬಿಸುಡುತ್ತ ನೋಡುತಿರುವನ್ನೆಗಂ ಬೆಳಗಾದುದು ೫೩

ಇನ್ನೇಕೆ ಸಂಚರಿಪವೀ ಮೃಗಂಗಳು ಫಲಂ
ಭಿನ್ನವಾಯಿತೆನುತ್ತ ಚಿಂತೆಯಿಂದಿಳಿದು ಬರೆ
ಪನ್ನಗಂ ಮೂಲದೊಳಗಿರ್ದು ಕಚ್ಚಲ್ ಪೋದುದಸು ಕಿರಾತನ ದೇಹದಿಂ
ಆನ್ನೆಗಂ ಮುಸುಕಿದರ್ ಕೋರದಾಡೆಯ ಮುರಿದು
ಕೆನ್ನೆಗೇರಿಸಿದ ವಿಶಾಸೆಯು ಹಾಸನುಗಿಯದಿಹ
ಕುನ್ನಿಗಳ ಕರದ ಮುಪ್ಪುರಿಯು ನೇಣಿನ ಕೆಂಡದಂತೆಸೆವ ಕಡೆಗಣ್ಣಿನ ೫೪

ಬೆರೆದು ಜಡೆಗಟ್ಟಿ ಬಿಡಿಸಲ್ಕೊಡದಿಹ ನವಿರ
ತರಟು ಪಂದಲೆಯ ಪೊಳ್ಳುಗಳನುಬ್ಬಿಸುವ ನಿ
ಟ್ಟು[1][ರದ][1]ಕಿರುದಡಿಯ ಕಾರೊಡಲ ಯಮಕಿಂಕರರ್ ಸಾನ್ನಿಧ್ಯಮಂ ಸಾರಲು
ತರತರನೆ ನಡುಂಗಿ ಕಂಡಾಗರಳಿದಕ್ಷಿಯಂ
ಮರಳಿ ಮುಚ್ಚುವರೆ ತನ್ನಯ ವಶದೊಳಿರದೆವೆಯ
ತೆರೆಯಿಂದ ಬೆಂಡಾದ ಶಬರಗಾ ಸಮಯದೊಳಗೊದಗಿತಭ್ರಾಂತರದಲಿ ೫೫

ಕಾರಿರುಳ ಗವಸಣಿಗೆಯಿಂದುಗಿದ ಕಲ್ಪಾಂತ
ಸೂರನೋ ವಿಲಯಕಾಲದಲಿ ನರ್ತಿಪ ಮಹಾ
ಭೈರವನ ಪಾದಹತಿಯಿಂದೊಡೆದ ಮೇದಿನಿಯ ರಂಧ್ರದಿಂದುಚ್ಚರಿಸುವ
ಮಾರುತಾಶನಪತಿಫಣಾಮಣಿಯೊ ರಾಹುಮುಖ
ಕಾರಾಲಯದೊಳಿರ್ದು ಬಿಡುಗಡೆಯನೈದಿರ್ದ
ತಾರೇಶನೋ ಎನಲ್ ಕೈಲಾಸದಿಂ ಗಣೇಶ್ವರವಿಮಾನ[2][ದಿಂ][2] ಬಂದುದು ೫೬

ಹರನ ಕಾರುಣ್ಯರಸದಿಂ ಕರಗಿ ತದ್ಗಣೇ
ಶ್ವರ ವಿಮಾನಾಪದೇಶದ ಚಿನ್ನವಂ ಶಬರ
ನರನ ಸಂರಕ್ಷಿಸುವ ವಿಷಯಮೆಂತೆಂಬ ಕರುವಿನೊಳೆರೆಯಲಾಕಾಲದಿ
ಪೊರಟು ಪೋಗುವ ಕಾರ್ಬೊಗೆಯು ಹಾಗೆ ಯಮನ ಕಿಂ
ಕರರು ನಾಲ್ದೆಸೆಗೆ ಪರಿದೋಡೆ ಸಂತಾಪದಿಂ
ಪೆರತಾದ ಗಟ್ಟಿಯಂ ತೆಗೆವಂತೆ ಮೇಣಾತನಂ ವಿಮಾನದೊಳಿಟ್ಟರು ೫೭

---

1 ಸುರ (ಕಗ) 2 ದಿಂ (ಕಗ)

ಒಡನೆ ಕೊಂಡೊಯ್ದು ಗಣನಾಥರಾ ಕಾಲದೊಳ್
ಮೃಡನ ಸನ್ನಿಧಿಯಲಿಟ್ಟಾತನಂ ಸಂತೈಸೆ
ಕಡೆಯೈದದಿಹ ಗಣೇಶ್ವರಪದವಿಯಂ ಕೊಡಲ್ ದೇವತಾಸಾರ್ವಭೌಮಂ
ಎಡಬಲದೊಳಿರ್ದ ಗುಹ ಗಣನಾಥರವರ ಮಂ
ಗಡೆಯೊಳಿರುತಿಹ ಭೃಂಗಿ ನಂದೀಶ್ವರಾದಿಗಳ್
ಬಿಡದೆ ಪರಮಾಶ್ಚರ್ಯದಿಂ ಕೇಳಲಾರದೇ ನೋಡುತ್ತಲಿರಲಾಕ್ಷಣಂ ೫೮

ಬಿನ್ನವಿಸಿದಳ್ ದೇವಿ ಶಂಭುವೇ ಮರುಕಗಳ
ಮುನ್ನೀರೆ ಕಾರುಣಿಕಜನದ ಮುಡಿಮುತ್ತೇ ವಿ
ಪನ್ನನಾದೀ ಪುಳಿಂದನ ಸೇವೆಯಾವುದೈ ನಿಮ್ಮ ವಿಷಯದಲಿ ಜಗದಿ
ತನ್ನೊಡನೆ ಕೂಡಿಕಾದಂವ ವಿಷಯಂಗಳಿಗೆ ಮನ
ಮನ್ನಿಡದೆ ಶಲ್ಯಾವಶಿಷ್ಟವಾಗೆ ಶರೀರ
ವನ್ನು ತಪಿಸುವ ತ[1]ಪ[1]ಸಿಗಳಿಗೆ ಮೈದೋರೆ ಕೌತುಕವಾದುದೀಯರ್ಥದಿ ೫೯

ಎನಲುಮಾ ವಾಕ್ಯಮಂ ಕೇಳಿ ಮೃತ್ಯುಂಜಯಂ
ಕೊನರೆ ನಸುನಗೆವಳ್ಳಿ ಮೊಗದಿ ಕೇಳೌ ದೇವಿ
ತನಗೆ ಶಿವರಾತ್ರಿಯಿಂದಧಿಕತರವಾದ ವ್ರತವೊಂದಿಲ್ಲವಲ್ಲ ಪ್ರೀತಿ
ಘನವಾಗಿಹುದು ಭವಸಮುದ್ರದೊಳಗಾಳುತಿಹ
ಜನರಿಗೀ ಶಾಂಭವದ ತಡಿಯ ಸಾರ್ಚಲು ನಾವೆ
'ಯೆನುತಂ ನಿಯಾಮಿಸಿದೆವಾ ವ್ರತವನದು ವ್ಯಾಜದಿಂದದು ಲಕ್ಷದಿನಾಗಲಿ ೬೦

ಯಾವಾತನಲಿ ವರ್ತಿಸುವದಾತ ನನ್ನವನೆ
ಈ ವಾಕ್ಯದಲಿ ಕೊಸರಿಲ್ಲ ಮೇಣಿವಗಾದು
ದಾ ವ್ರತಂ ನಿರ್ವ್ಯಾಜದಿಂದಂದು ಶಿವರಾತ್ರಿಯಾ ಪಗಲಿನೊಳಗನ್ನದ
ಜಾವಾದರುದರಮಂ ಪೊಗಲಿಲ್ಲ ಮಳೆಯು ಸಂ
ಪ್ಲಾವದೊರಕಿತ್ತರ್ಧರಾತ್ರಿಯಲಿ ನಾಲ್ದೆಸೆಯೊ
ಳಾವರಿಸಿದಾ ಪರ್ಣಗಳ ಕಿತ್ತುಬಿಸುಟದಾಯಿತು ನಾಲ್ಕುರಥಾವ ಪೂಜೆ ೬೧

ನನ್ನ ಸದ್ಯೋಜಾತ ಮುಖಮುಖ್ಯ ಮುಖಗಳಿಗೆ
ಮುನ್ನೆಳೆಯೊಳಿರ್ದವಾ ಸಿದ್ಧಕೃತಲಿಂಗಂಗ
ಳಿನ್ನವಗೆ ಪಾಪಸಂಭವವಾಗುವಷ್ಟರೊಳ್ ಸರ್ಪದಿಂ ಮೃತಿಯಾದುದು

---

1 ವ (ಗ)

ಇನ್ನಿದಕ್ಕಂ ಮೇಲೆ ಪಡೆಯತಕ್ಕರ್ಥಮಿರ
ಲಂನ್ನಿಲಿಸದೇ ಪೇಳೆನಲ್ಕೆ ನಡನಡುಗಿ ಶಿವ
ಪನ್ನಳಿನಗಳಿಗೆ ಚಾಚಿದಳಗಜೆ ಮಂಡೆಯಂ ಸಕಲಸುರರೀಕ್ಷಿಸುತಿರೆ ೬೨

ಇದರಿಂದಲಾ ಪುಳಿಂದನಿಗಾವ ವಸುಗಳು[ಂ]
ಪದುಳದಿಂದೊರಗಿದವು ನೇಮವಾವುದು ಬಲ್ಲ
ನುದರಪೋಷಣಮಾತ್ರ ತತ್ಪರಂಗೊಂದು ಮಾಲೂರಪತ್ರದ ಮೂಲದಿಂ
ಒದಗಿತು ಗಣೇಶಪದಮದರಿಂದ ಪುಣ್ಯಪುಂ
ಜದ ವಿಶೇಷದಿ ತನಗೆ ನರಜನ್ಮಬಂದಾಗ
ಮದದಿಂದ ಮರೆಯದೀಶ್ವರನ ಪೂಜಿಸುವದೆಣೆಸಲ್‌ಬಾರದರ್ಥಂಗಳಂ ೬೩

ಇಂತು ಪೂಜಿಸಿ ದೇವದೇವನಂ ಪೊಗಳುವದು
ಕಂತುಹರನಂ ಕಂತು ಮತ್ತೇಭಹರಿಯೆ ಕೃ
ತಾಂತ ಪರ್ವತವಜ್ರದಂಡವೇ ದಕ್ಷಯಜ್ಞಾಂಬುನಿಧಿ ವಡಬಾಗ್ನಿಯೆಂ
ಸಂತಾಪದಿಂ ನೊಂದ ಭಕ್ತಜನರೆಂಬ ಸುವ
ನಾಂತರಕೆ ಕಾಲದೊಳಗೊಗೆದ ಮಳೆಗಾಲವೇ
ಚಿಂತಿಸುವ ಜಂತುಗಳ ಭಾಗ್ಯದ ಸುರದ್ರುಮವೆ ಸತ್ಕರ್ಮಫಲಭೂಮಿಯೆ ೬೪

ಸಲಹಯ್ಯ ನೊಂದೆನೀ ಸಂಸಾರತಾಪದಿಂ
ಸಲಹಯ್ಯ ನೊಂದೆನೀ ದುರ್ಜನರ ಗೋಷ್ಠಿಯಿಂ
ಸಲಹಯ್ಯ ನೊಂದೆನೀ ಕಾಮಾದಿ ಶತ್ರುಗಳ ಕಾಲಾಟದಿಂದಜಸ್ರಂ
ಸಲಹು ಸಲಹಯ್ಯ ಪಾಪಗಳಿಗಂಜದ ಖಲನ
ಸಲಹು ಸಲಹಯ್ಯ ಮಾಡಿದ ತಪ್ಪ ಮಾಜಂವನ
ಸಲಹು ಸಲಹಯ್ಯ ಮನದೊಳಗೊಂದು ಬಾಯಲೊಂದಾಡುವನ ಪಾಪಾತ್ಮನ ೬೫

ತಕ್ಕುಗಳ ಬೀಡು ಕಾಪಟ್ಯದಾಲಯ ಮೋಸ
ದಿಕ್ಕೆ ವಂಚನೆಯ ಮುಮ್ಮನೆ ಜೂಜಿನಾಗಾರ
ಕಕ್ಕಸದ ನಿಲಯ ಲೋಭದ ಶರಣಮಾಶೆಯಾವಾಸ ದುರ್ಗುಣದ ಭವನಂ
ತಕ್ಕತಾ[1]ಟೊ[1]ೀಟಿನರಮನೆಯಸೂಯೀರ್ಷೆಗಳ
ಹಕ್ಕೆ ಪರಘಾತಿಮಂದಿರ ಭೂಸುರದ್ರೋಹ
ದೊಕ್ಕಲಿನ ಕೊಪ್ಪಲ[2]ಮು[2]ರರ ಕೇಡಿನೂರು ದುಷ್ಟಕ್ಷಿತೀಶ್ವರರೂಳಿಗಂ ೬೬

1 ತೋ (ಕ) 2 ವಾ (ಗ)

ಈ ಪಾಪಕರ್ಮವಂ ತಲೆಗೆತ್ತಿ ಪೊರಿಸಿದುದು
ರೂಪವಾಂತಿಹ ಪಾಂಚಭೌತಿಕಶರೀರವಿದ
ನೇ ಪಾಲಿಸಲ್ ಬಂದ ಪೆಣ್ಗಳಿಂ ಚಿನ್ನದಿಂ ಮಣ್ಣಿನಿಂ ಕಂಗೆಟ್ಟೆನೈ
ಕಾಪಾಡು ದೇವತಾಸಾರ್ವಭೌಮನೆ ಶಿವ ವಿ
ರೂಪಾಕ್ಷ ಮೃತ್ಯುಂಜಯ ತ್ರಿಯಂಬಕ ವಿಶ್ವ
ರೂಪ ವಿಶ್ವಾಧಾರ ವಿಶ್ವೇಶ ವಿಶ್ವವಂದಿತ ಭರ್ಗ ಗಂಗಾಧರ ೬೭

ನಿನ್ನನುಳಿದನ್ಯರುಂಟೇ ಕಾಯುವರು ಜಗದೊ
ಳಿನ್ನನಂಳಿದನ್ಯರುಂಟೇ ದೀನರಿದರಿಂದ
ನನ್ನ ಯೋಗಕ್ಷೇಮವೆಲೆ ದೇವ ನಿನ್ನ ಕರಗತವಾಯಿತಾರಯ್ಯೊದೆ
ಇನ್ನಿರಲ್‌ಸಲ್ಲ ಧೀವಂತರೀಯರ್ಥದಲಿ
ನನ್ನಲ್ಲಿ ತಪ್ಪನಾರೋಪಿಸರು ಕಾಯಬೇ
[1]ಕಿ[1]ನ್ನು ಕರುಣಾಸುಧಾನಿಧಿಯೆ ಜಗದೀಶನೇ ಪರಮೇಶನೇ ಶಂಭುವೆ ೬೮

ಎಂದು ಪಲತೆರವಾದ ನಂತಿಪುಷ್ಪಗಳನು ಬಾ
ಲೇಂದುಧರಗರ್ಪಿಪುದು ಪುಷ್ಪಾಂಜಲಿಯ ಶಿವನಿ
ಗೆಂದು ರುದ್ರನಿಗೆಂದು ಪಶುಪತಿಗೆನುತ್ತಲುಂ ನೀಲಕಂಠನಿಗೆನುತ್ತಂ
ಮುಂದಾ ಮಹೇಶ್ವರಗೆನುತ್ತ ಹರಿಕೇಶಗಿಂ
ತೆಂದುಂ ವಿರೂಪಾಕ್ಷಗೆಂದುಂ ಪಿನಾಕಿಗಿಂ
ತೆಂದುಂ ತ್ರಿಪುರಾಂತಕಗೆನುತ್ತ ಶಂಭುವಿಗೆನುತ್ತಂ ಕರಂ ಶೂಲಿಗೆಂದು ೬೯

ಬಿಡದೇ ಮಹಾದೇವರೆನಂತಂ ಸಮರ್ಪಿಪುದು
ಪೊಡಮಡುವುದಷ್ಟಾಂಗಯೋಗಪೂರ್ವಕವಾಗಿ
ದೃಢನಂ ಯಥೋಕ್ತ ಪೂಜಾದಿಯಿಂದರ್ಚಿಸುತ್ತಿಂತು ಕಾಲಂಗಳೆವುದಂ
ತೊಡರಿರುತಿಹಾಧ್ಯಾತ್ಮಿಕಾಧಿಭೌತಿಕರೂಪ
ಮೆಡೆವಿಡದಿಹಾಧಿದೈವಿಕರೂಪತಾಪಂಗ
ಳೊಡನಳಿದು ಪರಮೋಕ್ಷಸಿದ್ಧಿಸುವದೆಂಬಲ್ಲಿ ಸಕಲಾಗಮಗಳೆ ಸಾಕ್ಷಿ ೭೦

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರಮಂಜುಳಸಂಪುಂಜರಂಜಿತ ಪುರಾತನವಚನಸಮ್ಮತವಹ
ಅತಿಶಯ ಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ನೋ[2][ಡ
ಲ][3]ತಿನೂತ್ನವಾ[ದಾ]ರುಕಾಂಡದೊ[3][ಳಗ್ಯೆ][3]ದನೆಯ ಸಂಧಿ ಸಂಪೂರ್ಣವಾಯ್ತು ೭೧

1 ಕೆ (ಗ) 2 ಡ ದ (ಕಗ) 3 ಳೈ (ಕಗ)

# ಆರನೆಯ ಸಂಧಿ

ಸೂಚನೆ :

ವೀರಶೈವಾಚಾರವುಂ ಪುರಾತನ[ರ]ಪ್ರ
ಚಾರಮನುಕೂಲಿಸುವ ತೆರದಿ ವಾಮನ ಮುನಿಗೆ
ಸಾರತರಮಾದ ವಾಕ್ಯಗಳಿಂದ ಪಂಡಿತಾರಾಧ್ಯಚಕ್ರೇಶನೊರೆದಂ

ಶೀತಾಗಮಾತ್ಮಜಾಮುಖಕಮಲ ಭಾಸ್ಕರಂ
ಜಾತವೇದೋಮಯ ಲಲಾಟಶುಭಲೋಚನಂ
ಮಾತರಿಶ್ವಾಶನ ಗಣಾಲಂಕೃತಾವಯವ ದಿವ್ಯಲೀಲಾವಿಗ್ರಹಂ
ಯಾತುಧಾನಾಮರಪ್ರಮುಖವಂದಿತ ಸರೋ
ಜಾತನಿಭ ಪಾದಯುಗ್ಮಂ ವೇದಶಾಸ್ತ್ರವಿ
ಖ್ಯಾತನಾಗಿಹ ಚೆನ್ನಮಲ್ಲಗುರು ಚಕ್ರೇಶನೆಮ್ಮ ರಕ್ಷಿಸುವನನಿಶಂ ೧

ಯಾವ ರೀತಿಯಲೊಲಿಸಿ ಶಿವನಡಿಯ ಪಡೆದರಾ
ಶೈವರೆಂದವರ ಚರಿತೆಯ ಕೇಳುತಿರುವಾಗ
ಪಾವಮಾನಿಯು ಗದೆಯನಿಟ್ಟು ಮೇಲಕ್ಕೆ ನಿಮಿಷದಿ ಶಂಭುಂದಯೆಯ ಪಡೆದಂ
ಭೂವಲಯದಲ್ಲೆಂಬ ಮಾತಿಂಗೊಡಂಬಟ್ಟು
ದೇವನೊಳ್ ವೀರವೇಷದಿ ಕಾದಿ ಮೆಚ್ಚಿಸಿದ
ನಾವನಾ ಸೋಸಲೆಯ ಭೈರವಾಂಕರ ಚರಣಗಳಿಗಾನು ಪೊಡಮಡುವೆನು ೨

ಕೇಳಯ್ಯ ವೀರಶೈವಾಚಾರವೆಂಬುದಕೆ
ಮೂಲಮೋ ಗುರುಸೇವೆ ಗುರುಸೇವೆಯಿಲ್ಲದವ
ಮೇಲಾವುದಾಚರಿಸಲಾತಗಾ ಫಲಸಿದ್ಧಿಯಾಗದಿದಂ ಶಾಸ್ತ್ರಸಿದ್ಧಂ
ಆಲೋಚನೆಯುಗೈದು ಮನದೊಳಗೆ ಗುರುಪಾದ
ದೂಳಿಗವನೇ ಮಾಡಬೇಕೆಂದು ನಿರ್ಧರಿಪು
ದೇ ಲಲಿತಚಾರಿತ್ರ ಮಾನಸಿಕ ಗುರುಪೂಜೆಯೆಂದಂ ಪೇಳ್ವರ್ ಪಿರಿಯರು ೩

ಅವರಾವುದಾಣತಿಯನಿತ್ತುದಕೆ ಮಾರಾಡ
ದವರುತ್ತರಕೆ ಸಾಧುವಪ್ಪಂತೆ ನುಡಿಯುತಿಹ
ಸುವಚನಮುಮಂ ವಾಚಿಕದ ಗುರೂಪಾಸ್ತಿಯೆಂದುಸುರುವರ್ ಪ್ರಾಚೀನರು
ಅವರ ಕೆಲಸವನು ಶಿರದಿಂ ವಹಿಸಿ ಘನಸಾಹ
ಸವಮಾಡಿ ತಂದುಕೊಡುವದೇ ಕಾಯಿದ ಪೂಜೆ
ಭುವನದಲಿ ಶಿಷ್ಯವರ್ಗಕ್ಕೆಂದು ನೈಮಿಷಾರಣ್ಯದೊಳ್ ಸೂತನೊರೆದಂ ೪

ಗುರುಗಳಂ ಮನೆಗೆ ಕರೆತರುವಲ್ಲಿ ಬಳಿಕ ತಾಂ
ಗುರುವಿಲಾಸಂಗಳಲಿ ಚರಿಪಲ್ಲಿ ದಾರಿಯಂಲಿ
ಗುರುಗಳಿದಿರಾದರೆ ಪ್ರದೇಶಾಂತರದಲಿ ಕಂಳಿತಿರಲಿ ನಿಂದಿರಲಿ ಮಲಗಿ
ಇರಲಿ ತತ್ತತ್ಕಾಲದಲಿ ಕೊಳುವಲ್ಲಿ ಕೊಂ
ಡಿರಿಸುವಲ್ಲಾವ ವಸ್ತುಗಳ ಕೊಡು ಕಾಲದೊಳ್
ಗುರುಗಳಾಶಯಕಿವಂ ಭಯಂಭಕ್ತಿಯುಕ್ತನೆಂಬಂತೆ ತಾನಾಚರಿಪುದು ೫

ವೈಮನಸ್ಯಂ ಗುರುಗಳೊಳಗಾವಕಾಲದೊಳ್
ತಾ ಮೈಗೊಡದಂ ಬರುವ ಕಾಲವಿದು ನೋಡಲ್ಕೆ
ಸ್ತ್ರೀಮೂಲಮಾಗೊಂದಂ ತಟ್ಟದೇ ಬರುವದಾ ಧನಮೂಲವಾಗಲೊಂದು
ಭೂಮಿ ಮೂಲಕಮಾಗುತೊಂದಿ ವರ ವ್ಯಾಪ್ತಿಯೊಳ್
ಮೈಮರೆಯದಿರಬೇಕು ವೈಮಂರೆದರಿಹಪರದ
ಸೀಮೆಯೊಳ್ ಮನುಜಾಮರರ್ ಕೂಡರಾಗಿ ಭಯದಿಂದ ವರ್ತಿಸುತಿರುವುದು ೬

ನಾನಾವ ಫಲವಬಯಸೀ ಗುರುಗಳಂಘ್ರಿಯಂ
ಸಾನುರಾಗದಿ ಸೇರಿಕೊಂಡಿರ್ಪೆನಿದಕೆ ವಿಷ
ಯೂನುಬಂಧವೆ ವಿರೋಧಂ ತರುವದಿದ ಬಿಟ್ಟರಲ್ಲದಾಗದು ಮುಕ್ತಿಯು
ಸ್ಥಾನಮೆಂದಾವುದಾವುದರಲ್ಲಿ ಗುರುಗಳಭಿ
ಮಾನಿಸುವರದನೆಲ್ಲವಾಕ್ಷಣವೆ ಗುರುಗಳಿಗೆ
ತಾನೀವುದಿದು ಪರಮಪೂಜೆಯೆಂದಾರ್ಚಾರಾಗಮಗಳಲಿ ಪೇಳ್ದರುಂ ೭

ತನ್ನಲ್ಲಿ ವಿಷಯಂದಭಿಲಾಷೆಯೇ ದೋಷವೆಂಂ
ದುನ್ನಯಿಪುದಲ್ಲದೇ ಗುರುಗಳಲ್ಲಿರ್ದೊಡಂ
ಚೆನ್ನಾಗಿ ಮತಿಗೆ ತರಲಾಗದೀಯರ್ಥಮೆಂತೆನೆ ದಕ್ಷಿಣಾಮೂರ್ತಿಯಂ

ಮನ್ನಿಸಿಯೆಂ ಕಲ್ಯಾಣ ಸುಂದರ ಶರೀರವಂ
ಪನ್ನಗಾಭರಣನಾಂತುದು ಕೊರತೆಯೇ ಶಿವಂ
ಗನ್ಯದೋಷಸ್ಪರ್ಶವೆಂತೆಂಬುದಾವ ಕಾಲದೊಳುಂಟು ತಿಳಿದುನೋಡೈ ೮

ಶಿವನೆ ಗುರು ಗುರುವೆ ಶಿವ ಗುರುವುಳಿದು ಶಿವನಿಲ್ಲ
ಶಿವನುಳಿದು ಗುರುವಿಲ್ಲ ಶಿವನೆ ಗುರುರೂಪದಿಂ
ಭುವನದೊಳು ಚರಿಸುತಿಹನದರಿಂದ ಗುರುಹಸ್ತವಂ ಮಸ್ತಕದೊಳಿಡಲ್ಕೆ
ಸವೆದಘವೆಂದಂ ವಿಶ್ವಭೇಷಜವೆನಂತ್ತ ವೇ
ದವೆ ಪೇಳ್ವುದಾವ ತಾತ್ಪರ್ಯವಂ ಸಂಗ್ರಹಿಸಿ
ಶಿವನೆಂಬ ಪರವಸ್ತು ಗುರುಹಸ್ತಗತವಾದ ಧನವೆಂದು ಭಾವಿಸುವುದು ೯

ಗುರುನಿರೀಕ್ಷಣಮಾತ್ರದಿಂದ ಲಿಂಗಕ್ಕೆ ಕಳೆ
ದೊರಕೊಂಬುದಾಗಲಷ್ಟಸ್ತ್ರಿಂಶದಂಕದಿಂ
ಹರನಾ ಕಳೆಗಳಿಂದ ಕೂಡಿ ಲಿಂಗದ ಮಧ್ಯದಲ್ಲಿ ತಾನೇ ವರ್ತಿಪಂ
ಗುರುಹಸ್ತಮಾತ್ರಸಂಸ್ಪರ್ಶನವ ತಾಳ್ದ ಮೇ
ಲುರೆಪ್ರಾಣಲಿಂಗವೆನಿಸುವುದಾ ಮಹಾಲಿಂಗ
ಧರಣದಿಂ ಭೋಗಮೋಕ್ಷಗಳಪ್ಪವಿದರಿಂದ ಗುರುವೆ ಪರದೈವಮಕ್ಕುಂ ೧೦

ಹಾಗೆ ಗುರುಪಾದಸೇವೆಯ ಮಾಡುತಿರ್ಪುದಾ
ವಾಗ ಸರಸೀರುಹಸಖಂ ಮಹೋದಯ ಶಿಖರ
ಭಾಗಮಂ ಸಾರುವಂ ತತ್ಕಾಲಕಂ ನೋಡೆ ಹಿಂದೆರಡು ಘಳಿಗೆಯಲ್ಲಿ
ಆಗಿರ್ಪ ಕಾಲಮೇ ಬ್ರಾಹ್ಮೀಮುಹೂರ್ತವೆಂದುಂ
ಯೋಗಿಗಳು ಪೇಳ್ವರಭ್ಯುತ್ಥಾನಕಾಲಮೆಂ
ದಾಗಳೇಳುವುದು ಜಲಪಾತ್ರೆಯಿಂ ಗ್ರಾಮಕ್ಕೆ ಬಹಿರ್ಭಾಗಮಂ ಸಾರ್ವುದು ೧೧

ನಯದಿ ಪೇಳಲ್ಪಟ್ಟ ರೀತಿಯಂ ಮಾಳ್ಪುದಾ
ಶ್ರಯಿಸಿ ಶೌಚಾದಿಗಳ ನದಿಯಲ್ಲಿ ಕುಲ್ಯೆಯಲಿ
ಭಯಮಿಲ್ಲದಿಹ ತಟಾಕದಲಿ ಸರಸಿಯಲಿ ಪಲ್ವಲದಿ ಕೂಪದೊಳಾದೊಡಂ
ಜಯಮಂನಾರೈದು ದೇಹಕ್ಕೆ ಮಜ್ಜನವ ನಿ
ಶ್ಚಯದಿ ಮಾಡುವದು ಕಾಯದೊಳನುಪಪತ್ತಿಯಿಂ
ನಯಸೆ ಕಟಿಮಾತ್ರಮಾಚರಿಪುದೈ ಸ್ನಾನಮಂ ಲಿಂಗಾರ್ಚನಾ ತತ್ಪರಂ ೧೨

ಎಂತಾದೊಡುಳಿಸದೇ ಮಧ್ಯಾಹ್ನದ ಸ್ನಾನ
ಮಂ ತೀರಿಸುವದು ಶಿವಲಿಂಗಪೂಜೆಯ ಮಾಡಿ
ಮುಂತಾವ ಜಂಗಮಂ ಬರಲವರ ಸುಪ್ರಸಾದವ ಕೊಂಡು ಭುಂಜಿಸುವದು
ಕಂತಂಹರನುಸುರ್ದಂ ಹಿಮಾದ್ರಿಗೇ ವಾತೂಲ
ತಂತ್ರದಿ ಶುಚೌತಃಚರಿತೇ ಶೀಲಮೆರಪದಂ
ಚಿಂತಿಸಿ ಗೃಹಾರಾಮಧಾನ್ಯಗೋತತಿಗೆ ಲಿಂಗಾಂಕಿತಂ ಮಾಳ್ಪುದು ೧೩

ವಸನಭೂಷಣ ಕೋಶಗಳಿಗೆ ನಂದ್ಯಂಕಿತವ
....ದಿದೆ ದ್ರವ್ಯಶುದ್ಧಿಯೆಂದೆನಿಸುವದು
ಪೊಸತನಂಗೀಕರಿಪುದಲ್ಲದೇ ಪಳೆದಾದೊಡಾದಡಂ ಮುಟ್ಟದಿಹುದು
ಪಶುಪತಿಯ ದೀಕ್ಷೆಯಿಲ್ಲದ ಜನರ ಕೈಯ ಸೋ
ಕಿಸಲಾಗದ್ಯೈ ಜೇನ ಮುಟ್ಟಲಾಗದು ನೀರು
ನಸುಪುಳುಗಳಿಂ ಹಾಲು ಕೆಚ್ಚಲಿಂದುಗುಳಿಂದ ಕಾಮಿನೀಬಿಂಬಾಧರಂ ೧೪

ಲವಮಾಂಸ ಮದ್ಯಮಾಂಸಂ ಮಹಾಮಾಂಸವೆನಿ
ಸಿವಕೆ ಕೂಪಕೆ ಪಶುಗೆ ನಿಜಲಿಂಗಮುದ್ರೆಯಿಂ
ಯುವತಿಗಂ ಲಿಂಗಧಾರಣದಿಂ ಪವಿತ್ರಮಂ ಮಾಡಿಪಂ ಸ್ವೀಕರಿಪುದು
ಭವಿಪಾಕಮಂ ಮುಟ್ಟಲಾಗದಾವಾಗಳುಂ
ಶಿವನ ಪೂಜೆಯ ಮಾಡುವಾಗ ಲೋಕಂಗಳ
ವ್ಯವಹರಣಮಂ ಮಾತನಾಡಲಾಗದು ಮಧ್ಯರಾತ್ರಿಯೊಳ್ ಭುಂಜಿಸುವುದು ೧೫

ದೋಷವಿರಹಿತಮಾದುದೇ ಜಲಂ ಕ್ರಿಮಿಕೀಟ
ರಾಶಿಯಿಂ ವೇಧೆಯಂ ಪಡೆಯದಿಹ ಪತ್ರಫಲ
ಕೌಸಂಮಂ ಷಟ್ಸ್ಥಲಬ್ರಹ್ಮಿಯಾಗಿಹ ಜಂಗಮವೆ ಪಾತ್ರಮಿೂ ನಾಡಿನ
ವಾಸಿಯಂ ಕೈಕೊಂಡು ಪದಿನೆಂಟುವರ್ಣಗಳ
[ತಾ] ಸಾಧಿಸದೆ ಶಿವನ ಸಂಸ್ಕಾರದಿಂದ ಪೊಸ
ತೀ ಶರೀರವೆನಂತ್ತ ಶಿವಭಕ್ತನೆಂಬುದೇ ಗೋತ್ರ ಕೇಳ್ವೈ ಕುಮಾರ ೧೬

ಇದುವೆ ಷಡ್ವಿಧದ ಸಂಸ್ಕಾರವೆಂದೆನಿಪುದ್ಯೆ
ಇದಕೆ ತಾತ್ಪರ್ಯಸಂಗ್ರಾಹಕ ಶ್ಲೋಕಂಗ
ಳೊದಗಿಹವು ವೀರಶೈವಾಮೃತ ಪುರಾಣದೊಳ್ ಗ್ರಂಥವಿಸ್ತಾರಭಯದಿಂ

ಆದನುಳಿದೆವ್ಯೆ ಗುರುವ ಸೇರಿದವನೇ ದಾಸ
ನೊದಗಿ ತದ್ಗುರುವಲ್ಲದನ್ಯಗುರುವಿಲ್ಲದವ
ನಂದಿತ ಗುಣವೀರದಾಸಂ ಗುರುವ ಸೇರಿದವರೊಳು ಕುಲವನೆಣಿಸದಾತಂ ೧೭

ಧರಣಿಯಲಿ ಭೃತ್ಯನೆನಿಸುವ ತನ್ನ ದೇಹಮಂ
ಚರಲಿಂಗಕಿತ್ತವಂ ವೀರಭೃತ್ಯಂ ಗೃಹಾ
ಭರಣ ಪಶುಪುತ್ರ ದಾರಾದಿಗಳ ಜಂಗಮಕ್ಕಿತ್ತವಂ ಸಮಯಿಯೆನಿಪಂ
ಮರಳಿ ಮೋಹಕ್ಕೆ ಮೈಗೊಡದವಂ ಸಜ್ಜನವಿ
ಸರದಿ ಸಕಲಾವಸ್ಥನೆನಿಪನೀ ಷಡ್ವಿಧದ
ಪರಮಸಜ್ಜನಿಕೆಯಂ ತಿಳಿದು ಶಿವಶಾಸ್ತ್ರರೀತಿಯಲಿ ತಾನಾಚರಿಪುದು ೧೮

ಶಿವಭಕ್ತರಲಿ ಕುಲವ ನೋಡದೇ ತರಬೇಕು
ಯುವತಿಯರ ಮೇಣವರಿಗಂ ತನ್ನೊಳಿರ್ದೊಡಂ
ಯುವತಿಯರ ಕೊಡಬೇಕು ಚರ್ಮಪಾತ್ರೆಯಲಿ ಘೃತತೈಲಜಲಮಿರ್ದೊಡದನು
ಸವಿಯದೇ ಬಿಡಬೇಕು ಕಾಲಕಾಲದಲಿ ಲಿಂ
ಗವ ಪೂಜಿಸದೆ ಭೋಜನವ ಮಾಡಲಾಗದಾ
ಶಿವನಲ್ಲದನ್ಯದೈವವ ಭಜಿಸಲಾಗದೆಂದುದು ವೀರಭದ್ರೀಯವು ೧೯

ಕಾಮವಿರಬೇಕು ಮುಕ್ತಿಯ ವರಿಸುವಲ್ಲಿ ದು
ರ್ನಾಮಕಾ ಧರ್ಮದೊಳ್ ಕ್ರೋಧವಿರಬೇಕು ಗಿರಿ
ಜಾಮನೋಹರನಂಘ್ರಿಯರ್ಚನೆಯೊಳಿರಬೇಕು ಲೋಭಂ ಶಿವಾಗಮದಲಿ
ವ್ಯಾಮೋಹವಿರಬೇಕು ದುರ್ವಾದಿ ವರ್ಗದೊಳ್
ಭೂಮಮದವಿರಬೇಕು ತನ್ನ ವಂಚಿಪ ಯುವತಿ
ಹೇಮಭವನಾರಾಮಗಳಲಿ ಮತ್ಸರವಿರಲ್ಕಿವೆ ಧರ್ಮಷಡ್ವರ್ಗವು ೨೦

ತಿಥಿವಾರ ನಕ್ಷತ್ರದೋಷಂಗಳೆನಿಸದೇ
ಮೃತಸೂತಕಾದಿಗಳನೆಣಿಸದೇ ತನ್ನಯಾ
ಪಿತಮಾತೆ ಮುಂತಾದವರ್ಕಳನ್ಯಾಧ್ವದೊಳ್ ಚರಿಸಲವರಂ ಬಿಡುವುದೆ
ಸತತಮಿದು ತಿಳಿಯೆ ಲಿಂಗಾಚಾರಮಾಗಮದ
ತತಿಯೊಳೇನೇನುಸುರ್ದರು ಪುರಾತನರಿಂದ
ಗತಿಗೊಂಡುದಂ ಪಿಡಿದು ನಡೆವುದೇ ವೀರಶೈವದ ಸದಾಚಾರಮಹುದು ೨೧

ಚರಲಿಂಗದಲ್ಲಿ ತಾನಾಳಾಗಿ ನಡೆವುದೇ
ಧರೆಯೊಳಗೆ ನೋ[1]ಡೆ[1] ಭೃತ್ಯಾಚಾರವೆನಿಸುವುದು
ಮರಮಣ್ಣುಕಲ್ಲು ಲೋಹಗಳಲ್ಲಿ ವಿರಚಿಸಿದ ಲಿಂಗದೊಳಗಿಲ್ಲವೆಂತು
ಹರರೂಪವಸ್ತುವಿನೊಳದರಂತೆ ಲಿಂಗವಂ
ಧರಿಸಿದವನಾ[ವ]ನಾಗಲಿ ಮೇಣವನ ಕುಲವ
ನರಸದೇ ಶಿವನೆಂಬ ಬುದ್ಧಿಯಿಂ ನಡೆವುದೇ ಶಿವಾಚಾರವೆಂದೆನಿಪುದು ೨೨

ಶಿವನಿಮಿತ್ತಂ ಮಾಡಿದಾ ದುಷ್ಕ್ರಿಯೆಂಯೊ ನೋಡೆ
ಶಿವಕರ್ಮವದನುಳಿದು ಮೇಣನ್ಯವಿಷಯದೊಳ್
ಶಿವಕರ್ಮವಂ ಮಾಡಲದು ದುಷ್ಕ್ರಿಯಾತನುಮೆನುತ್ತ ಸಜ್ಜನನಾಗಲಿ
ಶಿವಪದದ್ರೋಹಿಯಾದರೆ ಕಂಡಮಾತ್ರದೊಳ
ಗವನ ಸಂಹರಿಸಿ ಶಿವಭಕ್ತರ್ಗೆ ಮಾತಿ[2]ಮೊಹೋ[2]
ತುವವನಾಚರಿಪುದೇ ಸರ್ವಾಂಶದೊಳ್ ಗಣಾಚಾರವೆಂದೆನಿಸುತಿಹುದಂ ೨೩

ಇದುವೆ ಪಂಚಾಚಾರವೆನಿಸುವುದಂ ಪೂರ್ವದೊಳ
ಗಿದನಾಚರಿಸಿ ಶರಣರೈದಿದರು ಶಂಕರನ
ಪದವ ಗುರುವೇ ಶಂಭುಯೆಂಬ ನಿಜಬುದ್ಧಿಯೆ ಗುರುವ್ರತಮೆನಿಸಿಕೊಂಬುದು
ಮುದದಿ ಗುರುವಿತ್ತ ಲಿಂಗವೆ ಮಹಾದೇವನೆಂ
ದದರೊಳಗೆ ಭೇದಮಿಲ್ಲದುದೆ ಲಿಂಗವ್ರತಂ
ಸದರವೆನಿಸದೆ ಮಹಾಚರಲಿಂಗಭುಕ್ತೋಪಭೋಗ್ಯ ಭೋಗವ ಕೊಂಬುದೆ ೨೪

ವೇಂದಿನಿಯೊಳಪ್ಪುದಾಚಾರವ್ರತಂ ಸುಪ್ರ
ಸಾದವ್ರತಂ ನೋಡೆ ತಚ್ಛೇಷಮಂತ್ರ ಶಿ[3][ವ][3]
ಗಾದರದೊಳರ್ಪಿಸಿಕೊಳುವದು ಮೇಣಾ ಷಟ್ಸ್ಥಲಬ್ರಹ್ಮಿಗಳ ಭಕ್ತಿಯಿಂ
ಪಾದೋದಕದಲಿಷ್ಟಲಿಂಗಕಭಿಷೇಕವಂ
ಸಾದರದಿಗೈದು ಶಿರದೊಳ್ ತಾಳುವದು ನೋಡೆ
ಪಾದೋದಕವ್ರತಂ ಪೂರ್ವೋಕ್ತ[4][ಗುರುಲಿಂಗ[4]]ಜಂಗಮಂಗಳಲಿ ಬಿಡದೆ ೨೫

ಶಾಂತಿಮೊದಲಾದ ಸಂಪತ್ತಿಯಿಂ ಭಜಿಸುವದೆ
ಸಂತತಂ ಭಾಕ್ತಿಕವ್ರತಮಿಮಂ ಪರಿಗಣಿಸ
ಲಂತು ಷಡ್ವಿಧವ್ರತಂಗಳ್ ಸದಾವೀರಶೈವರ್ಕಳಿನನುಷ್ಠೆ ಯಾವ

1 ಡು 2 ಮಾಹೇ (ಕ) 3 ವನಿ (ಕಗ) 4 ಗಂ....ಗಂ (ಕಗ)

ಅಂತ್ಯಜರು ಕೊಟ್ಟ ದಾನಂ ತಾಮ್ರಪಾತ್ರೆಯೊಳ್
ನಿಂತ ಗೋವಿನ ಹಾಲು ಕಾಂಸ್ಯಮಯಂಪಾತ್ರೆಯಲಿ
ನಿಂತಿರ್ಪ ನಾಳಿಕೇರೋದಕಂ ರಜಕರ ತಟಾಕಸ್ಥಮಾಗಿಹ ಜಲಂ ೨೬

ತೊಗಲ ಚೀಲದಲಿ ತುಂಬಿದ ಚೂರ್ಣಗಳು ನೀಚ
ಮೃಗ ಬಿಡಾಲಾರಂಣ ಶಿಖಾಶ್ವಾನಗಳ ಮೈಯ
ತಗುಲಿರ್ದ ಹಸಿಯ ವಸ್ತುಗಳು ಬಿಡತಕ್ಕವಿವು ಬಾಹ್ಯಭವಿವರ್ಗವಂಕ್ಕುಂ
ಆಗಲದಿರುವಾಂತರದ ಭವಿಗಳಾರೆಂದೊಡಂ
ಮಗನೆ ಕೇಳ್ಳೈ ಕಾಮಮನ್ಯನಾರಿಯರಲ್ಲಿ
ಮಿಗಿಲಾಗಿ ತನ್ನವರು ಹೇಳಿದಂದ ಮಾಡರೆಂತೆಂಬ ಮೈಗೆಟ್ಟ ಕೋಪಂ ೨೭

ಕಾಲದಲಿ ಬಂದ ಸತ್ಪಾತ್ರಕೀಯದ ಲೋಭ
ಕೀಳುವಿಷಯಂಗಳಲಿ ನೆಲೆಗೊಂಡ ಮೋಹ ನರ
ಜಾಲದಲಿ ನನಗೆ ಸರಿಯಾರಿಲ್ಲವೆಂಬ ಮದ ಶಿವಭಕ್ತರಾದವರಲಿ
ಕೇಳದೇ ಹೋದರೆಮ್ಮಯ ಸಮಯವೆಂದು ಸತ
ತಾಲಾಪಿಸುವ ಮತ್ಸರಂ ನೋಡಲಾರಿವೇ
ಪೇಳೆಪಡುವವು ಮೇಲಿವಕ್ಕೆ ಘನತರವಾದ ಪಾಪಮೊಂದಿಹುದಂ ಕೇಳು ೨೮

ಪುಸಿಯಿಲ್ಲದೇ ಸಕಲಕಾಲದಲಿ ಹಿತವಾಗಿ
ಮಸುಳಿಸದ ಸಂತೋಷಮಂ ದಿನದಿನಕ್ಕೆ ಪು
ಟ್ಟಿಸುವ ವಾಕ್ಯಂಗಳನೆ ಪೇಳುವುದು ಹಿತವಾದೊಡಂ:ಪ್ರಿಯಮುನುಳಿದಿರ್ಪುದಂ
ಉಸುರಲಾಗದು ಕೂರ್ಮೆಯಂ ಪಡೆವುದಾದೊಡದ
ನುಸುರಲಾಗದಸತ್ಯಮಾಗಿರಲ್ಕದರಿಂದ
ವಸುಧೆಯೊಳ್ ನಾನೃತಾತ್ಪಾತಕಂ ಪರಮೆಂದು ಹೇಳಿಹುದು ಶಾಸ್ತ್ರಗಳಲಿ ೨೯

ಎಲ್ಲರೊಂದೇಠಾವಿನಲಿ ಕೂಡೆ ತವಸಿಗಳ್
ಬಲ್ಲವರು ಸಕಲಪಾಪಂಗಳಂ ಪಿಡಿದು ತುಲೆ
ಯಲ್ಲಿರಿಸಿ ತೂಗುವಾ ಸಮಯದೊಳಗನೃತಮೊಕ್ಕಡೆಯ ತಕ್ಕಡಿಗೆ ಬರಲು
ಉಳ್ಳ ಪಾಪಂಗಳೊಂದೊಂದನೇ ಬಡಿದಿಡ
ಲ್ಕೆಲ್ಲಪಾಪಂಗಳೊಟ್ಟಾಗಿಯುಂ ಪೋಣಿದಕ್ಕೆ
ಮೆಲ್ಲಿತ್ತೆನಿಸದಾಗಲಿದರ ಭಾರವೆ ಹೆಚ್ಚಿತೇನೆಂಬೆನಾಶ್ಚರ್ಯಮಂ ೩೦

ಸಟೆಯಂನೊಂದಂ ಬಿಟ್ಟರಹುದು ಮುಂದಹ ಶುಭಂ
ಸಟೆಯನೊಂದಂ ಬಿಟ್ಟರಹಂದಂ ಪಿಂದಿಹ ಶುಭಂ
ಸಟೆಯಂನೊಂದಂ ಬಿಟ್ಟರಾಗುವದು ವರ್ತಮಾನದಗಮ್ಯಸಂಪತ್ತಿಯು
ಸಟೆಯು ಬಿಟ್ಟರೆ ನಿಂತ ಪಾಪಂಗಳೋಡುವವು
ಸಟೆಯು ಬಿಟ್ಟರೆ ಬರ್ಪ ಪುಣ್ಯಂಗಳೈದುವವು
ಸಟೆಯು ಬಿಟ್ಟರೆ ಶಂಭುಲಿಂಗದ ಕಟಾಕ್ಷ ಕೈಸೇರುವುದು ಸತ್ಯವಾಗಿ ೩೧

ಮೇಲಾಗಿ ಶಾಸ್ತ್ರದಲಿ ಪೇಳಿದಂದದಿ ನಡೆವ
ಶೀಲವೊಂದನೆಯದಂಗನೆಗೆ ಪ್ರಿಯದಿಂ ತನ್ನ
ಶೀಲವಂ ನಡೆಯಿಪ್ಪುದೆರಡನೆಯದಾಕೆಯು ರಜಃಸೂತಕಾದಿಗಳುಳಿದ
ಶೀಲ ಮೂರನೆಯದ್ದೈ ಕರ್ಮವಂ ತಾನುಳಿವ
ಶೀಲ ನಾಲ್ಕನೆಯದಾ ಗರ್ಭಸಂಸ್ಕಾರಮಯ
ಶೀಲವೈದನೆಯದು ಚರಪ್ರಸಾದದ ಲಿಂಗ[1]ಕೀವು[1]ದಾರನೆಯ ಶೀಲಂ ೩೨

ಜಂಗಮ[2]ನೆ[2] ಶಿವನೆಂಬುದೇಳನೆಯದ್ದೈ ಪ್ರತೋ
ಪಾಂಗಮಹ ಭಾಂಡಕ್ಕೆ ವಸ್ತ್ರಾವೃತಿಯೆಯೆಂಟ
ರಿಂ ಗಣಿತಮಹುದು ಮಾಹಿಷವನುಳಿವುದೆ ನವಮುಮಕ್ಕು ದಶಮಂ ಭಾವಿಸೆ
ಲಿಂಗಿಯಿಂದೇ ಗೈಸುವ ಕ್ಷೌರ ಹನ್ನೊಂದ
ರಿಂ ಗಣಿತಮಾದುದೇ ಮಿಕ್ಕ ಪಾಲಂ ಬಿಟ್ಟು
ಲಿಂಗಮುದ್ರೆಯ ಗೋವಿನಿಂ ಕರೆದುಕೊಂಬುದಾ ಗೋವಿಂಗೆ ಭವಿಗಳಿಂದ ೩೩

ಕಾಪಾಡಿ ಸಮದೀಗ ಹನ್ನೆರಡನೆಯ ಶೀಲ
ಮಾಪಂತೆ ಸಪ್ಪೆಯುಂ ಕೊಂಬುದು ತ್ರಯೋದಶಂ
ಗೋಪತಿಯ ಮುದ್ರೆಯಾಂತಿಹ ದನದ ಗೋಮಯವ ಪರಿಶುದ್ಧವಾಗಿ ತಂದು
ಲೇಪಿಸುವುದೇ ಚತುರ್ದಶಲಿಂಗಮುದ್ರೆಯಾ
ರೂಪಂದಳೆದ ಭಾಂಡಮಂ ಗ್ರಹಿಸಿ ಶಿವಧರ್ಮ
ವ್ಯಾಪೃತಿಯ ನಡಸುವದೆ ಪಂಚದಶ ತೊವಲಕಿವಿಯುಳಿದ ರಾಟೆಯ ನೂಲಿನಿಂ ೩೪

ಪಟವ ಮಾಡಿಸಿ ಪೊದೆವುದೇ ಷೋಡಶಂ ಸಮು
ತ್ಕಟವಾದ [3]ಚಿ[3]ಲಮೆಯಿಂದದ ತೊಳೆದು ಕೈಕೊಳ
ಲ್ಪಟುವಾಗಿ ಹದಿನೇಳನೆಯ ಶೀಲ ಪಾವುಗೆಯುಲೇ ನಡೆಯಲಷ್ಟಾದಶಂ

1 ಕಿವುವು (ಕ) 2 ವೆ (ಗ) 3 ಚಿ (ಗ)

ಉಟಜಕ್ಕೆ ಭವಿದೃಷ್ಟಿ ಬೀಳದಂದದಿ ವೃತಿಯು
ಘಟಿಪುದೇಕೋನವಿಂಶತಿಶೀಲಮಾ ನೆಲಕೆ
ನಿಟಿಲಾಕ್ಷನಂಕಿತದ ಕಲ್ಲ ನಾಲ್ದಿಕ್ಕಿನಲಿ ನಿಲಿಸುವದಂ ವಿಂಶತಿತಮಂ ೩೫

ಮಿಣಿಯು ಕಟ್ಟದ ಲಿಂಗಮುದ್ರೆಯೆತ್ತುಗಳಿಂದ
ದಣಿಯದೇ ಬೆಳೆಯಕೊಳ್ಳುವದೇಕವಿಂಶತಿಯು
ಗಣದ ಶೀಲಂ ಜಂಗಮದಿ ದೋಷಮಂ ಹುಡುಕದಿಹುದು ದ್ವಾವಿಂಶತಿತಮಂ
ತ್ರಿಣಯನನ ಧರಿಸದಾತನ ನಂಟುತನವ ತಾ
ನೆಣಿಸದಿಹುದಿಪ್ಪತ್ತುಮೂರನೆಯ ಶೀಲ ಸುರ
ಗಣವನನ್ಯವ ನುತಿಸಲದ ಕೇಳದಿರುವದಿಪ್ಪತ್ತನಾಲ್ಕನೆಯ ಶೀಲಂ ೩೬

ಶಿವಭಕ್ತರೇ ಕುಲಜರೀಶನೇ ಪರದೈವ
ಶಿವಮಂತ್ರಮೇ ಮಂತ್ರರಾಜಮೆಂದೆನಿಪುದೇ
ಭುವಿಯೊಳಗೆ ಪಂಚವಿಂಶತಿತಮಂ ಜಾತಿಸೂತಕ ಜನನಸೂತಕಗಳಂ
ಶಿವಸೂತಕವನುಳಿಯೆ ಷಡ್ವಿಂಶತಿತಮ ಶೀ
ಲವದು ಪರಧನ ಪರಾಂಗನೆಯರಲಿ ವಿಮುಖತೆಯು
ನವಗಾಹಿಸಲ್ಕೆ ತಾರಾಸಪ್ತವಿಂಶತಿಕದ ಶೀಲವಿನಾಶನಂ ಬೇಡದಿಹುದೆ ೩೭

ಧರೆಯೊಳಿಪ್ಪತ್ತೆಂಟನೆಯ ಶೀಲ ಭಕ್ತರಲಿ
ಪರಿಭಾವಿಸದೆ ಕುಲವನಡೆವುದೇಪೊಂದನಂಳಿ
ದಿರುವ ಮೂವತ್ತನೆಯ ಶೀಲ ಮೂವತ್ತನೆಯ ಶೀಲವಾ ಭಕ್ತರಲ್ಲಿ
ಅರಿವನರಸದೆ ವರ್ತಿಸುವದು ತದ್ಭಕ್ತರಲಿ
ಬೆರೆದು ತರ್ಕಿಸದಿಹುದು ಮೂವತ್ತರೊಂದನೆಯು
ವರಶೀಲ ಶುನಕಕುಕ್ಕುಟವರಾಹಾಖು ಭುಗ್ವರ್ಗಮಂ ತನ್ನ ನೆಲದಿ ೩೮

ಕೂಡದಿರುತಿಹುದೆ ಮೂವತ್ತೆರಡನೆಯ ಶೀಲ
ಕಾಡುತಿಹ ರೋಗಗಳಿಗೌಷಧಿಯಕೊಳ್ಳದ
ಪ್ರೌಢಿಯೇ ಮೂವತ್ತು ಮೂರನೆಯ ಶೀಲ ತಿಥಿವಾರಂಗಳೆಣಿಸದಿಹುದೆ
ನೋಡೆ ಮೂವತ್ತುನಾಲ್ಕನೆಯ ಶೀಲಂ ಭವಿ [ಯು]
ಕೂಡಿ ನೆರಮನೆಯೊಳಿರದಿರ್ಪುದೇ ಮೂವತ್ತು
ಕೂಡಿದೈದದರ ಶೀಲ ಶಿವರಾತ್ರಿ ಮೊದಲಾದ ಶಂಭುವ್ರತಂಗಳಲ್ಲಿ ೩೯

ಉಪವಾಸವಂ ಮಾಡದಿಹುದೆ ಮುವತ್ತಾರ
ರ ಪರವಾಗಿಹ ಶೀಲ ಗುರುಲಿಂಗಜಂಗಮದಿ
ಕಪಟವಿಲ್ಲದುದೆ ಮೂವತ್ತೇಳನೆಯ ಶೀಲ ತೀರ್ಥಯಾತ್ರಾದಿಗಳಲಿ
ಚಪಲನಾಗದಂದು ಮೂವತ್ತೆಂಟನೆಯ ಶೀಲ
ಮುಪದೇಶಮನ್ನಾರಿಗಾದೊಡೀಯದಂದೆ ಕೇ
ಳುಪಚರಿಸುತೇಕೋನಮಾದ ಚತ್ವಾರಿಂಶದಂಕಶೀಲಂ ಕುಮಾರ ೪೦

ಚರಲಿಂಗದಲ್ಲಿ ಡೋಂಕಾಗಿ ತಾ ನಡೆಯದೇ
ವರಿಪುದೇ ನಾಲ್ವತ್ತನೆಯ ಶೀಲ ಬಿನ್ನವಿಸಿ
ಪರಿಚರಿಪರಲ್ಲಿ ಪರದೇಶಿ ಜಂಗಮಂದಲ್ಲಿ ಭೇದಮಂ ನಡಸದಿಹುದೆ
ಸ್ಥಿರವಾಗಿ ನಾಲ್ವತ್ತರೊಂದನೆಯ ಶೀಲಮೊ
ತ್ತರಿಪಾಸೆಯಂ ತೊರೆದುದೀಗ ನಾಲ್ವತ್ತರೊಡ
ನೆರಡುಕೂಡಿದ ಶೀಲಮಾಚಾರವೇ ಪ್ರಾಣ ಪ್ರಾಣವೇ ಮರಜಂಗಮಂ ೪೧

ಎಂದಂ ಭಾವಿಪುದು ನಾಲ್ವತ್ತುಮೂರನೆಯ ಶೀ
ಲಂ ದಣಿಯದಿಹುದೀಗ ಕಾಲವಿಪರೀತಕ್ಕೆ
ಸಂದ ನಾಲ್ವತ್ತುನಾಲ್ಕನೆಯ ಶೀಲಂ ನಾಲಿಗೆಯಲಿ ಬಿಡುನುಡಿಯಳಿದುದೆ
ಹೊಂದಿರುವರಲ್ಲಿ ನಾಲ್ವತ್ತೈದನೆಯ ಶೀಲ
ಮುಂದಾರ ಬಿಡುನುಡಿಗಳಂ ಕೇಳದಿರುವದೇ
ನಿಂದ ನಾಲ್ವತ್ತಾರನೆಯ ಶೀಲ ಕನಸಿನೊಳಗಾದೊಡಂ ನೆನೆಯದಿಹುದೆ ೪೨

ಪರದೈವಗಳನು ನಾಲ್ವತ್ತೇಳನೆಯ ಶೀಲ
ತರಣಿಚಂದ್ರರ ಬೆಳಕಿನೊಳ್ ಬಂದು ಚೆನ್ನಾಗಿ
ಚರಿಸದಿರುತಿಹುದೆ ನಾಲ್ವತ್ತೆಂಟನೆಯ ಶೀಲ ಸೀಮೆಯಂ ದಾಟದಿಹುದೆ
ಪರಿಭಾವಿಸಲ್ಕೆ ನಾಲ್ವತ್ತರಿಂದೊಂಬತ್ತ
ಬೆರೆದ ಲೆಕ್ಕದ ಶೀಲಮಾವಶ್ಯಮಾಗಿರುವ
ಕರಣೀಯಮಿರೆ ಗಾಡಿಯೇರಿ ಮುಸುಕಿಂ ಪೋಪುದೈವತ್ತನೆಯಂ ಶೀಲವು ೪೩

ದಶವಾಯುಗಳನಂ ನಿಗ್ರಹಿಸುತಿಹುದೈವತ್ತ
ನೊಸೆದೊಂದನೆಯ ಶೀಲ ಕಾಮಾದಿವೈರಿಗಳ
ವಶವರ್ತಿಗಳ ಮಾಳ್ಪುದೇ ದ್ವಿಪಂಚಾಶತ್ತಮದ ಶೀಲ ಸುರಭಿಗಳಲಿ

ವಶನಾಗದಿರ್ಪುದೈವತ್ತುಮೂರನೆಯ ಶೀ
ಲ ಶಶಾಂಕಶೇಖರಾಕ್ಷವನುಳಿದು ರನ್ನದಿಂ
ಬೆಸುಗೆವಡೆವಾಭರಣಗಳನಾನದಿರ್ಪುದೈವತ್ತುನಾಲ್ಕನೆಯ ಶೀಲಂ ೪೪

ಶರಣನಲಿ ಲಿಂಗಮಾ ಲಿಂಗದಲಿ ಶರಣನೆಂ
ದರಿವುದೈವತ್ತೈದನೆಯ ಶೀಲ ದಶವಿಧಂ
ಚರದಪಾದೋದಕಂ ಸುಪ್ರಸಾದವ ನೋಡಲೇಕಾದಶಪ್ರಕಾರಂ
ಅರಿವುದಿದರೊಳಗೆ ಭೇದವನು ತಚ್ಛೀಲಮಂ
ಗುರುಗಳೆಂತೆಂಬರೈವತ್ತಾರನೆಯದೆಂದು
ಹರನ ಚಾತುರ್ವಿಧ್ಯಪುರುಷಾರ್ಥಮುಳಿಯಲೈವತ್ತೇಳನೆಯ ಶೀಲವೈ ೪೫

ಪಂಚೇಂದ್ರಿಯದೊಳು ಲಿಂಗೋಪಭೋಗವ ಮಾಳ್ಪು
ದಂ ಚದುರರೆಂಬರೈವತ್ತೆಂಟನೆಯದೆಂದು
ಚಂಚಲಿಸದೇ ಷಟ್ಸ್ಥಲದಿ ನಿಂದರೈವತ್ತರೊಂಬತ್ತನೆಯ ಶೀಲವು
ಮಿಂಚುವನುರಾಗದಿಂ ಬಂದಂದಂಗದ ಭೋಗ
ಮುಂಚಿ ತನ್ನಿಂ ಬಂದುದಹುದು ಲಿಂಗದ ಭೋಗ
ಹಂಚಿಕೆಯೊಳಿದನರಿಯದಿಹ ಶೀಲ ಷಷ್ಠಿತಮುವೆಂದರಾಚಾರ್ಯೇಂದ್ರರು ೪೬

ಮತಿಯಲಿವು ನಿಗಮಂಗಳರಿವಖಂಡಿತದರಿವು
ಮಿತಿಯಿಲ್ಲದಿಹ ಬೆಳಕಿನರಿವಲರಿದರಿವುತಾ
ಜೊತೆಗೂಡಲಾಗಿ ಪಂಚಜ್ಞಾನವಿವನರಿವುದೇಕಷಷ್ಠಿಯ ಶೀಲವೈ
ಗತಿವಿಡಿದನೀಗಲುದಯಾಚಲಾಗ್ರದಿಭೇಟ
ಪತಿಯೆಂಬುದಂ ಮರಳಿಯಪರಗಿರಿಶಿಖರದೊಳ್
ಗತನಾದನೆಂಬಂದಂ ಕಾಣದಿರುತಿಪ್ಪುದರುವತ್ತೆರಡನೆಯ ಶೀಲವು ೪೭

ಐದಿಂದ್ರಿಯಗಳ ಪಾತ್ರೆಗಳರಿವಿನಿಂ ಬೆಳಗು
ತೈದುವಿಷಯಂಗಳಂ ಮೇಣಲ್ಲಿ ನೆಲಸಿ ತೋ
ರ್ಪೈದುಲಿಂಗಂಗಳಿಗೆ ಕೊಟ್ಟುಕೊಂಬಂದೆ ಸುತ್ರಿಷಷ್ಠಿತಮ ಶೀಲಮಕ್ಕುಂ
ಮಾದೇವಪರಮಾದ ಜಪತಪೋಧ್ಯಾನಿಗಳ
ಬಾಧೆಗೊಳಗಾಗದಾ ಶಿವನೆ ತಾನೆಂದರಿದು
ಮೂದೇವರೊಡೆಯನಾಗಿರ್ಪುದರುವತ್ತುನಾಲ್ಕನೆಯ ಶೀಲಂ ಮುನೀಂದ್ರ ೪೮

ಈ ಸದಾಚಾರದೊಳಗಂತ್ಯವೋತ್ತಮರುಂ ಬಿಡ
ದೇ ಸದಾಶಿವನ ಸಾಯುಜ್ಯಮಂ ಪಡೆದವರು
ಲೇಸಾಗಿ ಸಾರೂಪ್ಯಮಂ ಪಡೆದ ಶರಣರ್ಕಳುತ್ತಮರು ತಿಳಿ[ಯ]ಲಾಗಿ
ಆ ಶಿವನ ಸಾಮೀಪ್ಯಮಂ ಪಡೆದವರು ತಿಳಿಯೆ
ಪೊಸವಿಲ್ಲದೆ ಮಧ್ಯಮರ್ಕಳ್ಳೈ ಸಾಲೋಕ್ಯ
ದಾ ಸಾಧನವನ್ನೈದಿದವರಧಮರೆಂದು ಪರಿಭಾವಿಸುವುದಾವಾಗಳುಂ ೪೯

ಹರಿಲೋಕದಲ್ಲಿ ಪೂಜೆಯ ಕೊಂಬ ಶರಣರು
ತ್ತರರು ಕಮಲಾಸನನ ಲೋಕದೊಳ್ ಪೂಜೆಯಂ
ವರಿಸಿದವರಹರು ಮಧ್ಯಮರಿಂದ್ರಲೋಕದೊಳ್ ಪೂಜೆಯಂ ವರಿಸುವವರು
ಶರಣರೊಳಗಧಮರು ಮರುದ್ಯಕ್ಷಗಂಧರ್ವ
ತುರಗಾನನಾದಿ ಲೋಕಂಗಳಲಿ ಪೂಜೆಯಂ
ವರಿಸಿಕೊಂಡಿರ್ಪರಧಮಾಧಮರೆನುತ್ತ ಪಾಲ್ಕುರಿಕೆಸೋಮೇಶನುಸುರ್ದಂ ೫೦

ಈಪರಿಯೊಳಾಚಾರಮಂ ಬಿಡದೆ ನಡಸುವಡೆ
ಶ್ರೀಪರ್ವತದ ನಂದನಗೆ ಮಹಾಪ್ರೀತಿಕರ
ಮಾ ಪರಂಜ್ಯೋತಿಯಹ ಮಲ್ಲಿಕಾರ್ಜುನಲಿಂಗಕತ್ಯಂತಸಂತೋಷದಂ
ಪಾಪಂಗಳೆಂಬ ಗಾಢಾಂಧಕಾರಗಳಿವರ
ದೀಪಪ್ರಕಾಶದಿಂ ನಾಡ ಬಿಟ್ಟೋಡುವವು
ಲೇಪಿಸದು ಸಂಸಾರತಾಪಮಿದರಿಂದಲಾಚಾರವೇ ಮುಖ್ಯಧರ್ಮಂ ೫೧

ಆಚಾರವಂತನಂ ಜನರೆಲ್ಲ ಭೂಪತಿಯು
ಗೋಚರಿಸಲೆಂತು ವಂದಿಪರಂತು ವಂದಿಸುವ
ರಾಚಾರವಂತನಿಂ ಕೂಡಿದವರಖಿಲ ದುರ್ದೋಷದಿಂ ಮುಕ್ತರಹರು
ಆಚಾರವೇ ತಾಯ ತೆರದಿ ಕಾಪಾಡುತಿಹು
ದಾಚಾರವೇ ಸಖನ ಮಾಳ್ಪೆಯಂತಿಷ್ಟಮಂ
ಸೂಚಿಸುತ್ತೊದಗಿಪುದು ಭಕ್ತರಾದವರಿದಂ ಬಿಡಲಾಗದೆಲ್ಲಾದಿನಂ ೫೨

ಸತತೋಜ್ವಲಾನಂದಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಲ ವರ
ಮತಶಾಸ್ತ್ರ ಮಂಜಳಸುಪುಂಜರಂಜಿತ ಪುರಾತನ ವಚನಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ನೋಡ
ಲತಿನೂತ್ನವಾದಾರಂಕಾಂಡದೊಳಗಾರನೆಯ ಸಂಧಿ ಸಂಪೂರ್ಣವಾಯ್ತು ೫೩

## ಏಳನೆಯ ಸಂಧಿ

ಸೂಚನೆ :

ಉತ್ತಮೋತ್ತಮವಾದ ಷಟ್ಸ್ಥಲಸ್ಥಿತಿಯಂ ಗು
ರೂತ್ತಮಂ ಪಂಡಿತಾರಾಧ್ಯನಾ ವಾಮನ
ಪ್ರುತ್ತಮಗೆ ಮತಿಗೆ ತಿಳಿವಂತೆ ಬೋಧಿಸಿ ಮೋಕ್ಷಸಂಪನ್ನನಂ ಮಾಡಿದಂ

ಭಾವನಾತೀತ ಭಕ್ತೌಘಸಾಂಕಲ್ಪಿಕ ಸು
ಭಾವನಾಸಕ್ತ ನಾನಾದೋಷದುಷ್ಟದು
ರ್ಭಾವನಾಶ[1][ಕಂ][1] ಮಹಿಮಾಚಲಸುತಾವಂನಃಕಾಸಾರರಾಜಹಂಸ
ದೇವರಾಜಾರ್ಚಿತಪದಾಂಭೋಜ ವಿವಿಧವೇ
ದೇವರಾಜಾಂಚಿತ ಪದಾಂಭೋಜಧರದೇವ
ದೇವರಾಜಾರಾಧ್ಯಸಖ ಮಲ್ಲಿಕಾರ್ಜುನ ಮಹಾಲಿಂಗವೇ ರಕ್ಷಿಸಾ ೧

ಒಂದುತನುವಂ ಪುರಮನೊಂದಂ ತ್ರಿಸಾಹಸ್ರ
ವೃಂದಮಂ ದ್ವಿಜರ ಮೇಣೊಂಬತ್ತು ನಗರಮಂ
ಹೊಂದಿ ಮೂವತ್ತಾರುಂಗ್ರಾಮಂಗಳನ್ನು ನವಲಕ್ಷರಾಜ್ಯದೊಳಗಿರುವ
ಮಂದಿಯಂ ಶಿವಪುರಕ್ಕೊಂದಿಸಿದರೋಹಿಲಗೆ
ವಂದಿಸುವೆನುದ್ಭಟಗೆ ಶ್ರೀರಾಜಪಾಂಡ್ಯಂಗೆ
ವಂದಿಪೆ ಹಲಾಯುಧಗೆ ಸಾವಂವೇದಿಗೆ ಮಲಯರಾಜಂಗೆ ಪರಿಪಾಟಿಯಿಂ ೨

ಪರಿಶುದ್ಧವಾದಂತರಂಗವುಳ್ಳಾತನೇ
ಧರೆಯೊಳಗೆ ಪಿಂಡವೆನಿಸುವನದೇ ಮೊದಲನೆಯ
ವರತರಸ್ಥಲ ದೇಹವಾವುದಾನಾರೆಂಬ ಭಾವವೆರಡನೆಯ ಭೂಮಿ
ಬೆರೆದ ಸಂಸಾರದೊಳು ಹೇಯಂತಾಬಂದ್ಧಿಯೋ
ಹರನಯನಭೂಮಿ ಮತ್ತಾ ಮೋಕ್ಷಮಂ ಕೊಡಂವ
ಗುರುವನಾಶ್ರೈಪುದೇ ನಾಲ್ಕನೆಯ ಭೂಮಿ ಲಿಂಗವ ಧರಿಪುದೈದನೆಯದು ೩

---

1 ಕ (ಕಗ)

ಪಂಚವಿಧಭಸ್ಮವಮಂ ಧರಿಪುದಾರನೆಯದಾ
ಪಂಚಾಸ್ಯನಕ್ಷಂಗಳಂ ಧರಿಪುದೇಳನೆಯ
ದಂಚಿತಮೆನಿಪ ಸಪ್ತಕೋಟಿಮಂತ್ರಂಗಳೆಂಬಾಳುಗಳಿಗರ[ಸು ತಾ]
ಪಂಚಾಕ್ಷರಿಯಂ ಜಪಿಪುದೆಂಟನೆಯಂ ಸ್ಥಲಮೆನಿಕು
ಪಂಚಾಸ್ಯಧಾರಣಂ ಭಸ್ಮರುದ್ರಾಕ್ಷವಮಂ
ಪಂಚಾಕ್ಷರಿಯ ಜಪವನುಳ್ಳಾತನೇ ಭಕ್ತನಾತನೇ ನವಮಸ್ಥಲಂ ೪

ಗುರುಶಿವರೊಳೆರಡೆಣಿಸದಿಹುದೆ ದಶಮಸ್ಥಲಂ
ಗುರುಶಿವರೊಳೇ [ಲಿಂಗ]ಜಂಗಮದೊಳೊಡನೆ ತಾ
ನಿರುವದೇಕಾದಶಸ್ಥಲ ಶಿವನ ಪಾದೋದಕವನೆಂತು ತಾನಾನುಮಂ
ಕರೆಕರೆಯನುಳಿದಂತು ಗುರುಜಂಗಮರ ದಿವ್ಯ
ಚರಣೋದಕವ ಕೊಂಬುದೆ ದ್ವಾದಶಸ್ಥಲಂ
ಗುರುವಿಗಂ ಶಿವನಿಗಂ ಜಂಗಮಕ್ಕೀವುದೆ ತ್ರಯೋದಶಸ್ಥಲಮಪ್ಪುದು ೫

ಕಾಮದಿಂ ಬೆರೆಯದಿವರ್ಗೀವುದೆ ಚತುರ್ದಶದ
ಭೂಮಿಂ ಮತ್ತಾ ದಾನವೇ ಭಕ್ತಿಯಂ ಬೆರಸೆ
ಭೂಮಿಯೊಳ್ ಪಂಚದಶಸುಸ್ಥಲಮೆನಿಪ್ಪುದೀ ಪದಿನೈದು ಸ್ಥಲಗಳಿಹವು
ಧಾಮವಾಗಿಹ ಭಕ್ತನಲ್ಲಿ ಮೇಣೀ ಭಕ್ತ
ನೇ ಮಹಾಮಾಹೇಶನಹನೆಂತೆನಲ್ ಬ್ರಹ್ಮ
ಧಾಮಾದಿ ಪದವಾಂಛೆಯುಳಿಯಲಹನೆಂದಗಸ್ತ್ಯಂಗೆ ರೇಣುಕನುಸುರ್ದಂ ೬

ಆತಂಗೆ ಪ್ರಾಣಕ್ಕಪಾಯಮಾಗುವದಾಗ
ಲೋತು ತನ್ನಾಚಾರಮಂ ತೊರೆಯದಿರ್ಪುದೇ
ಖ್ಯಾತಿಯಿಂ ಪದಿನೇಳನೆಯದು ಮೇಣೀ ಶಿವಾರಾಧನೆಗೆ ವೈರಮಪ್ಪ
ಜಾತಿಮೊದಲಾದ ಪೂರ್ವಾಶ್ರಯಗುಣಂಗಳಂ
ನೇತಿಗಳೆವುದೆ ನೋಡಲಷ್ಟಾದಶಸ್ಥಲಂ
ಶ್ರೌತದಿಂ ಜೀವಪರಮಗ್ರೈಕ್ಯಮಂ ಸಾಧಿಸಿದರಿಲ್ಲ ಶಂಭುವಿನಲಿ ೭

ಪೂಜ್ಯತ್ವಮಂ ತನ್ನೊಳೆಸೆವ ಪೂಜಕತೆಯುಮಂ
ತ್ಯಾಜ್ಯಮಾಗುವದರಿಂದ ದ್ವೈತನಿರಸನಮೆ
ಯೋಜ್ಯಮಾಗಿಹುದಿದೇಕೋನವಿಂಶತಿಕಸ್ಥಲಂ ಮಿಕ್ಕ ಶೈವರಂತೆ

ಪ್ರಾಜ್ಯಮಾಗೀಶ್ವರನ ಕಳೆಯ ಶಿವಲಿಂಗದಿ ಪ್ರ
ಯೋಜ್ಯಮೆಂತಂತುಟಾಂ ಹಾನಿಸದುದೇ ನೋಡೆ
ರಾಜ್ಯದಲಿ ವಿಂಶತಿಸ್ಥಲ ಶಿವನಿಗಂ ಶಿವನ ಮೇಣಷ್ಟಮೂರ್ತಿಗಳಿಗಂ ೮

ಏಕಭಾವವನು ಸಂಪಾದಿಸದೆ ಬಳಿಕಂ ಪಿ
ನಾಕಿಯುದರೊಳಗಧಿಷ್ಠಾತೃವಾಗಿಹನೆಂದು
ಸ್ವೀಕರಿಪುದೇಕವಿಂಶತಿಕಸ್ಥಲಂ ಸರ್ವಗತನೆಂದು ತಿಳಿಯಲಾಗಿ
ಆ ಕಪರ್ದಿಯ ಲಿಂಗಮಾತ್ರದೊಳ್ ಪೂಜೆಗೆ ನಿ
ರಾಕರಣಮಪ್ಪ ದೆಶೆಯಿಂ ಲಿಂಗದೊಳ್ ವಿಶೇ
ಷಾಕಾರಮಾಗೀಶನಿರ್ಪನೆಂದರಿಯಲಿಪ್ಪತ್ತೆರಡನೆಯ ಸುಸ್ಥಲಂ ೯

ಇಷ್ಟಲಿಂಗದೊಳಿರ್ದ ಶಿವನೇ ಚರಾಚರಗ
ಳೆಷ್ಟುಂಟು ಮಣಿಗಣದೊಳಿರ್ಪ ಸೂತ್ರದ ಪಾಂಗಿ
ನಷ್ಟರೊಳ್ ಶಿವನಿರ್ಪನೆಂದರಿವುದೇ ತ್ರಯೋವಿಂಶತಿಸ್ಥಲವಿಶಾಶ್ವರಂ
ಅಷ್ಟರೊಳಗಿರ್ದೊಡಂ ಭಕ್ತಹೃದಯದೊಳಗೆ ವಿ
ಶಿಷ್ಟನಾಗೆಸವನೆಂಬುದೆ ಚತುರ್ವಿಂಶತಿಗ
ರಿಷ್ಟಸ್ಥಲಂ ಮೇಣೆಪ್ಪೊಂಬತ್ತು ಮಾಹೇಶ್ವರಸ್ಥಲಗಳೆಂದೆನಿಪವು ೧೦

ಈ ಶಾಂಕರನ ಲಿಂಗನಿಷ್ಠಾದಿ ಭಾವದಿಂ
ಪ್ರಾಸಾದಮಂ ಮನದೊಳಾನಪ್ರಸಾದಿಯೆಂ
ದೇ ಶಬ್ದಮಾನುವಂ ಮೇಣೆದಿಪ್ಪತ್ತೈದನೆಯ ಸುಸ್ಥಲಂ ಭಾವಿಸೆ
ಲೇಸಿಂಗೆ ಗುರುವೊರ್ವನೇ ಬೀಜವೆಂದು ತ
ನ್ನಾಶಯದಿ ತಿಳಿವುದಿಪ್ಪತ್ತಾರನೆಯ ಭೂಪ್ರ
ದೇಶಮಾ ಗುರುವಿನಿಂ ಶಿವನೊರ್ವನೇ ಜಗತ್ಪೂಜ್ಯನೆಂದರಿದಿರ್ಪುದೆ ೧೧

ವಿವಿಧಾಗಮಗಳಿಂದ ಸಪ್ತವಿಂಶತಿ ತಲಂ
ಶಿವನೆ ಜಂಗಮವೆಂದು ತಿಳಿವುದಿಪ್ಪತ್ತೆಂಟ
ರವಲಿ ಶಿವಭಕ್ತರಂ ಶಿವನಂತೆ ಕಾಬುದಿಪ್ಪತ್ತರೊಂಬತ್ತನೆಯಂದು
ಅವನಿ ಗುರುಲಿಂಗಾದಿ ಮಾಹಾತ್ಮ್ಯ ಬೋಧೆಯಿಂ
ಶಿವನೊಡನೆ ಸಂಬಂಧ ಮೂವತ್ತನೆಯ ನೆಲಂ
ಶಿವನೊಳಿಂತೆಡಬಿಡದೆ ಭಾವಿಸುತ್ತಿರುವನಲಿ ಘೋರತರಮಾಗಿ ತೋ[1]ರ್ಪ[1] ೧೨

---

1 ರ್ಪಂ (ಕ)

ಸಂಸಾರತಾಪದ ನಿವೃತ್ತಿಯೇ ಮೂಲದಿಂ
ದಂ ಸಾರುವದದೇ ಶಿವನ ಸಂಪ್ರಸಾದವದ
ರಿಂ ಸಾಧುವಾಗೊಪ್ಪುತಿರುವದೇ ನೋಡೆ ಮೂವತ್ತೊಂದನೆಯ ಸುಸ್ಥಲಂ
[ಸಂ]ಸಾರವಮಾದಿವೇಳೆ ಪ್ರಸಾದಿಸ್ಥಲಂ
ಹಿಂಸಾದಿ ದೋಷರಹಿತನೆ ಭಕ್ತಮುಖ್ಯರಲಿ
ತಾಂ ಸಿಲ್ಕಿಹುದು ಕ್ರಿಯಾಸಂಬಂಧವಿಾಜ್ಞಾನಯುಕ್ತನೇ ಪ್ರಾಣಲಿಂಗಿ ೧೩

ಸಕಲ ತತ್ವಂಗಳಾಕಾರಮೇ ಪ್ರಾಣವಿಾ
ಸಕಲವಿಜ್ಞಾನಂಗ.... .. ರಮೆ ಶಂಭು
ವಿಕರಿಸದಿವೆರಡರೊಳ್ ಸಂಬಂಧಮುಳ್ಳಾತನ ಸ್ಥಿತಿಯೆ ಮೂವತ್ತರಿಂ
ಪ್ರಕಟಿಸುತ್ತೆರಡನ್ನೆದಿದ ನೆಲಂ ಚಿಲ್ಲಿಂಗ
ವಕಲಂಕ ಭಾವಪುಷ್ಪದೊಳರ್ಚಿಪುದೆ ಮೂರ
ರ ಕಲೆಯಂ ಬೆರೆದ ಮೂವತ್ಮನೆಯ ಸುಸ್ಥಲಂ ಶಿವನ ತಾದಾತ್ಮ್ಯವೆಸೆಯೆ ೧೪

ಚಿತ್ತದೊಳ್ ಮಿಸುಕದಿಹುದೇ ಚತುಸ್ತ್ರಿಂಶತ್ಕ
ಸುಸ್ಥಲಂ ಮೇಣಾ ಶಿವನ ಸನ್ನಿಧಾನವೇ
ಚಿತ್ತದಲ್ಲಿ ನೋಡೆ ಮೂವತ್ತೈದನೆಯ ನೆಲಂ ಜ್ಞಾನಮಿಹುದಂಡಮೆನಿಸಿ
ಮತ್ತಮಾಜ್ಞೇಯಮೇ ಲಿಂಗವೆಂನಿಸುವದಿ[1]ವ[1]ರೊ
ಳೊತ್ತರಿಸಿದಿರವುಳ್ಳವನೆ ಸಾಂಗಲಿಂಗಿಯಿಂ
ಸುಸ್ಥಲಂ ಷಟ್ತ್ರಿಂಶದಭಿಧಾನಕಮಿಂವೈದು ಪ್ರಾಣಲಿಂಗಿಸ್ಥಲಗಳ್ಕೆ ೧೫

ತಾನೆ ಸತಿ ಶಿವನೆ ಪತಿಯೆಂಬ ನಿಶ್ಚಯವಾದ
ಮಾನಸವನುಳ್ಳವನೆ ಶರಣನೆನಿಸುವನಿದೇ
ಸ್ಥಾನ ಮೂವತ್ತೇಳನೆಯದು ರಾಗಾದಿಗಳೆ ತಾಮಸಗಳೆಂದೆನಿಪವು
ಮೇಣವಂ ಬಿಡುವುದಷ್ಟತ್ರಿಂಶದವನಿ ವಿ
ಜ್ಞಾನವಂ ಗುರುಮುಖದಿ ಸಂಪಾದಿಸಲ್ ಭವದ
ಬೇನೆಯಡಗಿರುವದೇಕೋನಚತ್ವಾರಿಂಶದಿಳೆ ಈಶ್ವರನ ಭಾವ[2]ವಂ[2] ೧೬

ಗುರುಭಾವಮುಂ ಜಂಗಮದ ಭಾವಮುಂ ಮತ್ತಿ
ದರೊಳಾಚರಿಪ ರೀತಿಯುಂ ತಿಳಿಯಲಿಚ್ಛೆಯೇ
ಪರಿಭಾವಿಸಲ್ಕೆ ನಾಲ್ವತ್ತನೆಯ ಸುಸ್ಥಲಂ ನೋಡಲೀ ನಾಲ್ಕುತಲಮೆ

---

1 ದಿ (ಕ) 2 ದಿಂ (ಕ)

ಶರಣನದು ಪ್ರಾಣಲಿಂಗಾದಿ ಯೋಗಗಳಿಂದ
ನರವಾಸನೆಯ ಶಿಥಿಲಭಾವದಿಂದುಚ್ಚಲಿಸಿ
ದುರುಸುಖದಿ ಶಿವನೈಕ್ಯಮುಳ್ಳನೇ ನೋಡೆ ನಾಲ್ವತ್ತೊಂದನೆಯ ಭೂಮಿಕೆ ೧೭

ಈತನೆಂತಾಚರಿಸಿದ್ದೊಡವುಂಟಲಾರದಿಹ
ಪಾತಕಂಗಳ ಯೋಗವೆಣಿಸೆ ನಾಲ್ವತ್ತೆರಡ
ರಾ ತಲಂ ವಿಶ್ವವೆಲ್ಲಂ ಶಿವನ ರೂಪಾಗಿ ತೋರ್ದಡದು ಮೂರರಿಂದ
ಓತ ನಾಲ್ವತ್ತನೆಯ ಧರಣಿ ಗುರುವಂ ವೃಷಭ
ಕೇತುವಂ ಜಂಗವಂವನಾತ್ಮಸ್ವರೂಪವಮಾ
ಗೇ ತಿಳಿಯಲದುವೆ ನಾಲ್ವತ್ತನಾಲ್ಕನೆಯದೆಂದೆನಿಪ ಸ್ಥಲಂ ಮುನೀಂದ್ರ ೧೮

ಈ ನಾಲ್ಕುಸ್ಥಳಗಳೈಕ್ಯನ ಯೋಗದಿಂದಾದ
ವೇನೆಂಬೆನೆಣಿಸಿ ನಾಲ್ವತ್ಮನಾಲ್ಕುಸ್ಥಲಗ
ಳೀ ನಿತ್ಯವಾಗಂಗವೆನಿಸುವವು ಭಕ್ತನಾಶ್ರೈಸಿರ್ದ ನವವಿಧಮಹ
ಸ್ಥಾನಂಗಳಂ ಲಿಂಗರೂಪಂಗಳಂ ಸಮಾ
ಧಾನದಿಂ ಕೇಳು ವಿಜ್ಞಾನಮೇ ಮುಖದಿಂದ
ತಾನೇ ಕೊಡಲ್ಪಡುವುದಾವ ದೆಶೆಯಿಂ ಮಲತ್ರಯವುಳಿವುದಾದೀಕ್ಷೆಯಂ ೧೯

ಗುರುವೆ ದೀಕ್ಷಾಗುರುವವಂ ಬಾಣಸಂಜ್ಞೆಯಿಂ
ಬೆರೆದ ನಾಲ್ವತ್ತನೆಯ ಮೇದಿನಿಯು ಶಿಷ್ಯನು
ತ್ತರಕೆ ತಿಳಿವಂತೆ ಬೋಧಿಪುದೇ ನಾಲ್ವತ್ತಾರನೆಯ ಸುಸ್ಥಲಂ ಶಿಷ್ಯಗೆ
ಪರಮೇಶ್ವರನ ಸನ್ನಿಧಾನಮಾಗುವವೊಲು
ತ್ತರವಿನಾವುದಷ್ಟಚತ್ವಾರಿಂಶದವನಿಯಿಾ
ಪರಮೇಶ್ವರನೆ ನಿನ್ನ ಭವತಾರಕನೆನುತ್ತ ಲಿಂಗಮಂ ಕೈಗೀವುದೆ ೨೦

ಏಕೋನಮಾದ ಪಂಚಾದವನಿಯು[ಂ] ಕರ್ಮ
ಮೇ ಕಡೆಯೊಳಡಗಿತ್ತು ನೋಡಲಾ ತೆರದಿ ಭಾ
ವಾಕಾರವೆಲ್ಲೆ ಲಯಿಸುವದದೇ ಪಂಚಾಶದಿಳೆಭಾವಮಂ ತನ್ನೊಳು
ಸ್ವೀಕರಿಸಿಕೊಂಡಿರ್ಪ ಜ್ಞಾನವಂಳ್ಳವನೇ ಗು
ಣಾಕರನೆಯೆಣಿಸಲೈವತ್ತೊಂದನೆಯ ಧಾತ್ರಿ
ವೈಕಾರಿಕಾಹಂಕೃತಿಯನುಳಿದು ಚರಿಪನೈವತ್ತೆರಡನೆಯ ಮೇದಿನಿ ೨೧

ತನ್ನ ನಿಜದಿಂದನ್ಯಮಿಲ್ಲೆಂಬ ಭಾವದಿಂ
ಚನ್ನಾಗಿ ನಡೆವನ್ನೈವತ್ತುಮೂರರ ಪದಂ
ಸನ್ನುತನೆ ಕೇಳಿವೊಂಬತ್ತು ಭಕ್ತನ ಲಿಂಗದ ಸ್ಥಲಂಗಳು ಪೂಜೆಯ.
ಪನ್ನಗಾಭರಣನ ಕ್ರಿಯೆಯೆಂದೆನಿಪುದಲ್ಲಿ
ಭಿನ್ನವಿಲ್ಲದೆ ಸಕಲಶಾಸ್ತ್ರಂಗಳಿರ್ಪವೆಂ
ತೆನ್ನುವದೆ ಚತುರಧಿಕಪಂಚಾಶದಚಲೆ ಮೋಣೇ ವಿರಾಗಿಯ ಭಾವದ ೨೨

ಆಚಾರಮಾಪ್ಪದ್ಯೆವತ್ತೈದನೆಯ ವಸುಧೆ
ಗೋಚರಿಪದಾವುದೀತನ [1]ಜ್ಞಾನ[1]ಲಿಂಗಂಗ
ಳೀ ಚಾರುವಾಗವೈವತ್ತಾರನೆಯ ರಸೆ ತನುತ್ರಯದೊಳಭಿಮಾನದ
ಮೋಚಕವನುಳಿದ ಯೋಗಿ[ಯ] ಶರೀರದ ಲೀಲೆ
ಯೋಚಮಿಲಮಾಗಿಯೈವತ್ತೇಳನೆಯ ನೆಲವ
ದಾ ಚರಿಸದಿರ್ಪುದಾ ದೇಹದಲಿ ಸಂಬಂಧಮಾತಗೆಲ್ಲಾಕಾರದಿ ೨೩

ಎಂಟರಿಂ ಬೆಸೆದೈವತ್ತನೆಯನಂತೆ ಘನ
ಕಂಟಕವ ಕಡೆಗಣಿಪನಾದರಿಂ ಭಕ್ತರಿಂ
ಗುಂಟಾದ ತನ್ನಂಘ್ರಿಸೇವೆ[ಯಿಂ]ದವೇ ಏಕೋನಷಷ್ಠಿಸ್ಥಲಾಖ್ಯಂ
ಅಂಟದೇ ದೋಷಂಗಳಾತನಾಚರಣೆಯೋ
ಕುಂಟಿಲ್ಲದರುವತ್ತನೆಯ ಭೂತಧಾತ್ರಿ ಕೇ
ಳಂಟಿಲ್ಲದೀತನಾಶಯ ಭಾವವೇನಿಪ್ಪುದೇಕಷಷ್ಠಿಸ್ಥಲಮದಂ ೨೪

ಇವನರಿವಿನಾಚಾಸಮೋಯಮಲಸಂ[ದಿಯಿ]ಂ
ದವೆ ಕೂಡಿದರುವತ್ತರ ಸ್ಥಿ[2]ತಿಯಿವೊಂ[2]ಭತ್ತು
ಭುವನದೊಳ್ ಮಾಹೇಶ್ವರನ ಚಾರುಲಿಂಗಸ್ಥಲಂಗಳು ವಿಚಾರಿಸಲ್ಕೆ
ಇವನು ತನ್ನಂಗದರ್ಶನದಿಂದ ಲೋಕಮಂ
ತವೆ ಪೊರೆವನಾಗಿಯರವತ್ತು ಮೂರನೆಯ ನೆಲ
ವಿವರಿಸಲ್ಕಿದಃ ತಾನುನೋಡೀ ಜಗತ್ತಂ ಪವಿತ್ರಮಂ ಮಾಳ್ಪನಾಗಿ ೨೫

ಯಾವದೆಶೆಯಿಂದಲರವತ್ತುನಾಲ್ಕನೆಯ ಧರೆ
ಈ ವರಿಷ್ಠನ ಪ್ರೀತಿಯುಕ್ತೆ ಕ್ಷೌಣವೆ ಷಷ್ಠಿ
ಯೋವಿದ್ದೈದನೆಯ ನೆಲ ಕಾಯಾಭಿಮಾನಮಂ ಮರಳಿಪೊಂದದೆ ಬಿಡುವದೆ

---

1 ಚಾರು (ಕ) 2 ರೆಯಿನೊಂ (ಕ)

ದೇವದೇವನ ಪೂಜೆಗಾಗಿಯುರುವತ್ತಾ್ರ
ರಾವಾಸವದು ಸಕಲಕರಣೋಪಭೋಗಗಳ
ಭಾವಂಗಳಾಯೊ ಮಹೇಶಮುಖಿಕೀವುದರುವತ್ತೆಂಟನೆಯ ಕಾಶ್ಯಪಿ ೨೬

ಮಾನಸಿಕ ಮೋದಮಂ ಶಿವನಿಗರ್ಪಿಸುವುದವ
ಧಾನದಿಂದರುವತ್ತರೆಂಟನೆಯ ಸುಸ್ಥಲಮಿ
ದೀ ನಿಧಾನದೊಳೆಸೆವ ಶಿವಯೋಗಿಯಲ್ಲಿ ಮೋಕ್ಷಾರ್ಥಿಯೇ ಶಿಷ್ಯನೆನಿಪಂ
ಆ ನೀತಿಪರನೆ ಏಕೋನಸಪ್ತತಿ ಭೂಮಿ
ಯೇನೆಂಬೆನೀತನಾ ಜಂಗಮಾಂಘ್ರಿಯ ಸೇವೆ
ಗಾನುಕೂಲ್ಯೇಚ್ಛೆಯುಳ್ಳವನಾಗಲೆಪ್ಪತ್ತನೆಯ ನೆಲನದಾರಯ್ಯಲು ೨೭

ಆ ಗುರುವಿನಲ್ಲಿ ಶುಶ್ರೂಷವೇ ತಚ್ಛಾಸ್ತ್ರ
ಸಾಗರದ ತಡಿಗಂಡನಾಗಿ ಮಿಕ್ಕವರಿಂ ಸ
ದಾ ಗುರುತ್ವಂ ಪಡೆದಂ ಸೇವ್ಯನಾಗುವನಿದೆಪ್ಪತ್ತೊಂದನೆಯ ಭೂಮಿಕೆ
ಹೀಗೆ ನೋಡಲ್ ಪ್ರಸಾದಿಯೊಳೆಸೆವ ನವಲಿಂಗ
ಯೋಗಸ್ಥಲಂಗಳಿವು ಮತ್ತಮಾ ಸೇವ್ಯನೇ
ಶ್ರೀಗುರುವಿನಿಂದ ತತ್ವಂ ತಿಳಿಯಲಾತ್ಮನೆಂದೆನಿಸಿ ಲೋಕದಿ ರಾಜಿಪಂ ೨೮

•ಅವನೆಯೆಪ್ಪತ್ತೆರಡನೆಯ [1]ನೆ[1]ಲಂ ಜೀವತ್ವ
ಮವಿಲಂಬದಿಂ ನಿರಸಿಸಲ್ಪಡಲು ................
................ ................ ಮೂಡೆಯಿಂದ
ಸವೆ[ಯೆ]ಸಂಸಾರ ಬೀಜಾಂಕುರಂ ನಾಲ್ಕರಿಂ
ದವೆ ಬೆರಸಿದೆಪ್ಪತ್ತನೆಯ ಧರಣಿದೇಹ ಧ
ರ್ಮವು ಕೆಡಲ್ಕಾಗಿ ತನ್ನಲ್ಲಿ ಎಪ್ಪತ್ತೈದನೆಯುದಾದ ಸರ್ವಂಸಹೆ ೨೯

ತನ್ನನುಳಿದಿರದಾಗಿ ಸಕಲ ಬಾ........... ...........
................ ................ ................
........ ....ಗಿ ತಾಳಿದವನೆಪ್ಪತ್ತರಿಂ ಮೇಲಣಾರರ ನೆಲಂ ಭಾವಿಸೆ
ಮುನ್ನೆಸೆವ ಜ್ಞಾತೃಜ್ಞಾನಜ್ಞೇಯಜಾತದೊಳ
ಗಿನ್ನಿರದ ವೈಶೇಷಿಕ ಜ್ಞಾನಯೋಗಮುದ
ನೆನ್ನುವರು ಸಪ್ತತಿಯ ಸಪ್ತಮಕ್ಷಿತಿಯೆಂದು ಬಲ್ಲಶಿವ........ ೩೦

---

1 ನೆಯನೆ(ಕ) • ಕ ಪ್ರತಿಯಲ್ಲಿ ೨೯ನೆಯ ಪದ್ಯದಿಂದ ೩೦ನೆಯ ಪದ್ಯದವರೆಗೆ ಇಲ್ಲ. ಗ ಪ್ರತಿಯಲ್ಲಿ ೨೯ನೆಯ ಪದ್ಯದಿಂದ ೩೦ನೆಯ ಪದ್ಯದ ವರೆಗೆ ಗ್ರಂಥಪಾತವಾಗಿದೆ.

ಪೂರ್ವಪ್ರಸಾದಿಯೆನಿಸಿರ್ಪನೆಪ್ಪತ್ತರಿಂ ... ..

....... ... ............... .. .......

ಪರ್ವಿದೆಂಟರ ನೆಲವಿಮಿದಂತ್ಯಮೆನೆ ಸರ್ವಭಾವಂಗಳ ಲಯಂ ಭಾವಿಸೆ
ನಿರ್ವಹಿಸಿದವನದಂ ನೋಡಲೆಪ್ಪತ್ತರಿಂ
ತೋರ್ವಡಂವ ನವವಸ್ಥಲಂ ಸೇವ್ಯನೇ ಗುರುವು
ಶ ........ ......... .. .............. ....................... .... ೩೧

ಆದನುಳ್ಳವನೆ ಸೇವ್ಯನವನಸಿಸಿತದು ಸ್ಥ
ಲದ ಸಂಜ್ಞೆಯುಳ್ಳವಂ ಮೇಣ್ಳೊಂಬತ್ತು ಲಿಂಗದ
ಪದಂಗಳು ಪ್ರಾಣಲಿಂಗಿಯಲ್ಲಿಹವುಯೆ ದೀಕ್ಷೆಯಿಂದಜ್ಞಾನವು
ಚಿದರಿದುದೊ ನೋಡಲೆಂಬತ್ತೊಂದನೆಯ .. ....

....... ..... ....... .... .. ....... ....
.... .. ಸಲೆಂಬತ್ತೆರಡನೆಯ ನೆಲಂ ಗುರುವಿಗಂ ಗುರಂವಿನಿಂದ ೩೨

ದೊರಕೊಂಡ ವಿಜ್ಞಾನಕಂ ಸಾಮರಸ್ಯಮೇ
ಪರಿಕಿಸಲ್ಕೆಂಬತ್ತುಮೂರನೆಯ ವಸುಮತಿಯುಂ
ಪರಿಶೀಲನಾದ ಶಿವಯೋಗಿಯಲಿ ವರ್ತಿಸು.............

.... ........... ..... .........ವಂ
ದೊರಕಿಸಲ್ದನಂಮಾಗದೇಯಿರವದೆಂಬತ್ತ
ನಃರೆ ಕೂಡಿಕೊಂಡ ನಾಲ್ಕನೆಯ ವಿಶ್ವಂಭರೆಯೆನುತ್ತ ಕೋವಿದರುಸುರ್ದರಂ ೩೩

ಚಿಪ್ಪಿನಲಿ ತೋರ್ದ ರಜತಾಭಿಖ್ಯೆಯಂತೆ ತಾ
ನಿಪ್ಪುದಾದರು ಕಾರ್ಯ..... .. ....ಸು
ವ್ಯಪ್ತಿಯಾಜ್ಞೇಯಂಗಳಿರದೆ ತಾ.......................
ವಿಪ್ಪ ಕಾರಣದಿಂದ ಕಾರ್ಯಕಾರಿಯಾಗ

........ ..... ............ ...
ದೊಪ್ಪಿಹುದೆನುತ್ತರಿವುದೆಂಬತ್ತರಿಂ ಮೇಲಣಾರನೆಯಂ ಸರ್ವಂಸಹೆ ೩೪

ಪಿಂ.... ..... .... .............. ........
..........................ಹನೆಂದರಿಯೆ
ಪಂಡಿತರ..........ದೆಂಬತ್ತರೇಳನೆಯ ಸುಕ್ಷೋಣಿಯೆಂದು ಪರಿಭಾವಿಸಿದರು

ಅಂಡಗತವಾದ ಗಗನಮದೆಂತು ಪೂರ್ಣತೆಯ
ಕೊಂಡಿಹಂದುನೊ ........................
..............................ದಂ ಪರಿಭಾವಿಸಿದರು (?) ೩೫

ಪಿಂಡದೊಳಗಣ ಗಗನಕಂ ಭೇದಮಿನಿತಿಲ್ಲ
ಪುಂಡದೊಳಗಣ ಗಗನಕೆಂತಂತುಂ ಜೀವನೊಳ್
ಖಂಡೇಂದುಧರನೊಳ್ ಪ್ರಕಾಶಿಸುವ ಚೈತನ್ಯಮೊಂ ............
.............................ದು ಮೇಣೆಂತು
ಮಂಡಿಸಿಹ ಶಿವನ ತಾನೆಂಬನುಷ್ಠಾನ ಭೂ
ಮಂಡಲದಿ ಶಿವಯೋಗಿಯಲ್ಲಿನವತೀತವಂದರತ್ನಗರ್ಭೆಯೆನಿಪ್ಪುದುಂ ೩೬

ತೆರೆನೊರೆಗಳೆಂತು ಮುನ್ನೀರ ನೋಡಲ್ಕಾಗಿ
ಪೆರತಲ್ಲ.....................
...........................................ಮುಸ್ಥಲಂ ಮುಖ್ಯಮಾದರ್ಥದಿ
ದೊರಕದಿರೆ ಸಂಭವಂ ಲಕ್ಷಣೆಯ ಮೂಲದಿಂ
ಪರಮೇಶಜೀವರೊಳಗೈಕ್ಯಮುಪಪಾದಿಪುದೆ
ಶರಣರೆಂಬರು ಮುಖ್ಯವಾಗಿ ತೊಂಬತ್ತೆರಡನೆಯ ಭೂಮಿಯೆಂದು ಬಿಡದೆ ೩೭

.......................................
..........ಲಿ ಮುಖ್ಯಾರ್ಥಲಕ್ಷಣಗ
ಳಾಗವೇ ಚಿತ್ತಿನಲಿ ತತ್ವದಂ ಯಾವನಿಂ ಸ್ವೀಕೃತವಂದಾಯ್ತಾ ನೆಲಂ
ಯೋಗಿಗಳ್ ತೊಂಬತ್ತಮೂರನೆಯದೆಂಬರಿಂ
..........ತಾಗಿರ್ದವನ ದೈಹಿಕಪ್ರಪಂಚಂಗೆಡ
ಲ್ಕೈಗೆ.......................ನಿಂದೈಶ್ವರ ................ ೩೮

ಈತನಾಗಮುನ ದರ್ಶನ ಸಂಗದಿಂ ಜಗ
ಜ್ಞಾತ ಸುಚರಾಚರ ಪ್ರಾಣಿಗಳ ಮಲಪಾಶ
ರೀತಿಯಳಿವುದೆ ಪಂಚನವತೀತಮಧರಣಿಯಿಂ ಬ್ರಹ್ಮಾಂಡಜಾಲಂಗಳ
ನೂತನೋತ್ಸರ್ಗ ಸ್ಥಿತಿಪ್ರಳ ............
.... .............. ..............
ತೀತಮದ ಭೂತಲಂ ನೋಡಲಿಸುವಚಾರವೆಲ್ಲಿಹುದದೆ ತಿರೋಭಾವಶಕ್ತಿ ೩೯

ಆ ಭೂಮಿಯೇ ಸಪ್ತನವತೀತಮವೆನಿಪುದೀ
ಭೂರ್ಭುವಸ್ಸ್ವಸ್ತ್ರಿಲೋಕಿ ದಿಕ್ಸಮಯಂಗಳಂ
ಯೇಭಾವದಿಂದಾದೊ ........ವೊದಲೆ ಪೇಳಲ್ಪಟ್ಟ ಪಂಚವಿಧ
ದಾ ಭೂಮಿಯಲ್ಲಿ ಕಳೆಯಲ್ ಯೋಗ್ಯವಾಗಿ ಗುಣ
ವೈಭವದಮಲ ಮಾಯೆ ಕರ್ಮ..........ಬಿಂದುರಃ
........ ........ .... ........ ........ಸ್ವಭಾವ ಪಾಶಗಳಳಿವಿನಿಂ ೪೦

ತನ್ನನಿದಿರಂ ತಿಳಿಯದಿರ್ಪನೇಕೋನಶತ
ಕಂ ನೆಲಂ.......... ... ..................
... ................. ಕಾಶದೊಳಗೈಕ್ಯವಾದಂದುಂಟೆ ನೋಳ್ಪವರಿಗೆ
ಇನ್ನಿರ್ಕೆಯಿಲ್ಲದಿಹಣಂ ತಿಳಿಯಲದು ಶತಕ
ವೆನ್ನುವ ನೆಲಂ ಪಾಂಚಭೌತಿಕ ಪ್ರಕೃತಿಯಿರೆ
ಸನ್ನದ್ಧವಂಹುದುಪಾಧಿಪ್ರಯುಕ್ತಂ ಚಿತ್ತಿಗಾವೃತ್ತಿಗಳಸಂ........ ೪೧

................... ........ ........ ....
....ದಲಿಲ್ಲದಿರ್ಪ ಮರವೆಂತು ಚಿಗುರುವುದೆಂಬ
ಚದುರರಾಡುವ ಗಾದೆಯಂತೆ ... ....... ....... ........
....ವೈದೇಹಿಕಂಗಂ ಜ್ಞಾನಶೂನ್ಯಸ್ಥಲಂ
ಪದವುಪ್ಪುದಿದುವೆ ನೂರೊಂದನೆಯ ಧರಣಿಯಿಂ
ತೊದಗಿರ್ಪವೈಕ್ಯನಲ್ಲಿ ಲಿಂಗನವಕಂಗಳಂ.... .. ............ ೪೨

ಸ್ಥಲಕರಣದಲ್ಲಿ ಭಕ್ತಿಯನುಳ್ಳವನೆ ಭಕ್ತ
ಸ್ಥಲಕರಣದಲ್ಲಿ ನಿಷ್ಠೆಯನುಳ್ಳವನೆ ಶೈವ
ಸ್ಥಲಕರಣದಲ್ಲಿ ನಿರ್ಮಲಚಿತ್ತನಾದವನೆ ನೋಡಲ್ ಪ್ರಸಾದಿಯುಪ್ಪಂ
ಸ್ಥಲಕರಣದಲ್ಲಿ ಸಕ್ತನೆ ಪ್ರಾಣಲಿಂಗಿಈ
ಸ್ಥಲಕ.....................
................... ........ಭಾವಮುಳ್ಳವನೈಕ್ಯನೆಂದನಾ ಗುರುಂವಲ್ಲಭಂ ೪೩

ಈ ಪರಿಯಂ ನೂರೊಂದುಸ್ಥಲದ ಸಂಪಾದನೆಯು
ರೂಪುಗೊಂಡಿಹಂದು ಸಿದ್ಧಾಂತ ಸುಶಿಖಾಮಣಿಯೊ
ಳಾಪಾದಿಸಲ್ಕಲ್ಲಿ ವಿಸ್ತಾರವಿಲ್ಲಿ ಸಂಕೋಚವಾಗಿರು... .... ....

.... .... .... .... .... .... .... .... .... ....
.... .... .... ತೆ ಮನದಟ್ಟು ಮಾಡು ಮೇಣೇಭವದ
ತಾಪಕಲಸಿದ ವೀರಶೈವಂಗೆ ಷಟ್ಸ್ಥಲಂ ಮುಖ್ಯಮಾಗಿರುತಿರ್ಪುದು ೪೪

ಕರುಣಿಸೈ ತತ್ಪ್ರಕಾರವನೆಂದು ಭಕ್ತಿಯಿಂ
ದೆರಗಿದಾ ಮುನಿಯ ಮಸ್ತಕವನುದ್ಧರಿಸಿ .... .... ....
.... .... .... .... .... .... .... .... .... .... .... .... .... ....
.... .... .... ಚಿತ್ತವೆ ಹಸ್ತಕರ್ವರ್ಂಸಾದಾಖ್ಯಮೇ
ಪರಿಕಿಸಲ್ ಸಾದಾಖ್ಯಕ್ರಿಯೆಯೆಂಬುದೇ ಶಕ್ತಿ
ಬೆರವುದಾಚಾರಲಿಂಗಂ ನೋಡಲದಕೆ ಸದ್ಯೋಜಾತಮುಖಮುಪ್ಪುದು ೪೫

ಕಲೆಯೆನಿ .... .... .... .... .... ವ ಕಾಲಂ
.... .... .... .... .... .... .... .... .... ....
.... ಶ್ರದ್ಧೆಯಾ ಭಕ್ತಿ ಮೇಣಿಷ್ಟರೊಳ್ ಕರ್ತೃವಿಗೆ ಭಕ್ತಿಯೇ
ಫಲಮಾಗಿಹುದು ವಿಶೇಷದಿ ಕಾಯಮೆನಿಪುದೈ
ಸಲಿಲ ಮನಮೇ ಹಸ್ತ ಕರ್ತೃಸಾದಾಖ್ಯಮೇ
.... .... .... .... .... .... .... .... .... .... .... .... .... .... ೪೬

.... .... .... ದೇವಂ ಪ್ರತಿಷ್ಠೆಯೆ ಕಲೆಯು
ನಾಲಿಗೆಯದೇವ್ಪೋಗಂ ರಸವೆ ಪದಾರ್ಥಂ ಮಕಾರಮೆನೆ
.... ಮಿಸಿದ ಬೀಜಸ್ಪರ್ಶಜ್ಞಾನವೆ ಕಾಲನೈಷ್ಠಿಕಾಭಕ್ತಿಯಕ್ಕುಂ
.... .... .... .... .... .... .... .... .... ....
.... .... .... .... .... .... .... .... .... ....
ಪ್ರೆ ಫಲಮೀ ಮೇರೆಯಲ್ಲಿ ವಹ್ನಿಯೆಯುಂಗಬುದ್ಧಿಯೆ ಹಸ್ತಸಾದಾಖ್ಯಮಹುದು ೪೭

ವರಿಸಲ್ಕೆ ಮತ್ತೆ ಸಾದಾಖ್ಯಜ್ಞಾನವೆ ಶಕ್ತಿ
ಹರಲಿಂಗವೇ ಲಿಂಗವದಕಘೋ .... .... ....
.... .... .... .... .... .... .... .... .... ....ವೆ ಪದಾರ್ಥಮಕ್ಕುಂ
ವರ ಶಿಕಾರವೆ ಬೀಜಸ್ಪರ್ಶ ನಿಶ್ಚಯವೆ ಭಾ
ಸುರಕಾಲವಂಘಧಾನಭಕ್ತಿ ಮೇಣಿಷ್ಟರೊಳ್
ಬೆರೆದ ಕರ್ತೃವಿಗೆ ಪ್ರಸಾದಿಗಂ ನಿರ್ಮಲಮತಿಯೆ ಫಲಂ ಭಾವಿಸಲ್ಕೆ ೪೮

.... .... .... .... .... .... .... ....
.... .... .... ಸಾದಾಖ್ಯಮಾದಿಯೆಂ ಶಕ್ತಿ
ಘನಲಿಂಗ ಜಂಗಮಂ ತತ್ಪುರುಷಮುಖಮಂದಕೆ ಶಾಂತಿಕಲೆ ತ್ವಕ್ಕೆ ಮೊಗಂ
ಗುಣವಂತ ಸ್ಪರ್ಶಮೆ ದ್ರವ್ಯಂ ವಕಾರಮೇ
ಗಣಿಸಲ್ಕೆ ಬೀಜಸುಸ್ಪರ್ಶಸುಖ .... .... ....
.... .... .... .... .... .... .... ... .... .... .... ಗಿಗೆ ಭಾವಿಸೆ ೪೯

ಫಲಮೇ ವಿಚಾರಮಾಮೇಲೆಯಂಗಂ ಗಗನ
ತಲಜ್ಞಾನಮೇ ಹಸ್ತ ಶಿವನದೇ ಸಾದಾಖ್ಯ
ಯೊಲವಿಂ ಪ್ರಸಾದಲಿಂಗಂ ಲಿಂಗಮೀಶಾನಮುಖಮುಪರೆಯೇ ಶಕ್ತಿಯು
ಕಲೆಯೆ ತಾಂ .... .... .... .... .... .... ....
.... .... .... .... .... .... .... .... ....
ಯಕಾರವೆ ಬೀಜಂ ರಿತಸುಖ ಪರಿಣಾಮುವೆ ಕಾಲಮಾನಂದಭಕ್ತಿ ಮೇಣಿಷ್ಟರೊಳಗೆ ೫೦

ರಾಜಿಸುವ ಕರ್ತೃವಿಗೆ ಶರಣಂಗೆ ದರ್ಪದಳಿ
ವೇ ಜಗದಿ ಫಲವಿದರ ಮೇಲೆಯಾತ್ಮನೆಯಂಗ
ತೇಜವಂಹ ಬೋಧೆಯೇ ಹಸ್ತಸಾದಾಖ್ಯಮಪ್ಪುದು ಮಹಾಶಬ್ದಪೂರ್ವಂ
ಭ್ರಾಜಿಸುವ ಚಿತ್ತಾಗುವದು ಶಕ್ತಿಲಿಂಗಮಂ
ಯೋಜಿಪುದಲ್ಲೆ ಮಹಾಪದಪೂರ್ವವಾಗಿ ಬಿಡ
ದೋಜೆಯಿಂ ಪಾತಾಳಮುಖಮಂದಕೆ ಶಾಂತ್ಯತೀತೆಯ ಮೇಲೆ ಪೊಂದಿಸಲ್ಕೆ ೫೧

ಉತ್ತರೆಯೆನಿಪ್ಪಪದಮದರ ಸಮುದಾಯಮೇ
ಬಿತ್ತರದ ಕಲೆ ಹೃದಯಮೇ ಮೊಗಂ ಪರಿಣಾಮ
ಮುತ್ತಮದ್ರವ್ಯಮೋಂಕಾರಮೇ ಬೀಜ ಸುಖತೃಪ್ತಿಯೇ ಕಾಲಮಕ್ಕುಂ
ಮತ್ತೆ ಸಮರಸಭಕ್ತಿ ಮೇಣಿಷ್ಟರೊಳ್ ನೋಡೆ
ಕರ್ತೃವಿಂಗೈಕ್ಯಂಗೆ ಸುಜ್ಞಾನಮೇ ಫಲಂ
ತತ್ತ್ವದಾತ್ಮಂಬಡೆವುದೇ ನೋಡೆ ಸರ್ವರೊಳ್ ಪರ್ಯಂತಿಮಂ ಫಲಚಯಂ ೫೨

ಮೊದಲುಗೊಂಡೀ ಸಕಲಸಾಮಗ್ರಿಯಂ ಬೆರೆದ
ಪದದಲ್ಲಿ ಗಂಧಮೊಂದಂ ಮಿಕ್ಕ ಭೂತಗಳೊ
ಳೊದಗಿದಾಯಾಪದಾರ್ಥಂಗಳೊಳ್ ಬೆರಸಲಾರಾಗುವದು ರಸಗಂಧಕಂ

ಇದರಂತೆ ರೂಪಗಂಧ ಸ್ಪರ್ಶಗಂಧಮೆಂ
ದದರಂತೆ ಶಬ್ದಗಂಧಂ ವೃತ್ತಿಗಂಧಮೆಂ
ದುದಯಿಸುಗುಮಿೂ ತೆರದಿ ರಸವ ರೂಪವ ಸ್ಪರ್ಶಮಂ ಶಬ್ದಮಂ ವೃತ್ತಿಯಂ ೫೩

ಪ್ರತ್ಯೇಕಮೊಂದೊಂದನೊಂದೊಂದರೊಳ್ ಬೆರಸ
ಲುತ್ತಮ ಪ್ರಕೃತಿ ಮೂವತ್ತಾರು ಸಂಖ್ಯೆಯ ಪ
ದಾರ್ಥಂಗಳಹುದೀ ಪ್ರಕಾರದಿಂ ಭೂತಂಗಳಂ ಚಾರುಹಸ್ತಂಗಳಂ
ಶಕ್ತಿಷಟ್ಕಂಗಳಂ ಲಿಂಗಂಗಳಂ ಮೇಲೆ
ಭಕ್ತಾದಿಷಟ್ಕಂಗಳಂ ಮಾಡಲಿನ್ನೂರ
ರತ್ತಣಿಂ ಪದಿನಾರು ಭೇದಂಗಳಾದವೆಂದಾಚಾರ್ಯನಾಗುಸುರಿದಂ ೫೪

ಗಂಧವಾಚಾರಲಿಂಗಕ್ಕೆ ಗುರುಲಿಂಗಕ್ಕೆ
ಸಂದ ರಸಮಂ ರೂಪಮಂ ಶಿವನ ಲಿಂಗಕ್ಕೆ
ಹೊಂದಿಪುದಂ ಸ್ಪರ್ಶಮಂ ಜಂಗಮದ ಲಿಂಗಕ್ಕೆ ಪ್ರಾಣಲಿಂಗಕೆ ಶಬ್ದಮಂ
ಮುಂದಾದ ಸಂಕಲ್ಪಮಂ ಮಹಾಲಿಂಗಕ್ಕೆ
ನಿಂದರ್ಪಿಸುವದಿಂತು ಗಂಧದೊಳಗಣ ಗಂಧ
ಬೃಂದಮಂ ಗಂಧದೊಳಗಣ ರಸವ ಗಂಧದಲ್ಲಿಯ ರೂಪಮಂ ಗಂಧದಿ ೫೫

ತೋರುವ ಸ್ಪರ್ಶಮಂ ಗಂಧದೊಳಗಣ ಶಬ್ದ
ವಾ[ರೂಪ] ಗಂಧದಲ್ಲಿರುವ ಸಂಕಲ್ಪಮಂ
ಬೇರೆಬೇರಾಚಾರಲಿಂಗದಲ್ಲಿರು[ವ] ಗುರುಲಿಂಗ ಶಿವಲಿಂಗಗಳಿಗೆ
ಸಾರಜಂಗಮಲಿಂಗ ಸುಪ್ರಸಾದದ ಲಿಂಗ
ವಾರಕೆ ಮಹಾಲಿಂಗಕರ್ಪಿಸುವದಿದರಂತೆ
ವಾರಿ ಶುಚಿವಾಯಂ ಪುಷ್ಕರಹೃದಯಗುಣದೊಂದರೊಳಗೊಂದನು ೫೬

ಬೆರಸಿ ಗುರುಲಿಂಗ ಶಿವಲಿಂಗ ಜಂಗಮಲಿಂಗ
ವರಸುಪ್ರಸಾದಲಿಂಗಕ್ಕಂ ಮಹಾಲಿಂಗ
ಕಿರದರ್ಪಿಸುವದು ಮಿಶ್ರಾರ್ಪಣಮೆನಿಪುದು ಮೂವತ್ತಾರುರೀತಿಯಿಂದ
ಮರಳಿ ಮತ್ತೊಂದು ರೀತಿಯ ಕೇಳು ದ್ರವ್ಯಗಳ
[ಕರ]ರೂಪಮಿಷ್ಟಲಿಂಗಕ್ಕರ್ಪಿತಂ ಪ್ರಾಣ
ಹರಮೂರ್ತಿಗರ್ಪಿತಂ ರುಚಿ ಭಾವಲಿಂಗಕ್ಕೆ ತೃಪ್ತಿಯರ್ಪಿತಮಪ್ಪುದಂ ೫೭

ತನುವ ಗುರುವಿಂಗೀವುದೀವುದಾ ಲಿಂಗಕಂ
ಮನವ ಜಂಗಮಲಿಂಗಕೀವುದತಿತುಷ್ಟಿಯಿಂ
ಧನವನಿವರಲ್ಲಿ ವಂಚನೆಯನೆಳ್ಳನಿತಾದರು[ಂ] ಚರಿಸಲಾಗದಯ್ಯ
ತನುಮನೋಧನಗಳಂ ಕೊಟ್ಟವನೆ ಭಕ್ತನೆಂ
ದೆನಿಸುವನವಂಗೆ ಮೇಲಧಿಕಾರ ದೆಶೆಯಿಂದ
ಲನುಸರಿಸುವುದು ನೋಡೆ ಮಾಹೇಶ್ವರಾದಿ ಪಂಚಸ್ಥಲಂ ಸಿದ್ಧವಾಗಿ ೫೮

ಸ್ಪರ್ಶಕಾಲದೊಳಗಾಚಾರಲಿಂಗವ ಗಂಧ
ಸ್ಪರ್ಶಿಪುದು ಗುರುಲಿಂಗವಂ ಗಂಧರಸವಾಗ
ಸ್ಪರ್ಶ ವಿಜ್ಞಾನಕಾಲದೊಳಂಟುವುದು ಗಂಧರೂಪವೇ ಶಿವಲಿಂಗಮಂ
ಸ್ಪರ್ಶನಿಶ್ಚಯ ಕಾಲದೊಳ್ ಸೇರುವುದು ಗಂಧ
ಸ್ಪರ್ಶ ಜಂಗಮಲಿಂಗವಂ ಬಿಡದೆ ಪೊಂದುವುದು
ಸ್ಪರ್ಶಸುಖಕಾಲದೊಳ್ ಗಂಧಶಬ್ದಂ ಪ್ರಸಾದದ ಲಿಂಗಮಂ ಸೇರ್ವುದು ೫೯

ಬೇಗ ಸುಖಪರಿಣಾಮಕಾಲದಿ ಮಹಾಲಿಂಗ
ಭಾಗವಂ ಗಂ[ಧ]ಸಂಕಲ್ಪವೊಂದುವದು ತಾ
ನಾಗಿ ಸುಖತೃಪ್ತಿಕಾಲದೊಳಿಂತು ವಾರ್ಯಗ್ನಿ ವಾಯು ಪುಷ್ಕರ ಹೃದಯದ
ಆಗಾರದೊಳಗಿಹ ಪದಾರ್ಥಂಗಳಂ ಮಿಶ್ರ
ಮಾಗಿ ಭಾವಿಸಿ ಗುರುಪ್ರಮುಖಲಿಂಗಗಳಲಿ ನಿ
ಯೋಗಿಸುವ ಕಾಲವರಿಯಲ್ಕಿದವಧಾನವೆಂಬರು ಪುರಾತನ[1]ರು[1] ಬಿಡದೆ ೬೦

ಅರ್ಪಿತವ ಸಾಮಾನ್ಯಮಾಗಿ ತಿಳಿದೊಡಮಿಲ್ಲಿ
ತೋರ್ಪ ನಿತ್ಯಾವಧಾನವ ತಿಳಿಯಲಸದಳಂ
ಬೇರ್ಪಡಿಸಿ ಸಕಲಾವಧಾನಂಗಳಂ ಸಕಲಕರಣಂಗಳಲ್ಲಿ ಬಿಡದೆ
ಅರ್ಪಿಸುವ ಕಾಲದೊಳಗಾವಂಗೆ ಬಾಹ್ಯದಲಿ
ತೋರ್ಪಡುವ ವಿಷಯದಲಿ ಚರಿಪುದು ಮನಂ ನೋಡ
ಲಿರ್ಪುದೆಂತವಧಾನಮವಗೆ ಮೇಣಾತ ಕಂದರ್ಪರಿಪುವಾದರೇನು ೬೧

ಅವಧಾನಮಳವಟ್ಟೊಡಾತನೇ ನಿಜಭಕ್ತ
ನವಧಾನಮಳವಟ್ಟೊಡಾತನೇ ಮಾಹೇಶ
ನವಧಾನವಳವಟ್ಟೊಡಾತಂ ಪ್ರಸಾದಿಯ್ಯೆ ಪ್ರಾಣಲಿಂಗಿಯು ಶರಣನೈ

---

[1] ವ (ಕ)

ಅವಧಾನವುಳವಟ್ಟೊಪಾತನೈಕ್ಯಂ ರೇಣಂ
ಕವರೇಣ್ಯ ಮುಖ್ಯಶಿವಪ್ರಮಥರೊಳಗಾಲಿಸ
ಲ್ಕವನೊರ್ವನಲ್ಲದೀ ಭುವನದಲಿ ಸಂಚರಿಪ ಜಂತುಗಳೊಳೊರ್ವನಲ್ಲ ೬೨

ಪ್ರಣವದಿಂ ಪಂಚಭೂತಂಗಳಾದವು ಕೃತಿಕ
ರಣಪಂಚಕಂ ಜ್ಞಾನಕರಣಪಂಚಕವೆರಡು
ಜನಿಸಿತು ನಕಾರದೊಳ್ ಪಂಚಾಂತರಂಗ[ಂ]ಗಳಾದವು ಮಕಾರದಿಂದ
ಜನಿಸಿದಂ ಜೀವಂ ಶಿಕಾರದಿಂ ದಶವಾಯಂ
ಗಣಮೇ ವಿಕಾರದಿಂದಾದುದಂ ಯಕಾರದಿಂ
ಗುಣಗಳುದಿಸಿದವು ಮೂರದರಿಂದ ಮಂತ್ರಮೂರ್ತಿಯೆ ಭಕ್ತನೆಂದರಿವುದು ೬೩

ಈ ಮಂತ್ರವೇ ಶಿವದ್ರವ್ಯವಾಚಕವಂಪ್ಪು
ದೀ ಮಂತ್ರವೇ ಶಿವನ ಮೂರ್ತಿಯಪ್ಪುದು ನೋಡ
ಲಾ ಮಹಾದೇವಂಗೆ ಪಾತಾಳಮುಖದೊಡನೆ ಪಂಚವಕ್ತ್ರಗಳಾದವು
ಭೂಮಿ ಸದ್ಯೋಜಾತನಿಂದ ಜನಿಸಿ[1][ತು][1] ಜಲಂ
ವಾಮದೇವನ ದೆಶೆಯೊಳಾಯ್ತುಘೋರಾಸ್ಯದಿಂ
ದೇ ಮಹಾವಹ್ನಿ ಪುಟ್ಟಿತು ತತ್ಪುರುಷಮುಖದಿ ಪೃಷದಶ್ವನುದಯಮಾಯ್ತು ೬೪

ಈಶಾನಮುಖದಿ ಗಗನಂ ಮತ್ತೆ ಪಾತಾಲ
ಕಾಸ್ಯದಿಂದಾತ್ಮನಂದಯಿಸಿದನೀ ಪಂಚಭೂ
ತಾಶೇಷರೂಪಮಂ ಭಾಗಂಗಳಂ ಮಾಡಿ ಪಂಚೀಕರಿಸಿ ಕೂಡಲು
ಲೇಸಾಗಿ ಪಂಚವಿಂಶತಿತತ್ವಮುದಯಿಸಿ
ತ್ತೀ ಶರೀರಂ ಮೇಣವರ ಕೂಟದಿಂದಾದು
ದೀಶನೀ ತನುವಿಗಾದಂ ಭಕ್ತ ಮತ್ತಂಡಕಾದನೀಶಂ ಶಂಕರಂ ೬೫

ಹೀಗೆ ಸಮರಸಮಾದ ಜಗದಿ ಘ್ರಾಣವೆ ಭೂಮಿ
ಭಾಗಮಾಗಿಹುದು ನಾಲಿಗೆ[1]ಯೆ[1] ಜಲ ನೇತ್ರತಾ
ನಾಗಿರುವದಗ್ನಿ ತ್ವಕ್ಕೇ ವಾಯು ಗಗನವೇ ಶ್ರೋತ್ರಮಾಗಿರುತಿರ್ಪುದು
ಮೇಗೆ ಮನವಾತ್ಮನಿಂತಿವರ ವಿಷಯಗಳಾದ
ಯೋಗವಾಹಕ ಗಂಧರಸರೂಪಸಂಸ್ಪರ್ಶ
ವಾಗಮಲಸಂಕಲ್ಪಗಳೆ ಭೂತಕಾರಣಗಳವು ಸೂಕ್ಷ್ಮತನುವೀಶಗೆ ೬೬

---

ತು (ಕಗ)

ಸ್ಥೂಲತನಂವೀ ಪಂಚಭೂತಂಗಳೀಶ[ಂಗೆ]
ಮೇಳೈಸಿದೀ ಪಾಂಚಭೌತಿಕಂ ಜೀವಂಗೆ
ಸ್ಥೂಲತನುವಿದರಲ್ಲಿ ಕರಣದಶಕಂ ಚತುಷ್ಟಯಮಂತರಂಗಮಹುದು
ಮೇಲಾಗಿ ಸೂಕ್ಷ್ಮತನುವಿದರಧಿಷ್ಠಾತೃ ದೇ
ವಾಳಿ ಈಶಂಗೆ ತನುವಿಂತಿಲ್ಲಿ ಲಿಂಗಗಳು
ಸಾ .... ಹವವರೊಳಿಹರು ಭಕ್ತಾದಿಗಳೆನುತ್ತರಿಯೆ ಸಾಮರಸ್ಯಂ (?) ೬೭

ಇದಕೆ ವಿಸ್ತಾರಮರಿವುದಂ ತೋಂಟದಾರ್ಯರಿಂ
ದುದಿಸಿರ್ದ ಷಟ್ಸ್ಥಲದ ದೀಪಿಕೆಯೊಳಾ ಮೇಲೆ
ಇದರರ್ಥವನೆ ಚೆನ್ನಬಸವೇಶ್ವರಂ [ರಾಜ]ಯೋಗವಚನದಲಿ ಪೇಳ್ದಂ
ಅದರಿಂದ ವಿಸ್ತರಿಸಲಿಲ್ಲದೀ ಕೃತಿಯಲ್ಲಿ
ಚದುರರಾಲಿಪುದರ್ಪಿತವನುಮವಧಾನಮಂ
ಮುದದಿಂದ ಸಾಮರಸ್ಯವ ತಿಳಿದವನೆ ಮಹಾವೀರಶೈವಂ ಶಾಂಭವಂ ೬೮

ಇನ್ನೊಂದುರೂಪದಿಂ ಪೇಳುವೆಂ ಕೇಳೀಗ
ಚೆನ್ನಾಗಿಯಾಚಾರಲಿಂಗವೇ ತ್ರಿವಿಧರೂ
ಪಂ ನೆರೆದಿರುವದಾ ಸದಾಚಾರಮೆಂದಂ ನಿಯತಾಚಾರಮೆಂದು ಬಳಿಕ
ಸನ್ನುತ ಗಣಾಚಾರಮೆಂದು ಮೇಣೆಳೆಯೊಳಗೆ
ತನ್ನ ಸನ್ಮಾರ್ಗದಿಂ ಶರಣರ್ಗೆ ತೋಷಮಂ
ಮುನ್ನೀವುತಂ ಶಿವನ ಪಾದದಲಿ ಭಕ್ತಿಯಂ ಪುಟ್ಟಿಸೆ ಸದಾಚಾರವೈ ೬೯

ಪ್ರಾಣಾಂತಮಾಗಿ ಪಿಡಿದಾಚಾರಮಂ ನಡಸ
ಲೂಣಯಂ ಪೊರ್ದದಂದದೊಳು ನಿಯತಾಚಾರ
ಮೇಣೀಶಭಕ್ತನಿಂದಕರ ಶಿಕ್ಷಿಸುವದೆ ಗಣಾಚಾರಮೆಂದೆನಿಪುದು
ಮಾಣದೇ ಗುರುಲಿಂಗ ಮೂರುತೆರನಾಗಿರ್ಪು
ದೇನೆಂಬೆ ದೀಕ್ಷೆಯೆಂದುಂ ಶಿಕ್ಷೆಯೆನ್ನುತಂ
ಸ್ವಾನುಭವಮೆಂದಾಗವೋಕ್ತಸುವಿಧಾನದಿಂ ಕುಂಡಾದಿ ರಚನೆಯಿಂದ 20

ಬೆರೆದಿ[2][ಹಾ][2] ಷಡಧ್ವದ್ವಾದಿಗಳ ಮಾಳ್ಪದೇ
ಹರದೀಕ್ಷೆ ಜಂಗಮವೆ ಶಿವನೆಂಬ ಭಾವವಂ
ಪರಿವಿಡಿದ ಸುಜ್ಞಾನಮಳವಡುವುದೇ ಶರಣಜನರಿಂದ ಶಿಕ್ಷೆಯಕ್ಕುಂ

1 ದು (ಗ) 2 ಹ (ಕಗ)

ಹರಿಹಂಚನೈದದೇ ತನಗೆ ತಾನೇ ಭಕ್ತಿ
ಹರನಲ್ಲಿ ಪೂರ್ವಸಂಸ್ಕಾರದಿಂ ತೋರ್ಪುದೇ
ವರತರ ಸ್ವಾನುಭವಮಾ ಮೇಲೆ ಇಷ್ಟಲಿಂಗಂ ಪ್ರಾಣಲಿಂಗಮೆಂದು ೭೧

ಪಾರಮಂ ತೃಪ್ತಿಲಿಂಗಮೆನುತ್ತ ಶಿವಲಿಂಗ
ಮೂರುತೆರನಾಗಿರ್ಕು ಶ್ರೀಗುರುವ ದೀಕ್ಷೆಯಿಂ
ಸೇರಿಸಿದುದೇ ಇಷ್ಟಲಿಂಗ ತನುಗುಣ ಘನವ್ಯಾಪ್ತಿಯುಂ ಬಿಟ್ಟು ಶಿವನ
ಮೂರುತಿಯೊಳಿಲ್ಲಹುದೆ ಚಿತ್ತಮಂ ಪ್ರಾಣಲಿಂ
ಗಾರಯ್ಕೆ ಶಿವಲಿಂಗದೊಳಗನನ್ಯತೆಯು ಬು
ಧ್ಯಾರೂಢತೆಯೆ ತೃಪ್ತಿಲಿಂಗವಮಾಬಳಿಕ ಜಂಗಮಲಿಂಗಮಕ್ಕು ತ್ರಿವಿಧಂ ೭೨

ಸ್ವಯಲಿಂಗ ಚರಲಿಂಗ ಪರಲಿಂಗವೆಂದು ನಿ
ಶ್ಚಯವಾಗಿ ಶಿವಲಾಂಛನವ ಧರಿಸಿ ಶಿವನೆ ನಿ
ರ್ಣಯಿಸೆ ತಾನೆಂದು ಬಾಹ್ಯದ ಸುಕರ್ಮತ್ಯಾಗದಿಂ ಸದಾನಂದಿಯಹನೆ
ಸ್ವಯಲಿಂಗವೆನಿಸು[1]ವಂ[1] ಶಿವಲಿಂಗದೊಡನೆ ನಿ
ರ್ಭಯದಿಂದ ಸಕಲೇಂದ್ರಿಯಗಳೆರಕಮಾಗಿರಲ್
ನಯಿಂಸಿದಾನಂದದಿಂ ಸ್ವೇಚ್ಛೆಯಿಂ ಚರಿಪನೇ ಚರಲಿಂಗವೆಂದೆನಿಸುವಂ ೭೩

ಅಖಿಲಕ್ಕಧಿಷ್ಠಾತೃವಾಗಿ ತಾನಿರ್ಪುದೇ
ವಿಕರಿಸದೆ ಪರಲಿಂಗಮಾಮೇಲೆಯಾ ಪ್ರಸಾ
ದಕಲಿಂಗಮೇ ತ್ರಿವಿಧವಾಗಿರ್ಪುದದು ಶುದ್ಧಸಿದ್ಧಪ್ರಸಿದ್ಧಮೆಂದು
ಸುಕರದಿಂದಾರಯ್ಕೆ ಗುರುಭುಕ್ತಭಕ್ತದೊಳ್
ಶಕಲಮೇ ಶುದ್ಧಂ ಮಹಾದೇವನರ್ಪಿತದ
ಶಕಲಮೇ ಸಿದ್ಧಂ ಪ್ರಸಿದ್ಧಮೆನಿಪುದು ಜಂಗಮದ ಭುಕ್ತಶೇಷಮಕ್ಕುಂ ೭೪

ಮತ್ತೊಂದು ತೆರವಾಗಿದಕ್ಕರ್ಥಮುಂಟು ಪೂ
ರ್ವಾತ್ತ ಕಾಮಾದಿಗಳ ಬಿಟ್ಟು ಲಿಂಗಾಣತಿಯೆ
ಪತ್ತಿಹುದೆ ಶುದ್ಧಂ ಶಿವಜ್ಞಾನದುದಯಮೇ ಸಿದ್ಧಂ ಪ್ರಸಿದ್ಧಮೆನಲು
ಕೃತ್ತಿವಾಸನೊಳಹಂಭಾವನಿಶ್ಚಲತೆಯೇ
ಚಿತ್ತದೊಳಗಾರಯ್ಕೆ ಬ[ರ್ಪಾ] ಮಹಾಲಿಂಗ
ವೃತ್ತಿಯೇ ಮೂರುತೆರನಾಗಿರ್ಕು ಪಿಂಡಜಸುಲಿಂಗಮಂಡಜಸುಲಿಂಗಂ ೭೫

---

1 ದಂ (ಗ)

ಎಣಿಸಲ್ ಚಿದಾಕಾಶಲಿಂಗವೆಂದೆನುತ ಮ
ತ್ತಣಿಯರದೊಡಲೆ ದೇಗುಲಂ ದೇವನೇ ಜೀವ
ನೆನುವ ನಿಶ್ಚಯವೆ ಪಿಂ....ಗವಿುಳೆಯೆ ಪೀಠಂ ಗಗನವೇ ಲಿಂಗವು (?)
ಗುಣವಿಕಲ್ಪಾಭಾವವಿುಲ್ಲಿಯಂಡಜಲಿಂಗ
ಮೆನಿಕು ತನ್ನೊಡನೆ ಗಗನಂ ಗಗನದೊಡನೆ ತಾ
ನನುಸರಿಸಿ ತೋರ್ಪ ಮರ್ತ್ಯನುತ್ಸಂಧಿಯೆ ಮಹಾಕಾಶಲಿಂಗಂ ಭಾವಿಸೆ ೭೬

.... ... ಮಾಚಾರದಿ ಲಿಂಗಷಟ್ಕಂಗಳಲಿ
ಭಕ್ತ್ಯಾದಿಷಟ್ಕವೊಂದೊಂದರೊಳಗಾರಾರು
ವೃತ್ತಿಯಿಂ ನೋಡೆ ಮೂವತ್ತಾರುಭೇದಮಾಗಿರ್ಪುದಾ ಸ್ಥಿತಿಯೆಂತೆನೆ
ಬಿತ್ತರಿಪೆ ಕೇಳೈ ಮುನೀಂದ್ರ ಶೈವಾಚಾರ
ವರ್ತನೆಯೊಳಿರದ ಸತಿಮುಂತಾದವರ ಮೋಹ
ದತ್ತಣಿಂ ತೊಲಗಿದಾತನೆ ಮರಾಚಾರ ಲಿಂಗದ ಮೋಹಿಯೆಂದೆನಿಪನು ೭೭

ಶಂಕರಾಚಾರಕೆ ವಿರುದ್ಧಮಾದಾ[1]ಚಾ[1]ರ
ಪಂಕಮಂ ಪೊಗದೆ ಬೇರಾಗಿರ್ಪನಾಚಾರ
ಶಂಕರನ ಲಿಂಗಕ್ಕೆ ಭಕ್ತನೈ ದೇವತಾಂತರ ಭಜನೆಯಂ ವರ್ಜಿಸಿ
ಶಂಕರನ ಪೂಜಿಪಾತನ ನೋಡಲಾಚಾರ
ಶಂಕರನ ಲಿಂಗಕ್ಕೆ ಪೂಜಕನು ಸ್ವಾಚಾರ
ಮಂ ಕಡೆಗು ಬಡೆದಾತನಾಚಾರಲಿಂಗವೀರನು ವೀರಶೈವರಲ್ಲಿ ೭೮

ಶುಚಿಯುಶುಚಿಯೆಂಬ ಸಂಕಲ್ಪವಳಿದಾತನೇ
ಯಚಲೆಯೊಳಗಾಚಾರಲಿಂಗಪ್ರಸಾದಿ ಮೇ
ಣಚಲೇಂದ್ರಕನ್ಯಕಾಪತಿ ಶೈವನಿಂದೆಯಾಲಿಸದವನೆಯಾಚಾರದ
ಪ್ರಚುರಲಿಂಗಪ್ರಾಣಿ ಮಾತಾಪಿತೃಗಳಲ್ಲಿ
ವಿಚರಿಸುವ ಮೋಹಮಂ ಕಳೆದು ಗುರುಪಾದದೊಳ
ಗಚಲಿತಪ್ರೇಮಿಯೇ ಗುರುಲಿಂಗಮೋಹಿಯೆಂದೆನಿಸುವಂ ಲೋಕವರಿಯೆ ೭೯

ಬಂಧೂಪಚಾರವಂ ಲೆಕ್ಕಿಸದೆ ಗುರುಪದ ಕ
ಬಂಧರುಹದೊಳ್ ಪ್ರೇಮಿ ಗುರುಲಿಂಗಭಕ್ತ ಬೇ
ರೊಂದುಪೂಜೆಯನೊಲ್ಲದೇ ಗುರುವನರ್ಚಿಪನೆ ಗುರುಲಿಂಗಪೂಜಕನಹಂ

---

1 ಶಾ (ಕ)

ಹಿಂದಣ ವಿರುದ್ಧಮಾರ್ಗವನಂಳಿದು ಗಂರುಸೂಕ್ತಿ
ಸಂದರ್ಭಮಾರ್ಗದೊಳ್ ನಡೆವನೇ ವೀರನಿವ
ನೆಂದು ಪೇಳಲ್ಪಡುವ ಗುರುಲಿಂಗದಲ್ಲಿ ಗುರ್ವಾಜ್ಞೆಯಂ ಮೀರದವನೆ ೮೦

ಗುರುಲಿಂಗದಪ್ರಸಾದಿಯೆನಿಪ್ಪ ಗುರಂವಿನಿಂ
ಪರವಾದವರ ಸೇವೆಯುಂ ತೊರೆದನಾರತಂ
ಗುರುಸೇವೆಯಂ ಮಾಡಿಕೊಂಡು ಸಂತೋಷಿಪನೆ ಗಂರುಲಿಂಗಪ್ರಾಣಿಯಪ್ಪಂ
ಹರಮೋಹದಿಂದನ್ಯಮೋಹಮುಳಿದಾತನೇ
ಹರಲಿಂಗಮೋಹಿ ಧರೆಯೊಳಗನ್ಯದೇವತಾಂ
ತರ ನಿರಾಸಕನೆ ಶಿವಲಿಂಗಭಕ್ತನು ದೇವತಾಂತರವ ಭಜಿಸದವನೆ ೮೧

ಶಿವಲಿಂಗಪೂಜಕನು ಪುಣ್ಯಯಾತ್ರಾದಿಕ
ವ್ಯವಹಾರಮಿಲ್ಲದನೆ ಶಿವಲಿಂಗವೀರ ಸಂ
ಭವಿಪ ಸುಖದುಃಖಂಗಳಂ ಸಹಿಸಿದಾತನೇ ಲಿಂಗಪ್ರಸಾದಿಯಪ್ಪಂ
ಶಿವನ ವನಿತಾದಿಭೋಗವನೊಲ್ಲದಾತನೇ
ಶಿವಲಿಂಗಪ್ರಾಣಿಯೆನಿಪಂ ತನ್ನ ಪೂರ್ವದ
ವ್ಯವಹಾರಗಳ ನಿಷೇಧಿಸಿದಾತನೇ ಜಂಗಮದ ಲಿಂಗಮೋಹಿಯಪ್ಪಂ ೮೨

ಈಜಾತಿಯೊಳಗಾನು ಪುಟ್ಟಿರ್ದೆನಿಂತಪ್ಪ
ರೋಜೆಯೊಡನೆನಗೆ ಸಂಬಂಧಮಿರ್ದುದಂ ಬಂದ
ತೇಜಮಿದಂ ಕೊರತೆಯಿದುಯೆಂದಲ್ಲಿ ಬಗೆಯದಾತನೆ ಜಂಗಮದ ಲಿಂಗದಿ
ರಾಜಿಸುವ ಭಕ್ತನೀಯಿಾ ದೇವ[1]ತಾಂತ[1]ರ ಸ
ಮಾಜದೊಳಗೀಯಿಾ ಫಲಂಗಳಿಹವದಕಾಗಿ
ಮಾಜದರ್ಚಿಸಬೇಹುದೆಂಬುದಂ ತೋರದಾತನೆ ಪೃಥಕ್ಕಾಮದೊಡನೆ ೮೩

ಜಂಗಮಂದ ಲಿಂಗಪೂಜಕನು ತನ್ನೊಳಗುತ್ತ
ಮಂಗಳೆನಿಸಂವ ಪದಾರ್ಥಂಗಳಂ ನೆರೆಕಂಡು
ಜಂಗಮಂ ಕೇಳಲೊಡನಿತ್ತವರೊಳಿರಲದನು ಕಾಲಾಂತರದಲಿ ಕಂಡುಂ
ಲಿಂಗದೇಹದೊಳಿಚ್ಛೆಯಂ ಪತ್ತಿಸದನೆ ವರ
ಜಂಗಮದ ಲಿಂಗವೀರನು ಯಾವದಾನೊಂದುಂ
ಜಂಗುಳಿಯೊಳಿರಲಿ ಮೇಣಾವಾವವಸ್ಥೆಯೊಳಗಿರಲಿ ಮೇಣದ ನೋಡದೆ ೮೪

---

1 ತಾವ (ಕ)

ಜಂಗಮಕ್ಕಿತ್ತಲ್ಲದಖಿಲವಸ್ತುಗಳ ನಿಜ
ಲಿಂಗಾರ್ಪಣಂಗೆಯ್ಯದಾತನೇ ಧರಣಿಯಲಿ
ಜಂಗಮದ ಲಿಂಗಪ್ರಸಾದಿಯೆಂದೆನಿಸುವಂ ಸರ್ವಕಾಲಂಗಳಲ್ಲಿ
ಮುಂಗಡೆಯೊಳಖಿಲವರ್ತನೆಗಳಂ ಕಾಣುತಿರ
ಲುಂ ಗಣಿಸದೇ ಸದಾಗುರುವಾಕ್ಯರತನಾಗಿ
ಜಂಗಮ[1]ನೆ[1] ಶಿವನೆಂಬ ಭಾವವುಳ್ಳಾತನೇ ಜಂಗಮದ ಲಿಂಗದಲ್ಲಿ ೮೫

ಪ್ರಾಣಿಯೆಂದೆನಿಪ ಲಿಂಗಾರ್ಪಿತವನುಳಿದನ್ಯ
ನಾನಾಪದಾರ್ಥದಲಿ ರುಚಿಯರಿಯದಾತನೇ
ತಾನೆ ಪ್ರಸಾದಲಿಂಗದ ಮೋಹಿಯೆಂದೆನಿಪ ತನ್ನ ಪೂರ್ವಾಹಾರದ
ಸ್ಥಾನದೊಳಗಿರ್ದ ರಾಗವನು ಬಿಟ್ಟಾತನೇ
ಮಾಣದೆ ಪ್ರಸಾದಲಿಂಗದ ಭಕ್ತನೆಂದೆನಿಪ
ಮಾನವರೊಳನ್ಯಮತಮಾರ್ಗಿಗಳೊಡನೆ [2]ತನಗೆ ಸ್ನೇಹಮೇ[2] ಬಾರದಂತೆ ೮೬

ನಡೆಯುತಂ ಕಂಡೊಡಂ ಮಾತನಾಡದೆ ಬೇಡ
ಲೊಡನೀಯದವರೀಯಲಾಯಾ ಪದಾರ್ಥಗಳ
ಗೊಡವೆಗೈದದೆ ವರ್ತಿಸುವನೆ ಪ್ರಸಾದಲಿಂಗದ ಪೂಜಕನು ಕಾಯ್ದಿನಿಂ
ದೊ[3][ಡ][3]ವೆರೆದು ತೋರದನ್ಯರ ಪದಾರ್ಥಗಳ ತಾಂ
ಪಡೆದೊಡಟ್ಟದಾತನೆ [ತಾ]ಸುಪ್ರಸಾದಾಖ್ಯ
ಮೃಡಲಿಂಗವೀರನೆನಿಪಂ ಮತ್ತಮಾರಮನದನುಬಂಧದಿಂದಾದೊಡಂ ೮೭

ಮಾಡತಕ್ಕರ್ಥಮಿರ್ದೊಡಮ[4]ನ್ಯ[4]ಹಿಂಸೆಯಂ
ಮಾಡದಾತನೆ ಸುಪ್ರಸಾದಲಿಂಗಸ್ಥಲದಿ
ಕೂಡಿದ ಪ್ರಸಾ... ಪಂ ವಿಹಿತಮಾದನ್ನಪಾನಾದಿಗಳ ವಿಷಯದಿ (?)
ಮಾಡಿ ವ್ರತಾದಿಮುಖದಿಂದಾತ್ಮನಿಗ್ರಹಂ
ಮಾಡಿದಾತನೆ ಪ್ರಸಾದಾಖ್ಯಲಿಂಗಪ್ರಾಣಿ
ನಾಡರಿಯಲಪ್ಪನೀ ಲೋಕವಾರ್ತೆಯನಾರಮುಖದಲಾದೊಡಮಾಲಿಸಿ ೮೮

ಜನಪೀಡೆಯಿಂದ ನೃಪರಾಚರಿಪ ದುರ್ಭಿಕ್ಷ
ವನಂ ಸೂಚಿಸುವವೃಷ್ಟ್ಯಭಾವದಿಂ ರೋಗಾದಿ
ತನುತರಾಧ್ಯಾತ್ಮಿಕಾರ್ತಿಯಿನಂತರಂಗಕ್ಕೆ ಸಂತಾಪಮಂಟಿಸದನೆ

---

1 ವೆ (ಗ) 2 ತನ್ನ ಸ್ನೇಹ (ಕ) 3 ಡನೆ (ಕಗ) 4 ನುಷ್ಮ (ಕ)

ಘನಲಿಂಗವೋಹಿ ಪೂರ್ವದೊಳಾಚರಿತವಾದ
ವಿನಯಾದಿ ಸದ್ಗುಣಂಗಳೊಳಗನುಸಂಧಾನ
ಮಿನಿತಿಲ್ಲದಾತನೆ ಮಹಾಲಿಂಗಭಕ್ತನಜ್ಞಾನಿಜನರೊಡನೆ ತಾನು ೮೯

ಯಾವ ಕಾಲದೊಳಾಗಲಾವಕೋಟಲೆ ಬರಲಿ
ಯಾವ ದುಃಖದೊಳಾದೊಡಂ ಮೇಣವರ ಸಂಗ
ಸಾವರೋಧಾಲಾಪದಾನಪ್ರತಿಗ್ರಹಗಳಂ ಮಾಡದಿರ್ಪನೆ ಮಹಾ
ದೇವಲಿಂಗದ ಪೂಜಕನು ಪುಟ್ಟಲಿಷ್ಟತತಿ
ಸಾವನೊಂದಲಿ ಮತ್ತಮೊಂದೆಡೆಯೊಳ[1]ದ[1]ರಲ್ಲಿ
ನೋವಿಲ್ಲದಾತನೆ ಮಹಾಲಿಂಗವೀರನೈ ಪ್ರಾಕೃತರೆನಿಪ ಜನರಲಿ ೯೦

ಭೋಜನ ಪ್ರತಿಭೋಜನಾದಿ ಸತ್ಕಾರಗಳ
ರಾಜಿಯಂ ತೋರದಾತನೆ ಮಹಾಲಿಂಗದಿ ವಿ
ರಾಜಿಪ ಪ್ರಸಾದಿಯೆನಿಪಂ ಬಾಹ್ಯದೊಳಗೆ ಶಿವಲಿಂಗಕ್ಕೆ ಸಂಪಾದಿಪ
ತೇಜಮಂ ಬರೆದ ನಾನಾಚಿತ್ರತರವಾದ
ಪೂಜೋಪಕರಣಂಗಳೊಳಗನಾದರಣಮೇ
ಭ್ರಾಜಿಸಲ್ಕಂತರಂಗಕ್ರಿಯಾನಿಷ್ಠನೆ ಮಹಾಲಿಂಗಪ್ರಾಣಿಯಪ್ಪಂ ೯೧

ಇಂತು ಷಟ್ಸ್ಥಲದ ಭೇದೋಪಭೇದಂಗಳಂ
ಸ್ವಂತತಂ ತಿಳಿದಿದರೊಳಾಸಕ್ತನಾಗಿ ಮೇ
ಣಿಂತು ಸಂಸಾರಿಕದ ತಾಪವೊತ್ತರಿಸಿದೊಡಮಲ್ಲಿ ಧೈರ್ಯಂಗುಂದದೆ
ಜಂತುವರ್ಗದಲಿ ನರತನಂವೆತ್ತಿ ಮೇಣಿಲ್ಲಿ
ಕಂತುವೈರಿಯ ಪಾದಮಂ ಸೇರಿದೀಜೆಗಿ
ನ್ನೆಂತಾದೊಡಂ ಭವದಿ ಬರಬಾರದೆಂಬನೇ ನಿಜವೀರಶೈವನಪ್ಪಂ ೯೨

ಈತನೇ ಪರಿಪಕ್ವಚಿತ್ತನಾದರೆ ತನಂವಿ
ಗೋತು ಸೌಖ್ಯವನು ಸಂಪಾದಿ[ಸು]ವ ಶುಭಮಹ ನಿ
ಕೇತಾನಾದ್ಯುಪಭೋಗ್ಯವಪ್ಪ ದ್ರವ್ಯಂಗಳೊಳಗಾಸಕ್ತಿ ಇನಿತಿಲ್ಲದೆ
ಭೂತಳದಿ ಚರಿಸಬೇಕೆಂದು ಪ್ರಾಲೇಯಗಿರಿ
ಜಾತೆಗಂ ದೇವಿ ಕಾಲೋತ್ತರದಿ ದೃಢವಾಗಿ
ಭೂತನಾಥಂ ಪೇಳ್ದನೀಯರ್ಥಮಂ ಸಕಲರಾಚರಿಸಿದರು ಗಣವರು ೯೩

1 ವ (ಕ)

ದೇವದೇವನೆ ಜಗನ್ನಾಯಕನೆ ಸಕಲಮಂ
ಭಾವಿಸದೆ ತಾಂ ನಿರಾಭಾರಿಯಾದಾತನಿಂ
ಗಾವುದಾನೊಂದರ ಪರಿಗ್ರಹಂ ದೊರಕೊಂಬುದೇ ಎಂದು **ಗಿರಿಜೆ ಕೇಳೆ**
ದೇವಿ ಕೇಳೌ ಪೇಳ್ವೆನೀಗ ಬೃಹದಾರಣ್ಯ
ಕಾವಾಸನೀಯ ವಚನದಲಿ ಪೇಳಿರುತಿಹುದು
ಜೀವಿಸಿಯೆ ಮುಕ್ತನಾಗಿಪ್ಪ[ವ]ಗೆ ನಾಲ್ಕುಗುಣಮಿರತಕ್ಕದೆಂದೆನಂತ್ತ ೯೪

ಮೈತ್ರಿಯುಂ ಕರುಣೆಯುಂ ಮುದಿತೆಯುಮುಪೇಕ್ಷೆಯುಂ
ನೇತ್ರಜಿತಕಮಲದಳೆ ವೀರಶೈವದಿ ಮಹಾ
ಯಾತ್ರೆಯಂ ಮಾಡಿದವಗಿರತಕ್ಕ ಸಂಸಾರಸಾಮಗ್ರಿಯಾವಾವೆನೆ
ಉತ್ತಮಳೆನಿಪ ವಿದ್ಯೆಯೇ ಭಾರ್ಯೆ ಸಂತೋ[ಷ]
ವೃತ್ತಿಯೇ ಸುತನು ಕೆಡದೊಡನಿಪ್ಪ ಸತ್ಯವೇ
ಪುತ್ರಿ ಗುರುಶಾಸ್ತ್ರದ[ಶ್ರ]ದ್ಧೆಯೇ ಮೊದಲನೆಯ ಸೊಸೆಯೆನಿಪಳು ೯೫

ಸತ್ವಗುಣವೇ ನೋಡಲಳಿಯಂ ವಿರಾಗಮೇ
ಮತ್ತೆ ಬಂಧುಗಳಂ ಕ್ಷಮೆಯೇ ಸಕಲಕಾಲದಲಿ
ಚಿತ್ತಮಂ ನೋಯದಂದದಿ ಪೊರೆವ ಚ[ರರು] ಶಾಂತಿಯೆ ಕೇಡನಡಸದಿರ್ಪ
ಮಿತ್ರಂ ಮಹಾದೇವನಲ್ಲಿಯೆಡೆ [ಪ]ಡೆದಿರ್ಪ
ಭಕ್ತಿಯೇ ಮಾತೆ ವಿಮಲಾಚಾರವೇ ತಂದೆ
ಮೈತ್ರಾದಿ ಸದ್ಗುಣಗಳೇ ಪೌತ್ರರುಂ ಪ್ರಪೌತ್ರಾದಿಗಳೆನಿಸಿ ಮೆರೆವರು ೯೬

ಜ್ಞಾನವೇ ದೇಹಮಿಾ ದೇಹಮೆಂತಿರುತಿರ್ಕು
ತಾ[ನಾ]ರು ತನಗೀ ಶರೀರಕ್ಕೆ ಸಂಬಂಧ
[1]ವೇ[1]ನುಂಟು ತಿಳಿಯಬೇಕೆಂಬ [ಸುವಿ]ಚಾರವೇ ಕ್ಷೇತ್ರಮೆಂದೆನಿಸುತಿರ್ಕುಂ
ಪ್ರಾಣಿಗಳ ಕೊಲ್ಲದಿಹುದೇ ದಾಸಿ ಕಳ್ಳತನ
ಮೇನಿಲ್ಲದಿಪ್ಪುದೇ ದಾಸನು ಧರಿತ್ರಿಯಲಿ
ಪ್ರಾಣಿಗಳೊಳುಪಕಾರರೂಪಧರ್ಮವೆ ವಾಹನಾಕಾರದಿಂ ರಾಜಿಕುಂ ೯೭

ದಮಮೆ ಕುಲಗುರುವಾಗಿ ರಾಜಿಪುದು ಮೋಕ್ಷಮಂ
ಸುಮುಖದಿಂದೀವ ಪರಮಾಚಾರ್ಯನೇ ತನಗೆ
ಶಮಮೆನಿಕು ಪರಮುಕ್ತಿಯೇ ತನ್ನ ನಾಡು ಮೇಣಿವು ಮುಖ್ಯಮಾಗುಳಿದವೆ

1 ಮೇ (ಕ)

ತಮ[ತ]ಮಗೆ ಸಾಂಸಾರಿಕೋಪಕರಣಂಗಳಿಂ
ದಮಲವಂತಿಯಿಂದಲಾರೈದು ಬಾಹ್ಯದಿ ಕಂಥೆ
ಸುಮುಖಿದಂಡಂ ಕಮಂಡಲು ಭೈಕ್ಷಪಾತ್ರಂ ವಿಭೂತಿಯಾಧಾರವೈದಂ ೯೮

ಧರಿಸಿದವನಾಗಿ ಶಂಕರ ಚಾರುಮುದ್ರೆಯಂ
ಪರಿವಿಡಿಯನಂತರ[ಂ]ಗದಲಿ ಸಮತೆಯೆ ಕಂಥೆ
ಹರನ ವಿಜ್ಞಾನವೇ ದಂಡ ದಯೆಯೇ ಕಮಂಡಲು ವಿರಾಗವೆ ಭೈಕ್ಷದ
ಕರಗಮುಪರತಿಯೆ ಭಸ್ಮದ ಘಂಟಿಕೆಯು ಪಂಚ
ಪರಿಕರಗಳಿವ ತಾಳಿದವನಾಗಿ ಬಾಹ್ಯದಲಿ
ತುರುಬುಜಡೆ ಬೋಳುದಲೆಯಿಂದೊಪ್ಪಿ ಕೃಷ್ಣಾಜಿನವ ವಲ್ಕಲಗಳ ತಾಳ್ದು ೯೯

ಇಲ್ಲದಿರಲವು ದಿಗಂಬರನಾಗಿ ಭಸ್ಮಸಂ
ಪಲ್ಲಕ್ಷಿತಾಂಗದಿಂದೆಸೆದಂ ಬಳಿಕಂಳಿದ ಶಿವ
ನಲ್ಲಿ ತೋರುವ ಚಿತ್ರವೇಷಂಗಳಂ ವಹಿಸಿ ನಿಯತಮಾದಾಹಾರದಿಂ
ಪಲ್ಲವೀಕರಣದೇಳಿಗೆಯಿಂದ ಭಸ್ಮಮಂ
ಮೆಲ್ಲಿತಾಗುದ್ಧೂಳನಂಗೈದು ಸಂತ್ರಿಪುಂ
ಡ್ರೋಲ್ಲಾಸಿತಾಳಿಕಸ್ಥಲನಾಗಿ ಶಿವಲಿಂಗದರ್ಚನಾಸಕ್ತನಾಗಿ ೧೦೦

ಶಿವಮಂತ್ರಜಪವ [ನೀ]ನಾಗಲುಂ ಮರೆಯದೇ
ಸುವಿಧಾನದಿಂದಲಾದೊಡಮುಪಾಂಶುವಿನಿಂದ
ಸವಿಯೆಂತುಟಂತು ಮಾನಸಿಕಮಾಗಾದೊಡಂ ಜಪಿಸುತ ಸದಾಕಾಲದೊಳ್
ಶಿವನ ಸಂಧ್ಯಾನತಂ ಸ್ಥಲಕುಳವಿಚಾರಮಂ
ದಿವಸದಿವಸದಲಿ ಬಿಡದಾಚರಿಪನಾಗಿ ಭಾ
ವವನು ಲಿಂಗಾಂಗಸಂಯೋಗಾದಿ ಧ್ಯಾ[ನ]ಕ್ರಿ[1][ಯಾ][1]ಯೋಗನಿಷ್ಠನಾಗಿ ೧೦೧

ರಸವಾದದಲ್ಲಿ ತತ್ಪರನಾಗದೇ ಷಟ್ಕ
ರಸಪಾಕದಲ್ಲಿ ನಿರ್ಭರನಾಗದೇ ವಾದ
ರಸದೊಳಾಸಕ್ತನಾಗದೆ ವನ್ಯಮುಖ್ಯಾಭಿಚಾರದೊಳ್ ಮನಮನಿಡದೆ
ವಸುಮಾಲಿಗತಿಯನಾಲಿಪ ಶಾಸ್ತ್ರದಲ್ಲಿ ವೈ
ದ್ಯಸಮಾಜದಲಿ ವಣಿಗ್ವರ್ಗದಲಿ ಶಸ್ತ್ರಜೀ
ವಿಸಮೂಹದಲ್ಲಿ ಸಂಸಕ್ತನಾಗದೆ ಲೌಕಿಕವ್ಯಾಪ್ತಿಯಂ ಖಂಡಿಸಿ ೧೦೨

---

1 ಯ (ಕಗ)

ವನಿತಾದಿ ವಿಷಯಂಗಳಲಿ ವಿರಕ್ತಿಯನಾಂತು
ಜನಪದದಿ ಚರಿಪ ಯೋಗಿಯ ಭವಾರಣ್ಯದಲಿ
ತನಗೆ ಸಂಚರಿಪ ಯೋಗಂ ಸುಪ್ತಸಂಸ್ಕಾರದಿಂ ಪ್ರಸುಪ್ತಾಂಕವುಳ್ಳ
ಘನತರದ ಸಂಸ್ಕಾರದಿಂ ದೊರಕದಿರ್ದೊಡಂ
ಜನಜನಿತ ಪೂರ್ವಕರ್ಮಾನುಗುಣದಿಂ ಶೀಘ್ರ
ವೆನುವ ಸಂಸ್ಕಾರಮುಂ ಮಂದಸಂಸ್ಕಾರಮುಳವಟ್ಟರಾಕಾಲದಲ್ಲಿ ೧೦೩

ಚರಿಸಬೇಕಾಗಿಹುದು ಚರಿಸಿದೊಡಮದರಲ್ಲಿ
ದೊರೆಕೊಂಡಿರುವ ಲೋಭವೆಂಬ ಪಂಕವ ಪೊಗದೆ
ಮರಳಿ ವನಿತಾಸಕ್ತಿಯೆಂಬ ಗೊಸಬಿನ ನೆಲಕೆ ಕಾಲಿಡದೆ ಪಂಚಾಂಕದಿಂ
ಬೆರೆದಿರ್ಪ ಜ್ಞಾನೇಂದ್ರಿಯಗಳೆಂಬ ಶತ್ರುಗಳ
ನೆರೆಯು ಲೆಕ್ಕಿಸದೆ ಕರ್ಮೇಂದ್ರಿಯಗಳೆಂಬ ಮೋ
ಣರಿಗಳಾಪ್ತರಿಗೆ ಗುಟ್ಟಂ ಕೊಡದೆ ಮೋಹವೆಂಬ ಪಿಶಾಚಕೇನಂಜದೆ ೧೦೪

ಕೋಪವೆಂತೆಂಬ ಪೆರ್ಬುಲಿಗೆ ಸಿಕ್ಕದೆ ಸರ್ಪ
ರೂಪವಾಗಿಹ ಮಮತೆಯಂ ಮರೆದು ಮುಟ್ಟದೆ ವಿ
ರೂಪನಹ ಪಂಚಬಾಣನೆನಿಪ್ಪ ಚೋರನಿಹ ಸಂದುಕಟ್ಟಿಗೆ ಬಾರದೆ
ವಿಪಾಡುಪಡಲಂಧಕಾರವಾಗಿಹ ಮದದ
ಕಾಪಿನೊಳ್ ಕಣ್ಣಿಡದೆ ಮತ್ಸರ ನೆವದಿಂದ
ತಾಪತ್ರಯಗಳೆಂಬ ಹಾಳುಕುಳಿಯೊಳಗೆ ಬೀಳದೆ ಗರ್ವಗಿರಿಯನೇರಿ ೧೦೫

ಮೋಸವೆಂತೆಂಬ ಝರಿಯೊಳಗುರುಳದೇ ಜನರ
ವಾಸಿಯಿಂ ಸ್ತುತಿಯೆಂಬ ಮುಳ್ಳುಗಳ ಮೆಟ್ಟದೆ ಘ
ನಾಸೂಯೆಯೆಂಬ ಕಡುಬಾಡುಬಾಕಿನ ಮುಳ್ಳ ಮೆಳೆಯುಲ್ಲಿ ತಲೆಯಿಕ್ಕದೆ
ಘಾಸಿಯಂ ಮಾಳ್ಪ ಹಮ್ಮೆಂಬ ಬಲುಮಂಡುವಿನೊ
ಳ್ಕೈಸೋಲದೇ ಮೂಢಜನರ ವಾಕ್ಯಗಳೆಂಬ
ಕಾಸರಂಗಳು ತಿರುಗುತಿರ್ಪ ಕಾನಿನೊಳೊಮ್ಮೆಯಾದೊಡಂ ಸಂಗಮಿಸದೆ ೧೦೬

ಅಲ್ಲಿಗಲ್ಲಿಗೆ ತೋರ್ಪ ಜಾರೆಯರ ನಗೆಯೆಂಬ
ಹಳ್ಳಕೊಳ್ಳಗಳನೊಳಪುಗದೆ ಮನದಾಸೆಯಂ
ಪಲ್ಲವಿಸುವಂತೆ ಮಾ[1][ಡು][1]ವಭೋಗಿಮೃಗಗಳಾಡುವ ಹಕ್ಕೆಯುಂ ಮೆಟ್ಟದೆ

1 ದ (ಕಗ)

ಇಲ್ಲದರ್ಥವ ಬೋಧಿಸುವ ದುರ್ವ್ಯಾತಿಗಳೆಂಬ
ಕಲ್ಲುಗೊಟ್ಟಿನ ನೆಲದೊಳೊಮ್ಮೆಯುಂ ನಡೆಯಂದೇ
ಬಲ್ಲವರು ಮೇಣಾವದೆಸೆಯೊಳಿರುತಿರ್ಪರೆಂದಾ ದಿಕ್ಕನೀಕ್ಷಿಸುವುದು ೧೦೭

[ಸ]ರ್ವಪ್ರಯತ್ನದಿಂದವರಾವಪುಣ್ಯದ ಸು
ಪರ್ವಸಂಪ್ರಾಪ್ತಿ [ತಾ]ದೊರೆಕೊಂಡರವರಿಂದ
ನಿರ್ವಹಿಸಲಾರೆನೀ ಭವಕಾನನವ ತಿರುಗಿ ಶಾಂಕರಜ್ಞಾನವೆಂಬ
ಪೂರ್ವರಂ ಮೇಣಾವ ಪಥವಿಡಿದು ಪೋಗೆ ನಾ
ನೋರ್ವನೇ ಪಡೆವೆನೆಂದಾಗ ತೋರಿಸಿಕೊಂಡು
ಪೂರ್ವದೊಳ್ ಮರವೆ[ಯೆನುತ]ಲ್ಲಿ ತಾ ಚರಿಸಿ ಬಹುಕಷ್ಟಮಂ ಪಟ್ಟ ಬಗೆಯಂ ೧೦೮

ಆಗಾಗ ನೆನೆದುಕೊಳ್ಳುತ ತಿರುಗಿ ನೋಡದೇ
ಬೀಗಲೀ ನಾಡಿಗೈದಿದ ಮಹಾಪುರುಷನೇ
ಯೋಗಿಯೆಂದೆ[ನಿ]ಪನಾತನೆ ಜಂಗಮಸ್ಥಲಕೆ ಪಾತ್ರನೈ ಸಂಯಮಿವರ
ಹೀಗಿರುವನೇ ಶೈವರ[1][ಲ್ಲಿ ತಾ][1]ನೋಡಲ್ಕೆ
ಯೋಗಿಜನರೆಲ್ಲಂ ನಿರಾಭಾರಿಯೆಂದು ಚೆ
ನ್ನಾಗಿ ಪೇಳುವರು ಶಾಂಕರಸಂಹಿತೆಯಲಿ ಷಣ್ಮುಖನಿಗಿಂತೆಂದನಭವಂ ೧೦೯

ಕ್ರಿಮಿಗಳಿಂ ಕೀಟಮುತ್ತಮಮೆನೆ ಕುಕೀಟದಿಂ
ದಮಮು ನೋಡಲ್ ಭೂಮಿಚರ ಖಚರ ಪಕ್ಷಿಯು
ಗ್ಮಮು[ದರಿ]ಷ್ಟಂ ಮೇಣದಂ ನೋಡೆ ಮೃಗಚಾರಿಯುಪಕಿಂ ಮನುಷ್ಯನಧಿಕಂ
ವಿಮಲಮತಿಯುವರೊಳ್ ದ್ವಿಜಂ ವಿಚಾರಿಸಲಿಕು
ತ್ತಮನಾತನಿಂ ಸೋಮಯಾಜಿ ತಾನೆನಿಪನು
ತ್ತಮನಾತನಿಂದ ಸನ್ಯಾಸಿಯೆ ಗರಿಷ್ಠನಾ ಸನ್ಯಾಸಿಯುತ್ತಣಿಂದೆ ೧೧೦

ಆಗಮಂಜ್ಞಾನಿಯಧಿಕಂ ಮತ್ತಮನಿಗಿಂದ
ನಾಗಭೂಷಣನರ್ಚಕಂ ಮಿಗಿಲು ಮೇಣವನ
ಯೋಗಮಂ ನೋಡೆ ಲಿಂಗಾಂಗಸಂಗಿಗಳಧಿಕರವರಿಗಿಂ ಷಟ್ಸ್ಥಲದಲಿ
ರಾಗದಿಂ ವಿಹರಿಸುವರಧಿಕನವರಿಂ ಮೇಲೆ
ಸಾಗದಿನ್ನೊಬ್ಬರಧಿಕರೆನುತ್ತ ಪೇಳಲೆಂ
ದಾ ಗುಹಂಗೊರೆದನರ್ಧೇಂದುಶೇಖರನನುಮಾದೇವಿ ಸಾಕ್ಷಿಣಿಯಾಗಿರೆ ೧೧೧

1 ಲಿ (ಕಗ)

ಇಂತೆಂದು ಸಕಲರಹಸ್ಯಾರ್ಥವಂ ಸಾಧಂ
ಶಾಂತಿಯಂತನಾದ ದಾವಂನವಮುನಿಗೆ ಪಂಡಿತಾ
ರ್ಯಂ ತಿಳಿಂಪೆ ಕೇಳಿ ಸಾಷ್ಟಾಂಗದಂಡಪ್ರಣಾಮವ ಮಾಡಿ ಭಕ್ತಿಯಿಂದ
ಕಂತುಹರಮೂರ್ತಿಯೆ ಭವಾಬ್ಧಿತಾರಕನೆ ನಾ
ನೆಂತು ಕೊಂಡಾಡಲ್ ಸವ ರ್ಥನಾಗುವೆ ನೀನ
ನಂತಮಹಿಮಂ ಗಡಾ ಭಾನುವಿಗೆ ದೀಪಾರತಿಯನಾವನೆತ್ತಲಾಪಂ ೧೧೨

ಕಡೆಯಿಲ್ಲದೀ ಘೋರಸಂಸಾರಚಕ್ರದಲಿ
ಗಿಡುಬಳ್ಳಿ ಹುಳುಹಕ್ಕಿ ವಿಂಗವಾಳಂ ಮುಂತಾದ
ವೊಡಲುಗಳನಾಂತು ಮೇಣಾ ತಾಣದೊಳಗಿರ್ಪ ಸಂಖದುಃಖಗಳನುಣ್ಣುತ
ಕೆಡೆದವಂಗೀ ಕಷ್ಟವಂ ಬಿಡಿಸಿ ಸಾಂಬಶಿವ
ನೊಡವೆರಕೆಯಂ ಕೊಟ್ಟ ನಿಮ್ಮ ಪಾದಾಂಬುರುಹ
ದೆಡಗಾವುದಂಪಹಾರವಿಕ್ಕತಕ್ಕುದು ಮೇಣದುಂಟೆಂದೊಡಾಂ ಕೃತಘ್ನಂ ೧೧೩

ವಿಂಸುಕದಿಹ ದೃಷ್ಟಿ ಕೊರಳಿನ ಸೆರೆಯು ಬಿಗಿದು ತ
ಣ್ಣಸವಾದ ರಸನೆ ವೊದಲೆದ್ದ ರೋಮಾಂಚಂಗ
ಳೊಸಗೆಯಂ ಮೇಲೇಳುತಿರುವ ರೋಮಾಂಚಂಗಳೊಡನೆ ಪೇಳಲ್ಕದಕ್ಕೆ
ವಸತಿಯೆಲ್ಲಿಹುದೆಂದು ತಿಳಿದಡಗಿದಂತೆ ಕಾ
ಣಿಸದಿರ್ಪ ಮೆಲ್ನುಡಿಯ ಗಡಣವಂದನೊತ್ತರಿಸ
ದಸವು ಸುಖರಸದೊಳಾಳುವ ಚಿತ್ತದಿಂದಿರ್ದನಾ ಕಾಲದೊಳ್ ಯಮಿಂದ್ರ ೧೧೪

ಕಂಡಾತನ ಸ್ಥಿತಿಯಂ ಬಿಡದೆದ್ದು ತಕ್ಕೈಸಿ
ಪಂಡಿತಾಚಾರ್ಯಂ ಕರಂ ಸಂತಸಂಬೆತ್ತ
ಖಂಡೇಂದುಧರನೊಲವು ನಿನಗಾದುದ್ದೈ ನೀಂ ಕೃತಾರ್ಥನೆಂದಾನಂದಿಸೆ
ಕಂಡಿದ್ದವರು ಜಯಜಯಧ್ವನಿಯನೆಸಗಲಾ
ಪಂಡಿತಾರ್ಯಂ ಯಮಿಯ ಬೀಳ್ಕೊಂಡು ನಿಜವಾಸ
ಮಂಡಲವ ಸೇರಿ ಸುಖದಿಂದಿರ್ದನಾ ಮಲ್ಲಿಕಾರ್ಜುನ ಕೃಪಾದೃಷ್ಟಿಯಿಂ ೧೧೫

ಇಂತು ಚತುರಾಚಾರ್ಯವರರಿಳೆಗೆ ಬಂದು ಘನ
ಕಂತುರಿಪುಮತವಂ ಪ್ರತಿಷ್ಠಿಸಿ ಕೃತಾದಿಯುಗ
ಸಂತತಿಯೊಳಿಂತು ನಡಸಿದರೊ ನಿರ್ಭರವಾಗಿ ವೀರಶೈವಾಚಾರವಂ

ಅಂತು ಕಲಿಯುಗದೊಳಗೆ ನಡಸಿ ಭಕ್ತರ್ಗೆ ಬಿಡ
ದಂತಿರುವ ಸಂಸಾರಪಾಶಮಂ ಪರಿದು ನಿ
ಶ್ಚಿಂತಪದಮಂ ಪಾಲಿಸುತ್ತಿರ್ದರೀಶಾಜ್ಞೆ ಯಾವಪರಿಯಿಂದಿರ್ಪುದೊ ೧೧೬

ಆ ರೀತಿಯಿಂದಲೇ ಕೃತವಿವಾಹಂಗಳಿಂ
ದೌರಸರ ಪುತ್ರರಂ ಪಡೆದು ಕರಕಮಲದೊಳ್
ಬೇರೆ ಕೆಲರಂ ಪುತ್ರರಂ ಪಡೆದು ಮೇಣವರಿಗಾಚಾರ್ಯಪಟ್ಟಮಿತ್ತು
ಈ ರೀತಿಯಂ ಮಿಾರದೇ ನಿಮ್ಮ [ನಿಮ್ಮ] ಕಲ
ಶಾರಂಭದಲ್ಲಿ ಪರಿಣತರಾಗಿ ಲಿಂಗ ಸಂ
ಸ್ಕಾರಮಂಗೈದು ಭವದಲ್ಲಿ ಬೇಸರನಾಂತ ಸನ್ಮುಮುಕ್ಷುವ್ರಾತಕೆ ೧೧೭

ಶಾಂಕರಸ್ಥಾನಮಂ ಕೊಡಿ ಮೇಣವರ ಯೋಗ್ಯ
ಮಂ ಕಂಡು ಕ್ರಿಯೆಯ ಪಾದದಿ ಕ್ರಿಯಾಧರ್ಮಮಂ
[ಸಂಕ]ಲಿತವಾಗದಂದದಿ ಪೇಳಿ ಮತ್ತೆ ಚರ್ಯಾಪಾದದಲಿ ಚರ್ಯೆಯಂ
ಬಿಂಕದಿಂದುಸುರಿ ಶಿವಯೋಗಪಾದದಿ ಶಿವನ
ಸಂಕಲ್ಪವೆಂತುಟಿಹುದಂತು ಚಕ್ರಸ್ಥಲದ
ಪೊಂಕಮಂ ವಾಯುನಿಗ್ರಹರೂಪದಿಂದಲೆಚ್ಚರಿಸಿ ಜ್ಞಾನ[1][ದಂದದಲಿ][1] ೧೧೮

ವೀರಶೈವಜ್ಞಾನಮಂ ಸಾಂಗಮೆನಲುಸುರಿ
ಸಾರತರವಾದ ಶಾಂಭವದೊಳಗೆ ಸಾಲೋಕ್ಯ
ಪೌರುಷವ ಸಾಮಿಾಪ್ಯಪೌರುಷವ ಸಾರೂಪ್ಯಪೌರುಷವ ಸಾಯುಜ್ಯದ
ಪೌರುಷವ ಕರತಲಾಮಲಕದಂದದಲಿತ್ತು
ಮೂರುವೇಳೆಗು ನಮ್ಮ ವಾಕ್ಯಮಂ ಮರೆಯದೇ
ವೀರಶೈವಪ್ರತಿಷ್ಠೆಯ ಮಾಡಿ ಮಕ್ಕಳಿರ ಶಿಷ್ಯರ್ಕಳಿರ ನಿಶ್ಚಯಂ ೧೧೯

ಭವದಿ ಬೇಗುದಿಗೊಂಬ ಜೀವಜಾಲಂಗಳಿಗೆ
ಶಿವಮಾಯಬೇಕೆಂಬುದೇ ಶಂಭುಚಿತ್ತದೊಳ್
ಪ್ರವಣವಾಗಿಹುದು ಏಳಿಮಕ್ಕಳಿತ್ತಾನೊಂದು ನೆವದಿ ಕೆಂಡವ ಮುಟ್ಟಲು
ತವೆ ಕಂಡ ತಂದೆತಾಯಿಗಳೆಂತು ಸಂತಾಪ
ದವಸರಕೆ ಗುರಿಯಾಗುವರೊ ಬಳಿಕ ಶಂಭು ತಾ
ನಿವರಂತೆ ವಿಷಯದಾಸೆಗೆ ಸಿಕ್ಕಿ ಕೆಡಲೆಳಸುತಿಹ ಜಂತುಜಾಲಂಗಳಂ ೧೨೦

---

1 ದಪಾ (ಕ) ದದಲಿ (ಗ)

ನೋಡಲಾರದೆ ಪರಮದಯೆಯಿಂದ ನಮ್ಮನೀ
ನಾಡಿಗಟ್ಟಿದ ಪೇಣದಿಲ್ಲದಿರ್ದೊಡೆ ನಮಗೆ
ಕೂಡಲನಂಪಾದ ಪ್ರಯೋಜನಗಳೇನಿರ್ದುದೀಯಶುದ್ಧಾಧ್ವದಲ್ಲಿ
ಆಡಿದಂತಾಡಿದೆ[1]ಉ[1]ಮಾಪತಿಯನದರಿಂದ
ಮಾಡಿ ಶಿವದೀಕ್ಷೆಯಂ ಜನರನುದ್ಧರಿಸೆಂದಂ
ಕೂಡೆ ಕಯ್ಮುಗಿದು ತ್ರಿರಾವೃತ್ತಿ ದೃಢವಾಗಿ ಪೇಳಿದರ್ ತನಯಂತಶಿಗೆ ೧೨೧

ಆಗಲೆಂದರು ರುದ್ರಮುನಿಮುಖ್ಯರೆಲೆ ಶಂಭು
ಯೋಗಿ ಚೂಡಾಮಣಿಗಳಿರ ಭಕ್ತಿಯಿಂದ ತಾ
ನಾಗಿ ಬಂದವರ್ಗೆ ಶಿವದೀಕ್ಷೆಯಂ ಕೊಡುವುದಾವಶ್ಯಕಂ ತಿಳಿಯದವರ್ಗೆ
ಯೋಗಾನುಯೋಗದಿಂ ಬಂಧುಗಳ ನಿಜಜಠರ
ಭಾಗಮಂ ಪೊರೆಯಲ್ಕೆ ದೀಕ್ಷೆಯೊಂತವರಿಗಿ
ನ್ನೇಗತಿ ಘಟಿಪುದಿದರೊಳೇಕೆ ಪ್ರಯತ್ನನಿಮಗೆಂದರಾ ಶಿಷ್ಯಜನರು ೧೨೨

ಆದರಾಲಿಸಿಯೆಂದು ರೇವಣಾದ್ಯಾರಾಧ್ಯ
ಪಾದರುಸುರಿದರಿದೇ ಶಂಕೆಯಂ ತೊಡೆಯಂಮೇ
ಲಾ ದೇವಿಯರು ಕುಳಿತ್ತಿರಲೆಡಬಲದಲಿ ಗುಹಗಣಪರಿರೆ ನಂದೀಶ್ವರಂ
ಸಾದರದಿ ಸಾಷ್ಟಾಂಗದಂಡಪ್ರಣಾಮಮಂ
ಮೇದಿನಿಯೊಳಾಚರಿಸಿ ನಿಂದಂ ಕರಗಳ ಮುಗಿದಂ
ಮೂದೇವರೊಡೆಯನೆ ಪರಾಕು ಜಗದಾರಾಧ್ಯ ದೇವತಾಸಾರ್ವಭೌಮ ೧೨೩

ಭವಕಲಸಿದವರಿಗಾಗಲಿ ದೀಕ್ಷೆಶಾಂಭವ
ಪ್ರವರರಿಂ ಕಾದ ತಗಡಿಂಗೆ ಬೆಳುಗಾರ ಸಂ
ಭವಿಸೆ ಬೆಸುಗೆಯ ಕೂಡಿಸಿದ ಹಾಗೆ ನಿಮ್ಮ ಲಾಂಛನಮಾದ ಭಸ್ಮಾದಿಗಳ್
ಅವರೊಳಿರ್ದವರ ನಿಮ್ಮಡಿದಾವರೆಯ ಸನ್ನಿ
ಧಿವಲಯ[2][ದಿ ಬೆ][2]ಸೆಯಲೇನೊಂದಿಲ್ಲದೇ ಕುಲದ
ನೆವದಿಂದ ಜೀವನದ ಲೋಭದಿಂ ರಾಜಾನುರೋಧದಿಂದಾದವರ್ಗೆ ೧೨೪

ಗತಿಯಾವುದೈ ತಂದೆ ಪೇಳೆಂದು ಕೇಳೆ ಪಶು
ಪತಿಯುಸುರ್ದನೆಲೆ ವೃಷಾಧಿಪ ಕೇಳು ಪೇಣಾವ
ಮಂತಿಯಿಂದ ಪೆರ್ಬೆಲೆಯನೈದದಿಹ ಕಾರ್ಬೊನ್ನಿಗಾವುದಾನೊಂದು ನೆವದಿಂ

1 ವು (ಗ) 2 ದೊ. ಬೆ (ಕ) ಥಿಳ್ಬೆ (ಗ)

ಕ್ಷಿತಿಯೊಳಗೆ ಸಿದ್ಧರಸಸಂಪರ್ಕವಾಗಲು
ನ್ನತಕನಕವಾಗಿ ಪೂರ್ವಾವಸ್ಥೆ ಐದುವದೆ
ಮತಿವಂತ ಕಾಡಕಲ್ಲಂ ತಂದು ಪಂಚಸೂತ್ರಪ್ರಕಾರದಿ ಲಿಂಗಮಂ ೧೨೫

ಗೈದು ಪೂಜಿಸಿದ ಮೇಲಾರಿಂದ ವಂದನೆಗೆ
ಮೇದಿನಿಯೊಳದು ಯೋಗ್ಯಮಾಗದು ಸುರಾಸುರರ
ನಾದಿಲಿಂಗದ ಪಾಂಗಿನಿಂ ಕಂಡಮೇಲೆ ವಂದಿಸಿ[1]ದ[1]ಲ್ಲದಿರರೆಂಬುದಂ
ನೀ ದೃಢಂ ಕಂಡಿಲ್ಲವೇ ಮತ್ತಮಾದೊಡಿದ
ನಾದರಿಸು ಎನ್ನಲ್ಲಿಗೈದಿದಪರಾವುದೊಂ
ದಾದ ನೆವದಿಂದೊಮ್ಮೆಯಿಮ್ಮೆಯಲ್ಲದೆ ಭವಂ ಮೂರರಾವೃತ್ತಿಯಿಲ್ಲ ೧೨೬

ತಿಳಿಯಲೇಕಾವೃತ್ತಿರಸ್ತು ದ್ವಿರಾವೃತ್ತಿ
ರಲಘುಬುದ್ಧೇಮಾಸ್ತು ತದಪಿ ತ್ರಿರಾವೃತ್ತಿ
ರಲಮಲಂ ನಾಸ್ತೀತಿ ಶಂಭು ಉಚ್ಚರಿಸಿದಂ ಸಕಲಗಣಮಧ್ಯದಲ್ಲಿ
ಎಲೆ ಪಂಕ್ಕಳಿರ ನಾವದಕ್ಕಾಗಿ ಶಂಭುವಿಂ
ದಿಳೆಯೊಳವತರಿಸಿದೆವೆನುತ್ತ ದಯೆಯಿಂ ಪೇಳಿ
ಕಳುಹಿಸಿಕೊಳಂತ್ತ ನಾನಾಗ್ರಾಮಪಾಸಿಜನ ಪರಿಜನಸುತರ್ಕಳಿಂದ ೧೨೭

ಯಾವಾವ ಲಿಂಗದಿಂದಿಳೆಗೆ ಬಿಜಯಂಗೈದ
ರಾವಾವ ಲಿಂಗಸನ್ನಿಧಿಗೈದಿ ಕೈಮುಗಿದು
ದೇವದೇವನೆ ಮಹಾದೇವನೇ ಶಂಭುವೆ ವಿರೂಪಾಕ್ಷನೇ ಗಿರಿಶನೆ
ನೀವಿಲ್ಲಿಗೆಮ್ಮಟ್ಟಿದೂಳಿಗವ ಮಾಡಿದೆವು
ತೀವಿ ಮೇಲಣ ಜಗತ್ಪಾವನೋದ್ಯೋಗಕ್ಕೆ
ಸೇವಕರ ಶಿಷ್ಯರಂ ತನಯರಂ ನಿಲಿಸಿದೆವು ಮುಂದಾವುದೆಮಗೆ ಬೆಸಗೈ ೧೨೮

ಎಂದು ಸಾಷ್ಟಾಂಗದಂಡಪ್ರಣಾಮಂಗೈದು
ಮುಂದಿರುವ ರೇವಣಾಚಾರ್ಯಂಗೆ ಕೂಡೆ ಬಾ
ಲೇಂದುಧರನಹ ಕೊಲ್ಲಿಪಾಕಿ ಸೋಮೇಶನೊಡಲಿಂ ಬಂದುದಾಕ್ಷಣದೊಳು
ಮುಂದಿರುವ ಮರಳುಸಿದ್ಧೇಶಂಗೆ ಸಿದ್ಧವಟ
ಮಂದಿರದ ಸಿದ್ಧೇಶ್ವರನ ಜಠರ ಪಿರಿದಾದು
ದಂದು ಮತ್ತಂ ಜನರ್ ನೋಡಲೇಕೋರಾಮಂತಂದೆಗಳ ಮುಂದಿರುತಿಹ ೧೨೯

---

1 ವ (ಗ)

ಮುದ್ರಾಪುರೀ ರಾಮನಾಥನುದರಂ ಘನ
ಮುದ್ರೆಯಾಂತುದು ಪಂಡಿತಾರಾಧ್ಯ[1]ರಿ[1]ದಿರಿನೊಳ್
ಭದ್ರವಾಗಿರುವಮರಗುಂಡದಾ ಮಲ್ಲಿಕಾರ್ಜುನ ಕುಕ್ಷಿಯಾದುದಗಲಂ
ಚಿದ್ರಮ್ಯನಹ ವಿಶ್ವನಾಥಾರ್ಯರಗ್ರದ ಗ
ತದ್ರವನೆನಿಪ್ಪ ವಿಶ್ವೇಶ್ವರನ ಗರ್ಭಮೆ ಸ
ಮುದ್ರದಂತಾಗಲಿವರ್ಶೈವರಾಚಾರ್ಯರಾಯಾ ಲಿಂಗಗಳ ಪೊಕ್ಕರು ೧೩೦

ಅಂಕೋಲೆಯಂ ಮೇಣ[ದಾ] ಬೀಜಗಳು ಸೂಜಿ
ಯಂ ಕಂಡುವೆರೆದಯಃಕಾಂತವಾ ನಿಜಪತಿಯಂ
ಮುಂಕೊಂಡು ಹದಿಬದೆಯರಂಟಿಲ್ಲದೇ ಬೆಳೆದ ಲತೆಗಳಾ ಮರಗೊಂಬಿನ
ಅಂಕುರಂಗಳ ನದಿಗಳಂಬುನಿಧಿಯಂ ಬೆರೆದ
ಸಂಕಲ್ಪದಂತೆ ತಾವೊಡವೆರದು ಮೇಲೆ ಲಿಂ
ಗಂ ಕಾಣುತಿರಲು ಬಳಿಕಾ ಪ್ರದೇಶಂಗಳೊಳಗಖಿಲರಚ್ಚರಿವೆತ್ತರು ೧೩೧

ಜಯಜಯೆಜಯಧ್ವಾನಮಂಬರಂ ಚುಂಬಿಸಿತು
ವಿಯದಂಗಣದೊಳಚ್ಚರಿಯರಾಡಿದರು ಸುರರ್
ಜಯಭೇರಿಯಂ ಬಾಜಿಸಿದರು ಪೂವಳೆಗರೆದರಾಗ ಚತುರಬ್ಧಿ ಸಲಿಲಂ
ಜಯಿಸಿದುದು ನಿಯಂತಿರೇಖೆಯನಾಗಲಲ್ಲೀ ತ
ನಯರುಂ ಸೇವಕರು ಶಿಷ್ಯರಾನಂದಶೋಕಸಂ
ಶ್ರಯ ಶರಣರಾಗಿ ತಿರುಗಿದರು ನಿಜನಿಜನಿವಾಸಂಗಳಿಗೆ ನಲ್ಮೆಯಿಂದ ೧೩೨

ಇಲ್ಲಿಗಾದುದು ಸಕಲವೀರಶೈವಾಚಾರ
ವಲ್ಲಭರೆನಿಪ್ಪ ಚತುರಾಚಾರ್ಯರುದ್ಭವಿಸಿ
ಸಲ್ಲೀಲೆಯಿಂ ನಟಿಸಿ ಸಕಲಸದ್ಭಕ್ತರಿಗೆ ಕೈಲಾಸಗಿರಿಮಾರ್ಗವಂ
ಒಳ್ಳಿತಾಗಿಯೆ ವಿಶಾಲವಮಾಡಿ ಶಿವಭಕ್ತಿ
ಪಲ್ಲವಾಗ್ರದಲಿ ಷಟ್ಸ್ಥಲದಮೃತಫಲವ ಬೆಳ
ದಿಲ್ಲಿರಿಸಿ ಪೋದರೀ ಆಗೆಯು ಚತುರಾಚಾರ್ಯಚಾರಿತ್ರಮಾಯ್ತು ಪೂರ್ಣಂ ೧೩೩

ಸತತೋಜ್ವಲಾನಂದಸಂದೋಹರೂಪ ಸ
ನ್ನುತವೇದಪೌರಾಣಿಕಾಗಮಾದ್ಯಖಿಲ ವರ
ಮತಶಾಸ್ತ್ರಮಂಜಳ ಸುಪುಂಜರಂಜಿತ ಪುರಾತನ ವಚನಸಮ್ಮತವಹ
ಅತಿಶಯಂಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ನೋಡ
ಲತಿನೂತ್ನವಾದಾರುಕಾಂಡದೊಳಗೇಳನೆಯಸಂಧಿ ಸಂಪೂರ್ಣಮಾಯ್ತು ೧ ೧೩೪

1 ಎ (ಕ)

# ಎಂಟನೆಯ ಸಂಧಿ

ಸೂಚನೆ :

ಪರಮಚತುರಾಚಾರ್ಯ[ರ] ಚರಿತ್ರವೆಂದೆಂಬ
ಶರಧಿಯನಂ ಕಡೆದು ದಿವ್ಯಾಮೃತಂದೆಗೆದಂತೆ
ಗುರುಪಾದದೇವರೀ ಬಸವಪೌರಾಣಿಕಗನುಕ್ರಮಿಕೆಯಂ ಪೇಳ್ದರಂ

ಮಂಗಳಂ ಮಲ್ಲಿಕಾರ್ಜುನಗೆ ನಿಜಪಾದಪ
ದ್ಮಂಗಳಂ ಪೂಜಿಸುವ ಶರಣರ್ಗಿಹದಿ ಪರದಿ
ಮಂಗಳಂಗೈವ ಗಿರಿರಾಜತನಯಾನೇತ್ರಕಮಲಪ್ರಭಾಕರನಿಗೆ
ಕಂಗಳಿಂ ಲೋಕದಾ[ಟ]ವ ನಡಸಿ ಭಕ್ತಲೋ
ಕಂಗಳಿಂದಾರಾಧ್ಯನಾಗಿ ಸಜ್ಜನರ ಶೋ
ಕಂಗಳಂ ಬಿಡಿಸಿ ಮುಕ್ತಿಯ[1][ನೀ][1]ವ ಚನ್ನಮಲ್ಲೇಶ ಗುರುರೂಪಾಂತಗೆ ೧

ಬಸವದಂಡೇಶನ ಮನಃಕಮಲಮಂ ತಮ್ಮೊ
ಳೆಸೆವ ನಿತ್ಯಾಚಾರವೆಂಬ ಭಾನುವಿನ ಸಾ
ಹಸ್ರಕಿರಣಜಾಲದಿಂದರಳಿಸುಂತ ಬಿಜ್ಜಳನಿಗವಕಾಶಮಂ ಸಾರ್ಚದೆ
ಜಸವೆತ್ತ ಮಹಿಮೆಯಂ ಮೆರೆದಂ ರಾಜಿಪ ಚೆನ್ನ
ಬಸವೇಶ ಮುಖ್ಯ [2][ಷಟ್ಥಲ][2]ಬ್ರಹ್ಮಿಗಳ ಪದದ
ಬಿಸಜಂಗಳೊಳಗನಾರತಮೆನ್ನ ಚಿತ್ತರೋಲಂಬಮುವಲಂಬಿಸಿರಲಿ ೨

ಮೊದಲಸಂಧಿಯಲಿ ದೇವತಸ್ತುತಿ ಕ[3]ಥ[3]ರಂಭ
ಮದರಲ್ಲಿ ನೋಡೆ ರಾಜಿಸುವದೈವತ್ತಾರು
ಪದಗಳೆರಡನೆಯ ಸಂಧಿಯಲಿ ಕೈಲಾಸವರ್ಣನೆ ಶಿವನ ರೀತಿ ಶಿವನ
ಪದನ ಪ್ರಥಮರ್ಕಳ ಸಮಾಖ್ಯೆಗಳ್ ರಾಜಿಸುವ
ದದುವೆ ನೂರೆಂಟುಪದ ಮೂರನೆಯ ಸಂಧಿಯಲಿ
ಕದಲಿಬಂದಂದು ಸಾಂಬಲೋಕದಿಂ ನಾಲ್ವರಾಚಾರ್ಯ[ರಾ]ಜ್ಞೆಯಿಂ[ದ] ದರೆ ೩

---

1 ಶಿ (ಕ) ಸಿ (ಗ) 2 ಲದ (ಕಗ) 3 ಥಾ (ಕ)

ಅಲ್ಲಿಯುರುವತ್ತೈದು ಪದಗಳಿರ್ಪವು ಮತ್ತೆ
ಮೆಲ್ಲಿತಹ ನಾಲ್ಕನೆಯ ಸಂಧಿಯಲಿ ಭೂಲೋಕ
ದಲ್ಲಿರುವ ಕಾಶ್ಯಾದಿ ಶಿವನಿಲಯರೀತಿಯೆಪ್ಪತ್ತೆಂಟು ಪದಗಳಿಹವು
ಒಳ್ಳಿತಾದೈದನೆಯ ಸಂಧಿಯೊಳಗಾಚಾರ್ಯ
ರುಲ್ಲಾಸದಿಂ ಸ್ವಯಂವ್ಯಕ್ತಲಿಂಗಗಳುದರ
ದಲ್ಲಿ ಬಂದುದು ಪದಗಳೈವತ್ತರಿಂ ಮೇಲೆಯೆಂಟೆನಿಪುದೆಣಿಸಿ ನೋಡೆ ೪

ಆರನೆಯ ಸಂಧಿಯಲಿ ಸಂಧ್ಯಾದಿವರ್ಣನೆ ವಿ
ಚಾರಿಸಲ್ಕಲ್ಲಿ ಮೂವತ್ತುಪದವೇಳನೆಯ
ಚಾರುಸಂಧಿಯಲಿ ಚಂದ್ರೋದಯಾದಿ [1][ನ][1]ಗರವರ್ಣನೆ ಪದಗಳೆರಡ ಕೂಡಿ
ಆರಯ್ಮಲೈವತ್ತುಯೆಂಟನೆಯ ಸಂಧಿಯೊಳ
ಗಾ ರೇವಣಾಚಾರ್ಯರೇ ಕೊಲ್ಲಿಪಾಕಿಯಲಿ
ಮಾರಾರಿಯಿಂದಿಳೆಗೆ ಮೂರ್ತಿಗೊಂಡುದು ಪದಗಳೆಣಿಸಲಿಪ್ಪತ್ತೆಂಟಲ್ಲೆ ೫

ಮೇಲೆ ಒಂಬತ್ತನೆಯ ಸಂಧಿಯಲಿ ಪುಷ್ಪಕದ
ಲೀಲೆ ಶ್ರೀರೇವಣೇಶಂಗೆ ನಾಲ್ವತ್ತೆಂಟು
ಪೇಳಲ್ಕೆ ಪದಗ[2][ಳೀಯೊಂಬ][2]ತ್ತುಸಂಧಿಯಿಂ ಬೆರೆದುದೇ ಪ್ರಥಮಕಾಂಡಂ
ಆಲಿಸಲ್ಕೆರಡನೆಯ ಕಾಂಡದೊಳಗರುವತ್ತು
ಯೇಳುಪದ ಮೊದಲನೆಯ ಸಂಧಿಯಲಗಸ್ತ್ಯಂಗೆ
ಪೇಳಿದುದು ರೇವಣಾಚಾರ್ಯನಾ ಪರಮನ ರಹಸ್ಯಮಂ ಶಿವನಾಜ್ಞೆಯಿಂ ೬

ಎರಡನೆಯ ಸಂಧಿಯಲಿ ಸ್ಥಲವಿಚಾರಂ ಪದಗ
ಳಿರುವವೆಂಬತ್ತು ಮೂರರ ಮೇಲೆ ಮೂರನೆಯ
ವರ ಸಂಧಿಯಲಿ [3][ಕಲ್ಲಿಸೆಟ್ಟಿ][3]ಮೊದಲಾದವರ್ಗೊಲಿದುದಾ ರೇವ[4]ಣೇಶಂ[4]
ಪರಿಭಾವಿಸಲ್ಕೆ ತೊಂಬತ್ತೈದುಪದಗಳಾ
ಪರಿಯಲ್ಲಿ ನಾಲ್ಕನೆಯ ಸಂಧಿಯಲಿ ಘನಕಕು
ದ್ಗಿರಿ ಮುಖ್ಯಗಿರಿಗಳಂ ಸಂಚರಿಸಿದುದು ಪದಗಳಲ್ಲಿಯೆಂಬತ್ತೊಂದಲ್ಲೆ ೭

ಐದನೆಯ ಸಂಧಿಯಲಿ ಖರ್ಪರನ ಮುರಿದಾ ತ
ಲೋದರಿಯರಂ ಪಾಲಿಸುತ್ತ ನಿಜಕಲ್ಯಾಣ
ಮಾದುದವರಲ್ಲಿ ನಾಲ್ವತ್ತೆಂಟುಪದವಾರನೆಯ ಸಂಧಿಯಲ್ಲಿ ಸಕಲ

1 ಲ (ಗ) 2 ಳಿಯೊ (ಕಗ) 3 ಲಿಕಸಟ (ಗ) 4 ಣರಿಂ (ಕ)

ಮೇದಿನೀಶರ ಪುತ್ರಿಯರ ಮದುವೆಯಾಗಿ ಸುತ
ನಾದ ಶ್ರೀರುದ್ರಮುನಿಯಂ ಪೆತ್ತುದಲಿನಿ
ನಾದ ...ಲೆಪ್ಪತ್ತನಾಲ್ಕು ಪದವಿಪ್ಪವೈ ಏಳನೆಯ ಸಂಧಿಯಲ್ಲಿ* (?) ೮

ಚರಲಿಂಗಪಟ್ಟವಮಂ ರುದ್ರಮುನಿದೇವಂಗೆ
**ಪರವಂದಯೆಯಿಂದಿತ್ತುದಲ್ಲಿ ತೊಂಬತ್ತೇಳ
ರುರೆ ಲೆಕ್ಕಕಳವಟ್ಟ ಪದಗಳೀ ಏಳುಸಂಧಿಗಳೆರಡನೆಯಾ ಕಾಂಡಂ
ಮರಳಿ ಮೊದಲನೆಯ ಸಂಧಿಯಲಿ ಕೊಲ್ಲಾಪುರಕೆ
ಮರುಳುಸಿದ್ಧೇಂದ್ರ ತಾಂ ಪೋಗಿಯಾ ಮಾಯೆಂಯ[ಂ]
ಮುರಿದ ಕಥೆಯಲ್ಲಿಯಿಪ್ಪತ್ತಾ[ರಂ]ಪದಮಿರ್ಪುದೆರಡನೆಯ ಸಂಧಿಯಲ್ಲಿ ** ೯

ಹರಲೀಲೆಯಂ ದಧೀಚಿಗೆ ಪೇಳಿದು[1]ದ[1] ನೋಡ
ವಿರವಾಗಿ ನೋಡಲೆಪ್ಪತ್ತೇಳುಪದದಲ್ಲಿ
ಬೆರದಿಹುದು ಮೂರನೆಯ ಸಂಧಿಯಲಿ ಭಿಕ್ಷಾಟನದ ಲೀಲೆ ಸಾಂಬಶಿವನ
ಆರುವತಾ[2]ರ[ರ][2] ಮೇಲೆ ತೋರ್ಪುದೈದೇಪದಂ
ಮರಳಿ ನಾಲ್ಕನೆಯ ಸಂಧಿಯಲಿ ಕಾಮನ ದಹನ
ಮೊರೆವದಿಪ್ಪತ್ತೆಂಟುಪದದಲ್ಲಿ ಐದನೆಯ ಸಂಧಿಯಲಿ ನೋಡಲಾಗಿ ೧೦

ಕಾಲವಿಜಯಂದ ಲೀಲೆಯೆಪ್ಪತ್ತುಪದವಲ್ಲಿ
ಮೇಲೆ ತಿಳಿಯಲ್ಕಾರನೆಯ ಸಂಧಿಯಲಿ ಪುರದ
ಜಾಲಮಂ ಸುಟ್ಟುರುಪಿದುದು ನೋಡಲಲ್ಲಿ ತೊಂಬತ್ತುನಾಲ್ಕಿರ್ಪವು ಪದಂ
ಏಳನೆಯ ಸಂಧಿಯಲಿ ಚಕ್ರದಿ ಜಲಂಧರನ
ಹೇಳಿಹೆಸರಿಲ್ಲದಂದದಿ ಮಾಡಿದುದು ಪದದ
ಪಾಳಿಯರುವತ್ತಲ್ಲಿಯೆಂಟನೆಯ ಸಂಧಿಯಲಿ ದಕ್ಷಯಾಗವ ಮುರಿದುದಂ ೧೧

ವೀರಭದ್ರಂ ಮಹಾಕೋಪದಿಂದಂ ಪದದ
ವಾರಮಿಹಂದಲ್ಲಿ ಪತ್ತೆಣಿಕೆಯಾ ಮೇಲಿರಲ್
ನೂರುಪದಗಳಲಿ ಭಳಿರೇ ಎಂಟುಸಂಧಿಯಿಂ ಚೆನ್ನಾಗಿ ಕೂಡಿಕೊಂಡು
ಮೂರನೆಯ ಕಾಂಡವೊಪ್ಪುವದು ನರಸಿಂಹನಂ
ವೀರಭದ್ರಂ ಶರಭರೂಪದಿಂ ಸೀಳಿದುದ
ನಾರಯ್ಕೆ ಮೊದಲನೆಯ ಸಂಧಿಯದರಲ್ಲಿ ನಾಲ್ವತ್ತುಮೂರಿರ್ಪುದು ಪದಂ ೧೨

---

1 ಯ (ಗ) 2 ರಿಂ (ಕಗ)

* ಈ ಭಾಗ ಕಪ್ರತಿಯಲ್ಲಿಲ್ಲ. ** ಈ ಭಾಗ ಕಪ್ರತಿಯಲ್ಲಿಲ್ಲ

ನೀರೇಜಭವ ಹರಿಯ [1][ತಾ][1] ನಿಲ್ಲಿಸಲ್ಕರ್ಧ
ನಾರಿಯಾಗೀಶನೊಪ್ಪಿದುದೆರಡನೆಯಂ ಸಂಧಿ
ಸಾರಿರ್ಪುದಲ್ಲಿ ಹದಿನೈದುಪದ ಮೂರನೆಯ ಸಂಧಿಯಲಿ ಪಾಶುಪತಮಂ
ನಾರಾಯಣನ ಸಖಂಗಿಂದ್ರಕೀಲದೊಳು ತಾಂ
ಕೈರಾತಲೀಲೆಯಿಂದಭವನಿತ್ತುದು ಪದದ
ವಾರಮಿಪ್ಪತ್ತೆಂಟಂ ನಾಲ್ಕನೆಯಂ ಸಂಧಿಯಲಿ ವಾಮನನ ಬೆನ್ನೆಲುವನು ೧೩

ಕರದಿ ಪಿಡಿದುದು ಮತ್ತೆ ಚಂಡೇಶ್ವರಂ ತಂದೆ
ಯರಿಯೆ [2]ಮನ್ನಿ[2]ಸಿಗಣಜ್ಯೇಷ್ಠತೆಯನಿತ್ತುದಾ
ಧರೆಯಲ್ಲಿ ನೋಡಲ್ಕೈವತ್ತೊಂದುಪದಮೈದನೆಯ ಸಂಧಿಯಲ್ಲಿ ವಿಷಮಂ
ಧರಿಸಿದಂದು ಪದಗಳಿಹುದಲ್ಲಿ ನಾಲ್ವತ್ತಾರಂ
ಮರಳಿಯಾರನೆಯ ಸಂಧಿಯಲಿ ಚಕ್ರವನೊಲಿದು
ಹರಿಗಿತ್ತುದಲ್ಲಯಿಾ ಪದಮೇಳನೆಯ ಸಂಧಿಯಲ್ಲಿ ನೋಡೆ (?) ೧೪

ಹಿರಿಯಂಮಗನಾದ ಗಣನಾಥಂಗೆ ನಿಗಮಾದಿ
ಪರಮಶಾಸ್ತ್ರಂಗಳಂ ಪೇಳಿ ಸರ್ವಾರಾಧ್ಯ
ತರಪಟ್ಟಮಂ ಕೊಟ್ಟುದಲ್ಲಿ ಇಪ್ಪತ್ತೆಂಟುಪದಮೆಂಟನೆಯ ಸಂಧಿ[3]ಯಂ[3]
ಪರಿಕಿಸಲ್ಕಲ್ಲಿ [ಶರವ]ಣದಿ ಗುಹಜನನಮೆಂಸೆ
ದಿರುವದೈವತ್ತುಪದಮಿರ್ಪುದೊಂಬತ್ತನೆಯ
ವರಸಂಧಿಯಲ್ಲಿ ತಾರಕನ ಪರಿಹರಿಸಿ ಸುರಸೇನೆಗಂ ಕರ್ತನಾಗಿ ೧೫

ಹರಸುತಕುಮಾರನೊಪ್ಪಿದಂದಲ್ಲಿ ಪದಗಳಿರು
ತಿರುವುದೊಟ್ಟಾಗಿ ನಾಲ್ವತ್ತೊಂದು ಪತ್ತನೆಯ
ಸುರುಚಿರದ ಸಂಧಿಯಲಿ ಗಂಗೆಯಂ ಶಿರದೊಳಾಂತುದದು ನಿಜನಂದರಸೆಯಂ
ಎರಡರಿಂ ಕೂಡಿದೆಂಬತ್ತುಪದಮಾ ಬಳಿಯ
ಲಿರಂತಿಹುದು ಪನ್ನೊಂದನೆಯ ಸಂಧಿಯಲ್ಲಿ ಸಿರಿ
ವ[4]ರನ[4] ಪಾದದಿ ಗಂಗೆ ಜನಿಸಿದುದಂ ಸಟೆಯೆಂದು ದೃಷ್ಟಾಂತಮಂ ತೋರ್ದುದಂ ೧೬

ಪದಗಳೀ ಬಳಿಯಲ್ಲಿ ಮೂವತ್ತು ಕ್ಷಾವಂಕಾ
ಲದಿ ಪೊರೆದ ಗೌತಮನ ಧಿಕ್ಕರಿಸಿ ಪೋಪುದಂಚಿ
ತದ ಮಾರ್ಗವಲ್ಲವೆಂದನ್ನದಾನದ ಕಥೆಯ ಶಾಂಡಿಲ್ಯತಪಸಿಗಳ್ಗೆ

1 ಲ್ಲಿ ಥ (ಗ) 2 ಮುನಿ (ಗ) 3 ಯಲ್ಲಿ (ಕ) 4 ರ (ಗ)

ಮುದದಿ ಪೇಳಿದುದು ಹನ್ನೆರಡನೆಯ ಸಂಧಿಯಲಿ
ಪದಗಳೈವತ್ತುಮೂರಿರ್ಪುದ್ಯೆ ಚೆನ್ನಾಗಿ
ಹದಿಮೂರನೆಯ ಸಂಧಿಯಲಿ ಗೌತಮನಮೇಲೆ ಗೋವಧೆಯ ಪೊರಿಸಲಾಗಿ ೧೭

ಹರನ ಮುಡಿಯೊಳಗಿರುವ ಗಂಗೆಯಂ ತಂದು ಪಾ
ರ್ವರ ಶಪಿಸಿದುದು ಪದಗಳಲ್ಲಿಯಿಪ್ಪತ್ನಾಲ್ಕು
ಮರಳಿ ಹದಿನಾಲ್ಕನೆಯ ಸಂಧಿಯಲಿ ದಾರುಕಾವನವಾಸಿಗಳ ಭ್ರಾಂತಿಯಂ
ಹರಿಯಿಂದಲೊಗೆಯಲದನಪಹರಿಸಿದುದುಂ ಪದಗ
ಳಿರುವದಾ ಬಳಿಯಲ್ಲಿ ನಾಲ್ವತ್ತು ದಿವ್ಯಸಂ
ದರ ವೇಷದಿಂ ದಾರುವನದಿ ಸುಳಿಯಲ್ ತಪಸಿಗಳ ಪೆಂಡಿರುದ್ಭ್ರಾಂತಿಯಾ ೧೮

ವರಿಸೆ ಸಹಿಸದೆ ನಿತಾಂತಾಭಿಚಾರವನೆಸಗ
ಲರೆಯಟ್ಟಿಬಂದಪಸ್ಮಾರಾದಿಗಳ ಜಯಿಸಿ
ಕರದೊಳಾಂತುದು ನೋಡೆ ಹದಿನೈದನೆಯ ಸಂಧಿಯಲ್ಲಿ[1]ಕರ್ಣ[1] ಪದಗಳಲ್ಲಿ
ಬೆರೆದಿರುತ್ತಿಹವು ನಾಲ್ವತ್ತೇಳುಂ ಷೋಡಶದ
ಪರಿಸಂಖ್ಯೆಯಾಂತ ಸಂಧಿಯಲಿ ಕಮ[2]ಲಾಸನನ[2]
ಹರಿಯ ಕಮಲವ ಬಿಡಿಸಲುರುಲಿಂಗವಾಗಿ ಮಧ್ಯದಿ ತೋರಿದಂದುಂ ಪದಗಳು ೧೯

ತಿಳಿಯೆ ನಾಲ್ವತ್ತಾಗಿ ರಾಜಿಪವು ನಾಲ್ಕನೆಯ
ಲಲಿತಕಾಂಡದಲಿ ಹದಿನಾರುಸಂಧಿಗಳನೇ
ಚೆಲುವನಾಂತಿಹವು ಬ್ರಹ್ಮಾಂಡದ ವಿಚಾರದೊಳದಂ ಕರ್ಪರದ ರೀತಿಯಂ
ಕುಲಗಿರಿಗಳಂ ಪೇಳಿಹುದು ಮೊದಲನೆಯ ಸಂಧಿ
ಯಲಿ ಪದಗಳಿರ್ಪವೈವತ್ತೊಂದುಯೆರಡನೆಯ
ಬಳಿಗೆ ಯೋಗ್ಯವಂದೆನಿಪ ಸಂಧಿಯಲಿ ಮೇರುವಿನ ಬಳಿಯ ಗಿರಿ ನಗರಂಗಳಂ ೨೦

ಗಗನದೊಳ್ ಚರಿಪ ಮೇಘಾವರಣಗಳಲ್ಲಿ[ಯೆಂ]
ಬಗೆಯಲ್ಯೆವತ್ತರಿಂದೊಂಬತ್ತುಪದಗಳೇ
ಮಿಗಿಲಾಗಿಹವು ನೋಡಲಾಮೇಲೆ ಮೂರನೇಯ ಸಂಧಿಯಲಿ ಬ್ರಹ್ಮಾಂಡದ
ಒಗುವಿಂಗೆಯಂ ವೇಲ[3][ಣಾಚಿನ ತನಕ][3] ವರ್ತಿಸುವ
ಬಗೆಬಗೆಯ ಲೋಹಂಗಳಸ್ಥಿತಿಯ ರುದ್ರನಾ
ಮಗಳ ಪೇಳಿತುದು ನಾಲ್ವತ್ತೊಂದುಪದಗಳಾ ಬಳಿಯಲ್ಲಿ ರಾಜಿಸುವವು ೨೧

---

1 ಕ್ಕ (ಗ) 2 ಲಭವನ (ಕ) 3 ಣ ... ತನಕ (ಕ) ಲಅಚಿನ ತಕ (ಗ)

ವೀರಭಸ್ಮರ ಮುಖ್ಯರಿಗೆ ಶಿವನ ನುಡಿಸಿ ಕಡು
ಬೀರಮಂ ನುಡಿಯಲಾಂತಾ ವ್ಯಾಸದೀಕ್ಷಿತನ
[1][ಮೇ][1]ರೆಯಾ ಜಯಿಸಿದುದು ನಾಲ್ಕನೆಯ ಸಂಧಿಯಲಿ ಪದಗಳೆಂಬತ್ತೇಳಲ್ಲೆ
ವಾರಣಾಸಿಯಲಿ ಕೇಶವನ ಕೈಯಿಂ ನಮ
ಸ್ಕಾರವನು ದಂಡಾಯಮಾನವಂ ಶಂಭುವಿಗೆ
ಸೇರಿಸಿಯೆ ಪಂಡಿತಾಚಾರ್ಯರ್ಕೈ[2][ದಿದರ್][2] ಕಲ್ಯಾಣಕ್ಕೆ ಪಂಚಮಂದಲಿ ೨೨

ಚಾರುಸಂಧಿಯಲಿ [3][ಮೂವತ್ತ][3]ರಿಂದೊಂಬತ್ತು
ತೋರುತಿಹವಲ್ಲಿ ಪದಗಳು ವಾಮನಮುನೀಂದ್ರ
ನಾರಾಧ್ಯಚಕ್ರೇಶ್ವರನ ಬಳಿಗೆ ಬಂದು ಕಾಶಿಯಲಿ ಗುರುಗಳ ರೀತಿಯಂ
ಆರೈದುದಾರನೆಯ ಸಂಧಿಯಲಿ ಪದಗಳಿಹ
ವಾ ರೂಢಿಯಿಂದ ಮೂವತ್ತೊಂದು ಪಂಚಮದ
ಸಾರತರ ಕಾಂಡದೊಳಗಿರ್ಪವೀಯಾರುಂ ಸಂಧಿಗಳು ಸಜ್ಜನರೊಪ್ಪಲು ೨೩

ಮೊದ[4]ಲ[4] ಸಂಧಿಯಲಿ ಚತುರಾಚಾರ್ಯರ[5]ಸ್ಥಿತಿ[5][ಯ]
ನದರೊಳಗೆ ಶಿಷ್ಯಕ್ರಮವನು ದೀ[6]ಕ್ಷಾಕಾ[6]ಲ
ವಿಧಿಯನುಪ್ರಕರಣಂಗಳಂ ಪೇಳಿಹುದು ನೂರೊಂದರಿಂದೆಣಿಕೆಯಂ ಸಾರಿವಡೆದ
ಪದಗಳಿಹವಲ್ಲಿ ಲಿಂಗದ ವಿಧಿಯ ಶಿಷ್ಯನಿಂ
ಗೊದಗಿಸುವ ಸಂಸ್ಕಾರಮೇ ನೋಡೆ ಮುಖ್ಯಮಾ
ದುದು ಪೇಳಿಹುದು ದ್ವಿತೀಯದ ಸಂಧಿಯಲ್ಲಿ ಮೂವತ್ತನಾಲ್ಕಿಹವು ಪದವು ೨೪

ಮೂರನೆಯ ಸಂಧಿಯಲಿ ಕಲಶೋದಕಸ್ನಾನ
ಧಾರೆಯೇ ಮೊದಲಾಗಿ ನೋಡೆ ವೇದ[ದ] ದೀಕ್ಷೆ
ಯಾರಂಭ ಕಡೆಯಾದ ಸಕಲವಂ ಪೇಳಿಹುದು ಪದಗಳಲ್ಲಿರುತಿರ್ಪವು
ಆರರಿಂ ಕೂಡಿದರುವತುನಾಲ್ಕನೆಯದೆನಿ
ಪ್ಪಾ ರಮ್ಯಸಂಧಿಯಲಿ ಮಂಟಪಾದ್ಯಖಿಲೋಪ
ಚಾರವಸ್ತುಗಳ ರೀತಿಯಂ ಪೇಳಿಹುದಂ ಪದಗಳೆಂಬತ್ತುಮೂರಿ[6]ರ್ಪ[7]ವು ೨೫

ಶಿವನ ಸದ್ಯೋಜಾತಮುಖ್ಯಮುಖದೋಲಗಗ
ಳವಯವದ ಪೂಜೆಯಿಂ ಪೇಳಿರ್ಪುದೈದನೆಯಂ
ಸುವಿಶಾಲ ಸಂಧಿಯಂಲಿ ಪದಗಳೆಪ್ಪತ್ತಿಹವು ವೀರಶೈವಾಚಾರಮಂ

---

1 xxx (ಕ) ಮೇಲೆರೆತನ ಮೇಲೆ (ಗ) 2 ದ (ಗ) 3 ಮತ್ತಾ (ಕಗ) 4 ಲನೆಯ (ಕ) 5 ನೀತಿ (ಕಗ) 6 ಕ್ಷಭಾಕ್ಕಾ (ಕಗ) 7 ಪ್ಪ (ಗ)

ವಿವರದಿಂ ಪೇಳಿರ್ಪುದಾರನೆಯ ಸಂಧಿಯಲಿ
ತವೆ ಪದಗಳೈವತ್ತೆರಡು ವರ್ತಿಸಂವುವು ಸಂ
ಭವಿಪುದೇಳನೆಯ ಸಂಧಿಯಲಿ ಷಟ್ಸ್ಥಲಮುಖ್ಯ ಮಿಶ್ರಾರ್ಪಣಾಂತವಾದ ೨೬

ಸಕಲ ಶಿವತತ್ತ್ವಸಂಗ್ರಹಗಳಲ್ಲಿರುವ ಪದ
ನಿಕರವೇ ನೂರಮೂವತ್ತನಾಲ್ಕೆಂಟನೇ
ಸುಕೃತ ಸಂಧಿಯಲಿ ಪೇಳಿಹುದನಂಕ್ರಮಿಂಕೆ ಸಂಪಾದನಾ ವೀರೇಶನ
ಪ್ರಕಟಚಾರಿತ್ರವಿಂದರಲ್ಲಿಯೈವತ್ತಮೂ
ರಂ ಕನತ್ಪದಂಗಳಿರುತಿರ್ಪವೀ ಬಳಿಯ ಅ
ಷ್ಟಕಸಂಧಿಗಳೆ ನೋಡಲಾರನೆಯ ಕಾಂಡದಲಿ ಪೂರ್ಣಮೆಂತಂತೆಸೆವುವು ೨೭

ಮೊದಲನೆಯ ಕಾಂಡದೊಳಗೈನೂರರಿಂ ಮೇಲೆ
ಪದಗಳಿಹವಿಪ್ಪತ್ತುಮೂರು ಮೇಣೆರಡನೆಯ
ಸದಕಾಂಡದೊಳಗೈ[1][ದ][1]ರೊಡನೆ ನಾಲ್ವತ್ತಾರು ಸಂಖ್ಯೆವಡೆದುಂ
ಪದಗಳಿಹವಲ್ಲಿ ಮೂರನೆಯದೆಂದೆನಿಪ ಕಾಂ
ಡದಲಿಯೈನೂರುಮೂವತ್ತುಗಣನೆಯನಾಂತ
ಪದಗಳಿರುತಿಹವು ನಾಲ್ಕನೆಯದೆಂದೆನಿಪ ಕಾಂಡದಲಿ ಶೋಭಿಸುತಿರ್ಪವು ೨೮

ಪದಗ[2][ಳರು][2]ನೂರನಾಲ್ವತ್ತೈದು ಮಿಗೆ ಪಂಚ
ಮದ ಕಾಂಡದಲ್ಲಿ ಮುನ್ನೂರೆಂಟು ಲೆಕ್ಕಗಳ
ಪದಗಳಿರುತಿಹವಾರನೆಯ ಕಾಂಡದಲ್ಲಿಯೈನೂರತೊಂಭತ್ತಮೂರು
ಪದಗಳಲ್ಲಿರುತಿರ್ಪವೀಯಾರುಕಾಂಡದಲಿ
ಪದಗಳೆಣಿಸಲ್ ಮೂರುಸಾವಿರದ [3]ನೂ[3]ರರಿಂ
ಪುದಿದ ನಾಲ್ವತ್ತೈದುಪದಗಳಿರ್ಪವು ಸಂಧಿಸೂಚಿಯಾ ಪದಗಳುಳಿಯೆ ೨೯

ಮೆರೆವ ಸಂಪಾದ[4][ನಾ][4]ಸಿದ್ಧವೀರೇಶ್ವರನ
ಕರಕಮಲಸಂಜಾತ ಮಲ್ಲಿಕಾರ್ಜುನದೇವ
ರರುಹಿಸಲ್ಬೇಕೆಂದು ಸಿದ್ಧಪುರದೊಳಗೆ ಮೂರ್ತಂಗೊಂಡು ಲಿಂಗವಾದ
ವರ ಬೋಳಬಸವೇಶ್ವರಂ ಚತುರ್ವಿಧರಾದ
ಗುರುಗಳ ಚರಿತ್ರಮಂ ಕೇಳಲವರಿಂಗೊರೆಯೆ
ಪರುವತೇಶ್ವರ ನಮ್ಮ ಗುರುಚರಣರಾ ಕಾಲದೊಳಗಲ್ಲಿ ಕೇಳಿರ್ದರು ೩೦

---

1 ರ (ಕಗ) 2 ಳಾರ (ಕಗ) 3 ಮೂ (ಕ) 4 ನ (ಕಗ)

ಕಾಲಾಂತರಕ್ಕೆ ಪೌರಾಣಿಕಂ ಬಸವಯ್ಯ
ಬಾಲಕಂ ನಮ್ಮಡಿಗೆ ನಮಿಸಿ ನೀವಾ ಕಥೆಯ
ಪೇಳಬೇಕೆಂದು ಬಿನ್ನವಿಸಲ್ಕೆ ನಾವೆಂತು ಪೇಳಬಹುದೆಂದಿರುತಿರೆ
ಮೇಲೆ ಮತ್ತಾ ರಾತ್ರಿಯಲ್ಲಿ ಶಂಭುಗಣ[1]ದಿ[1] ವಿ
ಶಾಲ ದಯೆಯಿಂ ಚೆನ್ನಮಲ್ಲಿಕಾರ್ಜುನಂ ಗುರು
ಲಲಾಮರೇ ಕನಸಿನೊಳ್ ಪ್ರತ್ಯಕ್ಷಮಾಗಿ ಭಯಬೇಡ ನಿನಗೆಂದಭಯವಂ ೩೧

ಸಲಿಸಿ ನಾವೇ ನಿನ್ನ ಹೃದಯಸರಸೀರುಹದಿ
ನೆಲಸಿ ಪೇಳಿಸುವೆವೆಚ್ಚೆ[2]ತ್ತು[2] ನೀಂ ಗುರುಪಾದ
ನಳಿನಕಭಿನವಿಂಸಿಯಪ್ಪಣೆವಡೆದು ಪೇಳೆಂದು ನಿಜಹಸ್ತಮಂ ಪ್ರೀತಿಯಿಂ
ತಲೆಯ ಮೇಲಿಡಲೆನ್ನ ನಸುಗಳಿದ ಕಾಯಕ್ಕೆ
ತಳಿದಂತೆ ದಿವ್ಯಾಮೃತವ ಘನಾನಂದಸಂ
ವಲಿತಮಾನಸನಾಗಲಾಕ್ಷಣಂ ಕನಸಳಿದುದೇನೆಂಬೆನಚ್ಚರಿಯನು ೩೨

ಆಗಲೇ [3]ಗ[3]ಮಿಸಿ ಪರಮಾನಂದಮುಕ್ಕುತಿರೆ
ಶ್ರೀಗುರುವಿನಡಿಗೆರಗಿ ಸ್ವಾಸ್ಥಿಕಸ್ಥಿತಿಯ ಚ
ನ್ನಾಗಿಪೇಳಲ್ ಕೇಳಿ ಸಂತೋಷದಿಂದ ಕರಕಮಲಮಂ ಮಸ್ತಕದಲಿ
ಯೋಗಮಂಗೈದು ಪೌರಾಣಿಕಂ ಬಸವಯ್ಯ
ನೇ ಗಿರಿಶಕೃಪೆಗೆ ಪಾತ್ರನೊ ಭಲಾ ಎಂದು ಮೇ
ಲಾಗತಕ್ಕುದನಾಚರಿಪುದೆನುತ್ತಂ ನಿರೂಪಿಸಿದನಾ ಪರ್ವತೇಶಂ ೩೩

ಸಂಪಾದಿಸಿದ ಚಾರುವೀರಶೈವಸ್ಥಿತಿಯ
ಸಂಪಾದಿಸಿದ ಸಾಧು[4][ಜಂಗಮದ ಸಂಗತಿಯ][4]
ಸಂಪಾದಿಸಿದ ಬಾಲಚಂದ್ರಾವತಂಸನ ಕೃಪಾಕಟಾಕ್ಷದ ನೀತಿಯಂ
ಸಂಪಾದಿಸಿದನಲ್ಲಿ ಧನಕನಕವಾಹನವ
ಸಂಪಾದಿಸಿದನಲ್ಲಿ ಚಿತ್ತವೃತ್ತಿಯ ನೃಪರ
ಸಂಪಾದನಾ ಸಿದ್ಧವೀರೇಶನಖಿಲ ಜಂಗಮವಾರ್ಧಿಚಂದ್ರೋದಯಂ ೩೪

ಶಿವಲಿಂಗವೇ ತನ್ನ ಪ್ರಾಣಜಂಗಮವಾಗಿ
ತವೆ ಜಂಗಮವೆ ತನ್ನ ಪ್ರಾಣಲಿಂಗಮದಾಗಿ
ಶಿವಜಂಗಮರೊಳೈಕ್ಯಮಂ ಪಡೆದಂ ಶಿವನ ಜಂಗಮಮೂಲದಿಂ ಭಜಿಸುತ

---

1 ದಿಂ (ಗ) 2 ರ್ತು (ಕ) 3 ನ (ಕ) 4 ಭಂಗದ ಸಂಗತಿಯ (ಕ) ಜಂಗಮ ಸಂಗದ ಸಂಗತಿಯ (ಗ)

ಶಿವನಿಗೊಂದಾನೊಂದು ಕಾಲಭೇದಂಗಳಾ
ನೆವದಿಂದ ಗೊಲಕೊಂದ ರಣವಾದರೇ ತನ್ನ
ಸುವ ಬಿಡುವುದಲ್ಲದಿನ್ನೊಂದು ಪ್ರಾಯಶ್ಚಿತ್ತವಿಲ್ಲವೆಂದೇ ಸ್ಥಾಪಿಸಿ ೩೫

ಈ ಲೋಕದೊಳಗಿರುವ ಪರಸಮಯಂದವರೆಲ್ಲ
ರಾಲೋಚನೆಯ [ಮಾಡಿ] ಮೇಲುಮೇಲೀಮಾರ್ಗ
ಶೂಲಪಾಣಿಯಂ ನಿಜಾಭಿಪ್ರಾಯವೆಂದು ಕೊಂಡಾಡಲವರಿಂದ ನುತಿಯಂ
ತಾಳಿ ನಾನಾವಿಧದ ದೇಶಂಗಳಾಳ್ವ ಭೂ
ಪಾಲರಿಂ ಪೂಜೆಯಂಗೊಂಡು ವರ್ತಿಪ ಶೈವ
ಶೀಲಸಂಪನ್ನನಹ ಸಿದ್ಧವೀರೇಶ್ವರನ ಕರಕಂ[ಜ]ಜಾತನಾದ ೩೬

ಶ್ರೀಚೆನ್ನಮಲ್ಲಿಕಾರ್ಜುನ ಕೃಪಾಪಾತ್ರನೆನಿ
ಸೀ ಚರಿತ್ರೆಯಂ ಪೇಳ[1][ಲಾಂ][1] ಸಮರ್ಥನೆನುತ್ತ
ವಾಚಿಕಾಶೀರ್ವಚನಪೂರ್ವಕ ನಿರೂಪವಂ ಕೊಡಲದಂ ಶಿರದೊಳಾಂತು
[ವಾಚಿ]ಸಿದೆ ನನ್ನ ಪಾಷಾಣನಿಭಮತಿಯೆತ್ತ
ಲಾ ಚತುರ್ಗುರುಚರಿತ್ರಮದೆತ್ತ ತತ್ಕೃಪಾ
ಶ್ರೀಚಂದ್ರಿಕೆಯೆ ಬಂದು ಕೂಡಿ ತದ್ಗುಣಗಣಾಮೃತಸರವ ಪೊಣ್ಮಿಸಿತಲ ೩೭

•ಒಂದೊಂದು ಪದವನಾದರು ತಿಳಿಯಲಾಪರೇ
ಛಂದಃಪಯೋಧಿಯಲಿ ವಾಗೀಶಮುಖ್ಯರದ
ರಂದ[2]ವಂ[2] ಕರ ಬರೆದಂತೆ ಮಾಡಿದುದ್ಯೋಗಪನಡಿಯ ದಿವ್ಯಪ್ರಸಾದಂ
ಇಂದು ದಿವ್ಯಾಗಮಂಗಳ ಪುರಾಣಂಗಳಂ
ನಂದೀಶಮುಖ್ಯಪುರಾತನ ವಾಕ್ಯರಾಶಿಯಂ
ಸಂದರ್ಭಿಸಿದೆನಿಲ್ಲಿ ಮೇಣೀ ಮಹಾಭಾಗ್ಯಕಾವುದೆಣೆಯುಂಟು ಜಗದಿ ೩೮

ವೇದನಾಲ್ಕರಲಿ ಬಳಿಕುಪನಿಷತ್ತುಗಳಲ್ಲಿ
ವೇದಪಯನಂ ಪ್ರಶಂಸಿಸುವ ಪಿಕ್ಕ[ಂ]ತೆಗೆದು
ಈ ದಿವ್ಯಕಾವ್ಯದೊಳ್ ಸೇರುವೆಯಗೈದಿರ್ಪುದುಚಿತವಮಾವಲ್ಲಿರುವದೊ
ಆದೆಶೆಯೊಳದರಂತೆ ಕಾಮಿಕಾಗಮದಲ್ಲಿ
ಚೋದಿತ್ಯತಯೆನಿಪ್ಪ ವಾಕ್ಯಂಗಳಂ ಬಳಿಕ
ವೈದಿಕವಿರುದ್ಧವಾಗದ ತೆರದಿ ಪೇಳಿಹುದು ಸುಜನರಾಲಿಸುವದಿದನು ೩೯

1 ಲಾಹೆ (ಕಗ) 2 ದದರಂ (ಕ)

* ೩೮ ನೆಯ ಪದ್ಯದ ಛಂದಸ್ಸು ಕೆಟ್ಟಿದೆ.

ವೀರಾಗಮದಲಿ ಸಾರವ ತೆಗೆದು ವಾತೂಲ
ಪಾರಮೇಶ್ವರ ತಂತ್ರಗಳ ಲೇಸನಾರೈದು
ವೀರಪ್ರಶಂಸೆಯಂ ಪೇಳಿದುದಂ ಮರಳಿ ಲೈಂಗ್ಯದಲ್ಲಿ ಶೈವದೊಳಿರ್ಪ (?)
ಚಾರುಗಂಧವ ಕೊಂಡಂ ಪದ್ಮೋತ್ತರದಲಿರ್ಪ
ಗೈರೀಶಶಕ್ತಿಯಂ ಪೊಗಳು ಉತ್ತರಥರ್ವಣ
ದಾರಿಂ ಪಿಡಿದುಮಾಡಿದೀ ವೀರಶೈವಮತಕನುಕೂಲವಪ್ಪಂದದಿಂ ೪೦

•ಹರನ ಕೊಂಡಾಡುವಲ್ಲೀ ಸ್ಕಂದಸಾರಂಗ
ಳುರುತರಗಳಾಗಿರ್ಪವವರಲ್ಲಿ ಷಟ್ಸ್ಥಲ
ಜ್ಞಾನದೀಪಿಕೆಯಲ್ಲಿ ಷಟ್ಕಾವ್ಯದಿ ಗುರುಬಸವೇಶ್ವರದೇವರು ನಿರೂಪಿಸಿದ ಸಿದ್ಧಾಂತ
ವರಶಿಖಾಮಣಿಯಲಿ ನಿರೂಪಿಸಿದ ನಿಜಗುಣರು
ವಿರಚಿಸಿದ ದಯುಮೆರೆದಾ ವಿವೇಕಚಿಂತಾಮಣಿಯ
ಪರತರನಿರಾಭಾರಿಶೈವಸಂಗತಿಯಲ್ಲಿ ಸರವಂ ತೆಗೆದು ಗೈದಂ ೪೧

ಕನ್ನಡದ ನುಡಿಯೆಂದು ಬೇಸರ[ಂ]ಗೊಳದಂತೆ
ಮುನ್ನುಳ್ಳ ವೇದಾದಿಸಮ್ಮತಿಯ ವಾಕ್ಯಂಗ
ಳನ್ನಿಲಿಸಿಹುದು ಸಂಗತಿಯನರಿದು ಮೇಣಾ ಪದಾರ್ಥವಂ ತಿಳಿವಂದದಿಂ
ಕನ್ನಡಿಸಿ ಪೇಳಿಹುದಿದಕವರ್ಣಯಾತಕೆಂ
ದೆನ್ನದಿರಿಯಸಕೃದಾವೃತ್ತಿರಭ್ಯಾಸವೆಂ
ದೆನ್ನುವರಲೈ ಕೋವಿದರು ಸೂತ್ರಕಾರಮತವಾರೈದು ಶಾಸ್ತ್ರಗಳಲಿ ೪೨

ಈ ತೆರದ ಶಾಬ್ದದೊಳಗಷ್ಟಮಿಕ ಯಮಕವ
ನ್ನೋತುಪೇಳುವ ಕಾಲದೊಳಗಿದೇಕೆನಲು ವ್ಯಾ
ಖ್ಯಾತೃಗಳದಕ್ಕಾದರಾದಿಶುಕ್ತಿಯೆನುತ್ತೆ ಸಿದ್ಧಾಂತಮಂಗೈದರು
ಪ್ರಾತಿಸ್ವಿಕಪ್ರಾಪ್ತಿಯಿಂ ಫಲವನೀವುದ
ನ್ನೇ ತಿರುತಿರುಗಿ ಸೀಳಲುಚಿತಮಲ್ಲದೆ ಮಿಕ್ಕ
ಭೂತಲದ ನಾಡವಾತಿನ ಜಾಣ್ಮೆಯೆಂದೆನುತ್ತ ಪಿರಿಯರ್ ಜಾರಿರ್ದರಂ ೪೩

ಇದರಿಂದ ಪೇಳಿದೆವು ಪೌರಾಣಿಕನೆ ಬಸವ
ಸದವಾ[1]ಕ್ಯನೆಸೆವಾವ[1]ಧಾನದಿಂದಾಲಿಸೈ
ಇದನೀಗಲೇಕೋತ್ತರದ ಚೆನ್ನವೀರದೇವನೆ ಸಾವಕಾಶದಿಂದ

---

1 ಕ್ಯನೆಸೆವ (ಕ) ಭ್ಯಾಸವ (ಗ)
• ೪೧ ನೆಯ ಪದ್ಯದಲ್ಲಿ ಪ್ರಾಸ ಛಂದಸ್ಸು ಕೆಟ್ಟಿದೆ.

ಪದಪದಂಗಳಲಿರುವ ಸಾರವಪಾದರ್ಥವಂ
ಹೃದಯಗೋಚರವ ಮಾಡೀಯರ್ಥವನೆ ನಮ್ಮ
ಪದದಿ ಚರಿಸುವ ಗಣಂಗಳಿಗೆ ಸಂಪ್ರೀತಿಯಿಂದುಪದೇಶವಂ ಮಾಳ್ಪುದು ೪೪

ಯಾವ ಕಾವ್ಯದಲಿ ಜಗದಾರಾಧ್ಯನಹ ಮಹಾ
ದೇವನೇ ಪೇಳಲ್ಪಡುವನದೀಪುಣ್ಯತಮ
ಸೇವಿಸುವರೆಲ್ಲರದನಾದೊಡಂ ಬಳಿಕಲ್ಲಿ ವಿರತಗೊಳ್ ಮುಖ್ಯರಾದ
ದೇವಸಂಪಾದನಾ ಸಿದ್ಧವೀರೇಶ ಕರು
ಣಾವಲಂಬನ ಚೆನ್ನಮಲ್ಲಿಕಾರ್ಜುನದೇವ
ಪಾವನಕೃಪಾಪಾತ್ರ ಪರ್ವತೇಶ ನಿರೂಪವಿದು ಭಕ್ತಹೃದಯದೀಪಂ ೪೫

ಇದನೆ ಸಂಪಾದನೆಯ ಗಣಗಳ[ಂ]ತಕ್ಕುಡಿದ
[1][ನಿದನೆ][1] ಸಂಪಾದಿಸಿದರೀಶ್ವರ ಕಟಾಕ್ಷಭಾ
ಗ್ಯದ ನೆಲವನಾಳುವರು ಸಂಪಾದನಾಸಿದ್ಧವೀರೇಶ್ವರ ಪ್ರಸಾದಂ
ಒದಗುವುದು ಭೂಲೋಕದೊಳಗವಂಲ ಕೀರ್ತಿಯಂ
[2][ಬುಧರಿನಂ][2]ಗೀಕರಿಸಿ ಷಟ್ಸ್ಥಲಬ್ರಹ್ಮಾದಿ ಷ
ಡ್ವಿಧರಾ[3][ದರೆಂಬುದ][3]ದರಲ್ಲಿ ಸಂಶಯವಿಲ್ಲವೆಂದೆನ್ನ ಕನಸಿನೊಳಗೆ ೪೬

ಶ್ರೀಚೆನ್ನಮಲ್ಲಿಕಾರ್ಜುನದೇವರಾಣತಿಯ
ವಾಚಿಸಿದರೆನ್ನೊಡನೆ ಪರಮಸಂಪ್ರೀತಿಯಿಂ
ವಾಚಿಸಿದರದಗ್ಧಮನ್ಮಥಭಾವರ್ಕಳಿಗೆ ಕೇಳಿದವರಿಗೆ ತಿಳಿ... ದೊಳರ್ಥವನಂಸುರ್ದ (?)
ಸೂಚಕರಿಗಿಹದೊಳಿಷ್ಟಾರ್ಥವಂ ಪೂರೈಸಿ
ಶ್ರೀಚೆನ್ನಮಲ್ಲಿಕಾರ್ಜುನ ಮಹಾಲಿಂಗ ತಾ
ರಾಚಲದಿ ಗಣನಾಥಪದವಿಯಂ ಕೊಡುವ ಪರದಲ್ಲಿಯೇ ಸತ್ಯಸತ್ಯಂ ೪೭

ವೇದ[ಪೌರಾಣಗಳ]ನರ್ಥಪೂರ್ವಕಮಾಗಿ
ಸಾಧಂಸ್ವರಂದಪ್ಪದಂತೆ ಪಠಿಸಿದ ಪುಣ್ಯ
ಮೇದಿನಿಯ ಪಾರ್ವರಿಂಗಾವಫಲಮಪ್ಪುದೋ ನೈಷ್ಠಿಕರಿಗಂ ದ್ವಿಗುಣದಿಂ
ಈ ದಿವ್ಯಮಾದ ಚತುರಾಚಾರ್ಯಚಾರಿತ್ರ
ಮಾದ ಕಾವ್ಯವನು ಭ[ಕ್ತಿಯ]ಲಿ ಪಠಿಸಿರ್ಪ ಸಂ
ಪಾದನಾಗಣವರ್ಗಕಹುದು ಪರಮೇಶ್ವರನ ದಿವ್ಯಾಂಗಸಾಮರಸ್ಯಂ ೪೮

---

1 ನೆ (ಕಗ) 2 ಬಾದರದಂ (ಕಗ) 3 ಯ... (ಕಗ)

ಜಯ ಜಯ ಮಹಾದೇವ ಭಕ್ತಜನ ಸಂಜೀವ
ಜಯ ಜಯ ಜಗನ್ನಾಥ ವೇದವಿಶ್ರುತಗಾಥ
ಜಯ ಜಯ ಕೃಪಾಪಾಂಗಚಂದ್ರಿಕಾನಿರ್ಧೂತ ಭಕ್ತಜನಹೃದಯತಾಪ
ಜಯ ಜಯ ಮಹೇಶಾನ ಸಕಲಸುರಸನ್ಮಾನ
ಜಯ ಜಯ ವಿಷಗ್ರೀವ ಜಯಜಯ ಪ್ರಮಥಗಣ
ಜಯ ಜಯ ಶ್ರೀಚೆನ್ನಮಲ್ಲಿಕಾರ್ಜುನ ಲಿಂಗವೇ ಲೋಕಮಂ ರಕ್ಷಿಸ ೪೯

ಬಿದಿಯ ಮಶಾನದೊಳಗಿಪ್ಪತ್ತೆಂಟನೆಯ ಕಲಿಯ
ಮೊದಲಲ್ಲಿ ವೈವಸ್ವತಾಖ್ಯಮನ್ವಂತರಧಿ
ಕದಲಿದಬ್ದಗಳೆಣಿಸೆ ಶಾಲಿವಾಹನ ಶಕದಿ ನವಚಂದ್ರರಸಶಶಿಗಳಂ
ಅದರೊಳೀಶ್ವರವತ್ಸರದ ಮಾಘಪೌರ್ಣಮಿಯೊ
ಳುದಿಸಿ[ತೀ] ಕಾವ್ಯ ಚತುರಾಚಾರ್ಯಚಾರಿತ್ರ
ಮಿಂದಕೆ ರಕ್ಷ[ಕ]ರು ಕಲ್ಯಾಣಪಟ್ಟಣದ ಬಸವಾದಿಪ್ರಮಥರಾಗಲಿ ೫೦

ಸತತೋಜ್ವಲಾನಂದ ಸಂದೋಹರೂಪ ಸ
ನ್ನುತ ವೇದಪೌರಾಣಿಕಾಗಮಾದ್ಯಖಿಳವರ
ಮತಶಾಸ್ತ್ರಮಂಜುಳಸುಪುಂಜರಂಜಿತ ಪುರಾತನವಚನಸಮ್ಮತವಹ
ಅತಿಶಯಮಹಾಲಿಂಗಪದಪದ್ಮಷಟ್ಪದೋ
ದಿತರೂಪರಹ ಚತುರ್ಗುರುಚರಿತದೊಳ್ ನೋಡ
ಲತಿನೂತ್ನ[1][ವಹ][1]ಕಾಂಡದೊಳ್ ತಿಳಿಯಲೆಂಟನೆಯ ಸಂಧಿ ಸಂಪೂರ್ಣವಾಯ್ತು ೫೧

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಪೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕರಾಮಾದ್ಯರ
ಸದಮಲಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ವ ಶಿವಭಕ್ತ ಮಾಹೇಶ್ವರರ್ಗಿಷ್ಟಾರ್ಥವಹುದಂ ಸತ್ಯಂ ೫೨

---

1 ವಾದಾರು (ಕಗ)

ಶ್ರೀಪರಮಕೈಲಾಸವಾಸಂ ಸ್ವಯಂಜ್ಯೋತಿ
ರೂಪನಭಿನವಪರಬ್ರಹ್ಮ ಸಂಪಾದನಾ
ದೀಪಿತ ಮಹಾಚನ್ನಮಲ್ಲಿಕಾರ್ಜುನ ತನ್ನ ಪದಪದ್ಮಭೃಂಗನೆನಿಪ
ಶ್ರೀಪರ್ವತಾರ್ಯನಿಂಗೊರೆದ ಗುರುಚಕ್ರೇಶ
ರೀ ಪೇಳ್ದ ಸತ್ಕಥಾಚಾರಿತ್ರದೊಳ್ ತಿಳಿಯ
ಲೇಪೇಳ್ವೆನಿಲ್ಲಿ ಮಂಗಿಯಿತ್ತಾರುಕಾಂಡ ಸುಜ್ಞಾನವರೌಕ್ತಿಕಕರಂಡ ೫೨



## ಚ ಪ್ರತಿಯಲ್ಲಿನ ಹೆಚ್ಚಿನ ಪದ್ಯಗಳು

# ಪ್ರಥಮಕಾಂಡ

### ಒಂದನೆಯ ಸಂಧಿ

೮ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ರತ್ನಂಬರಾವಸನೆ ಕೃತ್ತಿವಾಸಪ್ರಿಯೆ ಸ
ಪತ್ನಿ ಮಹಿಷಾಸುರಮುಖ ಶುಂಭದನುಜಾದಿ
ಯತ್ನಕೃತ ಬ್ರಹ್ಮಾಂಡಕಾರ್ಯಕಾರಣಭೂತೆ ಸಕಲವೇದಾದಿ ಮಾತೆ
ರತ್ನಪುರಮರ್ದನೆ ಸುರತ್ನಕಾಂತಾಶಿರೋ
ರತ್ನೆ ಯಮಿಜನಹೃದಯಧ್ಯಾನಚಿಂತಾ
ರತ್ನೆ ರತ್ನಮೂರ್ತ್ಯಾಧಿಕಾರಣರತ್ನ ಮನಂಮಾತೆ ಓಂಕಾರರೂಪಿಣಿ ಜಯ ೯

### ಎರಡನೆಯ ಸಂಧಿ

೯ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಮಂದಾರವೃಕ್ಷತತಿಗಳ್ ಮಹಾಕೈಲಾಸ
ದಂದಮಂ ಸ್ತುತಿಸುತ್ತ ನಿಂದಿಹವು ಪಾರಿಜ
ತಂದು ಶರಧಿಯೊಳುದಿಸಿ ಕೈಲಾಸ ಪರ್ವತವನಿಂದು ಜಾನಿಸುತಿರ್ಪವು
ಕಂದಾದ ಕಲ್ಪವೃಕ್ಷಗಳು ಬೇಳ್ಪವು ಫಳವ
ನಂದದಿಂ ಸಂತಾನ ವೃಕ್ಷಗಳ್ ಮಹಿಮೆಯಂ
ಚೆಂದದಿಂ ವಿಸ್ತರಿಸುತಿಹವು ಚಂದನವೃಕ್ಷ ಸಿರಿಚಂದ ಕೇಳ್ವವಲ್ಲಿ ೧೦

೨೦ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಅತಿಮಂಜುಳದ ಪುಂಜ ರಂಜನಂಬೆತ್ತವೊಲ್
ನುತ ತರತರಂ ಕೊಂಡು ಹೊನ್ನರನ್ನದ ಭಿತ್ತಿ
ಸತತ ಚಿಂತಾಮಣಿಯ ಕೆಲಸ ಕರುಮಾಡಕೋಟಾಕೋಟಿ ಮೀಟಿನಿಂದ
ಕಶಿಪೆತ್ತ ಕುಸುರಿಕೆಲಸದ ಸ್ವರ್ಣಕಲಶಗಳ
ಪ್ರತಿಯಿಲ್ಲ ಮರಕತದ ನಂದ್ಯಾವರ್ತಗಳಿಂದ
ನುತಿಗಗೋಚರರಾದ ಪ್ರಮಥಗಣರಿರ್ಪ ಭವನಗಳಿಂದ ವಿಭವವೆತ್ತು ೨೧

೨೨ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯಗಳು

ವೇದಾಗಮಂಪನಿಷತ್ತುಗಳ ಘೋಷಣದಿಂದ
ನಾದಬ್ರಹ್ಮಾನುಸಂಧಾನಯೋಗಿಗಳಿಂದ
ಸಾದರದೆ ಷಟ್ಚಕ್ರದಲ್ಲಿ ಷಟ್ಸಾದಾಖ್ಯ ಜಾನಿಪ ಮುನೀಶರಿಂದ
ಆ ದಿವ್ಯಪುರದಲ್ಲಿ ಎಚ್ಚರಿಪ ಪಾರಿಷದರಿಂ
ಶೋಧಿಸಿದ ಸುಜ್ಞಾನ ಚರಲಿಂಗ ಮಠಗಳಿಂ
ಶ್ರೀದಿವ್ಯ ಲಾವಣ್ಯರಸಪರಿಜದಳೆದವೆನೆ ರುದ್ರಕನ್ಯಾನೀಕದಿಂ ೨೫

ಪರಮ ತ್ರೈಲಿಂಗಶ್ರದ್ಧಾನ್ವಿತ ಸಂಭಕ್ತರಿಂ
ನಿರತ ಏಕೋಲಿಂಗನಿಷ್ಠಾ ಮಹೇಶರಿಂ
ಭರಿತ ತ್ರಿತಯ ಪ್ರಸಾದ ಸೇವನಾಸಕ್ತವರ ಪ್ರಸಾದಿಗಳಿಂದಲು
ಚರಲಿಂಗದನುಭಾವ ಪ್ರಾಣಲಿಂಗಿಗಳಿಂದ
ಶರಣಸತಿ ಲಿಂಗಪತಿಯಾನಂದರಿಂದಾತ್ಮ
ಪರಮಾತ್ಮರೆಂಬುಭಯುವಳಿದೈಕ್ಯ ಷಟ್ಸ್ಥಲ ಮಹಾನುಭವರಿಂದೆಸೆವುದು ೨೬

೩೩ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಬಳಿಕನಾಲ್ದೆಸೆಯ ಗೋಪುರದಂತರಂ ನೋಡೆ
ಸುಳಿವ ಶೀತಾಂಶು ರವಿಚಿತ್ರಭಾನುಗಳಮಳ
ಹೊಳೆವ ಸಾಸಿರ್ಕೋಟಿ ತೇಜದಗ್ಗದ ಪುಂಜ ತೀವಿತೆನೆಯಭ್ರಂಕಷಂ
ನಳನಳಿಸಿ ಬೆಳೆಯಿತೆಂಬಂತೆ ಶತಲಕ್ಷಯೋಜನ
ವಳೆಯದೋಲಗದ ಶಾಲೆ ಮಹಾಸಿಂಹಾಸ
ನಳತೆಯೆ ಒಂದುಲಕ್ಷೋನ್ನತ ವಿಶಾಲದಿಂದತಿತೇಜವತಿವಿಚಿತ್ರಂ ೩೮

೩೭ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಶ್ರೀಪರಂಜ್ಯೋತಿಸ್ಸ್ವರೂಪನಂ ಗುಣತ್ರಿತಯಂ
ಲೋಪನು ಮಹಾಪ್ರಣಯದರ್ಥನು ತ್ರಿದೇವತಾ
ದೀಪಿತಂ ಧ್ಯೇಯಮಹಾನುತೂರ್ಯ ಸಚ್ಚಿದಾನಂದವಿಗ್ರಹ ಬ್ರಹ್ಮನು
ಕಾಪಟ್ಯಮಾಯಾಂಧಕಾಸುರನು ರುದ್ರ
ತಾಪತ್ರಯಾಪಹನು ಮಹಾದೇವ ಮಹಾಲಿಂಗ
ರೂಪ ಮಹಾಭಸ್ಮಾದಿ ಪರ್ಯಾಯಂ ಸಜ್ಜಿತನು ಸೃಷ್ಟ್ಯಾದಿಕೃತ್ಯಕರನು ೪೩

ಶಿ೮ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಸರ್ಪಯಜ್ಞೋಪವೀತಂ ಸರ್ಪಕುಂಡಲಂ
ಸರ್ಪಕಂಕಣ ಸರ್ಪಹಾರ ಕಟಿಸೂತ್ರವರ
ಸರ್ಪಮುದ್ರಿಕ ಸರ್ಪಗಾನಕರ ಸರ್ಪವರಂ ಗರಳಮಹಾಕಂಠಕಲಿತಂ
ಸರ್ಪಾರಿತನಯಾರಿ ಸರ್ಪರೂಪನು ಜ್ಯೇಷ್ಠ
ಸರ್ಪಸುರಾದ್ಯಭಂಜನ ಸರ್ಪರಿಪುಗಮನ
ಸರ್ಪಬಂಧನ ಪಿಚಂಡಂ ಜನಕ ಸರ್ಪಮುನಿವರದ ಶಂಕರನೊಪ್ಪಿದಂ ೪೫

೪೭ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಮಂದಾರಮಾಲಾ ಸುಕುಂದ ಮಾಲತಿ ಜಾತಿ
ಯಂದವೆತ್ತಿಹ ಮಹಾಶ್ವೇತ ಸಂಮಾಲಂಕೃತಂ
ಚಂದನಾಗರುವಾಲ ಕರ್ಪೂರ ಕುಂಕುಮ ತಮೂಲ ಲಚಕೋಷ್ಟಮಷ್ಟಂ
ಗಂಧಲೇಪನ ಸರ್ವಭೂಷಣಧರಂ ದಿವ್ಯ
ಚಂದಮನು ಜಪಯಂತನು ಪಶ್ಚಿಮದ ದಿಗ್ಭಾಗವಂ
ಹೊಂದಿ ತೋರಂವನು ಮನ್ಮಥಹರನು ಶ್ರೀಚೆನ್ನಮಲ್ಲಿಕಾರ್ಜುನ ಲಿಂಗನು ೫೫

೬೧ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯಗಳು

ಶ್ರೀ ಮಹಾರಾಜಾವಧಾನ ನರಮೃಹರಣ
ಸಾಮಜಾಸುರ ಕೃತ್ತಿವಸನ ವರಾಹದಂಷ್ಟ್ರ
ಪ್ರೇಮದಿಂದತಿಶಯಭಕ್ತ ಭವರೋಗ ವಿಪಿನತತಿ ವೀತಿಹೋತ್ರ
ಶಾಮಕಂಧರ ತುರಗಜನಕ ಭುಜಂಗಾಭರಣ
ಸೋಮಶೇಖರ ಪ್ಲವಂಗೇಶ್ವರ ಪರಾಕರ್ತೃ
ಸ್ತೋಮಾಘ ಹರಹರಪ್ಪಾವಧಾನ ಭವಚಕ್ರೇಶ್ವರ ಪರಾಕು ದೇವ ೬೦

ಖಂಡಶಶಿಮೌಳಿಮಂಡಿತ ಭಕ್ತನಿಜಹೃದಯ
ಪುಂಡರೀಕಾಶ ದಿನಮಣಿರೂಪ ಪರಮೇಶ
ಖಂಡಲ ಮುಖಾದ್ಯಮರ ನವರತ್ನಮಕುಟಬಿಂಬಿತಪಾದ ನಖರಮುಖರ
ಕುಂಡಲೀಕೃತ ಕಂಬಲಾಶ್ವರ ಮಹಾಗಾನ
ಖಂಡರಸಲೋಲನಾಯಕ ಸಕಲದೇವರ್ಗೆ
ಗಂಡನೆನಿಸುವ ಮಹಿಮ ಚಿತ್ತೈಸು ಭಾಪೆನುತ ಚಂಡಕೀರ್ತಿಗಳುಲಿದರು ೬೧

೮೦ ನೆಯಂ ಪದ್ಯವಾದ ಮೇಲೆ ಬಂದಿರುವ ಪದ್ಯ

ಅಂತವರ ಪಶ್ಚಿಮದ ದೆಶೆಯೊಳಾ ವೃಷಕೇತು
ಸಂತತಂ ನಾನೂರು ಪದ್ಮಪ್ರಮಥರ್ವೆರಸಿ
ನಿಂತಿರಲ್ಕವರ ಬೆನ್ನೊತ್ತಿನೊಳೀಶಾನ್ಯನೆನಿಪ ಪ್ರಮಥಾಗ್ರೇಶನ
ಪಿಂತೆ ಮಹಾಪ್ರಮಥಗಣ ಮೂವತ್ತುಪದ್ಮಮಿರ
ಲಂತು ಏಕಾದಶಂ ಮುಖ್ಯಗಣರೋಲೈಸ
ಲಿಂತು ಪೂರ್ವದ ದೆಸೆಯೋಲಗಂ ಕಂಗೊಳಿಪುದಿಂಗಡಲ ತೆರೆಯಂದದಿಂ ೯೧

## ಮೂರನೆಯ ಸಂಧಿ

೬೫ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕೋರಾಮಾದ್ಯರ
ಸದಮಳಸಂಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದು ಕೃತಿಯ ಸಂಧಿ ಸುಜ್ಞಾನಬಂಧಿ ೬೬

## ನಾಲ್ಕನೆಯ ಸಂಧಿ

೩೪ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಎಸೆವಂಗವಾರಕ್ಕೆ ಪ್ರಾಣಮೆಂದೆಂಬ ಋಗ್ಯ
ಜುಸ್ಸಾಮಥರ್ವಣದ ಪದಪಾಳಿ ಜಟಿ ಪನಸ
ಹಸನಾಧಾರಣ ಬ್ರಾಹ್ಮಸಂಹಿತೆಯುದಾತ್ತಾದಿ ಸ್ವರಕರಣದಿರವ
ಬೆಸುಗೆಯರಿದೋದುತಾಮ್ನಾಯಭಾಷ್ಯಸಾ
ರಸದೊಳ್ ಮುಳುಂಗುತೇಳುತಲೇಕೋಡೇವನೆಂ
ಬಸಮ ಶ್ರುತಿಯಂ ಸ್ಥಾಪಿಸುವ ವೇದಕೋವಿದರ್ ಕೆಲಬಲದೊಳೊಪ್ಪಿದ್ದರು ೩೪

೭೩ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಅತ್ಯಧಿಕ ಮದ್ದಳೆಯು ಮೃದುಲಗತಿಯಂ ನಡೆಯ
ಉತ್ತಮದ ತಾಳತತ್ತ್ಯೆಯೆನಲಾವುಟಂ
ಮತ್ತೆ ಠೇಖಂ ಠೇಖಂಜಕಕುಮೆನಲು ಕಳಹೆಯು ತುತ್ತುಗುದುಗುರಗುಮೆಸಲು ವಾಸಂ

ತುತ್ತುರೂತುಂರೆಂದುಲಿಯಲಾ ವೇಳೆಯೊಳ್ ಮದ
ಮತ್ತ ಗಜಗಮನೆಯರ್ ಪೊಂಬಟ್ಟೆದೆರೆದೆಗೆಯೆ
ಬಿತ್ತರದೊಳಂಗವಿಕ್ಷೇಪವಭಿನವಿಸೆ ಮದ್ದಳೆ ತಾಳಲಯ ರಂಜಿಸೆ ೭೪

## ಐದನೆಯ ಸಂಧಿ

೫೭ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಈ ತೆರದ ರಾಜವೀಧಿಯ ರೀತಿನೀತಿಯಿಂ
ಸಾತಿಶಯ ಪರಿಪರಿಯಂ ಪಸರಗಳ ವಿಸರಗಳ
ಭೂತನಾಥನ ಕನಕಧ್ವಜಗಳಿಂ ರಜಗಳಿಂ ಮಘಮಘಿಸುವ
ನೂತನದ ನವರತ್ನದುಪ್ಪರಿಗೆ ಚಪ್ಪರದ
ಖ್ಯಾತಿವೆತ್ತಿಹ ಬಹುಳ ಪಲ್ಲಕ್ಕಿವಲ್ಲಕಿಯ
ಪೂತವಹ ಪುರಮಿಂತು ರಾಜಿಸಲ್ಕದರ ಶೋಭನವನದೇಂ ಬಣ್ಣಿಪೆಂ ೫೮

## ಆರನೆಯ ಸಂಧಿ

೧೪ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಬೇಗಬೇಗದಿ ಬರ್ಪ ಚಂದ್ರನೇತಕೆ ಸಾಯ
ಸೋಗೆಗಂಗಳೆಯಾಪ್ತತಮವೈರಿ ಸೂರ್ಯನನು
ಈಗ ನುಂಗಲ್ಬೇಡವೇ ನೆಗಳು ಶರಧಿಯೊಳ್ ಶಕ್ರಂಗೆಯಿರ್ದ ಕಣ್ಣಂ
ಭೋಗಿ ಕೃಷ್ಣಂ ಕುಕ್ಕಬೇಡವೆಯಕ್ಕ
ರಾಗದಿಂ ಧ್ವನಿಗೆಯ್ವ ತಾಂಬ್ರಚೂಡನ ಕೊರ
ಲಾಗಮಂ ಆಱಿಯದಿಹ ಬಿಯದ ಮುರಿಯಲಿ ಎಂದು ಪಾಪವಧುಗಳ್ ಬೈದರು ೧೫

೧೮ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಸಖನಿರ್ಪ ಸಂಕೇತಭವನಕ್ಕೆ ತಂದು ನಿಜ
ಸಖಿಗೆ ಪೇಳಿದಳು ಕುಂಟಣಿಯಧರ ಕಃಚಗಳೊಳ್
ನಖದಂತಕ್ಷತಹತಿಗಳಂ ಕಾಣಿಸದಂತೆ ಚುಂಬನ ಕುಂಚಂಗೊಡುವುದಬಲೆ
ವಿಕಳತೆಯೊಳಂಬರಂ ಬಿಡದಿರಂಗಜನ ಕಳೆ
ಮುಖವಾಗಿ ಪೊಳ್ತುಗಳೆಯದೆ ಚಂದ್ರೋದಯಕೆ ಮು
ನ್ನ ಕಳಂಕತನದಿಂದ ಗೃಹದೊಳಿಹುದತ್ಯಂತ ಲೇಸು ಕೇಳಬುಜಾನನೆ ೨೦

## ಏಳನೆಯ ಸಂಧಿ

೩೭ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಪಿರಿದಾದ ಬಗೆಗಳಿಂದೊಳಗಾಗಿ ರತಿವೆರಸಿ
ಯರಿದದನೆ ಮನದೊಳತಿಬಯಸಿ ಪುರುಷನ ಮುಂದೆ
ಯಿರದ ಲಜ್ಜೆಯನಾಂತು ಲವಲವಿಕೆ ಸಿಂಗರಕೆ ಪರಿಮಳ ಸಂಪುಷ್ಪಾಳಿಗೆ
ಯುರಕೆ ಭೂಷಣತತಿಗೆ ಲೋಭಿಸದೆ ಹದಿರು ಚದು
ರರಿಯದಂತಿರ್ಪ ವಿಂಶತಿವರ್ಷದಬಲೆ ತಾಂ
ನೆರೆ ಮುಗ್ಧೆ ಇವಳೆಂದು ಪೇಳೆ ಕೇಳುತ್ತ ನೋಡುತ್ತಿರ್ದರತಿಮುಂದದೊಳಂ ೩೭

## ಒಂಭತ್ತನೆಯ ಸಂಧಿ

೩ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಅಲ್ಲಲ್ಲಿ ಕುರಂಜುಗಳ ಸಿಂಗರಂ ಮಾಡಿದರ್
ಸಲ್ಲಲಿತ ಬಜ್ಜರದ ಕಂಭ ಪವಳದ ಲೋವೆ
ಉಲ್ಲಾಸದಿಂ ಮಿಸುನಿದಬ್ಬೆಗಳ ಕಟ್ಟು ರಜತದ ಸ್ವರ್ಣ ಜರತಾರದ
ಪುಲ್ಲಶರನಂಬು ಮೊದಲಾದ ಪೂಮಾಲೆಗಳ
ನಲ್ಲಿಗಲ್ಲಿಗೆಯಲಂಕರಿಸುತಂತಲ್ಲಿ ಜನ
ರೆಲ್ಲರಚ್ಚರಿಯೆನಲ್ ಸೂರ್ಯಮಂಡಲಕಡರ್ದ ಪಚ್ಚೆಗಳಸಗಳಿಂದಲು ೪

೩೦ನೆಯ ಪದ್ಯವಾದಮೇಲೆ ಬಂದಿರುವ ಪದ್ಯಗಳಂ

ಪೊಂಗುಳಿಗೆಯುಂದದ ಬೆರಳ್ಗಳಂಳ್ಳಸುಗೆ ತಳಿ
ರಂಗಾಲ ಮೃದುಂಳಪದವಿಡೆ ರಕ್ತಮೊಸರ್ವ ನವ
ರಂಗವೆತ್ತಿಹ ರನ್ನಪಾಂಗಿನುಗುರ್ಗಳ ಮನ್ಮಥನ ಶರನಿಧಿಯ ಸೊಗಸ
ಕಂಗೊಳಿಪ ಕಿರುದೊಡೆಯಂ ಬಾಳೆಗಂಬಗಳ ಚೆ
ಲ್ವಂಗವಿಸುವೂರುಗಳ ಸ್ಥೂಲಜಘನದ ಪರಮ
ಸಿಂಗಸಮನಡುವಿನ ನಿತಂಬಿನಿಯರ್ಕೈದಿದರ್ ಗುರುಪುಂಗವನನೋಡಲೆಂದು ೩೧

ಬಿಂಬಿಸುವ ಶಶಿಬಿಂಬ ಸಮಮೊಗಂಗಳ ಚೆಲ್ವ
ಶಂಬರಾಹಿತನ ಕೂರಂಬ ಸಾಮ್ಯದ ನುಡಿಯ
ಕೆಂಬಲ್ಲ ಕಾಂತಿಯಿಂ ರತ್ನದ್ಯುತಿಯುಂ ಪಳಿವ ನಗೆಯ ಬೆಳರ್ವಣ್ಣ ಬಗೆಯ

ಬಿಂಬಫಲದರುಣ ಪಳಿವಧರದುನ್ನತಿಯ ರೋ
ಲಂಬ ಬಿಂಬಲ್ಫವಿಯ ಕುರುಳನೀರೆಯರು ಪೀ
ತಾಂಬರಾದ್ಯಂಬರಗಳನಂಟ್ಟು ಬರ್ದಿಂ ಬಂದರತ್ಯಂತ ಸಂಭ್ರಮದೊಳು ೩೨

೩೩ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ತಾರಹಾರದ ಕುಸುರಿಗೆಲಸದಿಂದೆಸೆವ ನೀಲ
ತೋರನಾಯಕ ರನ್ನವಚ್ಚರದ ಇಚ್ಚರದ
ಭೂರಿಮೌಕ್ತಿಕಗುದಿಯಂ ಪದಕ ಕಂಕಣ ಹರಿನ್ಮಣಿಯಂ ಹರಳೋಲೆ ಎಸೆವ
ನಾರಿಯರು ನಯನೋತ್ಸಪೂರಿಯರು ಪರಮಶ್ರೀಂ
ಗಾರಿಯರು ಸ್ಮರನಂಕಕಾರಿಯರು ಸರಸಗಂ
ಭೀರೆಯರು ಧರ್ಮಾನುಸಾರಿಯರು ಬಂದರಾನಂದದುನ್ನತದ ಸಿರಿಗೆ ೩೮

೪೨ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಜಯಜಯಂತು ಶಶಿಜೂಟ ಸಕಲದುರಿತಘರಟ್ಟ
ಜಯಜಯತು ಗಂಗಾವತಂಸ ಗಾಂಗೆಯವರ್ಣ
ಜಯಜಯತು ಮನಸಿಜಾಂತಕ ಭಂಗ ನಿತ್ಯಾಂಗ ಮಂಕತ್ರ್ಯಂಗನಾಲಿಂಗನ
ಜಯಜಯ ಜಗದ್ರಕ್ಷ ಜಾನಕೀಪತಿಪಕ್ಷ
ಜಯಜಯತು ಯತಿತುಂಗ ಯಮಿಹೃದಯ ಚಿಲ್ಲಿಂಗ
ಜಯಜಯತು ಶರಣೆಂದು ಗದ್ಯಪದ್ಯಾದಿ ನಂತಿಗಳ ಪಾಡಿದರ್ ಮುಂದದೊಳು ೪೮

೪೬ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಇದು ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದಿಂ ಚರಿಸಿ ಪಾವನವ
ಮಂದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕೋರಾಮಾದ್ಯರ
ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದು ನವಮಸಂಧಿ ಸುಜ್ಞಾನಬಂಧಿ ೫೩

# ದ್ವಿತೀಯಕಾಂಡ

## ಒಂದನೆಯ ಸಂಧಿ

೧೨ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ತುಂಬಿಗುರುಳಿ ಪೆಣ್ದುಂಬಿನುರೆ ಶಬರಿಯರ್
ಜಂಬುನೇರಿಲ್ವಣ್ಣಿದಂದ ತೆಳ್ವಸುರ ಲೋ
ಲಾಂಬಕದ ಬೆಳ್ಪು ಪೊಳೆಯಲು ಕನ್ನೈದಿಲಿನ ಮೊಗ್ಗೆಯಂತವಂದೊಪ್ಪುವ

ಇಂಬಾದ ಎರ್ದೆ ಪರಳ್ಮೊಲೆ ಕದಂಪೆಳನಗೆಯ
ನಿಂಬದೆಲೆ ಪೋಲ್ವುರ್ವುಗಳ ಸೊಬಗು ಮೆರೆಯೆ ನಿ
ತಂಬಭಾರದೆ ಬಳುಂಕುತ ಚರಿಸುತಿರ್ದರಾ ಮಳಯಾಚಲ ಪ್ರಾಂತದೆ ೧೩

೧೭ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ರಸಗೊಳಿಪ ಮುಕ್ತಾಳಿ ರತ್ನಕಂತುಕಮಾಳ
ಸರಳನುರೆ ತಿದ್ದಿ ಗರಿಗಟ್ಟಿ ಬಿಲ್ಗೊಪ್ಪಿಂಗಿರ
ದೆರಿಸುವ ಹೆದೆಯ ದೀಹದ ಮಿಗಕೆ ಪಕ್ಕಿಗಳಾಹಾರಗೊಟ್ಟುಕರೆದು
ಪರಿಪರಿಯ ಬೇಂಟೆಗಳ ಕಲಿಪ ಬಲೆ ಕಲ್ಲಿ ಪಂ
ಜರ ಪರ್ಣಶಾಲೆ ಮುಂತಾದ ಲುಬ್ಧಕವಿದ್ಯ
ಪರಿವಿಡಿದು ಎಸಗುತಿಹ ಪುಳಿಂದಪಕ್ಕಣಪಂಕ್ತಿಯಿಂದ ಕಾನನಮೆಸೆವುದು ೧೯

೩೭ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಅವರಮಯ ವಂಶವಂಶಂ ಮಥಿಸೆ ಶುಕ್ರಂ ಬಂ
ದಮರಿ ಗೋತ್ರಜ ಕುಲವ ಕೆಡಿಸಿದಂ ಯೂಥಪಂ
ಅಮಮ ಕರಿಯಾಗಿ ವನಮಂ ಪೊಗಲ್ಕದು ಧನಂಜಯನಿಂದ ದಹನವಾಗಿ
ಅಮರವನಮಿ ಪ್ರಕಾರವಾಯ್ತುವಾಂ ಧರೆಗೆಯ್ದಿ
ಶ್ರಮದಿಂದ ಕೆರೆಯ ಬೀಳಿವೆನಲ್ಕಾ ಜಲಂ
ವಿಮರೆ ಗ್ರೀಷ್ಮದೊಳು ಗಜ ಕರ್ದಮದೊಳಾಳ್ದು ಪೊರಳುವ ಛಂದವೇನೆಂಬೆನು ೩೮

೪೪ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ವೇದ ಪನಸಂಗಳಂ ಪೇಳ್ವ ಸ್ವರಯುಕ್ತದಿಂ
ದೋದುವತಿಧರ್ಮ ಸಂಹಿತೆಗಳಂ ಕೇಳ್ವಾಂಗವಾ
ರಾದರದಿ ಪಠಿಸಿ ಪೌರಾಣಲಕ್ಷಣಂ ಪಂಚಕಂಗಳಂ ಬಿತ್ತರಿಸುವ
ಮೋದದಿಂ ವೇದಾಂತ ಮಿಮಾಂಸ ತರ್ಕಗಳ
ಭೇದಮಂ ವಿವರಿಸುವ ಕುಶಲರಿಂದಿತಿಹಾ
ಸಾದಿಯಂ ರಸವೊಸರೆಯುಸುರುವ ಮಹಾಮುನೀಶ್ವರರಿರ್ದರಾ ನಗದೊಳು ೪೬

೪೫ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಗೌತಮನ ಕೌಶಿಕನ ಕಾಶ್ಯಪನ ಭಾರಧ್ವ
ಜಾತನತ್ರಿಯ ಕಣ್ವ ಕಪಿಲನ ಪಾರಾಶರನ
ನೂತನದ ವ್ಯಾಸ ವಾಲ್ಮಿಕಿಯ ಭಾಂಡುಕ ವಿಭಾಂಡುಕನ ಮುದ್ಗಲನ ಮುಖ್ಯ

ಸಾತಿಶಯ ಗೋತ್ರಸೂತ್ರ ಪ್ರವರವಿಡಿದ ಮುನಿ
ವ್ರಾತಚಂದನವೆಟ್ಟಿನಗ್ರದುಂಟಿಜಗಳಲ್ಲಿ
ಪ್ರೀತಿಯಿಂ ಕಲಶಜ ಪ್ರಭಾವವಂ ಕಂಡು ಬಿಡದಲ್ಲಿ ಮಂಡಿಸಿಹರೊಲವಿಂ ೪೮

೫೧ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಕೆಂಜೆಡೆಯ ರಂಗು ರಾಜಿಸುತ ರಸನೆಯೊಳು ಮೃ
ತ್ಯುಂಜಯಂ ಗಾಯತ್ರಿ ಭಯಭಂಜನಂ ತಾನೆ
ನಿಘೋರ ಮಹಾಘೋರ ಪಂಚಾಕ್ಷರಂಗಳ ಜಪಿಸುತ ?
ನಂಜುಗೊರಲನ ಮೂರ್ತಿ ನೇತ್ರದಗ್ರದೊಳುರೆ
ರಂಜಿಸುತ ಕೃಷ್ಣಾಜಿನಂ ವ್ಯಾಘ್ರಾಜಿನಗಳಿಂ
ಕಂಜಭವ ಶಿರಕರನ ವಾಲಗಕ್ಕೊಲಿದು ನಡೆದರ್ ಮುನಿಗಳಾನಂದದಿಂ ೫೫

೬೨ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಕಂಡೆ ಕಾಲಾನನಾ ಕಾಲನಂ ಸ್ಥೂಲನಂ
ಕಂಡೆ ನಿಗಮಾಗಮಸ್ತೋತ್ರನಂ ಪಾತ್ರನಂ
ಕಂಡೆ ಕಾಮಿತಫಲವನೀವನಂ ದೇವನಂ ಜೀವನಂ ಅಖಿಳಜಗದ
ಕಂಡೆನಾನಂದರಸಸಾರನಂ ಧೀರನಂ
ಕಂಡೆ ಷಟ್ಸ್ಥಲಕೋಶಧೀಶನಂ ಈಶನಂ
ಕಂಡೆನೆನ್ನಿಷ್ಟ ಫಲದಾಯಂಕನ ನಾಯಕನನೆಂದುಂ ನುತಿಸಿದ ಮುನಿವರಂ ೬೭

೬೩ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ತಾನೆನಿಸಂತಿಹ ರಸಾಜಲಮನಲಮನಿಲಖಿಂ
ಭಾನುಂಶಶಿಯಾತ್ಮಾಷ್ಟತನುಮಖಿಳಭುವನ ಸಂ
ತಾನ ದೃಹಿಣಾಂಡ ವಿಧಿ ಹರಿ ಸುರಪ ಮನುಮುನೀಶ್ವರ ಸಿದ್ಧ ಯಕ್ಷವಿಸರಂ
ಏನುಮುದಯಿಸದಂದು ಪರಶಿವಂ ತನ್ನಂತ ಸು
ಜ್ಞಾನಾಂಶ ಸೂಕ್ಷ್ಮ ಚಿತ್ಕಳೆಯ ನೆನೆಯಲ್ಕದುವೆ
ಮಾನ ಶಿವವೇಷಮಂ ಧರಿಸಿ ನಿಂದೊಡೆ ಜಗದ್ಗುರುವೆಂದು ಪೇಳ್ದನಭವಂ ೭೯

೬೭ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಇದಂ ಚತುರ್ಯುಗದೊಳಾಚಾರ್ಯರೂಪಂ ತಾಳಿ
ಯೊದವಿ ಶಾಂಭವ ಮರ್ತ್ಯದೊಳ್ ಚರಿಸಿ ಪಾವನವ
ಮುದದಿ ಮಾಡುವ ರೇವಣೇಶ ಮರುಳೇಶ ಪಂಡಿತ ಏಕೋರಾಮಾದ್ಯರ

ಸದಮಳ ಸುಚಾರಿತ್ರ ಸಂಪಾದನಾಚಾರ್ಯ
ವಿದಿತ ಶ್ರೀಚನ್ನಮಲ್ಲೇಶ್ವರ ನಿರೂಪಣಂ
ಪದುಳದಿಂ ಕೇಳ್ದರಿಷ್ಟಾರ್ಥಮಪ್ಪುದು ದಶಮಸಂಧಿ ಸುಜ್ಞಾನಬಂಧಿ ೭೪

## ಎರಡನೆಯ ಸಂಧಿ

೨೪ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ರೂಪಿಲ್ಲದಾ ಶಕ್ತಿಯ ವಿಚಿತ್ರದಿಂದೆ ಪೇಳ್ವೆ
ನಾನಾ ವಿಶ್ವಮಯರೂಪವಂ ಕಾಪಟ್ಯದಿಂದ
ಲೆಯ್ದಿತ್ತಲಾ ಮುನಿಪ ಭಕ್ತಿಯ ಮಂಹಾವೈಚಿತ್ರ್ಯದೆ (?)
ರೂಪಾದ ವಿಶ್ವಪ್ರಪಂಚ ಸಂಸಾರವಂ
ಸಾಪರಮಭಕ್ತಿ ನಿರವಯಲನೆಯ್ದಿಪುದಮಲ
ಲೇಪ ಪ್ರಪಂಚ ಗುಣಶಕ್ತಿ ಸ್ವಭಾವನದ ಕೆಡಿಪ ಗುಣಭಕ್ತಿಭಾವಂ ೨೫

೪೫ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಈ ತೆರದೆ ನಿರವಿಸದೆ ಲಿಂಗಮಾವಾವೆನಲ್
ಪೂತವೆಳ್ ಮಹಲಿಂಗಂ ಪ್ರಸಾದಲಿಂ
ಗಾತಿಶಯ ಚರಲಿಂಗ ಶಿವಲಿಂಗ ಗುರುಂಲಿಂಗಾಚಾರಲಿಂಗಂಗಳಂ (?)
ಪ್ರೀತಿಯಿಂ ಪೇಳಿದೆವು ಮಂರಳಿ ಮಹಲಿಂಗಾದಿ
ಜಾತ ಷಡ್ವಿಧ ಲಿಂಗಸ್ಥಲಮವಕೆ ಏಕಮೇ
ವಾತಿಸ್ವರೂಪಲಕ್ಷಣಮ್ಯಥಾಕ್ರಮದೆ ಪೇಳಲ್ಪಟ್ಟುದೆಲೆ ಮುನಿವರಾ ೪೬

೪೮ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯಗಳು

ಈ ವಿಧದೆ ಸಾಂಪ್ರತಾಪರಿ ಮೂರುತೆರದಿಂದ ಬಿಡ
ದೋವಿಯಂಗಸ್ಥಲಂಗಳು ಪೇಳಲಾದವೆಲೆ
ಸಾವಧಾನದೊಳು ಒಂದೊಂದುಸಲ ದ್ವಿವಿಧಮಾದರ್ಥಮುಳ್ಳ ದೆಸೆಯಿಂ
ಏವೇಳ್ವೆ ಯೋಗಾಂಗಮೈಕ್ಯ ಶರಣಸ್ಥಲಂ
ಭಾವಿಸಲ್ಕೆರಡುಂ ತರೆ ಭೋಗಾಂಗಮೆ ನೋಡೆ
ತ್ರಿವಿಧಾ ಪ್ರಾಣಲಿಂಗಿಯು ಪ್ರಸಾದಿಗಳೆಂದುಭಯಂ ಕಣಾ ಮುನಿವರಂ ೫೦

ವೀರ ಮಹಾಹೇಶ್ವರಂ ಸಾರಭಕ್ತಸ್ಥಲಗ
ಳಾರಯ್ಕ ತ್ಯಾಗಾಂಗಮೊಂದೆಯೆರಳ್ತೆರನಾಯ್ತು
ಧೀರರಿಂ ಪೇಳಲಾದಂದುಮೈಕ್ಯಶರಣನುಂ ಪ್ರಾಣಲಿಂಗ ಪ್ರಸಾದಿ

ಚಾರು ಮಾಹೇಶ್ವರಂ ಭಕ್ತಸ್ಥಲಂ ಮಿಂನಿಯೆ
ಭೂರಿಷಡ್ವಿಧಮಂಗಸ್ಥಲಗಳೆಂದರಿಯೆನುತ್ತಾ
ವೀರಶೈವಮತಸ್ಥಾಪನಾಚಾರ್ಯನಹ ರೇವಣೇಶಂ ಪೇಳ್ದನು ೫೧

## ಮೂರನೆಯ ಸಂಧಿ

೩೧ ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಈ ತೆರದೆಯೊಪ್ಪುವತಿ ಪುರದೊಳಗೆ ನೋಡೆ ಪುರ
ಹೂತನತನತಪಾರಿಜಾತನುತ ವೇದಾಂ
ತಾತಿಶಯ ನಿರುಪಾಧಿಜ್ಯೋತಿಯತಿತತಿನಾಥನತ್ಯಂತಶಾಂತವಿಶ್ವಾ
ತೀತಾಖಿಳ ಮಹಭೂತಾಂತರಾತ್ಮಮುನಿ
ವ್ರಾತಧಾತೇಷ್ಟಫಲದಾತ ರೇವಣಸಿದ್ಧ
ಭೂತದಂತ ಪಿಶಾಚದೊಳ್ ವಿತತ ವಿಭ್ರಾಂತನಂದದೆ ಸುಳಿದನು ೩೨

## ನಾಲ್ಕನೆಯ ಸಂಧಿ

೩ ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಕನಕಮಯವಾದಖಿಳ ಸ್ತಂಭದಿಂ ಬಿಂಬದಿಂ
ಮಿಂನುಪ ಮಾಣಿಕ್ಯದಂರೆ ತೊಲೆಗಳಿಂ ಕಲೆಗಳಿಂ
ಘನಮೌಕ್ತಿಕಚ್ಛವಿಯ ಬೋದಿಗೆಯ ಓದಿಗೆಯನಂತಜಂತೆಗಳಿಂದಲು
ಕನದಮಲ ಶಶಿಕಾಂತಭಿತ್ತಿಗಳ ವ್ಯಕ್ತಿಗಳ
ಮನಗೊಳಿಪ ಮರಕತದ ದ್ವಾರಗಳ ಸಾರಗಳ
ಬಿನದಿಸುವ ನವರತ್ನತೋರಣಗಳಿಂದ ಕುಂಕುಮ ಸಾರಣೆಗಳಿಂದ ೪

## ಜ ಪ್ರತಿಯಲ್ಲಿನ ಹೆಚ್ಚಿನ ಪದ್ಯಗಳು

## ಪಂಚಮ ಕಾಂಡ

### ಒಂದನೆಯ ಸಂಧಿ

೮ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಇಂತು ಸಪ್ತಾವರಣ ಕೂಡಲೈವತ್ತು
ಸಂತಸದ ಪದ್ಮವೈವತ್ತೈದಂ ಖರ್ವಂಗ
ಳಂತೆಯೈವತ್ತೈದರ್ಬುದಂ ಐನೂರೈವತ್ತು ಕೋಟಿ ತಿಳಿಯೆ (?)
ಮುಂತಂಡಮಂ ಬಳಸಿದೈನೂರು ಕೋಟಿಗಾವು
ದಂತಧಿಕ ಜಲವ ಬಳಸುತ ಹತ್ತು ಹತ್ತುಮಡಿಸ
ಮಂತಗ್ನಿ ಮರುನ್ನಭೋಹಂಕೃತಿ ಮಹತ್ವಮವ್ಯಸ್ತಪಾವರಣವು ೮

೧೨ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ಮೆರೆಯಲಂತದಗ್ರದೊಳಗೈದುಕೋಟಿಯಿಂ
ತರರೆ ಧೂಮಂ ಮಸುಂಕಿರ್ಪುದುರೆ ಸಹಜದಿಂ
ದಿರದೆ ಸಂಹಾರಕಾಲದೊಳೆಯಾರ್ಭಡಿಸಿ ಬಳೆಯಲ್ಕೆಳುಪಾತಳಮಂ
ನೆರೆಮೀರಿ ಮೇರು ಪರ್ಯಂತರಂ ಪೆರ್ಚಿ ಮ
ತ್ತಿರದೆ ಕೋಪಿಸಿ ನೋಡೆ ಬ್ರಹ್ಮಾಂಡ ಸಂಹಾರ
ಭರದಿಂದಲಹುದು ರವಿ ವಡಬ ದಾವಾಗ್ನಿಯಾತನ ಭಾಳನೇತ್ರ ನೋಡೆ ೧೪

೧೬ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯಗಳು

ಪರಿವಿಡಿಯೊಳಂ ಮಹಾತಳಮೆ ಕನಕದ ವರ್ಣ
ಯರರೆ ರತ್ನದ ಹರ್ಮ್ಯಮುರಗೇಂದ್ರನರಸನಂ
ಕರದ ಮಚುಕುಂದ ಬಲಿಗಳ್ ಶಿವಾಹ್ವಯ ಲಿಂಗಮಲ್ಲಿ ಭಜಿಸುವರು ಮುಂದೆ
ವರರಸಾತಳಲೋಕ ಧವಳಾಂಬದದಾ ಸುಖಿ
ಯ ರಸಮಿರದಲ್ಲಿ ಶಂಭುನಾಮದ ಲಿಂಗಮುಂ ಮೇಲೆ
ಯರಿದಹ ತಳಾತಳದ ವರ್ಣವಾಲುಕವಿಕಟ ಹಿರಣ್ಯಾಕ್ಷನರಕಾಸುರಂ ೧೮

ಅಲ್ಲಿಯಧಿಪತಿಗಳಾ ಶಂಕರಾಹ್ವಯ ಲಿಂಗ
ಮಲ್ಲಿಂದ ಕೇಳ್ ಸುತಳ ಹಳದಿಯ ವರ್ಣ
ಸಲ್ಲಲಿತ ಪಕ್ವೈಕ ಕಾಲನೇಮಿಗಳಾಣ್ಮರಾ ನೀಲಕಂಠಲಿಂಗಂ
ವಲ್ಲಿ ಪ್ರವಾಳಾಭನಿತಳ ಪ್ರಹಲ್ಲಾದ
ನಲ್ಲಿ ತಾರಕಮಗ್ನಿಮುಖನಂತಕರ್ ಮುಖ್ಯ
ರಲ್ಮುಮಾಪತಿಲಿಂಗಮಂತದರ ಮೇಲೆ ವಿತಳಂಬಿಳಿದಂ ವಸುರಕಂಪಂ ೨೦

ಅರಸು ಸರ್ವೇಶಲಿಂಗಂ ಮತ್ತೆಯತಳದಡಿ
ವರವಿತಳದೂರ್ಧ್ವದೊಳಾನೊಂದು ನೆಲೆ ರಾಜಿಪುದು
ಯೆರಡು ಕೋಟೆಂಭತ್ತುಲಕ್ಷಗಾವುದದಡ್ಡಭೂಮಿಂ ಸೌವರ್ಣಮಯದಿಂ
ಮೆರೆದಿರ್ಪುದಲ್ಲಿ ಸಾಸಿರಯೋಜನೋನ್ನತಾಂ
ತರವಿಶಾಲದ ಗುಹೆಯ ಮಧ್ಯದೊಳತ್ಯಧಿಕ
ತರ ಸುನವರತ್ನಸಿಂಹಾಸನಾರೂಢನಾಗಖಿಳ ಸುರಗಣನಿಕರದಿಂ ೨೧

೨೦ ನೆಯ ಪದ್ಯವಾದ ಮೇಲೆ ಬಂದಿರುವ ಪದ್ಯ

ವರಸಪ್ತಪಾತಾಳಗಧಿಪತಿಯೆನಿಪ್ಪ ಗಣ
ವರನಖಿಳ ಸಂಭ್ರಮದೊಳಿರೆಯವನ ಮೇಲ ಕೇ
ಳಂರದಶ ಸಹಸ್ರಯೋಜನದ ತುದಿಯತಳಲೋಕ ನೀಲವರ್ಣದೊಳೆಸೆವುತ
ದೊರೆಗಳೆ ಹಯಗ್ರೀವ ನಮುಚಿಯುಂ ಶಂಖುಕ
ರ್ಣರುಮಲ್ಲಿ ನೀಲಕಂಠಾಹ್ವಯದ ಲಿಂಗವಿಂ
ತಿರೆಯದರ ಮೇಲೆ ದಶಸಾಹಸ್ರಯೋಜನದೆ ಭೂಲೋಕ ಮೆಂರೆವುದಮದು ೨೩

೨೬ ನೆಯ ಪದ್ಯಕ್ಕೆ ಬದಲಾಗಿ ಬಂದಿರುವ ಪದ್ಯ

ಬಳಿಕ ಸವನಂ ಭವ್ಯದ್ಯುತಿಮಂತನುಂ ಮಹಾ
ಬಳನು ಜ್ಯೋತಿಷ್ಮಂತಮಗ್ನಿಬಾಹುಂ ಲಸ
ದ್ವಿಳಸಿತ ಸುವೇಧಾವಿಯಗ್ನೀಧ್ರರೆಂಬ ಸುತಳರೇಳಕ್ಕೇಳು ದ್ವೀಪಂಗಳು
ಒಲಿದಿತ್ತನಾ ಪ್ರಿಯವ್ರತನಧಿಕ ಜಂಬೂದ್ವೀಪ
ದಲಘು ರೀತಿಯ ಪೇಳ್ವೆನಗ್ನೀಧ್ರನೆಂಬವಂ
ಗೊಲಿದಾತ ವೃಷಭನಾತಂಗೊಗೆದವುತ್ತಾನಪಾದನಾತನಕುವರರಂ ೨೯

೨೮, ೨೯ ನೆಯ ಪದ್ಯಗಳಿಗೆ ಬದಲಾಗಿ ಬಂದಿರುವ ಪದ್ಯಗಳು

ಸುತ್ತುತತಿ ಕ್ಷಾರಾಂಬುರಾಶಿರೈಸಲ್ ಬಿಗಿದ
ಬಿತ್ತರದ ಬಿಲ್ಲ ಹೆದೆ ಮೂಡಣ ಪಡುವ
ಣತ್ಯಧಿಕ ಶರಧಿಯಂ ಕೂಡಿ ಬಿಳಿದಾಗಿ ಹಿಮಕುಲನಗಂ ಮೆರೆಯೆ ನಡುವೆ
ಹತ್ತುಸಾವಿರ ಗಾವುದದಳತೆಯಿಂ ಭರತಖಾಂ
ಡುತ್ತಮದ ಮೇರುವೆಗೆ ದಕ್ಷಿಣಂ ತಾನಾಗಿಯೆಸೆ
ವುತ್ತ ಧರೆ ಚಿತ್ರವರ್ಣಂ ಕರಿಯು ಬಳಿವಲ್ಲಿಯನ್ಯಾಯ ಕಪಟಂಗಳು ೩೧

ಬಹುದರುಶನಂ ಪಲವುದೇವತಾಭಜನೆಗಳ್
ಬಹುಳತೆರದಾಹಾರ ವ್ಯವಹಾರ ಹುಸಿಯೆಧಿಕ
ವಹ ರೀತಿಯಿಂದಾಯು ಶತಮಾನವೆಂದರೊಳತಿ ನೂನವಾಯ್ತು ಮನುಜರು
ಎಹಗೆಳಸಿ ಭರತದೊಳ್ ಮಾಡಿದ ಪುಣ್ಯಪಾಪಂಗ
ಳಹಗಖಿಳ ಭುವಿಯಲ್ಲಿ ಭೋಗಿಪರಂ ಮತ್ತಿಲ್ಲಿ
ವಹಿಲದಿಂ ಮಾಡದಿರಲಿಲ್ಲದತಿನಿಂದೆಯಿಹದಲ್ಲಿ ಸುಕೃತವ ಗಳಿಪುದಂ ೩೨

## ಎರಡನೆಯ ಸಂಧಿ

### ೨೦ ನೆಯ ಪದ್ಯವಾದಮೇಲೆ ಬಂದಿರುವ ಪದ್ಯ

ಚಾಲಕಚಡಮರು ಕಾಪಾಲಕದಯುತರಥಿಕ
ನೀಲಕಂಠಮು ತಿಸುಳಧರರು ಪೆರದಲೆಯವರು
ಸ್ಥೂಲ ದೃಹಿಣಾಂಡಗಳ ಚೆಂಡಾಡುವತಿಗಿರಿಗಳಣ್ಣೆಕಲ್ಲುಗಳಾಡುವ
ಶ್ರೀಲಸದ್ಗುಣವರರು ಬಳಸಿರಲ್ ಮಂನುಮುನಿ
ಜಾಲವಪ್ಸರರಮರ ಬ್ರಹ್ಮೇಂದ್ರರೆಕ್ಷಮುಖ
ರಾಳಿ ಸೇವಿಸೆ ಪಾದಪಂಕಜವ ಶಂಕರ ಸುಖಂಕರಂ ಶೋಭಿಸಿದನು ೨೧

### ೪೮ ನೆಯ ಪದ್ಯವಾದಮೇಲೆ ಬಂದಿರುವ ಪದ್ಯಗಳು

ಭುವರ್ಲೋಕಮಿಹುದದರೊಳಾ ಮಹೇಶ್ವರನ
ಸವಿಶೇಷ ಮಾನಸೋದ್ಭವ ವೀರಭದ್ರನುಂ
ತವೆ ಶಂಭು ಗಿರಿಶಾಜಯೇಕಪಾದಹಿರ್ಬುಧ್ನ ಪಶುಪತಿಪಿನಾಕಿ ಸ್ಥಾಣು
ಭವತ್ರಿಷಾಂಪತಿ ರುದ್ರರೇಕಾದಶಂ ತಾ
ವವಿರಳದ ಪೂಜ್ಯರಾಗಿರ್ಪರಾ ಧಾತಾಧ್ರುವಸ್ತುದಾ
ಸೋಮನಾಪೋನಿಲಂ ಖ್ಯಾತಾನಲಪ್ರತ್ಯುಷಪ್ರಭಾವ (?) ೫೦

ಎನಿಪಷ್ಟವಸುಗಳುಂ ಹಂಸತ್ಸ್ವಷ್ಟಂಬಕನು
ಘನಮಿತ್ರನಾ ವಿವಸ್ವದ್ವಿಷ್ಣುಪೂಷನಂ
ತನುವಿನಿಂ ವರುಣನರಿಯಮನು ಪರ್ಜನ್ಯಹರಮಂಡಾಶ್ರು ಶುಕ್ರರೆಂಬ
ಇನರುಂ ಈರಾರಾತ್ಮರಿರ್ಪರೈಯಾದಿತ್ಯ
ನನುವಿಂದಡರ್ದ ರಥಪರಿಕರವದಂ
ತೆನಲು ಸನಯದಿಂ ಸಕಲದೇವಾನ್ವಿತಂ ಚಕ್ರವೆಂಜ್ಞೇಶ್ವರಂ ಭಾವಿಸೆ ೫೧

## ಮೂರನೆಯ ಸಂಧಿ

೯ ನೆಯ ಪದ್ಯಕ್ಕೆ ಬದಲಾಗಿ ಬಂದಿರುವ ಪದ್ಯ

ತಪಲೋಕಮಿಹುದಲ್ಲಿ ಸನಕಂ ಸನಂದನಂ
ಚಪಳಂ ಸನಾತನ ಸನತ್ಕುಮಾರನು ಬಳಿ
ಕ್ಕಪರಿಮಿತ ಸನತ್ಸುಜಾತರಾ ಸದಾಶಿವನಾಮಲಿಂಗಮನಿಶಂ
ಸುಪಥಭಕ್ತಿಯೊಳು ಭಜಿಪರಲ್ಲಿಂ ಮೇಲೆ
ಯುಪಮಿಸಲ್ ಪದಿನಾರುಕೋಟಿಗಾವುದದಲ್ಲಿ
ವಿಪುಳಸತ್ಯಲೋಕಮಿಹುದಜಂ ಶಿಲಾಲಿಂಗಪೂಜೆಯಿಂದಲ್ಲಿರ್ಪನು ೯

೧೬, ೧೭, ೧೮, ೧೯, ೨೦ನೆಯ ಪದ್ಯಗಳಿಗೆ ಬದಲಾಗಿ ಬಂದಿರುವ ಪದ್ಯಗಳು

ಇವರು ಬ್ರಹ್ಮಾಂಡದೆಡೆಯಲ್ಲಿಹರು ವಿ
ಭವದಿಂದಲೇ ಕಪಾಲಿಯಮಜಂಬುಧ್ನನಾ ವಜ್ರಾಂಗ
ತವೆ ಪ್ರಮರ್ದನ ಪ್ರಭೂತಿಯವ್ಯಯಶಾಸ್ತ್ರ ಪಿನಾಕಿತ್ರಿದಶವಂದ್ಯ
ರವಿರತಂ ದಶರುದ್ರರಿಂದ್ರನಂ ಸಲಹುತಂ
ಸುವಿಲಾಸದಿಂ ಮೂಡಲೊಳಿರ್ಪರಮಿತರುಂ
ಪ್ರವಿಮಲಾಗ್ನಿಯು ರುದ್ರನಾ ಹುತಾಶನಪಿಂಗಲ ಬಾಧಕಂ ಜ್ವಲನನಂ ೧೬

ಹರದಹನ ಬಭ್ರು ಭಸ್ಮಾಂತಕಕ್ಷಯಾಂತಕರೆಂಬ
ರರೆದಶರುದ್ರಾದ್ಯನೇಕರುದ್ರರಂಬಿಡದೆ
ಪೊರೆವುತನಲನವಹ್ನಿದೆಸೆಯಲ್ಲಿ ರಾಜಿಪರು ಬಳಿಕಲಾ ಮೃತ್ಯುಹರನು
ವರಧಾತೃ ವಿಧಾತೃ ಕರ್ತೃಕಾಲಂ ಧರ್ಮ
ಭರಿತಮಾ ಧರ್ಮ ಸರ್ವ್ವೇಕ್ಷ್ಮವಿಯೋಕ್ತರೆಂ
ಬರಿದಪ್ಪ ದಶರುದ್ರಮುಖ್ಯರೆಮನಂ ಸಲಹುಂತವನದೆಸೆಯೊಳಿರ್ಪರಂ ೧೭

ನೈರುತಂ ಮಾರಣಂ ಹಂತೃಭಯಾನಕಂ
ಕ್ರೂರದೃಷ್ಟಿಯುಂಮೂರ್ಧ್ವಶೇಪನ ವಿರೂಪಾಕ್ಷ
ಸಾರಧೂಮ್ರಂ ಲೋಹಿತನುದಂಷ್ಟ್ರಿಗಳೆಂಬ ದಶರುದ್ರಮುಖ್ಯಮಾರ್ಗಳಂ (?)
ಚಾರುನಿರುತಿಯ ಸಲಹುತಾದೆಸೆಯೊಳಿರ್ಪರೈ
ನೀರನೆ ಬಲಾತಿಬಲ ಪಾಶಕರಮುಮಾಬಲಂ
ಸೇರಿದತಿಶ್ವೇತಜಯಭದ್ರಂ ಮಹಾದೀರ್ಘಬಾಹುಂ ಬಲಾಂತಕಂ ೧೮

ಬಡಬಮುಖ ಭೀಮದಶರುದ್ರರಾ ವರುಣನಂ
ಬಿಡದೆ ಸಲಹುಂತ ಪಶ್ಚಿಮದೆಸೆಯೊಳಿಹರು ಕೇ
ಳೊಡನೆಸಘಂ ಲಘುವಾಯುವೇಗಂ ಸೂಕ್ಷ್ಮತೀಕ್ಷ್ಣಕ್ಷಯಾಂತಕಮುಮ

ಸಡಗರದ ಪಾರಿಜಾಂತಕಂ ಪಂಚಶಿಖಿಯುಂ
ಬೆಡಗಿನ ಕಪರ್ದಿ ಮೇಘಹನರೆಂಬ ದಶ
ಗಡಣರುದ್ರರು ಮರುತನಂ ಪೊರೆವುತಾ ಗೋಂಟಿನೊಳಿಹರು ಶಿವನಾಜ್ಞೆಯಿಂ ೧೯

ವರಜಟಾ ಮಕುಟಧಾರಿಯುಂ ರತ್ನಧಾರಿಯುಂ
ಪರವಿದಿಶ ರೂಪವಾನ್ ಧನ್ಯಸೌಮ್ಯಂ ಬಳಿಕ
ರರೆ ದೇಹಪ್ರಸಾದ ಪ್ರಾಕೃತ್ರಕಾಶಲಕ್ಷ್ಮೀವಾನ್ ಕಾಮರೂಪ
ರಿರದೆ ಕಿನ್ನರಪತಿಯು ದಿಕ್ಕಿನೊಳಿರ್ಪರ್ರೈ
ಸರಸವಿದ್ಯಾಧರಂ ಜ್ಞಾನಧರ ಸರ್ವಜ್ಞ
ಚಿರವೇದಪಾರಗಂ ಮಾತೃವ್ರತ ಪಿಂಗಾಕ್ಷ ಧೂಕಪಾಲಂ ಬಲಿಪ್ರಿಯಂ ೨೦

೨೦ ನೆಯ ಪದ್ಯವಾದಮೇಲೆ ಮುಂದಿನ ಹೆಚ್ಚಿನ ಪದ್ಯಗಳಿವೆ

ಸರ್ವವಿದ್ಯಾದಾತೃ ಸುಖದುಃಖರೆಂಬ ಸು
ಪರ್ವ ದಶರುದ್ರರೀಶಾನದೆಸೆಯೊಳಿಹರು
ಪರ್ವಿರ್ದನಂತನುಂ ಧೀರಪಾಲಕನು ಪಾತಾಳಕೇಶಂ ವೃಷಧರಂ
ಓರ್ವ ವೃಷವೀರ್ಯನುಂ ಗ್ರಸನ ಶಂಭುಲೋಹಿತಂ
ಊರ್ವಿನಿಂ ದಶರುದ್ರರಜಮುಷ್ಕದಡಿಯಲ್ಲಿ
ಶರ್ವನಾಜ್ಞೆಯೊಳಿಹರು ಶಂಭುವಿಭುಗಣದಕ್ಷತ್ರಿದಶವಂದಿತತ್ರ್ಯಕ್ಷನುಂ ೨೧

ಬಳಿಕ ಸಂಹ್ವಾಹನ ಭವಿಪ್ಪುವಿಚಕ್ಷಣರೆಂಬ
ಬಲವಂತ ದಶರುದ್ರರೊರ್ಧ್ವಪ್ರದೇಶದೊಳ್
ನೆಲಸಿರ್ಪರೀ ಪ್ರಕಾರದೊಳಷ್ಟದಿಕ್ಪತಿಗಳಚ್ಯುತ ವಿರಂಚಿಸುರಪಂ
ಸಲೆ ನಿರ್ಜರಾಳಿಯಿಂ ಪೂಜೆಯಗೊಳುತಂ ತಮ್ಮ
ಲಲಿತನಾಮಸ್ಮರಣಮುಚ್ಚರಣೆ ಭಜನೆಯಿಂ
ದೊಲಿದಿಷ್ಟಸಿದ್ಧಿಗಳನೀವಧಿಕ ಸರ್ವಜ್ಞರಾದ ಶತರುದ್ರರಿರದೆ ೨೨

೨೫ನೆಯ ಪದ್ಯವಾದಮೇಲೆ ೨೬, ೨೭ನೆಯ ಪದ್ಯಗಳಿಗೆ ಬದಲಾಗಿ ಬಂದಿರುವ ಪದ್ಯಗಳು

ವರ ಹಿರಣ್ಯಕಶಿಪುವಿಗಾ ಪ್ರಹ್ಲಾದನುಂ
ದೊರೆವಡೆದ ಸಹ್ಲಾದ ಮನುಹ್ಲಾದ ಶಿಬಿ ಭಾ
ಸ್ಕರರೆಂಬ ಮಕ್ಕಳೈವರವರೊಳ್ ಪ್ರಹ್ಲಾದಗೆ ವಿರೋಚನಂ ಕುಂಭ ಮತ್ತೆ
ಕಿರಿಯನಹ ನಿಕುಂಭ ಮೂರಂಮಕ್ಕಳುಗಳೊ
ಳೊರವೆಂ ವಿರೋಚನಂಗಾ ಬಲೀಂದ್ರೋದಯಂ
ತಿರದೆ ಬಲಿಯಿಂದೊಗೆದ ಬಾಣಾಸುರಂ ಮುಖ್ಯಸುತರು ಶತಮುದಿಸಿದರಲಾ ೨೮

ಮೂರನೆಯ ದನುವೆಂಬಾಕೆಗಾ ನಾಲ್ಕರತಿ
ಕ್ರೂರದಾನವರಂದಯ ನಾಲ್ಕನೆಯ ಕಾಲೆಯೊಳ್
ತೋರಿದರು ಮತ್ತಾ ನಿವಾತಕವಚಾಸಂರರ್ಪೈದನೆಯನಾಯುವೆಂಬಾ
ಧೀರೆಯೊಳ್ ವೃತ್ರಾಸುರಂ ಮುಖ್ಯನಾಲ್ವತ್ತು
ಶೂರಸುತರುತ್ಪತ್ತ್ಯಾರನೆಯಂ ಸಂಹಿತೆಯೊ
ಳಾರಾಹು ಮೊದಲಾದ ನಾಲ್ಕುಮಕ್ಕಳು ಜನನಮೇಳನೆಯ ಮುನಿಯಾಕೆಗೆ ೨೯

೩೮ ನೆಯ ಪಧ್ಯವಾದಮೇಲೆ ಬಂದಿರುವ ಪದ್ಯಗಳು

ಸೂನುಮನಿಲಂಗಾ ಪುರೋಚನನೆಂಬ ಸುತನೊಗೆದ
ನಾನಂದದನಲಗಾ ಜ್ಯೋತಿಯೆನಿಸುವ ಸುತಂ
ಏನೆಂಬೆನಯ್ಯ ಪ್ರತ್ಯೂಷವಸುವಿಗಾನಂದದಿಂ ದೇವಲಂ
ತಾನುದಿಸಿದಂ ಪ್ರಭಾಸಂಗೆ ಬೃಹಸ್ಪತಿಯ
ನೂನ ಸಹೋದರಿಯಾದ ಯೋಗಸಿದ್ಧಿಯೊಳ್ ಬಿಡ
ದಾ ನವ್ಯವಿಶ್ವಕರ್ಮಂ ಜನಿಸಿಯಂಮರರ್ಗೆ ಬಡಗಿಯಾದವನಾಮಗಳು ೪೧

ಬಡವೆಯೆನಿಪಮಳ ಸತಿಯಲ್ಲಿ ಸೂರ್ಯಂಗೆ ಜಸ
ಮೊಡೆದಶ್ವಿನೀ ದೇವತೆಯರೊಗೆದರ್ ಮತ್ತೆ
ಬೆಡಗಿನಿಂದಶ್ವಿನೀ ದೇವತೆಯರಿಂ ಗುಹ್ಯಕರೆಂಬ ದೇವಜಾತಿ
ಗಡಣ ಸಕಲೌಷಧಿಗಳುತ್ಪತ್ತಿಯಾದವಾ
ಜಡಜಭವಗಾ ಧಾತೃವಿಧಾತೃವೆಂದೀರ್ವರಂ
ತೊಡನಂದಿಸುತೀ ಲೋಕ ಪುಣ್ಯಪಾಪಗಳ ನಡಸುವರು ಬಳಿಕವರು ಕೂಡೆ ೪೨

## ನಾಲ್ಕನೆಯ ಸಂಧಿ

೨೦ ನೆಯ ಪದ್ಯಕ್ಕೆ ಬದಲಾಗಿ ಬಂದಿರುವ ಪದ್ಯ

ನಂತಭಕ್ತ ಪ್ರತಿರಹಿತ ಗತಿವಿಹಿತ ಶರಣಮಯ
ವುತುಪತಿಸ್ಥಿತಿನಾಶದೂರ ಶಾಶ್ವತ ಶಂಭು
ಜಿತಮದನ ಗತಕಾಮ ಕಾಲಕಾಲವಿರಾಮ ರಾಮಂರಾಮೇಷ್ಟಪ್ರದಾ
ಹತಸುರಾಸುರ ಶರ್ವನಾಮಾಭಿ ಸನ್ನುತವೇದ
ಸ್ತುತಿಲೋಲಲೋಲ ಮಂಕ್ಷ್ಯಾಂಗನಾಪ್ರತಿರಹಿತ
ಗತಿವಿಹಿತ ಪೃಥುಳಗಣನಾಥ ಜಯಜಯತು ಶರಣಜಸುರೇಂದ್ರಾದಿವಂದ್ಯ

೬೮ ನೆಯ ಪದ್ಯವಾದಮೇಲೆ ಬಂದಿರುವ ಹೆಚ್ಚಿನ ಪದ್ಯಗಳು

ಪರಮ ಪಾದಗಳಿನಾ ಕ್ರಮ್ಯವೆನೆಯಂವಚಕೊಂ
ಡುರು ಖರ್ರೈಃ ನಖರೈಃ ಎನಲಂ ಕೂರುಗುರ್ಗಳೀಂ
ನರಸಿಂಹನೆರ್ದೆಯಂಭಿಭೇದವೆನೆ ಬಗೆದ ವಿಶ್ವಕ್ಕೊಡೆಯ ಶರಭೇಶನಂ
ಸುರರು ಬ್ರಹ್ಮಾದ್ಯರುಂ ಪರಿಪರಿಯೊಳುಂ ನುತಿಸಿ
ವರವ ಬೇಡುತ ನಮೋನಮೋಯೆನುತಲಾಗ ಸುಖ
ಭರಿತ ಮಾನಸರಾಗಿ ಬಳಿಯೊಳೈದಿದರೆಂದು ಶ್ರುತಿಪುರಾಣಂ ಪೇಳ್ವುದು ೬೫

ಬಳಿಕೊರೆವುದೈ ಲಿಂಗಪೌರಾಣ ಸುರರಿಂದ
ಸಲೆ ಪಾದಪದ್ಮಮಂ ಪೂಜಿಸಿಕೊಳಲ್ಪಟ್ಟ
ಮಲಹರಂ ತಾನಾದ ಶರಭೇಶ್ವರಂ ನರಹರಿಯ ಪ್ರಾಣಂಗಳವಮ
ಸುಲಭದಿಂ ಸಂಹರಿಸುತಾಗ ಸಿಂಹಾಜಿನವ
ಭಲರೆಯೆಂಬ ರವಮಾಡುತ್ತ ವೀರೇಶ್ವರಂ
ಒಲವಿನಿಂ ಮುನ್ನಬಂದಾಪರಿಯೊಳೈದಿದನೆನುತ್ತುಲಿವುದನ್ನರಿಯುಯಾ ೬೭

## ಐದನೆಯ ಸಂಧಿ

೧೩ ನೆಯ ಪದ್ಯವಾದಮೇಲೆ ಮುಂದಿನ ಹೆಚ್ಚಿನ ಪದ್ಯವಿದೆ

ಇಂತರಿಯದೆಲೆಯಧಮ ಬ್ರಹ್ಮನಾ ಹರಿಯನಾ
ಭ್ಯಂತರದೊಳುದಿಸಿದೊಡೆ ಮಗನಹನೆಯೆಲ್ಲ ಹರಿ
ಚಿಂತೆಯಿಂ ದಿವ್ಯ ಸಾಹಸ್ರಾಬ್ಜಪರಿಯಂತಜನಗರ್ಭದೊಳು ತೊಳಲಿ
ಮುನ್ನವನ ಗುದದೊಳುದಿಸಿದೊಡೆ ವಿಷ್ಣುವಿಗೆ
ಬಿಡದಂತಾಗೆ ನೈಘಂಟಿನೊಳಧೋಕ್ಷಜ
ನೆಂದು ಸಂತದೊಳೊರೆವುದನಿತರೊಳಚ್ಯುತಂ ಬ್ರಹ್ಮಸಂತನೆಯಲ್ಲಲ್ತು ಮತ್ತೆ ೧೪

# ಷಷ್ಠಮ ಕಾಂಡ

## ಒಂದನೆಯ ಸಂಧಿ

೫ ನೆಯ ಪದ್ಯಕ್ಕೆ ಬದಲಾಗಿ ಬಂದಿರುವ ಪದ್ಯ

ಪರಮಗುರುಪರ್ವಗಳು ಶೋಭನ ಉಪದೇಶ
ಕಿರದುಳಿದ ತಿಥಿಗಳೊಳ್ ದೀಕ್ಷೆಯುತ್ತಮ ಮತ್ತೆ
ವರಶಂಕ್ಲಪಕ್ಷದೊಳ್ ಭೋಗಮೋಕ್ಷೇಚ್ಛೆಯುಳ್ಳ ಭೋಗಿಯೋಗಿಗಳ್ಗೆ
ಚಿರಶೋಧನಂ ಕೃಷ್ಣಪಕ್ಷದೊಳ್ ಭೋಗಿಜನ
ಕ್ಕುರೆ ಕಾಲನಿಯಮಗಳ್ ಕರಮುಂಟಯೋಗಿನಿ
ಲ್ಲರರೆ ಆದಿತ್ಯ ಶನಿ ಭೌಮದಿನಯಶುಭಂಗಳುಳಿದ ದಿನ ದೀಕ್ಷೆಯಂಣುಗ ೫